# ವೀರಶೈವ ತತ್ತ್ವಪ್ರಕಾಶ



ಸಂಪಾದಕರು:
ಶಿ. ಶಿ. ಬಸವನಾಳ, ಎಂ. ಎ.



Q234
33H1

ಸಾಹಿತ್ಯ ಸಮಿತಿ
ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆ
ಧಾರವಾಡ
೧೯೪೧

CC-0. Jangamwadi Math Collection, Varanasi. An eGangotri Initiative

## ಸಾಹಿತ್ಯ ಸಮಿತಿಯಿಂದ ಪ್ರಕಟವಾದ
## ಇತರ ಗ್ರಂಥಗಳು



### ೧. ಚೆನ್ನಬಸವ ಪುರಾಣ
**ವಿರೂಪಾಕ್ಷಪಂಡಿತ ಕೃತ**

ಡೆ. ಅ. ಪತ್ರ ೧೦೩೨ ಪುಟಗಳು. ಅಂದವಾದ ಮುದ್ರಣ.
ಚೆಂದವಾದ ಕಟ್ಟು. ಸುಂದರವಾದ ತ್ರಿವರ್ಣ ಚಿತ್ರಗಳು.

ಮೂಲಕಾವ್ಯ, ಮುನ್ನುಡಿ, ಪ್ರಸ್ತಾವನೆ, ಕಥಾಸಾರಾಂಶ,
ಕೋಶಗಳನ್ನೊಳಗೊಂಡಿದೆ.

ಬೆಲೆ: ಬೆಂಡು ಕಾಗದ ೫-೮-೦, ನುಣುಪು ಕಾಗದ ೫-೦-೦.

### ೨. ಪ್ರಭುಲಿಂಗಲೀಲೆ
**ಚಾಮರಸ ಕೃತ**

ಡೆ. ಅ. ಪತ್ರ ೩೩೦ ಪುಟಗಳು. ನಯನ ಮನೋಹರ ಮುದ್ರಣ.
ಸುಂದರವಾದ ಕಟ್ಟು. ಮನಸೆಳೆಯುವ ತ್ರಿವರ್ಣ ಚಿತ್ರಗಳು.
ಮೂಲಕಾವ್ಯ, ಮುನ್ನುಡಿ, ಪ್ರಸ್ತಾವನೆ, ಕಥಾಸಾರಾಂಶ,
ಕೋಶಗಳನ್ನೊಳಗೊಂಡಿದೆ.

ಬೆಲೆ: ಸಾದಾ ಪ್ರತಿ ೨-೦-೦, ಸುಂದರ ಪ್ರತಿ ೨-೮-೦

### ೩. ಶಬರಶಂಕರವಿಳಾಸಂ
**ಮಹಾಕವಿ ಶ್ರೀ ಷಡಕ್ಷರಿದೇವ ಕೃತ**

ಡೆ. ಅ. ಪತ್ರ ೧೬೮ ಪುಟಗಳು. ಮುದ್ದಾದ ಮುದ್ರಣ.
ಕವಿಯ ಗುರುಗಳ ಸಮಾಧಿ, ಕವಿಯ ಮಠ,
ತಪೋಭೂಮಿ, ಸಮಾಧಿಯ ಅಪೂರ್ವ ಚಿತ್ರಗಳು.

Q234 7896
33H1
Basavnala, SS
Veerashaiva tattva-
prakash.

...ತು ಕಿರಾತರೂಪದ
...ಶ್ರಮಿಸಿದ ದೃಶ್ಯವನ್ನು
...ಚಿತ್ರಗಳು.

...ರ್ಜುನನ ತಪೋದೃಶ್ಯ,
...ಾಸ್ತ್ರಪ್ರದಾನ ಮತ್ತು
... ದಿಕ್ಕಿನ ಭವ್ಯ ನೋಟ
...ಲ್ಲಿರುವ ದೃಶ್ಯವನ್ನೂ
...ಕ ಚಿತ್ರಗಳಿಂದೊಡ

...ಗಳ ಅಕಾರಾದಿ,
...ೊಂಡಿದೆ.

...ಔಚಿತ್ಯ ಮೊದಲಾ
...ಸುವ ಪ್ರಸ್ತಾವನೆ

...ಮೇಲೆ ಅಚಾ
...ತಿ ೨-೦-೦

CC-0. Jangamwadi Math Collection, Varanasi. An eGangotri Initiative

ಧಾರವಾಡ ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯ

ಸಾಹಿತ್ಯ ಸಮಿತಿ ಪ್ರಕಟನೆ : ೪

ಪ್ರಧಾನ ಸಂಪಾದಕರು:

ಶಿ. ಶಿ. ಬಸವನಾಳ, ಎಂ. ಎ.

ಪ್ರಾಧ್ಯಾಪಕ, ಲಿಂಗರಾಜ ಕಾಲೇಜ, ಬೆಳಗಾವಿ.

# ವೀರಶೈವ ತತ್ತ್ವಪ್ರಕಾಶ

CC-0. Jangamwadi Math Collection, Varanasi. An eGangotri Initiative

# ವೀರಶೈವ ತತ್ತ್ವಪ್ರಕಾಶ



ಸಂಪಾದಕರು:
**ಶಿ. ಶಿ. ಬಸವನಾಳ, ಎಂ. ಎ.,**
**ಪ್ರಾಧ್ಯಾಪಕ, ಲಿಂಗರಾಜ ಕಾಲೇಜ, ಬೆಳಗಾವಿ.**

**ಸಾಹಿತ್ಯ ಸಮಿತಿ**
**ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆ**
**ಧಾರವಾಡ**
**೧೯೪೧**

CC-0. Jangamwadi Math Collection, Varanasi. An eGangotri Initiative

# ಮುನ್ನುಡಿ

ಈಗ್ಗೆ ಎರಡು ವರ್ಷಗಳ ಹಿಂದೆ 'ಸಾಹಿತ್ಯ ಸಮಿತಿ'ಯ ಕಾರ್ಯಕಾರೀ ಮಂಡಲದವರು ಸಮಿತಿಯ ಪರವಾಗಿ 'ವಾರ್ಷಿಕ ಪ್ರಕಟನೆ'ಯನ್ನು ಪ್ರತಿ ವರ್ಷ ಪ್ರಕಟಿಸಬೇಕೆಂದು ನಿರ್ಣಯ ಮಾಡಿದರು. ಆ ನಿರ್ಣಯದ ಕೃತಿಯ ರೂಪವೇ ಈ ಹಿರಿ ಹೊತ್ತಗೆ. ಇದಕ್ಕಾಗಿ ವೀರಶೈವ ಧರ್ಮ ಮತ ತತ್ತ್ವಗಳನ್ನು ಸೂಕ್ಷ್ಮವಾಗಿ, ಕಿರಿದರಲ್ಲಿಯೇ ಪಿರಿದಾಗಿ ತಿಳಿಸುವಂತಹ ಲೇಖಗಳನ್ನು ಕರ್ನಾಟಕದ ಅನುಭವಿಕ ವಿದ್ವನ್ಮಣಿಗಳಿಂದ ಬರೆಯಿಸಿ, ಸಂಗ್ರಹಿಸಿ ಪ್ರಕಟಿಸಿದ ಈ 'ವೀರಶೈವ ತತ್ತ್ವಪ್ರಕಾಶ' ಗ್ರಂಥವು 'ಸಾಹಿತ್ಯ ಸಮಿತಿ'ಯ ೪ ನೆಯ ಪ್ರಕಟನೆಯು. ವೀರಶೈವ ಧರ್ಮವನ್ನು ಒಂದೇ ಕಡೆಯಲ್ಲಿ ಅಚ್ಚುಕಟ್ಟಾಗಿ, ಸಂಕ್ಷಿಪ್ತವಾಗಿ, ಸರಳವಾಗಿ ಜನತೆಗೆ ತಿಳಿಯಪಡಿಸುವ ಬಯಕೆಯಿಂದ ಇಲ್ಲಿ ಪ್ರಯತ್ನ ಮಾಡಲಾಗಿದೆ. ಹೀಗೆಯೇ ಮುಂದಿನ ವರ್ಷದ ಕೊನೆಯೊಳಗಾಗಿ 'ಸಾಹಿತ್ಯ ಸಂಚಿಕೆ'ಯೊಂದನ್ನು ಹೊರಡಿಸುವ ನಿರ್ಧಾರ ಮಾಡಿದ್ದೇವೆ. ಇದರಲ್ಲಿ ಬರಬಹುದಾದ ಲೇಖಗಳಲ್ಲಿಯ ಒಂದು ಮಾದರಿಯೆಂದು ಈ ಪುಸ್ತಕದ ಕೊನೆಯಲ್ಲಿ 'ಪಂಪೆಯ ಹರೀಶ್ವರನ ಭಕ್ತಿ ಮಾರ್ಗ'ವೆಂಬ ಲೇಖವನ್ನು ಪ್ರಕಟಿಸಿದೆ. ಈ ಹೊತ್ತಗೆಯು ಕಳೆದ ಬಸವ ಜಯಂತಿಯ ಮಂಗಲ ಸಮಯದಲ್ಲಿ ಶ್ರೀ ನಿರಂಜನ ಪ್ರ. ಸ್ವ. ಬಸವಲಿಂಗ ಸ್ವಾಮಿಗಳು, ಗವಿಮಠ, ನವಲಗುಂದ ಇವರ ಅಮೃತ ಹಸ್ತದಿಂದ ಪ್ರಸಿದ್ಧಿಸಲ್ಪಟ್ಟಿದ್ದರೂ ಇಲ್ಲಿಯವರೆಗೆ ಕೆಲವು ಅನಿವಾರ್ಯ ಕಾರಣಗಳ ಮೂಲಕ ಬೆಳಕಿಗೆ ಬರಲಿಲ್ಲ. ಈಗ ಮುನ್ನುಡಿ, ಪ್ರಸ್ತಾವನೆ, ಲೇಖಕರ ಪರಿಚಯ, ಪಾರಿಭಾಷಿಕ ಶಬ್ದಗಳ ಪಟ್ಟಿ, ಪರಿಶಿಷ್ಟ (೧೦) ಗಳಿಂದೊಡಗೂಡಿ ಎಲ್ಲ ರೀತಿಯಿಂದಲೂ ಸುಂದರವಾಗಿ ಹೊರಬಿದ್ದಿದೆ. ಈ ನಮ್ಮ ಪ್ರಯತ್ನದ ಫಲವು ಸರ್ವಜನಾದರಣೀಯವಾಗುವುದೆಂದು ನಂಬಿದ್ದೇವೆ.

ಈ ಗ್ರಂಥದ ಅಚ್ಚು ನಡೆದಿರುವಾಗಲೇ ಶ್ರೀಮಾನ್ ಪಾವಟೆಯವರು ಲಿಂಗೈಕ್ಯರಾದರು. ಸೃಷ್ಟಿಯ ನಿಯಮಕ್ಕನುಸರಿಸಿ ಅವರು ನಮ್ಮನ್ನು ಬಿಟ್ಟು ತೆರಳಿದರು. ಸಹಸ್ರ ಜನ್ಮಗಳ ಹುಟ್ಟಿನ ಲಾಭ ಒಂದು ಸಾವಿನಲ್ಲಿ ಮಾಯವಾಯಿತು. ಬದುಕಿ ಬಾಳಿರುವಾಗ ಅವರ ಇರವೂ ನೆರವೂ ಸಮಾಜಕ್ಕೆ ಬಿಡಲಾರದ ಬಂಧನದಂತಿತ್ತು. ವ್ಯಕ್ತಿಯು ಕಣ್ಮರೆಯಾಗುತ್ತಲೇ ಅವರ ನೈಜ ಅನರ್ಘ್ಯ ಬೆಲೆಯು ಹೊಳೆದು ತೋರುವಂತೆ—'ಇನ್ನಷ್ಟು ದಿನ ಜೀವಿಸಿದ್ದರೆ.............?' ಎಂಬೊಂದು ಆಶೆಯ ಪ್ರಶ್ನೆಯು ಮನಸ್ಸಿನಲ್ಲಿ ಉದಯಿಸಿ ಅನೇಕ ವಿಚಾರಗಳನ್ನು ದೃಷ್ಟಿಗೆ ತರುತ್ತಲಿದೆ. ದೇಹಾಲಸ್ಯವಾದರೂ ಹಾಸಿಗೆ ಹಿಡಿದರೂ ಮರಣೋನ್ಮುಖರಾದರೂ ಕೊನೆಗೊಮ್ಮೆ ಇದರಲ್ಲಿ ಪ್ರಕಟವಾಗಿರುವ ತಮ್ಮ ಲೇಖವನ್ನು ಬರೆದು ಮುಗಿಸಿದರು. 'ಲೇಖಕರ ಪರಿಚಯ'ದಲ್ಲಿ ಇವರ ಜೀವನ, ವ್ಯಕ್ತಿತ್ವದ ಬಗ್ಗೆ ಸಾಕಷ್ಟು ಪರಿಚಯ ಮಾಡಿಕೊಡಲಾಗಿದೆ. ಇಂತಹ ಮಹನೀಯರ ಪಾಂಡಿತ್ಯ, ಧರ್ಮ ಶ್ರದ್ಧೆ, ನೈತಿಕಾಚಾರಗಳ ಸ್ಮಾರಕವೆಂದು ಈ ಗ್ರಂಥವನ್ನು ಅವರಿಗೆ ಮುಡಿಪಾಗಿ ಪ್ರಕಟಿಸಿದ್ದೇವೆ. ಇದಕ್ಕಾಗಿ ಅನುಮತಿ ಇತ್ತು, ಲಿಂಗೈಕ್ಯರ ಪರಿಚಯ ಮಾಡಿಕೊಡುವಲ್ಲಿ ಸಹಾಯಕರಾದ ಅವರ ಚಿರಂಜೀವಿ ಶ್ರೀ ಇಷ್ಟಲಿಂಗಪ್ಪ ಪಾವಟೆ, ಎಂ. ಎ., ಎಲ್‌ಎಲ್. ಬಿ., ಸಬ್-ಜಡ್ಜ್, ವಿಜಾಪುರ ಇವರಿಗೆ ಸಮಿತಿಯು ಆಭಾರಿಯಾಗಿದೆ.

ಈ ಗ್ರಂಥವನ್ನು ಪ್ರಸಿದ್ಧಿಸುವ ಕಾರ್ಯವನ್ನು ನೆರವೇರಿಸಿದ ಶ್ರೀ ನಿರಂಜನ ಪ್ರ. ಸ್ವ. ಬಸವಲಿಂಗ ಸ್ವಾಮಿಗಳಿಗೆ ನಾವು ಚಿರಋಣಿಗಳಾಗಿದ್ದೇವೆ. ಬಸವ ಜಯಂತಿಯ ಸಮಯದಲ್ಲಿ ಇದು ಪ್ರಕಟವಾಗುವಂತೆ ಸಹಕರಿಸಿ ನಡೆದ ಧಾರವಾಡದ ವೀರಶೈವ ತರುಣರ ಕೂಟದ ಅಧಿಕಾರಿಗಳಿಗೆ ನಮ್ಮ ಧನ್ಯವಾದಗಳು. ತಮ್ಮ ಕಾರ್ಯ ಬಾಹುಲ್ಯವನ್ನು ಲೆಕ್ಕಿಸದೆ ನಮ್ಮ ಬಿನ್ನಹಕ್ಕೆ ಮನ್ನಣೆಯಿತ್ತು ಲೇಖಗಳನ್ನು ಬರೆದು ಕಳಿಸಿಕೊಟ್ಟ ವಿವಿಧ ಲೇಖಕ ಮಹಾಶಯರಿಗೂ ಸಮಿತಿಯು ತುಂಬ ಉಪಕೃತವಾಗಿದೆ. ಪರಿಶಿಷ್ಟಗಳನ್ನು ಸಿದ್ಧಪಡಿಸುವಾಗ ಸಲಹೆ, ಸಹಾಯವನ್ನಿತ್ತ ಶ್ರೀಗಳಾದ ಬುದ್ಧಯ್ಯಸ್ವಾಮಿ ಪುರಾಣಿಕ, ವೀ ರು. ಕೊಪ್ಪಳ, ಎಂ. ಎ., ಬಿ. ಟಿ., ಇವರಿಗೆ ಸಮಿತಿಯವರ ಅಭಿನಂದನೆಗಳು. ಶ್ರಮ ವಹಿಸಿ ಮುದ್ರಣ ಕಾರ್ಯವನ್ನು ನೆರವೇರಿಸಿಕೊಟ್ಟ ಶ್ರೀ. ಶಿ. ಬ. ಹರಿಹರ ಇವರ ಉಪಕಾರವೂ ಸಮಿತಿಗೆ ಆಗಿದೆ. ಇದಕ್ಕೆ ಸಮಿತಿಯು ಆಭಾರಿಯಾಗಿದೆ.

ಸಾಹಿತ್ಯ ಸಮಿತಿ, ಲಿಂಗಾಯತ ಭವನ<br>
ತಾ॥ ೧೪—೧—೧೯೪೧

— ಸಂಪಾದಕ

CC-0. Jangamwadi Math Collection, Varanasi. An eGangotri Initiative

## ಪರಿವಿಡಿ



CC-0. Jangamwadi Math Collection, Varanasi. An eGangotri Initiative

---



---

† ಮುಂದೆ ಹೊರಡಲಿರುವ 'ಸಾಹಿತ್ಯ ಸಂಚಿಕೆ'ಯ ಲೇಖಗಳಲ್ಲಿಯದೊಂದು ಮಾದರಿ.

CC-0. Jangamwadi Math Collection, Varanasi. An eGangotri Initiative

# ಮುಡಿಪು

ವೀರಶೈವ

ಧರ್ಮಮತ ತತ್ತ್ವದ ತಿರುಳನ್ನೇ

ತಮ್ಮ ಜೀವಿತದಲ್ಲಿ

ಸುರಿಸಿಕೊಳ್ಳಲು ಯತ್ನಮಾಡಿದ

ಲಿಂಗೈಕ್ಯ

ಶ್ರೀ. ಸಿದ್ಧರಾಮಪ್ಪ ದುಂಡಪ್ಪ ಪಾವಟೆ, ಬಿ.ಎ., ಎಲ್‌ಎಲ್.ಬಿ.,

ಹುಬ್ಬಳ್ಳಿ

ಅವರ

ಅಸಾಮಾನ್ಯ ಧಾರ್ಮಿಕ, ನೈತಿಕ ಆಚರಣೆಯ

ಅವಿಚ್ಛಿನ್ನ ಸಮಾಜ ಸೇವೆಯ, ಅದ್ವಿತೀಯ ಸಾಹಿತ್ಯ ಸೇವೆಯ

ಸ್ಮಾರಕವೆಂದು

ಈ ಗ್ರಂಥವನ್ನು

**ಮುಡಿಪಾಗಿರಿಸಿದೆ.**

CC-0. Jangamwadi Math Collection, Varanasi. An eGangotri Initiative



ಲಿಂಗೈಕ್ಯರಾದ ಶ್ರೀಮಾನ್ ಸಿದ್ಧರಾಮಪ್ಪ ದುಂಡಪ್ಪ ಪಾವಟೆ, ಬಿ. ಎ., ಎಲ್‌ಎಲ್. ಬಿ.

ಜನನ : ೧೮೭೪ ★ ಮರಣ : ೧೯೩೯

CC-0. Jangamwadi Math Collection, Varanasi. An eGangotri Initiative

# MUSINGS OF BASAVA

(1)

Woudst thou the world,
its jerks and curves,
set right?
To thine own self apply
thy remedy.
Not those who grieve,
for others' woes alone,
reach you,
O Lord, Kudala Sangama !

(2)

The supple snake
glides along and slips
into the ant-hill;
the zig-zag river's course
but points to the sea;
and the devotees' ways,
so crooked seeming,
just lead to you,
O Lord, Kudala Sangama !

(3)

This our earthly life
is an ordeal prolonged:
we fail hereafter
by failing here;
triumph otherwise
for ever,
O Lord, Kudala Sangama !

CC-0. Jangamwadi Math Collection, Varanasi. An eGangotri Initiative

(4)

I weakly propose,
it firmly disposes;
I act at last,
It turns to nought.
The Great Illusion - -
it ever torments me,
defeats me quite:
and I cry in despair.
The Great Illusion - -
it makes futile
my half-formed desire
to know you
O Lord, Kudala Sangama!

(5)

This many-coloured dome,
this giddy life,
enthralls me,
enslaves me.
When the charmer pricks the snake
to a fury of dance,
the wretched creature feels
more wretched still;
when petty joys are offered
on the threshold
of the scaffold,
the little victim
but shrinks and shrinks.
This world is but a scaffold,
and life a mere fury of dance:
they crush me, kill me,
enemies all - -
Save me
O Lord, Kudala Sangama!

S. S. Basawanal
K. R. Srinivasa Iyengar

CC-0. Jangamwadi Math Collection, Varanasi. An eGangotri Initiative

# ಪ್ರಸ್ತಾವನೆ



೧.

ಕನ್ನಡದಲ್ಲಿ ನಾನಾಬಗೆಯಾಗಿ ಹೊಸ ಹಾದಿಯನ್ನು ತುಳಿದ ವೀರಶೈವ ಸಾಹಿತ್ಯದ ಪರಿಚಯವು ಇತ್ತೀಚೆಗೆ ಹೆಚ್ಚಾಗುತ್ತ ನಡೆದಿದೆ; ಇದರ ಪರಿಣಾಮವಾಗಿ ವೀರಶೈವರ ಮತ-ತತ್ತ್ವ-ಸಂಸ್ಕೃತಿ ಮುಂತಾದುವುಗಳನ್ನು ತಿಳಿದುಕೊಳ್ಳುವ ಕುತೂಹಲವೂ ಹೆಚ್ಚುತ್ತಿದೆ. ಆದರೆ ಈ ವಿಷಯಗಳ ಬಗ್ಗೆ ಅಧಿಕೃತ ಸಂಗತಿಗಳು ಒಂದೆಡೆಯಲ್ಲಿ ಸಿಕ್ಕದಿರುವುದು ಬಹು ವಿಷಾದಕರವಾದ ಮಾತಾಗಿದೆ. ಈ ಕೊರತೆಯನ್ನು ಕೆಲಮಟ್ಟಿಗಾದರೂ ಪೂರಯಿಸುವ ಉದ್ದೇಶದಿಂದ ಈ ಪ್ರಕಟನೆಯನ್ನು ಹೊರಡಿಸಲಾಗಿದೆ. ಇದರಲ್ಲಿ ಹಲವು — ವೀರಶೈವರಾದ ಹಾಗೂ ವೀರಶೈವರಲ್ಲದ — ವಿದ್ವಾಂಸರ ಲೇಖನಗಳು ಸಂಗ್ರಹವಾಗಿವೆ. ಇಲ್ಲಿ ಬೇರ ಬೇರೆ ಲೇಖಕರು ಬೇರೆ ಬೇರೆ ದೃಷ್ಟಿಯಿಂದ ವಿಷಯವಿವೇಚನೆಯನ್ನು ಮಾಡಿರುವುದರಿಂದ ಅಲ್ಲಲ್ಲಿ ಪರಸ್ಪರ ವಿರುದ್ಧ ಅಭಿಪ್ರಾಯಗಳು ಕಂಡುಬರಬಹುದಾದರೂ ಎಲ್ಲರೂ ತತ್ತ್ವಾನ್ವೇಷಣ ದೃಷ್ಟಿಯನ್ನೆ ಇಟ್ಟುಕೊಂಡಿರುವುದು ಕಂಡುಬರುತ್ತಿದೆ. ವೀರಶೈವ (ಇಲ್ಲವೆ ಲಿಂಗಾಯತ) ಮತವು ಅನುಭವ – ಅಥವಾ ಅವರ ಪರಿಭಾಷೆಯಲ್ಲಿಯೇ ಹೇಳುವುದಾದರೆ-'ಅನುಭಾವ' ಪ್ರಧಾನವಾದುದರಿಂದ ಅಲ್ಲಲ್ಲಿ ಭಿನ್ನಾಭಿಪ್ರಾಯಗಳಾಗಲು ಎಡೆಯುಂಟೆಂಬುದು ಸಹಜವಾಗಿದೆ. ಏಕೆಂದರೆ ಆ ಮತದ 'ಪ್ರಮಥರು' (ಅಥವಾ ಪ್ರತಿಪಾದಕರು) ಅನುಭವದ ತುತ್ತತುದಿಯನ್ನೆ ಪ್ರಮಾಣವಾಗಿ ಇಟ್ಟುಕೊಂಡು ಪ್ರತಿಪಾದನ ಮಾಡಿರುವುದರಿಂದಲೂ ಆ ಮಟ್ಟಕ್ಕೆ ಏರುವುದು ಎಲ್ಲರಿಗೂ ಸಾಧ್ಯವಿಲ್ಲವಾದುದರಿಂದಲೂ ಮುಂದಿನವರು ತಮ್ಮ ತಮ್ಮ ಅನುಭವವನ್ನು ಹೇಳುವಲ್ಲಿ ಭಿನ್ನಾಭಿಪ್ರಾಯ ಕಾಣುವುದು ಸ್ವಾಭಾವಿಕವಾಗಿದೆ. ಇಂತಹ ಅಭಿಪ್ರಾಯಗಳನ್ನೂ ಅನುಭವಗಳನ್ನೂ ಸಮನ್ವಯಮಾಡುವ ಅರ್ವಾಚೀನರಲ್ಲಿ ಭಿನ್ನಾಭಿಪ್ರಾಯವು ಇನ್ನೂ ಹೆಚ್ಚುವುದರಲ್ಲಿ ಆಶ್ಚರ್ಯವೇನೂ ಇಲ್ಲ. ಆದುದರಿಂದ ಈ ಪ್ರಕಟನೆಯು ನಿಜವಾದ ತತ್ತ್ವಗಳ ಪೂರ್ವಪರಿಚಯ ಅಥವಾ 'ಧೂಳಿದರ್ಶನ'ವಾಗಿದೆಯೆಂದು ವಾಚಕರು ಗ್ರಹಿಸಿದರೆ ಸಾಕು. ಇದರಲ್ಲಿ ತಮಗೆ ದೊರಕಬಹುದಾದ ತಿಳಿವಳಿಕೆಯ ಬುಡಕಟ್ಟಿನ ಮೇಲೆ ಪೂರ್ಣಜ್ಞಾನದ ಕಟ್ಟಡವನ್ನು ತಾವಾಗಿಯೆ ಕಟ್ಟಿಕೊಳ್ಳಬಹುದು.

೨

"ಭರತಖಂಡದಲ್ಲಿ ವೇದಕಾಲದಲ್ಲಿ ವೇದಗಳ ಆಧಾರದ ಮೇಲೆಯೆ ಹುಟ್ಟಿ ಕಾಲಾನುಬೋಧದಿಂದ ಹಲವು ಮಾರ್ಪಾಡುಗಳನ್ನು ಹೊಂದಿ ಹಲವು ಶಾಖೆಗಳನ್ನು ತಾಳಿದರೂ ಮೂಲತಃ ಒಂದೇ ಆದ ಧರ್ಮಕ್ಕೆ ಹಿಂದು ಧರ್ಮವೆಂಬ ಹೆಸರು. ಈ ಧರ್ಮವನ್ನು ಅವಲಂಬಿಸಿದ ಜನರು ಹಲವು ದೇವತೆಗಳನ್ನು ನಂಬುವವರಾಗಿದ್ದರೂ ಆ ದೇವತೆಗಳನ್ನೆಲ್ಲ ಮೂವತ್ತುಮೂರು 'ಕೋಟಿ'ಯಾಗಿ ಭಾವಿಸಬಹುದು. ಇವರಲ್ಲಿ ತ್ರಿಮೂರ್ತಿಗಳೆನಿಸಿದ ಬ್ರಹ್ಮ, ವಿಷ್ಣು, (ರುದ್ರ ಅಥವಾ) ಶಿವ ಇವರು ಅತಿ ಪ್ರಸಿದ್ಧರು; ಇವರಲ್ಲಿಯೂ ವಿಷ್ಣು ಮತ್ತು ಶಿವ ಇವರಿಬ್ಬರೇ ಶ್ರೇಷ್ಠರು. ವಿಷ್ಣುವನ್ನು ಆರಾಧ್ಯದೇವತೆಯನ್ನಾಗಿ ಮಾಡಿಕೊಂಡು ಆತನ ನಾಮವನ್ನು ಮಂತ್ರವಾಗಿಟ್ಟುಕೊಂಡವರು ವೈಷ್ಣವರು. ಹಾಗೆಯೆ ಶಿವನನ್ನು ಆರಾಧ್ಯದೈವತವಾಗಿ ಮಾಡಿಕೊಂಡು ಆತನ ನಾಮವನ್ನು

CC-0. Jangamwadi Math Collection, Varanasi. An eGangotri Initiative

ಜಪಮಂತ್ರವಾಗಿ ಕಲ್ಪಿಸಿಕೊಂಡವರು ಶೈವರು. ಶೈವರಲ್ಲಿ ಮತ್ತೆ ಕೆಲವು ಪಂಗಡಗಳಿವೆ. ವೀರಶೈವರು ಶಿವನನ್ನೆ ಆರಾಧಿಸುತ್ತಿರುವುದರಿಂದಲೂ ಶಿವನಾಮವನ್ನೆ ಜಪಿಸುತ್ತಿರುವುದರಿಂದಲೂ ಇವರೂ ಶೈವಪಂಗಡಗಳಿಗೆ ಸೇರಿದವರು. ಆದುದರಿಂದ ಇವರೂ ಹಿಂದುಗಳಲ್ಲಿ ಸೇರ್ಪಡೆಯಾದವರೇ" — ಎಂಬ ಸಾಮಾನ್ಯವಾದ ಅಭಿಪ್ರಾಯವು ಪ್ರಚಾರಗೊಂಡಿದೆ. ಇದರಲ್ಲಿ ತಥ್ಯಾಂಶವೆಷ್ಟಿದೆ ಎಂಬುದು ವಿಚಾರಿಸತಕ್ಕ ವಿಷಯ.

ಹಿಂದುಗಳಲ್ಲಿ ಹಲವು ಪಂಗಡಗಳಿದ್ದರೂ ಅವುಗಳಿಗೆಲ್ಲ ಸಾಮಾನ್ಯವಾದ ಕೆಲವು ನಂಬಿಕೆಗಳಿವೆಯೆಂದು ವಿದ್ವಾಂಸರು ಹೇಳುತ್ತಾರೆ. ಅವುಗಳಲ್ಲಿ — (೧) ವೇದ ಪ್ರಾಮಾಣ್ಯ, (೨) ವರ್ಣಾಶ್ರಮಧರ್ಮ ಪರಿಪಾಲನ, ಅದರಲ್ಲಿಯೂ ಬ್ರಾಹ್ಮಣ ಪ್ರಾಧಾನ್ಯ, (೩) ಪೂರ್ವಜನ್ಮಗಳ ಕರ್ಮಫಲವಾಗಿ ಬರುವ ಪುನರ್ಜನ್ಮ, (೪) ಮೂವತ್ತುಮೂರುಕೋಟಿ ದೇವತೆಗಳಲ್ಲಿ ನಂಬಿಗೆ, (೫) ಪಿತೃಗಳ ಪೂಜೆ, ತರ್ಪಣೆ — ಇವೆ[೧] ಮುಖ್ಯವಾದುವೆಂದು ಹೇಳಬಹುದು. ಈ ಲಕ್ಷಣಗಳು ವೀರಶೈವರಲ್ಲಿ ಎಷ್ಟರಮಟ್ಟಿಗೆ ಅನ್ವಯಿಸುವುವೆಂಬುದನ್ನು ಸಂಕ್ಷಿಪ್ತವಾಗಿಯೆ ವಿವೇಚಿಸುವ.

(೧) ವೀರಶೈವರು ವೇದಗಳನ್ನು ಪಠಿಸುವುದಿಲ್ಲ; ಮದ್ಯಪಾನ ಮಾಂಸಭಕ್ಷಣೆ ಇವರಿಗೆ ತತ್ತ್ವತಃ ನಿಷಿದ್ಧವಾದುದರಿಂದ ಯಜ್ಞಯಾಗಾದಿಗಳನ್ನು ಯಾವ ಕಾಲಕ್ಕೂ ಮಾಡುವುದಿಲ್ಲ. ಉಪನಿಷತ್ತಾದಿ ಪ್ರಸ್ಥಾನತ್ರಯ ಎಂಬ ವೇದಾಂತ ಗ್ರಂಥಗಳು ಇವರ ತತ್ತ್ವಗಳಿಗಾಗಲಿ ಆಚಾರಕ್ಕಾಗಲಿ ಬೇಕಾಗಿಲ್ಲ. ಹಲವು ವಚನಕಾರರು ಯಜ್ಞಯಾಗಾದಿಗಳನ್ನು ತೀವ್ರವಾಗಿ ನಿಷೇಧಿಸಿದ್ದಾರೆ; ವೇದಾದಿಗಳು ಬರಿಯ ಕರ್ಮವನ್ನು ಹೇಳುತ್ತವೆಯೆಂದು ಕಟುವಾಗಿ ಖಂಡಿಸಿದ್ದಾರೆ. ಆದರೆ ಇತರ ಶೈವಪಂಗಡಗಳಲ್ಲಿ ವೇದಪ್ರಾಮಾಣ್ಯವು ಗೃಹೀತವಾಗಿದೆ. (೨) ಬ್ರಾಹ್ಮಣ-ಕ್ಷತ್ರಿಯ-ವೈಶ್ಯ-ಶೂದ್ರ ಎಂಬ ಮೂಲ ಚಾತುರ್ವರ್ಣ್ಯದ ಯಾವುದಾದರೊಂದು ಭಾಗದಲ್ಲಿ ಹಿಂದುಗಳೆನಿಸಿಕೊಳ್ಳುವವರನ್ನು ಸಮಾವೇಶಮಾಡಬಹುದು. ವೀರಶೈವರಲ್ಲದ ಶೈವರನ್ನು ಅದೇ ರೀತಿ ಒಂದಿಲ್ಲೊಂದು ವರ್ಣದಲ್ಲಿ ಸೇರ್ಪಡೆಮಾಡಬಹುದು. ಇವರೆಲ್ಲರೂ ಬ್ರಾಹ್ಮಣರ ಶ್ರೇಷ್ಠತ್ವವನ್ನು ಅಂಗೀಕರಿಸುತ್ತಾರೆ; ಮುಂಜಿ-ಮದುವೆ ಮುಂತಾದ ಧಾರ್ಮಿಕ-ಸಾಮಾಜಿಕ ವಿಧಿಗಳಲ್ಲಿ ಪೌರೋಹಿತ್ಯಕ್ಕಾಗಿ ಬ್ರಾಹ್ಮಣರನ್ನೆ ಕರೆಯುತ್ತಾರೆ. ಆದರೆ ವೀರಶೈವರಿಗೆ ಬ್ರಾಹ್ಮಣರ ಸಂಬಂಧವೇ ಬರುವುದಿಲ್ಲ; ಈ ಸಮಾಜದಲ್ಲಿ ಮಠಾಧಿಕಾರಿಗಳು, ಗುರುಗಳು, ಜಂಗಮರು— ಇವರೇ ಸಾಮಾಜಿಕ-ಧಾರ್ಮಿಕ ಕಾರ್ಯಗಳನ್ನು ನೆರವೇರಿಸುತ್ತಾರೆ. ವೀರಶೈವರಲ್ಲಿಯೆ ಹಲವು ಪಂಗಡಗಳಾಗಿರುವುದಕ್ಕೆ ತತ್ತ್ವದ ಆಧಾರವಿಲ್ಲ; ರೂಢಿಯ ಸಂಕುಚಿತಭಾವನೆಯೆ ಕಾರಣವಾಗಿದೆ. ಉಳಿದ ಹಿಂದುಗಳು ಬ್ರಾಹ್ಮಣರ ಅಡಿಗೆಯನ್ನು ಊಟಮಾಡಬಹುದು; ಆದರೆ ವೀರಶೈವರ ದೃಷ್ಟಿಯಿಂದ ಬ್ರಾಹ್ಮಣರೂ 'ಭವಿ' ಗಳಾಗಿರುವುದರಿಂದ ಅವರೊಡನೆ ಅನ್ನೋದಕ ವ್ಯವಹಾರವು ತತ್ತ್ವತಃ ನಿಷಿದ್ಧವಿದೆ. ಆಶ್ರಮಗಳ ಮಾತಾದರೂ ಇದೇ ರೀತಿಯಾಗಿರುವುದು. ವೀರಶೈವರಿಗೆ ಇವುಗಳ ಕಟ್ಟು ಇಲ್ಲ. ಕೆಲ ಮಠಾಧಿಕಾರಿಗಳು ಸನ್ಯಾಸವನ್ನು ಸ್ವೀಕರಿಸುವುದು ಮೂಲತತ್ತ್ವಗಳಿಗನುಸಾರವಾಗಿ ಅಲ್ಲ; ಹಾಗೆ ಮಾಡುವುದರಿಂದ ಸಂಸಾರದ ಜಂಜಡವು ತಪ್ಪಿ ನಿರಾಭಾರಿತ್ವವುಂಟಾಗುವುದೆಂಬ ಕಲ್ಪನೆಯಿಂದ; ಆದರೆ ಅದರಲ್ಲಿ ಬ್ರಹ್ಮಚರ್ಯದ ಪರಿಪಾಲನೆಯೂ ಬೇಕೆಂಬ ತತ್ತ್ವವು ಅಡಕವಾಗಿದೆ. ಆದುದರಿಂದ ವೀರಶೈವರಲ್ಲಿ ಸನ್ಯಾಸವು ಬರುವುದು ಬ್ರಹ್ಮಚರ್ಯದ ಒಡನೆಯೆ ಹೊರತು ಚರಮಾವಸ್ಥೆಯಾಗಿ ಅಲ್ಲ. ಅಲ್ಲದೆ ಸನ್ಯಾಸವನ್ನು ಸ್ವೀಕರಿ

೧ Eliot: Vol I P 40; Durant : P 507.

CC-0. Jangamwadi Math Collection, Varanasi. An eGangotri Initiative

ಸಿದವರು ತಮ್ಮ ಪೊವಲಿನ ಯಾವ ಕ್ರಿಯೆಗಳನ್ನೂ ಬಿಡುವುದಿಲ್ಲ. ಏಕೆಂದರೆ ಆ ಕ್ರಿಯೆಗಳೆಲ್ಲವೂ ಸಮ್ಯಕ್ಕ್ರಿಯೆಗಳೆಂದೇ ಅವರ ನಂಬಿಗೆ. ಆದುದರಿಂದಲೆ ವೀರಶೈವರು ತಾವು ಅತಿವರ್ಣಿಗಳೂ ಅತ್ಯಾಶ್ರಮಿಗಳೂ ಎಂದು ಹೇಳಿಕೊಳ್ಳುತ್ತಾರೆ. (೩) ಹಿಂದುಗಳಾದವರಲ್ಲಿ ತಮ್ಮ ಪೂರ್ವಜನ್ಮಗಳ ಪಾಪ- ಪುಣ್ಯ ಕರ್ಮಗಳ ಫಲವನ್ನೆಲ್ಲ ಅನುಭೋಗಿಸಬೇಕೆಂದೂ ಅದಕ್ಕೆ ಹಲವು ಜನ್ಮಗಳು— ಅವೆಲ್ಲವೂ ಮನುಷ್ಯ ಜನ್ಮಗಳೆ ಎಂಬ ನಿಯಮವಿಲ್ಲ— ಬೇಕಾಗಬಹುದೆಂದೂ ನಂಬಿಗೆ ಇರುವುದು; ಇದರಿಂದ ಅವರಿಗೆ ಏಸು ಜನ್ಮಗಳಲ್ಲಿ ತಮಗೆ ಮೋಕ್ಷ ದೊರೆಯಬಹುದೆಂಬುದು ಸಂದಿಗ್ಧವಾಗಿಯೆ ಉಳಿಯುತ್ತದೆ. ಆದರೆ ವೀರಶೈವ ದೀಕ್ಷೆಯನ್ನು ಹೊಂದಿದವನಿಗೆ ಆವೊಡನೆಯೆ ಪೂರ್ವಜನ್ಮಗಳ ಕರ್ಮವು ಕ್ಷಯಿಸಿ ಹೋಗುವುವೆಂದೂ ಮುಂದೆ ವೀರಶೈವ ಮಾರ್ಗದಲ್ಲಿ ನಡೆಮಕೊಂಡವನಿಗೆ ಇದೇ ಜನ್ಮವೇ ಕಡೆಯದಾಗುವುದೆಂದೂ ವೀರಶೈವರು ನಂಬುತ್ತಾರೆ.[೧] (೪) ವೀರಶೈವರು ಹಿಂದುಗಳಂತೆ ಹಲವು ದೈವಗಳನ್ನು ಪೂಜಿಸುವುದಿಲ್ಲ. ಇವರು ಶಿವೋಪಾಸಕರಾದರೂ ಶಿವನ ವಿವಿಧ ರೂಪಗಳಾದ ನಟೇಶ, ಉಮಾಮಹೇಶ, ಸೋಮಸ್ಕಂದ ಮೊದಲಾದ ವಿಗ್ರಹಗಳನ್ನು ಪೂಜಿಸುವ ಹಾಗಿಲ್ಲ; ಶಿವಾಲಯಗಳನ್ನು ಅನಾದರಿಸಬಾರದೆಂಬ ನಿಯಮವಿರುವುದಾದರೂ ಅವುಗಳೊಳಗಿನ ಲಿಂಗಗಳನ್ನು ಪೂಜಿಸಬಾರದೆಂಬ ನಿಯಮವೂ ಉಂಟು. ಒಟ್ಟಿಗೆ ಕರತಳದಲ್ಲಿ ತಾಳಿದ ನಿಜೇಷ್ಟಲಿಂಗದಲ್ಲಿಯೆ ಮನವಿರಿಸಬೇಕಲ್ಲದೆ, ಉಳಿದ ಯಾವ ದೇವರನ್ನೂ ಪೂಜಿಸಬಾರದೆಂಬುದೇ ವೀರಶೈವರ ನಿಜವಾದ ತತ್ತ್ವ. (೫) ಶ್ರಾದ್ಧಾದಿಕರ್ಮಗಳನ್ನು ಹಿಂದುಗಳಂತೆ ವೀರಶೈವರು ಆಚರಿಸುವುದಿಲ್ಲ. ಇದಕ್ಕೆ ಕಾರಣವೆಂದರೆ ಲಿಂಗವಂತರಾದವರು ಕೊನೆಗೆ ಲಿಂಗೈಕ್ಯವನ್ನು ಹೊಂದುವುದರಿಂದ ಇವರಿಗೆ ಶ್ರಾದ್ಧಾದಿ ಕರ್ಮಗಳ ಅವಶ್ಯಕತೆಯೆ ಇಲ್ಲವೆಂದು ಇವರ ನಂಬಿಗೆ. ಮದುವೆ ಮುಂತಾದ ಸಮಾರಂಭಗಳಲ್ಲಿ ಅಲ್ಲಲ್ಲಿ ತೋರಬಹುದಾದ 'ದೇವತಾರಾಧನೆ' ಮೊದಲಾದ ಕಾರ್ಯಗಳು ಪರರ ಅನುಕರಣಗಳೆ ಹೊರತು ತತ್ತ್ವಕ್ಕೆ ಸಂಬಂಧಿಸಿದುವಲ್ಲ.

ವೈದಿಕ ಧರ್ಮವನ್ನೂ ಅದರ ಆಗಿನ ಆಚರಣೆಗಳನ್ನೂ ಅಲ್ಲಗಳೆಯಲು ಹುಟ್ಟಿದ ಬೌದ್ಧ - ಜೈನ ಧರ್ಮಗಳಂತೆಯೆ ವೀರಶೈವವೂ ಹುಟ್ಟಿದುದು. ಬೌದ್ಧರೂ ಜೈನರೂ ತಾವು ಹಿಂದುಗಳೆಂದು ಹೇಳಕೊಳ್ಳುವುದಿಲ್ಲ — ಅದೇಕೆ, ಅಲ್ಲವೆಂದೇ ಹೇಳಿಕೊಳ್ಳುತ್ತಾರೆ. ಮೊದಮೊದಲು ವೈದಿಕಧರ್ಮಾನುಯಾಯಿಗಳು ಅವರನ್ನು ಬಹಿಷ್ಕರಿಸಿದ್ದರು; ಬರಬರುತ್ತ ಅವರನ್ನು ಹಿಂದುಗಳೆಂದು ತಮ್ಮೊಳಗೆ ಸಮಾವೇಶಮಾಡುವ ಪ್ರಯತ್ನವನ್ನು ಹಿಂದುಗಳು ಮಾಡತೊಡಗಿದುದು ಕಂಡುಬರುತ್ತದೆ. ಹಿಂದು ದರ್ಶನಗಳಲ್ಲಿ ಬೌದ್ಧ ಹಾಗೂ ಜೈನ ದರ್ಶನಗಳನ್ನು ಸೇರಿಸುವ ಪ್ರಯತ್ನವು ಅಲ್ಲಲ್ಲಿ ಗೋಚರವಾಗುತ್ತದೆ. ವಿಷ್ಣುವಿನ ದಶಾವತಾರಗಳಲ್ಲಿ ಬುದ್ಧನದು ಒಂದು ಅವತಾರವೆಂದು ಹೇಳುವುದೂ ಇದೇ ಮಾದರಿಯ ಪ್ರಯತ್ನವಾಗಿದೆ. ವೀರಶೈವರಾದರೊ ತಾವು ಹಿಂದುಗಳಲ್ಲವೆಂದು ಹೇಳುವ ಪ್ರಯತ್ನವನ್ನು ಹಿಂದೆ ಮಾಡಿದಂತೆ ತೋರುವುದಿಲ್ಲ. ವೈದಿಕಮತಾನುಯಾಯಿಗಳು ಇವರನ್ನು ಸಂಪೂರ್ಣವಾಗಿ ಅಲ್ಲಗಳೆಯಲು ಹೋದಂತೆಯೂ ತೋರಲಿಲ್ಲ;[೨] ಇವರೂ ಶಿವೋಪಾಸಕರು ಎಂಬ ಒಂದು ಕಾರಣದ ದೆಸೆಯಿಂದ. ಇದರ ಪರಿಣಾಮವಾಗಿ, 'ಇವರು ಬ್ರಾಹ್ಮಣರಲ್ಲ, ಕ್ಷತ್ರಿಯರಲ್ಲ, ವೈಶ್ಯರೂ ಅಲ್ಲ— ಆದುದರಿಂದ ಶೂದ್ರರು'— ಎಂಬ ನ್ಯಾಯವು ಇವರ ಪಾಲಿಗೆ ಬಂದಿದೆ. ನ್ಯಾಯಾಸ್ಥಾನಗಳಲ್ಲಿ ಇವರಿಗೆ ಹಲವು ವಿಧದಿಂದ ಅನ್ಯಾಯವಾಗುತ್ತಿರುವುದು ಈ ಪರಿಸ್ಥಿತಿಯ ಮೂಲಕವಾಗಿಯೇ ಎಂಬುದು ಗೊತ್ತಿದ್ದ ಮಾತೇ ಆಗಿದೆ. ಅದಕ್ಕೆಂದೇ ಸ್ವತಂತ್ರವಾದ 'ಕಾಯದೆ' ಗಳನ್ನು ಮಾಡಿಸಬೇಕೆಂಬ ಕುತೂಹಲವು ಇವರಲ್ಲಿ ಈಗೀಗ ಬೆಳೆಯತೊಡಗಿದೆ.

---

೧ Eliot: Vol. I, P 42, foot-note 1. ೨ Ibid P 42.

CC-0. Jangamwadi Math Collection, Varanasi. An eGangotri Initiative

ಈ ಬಗೆಯ ಸಂದಿಗ್ಧತೆಯುಂಟಾಗುವುದಕ್ಕೆ 'ಹಿಂದು' ಎಂಬ ಶಬ್ದದ ಅನಿರ್ದಿಷ್ಟಾರ್ಥವೇ ಮುಖ್ಯ ಕಾರಣವೆಂದು ಹೇಳಬಹುದು. 'ಹಿಂದುಸ್ಥಾನ,' 'ಹಿಂದು ದೇಶ,' 'ಹಿಂದು ಧರ್ಮ,' 'ಹಿಂದು ಸಂಸ್ಕೃತಿ' ಇತ್ಯಾದಿ ಪದಗಳಲ್ಲಿ ಪ್ರಯೋಗವಾಗಿರುವ 'ಹಿಂದು' ಶಬ್ದವು ಒಂದೇ ಅರ್ಥದಲ್ಲಿಲ್ಲವೆಂಬುದು ಸ್ವಲ್ಪ ವಿಚಾರದಿಂದ ಗೊತ್ತಾಗುವಂತಿದೆ. 'ಹಿಂದು ದೇಶ, ಹಿಂದುಸ್ಥಾನ' ಎಂಬ ಪದಗಳು ಪರ್ಯಾಯಶಬ್ದಗಳಾಗಿ ಪ್ರಯೋಗಿಸಲ್ಪಡಬಹುದಾದರೂ, 'ಹಿಂದು ದೇಶ' ವೆಂದರೆ ಇಡಿಯ ಭರತಖಂಡವೆಂತಲೂ 'ಹಿಂದುಸ್ಥಾನ'ವೆಂದರೆ—'ಹಿಂದುಸ್ತಾನ'ವೆಂದು ಅವರು ಬರೆಯುತ್ತಾರೆ — ವಿಂಧ್ಯಪರ್ವತದ ಉತ್ತರಕ್ಕಿರುವ ಭಾಗವೆಂತಲೂ ಆ ಭಾಗದ ಜನರು ತಿಳಿಯುತ್ತಾರೆ. ಆದರೆ 'ಹಿಂದು ಧರ್ಮ'ವೆಂದರೆ ಭರತಖಂಡದೊಳಗಿನ ಎಲ್ಲ ಧರ್ಮಗಳೆಂದಾಗಲಿ, ಉತ್ತರದಲ್ಲಿರುವ ಧರ್ಮಗಳೆಂದಾಗಲಿ ಅರ್ಥವಲ್ಲ.

ಮೊದಲಲ್ಲಿ 'ಹಿಂದು' ಎಂಬುದು 'ಸಿಂಧು' ಎಂಬ ಶಬ್ದದ ರೂಪಾಂತರವು: ಪರಕೀಯರಾದ ಗ್ರೀಕರು ಸಿಂಧುನದಿಯ ಪ್ರಾಂತಕ್ಕೆ ಇಟ್ಟ ಹೆಸರಿನಿಂದ ಬಂದುದು. ಮುಹಮ್ಮದೀಯರು ಭರತಖಂಡದಲ್ಲಿ ನೆಲಸಿದಂದಿನಿಂದ ತಾವು ಬರುವುದಕ್ಕಿಂತ ಮೊದಲೆ ಈ ದೇಶದಲ್ಲಿ ವಾಸಮಾಡುತ್ತಿದ್ದವರೆಲ್ಲರಿಗೂ— ಮಹಮ್ಮದೀಯರಲ್ಲದವರೆಲ್ಲರಿಗೂ — ಈ ಹೆಸರನ್ನು ಉಪಯೋಗಿಸಿದಂತೆ ಕಾಣುತ್ತದೆ. ದೇಶವಾಚಕವಾಗಿದ್ದ ಈ ಹೆಸರು ಒಂದು ಜನಾಂಗವಾಚಕವಾಗಿ ಪರಿಣಮಿಸಿತು. ಇದೇ 'ಸಿಂಧು' (ಅಥವಾ 'ಹಿಂದು') ಶಬ್ದದ ಬೇರೊಂದು ರೂಪವು ಇಂಗ್ಲಿಷಿನಲ್ಲಿ 'ಇಂಡಿಯಾ' (India) ಎಂದಾಗಿ ಇಡಿಯ ಭರತಖಂಡದ ವಾಚಕವಾಗಿದೆ; ಅದರಿಂದಲೆ ಹುಟ್ಟಿದ 'ಇಂಡಿಯನ್ (Indian)' ಎಂಬುದು ಭರತಖಂಡದಲ್ಲಿ ಶಾಶ್ವತವಾಗಿ ವಾಸಿಸುವ ಎಲ್ಲ ಧರ್ಮದ ಜನಸಮಾಜಗಳ ವಾಚಕವಾಗಿ ಪರಿಣಮಿಸಿರುತ್ತದೆ. ಇದರಲ್ಲಿ ಭರತಖಂಡದಲ್ಲಿಯೇ ವಾಸಿಸುವ ಮುಹಮ್ಮದೀಯರೂ ಕ್ರಿಶ್ಚಿಯನ್ನರೂ ಸೇರ್ಪಡೆಯಾಗುತ್ತಾರೆ. ಆಗಿನಿಂದ 'ಹಿಂದು' ಎಂಬುದು 'ಕ್ರಿಸ್ತ' ಮತ್ತು 'ಇಸ್ಲಾಮ' ಧರ್ಮಾನುಯಾಯಿಗಳನ್ನು ಬಿಟ್ಟು ಭರತಖಂಡದ ಉಳಿದ ನಿವಾಸಿಗಳು ಎಂಬ ಅರ್ಥವನ್ನು ಸೂಚಿಸುತ್ತದೆ; ಎಂದಮೇಲೆ 'ಹಿಂದು' ಶಬ್ದವು ಸಂಸ್ಕೃತಿವಾಚಕವಾಗಿದೆ ಎಂದು ಹೇಳಬಹುದು. ಭರತಖಂಡದಲ್ಲಿಯೆ ಹುಟ್ಟಿ ಬೆಳೆದು ಅಲ್ಲಿಯೆ ನೆಲಸಿದ ಸಂಸ್ಕೃತಿಗೆ ಹಿಂದು ಸಂಸ್ಕೃತಿಯೆನ್ನಬಹುದು. ಆದರೆ— ಈ ಸಂಸ್ಕೃತಿಯು ಧರ್ಮದ ತಳಹದಿಯ ಮೇಲೆ ನಿಂತಿದೆ; ವೇದಗಳಿಗಿಂತ ಮುಂಚೆಯೇ ಭರತಖಂಡದಲ್ಲಿದ್ದ ಮತಗಳೂ ವೈದಿಕಧರ್ಮದ ಹಲವು ರೂಪಾಂತರಗಳೂ ಅದಕ್ಕೆ ಮೊದಲು ಹೊಂದಿಕೊಂಡಿದ್ದು ಅನಂತರ ಅದರ ಕೆಲವು ತತ್ತ್ವಗಳನ್ನು ವಿರೋಧಿಸುತ್ತ ಬೇರೆ ಪಂಗಡಗಳಾದ ಮತಗಳೂ ಅದೇ ಸಂಸ್ಕೃತಿಯಲ್ಲಿ ಸಮಾವೇಶವಾಗುತ್ತವೆಂಬ ತತ್ತ್ವವನ್ನು ಒಪ್ಪಿಕೊಂಡಲ್ಲಿ ಜೈನ ಮೊದಲಾದ ಧರ್ಮಗಳು ಈ ವಿಶಾಲಸಂಸ್ಕೃತಿಯನ್ನು ಬಿಟ್ಟು ಹೊರಗಿಲ್ಲ ಎಂಬ ಮಾತನ್ನು ಒಪ್ಪಿಕೊಳ್ಳಬೇಕಾಗುತ್ತದೆ. ಬೌದ್ಧ ಸಮಾಜವು ಭರತಖಂಡವನ್ನು ಬಿಟ್ಟು ಹೊರನಾಡುಗಳನ್ನು ಸೇರಿರುವುದರಿಂದಲೂ ಅಲ್ಲಿ ಅದು ರೂಪಾಂತರವನ್ನು ಹೊಂದಿರುವುದರಿಂದಲೂ ಅದು ಈಗ ಹಿಂದುಸಂಸ್ಕೃತಿಯ ಹೊರಗಿನದೆಂದು ಹೇಳಬಹುದಾದರೂ ಜೈನಮತವು ಈ ಸಂಸ್ಕೃತಿಯೊಳಗಿನದೆಂದೇ ಹೇಳಬೇಕಾಗುವುದು. ಆಗ ವೀರಶೈವವು ಈ ಸಂಸ್ಕೃತಿಗೆ ಇನ್ನೂ ಹೆಚ್ಚು ನಿಕಟವಾಗಿ ಹೊಂದಿಕೊಂಡಿದೆಯೆಂದೇ ಹೇಳಬೇಕಾಗುವುದು. ಅಂತು ತಾವು ಪಾಲಿಸುವ ಧರ್ಮದ ಉಗಮವು ಭರತಖಂಡದಲ್ಲಿಯೆ ಆಗಿದೆ ಎಂದು ಹೇಳುವವರೆಲ್ಲರೂ ಹಿಂದುಗಳು ಎಂದು 'ಹಿಂದು' ಪದದ ಅರ್ಥವನ್ನು ಮಾರ್ಪಡಿಸಿಕೊಂಡಲ್ಲಿ ವೀರಶೈವವು ಅದರಲ್ಲಿ ಸೇರ್ಪಡೆಯಾಗುವುದರಲ್ಲಿ ಸಂದೇಹವಿಲ್ಲ.

CC-0. Jangamwadi Math Collection, Varanasi. An eGangotri Initiative

೨

ಈ ಸಂದರ್ಭದಲ್ಲಿ ಇನ್ನೊಂದು ಮಾತನ್ನು ಇಲ್ಲಿ ಹೇಳಿದರೆ ಅಪ್ರಾಸಂಗಿಕವಾಗಲಾರ ದೆಂದು ಎಣಿಸುತ್ತೇವೆ. ವೀರಶೈವವನ್ನು ಹಬ್ಬಿಸಿ ಒಂದು ಸಮಾಜವನ್ನು ಕಟ್ಟುವ ಕಾರ್ಯದಲ್ಲಿ ತೊಡಗಿದ ಆಚಾರ್ಯರೂ ಪಂಡಿತರೂ ಬೇರೆ ವೈದಿಕ ಪಂಗಡಗಳೊಡನೆ ವಾದ ಮಾಡಬೇಕಾ ಗಿದ್ದ ಪ್ರಸಂಗಗಳಲ್ಲಿ ತಮ್ಮ ಮತದ ಶ್ರೇಷ್ಠತೆಯನ್ನು ಸ್ಥಾಪಿಸುವಾಗಲೂ ತಮ್ಮ ಮತ ತತ್ತ್ವ ಗಳನ್ನು ಸಮರ್ಥಿಸುವಾಗಲೂ ವೇದೋಪನಿಷತ್ತುಗಳಿಂದ ಆಧಾರಗಳನ್ನು ಕೊಟ್ಟಿರುವುದು ಅವರ ಹಲವು ಸಂಸ್ಕೃತ ಕನ್ನಡ ಗ್ರಂಥಗಳಲ್ಲಿ ಕಂಡುಬರುತ್ತದೆ. ಇದರಿಂದ ವೀರಶೈವರು ವೈದಿಕ ಧರ್ಮಗ್ರಂಥಗಳನ್ನೆ ತಮ್ಮ ಮತಕ್ಕೂ ಆಧಾರವಾಗಿ ಇಟ್ಟುಕೊಂಡಿದ್ದಾರೆಂಬ ಕಲ್ಪನೆಯು ಸಕೃದ್ದರ್ಶನದಲ್ಲಿ ಆಗುವಂತಿದೆ. ಆದರೆ ಇಂತಹ ಕಲ್ಪನೆ ನಿರಾಧಾರವಾದುದೂ ವಸ್ತುಸ್ಥಿತಿಗೆ ವಿಪರೀತವಾದುದೆಂದೂ ಹೇಳಬೇಕಾಗುವುದು. ಏಕೆಂದರೆ ಆರ್ಯ ಹಾಗೂ ದ್ರಾವಿಡ (ಇಲ್ಲವೆ) ಶೈವ ಸಂಸ್ಕೃತಿಗಳ ಮಿಶ್ರಣವಾದುದರ ಪರಿಣಾಮವಾಗಿ ಶೈವಸಿದ್ಧಾಂತದ ತತ್ತ್ವಗಳು ಆರ್ಯ ಧರ್ಮದಲ್ಲಿ ಬೆರತಿರಬೇಕೆಂದು ಊಹಿಸಬಹುದು. ಆರಂಭದ ಹಲವು ಉಪನಿಷತ್ತುಗಳಲ್ಲಿ ಕಾಣದ ಶಿವನ ವಿಚಾರವು ಶ್ವೇತಾಶ್ವತರದಲ್ಲಿ ಮೊದಲು ತಲೆದೋರುವುದು ಈ ಮಾತಿಗೆ ಆಧಾರ ವಾಗಿದೆ. ಅಲ್ಲದೆ, ಮನುಷ್ಯನು ವಿಚಾರ ಮಾಡಲು ತೊಡಗಿದಂದಿನಿಂದ ತನಗೆ ಬಗೆಹರಿಯದ ಸಮಸ್ಯೆಗಳನ್ನು ನಾನಾಬಗೆಯಾಗಿ ಬಿಡಿಸಲು ಪ್ರಯತ್ನಪಟ್ಟಿರುವನೆಂಬುದು ಎಲ್ಲ ಧರ್ಮಗಳ ಲ್ಲಿಯೂ ಕಂಡುಬರುತ್ತದೆ. ಹುಟ್ಟು ಸಾವುಗಳ ನಡುವೆ ಎಡೆತಾಕುವ ಜೀವನು ಬಂದುದು ಎಲ್ಲಿಂದ, ಹೋಗುವದು ಎಲ್ಲಿಗೆ,ಅವನ ಗುರಿ ಏನು, ಜಗತ್ತಿನ ಕೂಡ ಸಂಬಂಧ ಎಂಥದು, ಇವು ಗಳಿಗೆಲ್ಲ ಕಾರಣಕರ್ತನು ಇದ್ದಾನೆಯೆ, ಅವನ ಸ್ವರೂಪ ಎಂತಹದು— ಇವೇ ಮುಂತಾದ ಪ್ರಶ್ನೆ ಗಳು ಎಲ್ಲ ಧರ್ಮಗಳಲ್ಲಿಯೂ ಕಂಡುಬರುತ್ತವೆ. ಇವುಗಳ ವಿಚಾರವು ಬರಿಯ ಧರ್ಮದ ಪರಿ ಧಿಯನ್ನು ದಾಂಟಿ ತತ್ತ್ವಜ್ಞಾನದ ಸ್ವರೂಪವನ್ನು ತಾಳುತ್ತದೆ. ಇಂತಹ ತತ್ತ್ವಜ್ಞಾನ ಭರತಖಂಡದಲ್ಲಿ ಕೆಲವೊಂದು 'ದರ್ಶನ'ಗಳಾಗಿ ಪರಿಣಮಿಸಿದೆ. ಇವುಗಳಲ್ಲಿ ಹಲವು ಭಿನ್ನ ಭಿನ್ನಾಂಶಗಳಿದ್ದರೂ ಸಾಮ್ಯಕ್ಕೆ ಕಡಿಮೆ ಇಲ್ಲ. ಇಂತಹ ಸಾಮ್ಯಗಳು ಪಾಶ್ಚಾತ್ಯರ ತತ್ತ್ವ ಜ್ಞಾನಗಳಲ್ಲಿಯೂ ಕಾಣಬಹುದು. ಆದುದರಿಂದ ಶೈವದಿಂದಲೇ ಉಗಮ ಹೊಂದಿ ಮುಂದೆ ಬೇರೆ ಪಂಗಡವಾದ ವೀರಶೈವದ ಪ್ರಚಾರಕರು ವಾದಪ್ರಸಂಗಗಳಲ್ಲಿ 'ನಿಮ್ಮಲ್ಲಿಯೆ ನಮ್ಮ ತತ್ತ್ವ ಗಳ ಹೊಳಹುಗಳಿವೆ, ಆದರೆ ನಮ್ಮಲ್ಲಿ ಅವು ಹೆಚ್ಚು ಪರಿಪೂರ್ಣ ದಶೆಯನ್ನೈದಿವೆ'. ಎಂಬ 'ಯುಕ್ತಿವಾದ' ವನ್ನು ಕೈಕೊಂಡಿರಬೇಕು. ಇದಕ್ಕೆ ಒಂದು ಸಾಮ್ಯವನ್ನೂ ತೋರಿಸಬಹುದು. ಬೈಬಲ್ ಎಂಬ ಗ್ರಂಥದಲ್ಲಿ 'ಹೊಸ ಒಡಂಬಡಿಕೆ, ಹಳೆಯ ಒಡಂಬಡಿಕೆ' ಎಂಬ ಎರಡು ಭಾಗಗಳಿವೆಯಷ್ಟೇ. ಹಳೆಯ ಒಡಂಬಡಿಕೆಯು 'ಜ್ಯು' ಮತದವರಿಗೆ ಮುಖ್ಯವಾದುದು;ಕ್ರಿಶ್ಚಿಯನ್ನ ರಿಗೆ 'ಹೊಸ ಒಡಂಬಡಿಕೆಯೇ' ಮುಖ್ಯ; ಹಳೆ ಒಡಂಬಡಿಕೆಯನ್ನು ಅವರು ತತ್ತ್ವತಃ ಒಪ್ಪುವುದೇ ಇಲ್ಲ. ಆದರೂ ಅದನ್ನು ಕೂಡಿಕೊಂಡೇ ಬೈಬಲ್ಲೆಂದು ಹೇಳಿ ಅದಕ್ಕೂ ಒಂದು ಸ್ಥಾನವನ್ನು ಕಲ್ಪಿ ಸಿರುತ್ತಾರೆ. ವೀರಶೈವರು ಅಷ್ಟು ದೂರ ಹೋಗದೆ ಇದ್ದರೂ ಹಿಂದು ದರ್ಶನಗಳ ಬೆಳವಣಿಗೆಯ ದೃಷ್ಟಿಯಿಂದಲೂ ವೀರಶೈವ ದರ್ಶನವು ಅವುಗಳಲ್ಲಿ ಒಂದು ಮಹತ್ತ್ವದ ಅಂಗವಾಗಿ ಪರಿ ಣಮಿಸಿರುತ್ತದೆ.

೩

ಶಿವಾರಾಧನೆಯ ಬೇರುಗಳು ವೇದಗಳಲ್ಲಿವೆಯೆಂದು ತೋರಿಸಲು ಹೊರಟಿರುವರು ಕೆಲವರು; ನಿಜವಾಗಿ ನೋಡಿದರೆ ಅವು ಅದಕ್ಕೂ ಹಿಂದೆ ಹೋಗಿರುವುವೆಂದು ಹೇಳಬೇಕಾ ಗುತ್ತದೆ. 'ಶಿವ' ಶಬ್ದವು 'ಸುಖಕರ' ಎಂಬರ್ಥದಲ್ಲಿ ವೇದಗಳಲ್ಲಿ ದೊರಕುವುದಾದರೂ

CC-0. Jangamwadi Math Collection, Varanasi. An eGangotri Initiative

ದೇವರ ಹೆಸರಾಗಿ ಅಲ್ಲೆಲ್ಲಿಯೂ ಪ್ರಯೋಗವಾಗಿಲ್ಲ. ‘ ಶಿವ ’ ಎಂಬುದು ‘ ದೇವರು ’ ಎಂಬರ್ಥದಲ್ಲಿ ದ್ರಾವಿಡಶಬ್ದವಾಗಿರಬೇಕೆಂದೂ[1] ಶಿವೋಪಾಸನೆಯು ದ್ರಾವಿಡ ಸಂಸ್ಕೃತಿಯಾಗಿರಬೇಕೆಂದೂ ಪಂಡಿತರು ಅಭಿಪ್ರಾಯಪಡುತ್ತಾರೆ. ಈ ಸಂಸ್ಕೃತಿಯು ವೇದಕಾಲಕ್ಕಿಂತ ಪೂರ್ವಕಾಲದಿಂದಲೂ ಬಂದಿರಬೇಕೆಂದೂ ಊಹಿಸಲಾಗಿದೆ. ಸಿಂಧ ಮತ್ತು ಪಂಜಾಬ ಪ್ರಾಂತಗಳಲ್ಲಿ ಇತ್ತೀಚಿಗೆ ಭೂಖನನದಲ್ಲಿ ಪ್ರಕಟವಾದ ‘ ಮೋಹೆಂಜೊದಾರೋ, ಹಾರಪ್ಪ ’ ಎಂಬ ಪಟ್ಟಣಗಳ ಅವಶೇಷಗಳು ದ್ರಾವಿಡ ಸಂಸ್ಕೃತಿಯ ಕುರುಹಾಗಿವೆಯೆಂದೂ ಆ ಪಟ್ಟಣಗಳು ವೇದಕಾಲಕ್ಕಿಂತಲೂ ಸಹಸ್ರಾರು ವರುಷ ಪೂರ್ವದಲ್ಲಿ, ಎಂದರೆ ಕ್ರಿ. ಶ. ಪೂರ್ವ ೩೦೦೦ ವರ್ಷಗಳ ಆಚೆ, ಊರ್ಜಿತಾವಸ್ಥೆಯಲ್ಲಿದ್ದುವೆಂತಲೂ ಸಂಶೋಧಕರು ಊಹಿಸಿದ್ದಾರೆ.[2] ಅಲ್ಲಿ ಶೈವಮತದ ಸ್ಪಷ್ಟವಾದ ಕುರುಹುಗಳು ( ಮೂರು ಮುಖಗಳುಳ್ಳ ಶಿವ, ‘ ಸ್ತಂಭಾಕಾರದ ಲಿಂಗ ’ ಮುಂತಾದುವು ) ದೊರಕುತ್ತವೆಂದು ಕಂಡುಬಂದಿದೆ. ದ್ರಾವಿಡ ಸಂಸ್ಕೃತಿಯು ಪ್ರಬಲವಾಗಿರುವ ದಕ್ಷಿಣಭಾರತದಲ್ಲಿ ಶೈವ ಸಂಸ್ಕೃತಿಯಾದರೂ ಈಗಲೂ ಪ್ರಬಲಾವಸ್ಥೆಯಲ್ಲಿಯೆ ಇದೆ. ಆರ್ಯ ಸಂಸ್ಕೃತಿ ಉತ್ತರದಲ್ಲಿ ಊರ್ಜಿತಾವಸ್ಥೆಯಲ್ಲಿದ್ದಾಗ ಅಲ್ಲಿಯ ದ್ರಾವಿಡ ಸಂಸ್ಕೃತಿ ನಷ್ಟವಾಗಿರಬಹುದು; ಇಲ್ಲವೆ ದಕ್ಷಿಣಕ್ಕೆ ತಳ್ಳಲ್ಪಟ್ಟಿರಬಹುದು. ಆರ್ಯ ಸಂಸ್ಕೃತಿ ದಕ್ಷಿಣಕ್ಕೆ ಹಬ್ಬಿದಾಗ ಬಲಿಷ್ಠವಾಗಿದ್ದ ದ್ರಾವಿಡ ಸಂಸ್ಕೃತಿಯೊಡನೆ ಅದರ ಹೋರಾಟವಾಗಿರಬೇಕು. ಅಂತು, ಈ ಎರಡು ಸಂಸ್ಕೃತಿಗಳ ಕಲೆಬೆರಿಕೆಯು ಕೆಲಕಾಲದನಂತರ ಜರುಗಿರಬೇಕೆಂಬುದು ಇತಿಹಾಸದ ಸಂಗತಿಯಾಗಿದೆ. ಆಗ ಹಲವು ಸಂಗತಿಗಳಲ್ಲಿ ಶ್ರೇಷ್ಠವಾಗಿದ್ದ ಶೈವಸಂಪ್ರದಾಯವನ್ನು ಆರ್ಯರು ಅಂಗೀಕರಿಸಿದರೆಂಬಲ್ಲಿ ಸಂದೇಹವಿಲ್ಲ. ವೇದಕಾಲದಿಂದೀಚೆಗೆ ಆರ್ಯ ಸಂಸ್ಕೃತಿ ಪ್ರಸಾರವಾದಂತೆ ವೇದಗಳಲ್ಲಿ ಹೇಳದ ಹಲವು ದೇವತೆಗಳು ಆರ್ಯರ ದೇವಕೋಟಿಗೆ ಸೇರಿದುವೆಂಬ ಸಂಗತಿಯನ್ನು ಆ ಕಾಲದ ಇತಿಹಾಸ-ಪುರಾಣ ಮೊದಲಾದುವುಗಳಿಂದ ಊಹಿಸಬಹುದಾಗಿದೆ. ಅದರ ಪರಿಣಾಮವಾಗಿ ಆ ವೇದಗಳಲ್ಲಿಯೆ ಮುಖ್ಯವಾಗಿದ್ದ ದೇವತೆಗಳು ಹಿಂದೆ ಬಿದ್ದುವಲ್ಲದೆ ಕೀಳ್ತರಗತಿಯ ದೇವತೆಗಳು ಮೇಲ್ಮಟ್ಟಕ್ಕೆ ಏರಿದುವು. ಭರತಖಂಡದ ಬೇರೆ ಬೇರೆ ಭಾಗಗಳಲ್ಲಿ ಮೂಲನಿವಾಸಿಗಳು ಮುಂಚಿನಿಂದಲೂ ಆರಾಧಿಸುತ್ತಿದ್ದ ಹಲವು ಹೆಣ್ಣು-ಗಂಡು ದೇವತೆಗಳು ಈ ರೀತಿಯಾಗಿ ಆರ್ಯರ ದೇವಗಣದಲ್ಲಿ ಸೇರ್ಪಡೆಯಾಗಿರಬೇಕೆಂದು ಊಹಿಸಲು ಅವಕಾಶವಿದೆ[3]. ಅದೇ ಕಾಲದಲ್ಲಿ ಈ ದೇವತೆಗಳಲ್ಲಿ ಹಲವಕ್ಕೆ ಪರಸ್ಪರ ಸಂಬಂಧವು ಕಲ್ಪಿತವಾಗಿರಬಹುದು. ತ್ರಿಮೂರ್ತಿಗಳ ಕಲ್ಪನೆಯೂ ಅವರವರ ಪರಸ್ಪರ ಸಂಬಂಧವೂ ಹೀಗೆ ಹಿಂದಣಿಂದಲೆ ಹುಟ್ಟಿದುವಾಗಿರಬೇಕೆಂಬಲ್ಲಿ ಸಂದೇಹವಿಲ್ಲ. ಶಿವನಿಗೂ ಶಕ್ತಿರೂಪದಲ್ಲಿ ಪೂಜೆಗೊಳ್ಳುತ್ತಿದ್ದ ( ದುರ್ಗಾ ಅಥವಾ ) ಪಾರ್ವತಿಗೂ ಉಂಟಾಗಿರುವ ಸತಿ – ಪತಿ ಸಂಬಂಧವೂ ಹೀಗೆಯೇ ಈ ಕಾಲದಲ್ಲಿಯೆ ಉಂಟಾಗಿರಬೇಕು. ಇದೇ ರೀತಿ ವೇದದಲ್ಲಿ ಹೇಳಿದ ಅಷ್ಟು ಮುಖ್ಯವಲ್ಲದ ದೇವತೆಗಳಿಗೂ ಹೊರಗಣಿಂದ ಬಂದ ದೇವತೆಗಳಿಗೂ ಏಕರೂಪತೆಯುಂಟಾಗಿರ

---

೧ ಕನ್ನಡ ‘ ಕೆಂಪು ’ ಎಂಬ ಶಬ್ದದ ತಮಿಳರೂಪವಾದ ‘ ಶಿವಪ್ಪು ’ ಎಂಬ ಶಬ್ದದಿಂದ ‘ ಶಿವ ’ ಎಂಬುದು ಬಂದಿದೆ ಎಂದೂ, ವೇದದಲ್ಲಿ ದೊರೆಯುವ ‘ ರುದ್ರ ’ ಶಬ್ದದ ಅರ್ಥವು ‘ ಕೆಂಪು ’ ಅಥವಾ ‘ ಹೊಳೆಯುವ ’ ಎಂದೇ ಆಗುವುದೆಂದೂ ಹಲವರು ಹೇಳುತ್ತಾರೆ. ನೋ. Eliot Vol II P 141; Greirson: Linguistic Survey of India (Introduction to Languages belonging to Dravidian Family).

೨ Sir John Marshall: Mahanjodaro and the Indus Civilization, Preface P VII; Dr. Pran Nath: Script of Indus Valley Seals P 25.

೩ Frazer: Saivism in ERE, Vol II pp 91-96.

CC-0. Jangamwadi Math Collection, Varanasi. An eGangotri Initiative

ಬಹುದು. ವೇದದ ಭಯಂಕರನಾದ ರುದ್ರನು ಶಿವನೊಡನೆ ತಾದಾತ್ಮ್ಯಹೊಂದಿ ರುದ್ರ-ಶಿವನಾಗಿರಬೇಕು. ಹೀಗೆ ಕೆಲಶತಮಾನಗಳ ಅವಧಿಯಲ್ಲಿ ಜರಗಿದ ಈ ಮಾರ್ಪಾಟುಗಳ ಪರಿಣಾಮವಾಗಿ ಸ್ವತಂತ್ರವಾಗಿದ್ದ ಹಲವು ಶೈವಪಂಗಡಗಳು ವೈದಿಕಧರ್ಮದ ಭಾಗಗಳಾಗಿ ಅಂಗೀಕೃತವಾದಂತೆ ತೋರುತ್ತದೆ. ಹಾಗೂ ಮೂಲ ಶೈವರು ವೇದ ಪ್ರಾಮಾಣ್ಯವನ್ನೂ ಬ್ರಾಹ್ಮಣಪ್ರಾಧಾನ್ಯವನ್ನೂ ಒಪ್ಪಿಕೊಂಡಂತೆ ಕಂಡು ಬರುತ್ತದೆ. ಬ್ರಾಹ್ಮಣರಿಂದ ಶೂದ್ರರವರೆಗೆ ಶಿವೋಪಾಸಕರು ದೊರೆಯುವುದೇ ಇದಕ್ಕೆ ನಿದರ್ಶನವೆಂದು ಹೇಳಬಹುದು. ಈ ಕಲೆಬೆರಿಕೆಯಿಂದ ಶೈವದ ಪರಿಶುದ್ಧತೆಗೆ ಕುಂದುಂಟಾಗಿದೆಯೆಂದು ಕೆಲವರಿಗಾದರೂ ಹೊಳೆದಿರಬೇಕು; ಆದುದರಿಂದ ಶೈವವನ್ನು ಮೊದಲಿನ ಮೇಲ್ಮೆಗೆ ಮುಟ್ಟಿಸಬೇಕೆಂದು ಬಗೆದು ಕೆಲವರಾದರೂ ಆ ದಿಸೆಯಲ್ಲಿ ಪ್ರಯತ್ನಪಟ್ಟಿರಬೇಕು. ಅಂತಹ ಪ್ರಯತ್ನಗಳಲ್ಲಿ ವೀರಶೈವವೂ ಒಂದೆಂದು ನಮ್ಮ ಊಹೆ.

೪

ಶಿವನನ್ನು ವಿಗ್ರಹರೂಪವಾಗಿ ಆರಾಧಿಸುವ ರೂಢಿಯು ವಿರಳವಾಗಿದೆಯೆಂದು ಹೇಳಬಹುದು.[೧] ದಕ್ಷಿಣಾಮೂರ್ತಿ, ನಟರಾಜ, ಸೋಮಸ್ಕಂದ ಮೊದಲಾದುವು ಈ ಬಗೆಯ ಪೂಜೆಗೆ ಉದಾಹರಣೆಗಳೆಂದು ಹೇಳಬಹುದಾದರೂ ಶಿವನನ್ನು ಲಿಂಗರೂಪದಲ್ಲಿ ಪೂಜಿಸುವುದೇ ಸಾರ್ವತ್ರಿಕವಾದ ರೂಢಿ. ಮೊಹೆಂಜೊದಾರೋ ಎಂಬಲ್ಲಿ ಅದೇ ರೂಪದ ಪೂಜೆಯ ಅವಶೇಷಗಳು ದೊರಕಿರುವುವು. ಬೃಹದ್ಭಾರತದ ಭಾಗಗಳಾಗಿದ್ದ ಕಾಂಬೋಜ, ಚಂಪಾ ಮೊದಲಾದ ಸ್ಥಳಗಳಲ್ಲಿ ಲಿಂಗಪೂಜೆಯು ಕ್ರಿ. ಶ. ೫೫೦ ಕ್ಕಿಂತಲೂ ಮುಂಚೆ ಇತ್ತೆಂಬುದು ಆಗಿನ ಶಿಲಾಲೇಖನಗಳಿಂದ ಗೊತ್ತಾಗುತ್ತದೆ. ಭರತಖಂಡದಿಂದ ಲಿಂಗಪೂಜೆಯು ಅಲ್ಲಿಗೆ ಹೋಗಬೇಕಾದರೆ, ಹಲವು ಶತಮಾನಗಳಾದರೂ ಬೇಕಾಗುತ್ತವಾದುದರಿಂದ ಲಿಂಗಪೂಜೆ ಕ್ರಿ. ಶ. ಪೂರ್ವದಲ್ಲಿಯೆ ಭರತಖಂಡದ ಹೊರಗಡೆ ಹಬ್ಬಿತ್ತೆಂಬುದು ಸಿದ್ಧವಾಗುತ್ತದೆ.[೨] ಭರತಖಂಡದಲ್ಲಿಯ ದ್ವಾದಶ ಜ್ಯೋತಿರ್ಲಿಂಗಗಳಂತೂ ಪ್ರಸಿದ್ಧವಾಗಿಯೇ ಇರುವುವು. ಭರತಖಂಡದ ಎಲ್ಲೆಡೆಯಲ್ಲಿಯೂ – ಕಂಡುಬರುವ ಶೈವ ದೇವಾಲಯಗಳಲ್ಲಂತೂ ಲಿಂಗಗಳೇ ಪ್ರತಿಷ್ಠಿತವಾಗಿರುವುವು. ಅವುಗಳಿಗೆ 'ಶಿವಲಿಂಗ' ಇಲ್ಲವೆ 'ಮಹಾಲಿಂಗ'ವೆಂದೇ ಹೆಸರು. ಆದರೆ ವೀರಶೈವರು ಶಿವನನ್ನು 'ಇಷ್ಟಲಿಂಗ'ದ ರೂಪದಲ್ಲಿ ಕರತಲದಲ್ಲಿಟ್ಟುಕೊಂಡೇ ಪೂಜಿಸುತ್ತಾರೆ.

ಇನ್ನು 'ಲಿಂಗ'ವೆಂದರೆ ಜನನೇಂದ್ರಿಯವೆಂಬ (ಲಾಕ್ಷಣಿಕ) ಅರ್ಥವೂ ಆಗುವುದರಿಂದ ಲಿಂಗಪೂಜೆಯು ಮೂಲತಃ ಜನನೇಂದ್ರಿಯ ಪೂಜೆಯೆ ಎಂದು ಕೆಲ ದೇಶೀಯ ಹಾಗೂ ವಿದೇಶೀಯ ಪಂಡಿತರು ಅಭಿಪ್ರಾಯಪಡುತ್ತಾರೆ. ಇಂತಹ ಅಭಿಪ್ರಾಯಗಳು ವೀರಶೈವರನ್ನು ಕುರಿತು ಬರೆದ ಗ್ರಂಥಗಳಲ್ಲಿ ಒಮ್ಮೊಮ್ಮೆ ಪ್ರಕಟವಾಗುವುದುಂಟು. ಇದು ವೀರಶೈವರಿಗೆ ಅವಮಾನಕರವೆಂದೆನಿಸುವುದು ಸ್ವಾಭಾವಿಕವಿದೆ. ಆದರೆ ದಿಟವನ್ನರಸುವುದರಲ್ಲಿ ತೊಡಗಿದವರು ಈ ಸಮಸ್ಯೆಯನ್ನು ಎದುರಿಸಲೇಬೇಕಾಗುವುದು. ಇದು ಅತಿ ತೊಡಕಿನ ಸಮಸ್ಯೆಯಾಗಲು ಕಾರಣವೆಂದರೆ ಇದರಲ್ಲಿ ಹಲವು ಮಹತ್ತ್ವದ ಪ್ರಶ್ನೆಗಳು ಅಡಕವಾಗಿರುವುವು. ಆ ಪ್ರಶ್ನೆಗಳನ್ನು ಈ ರೀತಿಯಾಗಿ ಬೇರ್ಪಡಿಸಬಹುದು: (೧) ಜಗತ್ತಿನಲ್ಲಿ ಯಾವ ಭಾಗದಲ್ಲಿಯಾಗಲಿ ಯಾವ ಕಾಲದಲ್ಲಿಯಾಗಲಿ

---

೧ ಶಿವನ ಮತ್ತು ಸ್ಕಂದನ ವಿಗ್ರಹಗಳನ್ನು ವ್ಯಾಕರಣಕಾರರಾದ ಪತಂಜಲಿಗಳು (ಸು. ಕ್ರಿ. ಪೂ ೧೫೦) ಹೇಳಿರುವರು. ೨ Eliot: Vol II P 142 et seq. & foot-notes.

CC-0. Jangamwadi Math Collection, Varanasi. An eGangotri Initiative

ಜನನೇಂದ್ರಿಯಪೂಜೆ ಇತ್ತೆ? (೨) ಒಂದು ವೇಳೆ ಹಾಗೆ ಇದ್ದುದು ನಿಜವಾದರೆ ಇಂತಹ ಪೂಜೆಯು ಮನುಷ್ಯನ ಕಾಡು ಸ್ಥಿತಿಯ, ಅಶ್ಲೀಲತೆಯ ಇಲ್ಲವೆ ಪಾಶವೀ ವೃತ್ತಿಯ ದ್ಯೋತಕವೇ? (೩) ಲಿಂಗಪೂಜೆಯು ಮೂಲತಃ ಇಲ್ಲವೆ ತತ್ತ್ವತಃ ಈ ಜಾತಿಯ ಪೂಜೆಗೆ ಸೇರಿದುದೇ? (೪) ಲಿಂಗಪೂಜೆಯನ್ನು ಮಾಡುವ ಶೈವರಲ್ಲಿ ಈ ಬಗೆಯ ಕಲ್ಪನೆ ಇತ್ತೇ? ಈಗ ಇರುವುದೇ? (೫) ಲಿಂಗವನ್ನು ಕುರಿತು ವೀರಶೈವರ ಕಲ್ಪನೆಯು ಹೀಗೆಯೇ ಇರುವುದೇ? ಈ ಪ್ರಶ್ನೆಗಳನ್ನು ಸಂಗ್ರಹವಾಗಿಯೆ ಆಗಲಿ ಚರ್ಚಿಸಿದ ಹೊರತು ಲಿಂಗದ ಯಥಾರ್ಥ ಕಲ್ಪನೆಯು ಉಂಟಾಗ ಲಿಕ್ಕಿಲ್ಲವೆಂದು ಬಗೆದು ಅವುಗಳ ವಿಚಾರವನ್ನು ಇಲ್ಲಿ ಕೈಕೊಳ್ಳುತ್ತೇವೆ.

ಯಾವ ನಾಡಿನಲ್ಲಿಯೆ ಆಗಲಿ ಧರ್ಮವು (religion) ಉದಯ ಹೊಂದುವುದಕ್ಕಿಂತ ಮೊದಲೊಂದು ಕಾಲ ಬರುತ್ತದೆ. ಅದಕ್ಕೆ 'ಮೋಡಿಮಾಟಗಳ (magic) ಕಾಲ' ಎಂದು ಹೇಳ ಬಹುದು; ಆ ಕಾಲದಲ್ಲಿ ಜನರು ತಮ್ಮ ಮೂಢ ಭಾವನೆಗಳ ಮೂಲಕ ತಮ್ಮಲ್ಲಿ ಭಯ, ವಿಸ್ಮಯ ಮೊದಲಾದುವುಗಳನ್ನು ಉಂಟುಮಾಡುವ ಪ್ರಾಕೃತಿಕ ಸಂಗತಿ (natural phenomena)ಗಳನ್ನು ತಮ್ಮ ಅನುಕೂಲಕ್ಕಾಗಿ ವಶವರ್ತಿ ಮಾಡಿಕೊಳ್ಳುವ ಶಕ್ತಿಯನ್ನು ಪಡೆಯಲು ಹವಣಿಸುತ್ತಾರೆ. ಅದಕ್ಕಾಗಿ ಮಂತ್ರ, ಮಾಟ ಮೊದಲಾದ ವಿಧಿ (rites) ಗಳನ್ನು ಕಲ್ಪಿಸಿಕೊಳ್ಳುತ್ತಾರೆ. ಬರ ಬರುತ್ತ ಅವರ ಮೌಢ್ಯವು ಕಡಿಮೆಯಾಗಿ ಪ್ರಕೃತಿಯ ಯಥಾರ್ಥ ಕಲ್ಪನೆಯು ಅವರಲ್ಲಿ ಉಂಟಾಗ ತೊಡಗಿತೆಂದರೆ ಧಾರ್ಮಿಕ ಭಾವನೆಗಳು ಒಡೆಮೂಡಿ ಧರ್ಮವು ತಲೆದೋರಲಾರಂಭಿಸುತ್ತದೆ. ಈ ಧಾರ್ಮಿಕ ಕಾಲವು ಬಂದೊಡನೆಯೆ ಹಿಂದಣ ಮಾಟಗಾರಿಕೆಯ ಕಾಲವು ಒಮ್ಮೆಗೆ ಇಲ್ಲ ವಾಗುತ್ತದೆಂತಲ್ಲ: ಮುಂದೆ ಬಹುಕಾಲ ಅದು ಧಾರ್ಮಿಕ ಭಾವನೆಗಳಿಗೆ ಅನುರೋಧವಾಗಿಯೋ ವಿರೋಧವಾಗಿಯೋ ಸಾಗುತ್ತಲೆ ಇರುತ್ತದೆ. ಕಾಲಕ್ರಮೇಣ ಅದರಲ್ಲಿಯ ಆಚರಣೆಗಳೂ ಅವುಗಳ ಹಿನ್ನೆಲೆಯಾದ ಕಲ್ಪನೆಗಳೂ ಮಾರ್ಪಾಟಾಗುತ್ತ ಹೋಗಿ ಅವುಗಳ ಅವಶೇಷಗಳು ಧರ್ಮಾಚರಣೆ ಯಲ್ಲಿಯೂ ಸೇರ್ಪಡೆಯಾಗುತ್ತವೆ.[೧] ಹಿಂದುಗಳಿಗೆ ವೇದಗಳೆ ಪ್ರಮಾಣವಾದಾಗ್ಯೂ ವೇದಗಳ ಲ್ಲಿಯೆ ಏಕೆ, ಮುಂದೆ ಹಲವು ಶತಮಾನಗಳ ಮೇಲೆ ಹುಟ್ಟಿರಬಹುದಾದ ಉಪನಿಷತ್ತುಗಳಲ್ಲಿಯೂ ಮಂತ್ರ ಮಾಟಗಳ ಪರಿಣಾಮವು ಯಥೇಷ್ಟವಾಗಿ ಕಂಡುಬರುತ್ತದೆ.

ಆಧುನಿಕರಾದ ನಮಗೆ ವಿಚಿತ್ರವೆನಿಸುವ ಹಲವು ರೂಢಿಗಳು ಈ ಮಾಟಗಾರಿಕೆಯ ಕಾಲದಲ್ಲಿಯೆ ಉಂಟಾದುವೆಂದು ಕಂಡುಬರುತ್ತದೆ. ಮಂತ್ರ-ತಂತ್ರ, ಮಾಟದ ಗೊಂಬೆ, ಬಲಿ ದಾನ, ಚರಗ, ಸುಗ್ಗಿಯ ಕುಣಿತ, ಯುರೋಪದ ಹಲವು ದೇಶಗಳಲ್ಲಿ ಈಗಲೂ ಪ್ರಚಾರದಲ್ಲಿ ರುವ ವಸಂತೋತ್ಸವ, ಹೋಳಿಯ ಹುಣ್ಣಿವೆಯ ಕಾಲಕ್ಕೆ ನಮ್ಮಲ್ಲಿ ಕಂಡುಬರುವ 'ಬೀಭತ್ಸ' ರೂಢಿಗಳು—ಇವೆಲ್ಲವೂ ಇದೇ ಜಾತಿಗೆ ಸೇರಿದುವು. ಯಜ್ಞಯಾಗಾದಿಗಳ ಹುಟ್ಟು ಇದೇ ಬಗೆಯದು. ಈ ರೂಢಿಗಳು ಎಲ್ಲ ದೇಶಗಳಲ್ಲಿಯೂ ಇದ್ದುವು: ಕಾಡು ಜನರಲ್ಲಿ ಇಂತಹ ರೂಢಿಗಳು ಅಚ್ಚಳಿಯದೆ ಇವೆ; ಸುಧಾರಿಸಿದ ಜನಾಂಗಗಳಲ್ಲಿ ಅವಶೇಷಗಳಾಗಿ ಇವೆ.

ಇನ್ನು ಮನುಷ್ಯನನ್ನು ಸದಾ ವಿಸ್ಮಯ ಭಯನಿಷ್ಟಲನನ್ನಾಗಿ ಮಾಡುವ ಹಲವು ಪ್ರಾಕೃತಿಕ ಕಾರ್ಯಗಳಲ್ಲಿ ಜನನ-ಮರಣಗಳು ಮುಖ್ಯವಾದುವು: ಅರಸನಿಂದ ತಿರುಕನ ವರೆಗೆ ಎಲ್ಲರ ಅನುಭವಕ್ಕೂ ಬರುವ ಪ್ರಸಂಗಗಳು. ಮರಣವು ಭಯವನ್ನುಂಟು ಮಾಡುವಂತೆ ಮರಣಕ್ಕೆ ಕಾರಣವೆಂದು ಕಂಡುಬರುವ ಹಲವು ಬಗೆಯ ರೋಗ-ಜಾಡ್ಯ ಮುಂತಾದುವುಗಳೂ ಭಯ ವನ್ನುಂಟು ಮಾಡುವುದು ಸಹಜವಾಗಿದೆ. ಆದುದರಿಂದ ಇವುಗಳನ್ನು ಸಂಪೂರ್ಣವಾಗಿ ಗೆಲ್ಲುವು

೧ ನೋ. ERE Vol. IX P 824

CC-0. Jangamwadi Math Collection, Varanasi. An eGangotri Initiative

# MORE MUSINGS OF BASAVA

(1)

You my Lord created,
not merely me,
me miserable,
but these your devotees as well,
these bringers of grace,
and life's sustainers.
You've brought them here
to salvage my soul.
Then dare care,
brave all,
and loudly praise
the Lord, Kudala Sangama !

(2)

The goad is small - -
the massive elephant
is yet held in thrall;
tiny is the diamond - -
and still at its touch
a mountain scattereth;
streaks of knowledge,
faint pins of light - -
and clouds of darkness
they drive away;
the atomic mind,
sees all, knows all - -
pierces the shell
of self-forged sloth
to reach you
O Lord, Kudala Sangama !

(3)

Croaks the frog
and trips away - -
the reptile creeps behind.
I am unaware
of my imminent doom.
I give my heart away
a sordid boon.
Spare me, save me,
O Lord, Kudala Sangama !

CC-0. Jangamwadi Math Collection, Varanasi. An eGangotri Initiative

(4)

I'm like unto the struggling brute
entangled in the mire:
its wild cries are in vain - -
it but sinks deeper
into the mud.
I too am a brute:
I fail, I faint, I die:
you, my Lord,
O Lord of all,
for this my trespass
ere men condemn you,
O lift me from the mire,
and save me,
O Lord, Kudala Sangama !

(5)

Were I lame,
O Lord,
my feet will never go astray;
were I blind,
nothing will envenom my sight;
were I deaf,
no words will my ears profane.
May I seek, then,
no other refuge
than your devotees' feet,
O Lord, Kudala Sangama !

S. S. Basawanal
K. R. Srinivasa Iyengar

CC-0. Jangamwadi Math Collection, Varanasi. An eGangotri Initiative

ದಾಗವಿದ್ದರೂ ಕೆಲ ಮುಟ್ಟಿಗಾದರೂ ಮಂತ್ರ, ಮಾಟ, ಬಲಿ ಮೊದಲಾದ ವಿಧಾನಗಳಿಂದ ವಶವರ್ತಿಯಾಗುವಂತೆ ಮಾಡಿಕೊಳ್ಳುವ ಆಶೆ ಆ ಕಾಲದ ಜನರಲ್ಲಿ ಉಂಟಾಗುವುದು ಸ್ವಾಭಾವಿಕ ವಾಗಿದೆ. ವ್ಯಕ್ತಿಯು ಮರಣಕ್ಕೀಡಾದರೂ ಆತನ ಸಂತಾನವು ಮುಂದೆ ಸಾಗುವುದಕ್ಕೆ ಕಾರಣವಾದ ಜನನಕ್ರಿಯೆ, ಅದಕ್ಕೆ ಕಾರಣವಾದ ಮಿಥುನಕ್ರಿಯೆ ಹಾಗೂ ಜನನೇಂದ್ರಿಯಗಳು ಇವುಗಳಿಗೆಲ್ಲ ಮಹತ್ತ್ವವು ಬರುವುದೂ ಸ್ವಾಭಾವಿಕವಾಗಿದೆ. ಆದುದರಿಂದ ಈ ರೀತಿ ಜನಕತತ್ತ್ವವನ್ನೆ (creative principle) ದೈವವೆಂದು ಭಾವಿಸುವುದಲ್ಲದೆ ಜನನೇಂದ್ರಿಯಗಳು ರೋಗರುಜನ ಗಳನ್ನು ತಪ್ಪಿಸುವ ಶಕ್ತಿಯುಳ್ಳವೆಂದು ಭಾವಿಸಿ ಅವುಗಳ ಚಿಹ್ನೆಗಳನ್ನು ಮಾಟಾದಿ ಕಾರ್ಯಗಳಲ್ಲಿ ಉಪಯೋಗಿಸುವ ರೂಢಿಗಳು ಬಳಕೆಯಲ್ಲಿ ಬಂದುವೆಂದು ಬಲ್ಲವರು ಹೇಳುತ್ತಾರೆ. ಇದೇ ರೀತಿ ಪ್ರಾಣಿಗಳಲ್ಲಿ ನಡೆಯುವ ಜನನಕ್ರಿಯೆಯೂ ಸಸ್ಯಾದಿಗಳಲ್ಲಿ ತೋರುವ ಫಲಕ್ರಿಯೆಯೂ ಸಮಾನ ವಾದವುಗಳೆಂದು ಮನುಷ್ಯನ ಅವಗಾಹನೆಗೆ ಬರುವುದಕ್ಕೆ ಹೆಚ್ಚು ಕಾಲ ಬೇಕಾಗಿರಲಿಲ್ಲ. ಆದುದ ರಿಂದ ಬೆಳೆಗಳನ್ನು ಫಲಿಸುವುದಕ್ಕಾಗಿ ಹೊಲಗಳಲ್ಲಿಯೋ, ರೋಗರುಜೆಗಳನ್ನು ತಪ್ಪಿಸಿ ಸಂತಾ ನಾಭಿವೃದ್ಧಿಯನ್ನು ಹೊಂದುವ ಉದ್ದಿಶ್ಯವಾಗಿ ಮನೆಗಳ ತಲೆಬಾಗಿಲುಗಳ ಮೇಲೆಯೋ ಮುಂದ ಣಂಗಳದಲ್ಲಿಯೋ ಜನನೇಂದ್ರಿಯ ವಿಗ್ರಹಗಳನ್ನು—ಇದ್ದಕ್ಕಿದ್ದ ರೂಪದಲ್ಲಿಯಾಗಲಿ ವಿಕೃತ ರೂಪ ದಲ್ಲಿಯಾಗಲಿ, ಒಂದೊಂದೆಯಾಗಲಿ, ಇಲ್ಲವೆ ಸ್ತ್ರೀ-ಪುರುಷ ಚಿಹ್ನೆಗಳೆರಡೂ ಬೇರೆ ಬೇರೆಯಾಗಲಿ ಮಿಥುನದಲ್ಲಿಯೆಯಾಗಲಿ— ಇಡುತ್ತಿದ್ದ ಮತ್ತು ಅವುಗಳನ್ನು ಹಲವು ವಿಧವಾಗಿ ಆರಾಧಿಸುತ್ತಿದ್ದ ರೂಢಿಗಳು ಎಲ್ಲ ಭಾಗಗಳಲ್ಲಿಯೂ ಇದ್ದುವೆಂಬುದು ಕಂಡುಬರುತ್ತದೆ[೧]. ಈಗ ನಮಗೆ ಪವಿತ್ರವೆಂದು ತೋರುವ ಹಲವು ಚಿಹ್ನೆಗಳು ಜನನೇಂದ್ರಿಯ ದ್ಯೋತಕವಾದುವೆಂದು ಹೇಳುವ ಪಂಡಿತರೂ ಉಂಟು. ಕ್ರಿಶ್ಚಿಯನ್ನರ ಬಗೆಬಗೆಯ ಆಕಾರದ 'ಸಿಲುಬೆ' (ಕ್ರಾಸ್, cross), ಭಾರತೀಯರಿಗೆಲ್ಲ ಶುಭಕರವಾದ ಹಾಗೂ ಜರ್ಮನಿಯ 'ನಾಝಿ' ಪಂಥದವರ ಚಿಹ್ನೆವಾದ 'ಸ್ವಸ್ತಿಕ'— ಇವು ಸ್ತ್ರೀ ಪುರುಷರ ಚಿಹ್ನೆಗಳ ಮಿಲನವನ್ನು ಸೂಚಿಸುತ್ತವೆಯೆಂದೂ ಒಂದೇ ವರ್ಗಕ್ಕೆ ಸೇರಿದುವೆಂದೂ ಹೇಳ ಲಾಗಿದೆ. ವೈಷ್ಣವರು ಬಳಸುವ (ಮೂರು) ನಾಮವು ಕೇವಲ ಸ್ತ್ರೀಚಿಹ್ನೆದ ಕುರುಹೆಂದು ಹೇಳುವವ ರಿದ್ದಾರೆ.[೨] ಇದೇ ರೀತಿ ಬಾಲಚಂದ್ರರೇಖೆ, ಕುದುರೆಯ ನಾಲಿನ ಚಿಹ್ನೆ— ಇವು ಸಹ ಸ್ತ್ರೀಚಿಹ್ನೆದ ಪರ್ಯಾಯಗಳೆನ್ನುವವರೂ ಉಂಟು. ಜಗತ್ತಿನಲ್ಲಿ ಎಲ್ಲೆಲ್ಲಿಯೂ—ಗುಡಿಗಳ ಮೇಲೆ ಇಲ್ಲವೆ ಒಳಗೆ, ಕ್ರಿಶ್ಚಿಯನ್ನರ ಚರ್ಚುಗಳ ಮೇಲೆ, ರಥಗಳ ಮೇಲೆ—ಎಲ್ಲರಿಗೂ ಕಾಣುವಂತಹ ಸ್ಥಳಗಳಲ್ಲಿ ಕಂಡುಬರುವ ಸ್ತ್ರೀ-ಪುರುಷ ಚಿಹ್ನೆಗಳು ದೃಷ್ಟಿದೋಷವನ್ನು ತಪ್ಪಿಸುವುದಕ್ಕಾಗಿ ಕಲ್ಪಿಸಿದುವೆಂದೂ ಶುಭಸೂಚಕಗಳಾಗಿವೆಯೆಂದೂ ಊಹಿಸಲಾಗಿದೆ. ಕೆಲವು ಚರ್ಚುಗಳ ಕಿಡಿಕಿಗಳು ಸ್ತ್ರೀಚಿಹ್ನೆವನ್ನು ಅಚ್ಚುಳಿಯದೆ ಹೋಲುವ ಉದಾಹರಣೆಗಳಿವೆ[೩]: 'ಚರ್ಚ'ಎಂಬ ಸಂಸ್ಥೆಯು ತಾಯಿಯಂತೆ ಆದರ ಣೀಯವೆಂಬುದನ್ನು ಸೂಚಿಸುವುದರಿಂದ ಅವು ಪವಿತ್ರ ಚಿಹ್ನೆಗಳೆಂದು ಹೇಳಲಾಗಿದೆ.

ಒಂದು ಕಟ್ಟಿಗೆಯ ರಂಧ್ರದಲ್ಲಿ ಇನ್ನೊಂದು ಕಟ್ಟಿಗೆಯನ್ನಿಟ್ಟು ತೀವ್ರವಾಗಿ ತಿರುಗಿಸುವು ದರಿಂದ ಬೆಂಕಿ ಹುಟ್ಟುವುದೆಂಬುದು ಬಹು ಪ್ರಾಚೀನ ಕಾಲದಲ್ಲಿಯೆ ಗೊತ್ತಾಗಿದ್ದಿತು. ಹೋಮಾಗ್ನಿ ಯನ್ನು ಈ ವಿಧದಲ್ಲಿಯೆ ಹೊತ್ತಿಸುತ್ತಿದ್ದರು. ಬೆಂಕಿಯನ್ನು ಹೊತ್ತಿಸುವ ಈ ಕ್ರಿಯೆಯು ಪ್ರಾಣಜ್ಯೋತಿಗೆ ಕಾರಣವಾದ ಮಿಥುನಕ್ರಿಯೆಯನ್ನು ಎಲ್ಲಂದದಿಂದಲೂ ಹೋಲುತ್ತಿದ್ದುದರಿಂದ ಈ ಕಟ್ಟಿಗೆಗಳಲ್ಲಿ ಒಂದಕ್ಕೆ ಹೆಣ್ಣು, ಇನ್ನೊಂದಕ್ಕೆ ಗಂಡು ಎಂಬ ಹೆಸರುಗಳು ಭಾರತೀಯರಲ್ಲಿಯೂ

೧ ERE Vol. IX P. 830

೨ Phallism, ERE Vol IX p 819; Dubois p 112; Wall p 467

೩ Wall P 478

CC-0. Jangamwadi Math Collection, Varanasi. An eGangotri Initiative

ಪಾಶ್ಚಾತ್ಯರಲ್ಲಿಯೂ ವಾಡಿಕೆಯಾಗಿದ್ದುವು. ಈ ಎರಡೂ ಕ್ರಿಯೆಗಳನ್ನು ಅನ್ಯೋನ್ಯವಾಗಿ ಹೋಲಿಸಿದ ಉದಾಹರಣೆಗಳು ವೇದೋಪನಿಷತ್ತುಗಳಲ್ಲಿ ದೊರಕುತ್ತವೆ[೧]. ಕಾಷ್ಠಮಂಥನದಿಂದ ಬೆಂಕಿಯನ್ನು ಪ್ರಜ್ವಲಿಸುವ ವಿಧಾನವು ಯುರೋಪಖಂಡದ ಹಲವು ಭಾಗಗಳಲ್ಲಿ ಇತ್ತೀಚೆಯ ವರೆಗೂ ಇತ್ತೆಂಬುದಕ್ಕೆ ಆಧಾರಗಳಿವೆ. ದನಕರುಗಳಿಗೆ ರೋಗರುಜನಗಳು ಬಾರದಂತೆ ಪ್ರತಿ ಬಂಧ ಮಾಡುವುದಕ್ಕಾಗಿ ಬೆಂಕಿಯನ್ನು ಈ ರೀತಿ ಹೊತ್ತಿಸುತ್ತಿದ್ದರಂತೆ. ಇದೂ ಅಲ್ಲದೆ ಬೆಳೆ ಗಳನ್ನು ಫಲಿಸುವುದಕ್ಕಾಗಿಯೆ ಮಾಡಬೇಕಾದ ವಿಧಾನವೆಂದು ಮಿಥುನಕ್ರಿಯೆಯನ್ನು ಕೈಕೊಳ್ಳುವ ರೂಢಿಯು ಯುರೋಪ ಮುಂತಾದ ಹಲವು ನಾಡುಗಳಲ್ಲಿ ಇದ್ದಿತೆನ್ನುವುದಕ್ಕೆ ಆಧಾರಗಳಿವೆ[೨].

ಒಟ್ಟಿನಲ್ಲಿ ಜನಕತತ್ತ್ವವನ್ನಾಗಲಿ, ಜನನೇಂದ್ರಿಯಗಳನ್ನಾಗಲಿ ದೇವರೆಂದು ಭಾವಿಸಿ ಅವುಗಳನ್ನು ಪುರುಷ ಅಥವಾ ಸ್ತ್ರೀ ಚಿಹ್ನಗಳ ರೂಪದಲ್ಲಿ ಇಲ್ಲವೆ ಹುಂಜ, ಹೋರಿ, ಟಗರು ಇವುಗಳ ರೂಪದಲ್ಲಿ ಇಲ್ಲವೆ ಕಂಬಗಳ ರೂಪದಲ್ಲಿ ಅಥವಾ 'ಸ್ತಬ್ಧಲಿಂಗ' ( Phallus ) ವುಳ್ಳ ಪುರುಷಾಕೃತಿಯ ನಗ್ನಮೂರ್ತಿಗಳ ರೂಪದಲ್ಲಿ ಆರಾಧಿಸುತ್ತಿದ್ದ ಉದಾಹರಣೆಗಳು ಜಗತ್ತಿನ ಎಲ್ಲ ಭಾಗಗಳಲ್ಲಿಯೂ ದೃಗ್ಗೋಚರವಾಗಿವೆ. ಇಜಿಪ್ತ, ಗ್ರೀಸ್, ರೋಮ್ ಮೊದಲಾದ ಪ್ರಾಚೀನ ಸಂಸ್ಕೃತಿಯ ಶಿಖರಗಳಾದ ನಾಡುಗಳಲ್ಲಿ ಈ ರೂಢಿಯ ಒಳ್ಳೆಯ ಉದಾಹರಣೆಗಳು ದೊರ ಕುತ್ತವೆ. ಇಜಿಪ್ತದ ಒಸಿರಿಸ್ ( Osiris ), ಗ್ರೀಸಿನ ಪ್ರಿಯಾಪಸ್ ( Priapus ) ಹಾಗೂ ಡಯೊನಿಸಸ್ ( Dionysus ), ರೋಮಿನ ಗಂಡುದೇವತೆಯಾದ ಫ್ಯಾಸಿನಸ್ ( Fascinus ) ಹಾಗೂ ಹೆಣ್ಣುದೇವತೆಯಾದ ಲಿಬರಾ ( Libera ) — ಇವೆಲ್ಲ ಈ ಗುಂಪಿಗೆ ಸೇರಿದುವು[೩]. ಇನ್ನೂ ಕಾಡುಸ್ಥಿತಿಯಲ್ಲಿರುವ ಜನಾಂಗಗಳಲ್ಲಿ ಇಂತಹ ಉದಾಹರಣೆಗಳು ಈಗಲೂ ದೊರೆಯು ತ್ತವೆ. ಈ ಬಗೆಯ ರೂಢಿಗಳ ಅವಶೇಷಗಳು ಕ್ರಿಶ್ಚಿಯನ್ ಧರ್ಮದಲ್ಲಿಯೂ ಹಲವು ಇವೆಯೆಂದೂ ಇವುಗಳ ಬಗ್ಗೆ ಮೌನವನ್ನು ಧಾರಣಮಾಡಿ ಬೇರೆ ಧರ್ಮಗಳಲ್ಲಿ ಈ ಬಗೆಯ 'ಕೀಳ್ನಡತೆ'ಗಳನ್ನು ಎತ್ತಿ ತೋರಿಸುವುದು ಸತ್ಯಾನ್ವೇಷಣವಲ್ಲವೆಂದೂ ಕೆಲ ಪಾಶ್ಚಾತ್ಯ ಪಂಡಿತರೇ ಅಭಿಪ್ರಾಯ ಪಡುತ್ತಾರೆ[೪].

ಹೀಗೆ ಜನನೇಂದ್ರಿಯಗಳ ಮಹಾತ್ಮ್ಯ, ಅವುಗಳ ವಿಗ್ರಹಗಳ ಬಳಕೆ, ಆರಾಧನೆ ಒಂದು ಕಾಲದಲ್ಲಿ ಎಲ್ಲೆಡೆಯಲ್ಲಿಯೂ ಇರಬಹುದಾದುದರಿಂದ ಭರತಖಂಡದಲ್ಲಿಯೂ ಇದ್ದಿರಬಹುದೆಂಬ ಊಹೆ ಮಾಡಲಾಗಿದೆ. ಅಂತಹ ಕೆಲ ಉದಾಹರಣೆಗಳನ್ನು ಮೇಲೆ ಪ್ರಾಸಂಗಿಕವಾಗಿ ಕೊಡಲಾಗಿದೆ. ಆದರೆ ಲಿಂಗವು ಈ ಜಾತಿಗೆ ಸೇರಿದುದು ಎಂದು ಹೇಳುವುದಕ್ಕೆ ಆಧಾರಗಳು ಆವುವೆಂಬುದನ್ನು ವಿಚಾರಿಸುವುದು ಅತ್ಯವಶ್ಯವಾಗಿದೆ. (೧) ಋಗ್ವೇದದಲ್ಲಿ ಎರಡು ಕಡೆಗಳಲ್ಲಿ 'ಶಿಶ್ನದೇವಾಃ' ಎಂಬ ಜನರನ್ನು ಕುರಿತು ಹೇಳಲಾಗಿದೆ: ಆ ಜನರನ್ನು ಯಜ್ಞದ ಸಮಿಾಪಕ್ಕೆ ಬರಗೊಡಬಾರದೆಂದು ಇಂದ್ರನನ್ನು ಪ್ರಾರ್ಥಿಸುವ ಪ್ರಸಂಗವೊಂದು; ಮತ್ತೊಂದು ಪ್ರಸಂಗವೆಂದರೆ ಆ ಜನರನ್ನು ಇಂದ್ರನು ಕೊಂದನೆಂದು ಹೇಳಿದುದು[೫]. 'ಶಿಶ್ನದೇವಾಃ' ಎಂಬ ಪದಕ್ಕೆ ಪುರುಷೇಂದ್ರಿಯವನ್ನು ಪೂಜಿಸು ವವರೆಂದು ಮ್ಯಾಕ್‌ಡೋನೆಲ್[೬] (Macdonell), ಭಂಡಾರಕರ್[೭]-ಅವರು ಹೇಳುತ್ತಾರೆ. ಆದರೆ

---

೧ Rigveda iii 29; ಶತಪಥಬ್ರಾಹ್ಮಣ ೧, ಕಾಂಡ ೨; ಬೃಹದಾರಣ್ಯಕ ೬, ೪, ೨-೩ ವಃತ್ತು ೧೨;
೨ ERE Vol. IX p 819
೩ ERE Vol IX Pp 821-2.
೪ Wall p 379 et seq.
೫ Rigveda V, vii, 21, 5 & X 99, 3
೬ Vedic Mythology p 155
೭ Vaishnavism & Saivism

CC-0. Jangamwadi Math Collection, Varanasi. An eGangotri Initiative

ವೇದವ ಮೇಲೆ ಭಾಷ್ಯವನ್ನು ರಚಿಸಿದ ಸಾಯಣರೂ ನಿರುಕ್ತಕಾರರಾದ ಯಾಸ್ಕ, ದುರ್ಗಾಚಾರ್ಯ ಇವರೆಲ್ಲರೂ ಆ ಪದಕ್ಕೆ ಅಬ್ರಹ್ಮಚಾರಿಗಳೆಂಬ ಅರ್ಥವನ್ನು ಮಾಡಿದ್ದಾರೆ; ಈ ಅರ್ಥವನ್ನೆ ಮ್ಯೂರ್ (Muir),[೧] ಇಲಿಯಟ್ (Eliot)[೨] ಮೊದಲಾದವರು ಸಮರ್ಥಿಸಿ ಈ ಪೂಜೆಯ ಕುರುಹುಗಳು ವೇದದಲ್ಲಿ ಇಲ್ಲವೆಂದು ಹೇಳಿದ್ದಾರೆ. (೨) ಮಹಾಭಾರತದಲ್ಲಿ ಎರಡು ಕಡೆಗೆ[೩] ಹೇಳಿದುದನ್ನು ವಿಚಾರಿಸಿದರೆ ಲಿಂಗವು ಈ ಮಾದರಿಯ ಆರಾಧನೆಗೆ ಸೇರಿದುದೆಂಬ ಅರ್ಥ ಹೊರ ಡುವುದೆಂಬ ಅಭಿಪ್ರಾಯವನ್ನು ಕೆಲ ಪಂಡಿತರು ತೋರಿಸಿದ್ದಾರೆ; ಆದರೆ ಅವರೇ ಮಹಾಭಾರತದ ಈ ಭಾಗಗಳು ಹಿಂದಣಿಂದ ಸೇರಿದುವೆಂದೇ ನಿರ್ಣಯಿಸಿದ್ದಾರೆ[೪]. ರಾಮಾಯಣದಲ್ಲಿ ರಾಮನು ಶಿವನನ್ನು ಮಳಲಲಿಂಗದ ರೂಪದಲ್ಲಿ ಆರಾಧಿಸಿದನೆಂದು ಹೇಳಿದಂತೆ ಮಹಾಭಾರತದಲ್ಲಿ ಅರ್ಜುನನೂ ಅದೇ ರೀತಿ ಮಳಲಲಿಂಗ ಪೂಜೆಯನ್ನು ಮಾಡಿದ ಸಂಗತಿಯು ಬರುವುದಲ್ಲದೆ ಅನುಶಾಸನ ಪರ್ವದಲ್ಲಿ ಬರುವ ಶಿವಭಕ್ತನಾದ ಉಪಮನ್ಯುವಿನ ಆಶ್ರಮವರ್ಣನೆಯ ಪ್ರಸಂಗದಲ್ಲಿ ಶಿವಲಿಂಗವು ವಿಶ್ವದಾಕಾರವುಳ್ಳದೆಂದೂ ಅದರ ಮಧ್ಯದಲ್ಲಿ ಶಿವನಿರುವನೆಂದೂ ಅದನ್ನು ರಥಂತರ ಮಂತ್ರದೊಡನೆ ಬ್ರಹ್ಮನು ಪೂಜಿಸುತ್ತಿದ್ದನೆಂದೂ ಹೇಳಿದೆ. ಈ ಪ್ರಸಂಗಗಳಲ್ಲೆಲ್ಲ ಶಿವಲಿಂಗದ ಬಗ್ಗೆ ಯಾವ ಅಸಹ್ಯಭಾವನೆಯೂ ಇಲ್ಲ; ಅತ್ಯಂತ ಪವಿತ್ರವಾದ ಭಾವನೆಯೇ ಇದೆ. (೩) ಶಿವಲಿಂಗದ ಆಕಾರವು ಸ್ತ್ರೀ-ಪುರುಷ ಚಿಹ್ನೆಗಳ ಮಿಲನರೂಪವೆಂದೂ ಅದು ಒಂದೇ ಕಲ್ಲಿನಲ್ಲಿ ಕಟೆಯಲ್ಪಟ್ಟಿರುವುದೆಂದೂ ಪಾಶ್ಚಾತ್ಯ ಪಂಡಿತರ ಅಭಿಪ್ರಾಯ[೫]. ಇದಕ್ಕೆ ಆಧಾರವೆಂದು 'ಭಿಟಾ' ಎಂಬಲ್ಲಿ ದೊರೆತ, ಈಗ ಲಕ್‌ನೌ ಸಂಗ್ರಹಾಲಯದಲ್ಲಿರುವ 'ಲಿಂಗ'ವನ್ನೂ ಗುಡಿಮಲ್ಲಂ, ಕಲತ್ತೂರ್, ಕುಡಿಮಿಯಾಮಲೆ ಎಂಬ ದಕ್ಷಿಣದ ಊರುಗಳಲ್ಲಿಯ ಲಿಂಗಗಳನ್ನೂ ಉದಾಹರಣೆಗಳೆಂದು ಹೇಳುತ್ತಾರೆ. ಪುರುಷಚಿಹ್ನೆದೊಡನೆ ಇವುಗಳ ಹೋಲಿಕೆ ಎಷ್ಟು ಪೂರ್ಣ ವಾಗಿದ್ದರೂ ಇವುಗಳಲ್ಲಿ ಅಶ್ಲೀಲಭಾವನೆಯು ಎಳ್ಳಷ್ಟೂ ಇಲ್ಲವೆಂದೂ ಶಿವ-ಶಕ್ತಿಯರ ವಿಶ್ವ ಪಿತೃತ್ವವನ್ನು ಮಾತ್ರ ಸೂಚಿಸುತ್ತವೆಂದೂ ಅವರೇ ಹೇಳುತ್ತಾರೆ[೬]. ಈ ಉದಾಹರಣೆಗಳನ್ನು ಬಿಟ್ಟರೆ ಉಳಿದ ಲಿಂಗಗಳೆಲ್ಲ ನೋಡಲಿಕ್ಕೂ ಲಕ್ಷಣವಾಗಿವೆಯೆಂದು ಆ ಮಹನೀಯರೇ ಹೇಳುತ್ತಾರೆ. ಇಂತಹ ಲಕ್ಷಣವಾದ ಲಿಂಗಗಳಲ್ಲಿ ಕೆಲವು ಬೌದ್ಧರ ಸ್ತೂಪಗಳ ಆಕಾರದಲ್ಲಿರುವು ವೆಂತಲೂ ಬೇರೆ ಕೆಲವು ಸ್ತಂಭಾಕೃತಿಯಲ್ಲಿದ್ದು ಅವುಗಳ ಮೇಲೆ ಒಂದೊ ನಾಲ್ಕೊ ಮುಖಗಳು ಕೆತ್ತಲ್ಪಟ್ಟಿವೆಯೆಂದೂ ಕಂಡು ಬರುತ್ತದೆ. ಕೆಲವುದರ ಮೇಲೆ ಕುಸರಿ ಕೆಲಸವೂ (carving) ಕಂಗೊಳಿಸುವುದೆಂದು ಹೇಳಲಾಗಿದೆ. ತಾಳಿಕೋಟೆಯ ನೆರೆಯಲ್ಲಿ (ನಿಜಾಂ ಸಂಸ್ಥಾನದಲ್ಲಿ) ನವಲೆಯೆಂಬಲ್ಲಿ ಜಡೆಯಿದ್ದ ಲಿಂಗವಿದೆ. ಅದಕ್ಕೆ 'ಜಟಾ ಶಂಕರ' ಎಂಬ ಹೆಸರು. ಈ ಬಗೆಯ ಲಿಂಗಗಳನ್ನು ನೋಡಿದರಂತೂ ಜನನೇಂದ್ರಿಯಗಳ ಕಲ್ಪನೆಯೆ ಬರುವುದಿಲ್ಲವೆಂದೂ ಅವುಗಳನ್ನು ಆರಾಧಿಸುವರ ಮನಸ್ಸಿನಲ್ಲಿ ಅಶ್ಲೀಲ ಭಾವನೆ ಉಂಟಾಗುವುದಿಲ್ಲವೆಂದೂ ಹೇಳುತ್ತಾರೆ[೭]. ಆದುದರಿಂದ ಶೈವರು ಪೂಜಿಸುವ ಶಿವಲಿಂಗಗಳಲ್ಲಿ ಕಂಭ, ಬೌದ್ಧರ ಸ್ತೂಪ, ದ್ರಾವಿಡ ಜನಾಂಗದವರು ತಮ್ಮ ಪೂರ್ವಜರ ಗೋರಿಗಳ ಮೇಲೆ ನೆಡಿಸುತ್ತಿದ್ದ 'ವೀರಕಲ್ಲು' ಇವೆಲ್ಲವುಗಳ ಕಲ್ಪನೆಗಳೂ ಅಡಕವಾಗಿವೆಯೆಂದೂ ಈ ಪಂಡಿತವರ್ಯರೇ ಒಡಂಬಡುತ್ತಾರೆ[೮].

ಇನ್ನು, ಜನನೇಂದ್ರಿಯ ಪೂಜಾತತ್ತ್ವವನ್ನು ದೀರ್ಘವಾಗಿ ಸಮಾಲೋಚಿಸುವ ವಿದ್ವಾಂಸರೇ ಈ ವಿಷಯದಲ್ಲಿ ಒಂದು ಎಚ್ಚರಿಕೆ ಕೊಟ್ಟಿದ್ದಾರೆ: ಆಯಾ ಕುರುಹುಗಳನ್ನು ಬರಿಯ

---

೧ Sanskrit Texts Vol IV P. 409 ೨ Vol II p 148, foot-note 1. ೩ vii, 202, 203 XIII, 14 ೪ Eliot Vol. II p. 143 ೫ Eliot Vol II p 143, foot-note 5; ERE Vol, IX p 820, 824, ೬ ERE Vol XI pp 92-93; Gopinath Rao: Hindu Iconography Vol. II p 65 et seq. ೭ Eliot Vol II p 144. ೮ Ibid; ERE Vol. XI 92 et seq;

CC-0. Jangamwadi Math Collection, Varanasi. An eGangotri Initiative

( ನಿಜವಾದ ಇಲ್ಲವೆ ಊಹಿಸಿದ) ಹೋಲಿಕೆಯ ಮೇಲಿಂದ ಸ್ತ್ರೀ ಪುರುಷರ ಚಿಹ್ನೆಗಳೆಂದು ನಿರ್ಧರಿಸುವ ಮೊದಲು ಅವುಗಳನ್ನು ಆರಾಧಿಸುವವರ ಭಾವನೆ, ಆರಾಧಿಸುವ ವಿಧಾನ ಇವುಗಳಲ್ಲಿ ಏನಾದರೂ ಇಂತಹ ಕಲ್ಪನೆಗಳಿಗೆ ಆಧಾರವಾಗುವಂತಹ ಸಂಗತಿಗಳು ದೊರೆಯುತ್ತವೆಯೆ ಎಂಬುದನ್ನು ವಿವೇಚಿಸುವುದು ಮುಖ್ಯವಾದದು; ಇಲ್ಲವಾದರೆ ಇಂತಹ ವಿವೇಚನೆಯಲ್ಲಿ ಮಗ್ನರಾದವರ ಕಣ್ಣಿಗೆ ಎಲ್ಲಿ ನೋಡಿದರೂ ಜನನೇಂದ್ರಿಯ ಚಿಹ್ನೆಗಳೆ ಕಾಣುವ ಸಂಭವವಿದೆ— ಎಂದು[೧]. ಈ ಬಗೆಯ 'ದೃಷ್ಟಿದೋಷವು' ಪಾಶ್ಚಾತ್ಯರಲ್ಲಿ ಉಂಟಾಗುವುದು ಹೆಚ್ಚು ಸಂಭವವೆನ್ನುವುದಕ್ಕೆ ವಿಲ್ ಡ್ಯುರಂಟ್ (Will Durant) ಅವರು ಒಳ್ಳೆಯ ಮಾರ್ಮಿಕವಾದ ಕಾರಣವನ್ನು ಹೇಳಿದ್ದಾರೆ.[೨] ಪಾಶ್ಚಾತ್ಯರಲ್ಲಿ ಮದುವೆಯಾಗುವುದು ಬಹಳ ತಡವಾಗುವುದರಿಂದ ಅವರ ಕಾಮವಿಕಾರಗಳು ಸಕಾಲದಲ್ಲಿ ತೃಪ್ತಿಹೊಂದದೆ ಅವರ ಮನಸ್ಸಿನಲ್ಲಿ ಅಶ್ಲೀಲ ಭಾವನೆ ( prurience ) ಯನ್ನು ಉಂಟುಮಾಡುತ್ತವೆ— ಎಂದು. ಆದುದರಿಂದ ಲಿಂಗದ ಯಥಾರ್ಥ ಜ್ಞಾನವುಂಟಾಗಬೇಕಾದರೆ ಭಾರತೀಯರ ಕಲ್ಪನೆ ಏನಿದೆ ಎಂಬುದನ್ನು ಕಂಡುಹಿಡಿಯುವುದು ಆವಶ್ಯಕ.

ಸಾಹಿತ್ಯದಲ್ಲಿ ಉಂಟಾಗಬಹುದಾದ ಅಶ್ಲೀಲತೆಯೆಂಬ ದೋಷವನ್ನು ಕುರಿತು ಹೇಳುವಲ್ಲಿ ಭಾರತೀಯ ಆಲಂಕಾರಿಕರು ಹಲವು ಶತಮಾನಗಳ ಹಿಂದೆಯೆ 'ಶಿವಲಿಂಗ' ಪದದಲ್ಲಿ ಇಂತಹ ಕಲ್ಪನೆಗೆ ಎಡೆಯಿಲ್ಲವೆಂದೇ ಹೇಳಿದ್ದಾರೆ.

> ಸಂವೀತಸ್ಯ ಹಿ ಲೋಕೇಽಸ್ಮಿನ್ ನ ದೋಷಾನ್ವೇಷಣಂ ಕ್ಷಮಂ
> ಶಿವಲಿಂಗಸ್ಯ ಸಂಸ್ಥಾನೇ ಕಸ್ಯಾಸಭ್ಯತ್ವಭಾವನಂ

ಡಾ. ಆನಂದ ಕೆ. ಕುಮಾರಸ್ವಾಮಿಯವರು 'ಲಿಂಗವು ಜನನೇಂದ್ರಿಯದ ಚಿಹ್ನೆವಲ್ಲ. ಇದರ ಮೂಲವು ಬಹುತರವಾಗಿ ಸ್ತೂಪವಾಗಿರಬೇಕು. ಇದು ಎಷ್ಟು ಮಾತ್ರಕ್ಕೂ ಮನುಷ್ಯಾಕಾರವನ್ನು ಹೋಲದಿರುವುದರಿಂದಲೆ ಅಮೂರ್ತ ಸ್ವರೂಪನಾದ ಶಿವನ ಕುರುಹಾಗಿ ಅಂಗೀಕೃತವಾದಂತೆ ತೋರುತ್ತದೆ' ಎಂದು ಹೇಳಿದ್ದಾರೆ[೩]. ಸ್ವಾಮಿ ವಿವೇಕಾನಂದರವರು ಹೀಗೆಯೇ ಲಿಂಗವು ಅಥರ್ವ ವೇದದಲ್ಲಿ ಕೀರ್ತಿತವಾದ ಯೂಪ ಸ್ತಂಭವಾಗಿರಬೇಕೆಂಬ ಅರ್ಥವನ್ನು ಸೂಚಿಸಿದ್ದಾರೆ[೪]. ಮಹಾತ್ಮಾ ಗಾಂಧಿಯವರು 'ನಾವು ಇದುವರೆಗೆ ಶುದ್ಧ ಭಾವನೆಯಿಂದ ನಡೆಸುತ್ತಿದ್ದ ಹಲವು ಆಚರಣೆಗಳಲ್ಲಿ ಅಶ್ಲೀಲತೆಯಿದೆ ಎಂದು ಹೇಳಿಕೊಡುವುದಕ್ಕೆ ಪಾಶ್ಚಾತ್ಯರು ಬೇಕಾದರು. ಶಿವಲಿಂಗದಲ್ಲಿ ಇಂತಹ ಭಾವನೆ ಅಡಕವಾಗಿದೆ ಎಂಬುದು ನಮಗೆ ಮೊದಲು ತಿಳಿದುದು ಮಿಶನರಿಯವರ ಒಂದು ಪುಸ್ತಕದಿಂದ' ಎಂದು ಹೇಳಿದ್ದಾರೆ[೫].

ಲಿಂಗೋಪಾಸಕರಾದ ಶೈವರು ಲಿಂಗವನ್ನು ಕುರಿತು ಮಾಡಿಕೊಂಡ ಕಲ್ಪನೆ ಇದು: "ಸುಪ್ರಸಿದ್ಧವಾದ ಪುರುಷಸೂಕ್ತದಲ್ಲಿಯೂ ಶ್ವೇತಾಶ್ವತರ ಉಪನಿಷತ್ತಿನಲ್ಲಿಯೂ ವರ್ಣಿತನಾದ 'ಪುರುಷನು' ಶಿವನೇ ಎಂಬ ಭಾವನೆ ಶ್ವೇತಾಶ್ವತರದಲ್ಲಿಯೆ ಕಂಡುಬರುತ್ತದೆ. ಈ ಪುರುಷನು ನಿಜವಾಗಿಯೂ ನಿರಾಕಾರನೂ ಅಮೂರ್ತನೂ ಅವ್ಯಕ್ತನೂ ಆಗಿರುವುದರಿಂದ ಅಲಿಂಗ ( ಎಂದರೆ ಯಾವ ಕುರುಹೂ ಇಲ್ಲದವ ) ನು ಆಗಿದ್ದರೂ ಅವನೇ—

> ಸಹಸ್ರಶೀರ್ಷಾಃ ಪುರುಷಃ ಸಹಸ್ರಾಕ್ಷಃ ಸಹಸ್ರಪಾತ್
> ಸರ್ವತಃ ಪಾಣಿಪಾದಂ ತತ್ ಸರ್ವತೋಽಕ್ಷಿ ಶಿರೋಮುಖಮ್
> ಸರ್ವತಃ ಶ್ರುತಿಮಲ್ಲೋಕೇ ಸರ್ವಮಾಶ್ರಿತ್ಯ ತಿಷ್ಠತಿ

ಎಂದೂ[೬] ವರ್ಣಿತನಾಗಿರುವನು. ಲಿಂಗವು ಅವನ ಈ ಬಗೆಯ ಅಮೂರ್ತ-ಮೂರ್ತರೂಪವನ್ನು

---

೧ ERE Vol IX p 819 & 820 ೨ Durant p 519 ೩ Aims of Indian Art. ೪ Siddhanta Dipika X 21. ೫ Durant p 519-20. ೬ ಶ್ವೇತಾಶ್ವತರ ೩, ೧೩-೧೫.

CC-0. Jangamwadi Math Collection, Varanasi. An eGangotri Initiative

ಚೆನ್ನಾಗಿ ಸೂಚಿಸುತ್ತದೆ. ಮೇಲಿನ ಗೋಲಾಕಾರದ ಮೇಲ್ಭಾಗವು ಸಹಸ್ರ ತಲೆಗಳನ್ನೂ (ಒಂದೊಂದು ಒಂದು ಬಿಂದುವಿನ ರೂಪದಲ್ಲಿ)ಅವರ ನಿಲುವಿಕೆಯು ಕಣ್ಣುಗಳನ್ನೂ ಕೆಳಗಿನ ಪೀಠವು ಸಹಸ್ರಪಾದಗಳನ್ನೂ ಸೂಕ್ಷ್ಮವಾಗಿ ಸೂಚಿಸುವುದು. ಅಲ್ಲದೆ ವಿಶ್ವವನ್ನೂ ಅವನ್ನು ಆವರಿಸಿದ ಮೇಲಿನ ಅಂತರಿಕ್ಷವನ್ನೂ ಅದು ಸೂಚಿಸುವುದು. ಹೀಗೆ ಮೂಲತತ್ತ್ವದ ಕಲ್ಪನೆಯನ್ನು ಲಿಂಗವು ಚೆನ್ನಾಗಿ ಮಾಡಿಕೊಡುತ್ತದೆ. ಅಂತೆಯೆ ಲಿಂಗಪುರಾಣದಲ್ಲಿ—

> ಅಲಿಂಗೋ ಲಿಂಗಮೂಲಂತು । ಅವ್ಯಕ್ತಂ ಲಿಂಗಮುಚ್ಯತೇ
>
> ಅಲಿಂಗಃ ಶಿವ ಇತ್ಯುಕ್ತೋ । ಲಿಂಗಂ ಶೈವಮಿತಿ ಸ್ಮೃತಂ

ಎಂದು ವರ್ಣಿಸಲಾಗಿದೆ[೧]. ಆದುದರಿಂದ ಶಿವಲಿಂಗವು ಅಮೂರ್ತ (amorphous) ಸ್ವರೂಪವು; ಸ್ತಂಭಾಕಾರವಾಗಿದೆ. ಅಜ್ಞಾನವನ್ನು ನಾಶಮಾಡಿ ಆತ್ಮನನ್ನು ಬೆಳಗುವ, ಆತ್ಮಜ್ಞಾನವನ್ನು ಉಂಟುಮಾಡುವ ಚಿಜ್ಜ್ಯೋತಿಯಾಗಿದೆ. ಆದುದರಿಂದಲೆ ಅದನ್ನು ಉರಿಲಿಂಗವೆಂದು ಹೇಳಲಾಗಿದೆ.[೨] ಬ್ರಹ್ಮ ವಿಷ್ಣುಗಳು ತಮ್ಮೊಳಗೆ ಯಾರು ಹೆಚ್ಚಿನವರೆಂದು ಅಜ್ಞಾನ ಮೂಲಕ ಜಗಳಾಡುತ್ತಿರಲು ಅವರ ಮಧ್ಯದಲ್ಲಿಯೆ ಶಿವನು ಉರಿಲಿಂಗಾಕಾರದಲ್ಲಿ ಉದ್ಭವಿಸಿ ಆಕಾಶಪಾತಾಳಗಳನ್ನು ಭೇದಿಸಿ ಬೆಳೆದು, ಅವರ ಗರ್ವವನ್ನು ಭಂಗಿಸಿದನೆಂಬುದು ಶಿವನ ಸುಪ್ರಸಿದ್ಧವಾದ ಪಂಚವಿಂಶತಿ ಲೀಲೆಗಳಲ್ಲಿ ಒಂದಾಗಿದೆ. ಈ ಲೀಲೆಯು ಲಿಂಗದ ಬಗ್ಗೆ ಶೈವರ ಕಲ್ಪನೆ ಏನೆಂಬುದನ್ನು ಚೆನ್ನಾಗಿ ಪ್ರಕಟಿಸುತ್ತದೆ. ಆದುದರಿಂದ ಲಿಂಗವು ಜನನೇಂದ್ರಿಯಕ್ಕೆ ಸಂಬಂಧಪಟ್ಟಿದೆಂಬ ಮಾತು ಶೈವರಲ್ಲಿ ಇಲ್ಲವಿಷ್ಟೇ ಅಲ್ಲ; ಅವರ ಉಪಾಸನಕ್ರಮದಲ್ಲಿಯೂ ಯಾವ ಬಗೆಯ ಅಶ್ಲೀಲಭಾವನೆ ಇಲ್ಲದಿರುವುದೇ ಮುಖ್ಯಮಾತಾಗಿದೆ ಎಂದು—ಲಿಂಗದ ಮೂಲವು ಜನನೇಂದ್ರಿಯವೆಂದು ಸಾಧಿಸಲು ಹೊರಟ ಮಹನೀಯರೇ ಮುಕ್ತಕಂಠವಾಗಿ ಒಪ್ಪಿದ್ದಾರೆ[೩]. ಹೀಗಿದ್ದರೂ ಆ ಕಲ್ಪನೆ ಉಂಟಾಗಲು ಕೆಲವು ಪುರಾಣಗಳಲ್ಲಿ ಬರುವ ಕೆಲ ಕಥೆಗಳೂ ( ಇವು ಪುರಾಣಕರ್ತೃಗಳ ಇಲ್ಲವೆ ಹಿಂದಿನಿಂದ ಬಂದವರ ಕೈಗಂಟೆಂದು ಎಲ್ಲರೂ ಒಪ್ಪುತ್ತಾರೆ ), ಶೈವ-ವೈಷ್ಣವರಲ್ಲಿ ಉಂಟಾದ ವೈಷಮ್ಯದ ಮೂಲಕ ಒಬ್ಬರನ್ನೊಬ್ಬರು ಹಿಯಾಳಿಸುವಲ್ಲಿ ಮಾಡಿದ ಆರೋಪಗಳೂ ಶಾಕ್ತರಲ್ಲಿ ಕಂಡುಬರುವ ಕೆಲ ವಾಮಾಚಾರಗಳೂ ಕಾರಣವಾಗಿರಬೇಕೆಂದು ಊಹಿಸಲು ಬರುವಂತಿದೆ.

ವೀರಶೈವರನ್ನು ಕುರಿತು ವಿಚಾರಮಾಡುವಾಗಲಂತೂ ಲಿಂಗವು ಜನನೇಂದ್ರಿಯದ ಪ್ರತೀಕ ( symbol ) ಎಂಬ ಪ್ರಮೇಯವು ಮುರಿದು ಬೀಳುವುದೆಂದು— ಈ ಪ್ರಮೇಯದ ಪುರಸ್ಕರ್ತರೆ ಒಪ್ಪಿಕೊಳ್ಳುತ್ತಾರೆ. ವೀರಶೈವರ ಆಚರಣೆ ಅತ್ಯಂತ ಶುದ್ಧವಾದುದೆಂದೂ ಅವರ ಆರಾಧನಕ್ರಮ ಅತೀವ ಪವಿತ್ರವಾದುದೆಂದೂ ಲಿಂಗವನ್ನು ಕುರಿತು ಅವರ ಭಾವನೆ ಉಚ್ಚತಮವಾದುದೆಂದೂ ವರ್ಣಿಸಿ ಇಂಥವರು ಈ ಪ್ರತೀಕವನ್ನು ಏಕೆ ಬಳಸುವರೋ ಎಂಬ ವಿಸ್ಮಯವನ್ನು ಪ್ರದರ್ಶಿಸಿ, ಕೊನೆಗೆ ಲಿಂಗದ ಮೂಲವು ಕೇವಲ ಜನನೇಂದ್ರಿಯಾರಾಧನೆಗೆ ಸೇರಿದುದಲ್ಲವೆಂಬ ಪ್ರಮೇಯವನ್ನ ವೀರಶೈವರನ್ನು ಕುರಿತು ಅಂಗೀಕರಿಸಬೇಕಾಗುವುದೆಂದು ಆ ಮಹಾಶಯರೆ ಒಪ್ಪಿಕೊಂಡಿದ್ದಾರೆ[೪]. ಆದುದರಿಂದ ಲಿಂಗದ ಕಲ್ಪನೆಯು ವೀರಶೈವರಲ್ಲಿ ಯಾವ ಬಗೆಯಾಗಿದೆಯೆಂಬುದನ್ನೂ ಅದಕ್ಕೆ ಹಿನ್ನೆಲೆಯಾದ ತತ್ತ್ವವನ್ನೂ ಸಂಕ್ಷಿಪ್ತವಾಗಿಯೆ ಇಲ್ಲಿ ಹೇಳಲು ಯತ್ನಿಸುವೆವು.

ಬ್ರಹ್ಮ-ವಿಷ್ಣು-ರುದ್ರರೆಂಬ ತ್ರಿಮೂರ್ತಿಗಳಲ್ಲದೆ ಅವರಿಗೆಲ್ಲ ಮೂಲಭೂತವಾದ ಪರಶಿವನು ಬೇರೆ ಇದ್ದಾನೆ. ಈತನು ನಿರ್ವಿಕಾರ, ನಿರಾಕಾರ, ನಿಷ್ಕಲ, ನಿರ್ಗುಣನಾಗಿದ್ದಾನೆ.

---

೧ Narayana Iyer: Origin and Early History of Saivism in South India p 5– et seq.
೨ Sivapada Sundarama: Saiva School of Hinduism pp. 176 & 184 ೩ ERE Vol. IX 819 & 824 Eliot Vol II p 143 ೪ " The use of the Linga by this sect supports the view that even in its origin the symbol is not exclusively phallic." Eloit Vol II p 226 & foot-note 2; Durant p 519

CC-0. Jangamwadi Math Collection, Varanasi. An eGangotri Initiative

ಸೃಷ್ಟಿಯೆಲ್ಲವೂ ಈತನ ಲೀಲೆ ('ಮಾಯೆ' ಅಲ್ಲ). ಈ ಲೀಲೆ ನಡೆಯುವುದಕ್ಕೆ ಈತನಿಗೆ ಶಕ್ತಿಯ ನೆರವು ಬೇಕು. ಈ ಶಕ್ತಿ ಅವಿನಾಭಾವದಿಂದ ಈತನಲ್ಲಿಯೆ ನೆಲಸಿರುವಳು. ಈತನ ಲೀಲೆಯಿಂದ ಉಂಟಾಗುವ ಸೃಷ್ಟಿಯಲ್ಲಿ ತೋರುವ ಪ್ರತಿಯೊಂದು ವಸ್ತುವಿನಲ್ಲಿಯೂ ಪ್ರತಿಯೊಂದು ಸ್ಥಾನದಲ್ಲಿಯೂ ಈ ಪರಶಿವನು ಅಂತರ್ಭೂತವಾಗಿ ಇರುತ್ತಾನೆ. ಜೀವ (ಮನುಷ್ಯ) ನಲ್ಲಿ ಸಹ ಅದೇ ರೀತಿ ಒಳಗೇ ಇರುತ್ತಾನೆ. ಆದರೆ ಸ್ಥೂಲಶರೀರದ ಕಟ್ಟಿನ ಮೂಲಕವಾಗಿ, ಮಲತ್ರಯಗಳ ಮೂಲಕವಾಗಿ ಅಜ್ಞಾನ, ಮರವೆ ಇವು ಜೀವ ನನ್ನು ಆವರಿಸಿರುತ್ತವೆ. ಈ ಪ್ರತಿಬಂಧಕಗಳನ್ನು ಭೇದಿಸಿ ಪರಶಿವನನ್ನು ಸಾಧಿಸುವುದೇ ಜೀವನ ಗುರಿ. ಇದಕ್ಕೆ ಜೀವನಿಗೆ ತನ್ನ ಅರಿವು ಉಂಟಾಗುವುದೆ ಮೊದಲ ಅಡಿ. ಆದಕ್ಕಾಗಿ ಜೀವನು ಭಕ್ತಿಭಾವದಿಂದ ಅನುಭವದಲ್ಲಿ ಹಿರಿಯನಾದ ಗುರುವನ್ನು ಅರಸುತ್ತಾನೆ. ಆ ಗುರುಕೃಪೆಯಿಂದ ಜೀವನ ಆಂತರಿಕ ಶಿವಕಳೆಯನ್ನೆ ಲಿಂಗವಾಗಿ ಭಕ್ತನ ಕೈಯಲ್ಲಿ ಕೊಡುತ್ತಾನೆ. ಜೀವನಿಗೆ ಅಂಗವೆಂದೂ ಹೆಸರು. ಅಂಗನು ಉಪಾಸಕನು. ಲಿಂಗವು ಉಪಾಸ್ಯವು. ಅಂಗ-ಲಿಂಗಗಳೆರಡೂ ಪರಶಿವನ ಎರಡು ಸ್ಥಲಗಳು. ಅಂಗನು ಲಿಂಗವನ್ನು ಬೇರೆ ಮತದವರಂತೆ ಎದುರಿಟ್ಟು ಪೂಜಿಸು ವುದಿಲ್ಲ; ತನ್ನಲ್ಲಿ ವಾಸವಾಗಿರುವ ಪರಶಿವನೆಂದೇ ಪೂಜಿಸುತ್ತಾನೆ. ಕರತಳದಲ್ಲಿ ಪೂಜಿಸುವು ದಕ್ಕೆ ಕೊಟ್ಟ ಇಷ್ಟಲಿಂಗದೊಡನೆ ಗುರುವು ಭಕ್ತನ ಸೂಕ್ಷ್ಮ-ಕಾರಣ ಶರೀರಗಳಲ್ಲಿ ಪ್ರಾಣಲಿಂಗ-ಭಾವಲಿಂಗಗಳೆಂಬ ಇನ್ನೆರಡು ಲಿಂಗಗಳನ್ನು ಸ್ಥಾಪಿಸಿರುತ್ತಾನೆ. ಭಕ್ತನು ಅವುಗಳ ಅನುಸಂಧಾನ ವನ್ನು ಇಷ್ಟಲಿಂಗದೊಡನೆ ಅದರ ಮುಖವಾಗಿಯೆ ಮಾಡಬೇಕಾಗುತ್ತದೆ. ಜೀವನ ಅನುಭವವು ಹೆಚ್ಚಿದಂತೆ 'ಷಡ್ವಿಧ ಲಿಂಗ'ಗಳ ಅರಿವೂ ಆತನಿಗೆ ಉಂಟಾಗುತ್ತದೆ; ತನ್ನ ಅಂಗಾಂಗಗಳಲ್ಲಿಯೆ ಆಯಾ ಲಿಂಗಗಳಿರುವುವೆಂಬ ಜ್ಞಾನವು ನೆಲೆಗೊಳ್ಳುತ್ತದೆ. ಕೊನೆಗೆ ಲಿಂಗವೂ ಅಂಗನೂ ಒಂದರ ಲ್ಲೊಂದು ಬೆರೆತು ಲಿಂಗಾಂಗಸಾಮರಸ್ಯವು ಆಳವಡುತ್ತದೆ. ಇದೇ ಕೊನೆಯ ಅನುಭವ,ಅಥವಾ ಅನು ಭವದ ಕೊನೆ. ಈ ಅನುಭವವು ಷಟ್‌ಸ್ಥಲಮಾರ್ಗವಾಗಿ ಷಡ್ವಿಧ ಭಕ್ತಿಯಿಂದ ಪೂರ್ಣವಾಗುವುದು. ಆದುದರಿಂದ ಸ್ಥೂಲ ದೇಹದ ಮೇಲೆ ಧರಿಸಿದ ಇಷ್ಟಲಿಂಗವು ಶಿವನ ಪ್ರತೀಕವಲ್ಲ; ನಿಷ್ಕಲವಾದ ಶಿವನ ಸಕಲರೂಪವು. ಆದುದರಿಂದ ಅದನ್ನೆ ಶಿವನೆಂದು ಅಂಗನು ಆರಾಧಿಸಿ ಅದರ ಮುಖವಾಗಿಯೆ ಎಲ್ಲ ಅನುಭವವನ್ನು ಪಡೆಯುತ್ತಾನೆ. ಈ ಇಷ್ಟಲಿಂಗವು ಶಿಲೆಯಿಂದ ಮಾಡಿದುದಾದರೂ ಅದರ ಆಕಾರವು ಶೈವಗುಡಿಯೊಳಗಿನ ಲಿಂಗವನ್ನು ಸ್ಥೂಲವಾಗಿ ಹೋಲುತ್ತದೆಂದು ಹೇಳಬಹುದಾದರೂ ಇದನ್ನು ಮಾಡುವುದರಲ್ಲಿ ಒಂದು 'ಪಂಚಸೂತ್ರ' ವೆಂಬ ವಿಶಿಷ್ಟ ಕ್ರಮವಿದೆ. ಇದರ ಆರಾಧನೆ ಯಲ್ಲಿ ಕ್ರಮವಿದೆ; ತತ್ತ್ವವಿದೆ. ಈ ಲಿಂಗವನ್ನು ಗುರುವಿನಿಂದಲೆ ಪಡೆಯಬೇಕು; ಇದನ್ನು ಆರಾಧಿ ಸುವ ಪಂಚಾಕ್ಷರಿ ಮಂತ್ರವನ್ನು ಗುರುವಿನ ಮುಖದಿಂದಲೆ ದೊರಕಿಸಬೇಕು. ಈ ಎಲ್ಲ ವಿಧಾನ, ಕ್ರಮ, ಕಲ್ಪನೆ ಇವುಗಳ ವಿಷಯದಲ್ಲಿ ಶೈವಕ್ಕೂ ವೀರಶೈವಕ್ಕೂ ಭೇದವಿದೆ ಎಂಬುದನ್ನು ನಾವು ನೆನಪಿನಲ್ಲಿಡಬೇಕು. ಇದೇ ವಿಷಯವು ಹೆಚ್ಚು ವಿಸ್ತಾರವಾಗಿ ಈ ಗ್ರಂಥದಲ್ಲಿ ಹಲವು ಲೇಖಗ ಳಲ್ಲಿ ವಿವೇಚಿತವಾಗಿರುವುದರಿಂದ ಇಷ್ಟಕ್ಕೆ ನಿಲ್ಲಿಸಿ, ಲಿಂಗದ ಕಲ್ಪನೆಯನ್ನು ಮಾಡಿಕೊಡುವ ವೀರಶೈವ ವಚನಕಾರರ ಕೆಲವು ವಚನಗಳನ್ನು ಇದರಡಿ ಉದಾಹರಿಸಿದ್ದೇನೆ—

(೧)

ಅಯ್ಯಾ, ಎನ್ನ ಹೃದಯದಲ್ಲಿ ನ್ಯಸ್ತವಾಗಿಹ ಪರಮ ಚಿದ್-ಬೆಳಗೇ
ಹಸ್ತಮಸ್ತಕ ಸಂಯೋಗದಿಂದೆ ಒಂದುಗೂಡಿ ಮಹಾ ಬೆಳಗ ಮಾಡಿದಿರಲ್ಲಾ !
ಅಯ್ಯಾ, ಎನ್ನ ಮಸ್ತಕದೊಳಗೊಂದುಗೂಡಿದ ಮಹಾ ಬೆಳಗ ತಂದು
ಭಾವದೊಳಗೆ ಇಂಬಿಟ್ಟಿರಲ್ಲಾ !

CC-0. Jangamwadi Math Collection, Varanasi. An eGangotri Initiative

ಅಯ್ಯಾ, ಭಾವದೊಳಗೆ ಕೂಡಿದ ಮಹಾ ಬೆಳಗ ತಂದು
ಮನಸ್ಸಿನೊಳಗೆ ಇಂಬಿಟ್ಟಿರಲ್ಲಾ !
ಅಯ್ಯಾ, ಎನ್ನ ಮನಸ್ಸಿನೊಳಗೆ ಕೂಡಿದ ಮಹಾ ಬೆಳಗ ತಂದು
ಕಂಗಳೊಳಗಿಂಬಿಟ್ಟಿರಲ್ಲಾ !
ಅಯ್ಯಾ, ಎನ್ನ ಕಂಗಳೊಳಗೆ ಕೂಡಿದ ಮಹಾ ಬೆಳಗ ತಂದು
ಕರಸ್ಥಲದೊಳಗೆ ಇಂಬಿಟ್ಟಿರಲ್ಲಾ !
ಅಯ್ಯಾ, ಎನ್ನ ಕರಸ್ಥಲದ ಥಳಥಳಿಸಿ ಬೆಳಗಿ ಹೊಳೆಯುತ್ತಿಪ್ಪ ಅಖಂಡ ತೇಜವನೆ
ಇಷ್ಟಲಿಂಗವೆಂಬ ವೃಷ್ಟವ ತೋರಿ, ನಿಶ್ಚಯವ ಶ್ರೋತ್ರದಲ್ಲಿ ಸೃಜಿಸಿದಿರಲ್ಲಾ !
ಅಯ್ಯಾ, ಎನ್ನ ಶ್ರೋತ್ರದಲ್ಲಿ ಸೃಜಿಸಿದ ಮಂತ್ರದೊಳಗೆ
ನೀವು ನಿಂದು ಮಹತ್ವವ ಮದುಗಿದಿರಲ್ಲಾ !
ಅಯ್ಯಾ, ಎನ್ನ ಆರಾಧ್ಯ ಕೂಡಲಸಂಗಮದೇವಾ
ಎನ್ನೊಳಗೆ ನಿಮ್ಮಿರವ ಈ ಪರಿಯಲ್ಲಿ ಕಾಣಿಸುತ್ತಿರ್ದಿರಲ್ಲಾ !

(೨)

ಬಯಲ ಮೂರ್ತಿಯ ಮಾಡಿ ಎನ್ನ ಕರಸ್ಥಲಕೆ ಕೊಟ್ಟನಯ್ಯಾ ಶ್ರೀಗುರು;
ಬಯಲ ಮೂರ್ತಿಯ ಅಮೂರ್ತಿಯ ಮಾಡಿ ಎನ್ನ ಪ್ರಾಣದೊಳಗಿರಿಸಿದನಯ್ಯ ಶ್ರೀಗುರು;
ಬಯಲು ಬಯಲನೆ ಬಯಸಿ, ಬಯಲೆಂದೆನಿಸಿ ಎನ್ನ ಭಾವದಲ್ಲಿರಿಸಿದನಯ್ಯಾ ಶ್ರೀಗುರು;
ಇದು ಕಾರಣ, ಎನ್ನ ಕರಸ್ಥಲ, ಮನಸ್ಥಲ, ಭಾವಸ್ಥಲದಲ್ಲಿ ಧರಿಸಿ
ನಾನು ಅಂಗ ಲಿಂಗಸಂಬಂಧಿಯಾದೆನಯ್ಯಾ, ಮಹಲಿಂಗಗುರು ಶಿವ ಸಿದ್ಧೇಶ್ವರ ಪ್ರಭುವೇ.

(೩)

ಎನ್ನ ಕರಸ್ಥಳ ಮಧ್ಯದಲ್ಲಿ ಪರಮ ನಿರಂಜನ ಕುರುಹ ತೋರಿದ;
ಆ ಕುರುಹಿನ ಮಧ್ಯದಲ್ಲಿ ಅರುಹಿನ ಕಳೆ ತೋರಿದ;
ಆ ಕಳೆಯ ಮಧ್ಯದಲ್ಲಿ ಮಹಾಜ್ಞಾನದ ಬೆಳಗ ತೋರಿದ;
ಆ ಬೆಳಗಿನ ನಿಲುವಿನೊಳಗೆ ಎನ್ನ ತೋರಿದ, ಎನ್ನೊಳಗೆ ತನ್ನ ತೋರಿದ,
ತನ್ನೊಳಗೆ ಎನ್ನನಿಂಬಿಟ್ಟುಕೊಂಡ ಮಹಾಗುರುವಿಗೆ
ನಮೋ ನಮೋ ಎನುತಿರ್ದೆನಯ್ಯಾ, ಅಖಂಡೇಶ್ವರಾ.

(೪)

ಲಿಂಗವೆಂಬುದು ಪರಶಕ್ತಿಯುತ ಪರಶಿವನ ನಿಜದೇಹ;
ಲಿಂಗವೆಂಬುದು ಪರಶಿವನ ಘನತೇಜ;
ಲಿಂಗವೆಂಬುದು ಪರಶಿವನ ನಿರತಿಶಯಾನಂದ ಸುಖ;
ಲಿಂಗವೆಂಬುದು ಪರಶಿವನ ಪರಮಜ್ಞಾನ;
ಲಿಂಗವೆಂಬುದು ಷಡಧ್ವಮಯ ಜಗಜ್ಜನ್ಮಭೂಮಿ
ಲಿಂಗವೆಂಬುದು ಅಖಂಡಿತ ವೇದ, ಪಂಚ ಸಂಜ್ಞೆ;
ಲಿಂಗವೆಂಬುದು ತಾ ಹರಿಬ್ರಹ್ಮರ ನಡುವೆ ನೆಗಳ್ದ ಜ್ಯೋತಿರ್ಲಿಂಗ.
.... .... .... .... ....
ಉರಿಲಿಂಗಪೆದ್ದಿಪ್ರಿಯವಿಶ್ವೇಶ್ವರಾ ಲಿಂಗದೊಳಿದ ತಿಳಿಯಬಲ್ಲವನೇ ಬಲ್ಲವನು.

(೫)

ಜಗದಗಲ ಮುಗಿಲಗಲ ಮಿಗೆಯಗಲ ನಿಮ್ಮಗಲ,
ಪಾತಾಳದಿಂದತ್ತತ್ತ ನಿಮ್ಮ ಶ್ರೀಚರಣ;
ಬ್ರಹ್ಮಾಂಡದಿಂದತ್ತತ್ತ ನಿಮ್ಮ ಶ್ರೀಮುಕುಟ;
ಅಗಮ್ಯ ಅಪ್ರಮಾಣ ಅಗೋಚರ ಅಪ್ರತಿಮ ಲಿಂಗವೇ ಕೂಡಲಸಂಗಮದೇವಯ್ಯಾ,
ಎನ್ನ ಕರಸ್ಥಲಕ್ಕೆ ಬಂದು ಚುಳುಕಾದಿರಯ್ಯಾ.

CC-0. Jangamwadi Math Collection, Varanasi. An eGangotri Initiative

(೬)

ಅಂಗಯೋಗಣ ಲಿಂಗವ ಕಂಡು ಮನ ಹಾರಯಿಸ್ಸಿದಲ್ಲಿ,
ಅಂಗೇಂದ್ರಿಯಂಗಳೆಲ್ಲ ಲಿಂಗೇಂದ್ರಿಯಂಗಳಾವುವು;
ಅಂಜದಿರು ಮನವೇ, ಅಳುಕದಿರು ಮನವೇ, ಅಂಗಕ್ಕೂ ನಿನಗೂ ದೂರವೆನ್ನದಿರು;
ಅಂಗದ ಕಂಗಳಲ್ಲಿರ್ಪ, ಮನದ ಮಧ್ಯದಲ್ಲಿರ್ಪ, ಪ್ರಾಣದ ಭಾವದಲ್ಲಿರ್ಪ,
ಅಂಗಮನ ಪ್ರಾಣವು ಭರಿತವಾದ ಬಳಿಕ
ಅಂಗ ಮಧ್ಯವೇ ಪ್ರಾಣ, ಪ್ರಾಣ ಮಧ್ಯವೇ ಲಿಂಗ,
ಇದು ಸತ್ಯ, ಶಿವಬಲ್ಲ, ಶಿವಸಾಣೆ, ಉರಿಲಿಂಗಪೆದ್ದಿ ಪ್ರಿಯ ವಿಶ್ವೇಶ್ವರಾ.

ಅಂತೂ, ನಾವು ಮೇಲೆ ಮಾಡಿದ ಸಮಾಲೋಚನೆಯಿಂದ ಮೊದಲು ಸೂಚಿಸಿದ ಪ್ರಶ್ನೆಗಳಿಗೆ ಉತ್ತರಗಳು ಈ ತೆರನಾಗಿ ದೊರೆತಂತಾಯ್ತು: (೧) ಧರ್ಮವು ರೂಪಗೊಳ್ಳದ ಮೊದಲು ಜಗತ್ತಿನ ಎಲ್ಲ ಭಾಗಗಳಲ್ಲಿಯೂ ಒಂದು ಕಾಲದಲ್ಲಿ ಗುಹ್ಯೇಂದ್ರಿಯಗಳ ಆರಾಧನೆ ಬಳಕೆಯಲ್ಲಿತ್ತು—ಎಂಬದೊಂದು ವಾದವಿದೆ. ಈ ವಾದವು ಪಾಶ್ಚಾತ್ಯ ಸಂಶೋಧಕರಲ್ಲಿ ಹೆಚ್ಚು ಬಳಕೆಗೊಂಡಿದೆ. ಆ ವಾದದ ಪುರಸ್ಕರ್ತರು ಅದರ ಆಧಾರಕ್ಕೆಂದು ಹಲವು ಬಗೆಯ ಉದಾಹರಣೆ ಗಳನ್ನು ಕೊಡುವರು. ಅವುಗಳಲ್ಲಿ ಕೆಲವು ಸರಿಯೆಂದು ಕಂಡರೂ ಹಲವು ಬರಿಯ ಊಹೆಗಳಾ ಗಿರುವುವು. (೨) ಈ ಆರಾಧನೆಯು ಎಲ್ಲ ನಾಡುಗಳಲ್ಲಿಯೂ ಇದ್ದಿತೆಂದು ಒಪ್ಪುವುದಾದರೆ ಭರತಖಂಡದಲ್ಲಿಯೂ ಕ್ರಿ. ಶ. ಪೂ. ಅನೇಕ ಸಹಸ್ರ ವರ್ಷಗಳಾಚೆ ಇದ್ದಿರಬಹುದು. ಯುರೋಪ ಖಂಡದಲ್ಲಿ ಈ ಆರಾಧನೆ ಗ್ರೀಸ್ ಮತ್ತು ರೋಮ ಮೊದಲಾದ ಸುಧಾರಿಸಿದ ರಾಷ್ಟ್ರಗಳಲ್ಲಿಯೆ ಹೆಚ್ಚಾಗಿ ಬಳಕೆಯಲ್ಲಿದ್ದಿತು. ಇದರಲ್ಲಿ ಯಾವಾಗಲೂ ಬರಿಯ ಅಶ್ಲೀಲಭಾವನೆಗಳಿರುತ್ತವೆಂತಲ್ಲ; ಒಮ್ಮೊಮ್ಮೆ ಉದಾತ್ತ ಭಾವನೆಗಳೂ ಹುದುಗಿಕೊಂಡಿರುತ್ತವೆ. (೩) ಭರತಖಂಡದಲ್ಲಿ, ಅಶೋಕನ ಕಾಲದ ಸ್ತೂಪಗಳು ಹಿಂದಣಿಂದ ಲಿಂಗಗಳೆಂದು ಪೂಜೆಗೊಂಡಂತೆ, ಜನನೇಂದ್ರಿಯ ದ್ಯೋತಕಗಳಾಗಿದ್ದ ಒಂದೆರಡು ವಿಗ್ರಹಗಳು, ನಾಮಸಾಮ್ಯದಿಂದಲೋ ಅಲ್ಪಸ್ವಲ್ಪ ರೂಪಸಾಮ್ಯ ದಿಂದಲೋ ಅವು ಸ್ಥಾಪಿತವಾಗಿ ಹಲವು ಶತಮಾನಗಳಾದ ಮೇಲೆ ಲಿಂಗಗಳೆಂದು ಪೂಜೆ ಗೊಂಡಿರುವ ಸಂಭವವಿದೆ. ಆದರೆ ಅವನ್ನು ಬಿಟ್ಟರೆ ಶಿವಲಿಂಗಗಳೆಂದೆನಿಸುವ ಉಳಿದ ಲಿಂಗಗಳು ಈ ಜಾತಿಗೆ ಸೇರಿದುವಲ್ಲ. ಅವುಗಳನ್ನು ಪೂಜಿಸುವವರಲ್ಲಿ ಹಾಗೂ ವಿಧಾನಗಳಲ್ಲಿ ಈ ಕಲ್ಪನೆಯ ಲವಲೇಶವೂ ಇಲ್ಲ. (೪) ಶೈವರಂತೂ ಲಿಂಗವು ಶಿವನ ಅಮೂರ್ತಸ್ವರೂಪವನ್ನು ಪ್ರಕಟಿಸುವ ಕುರುಹೆಂದು ಹೇಳುವರಲ್ಲದೆ ಅದು ಜ್ಯೋತಿಸ್ವರೂಪದಲ್ಲಿರುವುದೆಂದೂ ಹೇಳುತ್ತಾರೆ. (೫) ವೀರಶೈವರು ಅದೇ ಮತವನ್ನು ಎತ್ತಿ ಹಿಡಿದರೂ ಶೈವರ ಸ್ಥಾವರ ಲಿಂಗದ ಕಲ್ಪನೆಗಿಂತ ಇನ್ನೂ ಮುಂದಕ್ಕೆ ಹೋಗಿ ಇಷ್ಟಲಿಂಗವು ಭಕ್ತನಲ್ಲಿಯೆ ಇರುವ ಚಿತ್ಕಳೆಯೆಂದೂ ಅದನ್ನು ಗುರು ಹಸ್ತದಿಂದಲೇ ಪಡೆದು ಧರಿಸಬೇಕೆಂದೂ ಅದಕ್ಕೆ ಒಂದು ಸಂಸ್ಕಾರವೂ ಕ್ರಮವೂ ಏರ್ಪಟ್ಟಿರುವು ವೆಂದೂ ಆ ಮಾರ್ಗವನ್ನು ಅನುಸರಿಸಿದರೆ ಮಾತ್ರ ಲಿಂಗಾಂಗ ಸಾಮರಸ್ಯದ ಗುಟ್ಟು ಅಳವಡುವು ದೆಂದೂ ತಿಳಿಯುತ್ತಾರೆ.

---

ಅಡಿ ಟಿಪ್ಪಣಿಗಳಲ್ಲಿ ಬಳಸಿದ ಸಂಕೇತಗಳು :

Durant — Will Durant : Story of Civilization: Our Oriental Heritage.
ERE — Encyclopaedia of Religion and Ethics.
Eliot — Sir Charles Eliot: Hinduism and Buddhism 3 Vols.
Wall — O. A. Wall: Sex and Sex Worship.

CC-0. Jangamwadi Math Collection, Varanasi. An eGangotri Initiative

# FURTHER MUSINGS OF BASAVA

(1)

The Great Illusion - -
it is the mother
gave birth to me;
it is the baby
fascinates me;
it is the wife
implicates me.
The Great Illusion - -
in varied ways
it keeps me in thrall.
Shall I ever break through
its maddening spell,
O Lord, Kudala Sangama !

(2)

These are my virtues,
and vices these, so-called:
but are they self-acquired ?
- - or am I agent free ?
I am mere thistledown
quivering helpless
the while:
it is nought mine,
but your doing,
O Lord, Kudala Sangama !

(3)

The monkey climbs the tree
and restless flits
from branch to branch:
and so my scaling mind
pursues an uncertain course;
my apprehensions come and go
in diffuse clouds;
I fail to see you whole,
or know you true,
O Lord, Kudala Sangama !

CC-0. Jangamwadi Math Collection, Varanasi. An eGangotri Initiative

(4)

How shall it profit my mind
if it seeks to know
the outside world
but scrutinizes not itself ?
How shall I train my mind
to seek alone the truth,
guided by the foot-prints
of your devotees,
O Lord, Kudala Sangama !

(5)

My mind is a wanton jade:
my wish is father to my thought;
my fluid inclinations
rule me entire;
I have no living faith
in your devotees.
Purify me, save me,
O Lord, Kudala Sangama !

S. S. Basawanal
K. R. Srinivasa Iyengar

CC-0. Jangamwadi Math Collection, Varanasi. An eGangotri Initiative

# ಶ್ರೀಮಾನ್ ಸಿದ್ಧರಾಮಪ್ಪ ದುಂಡಪ್ಪ ಪಾವಟೆ

( ಜನನ: ೧೮೭೪ — ಮರಣ : ೨೩ನೆಯ ಮೇ ೧೯೪೯ )

ಶ್ರೀಮಾನ್ ಪಾವಟೆಯವರು ಕರ್ನಾಟಕದ ವಿಖ್ಯಾತ ಶಿವಾನುಭಾವಿಗಳೂ ನೈತಿಕಾಚರಣೆಯ ಮುಕುಟಪ್ರಾಯರೂ ಹೆಸರಾಂತ ಸಾಹಿತಿಗಳೂ ವಿದ್ಯಾರ್ಥಿಪ್ರೇಮಿಗಳೂ ಕೊಡುಗೈಗಳೂ ಆಗಿದ್ದರಲ್ಲದೆ ವೀರಶೈವ ಧರ್ಮತತ್ತ್ವಗಳನ್ನು ಆಳವಾಗಿ ಅಭ್ಯಾಸಿಸಿದವರೂ ನುರಿತ ವ್ಯಾಖ್ಯಾತರೂ ಸುಪ್ರಸಿದ್ಧ ವಕೀಲರೂ ಎಂದು ಹೊಗಳಿಸಿಕೊಂಡು ಕೀರ್ತಿಶೇಷರಾಗಿ ಕಳೆದ ವರ್ಷ ಮೇ ತಿಂಗಳಲ್ಲಿ ಹುಬ್ಬಳ್ಳಿಯಲ್ಲಿ ಲಿಂಗೈಕ್ಯರಾದರು.

ಇವರು ತಮ್ಮ ಪ್ರಾಥಮಿಕ ವಿದ್ಯಾಭ್ಯಾಸವನ್ನು ಬೆಳಗಾವಿ ಜಿಲ್ಹೆಯ ಮುಮ್ಮಾಪುರಗ್ರಾಮದಲ್ಲಿ ನಡೆಸಿ, ಕಾರವಾರದಲ್ಲಿ ಇಂಗ್ಲಿಷ ಐದನೆಯ ಇಯತ್ತೆಯವರೆಗೆ ಅಭ್ಯಾಸ ಮಾಡಿ, ಬೆಳಗಾವಿಯ ಸರದಾರ ಹಾಯ ಸ್ಕೂಲಿನಿಂದ ಮ್ಯಾಟ್ರಿಕ್ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದರು. ಅನಂತರ ಫರ್ಗ್ಯುಸನ್ ಕಾಲೇಜಿನಲ್ಲಿ ಪ್ರೀವ್ಹಿಯಸ್ ಪರೀಕ್ಷೆ ಮುಗಿಸಿಕೊಂಡು, ಡೆಕ್ಕನ್ ಕಾಲೇಜಿನ ಜ್ಯೂ. ಬಿ. ಎ. ಪರೀಕ್ಷೆಯಲ್ಲಿ ಸಂಸ್ಕೃತದಲ್ಲಿ ಮೊದಲನೆಯ ದರ್ಜೆಯನ್ನು ಪಡೆದು ತೇರ್ಗಡೆಯಾದರು. ಇದಕ್ಕಾಗಿ ಅವರಿಗೆ ಒಂದು ವರ್ಷದ ಮಟ್ಟಿಗೆ ಸಂಸ್ಕೃತದ ವಿಷಯಕ್ಕಾಗಿ ಪ್ರತ್ಯೇಕವಾಗಿಟ್ಟ ವಿದ್ಯಾರ್ಥಿವೇತನ ( Scholarship ) ವು ದೊರಕಿತು. ಮುಂದೆ ೧೮೯೯ ರಲ್ಲಿ ಮುಂಬೈಯಲ್ಲಿ ಎಲೆಲ್. ಬಿ. ಪರೀಕ್ಷೆಯನ್ನು ಮುಗಿಸಿಕೊಂಡು ಹುಬ್ಬಳ್ಳಿಯಲ್ಲಿ ವಕೀಲವೃತ್ತಿಯನ್ನು ಕೈಕೊಂಡರು. ಆಗ್ಗೆ ಉತ್ತರ ಕರ್ನಾಟಕದ ವೀರಶೈವರಲ್ಲಿ ಮೊತ್ತಮೊದಲಿಗೆ ಎಲೆಲ್. ಬಿ. ಪದವಿಯನ್ನು ಪಡೆದ ಪ್ರಶಸ್ತಿಗಾಗಿ ಇವರಿಗೆ ಸನ್ ೧೯೦೦ ರಲ್ಲಿ ‘ ವಿಕ್ಟೋರಿಯಾ ಜ್ಯುಬಿಲಿ ಮೆಡಲ್ ’ ಎಂಬ ಹೆಸರಿನ ೧೫ ತೊಲಿಯ ಒಂದು ಸುವರ್ಣ ಪದಕವು ಪಾರಿತೋಷಕವಾಗಿ ದೊರೆಯಿತು.

ವಕೀಲ ವೃತ್ತಿಯ ಬಗ್ಗೆ ಇವರ ಪ್ರಾಮಾಣಿಕ ಮನವರಿಕೆಯು ಶ್ರೇಷ್ಠ ತರಗತಿಯದಾಗಿತ್ತು. “ ಸಾಕ್ಷಿದಾರರಿಂದ ಸುಳ್ಳು ಸಾಕ್ಷಿಯನ್ನು ಹೇಳಿಸಬಾರದು. ಕೇವಲ ಕಾಯದೇ ದೃಷ್ಟಿಯಿಂದಲೇ ವಾಗ್ವಾದ ಬೆಳೆಸಬೇಕು” ಎಂಬ ತಮ್ಮ ಅತ್ಯುಚ್ಚ ನೈತಿಕ ತಿಳುವಳಿಕೆಯನ್ನು ಪ್ರತಿಪಾದಿಸಿ, ಅದನ್ನು ತಮ್ಮ ಜೀವಮಾನದಲ್ಲಿಯೇ ಆಚರಿಸಿ ತೋರಿದರು. ಇವರ ವಕೀಲವೃತ್ತಿಯ ಕಾಲಮಾನದ ಮೂರು ಪ್ರಸಂಗಗಳಲ್ಲಿ ಕೆಳಗಿನ ಕೋರ್ಟಿನವರು ಮಾಡಿದ ನಿರ್ಣಯದ ಬಗ್ಗೆ ಹೈಕೋರ್ಟಿನವರು ತಮ್ಮ ಅಭಿಪ್ರಾಯವನ್ನು ಬದಲಾಯಿಸಬೇಕಾಗಿ ಬಂದಿತು. ಇದನ್ನು ನೋಡಲಾಗಿ ಕಾಯದೆಯ ಬಗ್ಗೆ ಅವರಿಗಿದ್ದ ಆಳವಾದ ಅಭ್ಯಾಸದ ತಿಳಿವೂ ಎದುರಾಂತ ಎಡರುಗಳನ್ನು ಹಿಮ್ಮೆಟ್ಟಿಸುವ ಸಾಹಸವೂ ಕಷ್ಟಸಹಿಷ್ಣುತೆಯೂ ಇದ್ದವೆಂದು ವ್ಯಕ್ತವಾಗುತ್ತದೆ. ಇವರಿಗೆ ಒಂದು ಬಾರಿ ಸಬ್-ಜಜ್ ಪದವಿ ನೇಮಣೂಕಿ ಪ್ರಸಂಗ ಒದಗಿ ಬಂದರೂ ಯಾವ ಕಾರಣದಿಂದಲೋ ಅದನ್ನು ನಿರಾಕರಿಸಿಬಿಟ್ಟರು.

ಇವರ ತೀರ್ಥರೂಪರಾದ ಶ್ರೀಮಾನ್ ದುಂಡಪ್ಪ ಸಂಗನಬಸಪ್ಪ ಪಾವಟೆಯವರು ಪ್ರಸಾದಿಕರೂ ಅಚ್ಚ ಶಿವಭಕ್ತರೂ ಇದ್ದುದರಿಂದ, ಅವರ ಆಚರಣೆಯ ಪ್ರಭಾವದಿಂದಾಗಿ ಇವರಿಗೆ ಚಿಕ್ಕಂದಿನಲ್ಲಿಯೇ ದೇವರಲ್ಲಿ ಶ್ರದ್ಧೆಯೂ ಲಿಂಗದಲ್ಲಿ ಭಕ್ತಿಯೂ ಬಳೆಯತೊಡಗಿತು. ಮೊದಲಿನಿಂದಲೂ ಇವರು ಸ್ಥಾವರ ಭಕ್ತಿ-ಪೂಜೆಗಳಿಗೆ ಬೆಲೆಕೊಡುತ್ತಿರಲಿಲ್ಲ. ವಿದ್ಯಾರ್ಥಿದೆಸೆಯಲ್ಲಿಯೇ ಇವರಿಗೆ ವಾಚನಾಭಿರುಚಿಯು ಬಳೆದು ಬಸವಪುರಾಣ, ನಿಜಗುಣ ಶಿವಯೋಗಿಗಳ ಗ್ರಂಥಗಳನ್ನು ಓದಿ ಅರ್ಥಮಾಡಿಕೊಂಡು ಇತರರಿಗೆ ಹೇಳುತ್ತಿದ್ದರಲ್ಲದೆ ಶಂಕರಭಾಷ್ಯವನ್ನು ಆಸಕ್ತಿಯಿಂದ ಪಠಿಸುತ್ತಿದ್ದರು. ಹುಬ್ಬಳ್ಳಿಗೆ ಬಂದಮೇಲೆ ಶ್ರೀ ಆರೂಢರ ಕೀರ್ತಿಯನ್ನು ಕೇಳಿ ಜ್ಞಾನಭಿಕ್ಷುಗಳಾದ ಪಾವಟೆಯವರು ಕುತೂಹಲ ದೃಷ್ಟಿಯಿಂದ ಅವರಲ್ಲಿಗೆ ಹೋಗಿ-ಬರುವ ಪರಿಪಾಠವನ್ನು ಇಟ್ಟುಕೊಂಡರು. ಹೀಗೆ ಮೂರು ನಾಲ್ಕು ವರ್ಷಗಳು ಶ್ರೀ ಆರೂಢರ ಉಪದೇಶ, ಸಹವಾಸದಲ್ಲಿ ಸಂದಿದುವು. ಇವರೀರ್ವರಿಗೆ ಕೆಲವು ವಿಷಯಗಳಲ್ಲಿ ಭಿನ್ನಾಭಿಪ್ರಾಯಗಳುಂಟಾಗಲು ಶ್ರೀ ಆರೂಢರ ಸಹವಾಸವನ್ನು ಬಿಟ್ಟು — ಅದ್ವೈತಿಗಳ ಬಗ್ಗೆ ತಮ್ಮ ಮೊದಲನೆಯ ಗ್ರಂಥವಾದ ‘ ವೃಷಭೇಂದ್ರಪದಭೂಷಣ ’ ವೆಂಬುದನ್ನು ( ೧೯೧೦-೧೧ ) ಬರೆದು ಪ್ರಸಿದ್ಧಿಸಿದರು.



CC-0. Jangamwadi Math Collection, Varanasi. An eGangotri Initiative

ಸನ್ ೧೯೧೯ರಲ್ಲಿ, ಧಾರವಾಡದಿಂದ ಪ್ರಕಟವಾಗುತ್ತಿದ್ದ 'ಶುಭೋದಯ' ಪತ್ರಿಕೆಯಲ್ಲಿ ಬಸವ-ಅಲ್ಲಮರ ಅವಹೇಳನಾರ್ಥವಾಗಿ ಪ್ರಸಿದ್ಧವಾದ ಬಸವ-ಅಲ್ಲಮರ ವೃತ್ತಾಂತವೇನು? ಎಂಬ ಒಂದು ಲೇಖನದ ಬಗ್ಗೆ ಇವರು ತಮ್ಮ ಸ್ವಂತ ಖರ್ಚಿನಿಂದ ಹೈಕೋರ್ಟಿನವರೆಗೂ ವಾಗ್ವಾದ ನಡೆಸಿ, ವೀರಶೈವ ಧರ್ಮದ ಬಗ್ಗೆ ಅದರ ಅನುಯಾಯಿಗಳ ಮನ ನೋಯಿಸುವಂಥ ಲೇಖಗಳನ್ನು ಇನ್ನುಮುಂದೆ ಯಾರೂ ಪ್ರಸಿದ್ಧಿಸಲಾಗದೆಂಬ ಆಶ್ವಾಸನವನ್ನು ಸರಕಾರದಿಂದ ಪಡೆದುಕೊಂಡರು.

ಸನ್ ೧೯೩೨ರಲ್ಲಿ ಮದ್ರಾಸಿನಲ್ಲಿ ನೆರೆದ 'ಸರ್ವ ಧರ್ಮ ಪರಿಷತ್ತಿ'ನಲ್ಲಿ ಶಿವಾಗಮಗಳ ವೈಶಿಷ್ಟ್ಯವನ್ನೂ ವೀರಶೈವ ಧರ್ಮ-ತತ್ತ್ವಗಳ ಶ್ರೇಷ್ಠತೆಯನ್ನೂ ಕುರಿತು ಪುಸ್ತಕ ರೂಪದಿಂದಲೂ ವ್ಯಾಖ್ಯಾನ ರೂಪದಿಂದಲೂ ಪರಿಷತ್ತಿನವರಿಗೆ ಮನವರಿಕೆ ಮಾಡಿಕೊಟ್ಟು ವೀರಶೈವ ಧರ್ಮವನ್ನು ಬೆಳಕಿಗೆ ತಂದ ಕೀರ್ತಿಯು ಇವರಿಗೇ ಸಲ್ಲುವುದು.

ಈಗ್ಗೆ ಕೆಲವು ವರ್ಷಗಳ ಹಿಂದೆ ಕರ್ನಾಟಕದ ಕೆಲ ವೀರಶೈವ ಲೇಖಕರು ಕಲುಷಿತ ಮನಸ್ಕರಾಗಿ ಜಗಜ್ಜ್ಯೋತಿ ಬಸವಣ್ಣನವರ ಕೀರ್ತಿಯನ್ನು ಸಹಿಸದೆ, ಅವರ ಅವಹೇಳನಾರ್ಥವಾಗಿ ಅನೇಕ ಲೇಖಗಳನ್ನೂ ಪುಸ್ತಕಗಳನ್ನೂ ಬರೆದು ಪ್ರಸಿದ್ಧಿಸಿದರು. ಇಷ್ಟಕ್ಕೆ ತೃಪ್ತರಾಗದೆ ತಮ್ಮ ಪುಸ್ತಕ ಮತ್ತು ಲೇಖಗಳು ಅಧಿಕೃತವಾಗಿವೆಯೆಂದೂ ಸಾರಿ, ಅವುಗಳಿಗೆ 'ಸುಪ್ರಭೇದ' ವೆಂಬ ಆಗಮದ ಆಧಾರವನ್ನು ಕೊಟ್ಟು ಸಮಾಧಾನ ಹೇಳಿದರು. ಆಗ್ಗೆ ಶ್ರೀಮಾನ್ ಪಾವಟೆಯವರು ಧೈರ್ಯದಿಂದ ಮುಂದೆ ಬಂದು ಭಕ್ತಿಭಾಂಡಾರಿ ಬಸವನ ವಿಶ್ವಧರ್ಮ ತತ್ತ್ವಗಳ ಕೀರ್ತಿಗೆ ಕಳಂಕ ತರುವ ಬರಹಗಾರರಿಗುತ್ತರವೆಂದು 'ಸುಪ್ರಭೇದಪ್ರಭಂಜನ, ಬಸವಭಾನು, ಚೆನ್ನಬಸವತೈಜಸ, ಅಲ್ಲಮವ್ಯೋಮ' ಎಂಬ ಗ್ರಂಥಗಳನ್ನು ಬರೆದು ಪ್ರಸಿದ್ಧಿಸುವ ಸಾಹಸದಲ್ಲಿ ಗೆಲುವಾಂತು, ಜನತೆಗೆ ಬಸವನಲ್ಲಿದ್ದ ಭಕ್ತಿ-ಪ್ರೇಮಗಳನ್ನು ಇಮ್ಮಡಿ ಬೆಳೆಸಿದರು.

ಇದಲ್ಲದೆ, ಬೆಳಗಾವಿಯಿಂದ ಪ್ರಕಟವಾಗುತ್ತಲಿದ್ದ 'ಪ್ರಬೋಧ' ಮಾಸಪತ್ರಿಕೆಯಲ್ಲಿ 'ಭಗವದ್ಗೀತೆಗೆ ಶಿವಾಗಮಗಳೇ ಆಧಾರ' ವೆಂಬ ಬಗ್ಗೆಯೂ ಧಾರವಾಡದ 'ಜಯಕರ್ನಾಟಕ' ದಲ್ಲಿ 'ಕೋಳೂರ ಕೊಡಗೂಸು, ಮಹಾದೇವಿ ಅಕ್ಕ, ಚನ್ನಕ್ಕ, ಅಜಗಣ್ಣ,' ವಿಜಾಪುರದ 'ಶಿವಾನುಭವ' ದಲ್ಲಿ ಶ್ರೀಕರಭಾಷ್ಯ ವಿಮರ್ಶೆ, ಲಿಂಗಹೋದರೆ ಪ್ರಾಣಘಾತ ಮಾಡಿಕೊಳ್ಳಬಹುದೋ?' ಎಂಬ ಗಮನಾರ್ಹವಾದ ವಿಚಾರಪ್ಲುತ ವಿಮರ್ಶಾತ್ಮಕ ಲೇಖಗಳನ್ನು ಬರೆಯುತ್ತ ಸದ್ದಿಲ್ಲದೆ ಸಾಹಿತ್ಯ ಸೇವೆಯನ್ನು ಮಾಡುತ್ತಲಿದ್ದರು.

ಪ್ರತಿ ಬಸವ ಜಯಂತ್ಯುತ್ಸವದಲ್ಲಿ ಇವರು ತರುಣರಿಗಿಂತಲೂ ಹೆಚ್ಚು ಉತ್ಸಾಹದಿಂದ ಭಾಗವಹಿಸಿ ಕೆಲಸಮಾಡುತ್ತಲೂ ಸಮಯೋಚಿತ ಲೇಖಗಳನ್ನೂ ಬಸವಣ್ಣನವರ ಬಗ್ಗೆ ಅಷ್ಟಕಗಳನ್ನು ರಚಿಸಿ ಪ್ರಸಿದ್ಧಿಸುತ್ತಲೂ ಇದ್ದರು.

ಸನ್ ೧೯೪೪ರಲ್ಲಿ ಹುಬ್ಬಳ್ಳಿಯಲ್ಲಿ ಜರುಗಿದ 'ಕರ್ನಾಟಕ ಸಾಹಿತ್ಯ ಪರಿಷತ್ತಿ'ನ ಸಮ್ಮೇಲನದ ಸ್ವಾಗತಾಧ್ಯಕ್ಷರಾಗಿ ದುಡಿದು, ಅದನ್ನು ಯಶಸ್ವಿರೀತಿಯಿಂದ ಕೊನೆಗಾಣಿಸಿ, ತಮ್ಮ ಕಾರ್ಯದಕ್ಷತೆಯನ್ನು ಪ್ರದರ್ಶಿಸಿದರು. ಅಂದಿನ ಅವರ ಸ್ವಾಗತಭಾಷಣವು ಕನ್ನಡಿಗರಿಗೆ ಮಾರ್ಗದರ್ಶಕವಾದುದು; ಅದರಲ್ಲಿ ಕನ್ನಡದ ಕೆಚ್ಚಿತ್ತು, ಸೌಂದರ್ಯವಿತ್ತು, ಮಾರ್ಮಿಕತೆ ಇತ್ತು. ಅದೇ ಸಮಯಕ್ಕೆ ಅವರು 'ಹರಿಹರನ ಇನಿಗಬ್ಬ' ವೆಂಬ ಒಂದು ಪ್ರೌಢಲೇಖವನ್ನು ಬರೆದು ಕವಿ ಹರಿಹರನು ವೀರಶೈವನೆಂಬುದನ್ನು ಪ್ರತಿಪಾದಿಸಿ ಸಿದ್ಧಮಾಡಿ ತೋರಿದರು.

ಈ ಮಧ್ಯ ವೀರಶೈವ ಸಮಾಜವು ಸಂಕುಚಿತ ದೃಷ್ಟಿಯನ್ನೊಳಗೊಂಡು ಗುರು-ವಿರಕ್ತರ ಕಲಹದ ಮೂಲಕ ಸಮಾಜವನ್ನೇ ಕೆಳಮಟ್ಟಕ್ಕಿಳಿಸಲು ಪ್ರಯತ್ನಿಸಿದಾಗ, ಇವರು ಸಾಹಸದಿಂದ ಮುನ್ನುಗ್ಗಿ ಸತ್ಯವನ್ನು ಬೆಳಕಿಗೆ ತಂದು, ವೀರಶೈವ ಧರ್ಮವು ವಿಶ್ವಧರ್ಮವೆಂದು ಪರಿಗಣಿಸಲು ಯೋಗ್ಯವಿದೆಯೆಂಬುದನ್ನು ಸಮಾಜಕ್ಕೆ ತೋರಿಸಿ ಜನತೆಯ ಅಭಿಮಾನಾದರಗಳಿಗೆ ಪಾತ್ರರಾದರು.

ಹೀಗೆ ಕನ್ನಡನಾಡು-ನುಡಿಗಳ ಸೇವೆಯನ್ನು ಅವ್ಯಾಹತವಾಗಿ ಎಸಗಿ, ತಮ್ಮ ಶಿವಾನುಭವದಿಂದಲೂ ನೈತಿಕಾಚಾರದ ಘನತೆಯಿಂದಲೂ ಸರ್ವರಿಗೆ ಮಾರ್ಗದರ್ಶಿಗಳಾಗಿ ಬಾಳಿ, ಬದುಕಿ, ಕೀರ್ತಿಶೇಷರಾದವರಲ್ಲಿ ಶ್ರೀಮಾನ್ ಪಾವಟೆಯವರೊಬ್ಬರೆಂದು ಹೇಳಬಹುದು.



CC-0. Jangamwadi Math Collection, Varanasi. An eGangotri Initiative

ಇನ್ನು ಕೊನೆಯದಾಗಿ, 'ವೀರಶೈವ ಧರ್ಮಮತ' ವೆಂಬ ಈ ಪುಸ್ತಕದಲ್ಲಿಯ ಲೇಖವನ್ನು ಅವರು ಬರೆದುದೂ ಅಚ್ಚಿನ ಖರಡನ್ನು ತಿದ್ದಿಕೊಟ್ಟುದೂ ಅವರು ಅರ್ಧಾಂಗವಾಯು ಬೇನೆಯಿಂದ ಬಳಲಿ ಹಾಸಿಗೆ ಹಿಡಿದಿರುವಾಗ. ಒಮ್ಮೊಮ್ಮೆ ಅವರು ಇದು ನನ್ನ 'ಕೊನೆಯ ಲೇಖ' ವೆಂದು ಹೇಳುತ್ತಿದ್ದುದು ಇಂದಿಗೂ ನಮ್ಮ ಸ್ಮೃತಿಪಟಲದಲ್ಲಿ ಉಳಿದಿದೆ. "ವೀರಶೈವ ಧರ್ಮನುತ" ವೆಂಬ ಅವರ ಲೇಖವನ್ನು ಸೂಕ್ಷ್ಮವಾಗಿ ಅವಲೋಕಿಸಿದರೆ ಅವರ ಇಡೀ ಆಯುಷ್ಯದ ಶಿವಾನುಭವದ ತಿರುಳೇ ಅದರಲ್ಲಿ ಅಡಕವಾಗಿರುವುದನ್ನು ನಾವು ಮನಗಾಣುತ್ತೇವೆ. ಸ್ಥಳ ಸಂಕೋಚದ ಮೂಲಕ ಆ ಲೇಖದ ವಿಮರ್ಶೆಯನ್ನು ಇಲ್ಲಿ ಮಾಡಿಲ್ಲ. ಓದುಗರು ಆ ಲೇಖವನ್ನು ಓದಿಯೇ ಅದರ ಸವಿಯನ್ನು ಸವಿಯಬೇಕೆಂದು ನಮ್ಮ ಬಯಕೆ.

—ಸಂಪಾದಕ





CC-0. Jangamwadi Math Collection, Varanasi. An eGangotri Initiative

# ‘ವೀರಶೈವ ತತ್ತ್ವ ಪ್ರಕಾಶ’ದ
# ಲೇಖಕರ ಪರಿಚಯ

## ೧. ಶ್ರೀ. ಚೆನ್ನಮಲ್ಲಿಕಾರ್ಜುನಪ್ಪನವರು

### ಜೀವ, ಜಗತ್ತು, ಈಶ್ವರ, ಮೋಕ್ಷಗಳ ಬಗ್ಗೆ ವೀರಶೈವರ ಕಲ್ಪನೆ

ಇವರು ಮೈಸೂರು ಪ್ರಾಂತಕ್ಕೆ ಸೇರಿದ ಶಿರಿಯಾಳಕೊಪ್ಪ ಊರಿನವರು. ಮೈಸೂರ ಸರಕಾರದ ಕನ್ನಡಶಾಲೆಯಲ್ಲಿ ದುಡಿದು ನಿವೃತ್ತರಾಗಿರುವರು. ಈಗ ಹಾವೇರಿಯಲ್ಲಿ ಶ್ರೀ ಶಿವಲಿಂಗ ವಿಜಯ ಮುದ್ರಣಾಲಯದ ಒಡೆಯರಾಗಿದ್ದಾರೆ. ‘ಸದ್ಧರ್ಮದೀಪಿಕೆ’ ಮಾಸಪತ್ರಿಕೆಯ ಸಂಪಾದಕರಾಗಿ ಅದರ ಮುಖಾಂತರ ವೀರಶೈವ ಧರ್ಮಕ್ಕೆ ಸಂಬಂಧಿಸಿದ ಅನೇಕ ಗ್ರಂಥಗಳನ್ನು ಪ್ರಸಿದ್ಧಿಸಿದ್ದಾರೆ. ಅವುಗಳಲ್ಲಿ ಹರಿಹರದೇವನ ಮಹಾದೇವಿಯಕ್ಕನ ರಗಳೆಯು ಪ್ರಸಿದ್ಧವಾಗಿದೆ. ಕನ್ನಡ–ಸಂಸ್ಕೃತ ಎರಡು ಭಾಷೆಗಳಲ್ಲಿಯೂ ನುರಿತ ಪಂಡಿತರಾಗಿದ್ದಾರೆ.

## ೨. ಶ್ರೀಮಾನ್ ಸಿದ್ಧರಾಮಪ್ಪ ದುಂಡಪ್ಪ ಪಾವಟೆ

### ವೀರಶೈವ ಧರ್ಮ ಮತವು

(೧ನೆಯ ಪುಟ ನೋಡಿರಿ)

## ೩. ಶ್ರೀ. ಕಲ್ಯಾಣಪ್ಪನವರು ಬ್ಯಾಳಿ

### ಷಟ್–ಸ್ಥಲಗಳು

ಇವರು ಈಗ ವಿಜಾಪುರದ ಸಿದ್ಧೇಶ್ವರ ಹಾಯಸ್ಕೂಲಿನಲ್ಲಿ ಅಧ್ಯಾಪಕರಾಗಿ ಕೆಲಸಮಾಡುತ್ತಲಿದ್ದಾರೆ. ಮುಂಬಯಿ ವಿಶ್ವವಿದ್ಯಾಲಯದ ಪದವೀಧರರು. ಕೆಲವು ವರ್ಷ ಆಲಮಟ್ಟಿಯ ವೀರಶೈವ ವಿದ್ಯಾಲಯಕ್ಕೂ ಸೇವೆಯನ್ನು ಸಲ್ಲಿಸಿರುವರು. ‘ಶಿವಾನುಭವದ’ ಓದುಗರಿಗೆ ಇವರ ಪರಿಚಯವಿರಲಿಕ್ಕೆ ಸಾಕು.

## ೪. ಶ್ರೀ. ಬಸವಪ್ಪನವರು ಜೀರಿಗಿ

### ವೀರಶೈವರ ನೈತಿಕ ವಿಚಾರಗಳು

ಇವರು ಬೆಂಗಳೂರಿನವರು. ಮೈಸೂರ ವಿಶ್ವವಿದ್ಯಾಲಯದ ಬಿ. ಎ. ಪದವೀಧರರಿರುವರು. ಮೈಸೂರ ಸರಕಾರದ ಮುಖ್ಯ ಕನ್ನಡ ಟ್ರಾನ್ಸಲೇಟರ ಹುದ್ದೆಯಲ್ಲಿದ್ದ ಶ್ರೀ. ಜೀರಿಗಿ ಬಸವಲಿಂಗಪ್ಪನವರ ಚಿರಂಜೀವಿಗಳು. ಬಸವಣ್ಣನವರ ಬಗ್ಗೆ ಅನೇಕ ಲೇಖಗಳನ್ನು ಬರೆದು ಕರ್ನಾಟಕಸ್ಥರಿಗೆ ಸುಪರಿಚಿತರಾಗಿರುವರು. ಇವರ ತೀರ್ಥರೂಪರು ಬಸವಣ್ಣನವರ ಬಗ್ಗೆ ಕನ್ನಡದಲ್ಲಿ ಬರೆದ ಪುಸ್ತಕದ ಇಂಗ್ಲಿಷ ಭಾಷಾಂತರವನ್ನು ಮಾಡಿರುವರು.

## ೫. ಶ್ರೀ. ಕಲಿಗಣನಾಥಶಾಸ್ತ್ರಿಗಳು

### ಷಟ್–ಸ್ಥಲಗಳ ಸಿದ್ಧಾಂತ

ಇವರು ಪಗಡದಿನ್ನಿ ಎಂಬ ಗ್ರಾಮದವರು. ಬಾಗಲಕೋಟೆಯ ಬಸವೇಶ್ವರ ಸಂಸ್ಕೃತ ಪಾಠಶಾಲೆಯಲ್ಲಿ ಮುಖ್ಯಾಧ್ಯಾಪಕರಾಗಿ ಕೆಲಸಮಾಡಿರುವರು. ಈಗ ಧಾರವಾಡದ ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯವರು ಗದುಗಿನಲ್ಲಿ ನಡೆಸುತ್ತಿರುವ ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಕೃತ ಪಾಠಶಾಲೆಯಲ್ಲಿ ಅಧ್ಯಾಪಕರಾಗಿದ್ದಾರೆ. ಶಿವಾನುಭವ ಶಾಸ್ತ್ರದಲ್ಲಿ ನುರಿತವರಿರುವರು.

## ೬. ಶ್ರೀ. ದಿವಾಕರ ರಂಗರಾಯರು

### ವಚನ ಶಾಸ್ತ್ರವೂ ಉಪನಿಷತ್ತುಗಳೂ

ಇವರು ಕರ್ನಾಟಕಸ್ಥರಿಗೆಲ್ಲ ಸುಪರಿಚಿತರಾಗಿರುವರು. ಶ್ರೇಷ್ಠತರದ ರಾಜಕಾರಣ ಪಟುಗಳು. ಬಳ್ಳಾರಿಯಲ್ಲಿ ಕೂಡಿದ ಕರ್ನಾಟಕ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಿದ್ದರು. ಮುಂಬಯಿ ವಿಶ್ವವಿದ್ಯಾಲಯದ ಎಂ. ಎ., ಎಲೆಲ್. ಬಿ. ಪದವೀಧರರು. ಈಗ ಹುಬ್ಬಳ್ಳಿಯಲ್ಲಿದ್ದು, ಮೊದಲಿನಿಂದಲೂ ‘ಸಂಯುಕ್ತ ಕರ್ನಾಟಕ’ ಪತ್ರಿಕೆಯ ಟ್ರಸ್ಟಿಗಳಾಗಿರುವರು. ಆಧ್ಯಾತ್ಮಿಕ ವಿಷಯಗಳನ್ನೊಳಗೊಂಡ ಉಪನಿಷತ್‌ಸಾರ, ವಚನಶಾಸ್ತ್ರ ರಹಸ್ಯ, ದಾಸವಾಙ್ಮಯ ಮೊದಲಾದ ಅನೇಕ ಗ್ರಂಥಗಳನ್ನು ಬರೆದಿರುವರು. ಸಾಧುದಿವಾಕರರೆಂದು ಇತ್ತೀಚೆಗೆ ಇವರನ್ನು ಸಂಬೋಧಿಸುತ್ತಲಿರುವುದು ಅವರ ಆಧ್ಯಾತ್ಮಿಕ ಜೀವನದ ಕುರುಹೆಂದು ಗಣಿಸಬಹುದು.



CC-0. Jangamwadi Math Collection, Varanasi. An eGangotri Initiative

## ೭. ಚಂದ್ರಶೇಖರಶಾಸ್ತ್ರಿಗಳು ವ್ಯಾ. ತೀ.

### ವಚನಶಾಸ್ತ್ರ ಹಾಗೂ ಉಪನಿಷತ್ತುಗಳು

ಇವರು ಬಳ್ಳಾರಿ ಜಿಲ್ಲೆಯ ಹೊಳಲ ಗ್ರಾಮದವರು. ಹುಬ್ಬಳ್ಳಿಯ ಮೂರುಸಾವಿರಮಠದ ಸಂಸ್ಕೃತ ಕಾಲೇಜಿನ ಮುಖ್ಯಾಧ್ಯಾಪಕರಾಗಿದ್ದರು. ಸುರಿತ ಲೇಖಕರು. ಸಂಸ್ಕೃತ ಪಂಡಿತರು. ಕರ್ನಾಟಕದ ನಾನಾವಿಧ ಚಟುವಟಿಕೆಗಳಲ್ಲಿ ಉತ್ಸುಕತೆಯಿಂದ ಭಾಗವಹಿಸಿ ಕೆಲಸಮಾಡುತ್ತಲಿರುವರು. ಈಗ ಇವರು ಪುನಃ ಯಾದಗಿರಿಯ ಶಂಕರ ಸಂಸ್ಕೃತ ಕಾಲೇಜಿನ ಪ್ರಿನ್ಸಿಪಾಲರಾಗಿ ಕೆಲಸಮಾಡುತ್ತಲಿರುವರು.

## ೮. ಶ್ರೀ. ಟಿ. ಎನ್. ಮಹಾದೇವಯ್ಯನವರು

### ಅನುಭವ ಮಂಟಪ

ಇವರು ಮೈಸೂರ ದೇಶದ ತುಮಕೂರ ಜಿಲ್ಲೆ ತಿಪಟೂರ ಎಂಬ ಊರಿನವರು. ಈಗ ಮೈಸೂರ ಸರಕಾರದ ಒಂದು ಹುದ್ದೆಯಲ್ಲಿರುವರು. ವಯಸ್ಸು ಸುಮಾರು ೩೬–೩೭ ಇರಬಹುದು. ಬಾಲ್ಯದಿಂದಲೂ ಕನ್ನಡ ನಾಡು–ನುಡಿಯಲ್ಲಿ ವಿಶೇಷ ಪ್ರೀತಿ ಇವರಿಗೆ. ಬಹಳ ದಿನಗಳಿಂದಲೂ ಕರ್ನಾಟಕದ ಪ್ರಮುಖ ಪತ್ರಿಕೆಗಳಲ್ಲಿ 'ನಂದಕಿಶೋರ' ಎಂಬ ಕಾವ್ಯನಾಮದಿಂದ ಪ್ರಕಟವಾಗುತ್ತಲಿದ್ದ ಕವನಗಳೆಲ್ಲವೂ ಇವರಿಂದ ರಚಿಸಲ್ಪಟ್ಟವುಗಳು. 'ಮಹಾದೇವಿಯಕ್ಕನ ಸಂಕ್ಷಿಪ್ತ ಜೀವನ ಚರಿತ್ರೆ' ಎಂಬ ಸಣ್ಣ ಹೊತ್ತಿಗೆಯನ್ನೂ ಬಸವಣ್ಣನವರ ಜೀವನ ಚರಿತ್ರೆಯನ್ನು ಕುರಿತು "ಕ್ರಾಂತಿಯ ದೀಪ" ಎಂಬ ನಾಟಕವನ್ನೂ 'ಪುಷ್ಪಾಂಜಲಿ' ಎಂಬ ಗದ್ಯ–ಕವನ ಗ್ರಂಥವನ್ನೂ ಬರೆದಿರುವರು. ಇವುಗಳಲ್ಲಿ "ಮಹಾದೇವಿಯಕ್ಕನ ಸಂಕ್ಷಿಪ್ತ ಜೀವನ ಚರಿತ್ರೆ'ಯು ಸರ್ಪಭೂಷಣ ಗ್ರಂಥಮಾಲೆಯ ಪ್ರಥಮ ಪುಷ್ಪವಾಗಿಯೂ 'ಕ್ರಾಂತಿಯ ದೀಪವು' ೧೯೩೮ನೆಯ ಬಸವಜಯಂತ್ಯುತ್ಸವಕ್ಕಾಗಿ ಗದುಗಿನ ಶ್ರೀ. ಮಡಿವಾಳಪ್ಪ ಅ್ಯಂಡ ಬ್ರದರ್ಸ ಇವರಿಂದಲೂ ಪ್ರಸಿದ್ಧವಾಗಿವೆ. ಇನ್ನುಳಿದ 'ಪುಷ್ಪಾಂಜಲಿ' ಯನ್ನು ಶಾಂತಿನಿಕೇತನದ ಕವಿರವೀಂದ್ರರ ಅಪ್ಪಣೆ ಪಡೆದು ಅವರಿಗೇ ಸಮರ್ಪಿಸಿದ್ದಾರೆಂದು ಕೇಳಿದ್ದೇವೆ. ಆದರೆ ಇದುವರೆಗೂ ಅದು ಅಚ್ಚಿನ ಮನೆಯನ್ನು ಕಂಡಿಲ್ಲ.

ಶ್ರೀ. ಮಹಾದೇವಯ್ಯನವರು ಇನ್ನೂ ಎಳೆ ವಯಸ್ಸಿನವರು. ಆಳವಾಗಿ ಅಭ್ಯಾಸಿಸಿದವರು. ಇವರ ಬರೆಹದಲ್ಲಿ ಸ್ಫೂರ್ತಿ ಇದೆ. ಶೈಲಿಯ ಸರಳತೆ ಇದೆ. ವಿಷಯವನ್ನು ನೇರವಾಗಿ ತಿಳಿಸಬಲ್ಲ ಜಾಣ್ಮೆಯಿದೆ. ಇಂತಹವರು ತಾಯಿನಾಡಿಗಾಗಿ ಹೆಚ್ಚು ಶ್ರದ್ಧೆವಹಿಸಿ ದುಡಿಯಬೇಕೆಂಬುದು ನಮ್ಮ ಹಿರಿಯಾಸೆ.

## ೯. ಶ್ರೀ. ಮಂಜಪ್ಪನವರು ಹರ್ಡೇಕರ

### ಲಿಂಗಪೂಜೆಯ ಬೆಳವಣಿಗೆಯ ಇತಿಹಾಸ

ಇವರು ಆಲಮಟ್ಟಿಯ ವೀರಶೈವ ವಿದ್ಯಾಲಯದ ಸಂಸ್ಥಾಪಕರು. 'ಶರಣ ಸಂದೇಶ' ವಾರಪತ್ರಿಕೆಯ ಸಂಪಾದಕರು. ವಕ್ತೃತ್ವ ಕಲೆಯುಳ್ಳವರು; ಬಹುಶ್ರುತರು. ಅನೇಕ ಚರಿತ್ರ ಗ್ರಂಥಗಳನ್ನು ಮಾಲೆಯ ರೂಪವಾಗಿ ಪ್ರಸಿದ್ಧಿಸಿರುವರು. ಸಮಾಜ ಸೇವೆಗಾಗಿ ತನು–ಮನ–ಧನಗಳನ್ನು ಅರ್ಪಿಸಿರುವರು.

## ೧೦. ಶ್ರೀ. ಎಂ. ಎಸ್. ಬಸವಲಿಂಗಯ್ಯನವರು

### ಶಕ್ತಿವಿಶಿಷ್ಟಾದ್ವೈತಮತ ನಿರೂಪಣ

ಇವರು ಮೈಸೂರ ಪ್ರಾಚ್ಯಕೋಶಾಲಯದ ಮುಖ್ಯಾಧಿಕಾರಿ ( curator ) ಗಳಾಗಿರುವರು. ಎಂ. ಎ., ಬಿ. ಎಲ್. ಪದವೀಧರರು. ಸಂಸ್ಕೃತ–ಕನ್ನಡ ಭಾಷೆಗಳೆರಡರಲ್ಲಿಯೂ ಪ್ರವೀಣರು. ಸರಸ ಕವಿಗಳು. ಅನೇಕ ಸಂಶೋಧನಾತ್ಮಕ ಲೇಖನಗಳನ್ನು ಬರೆದಿರುವರು. ಮೈಸೂರು ವಿಶ್ವವಿದ್ಯಾಲಯದ ಕೆಲವು ಗ್ರಂಥಗಳು ಇವರ ಸಂಪಾದಕತ್ವದಲ್ಲಿ ಪ್ರಕಟವಾಗಿರುವುವು.

## ೧೧. ಶ್ರೀ. ಮಹಾದೇವಸ್ವಾಮಿಗಳು ಸರ್ಪಭೂಷಣಮಠ

### ಲಿಂಗಾಂಗ ಸಾಮರಸ್ಯ

ಇವರು ಮೊದಲಿಗೆ ರಾಮದುರ್ಗ ಗ್ರಾಮದವರು. ಬೆಳಗಾವಿ ಜಿಲ್ಹೆಯ ಮಮದಾಪುರ ಗ್ರಾಮದ ವಿರಕ್ತಮಠದ ಸ್ವಾಮಿಗಳಾಗಿದ್ದರು. ಈಗ ಬೆಂಗಳೂರಿನ ಸರ್ಪಭೂಷಣ ಶಿವಯೋಗಿಮಠದ ಮುಖ್ಯ ಅಧಿ



CC-0. Jangamwadi Math Collection, Varanasi. An eGangotri Initiative

ಕಾರಿಗಳಾಗಿರುವರು. ಕಾಶಿಯಲ್ಲಿ ಸಂಸ್ಕೃತ ವಿದ್ಯಾಭ್ಯಾಸವನ್ನು ಮುಗಿಸಿ ವೇದಾಂತ ವಿಷಯದಲ್ಲಿ ಪ್ರವೀಣರಾಗಿರುವರು. ತಮ್ಮ ಮಾರ್ಮಿಕವಾದ ಪ್ರವಚನದಿಂದ ವಚನವಾಙ್ಮಯ ಹಾಗು ವೀರಶೈವ ಮತದ ತತ್ತ್ವಗಳನ್ನು ಎಲ್ಲೆಡೆಯಲ್ಲಿಯೂ ಪ್ರಸರಿಸುತ್ತಲಿರುವರು. ಪ್ರವಚನದಲ್ಲಿ ಎಂಥವರನ್ನೂ ಮುಗ್ಧಮಾಡುವ ಮೋಹಕ ಶೈಲಿಯು ಇವರಿಗೆ ಸಾಧಿಸಿದೆ. ನುರಿತ ವ್ಯಾಖ್ಯಾತರು. ಆಧ್ಯಾತ್ಮಿಕ ಕ್ಷೇತ್ರದಲ್ಲಿ ಅಧಿಕಾರಯುತ ವಾಣಿಯಿಂದ ಮಾತನಾಡಬಲ್ಲವರು.

## ೧೨ ಶ್ರೀ. ಎ. ಎಂ. ಷಣ್ಮುಖಶಾಸ್ತ್ರಿಗಳು ಅತಲಾಪುರಮಠ

### ಶೈವ ಮತ್ತು ವೀರಶೈವ

ಇವರು ಹೈದರಾಬಾದ ಸಂಸ್ಥಾನದ ಗುಲಬರ್ಗಾ ಜಿಲ್ಲೆ ಇಲಿಯಾಳ ಗ್ರಾಮದವರು. ಇವರ ಬಾಲ್ಯ ಶಿಕ್ಷಣವು ಮನೆಯಲ್ಲಿಯೇ ಸಾಗಿತು. ಮಾಧ್ಯಮಿಕ ಶಿಕ್ಷಣವು ಗುಲಬರ್ಗಾ, ಸೊಲ್ಲಾಪುರದಲ್ಲಿ ಆಗಿ ಪ್ರೌಢ ಶಿಕ್ಷಣವು ಯಾದಗಿರಿಯ ಎಸ್. ಎಸ್. ಕಾಲೇಜಿನಲ್ಲಿ—ವಂಗದೇಶದ ಕಾವ್ಯತೀರ್ಥದ ಸಮಾನತೆಗೂ ಮದ್ರಾಸ ವಿಶ್ವವಿದ್ಯಾಲಯದ 'ವಿದ್ವಾನ್ ಪರೀಕ್ಷೆಯ ಮಟ್ಟಕ್ಕೂ ಮುಟ್ಟಿದೆ. ಕನ್ನಡ, ಹಿಂದಿ, ಮರಾಠಿ ಭಾಷೆಗಳಲ್ಲಿ ಬಲ್ಲಿದರಲ್ಲದೆ ಇಂಗ್ಲಿಷ್ ಭಾಷೆಯ ಜ್ಞಾನವೂ ಇವರಿಗಿದೆ. ಚಿಕಿತ್ಸಕ ದೃಷ್ಟಿಯೂ ವಿಮರ್ಶಾತ್ಮಕ ಬುದ್ಧಿಯೂ ಸತ್ಯ ನಿಷ್ಠುರತೆಯೂ ಇವರ ಸ್ವಭಾವದ ಹೆಗ್ಗುರುತುಗಳು. ಸರಳ ಜೀವಿಗಳು; ವೀರಶೈವ ಮತ ತತ್ತ್ವಗಳ ಸಂಶೋಧನೆಯಲ್ಲಿ ಲವಲವಿಕೆಯುಳ್ಳವರು. ತಮ್ಮ ಪ್ರಾಮಾಣಿಕ ಮನವರಿಕೆಗಳನ್ನು ಬೆಳಕಿಗೆ ತರುವಲ್ಲಿ ಎಷ್ಟು ಎಡರುಗಳು ಒದಗಿದರೂ ಧೈರ್ಯದಿಂದ ಅವನ್ನು ಹಿಮ್ಮೆಟ್ಟಿಸುವ ಸಾಹಸಿಗಳು. ಇವರು ಇನ್ನೂ ೨೮–೨೯ ವರ್ಷದ ತರುಣರು. ಆಶಾವಾದಿಗಳು. 'ಕಲ್ಯಾಣದ ಗತವೈಭವ' ಎಂಬ ಸ್ವತಂತ್ರ ಗ್ರಂಥವೊಂದನ್ನು ಬರೆಯುತ್ತಿರುವರೆಂದು ಕೇಳಿದ್ದೇವೆ. ಶೀಘ್ರದಲ್ಲಿಯೇ ಅದು ಬೆಳಕಿಗೆ ಬರಲೆಂದು ನಾವು ಬಯಸುತ್ತೇವೆ.

## ೧೩. ಶ್ರೀ. ನಾಗಭೂಷಣಶಾಸ್ತ್ರಿಗಳು

### ವೀರಶೈವ ಧರ್ಮವೂ ಬಸವಣ್ಣನವರೂ

ಇವರು ಕೊಪ್ಪಳ ಜಿಲ್ಲೆಯ ಸಂಗನಹಾಳ ಎಂಬ ಗ್ರಾಮದವರು. ಇವರಿಗೆ ಶಾಸ್ತ್ರಿಮಠದವರೆಂದು ಕರೆಯುವ ರೂಢಿ ಇದೆ. ಚಿಕ್ಕಂದಿನಲ್ಲಿ ಹಾಲಕೇರಿ ಗ್ರಾಮದ ಶ್ರೀ. ಅನ್ನದಾನ ಸ್ವಾಮಿಗಳ ಪಾಠಶಾಲೆಯಲ್ಲಿ ಸಾಹಿತ್ಯ, ವ್ಯಾಕರಣ ಅಭ್ಯಾಸವನ್ನು ಮಾಡಿ, ಉಚ್ಚ ಶಿಕ್ಷಣಕ್ಕಾಗಿ ಕ್ಷೇತ್ರ ಕಾಶಿಗೆ ತೆರಳಿದರು. ಅಲ್ಲಿ ಸಾಹಿತ್ಯ, ನ್ಯಾಯ, ವೇದಾಂತವನ್ನು ಅಭ್ಯಾಸಮಾಡಿದರು. ಈಗ ಗದುಗಿನ ಹಡಗಲಿ ಮಠದ ಸಂಸ್ಕೃತ ವಿದ್ಯಾಲಯದಲ್ಲಿ ಅಧ್ಯಾಪಕರಾಗಿರುವರು. 'ಶ್ರೀ ಬಸವಣ್ಣನವರ ಆದರ್ಶ ಜೀವನ' ಮತ್ತು 'ಅಕ್ಕ ಮಹಾದೇವಿಯ ಆದರ್ಶ ಜೀವನ' ಎಂಬ ಎರಡು ಚಿಕ್ಕ ಹೊತ್ತಿಗೆಗಳನ್ನು ಬರೆದು ಪ್ರಸಿದ್ಧಿಸಿರುವರು. ಇದರಂತೆಯೇ ಶ್ರೀಗಳಲ್ಲಿ ನಾಡನುಡಿ ಪ್ರೇಮವು ಬೆಳೆದು ಕನ್ನಡ ಸಾಹಿತ್ಯಕ್ಕೆ ತಮ್ಮ ದುಡಿಮೆಯನ್ನು ಸಲಿಸಲು ಮುಂಬರಲೆಂದು ನಮ್ಮ ಹಂಬಲ.

## ೧೪ ಕೀ. ಶೇ. ಬಿ. ಶಿವಮೂರ್ತಿಶಾಸ್ತ್ರಿಗಳು

### ಅರುವತ್ತುಮೂವರು ಪುರಾತನರು

ಇವರು ಮೈಸೂರು ಪ್ರಾಂತದ ತುಮಕೂರಿನ ಕನ್ನಡ ಪ್ರಾಥಮಿಕ ಶಾಲೆಯ ಅಧ್ಯಾಪಕರಾಗಿದ್ದರು. ಈಗ "ಶರಣ ಸಾಹಿತ್ಯ" ಎಂಬ ಮಾಸಪತ್ರಿಕೆಯ ಮತ್ತು 'ಸ್ವತಂತ್ರ ಕರ್ನಾಟಕ' ಎಂಬ ವಾರಪತ್ರಿಕೆಯ ಸಂಪಾದಕರಾಗಿ ಬೆಂಗಳೂರಿನಲ್ಲಿರುವರು. ತಮ್ಮ ಕೀರ್ತನ ಕಲೆಯನ್ನು ಬೆಳೆಸಿಕೊಂಡು ಕೀರ್ತಿಶೇಷರಾಗಿ "ಕೀರ್ತನ ಕೇಸರಿ" ಎಂಬ ಬಿರುದನ್ನು ಸಂಪಾದಿಸಿರುವರು. ಕರ್ನಾಟಕದ ಏಕೀಕರಣ, ಸಾಹಿತ್ಯ ಇವುಗಳ ಬಗ್ಗೆ ಶ್ರಮವಹಿಸಿ ದುಡಿಯುತ್ತಲಿದ್ದಾರೆ. ಕರ್ನಾಟಕದ ವಿವಿಧ ಚಟುವಟಿಕೆಗಳಲ್ಲಿ ಉತ್ಸಾಹದಿಂದ ಭಾಗವಹಿಸುತ್ತಲೂ ಅನೇಕ ಲೇಖಗಳನ್ನು ಬರೆಯುತ್ತಲೂ ಇರುವರು.

## ೧೫. ಶ್ರೀ. ಬುದ್ಧಯ್ಯಸ್ವಾಮಿಗಳು ಪುರಾಣಿಕ

### ವೀರಶೈವರ ಕಾಯಕಗಳು

ಇವರು ರಾ. ಸಾ. ಶ್ರೀಮಂತ ಮಲ್ಲಪ್ಪ ಬಸಪ್ಪ ದೇಸಾಯಿ ಪರಗಣೆ ಗಲಗಲಿ ಇವರ ದೇಸಗತಿಯ ಕಾರ್ಯಭಾರಿ ಕೆಲಸಮಾಡಿ (೧೯೧೧–೧೯೨೭) ಅದನ್ನು ಅಭಿವೃದ್ಧಿಗೆ ತಂದು, ನಿವೃತ್ತರಾಗಿ ಈಗ ಧಾರವಾಡ



CC-0. Jangamwadi Math Collection, Varanasi. An eGangotri Initiative

ದಲ್ಲಿ ವಾಸಿಸುತ್ತಲಿರುವರು. ಕೊಲ್ಹಾಪುರದ ವೀರಶೈವ ಬೋರ್ಡಿಂಗ ಸಂಸ್ಥಾಪಕರಲ್ಲೊಬ್ಬರು. ಶ್ರೀ. ಶಿವಯೋಗಮಂದಿರ ಸಂಸ್ಥೆಯ ಪತಿಯಿಂದ ಬಹಳ ಶ್ರಮವಹಿಸಿ ದುಡಿದವರು.

ಪ್ರಭುದೇವರ ಕಂದ, ಪದ, ಹಾಡುಗಳೆಂದು ಶ್ರೀ ಮನ್ನಿರಂಜನ ಜಗದ್ಗುರು ಗ್ರಂಥಮಾಲೆಯ ೧೨ ಪುಷ್ಪಗಳೂ 'ಶ್ರೀಮದನಾದಿ ಅಲ್ಲಮಪ್ರಭು' ಎಂಬ ಸಂಶೋಧನಾತ್ಮಕ ಸ್ವತಂತ್ರ ಹಿರಿಹೊತ್ತಿಗೆಯೂ ಎಳಂದೂರ ಹರೀಶ್ವರ ಕೃತ '(ಶ್ರೀ ಪ್ರಭುದೇವರ ಪುರಾಣ' ವೆಂಬ ವಿವಿಧ ಷಟ್ಪದಿ ಕಾವ್ಯವೂ ಇವರ ಸಂಪಾದಕತ್ವದಲ್ಲಿ ಹೊರಬಿದ್ದಿವೆ. ಇದಲ್ಲದೆ ವಿಜಾಪುರದ ಶಿವಾನುಭವ ಮಾಸಪತ್ರಿಕೆಯಲ್ಲಿ ಹರಿಹರನ ಕಾಲ ನಿರ್ಣಯ, ಹರಿಹರನ ಗ್ರಂಥಗಳು, ಹರಿಹರನ ಪ್ರಭುದೇವರ ರಗಳೆಯ ವಿಮರ್ಶೆ, ವಿರಕ್ತರೊಳಗಿನ ಸಮಯಭೇದದ ಜೊಳ್ಳುತನ, ಭಕ್ತ ವಿಜಯ ಎಂಬ ವಿಮರ್ಶಾತ್ಮಕ ಲೇಖಗಳನ್ನು ಬರೆದು ಪ್ರಸಿದ್ಧಿಸಿರುವರು. ಇತ್ತೀಚೆಗೆ ಇವರು ಜಯಕರ್ನಾಟಕ ಮಾಸಪತ್ರಿಕೆಯಲ್ಲಿ ಪಂಡರಪುರದ ಪಾಂಡುರಂಗ ವಿಠ್ಠಲ? ಮತ್ತು ಜ್ಞಾನದೇವ ತುಕಾರಾಮಾದಿ ಸಂತರ ಬಸವಣ್ಣ ಎಂಬ ಸಂಶೋಧಾತ್ಮಕ ಐತಿಹಾಸಿಕ ಸ್ವತಂತ್ರ ಲೇಖಗಳನ್ನು ಪ್ರಸಿದ್ಧಿಸಿರುವರು. ಪ್ರಭುದೇವರ ವಿಷಯವಾಗಿ ಅಧಿಕಾರಯುತವಾಣಿಯಿಂದ ಮಾತನಾಡಬಲ್ಲವರು. ಹೆಚ್ಚು ವೇಳೆ ಸಂಭಾಷಿಸುವವರಾದರೂ ವಿಷಯವನ್ನು ರಸವತ್ತಾಗಿ ಮಂಡಿಸಬಲ್ಲವರು, ಸರಳ ಜೀವಿಗಳು, ಉದಾತ್ತ ವಿಚಾರಿಗಳು, ಜೀವನವನ್ನು ಸೂಕ್ಷ್ಮದೃಷ್ಟಿಯಿಂದ ಅವಲೋಕಿಸುವವರು. ಕಲಿತ ಭಾಷೆಯು ಮರಾಠಿಯಾದರೂ ಕನ್ನಡದಲ್ಲಿ ಇಂತಹ ಉದ್ಗ್ರಂಥಗಳನ್ನು ಪ್ರಕಟಿಸಿದುದು ಇವರ ಅಪಾರ ಪರಿಶ್ರಮದ ಸಾರ್ಥಕತೆಯೆನ್ನಬಹುದು. ಇವರು ಪ್ರಭುವಿನ ವಿಚಾರವಾಗಿ ಶ್ರಮಿಸಿದಂತೆ ವೀರಶೈವ ತತ್ತ್ವ ಹಾಗೂ ಆಧ್ಯಾತ್ಮಿಕ ವಿಚಾರಗಳ ಕಡೆಗೆ ಮನಸ್ಸು ಹಾಕಿದರೆ ಇವರಿಂದ ನಾವು ಇದಕ್ಕೂ ಹೆಚ್ಚು ಅಪೇಕ್ಷಿಸಬಹುದೆಂಬ ಆಶೆಯಿದೆ.

## ೧೬. ಶ್ರೀ. ಸೋಮಸುಂದರನ್ ಪಿಳ್ಳೆಯವರು

### ಶೈವಧರ್ಮದ ವಿಕಾಸ

ಇವರು ಎಂ. ಎ., ಎಲ್. ಟಿ. ಪದವೀಧರರಿರುವರು. ಮೈಸೂರ ಸಂಸ್ಥಾನದ ಚಿತ್ರದುರ್ಗ ಜಿಲ್ಲೆಯ ವಿದ್ಯಾಖಾತೆಯ ಇನ್‌ಸ್ಪೆಕ್ಟರರಾಗಿ ಕೆಲಸಮಾಡಿ ಈಗ ಡೈರೆಕ್ಟರ್ ಆಫ್ ಪಬ್ಲಿಕ್ ಇನ್‌ಸ್ಟ್ರಕ್ಶನ್, ಮೈಸೂರ ಇವರ ಕಚೇರಿಯ ಒಂದು ದೊಡ್ಡ ಹುದ್ದೆಯಲ್ಲಿರುವರು. ಶೈವಸಿದ್ಧಾಂತದಲ್ಲಿ ಬಲ್ಲಿದರು. ನುರಿತ ಲೇಖಕರೂ ಅನುಭಾವಿಗಳೂ ಇರುವರು.

## ೧೭. ಶ್ರೀ. ಅ. ನ. ಕೃಷ್ಣರಾಯರು

### ಅನುಭವಮಂಟಪ

ಇವರು ಬೆಂಗಳೂರಿನವರು. ಚಿಕ್ಕಂದಿನಲ್ಲಿಯೇ ಸರಸತಿಯ ಒಲುಮೆಯನ್ನು ಪಡೆದು, ಮೊಟ್ಟಮೊದಲಿಗೆ ಸಣ್ಣ ಕಥೆಗಳಿಗಾಗಿಯೇ ಮೀಸಲಾಗಿದ್ದ 'ಕಥಾಂಜಲಿ' ಎಂಬ ಮಾಸಪತ್ರಿಕೆಯನ್ನು ಸ್ಥಾಪಿಸಿ ಅದರ ಸಂಪಾದಕರಾಗಿ ದುಡಿದರು. ಅನಂತರ 'ವಿಶ್ವವಾಣಿ' ಎಂಬ ಮಾಸಿಕ ಒಂದನ್ನು ಸ್ಥಾಪಿಸಿ ಅದರ ಸಂಪಾದಕರಾಗಿ ಕರ್ನಾಟಕದ ಪತ್ರಿಕೋದ್ಯಮದಲ್ಲಿಯೇ ಕ್ರಾಂತಿಯನ್ನುಂಟುಮಾಡಿದರು. ಈಗಾಗಲೆ ಇವರು 'ಆಹುತಿ, ಆದದ್ದೇನು, ಗೋಮುಖವ್ಯಾಘ್ರ' ಎಂಬ ನಾಟಕಗಳನ್ನೂ 'ಬಣ್ಣದ ಬೀಸಣಿಕೆ' ಎಂಬ (೨) ನಾಟಕ ಸಂಗ್ರಹಗಳನ್ನೂ 'ಮಿಂಚು, ಕಿಡಿ,' ಎಂಬ ಕಥಾಸಂಗ್ರಹಗಳನ್ನೂ 'ಜೀವನ ಯಾತ್ರೆ, ಉದಯರಾಗ, ಸಂಧ್ಯಾರಾಗ' ಎಂಬ ಸ್ವತಂತ್ರ ಕಾದಂಬರಿಗಳನ್ನೂ, 'ಹೊಸಹುಟ್ಟು, ರಾಜಾ ರವಿವರ್ಮ' ಎಂಬ ಪ್ರಬಂಧ ಗ್ರಂಥಗಳನ್ನೂ ಬರೆದು, ಕರ್ನಾಟಕದ ವಿವಿಧ ಲೇಖಕರಿಂದ ಬರೆಯಲ್ಪಟ್ಟ 'ಕಾಮನಬಿಲ್ಲು' ಎಂಬ ಸಣ್ಣ ಕಥೆಗಳ ಸಂಗ್ರಹಕ್ಕೆ, ಸಣ್ಣ ಕಥೆಗಳ ಹುಟ್ಟುವಿನ ಬಗ್ಗೆ ಮುನ್ನುಡಿ ರೂಪದಿಂದ ವಿಸ್ತೃತವಾಗಿ ಬರೆದು, ಕರ್ನಾಟಕದ ಅಕ್ಷರಸ್ಥರೆಲ್ಲರಿಗೂ ಚಿರಪರಿಚಿತರಾಗಿದ್ದಾರೆ. ಕೆಲವು ಕಾಲ, ಕರ್ನಾಟಕ ಸಾಹಿತ್ಯ ಪರಿಷತ್ತಿನಿಂದ ಪ್ರಕಟವಾಗುತ್ತಲಿರುವ 'ಕನ್ನಡ ನುಡಿ' ಎಂಬ ವಾರಪತ್ರಿಕೆಯ ಸಂಪಾದಕರಾಗಿದ್ದರು. 'ವೀರಶೈವ ಸಾಹಿತ್ಯ, ಅಶ್ಲೀಲ ಸಾಹಿತ್ಯ' ಎಂಬ ಪ್ರಬಂಧ ಗ್ರಂಥಗಳನ್ನೂ 'ವಿಶ್ವಪ್ರೇಮಿ ಬಸವೇಶ್ವರ, ಏಸುಕ್ರಿಸ್ತ' ಎಂಬ ಜೀವನ ಚರಿತ್ರೆಗಳನ್ನೂ ಈಗ ಬರೆಯಲು ಕೈಕೊಂಡಿರುವರೆಂದು ಕೇಳಿದ್ದೇವೆ. ಇದಲ್ಲದೆ ಕರ್ನಾಟಕದ ವಿವಿಧ



CC-0. Jangamwadi Math Collection, Varanasi. An eGangotri Initiative

ಪತ್ರಿಕೆಗಳಿಗೆ ವಿಚಾರಪೂರ್ಣ ಲೇಖಗಳನ್ನು ಬರೆಯುತ್ತಲಿರುವರು. ಹೀಗೆ ವಿವಿಧ ರೀತಿಯಿಂದ ಕನ್ನಡ ನಾಡು ನುಡಿಗಳ ಸೇವೆಯನ್ನು ನಿರಂತರವಾಗಿ ಎಸುಗುವವರಲ್ಲಿ ಅ. ನ. ಕೃಷ್ಣರಾಯರೊಬ್ಬರೆಂದು ಹೇಳಬಹುದು. ಸಮನಾದ ವೈಶಿಷ್ಟ್ಯತೆಯಿಂದ ಕೂಡಿದ ಇವರ ಕೈವಾಡವು ಕನ್ನಡ ನುಡಿಯ ವಿವಿಧ ಅಂಗಗಳಲ್ಲಿಯೂ ಇದೆ ಎಂಬುದನ್ನು ನಾವು ಮನಗಾಣುತ್ತೇವೆ. ಇವರು ಇನ್ನೂ ತರುಣರು. ಆಶಾವಾದಿಗಳು. ಮುಂದು ವರಿಯಬೇಕೆಂಬ ಉತ್ಸಾಹವಿದೆ. ಇಂಥವರಿಂದ ಓದುಗರು ಕನ್ನಡ ಸಾಹಿತ್ಯಕ್ಕೆ ಹೆಚ್ಚು ಕಾಣಿಕೆಗಳನ್ನು ಅಪೇಕ್ಷಿಸಬಹುದು. ಅದನ್ನು ಸಲ್ಲಿಸಲು ಶ್ರೀಯುತರು ಮುನ್ನಡಿಯನಿಡಲೆಂಬುದೇ ನಮ್ಮ ಬಯಕೆ.

## ೧೮. ಡಾ. ಎಸ್. ಸಿ. ನಂದಿಮಠರವರು

### ಯೋಗವೂ ವೀರಶೈವರೂ

ಇವರು ಮುಂಬೈ ವಿಶ್ವವಿದ್ಯಾಲಯದ ಎಂ. ಎ. ಪದವೀಧರರೂ ಲಂಡನ್ ವಿಶ್ವವಿದ್ಯಾಲಯದ ಪಿಎಚ್. ಡಿ. ಪದವೀಧರರೂ ಇರುವರು. ಮುಂಬೈ ವಿಶ್ವವಿದ್ಯಾಲಯದ ಸಿನೆಟಿನ ಸಭಾಸದರೂ ಕನ್ನಡ ಸಂಶೋಧಕ ಸಂಸ್ಥೆಯ ಕಾರ್ಯಾಧ್ಯಕ್ಷರೂ ಕರ್ನಾಟಕ ವಿದ್ಯಾವರ್ಧಕ ಸಂಘದ ವ್ಹಾಯಿಸ್ ಪ್ರೆಸಿಡೆಂಟರೂ ಇರುವರು. ಇದಲ್ಲದೆ ಮುಂಬೈವಿಶ್ವವಿದ್ಯಾಲಯದ ಕನ್ನಡ ಪಠ್ಯಪುಸ್ತಕ ನಿಯಾಮಕ ಸಮಿತಿಯ ಅಧ್ಯಕ್ಷರು ಮತ್ತು ಕರ್ನಾಟಕ ಲಿಂಗಾಯತ ಎಜ್ಯುಕೇಶನ್ ಸೊಸಾಯಿಟಿಯ ಆಜೀವ ಸಭಾಸದರೂ ಇರುವ ರಲ್ಲದೆ, ಈ ಸಂಸ್ಥೆಯಿಂದ ಬೆಳಗಾವಿಯಲ್ಲಿ ನಡೆಸಲ್ಪಡುತ್ತಿರುವ ಲಿಂಗರಾಜ ಕಾಲೇಜಿನ ಪ್ರಿನ್ಸಿಪಾಲರಾಗಿ ದ್ದಾರೆ. ಕನ್ನಡ, ಸಂಸ್ಕೃತ, ಇಂಗ್ಲಿಷ ಭಾಷೆಗಳಲ್ಲಿ ಪಾರಂಗತರಿರುವರು. ಧಾರವಾಡದ ಕರ್ನಾಟಕ ಇತಿ ಹಾಸ ಸಂಶೋಧನ ಮಂಡಲದಿಂದ ಪ್ರಕಟವಾಗುವ ತ್ರೈಮಾಸಿಕದ ಸಂಪಾದಕರಿರುವರು. ಉತ್ತರ ಕರ್ನಾ ಟಕದ ವಿವಿಧ ಸಂಸ್ಥೆಗಳ ಅಧ್ಯಕ್ಷರಾಗಿ ಸೇವೆಯನ್ನು ಸಲ್ಲಿಸುತ್ತಿರುವರು. ಕನ್ನಡ ಹಾಗೂ ಇಂಗ್ಲಿಷ ಪತ್ರಿಕೆ ಗಳಲ್ಲಿ ಇವರ ಅನೇಕ ಸಂಶೋಧನಾತ್ಮಕ ಲೇಖಗಳು ಪ್ರಕಟವಾಗುತ್ತಲಿರುವವು. ಕ. ಲಿಂ. ಎ. ಸೊಸಾ ಯಿಟಿಯ ಸೇವೆಗಾಗಿ ತಮ್ಮ ಸರ್ವಸ್ವವನ್ನೇ ಧಾರೆಯೆರೆದು ದುಡಿಯುತ್ತಿರುವವರಲ್ಲಿ ಇವರೊಬ್ಬರು. ನಾಡು- ನುಡಿಗಳ ವಿವಿಧ ಚಟುವಟಿಕೆಗಳಲ್ಲಿ ಇವರ ಹೆಸರು ಕಂಡುಬರುತ್ತಲಿರುವದು ಇವರ ವಿಷಯವಾಗಿ ನಾಡಿನ ವರಿಗಿರುವ ಪ್ರೇಮಾದರಗಳ ದ್ಯೋತಕವೆಂದು ತೋರಿಬರುವುದು.

## ೧೯. ಶ್ರೀಮತಿ ಶಾಂತಾದೇವಿ ಮಾಳವಾಡ

### ಶರಣಸತಿ ಲಿಂಗಪತಿ

ಇವರು ಧಾರವಾಡ ಕರ್ನಾಟಕ ಕಾಲೇಜದ ಕನ್ನಡ ಪಂಡಿತರಾದ ಶ್ರೀಮಾನ್ ಎಸ್. ಎಸ್. ಮಾಳವಾಡರವರ ಸಹಧರ್ಮಿಣಿಯರು. ವಯಸ್ಸಿನಲ್ಲಿ ತೀರ ಚಿಕ್ಕವರು. ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಲವಲವಿಕೆ ಯಿಂದ ದುಡಿಯಬೇಕೆಂಬ ಹೆಬ್ಬಯಕೆಯುಳ್ಳವರು. ಈ ಆಸ್ಥೆಯಿಂದಲೇ ಅವರು ಇಲ್ಲಿಯ ಅನೇಕ ಸಾರ್ವ ಜನಿಕ ಕಾರ್ಯಗಳಲ್ಲಿ ಭಾಗವಹಿಸುತ್ತಲಿದ್ದಾರೆ. ವೀರಶೈವ ಮಹಿಳಾ ಪ್ರಪಂಚದಲ್ಲಿ ಶಾಂತಾದೇವಿಯವ ರಂತೆ ನಾಡನುಡಿ ಹಾಗು ಧಾರ್ಮಿಕ ವಿಷಯಗಳಿಗಾಗಿ ಶ್ರದ್ಧೆಯಿಂದ ಶ್ರಮಿಸುವವರು ಇಂದು ಬೇಕಾಗಿ ರುವರು. ಇಲ್ಲಿ ಅವರು ಬರೆದಿರುವ "ಶರಣಸತಿ ಲಿಂಗಪತಿ" ಎಂಬ ಲೇಖವು ಅವರ ಪ್ರಥಮ ಪ್ರಯತ್ನವು. ಈ ಪ್ರಯತ್ನದ ಅಂಕುರವು ಮುಂದೆ ಸುಳಿದೆಗೆದು ಬೆಳೆಯುವದೆಂಬ ನಂಬುಗೆ ನಮಗಿದೆ.

## ೨೦. ಕುಮಾರಿ ಕಾಮಾಕ್ಷಿ ಬಸವನಾಳ

### ಭಗವಾನ್ ಬಸವೇಶ್ವರ

ಇವರು ಬೆಳಗಾವಿಯ ಲಿಂಗರಾಜ ಕಾಲೇಜಿನ ಕನ್ನಡ, ಇತಿಹಾಸ ಪಂಡಿತರೂ ಕರ್ನಾಟಕ ಲಿಂಗಾ ಯತ ಎಜ್ಯುಕೇಶನ್ ಸೊಸಾಯಿಟಿಯ ಆಜೀವ ಸಭಾಸದರೂ ಆದ ಶ್ರೀಮಾನ್ ಎಸ್. ಎಸ್. ಬಸವನಾಳ ಇವರ ಜ್ಯೇಷ್ಠ ಕುಮಾರಿಯು. ಹದಿನಾಲ್ಕು ವರ್ಷ ವಯಸ್ಸಿನವರು. ಇವರು ಬಸವ ಜಯಂತ್ಯುತ್ಸವಕ್ಕಾಗಿ ಉತ್ಸಾಹದಿಂದ ಬರೆದ ಲೇಖವನ್ನೇ ಇಲ್ಲಿ ಮುದ್ರಿಸಲಾಗಿದೆ. ಇವರ ಈ ಪ್ರಥಮ ಪ್ರಯತ್ನವು ಕಾಲಕ್ರಮೇಣ ಸಾಕಷ್ಟು ಫಲವನ್ನು ಕೊಡುವುದೆಂಬ ಆಶೆ ಇದೆ. ಈ ಲೇಖನ ಅಭಿರುಚಿಯು ಇದಕ್ಕೂ ಹೆಚ್ಚು ಅವರಲ್ಲಿ ಬೆಳೆಯಲೆಂದು ಇಚ್ಛಿಸುತ್ತೇವೆ.

—ಸಂಪಾದಕ



CC-0. Jangamwadi Math Collection, Varanasi. An eGangotri Initiative

# MYSTICISM AND BASAVA'S INFLUENCE

*All that is, at all,*
*Lasts ever, past recall;*
*Earth changes, but thy soul and God stand sure:*
*What entered into thee,*
*THAT was, is, and shall be.*
*Time's wheel runs back or stops:*
*Potter and clay endure.*

Browning.

Time was when everything that savoured of the mystical and occult was sneered at as indicative of a 'loose screw'. Even innocent words like "intuition" and "inspiration" had begun to experience a blushing sense of their unfortunate kinship with madness. The rational mind which refused to accept the plenary inspiration of the Scriptures as a fact very nearly refused to admit it as a virtue.

And what is the position of the thinker of to-day? He seems to have grown more sober and a trifle sad. William James, Henri Bergson, Romain Roland and the lesser planets like Dean Inge and Evelyn Underhill reassure us that neither life nor soul will ever yield us their profoundest secrets if we approach them in the spirit of scoffers. Myths and miracles which the rationalist of yesterday strained to swallow are now the only stuff we live upon; our sole sustenance. We are ourselves the wonder of wonders: living, thinking aggregates of countless cells which possess the power to reproduce or destroy themselves. Thoughts and aspirations which at one time struck the rationalist as wild chimeras command his deepest devotion. Of course he feels his limitations too; painfully, almost despairingly. But from beneath the anguish of despair and in spite of it surges up a dogged, unquenchable and (we should add) sacred feeling that he is an Infinity, an Eternity, a God-Force. He is one with the urge, push and energy of every blade of grass; every grain of sand; insect and bird; archangel and the woman crying vegetables across the street.

Out of the ashes of searching rationalism is born the Mystic.

Mysticism is not a science; for the simple reason that there is little to describe or explain in it, but everything to be experienced. A mystic is one who believes and seeks to realise the belief that he is not only a portion of the Universe but also the motive-power which makes the Universe. He is convinced that the human body is not a clearly definable thing. It is the nucleus whose confines are co-extensive with the farthest reaches of the spatial expanse. Borrowing an analogy from animal life the mystic's conception of the Universe may be compared to a huge leviathan whose limbs are so distant that each thinks it is an isolated entity having neither part nor lot with the rest; but nevertheless shares with all a common life and common energy, common thought, feeling and sensation.

CC-0. Jangamwadi Math Collection, Varanasi. An eGangotri Initiative

It is no wonder that mysticism is often confounded with pathological states of consciousness. A mystic is mad; but rigorously methodical in the madness. He differs from normal humanity by being uniformally consistent about all things and passionately consistent about each. St. Francis of Assisi herded with beasts; St. Anthony of Padua preached to fishes; diseases fled the presence of Christ and sinners turned saints at the sight of Basava.

All these are typical instances of mystical love, service and faith; not possible nor permissible in Everyman's world where thought and conduct are strictly controlled by the requirements of efficiency and immediate comfort. Most of us live in a vicious circle. We dont believe mystical phenomenon because we have never experienced it, and we dont experience it because we have never believed it.

Basava was a mystic of the 12th century. Early in life he had premonitions that he was destined for the uplift of a decaying creed. He accordingly discarded the religion of his birth, became a convert to Veerasaivism and practised and preached it to the last day of his life. Soon after conversion he seems to have spent some half-a-dozen years in a temple (now famous as Sangameshwara Temple) at the confluence of the Krishna and the Malaprabha. It was a period of rigorous meditation, prayer and mystical realisations preparatory to his subsequent social and religious work. His VACHANAS as well as floating legends furnish us ample proof that he had acquired enough of the Dravidian and Aryan cultures to hold his own in any controversy with the pundits of his day. When he reached the plenitude of his spiritual powers he went to Kalyan and took ministership at the court of Bijjala, a Chalukyan King of the Jaina faith. But alongside of his ministerial duties his most unsparing endeavours seem to have been principally devoted to the work of reviving and strengthening the religion of his adoption. Making due allowance to mediaeval exaggeration there is reason to think that the religion which was struggling for life when Basava embraced it came to have several millions of adherents before the close of his ministership.

A striking feature of Basava's mystical utterances ( otherwise known as VACHANAS ) is that they cover the entire gamut of mystical experience ranging from vague cravings to lyric out-bursts of overflowing ecstasy. In the early VACHANAS Basava's cravings for Divine Grace are tuned to manifold notes of screaming hope and crying despair. The latest ones are simple songs of rapturous thanks-giving. The philosophic content of Basava's VACHANAS may be summed up into two cardinal beliefs: (1) The highest spiritual experiences are within the reach of every human being irrespective of birth, sex and age. (2) Saint-hood is not a monopoly of the ascetic who renounces life's responsibilities. To a man who has eternally dedicated his self to God-realisation no humdrum preoccupations of the work-a-day world matter in the least. Making love is no sin. Getting children is no sin. Sweeping streets is no sin. The spirit of service can convert the humblest activity into a worship of the All-Giver. A true Bhakta need count no beads nor pray.

C. S. Bagi

CC-0. Jangamwadi Math Collection, Varanasi. An eGangotri Initiative



# ಜೀವ-ಜಗತ್ತು-ಈಶ್ವರ-ಮೋಕ್ಷಗಳ ಒಗ್ಗೆ

# ವೀರಶೈವರ ಕಲ್ಪನೆ



ಸಾಮಾನ್ಯವಾಗಿ ಹಿಂದೂ ದೇಶದ ಜನರು ಬಹಳ ಪೂರ್ವಕಾಲದಲ್ಲಿ ಎಂದರೆ ಸುಮಾರು ೫-೬ ಸಾವಿರ ವರ್ಷಗಳಿಗಿಂತ ಹಿಂದೆಯೂ ಮಹಾದೇವನನ್ನು ಹೇಗೆ ತಿಳಿಯಬೇಕು? ಜೀವ, ಜಗತ್ತುಗಳು ಹೇಗೆ ಉಂಟಾದುವು? ಎಂಬ ವಿಚಾರವನ್ನು ಮಾಡುವದರಲ್ಲಿಯೇ ಬಹಳ ವೇಳೆಯನ್ನು ವೆಚ್ಚ ಮಾಡುತ್ತಿದ್ದರೆಂದು ಹೇಳಲಿಕ್ಕೆ ಏನೂ ಅನುಮಾನವಿಲ್ಲ. ಅವರು ಬರೆದಿಟ್ಟಿರುವ ಗ್ರಂಥಗಳೆಲ್ಲವೂ ಒಂದಿಲ್ಲೊಂದು ವಿಧವಾಗಿ ಈ ವಿಚಾರವನ್ನೇ ತುಂಬಿಕೊಂಡುವುಗಳು. ವೇದವೂ ಕೂಡಾ ಈ ವಿಚಾರವನ್ನೇ ಒಳಗೊಂಡಿದೆ.

ಅವರು ವಿದ್ಯೆಯಲ್ಲಿ ಪರಾವಿದ್ಯೆ ಅಪರಾವಿದ್ಯೆ ಎಂದು ಎರಡು ಭಾಗಗಳಿರುವವೆಂದೂ, ಅಪರಾ ವಿದ್ಯೆಯು ಸಾಮಾನ್ಯವಾಗಿ ಜನರಿಗೆ ಜೀವನಕ್ಕೆ ಬೇಕಾದ ವಿಷಯಗಳನ್ನು ತಿಳಿಸತಕ್ಕದೆಂತಲೂ ಪರಾವಿದ್ಯೆಯು ಜೀವ, ಆತ್ಮ, ಜಗತ್ತು (ಬ್ರಹ್ಮಾಂಡ), ಈಶ್ವರ ಮುಂತಾದ ವಿಷಯಗಳನ್ನು ತಿಳಿಸತಕ್ಕದೆಂತಲೂ ತಿಳಿದಿದ್ದರು. ಹಿಮಾಲಯ ಪರ್ವತ ಮತ್ತು ಅದರ ಸುತ್ತುಮುತ್ತಣ ಪ್ರದೇಶದಲ್ಲಿ ದೇವತೆಗಳು ಎಂಬ ಜನಾಂಗದವರು ಆ ಕಾಲದ ಹೆಚ್ಚಿನ ನಾಗರಿಕತೆಯ ಲಕ್ಷಣವುಳ್ಳವರಾಗಿ ವಾಸಿಸುತ್ತಿದ್ದಾಗ, ಆ ದೇವತೆಗಳಲ್ಲಿ ಬಹು ಮುಖ್ಯವಾದ ಕೈಲಾಸ ಪರ್ವತದ ಒಡೆಯನಾದ ಪಾರ್ವತೀಪತಿಯಾದ ಶಂಕರನು ಈ ಅಪರಾ ಮತ್ತು ಪರಾವಿದ್ಯೆಯ ಭಾಗಗಳನ್ನು ಆಗಮರೂಪವಾಗಿ ಎಲ್ಲಾ ದೇವತೆಗಳಿಗೂ ಬೋಧಿಸಿದನೆಂಬ ಪ್ರತೀತಿಯು ಇದೆ. ಆ ಶಂಕರನು ಬೋಧಿಸದೆ ಇದ್ದ ವಿದ್ಯೆಯೇ ಇಲ್ಲ. ಜೋತಿಷ್ಯ, ವ್ಯಾಕರಣ, ಯಂತ್ರ, ಮಂತ್ರ, ಸಾಹಿತ್ಯ, ಗಣಿತ, ರಾಜ್ಯಭಾರ, ಸಸ್ಯಶಾಸ್ತ್ರ, ಆಯುರ್ವೇದ, ಖನಿಜಶಾಸ್ತ್ರ, ಪಾರಮಾರ್ಥ ಮೊದಲಾದ ಎಲ್ಲ ವಿಷಯಗಳೂ ಆಗಮಗಳಲ್ಲಿ ಇರುವದಾಗಿ ತಿಳಿದುಬಂದಿದೆ. ವ್ಯಾಸ ಋಷಿಯು ತನ್ನ ಶಿಷ್ಯಮಂಡಲಿಯೊಡನೆ ಸೇರಿ ಹದಿನೆಂಟು ಪುರಾಣಗಳನ್ನು ರಚಿಸಲಿಕ್ಕೂ ಸಹ ಈ ಆಗಮಗಳೇ ಮೂಲಾಧಾರಗಳಾಗಿದ್ದುವೆಂಬುದಕ್ಕೆ ಉದಾಹರಣೆಗಳು ತೋರಿಬರುತ್ತವೆ. ಈ ಆಗಮುಗಳ ಸಂಖ್ಯೆಯೂ ಅವುಗಳಲ್ಲಿಯ ಶ್ಲೋಕಗಳ ಸಂಖ್ಯೆಯೂ ಇಷ್ಟೇ ಎಂದು ನಿರ್ಣಯಿಸಲಿಕ್ಕೆ ಈ ವರೆಗೂ ಅಸಾಧ್ಯವಾಗಿರುವದಲ್ಲದೆ ಈಗ ಸಿಕ್ಕಿರುವ ಬಹಳ ಸ್ವಲ್ಪವಾಗಿರತಕ್ಕ ಆಗಮಗಳ ಅಂಶಗಳಿಂದಲೇ ಈ ಆಗಮುಗಳು ಬಹಳ ಮಹತ್ತರವಾದ ವಿಷಯಗಳನ್ನೊಳಗೊಂಡಿರುವುವು, ಎಂಬ ಭಾವನೆಯು ಒಮ್ಮೆಗೇ ಬಂದು ಬಿಡುತ್ತದೆ.

CC-0. Jangamwadi Math Collection, Varanasi. An eGangotri Initiative

ವ್ಯಾಸ ಋಷಿಯ ಕಾಲದ ಪುರಾಣಗಳು, ಈಚಿಗೆ ಕಲ್ಪಿತಗಳಾದ ಪುರಾಣ ಭಾಗಗಳು ಮತ್ತು ಆಗಮ ಭಾಗಗಳು-ಇವುಗಳಲ್ಲಿ ಶಿವನು ಪಾರ್ವತಿಗೆ, ಷಣ್ಮುಖನಿಗೆ, ಅಥವಾ ಗಣಪತಿಗೆ ಮುಂತಾಗಿ ಕೈಲಾಸದಲ್ಲಿದ್ದವರಿಗೆ ಹೇಳಿದಂತೆ ಇರುವ ಭಾಗಗಳನ್ನು ಬಿಟ್ಟು-ಪೂರ್ವದ್ದೆಂಬು ಗೊತ್ತುಹಿಡಿಯ ತಕ್ಕ, ಕೈಲಾಸದಲ್ಲಿ ಶಿವನು ಬೋಧಿಸಿದನೆಂದು ತೋರುವ ವಿಷಯಗಳೆಲ್ಲವೂ ಆಗಮಗಳೇ ಎಂದು ಹೇಳಲಿಕ್ಕೆ ಯಾವ ಅಭ್ಯಂತರವೂ ಇಲ್ಲ. ಆಯುರ್ವೇದವು ಕೂಡಾ ಇಂತಹುದೇ ಒಂದು ಗ್ರಂಥವಾಗಿದೆ. ಅಕ್ಷರಗಳೂ ಶಿವನ ಡಮರುಗದಿಂದ ಹುಟ್ಟಿದುವೆಂದು ಸಂಸ್ಕೃತ ವ್ಯಾಕಣಕಾರರು ಹೇಳುತ್ತಾರೆ. ಜೋತಿಷ್ಯವೂ ಆಗಮದ ಆಧಾರದಿಂದ ಬಂದುದೆಂದು ಗೊತ್ತಾಗಿದೆ. ಮಾರಣ ಉಚ್ಚಾಟನ ಮೊದಲಾದ ಶಕ್ತಿಸಾಧನದ ವಿಷಯಗಳೂ ಮಂತ್ರದಿಂದ ಪಡೆವ ಫಲಗಳ ವಿಷಯ ಗಳೂ ಆಗಮಗಳಲ್ಲಿಯೇ ವಿವರಿಸಲ್ಪಟ್ಟಿವೆ. ಇವುಗಳಂತೆಯೇ ಪುಷ್ಪಕ ವಿಮಾನಗಳ ವಿಷಯವೂ ಪರಕಾಯ ಪ್ರವೇಶ ವಿದ್ಯೆಯ ವಿಷಯವೂ ಆಗಮಗಳಲ್ಲಿಯೇ ಇರುವುದೆಂಬ ಊಹೆ ಇದೆ. ಮುಖ್ಯವಾಗಿ ಸಕಲ ಕಲೆಗಳಿಗೂ ವಿದ್ಯೆಗಳಿಗೂ ಆಶ್ರಯವನ್ನು ಕೊಟ್ಟಿದ್ದು ಈ ಆಗಮಗಳಲ್ಲಿ. ಪರಾ ( ಪರಮ ) ವಿದ್ಯೆಯಾದ ಜೀವ, ಜಗತ್ತು, ಈಶ್ವರ, ಮೋಕ್ಷ, ಇದರ ವಿಷಯವಾಗಿ ಬೋಧಿಸತಕ್ಕವುಗಳು " ಶಿವಾಗಮಗಳು " ಎಂದು ಪ್ರಖ್ಯಾತವಾಗಿವೆ. ಇವು ಇಪ್ಪತ್ತೆಂಟು ಇವೆ:- ಕಾಮಿಕ, ಯೋಗಜ, ಚಿಂತ್ಯ, ಕಾರಣ, ಅಜಿತ, ದೀಪ್ತ, ಸೂಕ್ಷ್ಮ, ಸಹಸ್ರ, ಅಂಶುಮತ್, ಸುಪ್ರಭೇದ, ವಿಜಯ, ವಿಶ್ವಾಸ, ಸ್ವಾಯಂಭುವ, ಅನಲ, ವೀರ, ರೌರವ, ಮುಕುಟ, ವಿಮಲ, ಚಂದ್ರಜ್ಞಾನ, ಬಿಂಬ, ಪ್ರೋದ್ಗೀತ, ಲಲಿತ, ಸಿದ್ಧ, ಸಂತಾನ, ಸರ್ವೋಕ್ತ, ಪಾರಮೇಶ್ವರ, ಕಿರಣ, ವಾತುಳ.

ವಿದ್ಯೆಯಲ್ಲಿ ಪರಮವಿದ್ಯೆ ( ಇದೇ ಪರಾವಿದ್ಯೆ ), ಅಪರಮವಿದ್ಯೆ ( ಅಪರಾವಿದ್ಯೆ ) ಎಂದು ಎರಡು ಭಾಗಗಳೆಂತಲೂ, ಇವುಗಳಲ್ಲಿ ಪರಾವಿದ್ಯೆಯೇ ಕಾಮಿಕಾದಿ ವಾತುಳಾಂತವಾದ ೨೮ ಶಿವಾಗಮಗಳಲ್ಲಿ ಬೋಧಿಸಲ್ಪಟ್ಟಿದೆಂತಲೂ ವ್ಯಾಸ ಋಷಿಯ ಶಿವಪುರಾಣ ವಾಯವೀಯ ಸಂಹಿತೆಯಿಂದ ಗೊತ್ತಾಗುತ್ತದೆ. ಇದಲ್ಲದೆ ಪಾರಮೇಶ್ವರಾಗಮದ ಕೆಲವು ಶ್ಲೋಕಗಳು ಭಗವದ್ಗೀತೆಯಲ್ಲಿ ಬಂದಿವೆ. ಈ ದೆಸೆಯಿಂದ ಆಗಮಗಳು ವ್ಯಾಸ ಋಷಿಯ ಪುರಾಣಗಳಿಗಿಂತ ಮುಂಚಿನವೆಂದು ನಿರ್ಧರಿಸಲು ಏನೂ ಅನುಮಾನವಿಲ್ಲ.

ಈ ಪರಮವಿದ್ಯೆಯ ವಿಚಾರವಾಗಿ ಆ ಕಾಲದಿಂದ ಈ ವರೆಗೆ ವಿಚಾರ ಮಾಡುತ್ತ ಬಂದಾಗ್ಯೂ, ನಿರ್ಣಯಮಾಡಲ್ಪಟ್ಟ ಅಂಶಗಳು ಇವು ಎಂದು ನಿರ್ಧರವಾಗಿ ಯಾವುದರಲ್ಲಿಯೂ ಬರೆದಿಡಲ್ಪಟ್ಟಿಲ್ಲ. ಈಗಿನ ಶಾಸ್ತ್ರಕಾರರು (Scientists) ತಾವು ಕಂಡುಹಿಡಿದ ವಿಷಯಗಳನ್ನು ನಿರ್ಣಯಮಾಡಿ ಬರೆದಿಟ್ಟಂತೆ ನಮ್ಮ ಪೂರ್ವಜರೂ ನಿರ್ಣಯಗಳನ್ನು ಬರೆದಿಟ್ಟಿದ್ದರೆ ಮುಂದಣ ವರಿಗೆ ಅವುಗಳ ಮುಂದಿನ ವಿಷಯಗಳನ್ನು ಕಂಡು ಹಿಡಿಯಲು ಅನುಕೂಲವಾಗುತ್ತಾ ಇದ್ದಿತು. ಹಾಗಿಲ್ಲದೆ ಹಿಂದೆ ಕಂಡುಹಿಡಿದ ವಿಷಯಗಳಲ್ಲಿಯ ಅಲ್ಪ ಸ್ವಲ್ಪ ತಿಳಿವಳಿಕೆಯನ್ನೇ ಅಥವಾ ಅವರ ಕೆಲವು ಅಂಶಗಳನ್ನೇ ಮುಖ್ಯವೆಂದು ಅನೇಕರು ಅನೇಕ ಪುಸ್ತಕಗಳನ್ನು ಬರೆಯುತ್ತ ಬಂದುದ ರಿಂದ ಹಿಂದುಗಳ ಗ್ರಂಥಭಾಂಡಾರವು ಬಹಳ ದೊಡ್ಡದು ಆಗಿರುವದಲ್ಲದೆ ಕೆಲಸಕ್ಕೆ ಬಾರದುದೆಂದು ಯೋಚಿಸುವಂತೆಯೂ ಆಗಿದೆ. ಇದುವರೆವಿಗೂ ಇವರ ತಿಳಿವಳಿಕೆಯು ಎಷ್ಟುಮಟ್ಟಿನ ಮಟ್ಟಕ್ಕೆ



CC-0. Jangamwadi Math Collection, Varanasi. An eGangotri Initiative

ಏರಿದ್ದಿತೆಂಬುದನ್ನು ತಿಳಿಸುವ ಮುದ್ರಣದ ಪುಸ್ತಕವು ಈ ಭೂಮಿಯಲ್ಲಿಯ ಯಾವ ಭಾಸೆಯ ಲ್ಲಿಯೂ ಸಿದ್ಧವಾಗಿಲ್ಲ.

ಪರಾವಿದ್ಯೆಯಾದ ಶಿವಾಗಮಗಳಲ್ಲಿ ಹೇಳಲ್ಪಟ್ಟಂತೆ ಜೀವ, ಜಗತ್ತು, ಈಶ್ವರ, ಮೋಕ್ಷ, ಈ ವಿಷಯಗಳು ಇಲ್ಲಿ ಬರೆಯಲ್ಪಡುವದರಿಂದ ಇವು ಇಡಿಯ ಜಗತ್ತಿನ ಜನರಿಗೆ ಸಂಬಂಧಪಟ್ಟ ನಿರ್ಣಯಗಳೆಂದು ತಿಳಿಯಬೇಕೇ ಹೊರತು ಬರಿಯ ಒಂದು ಜನಾಂಗದವರು ಎಂದರೆ ವೀರಶೈವರು ಯೋಚಿಸಿಕೊಂಡ ಕಲ್ಪನೆ, ಅವರಿಗೆ ಮಾತ್ರ ಅನ್ವಯಿಸತಕ್ಕವುಗಳು ಎಂದು ತಿಳಿಯಬಾರದು. ವೀರಶೈವರು ತಮ್ಮ ನಡತೆಗಳನ್ನು ಪರಿಷ್ಕರಿಸಿಕೊಂಡು ಅದರಂತೆ ನುಡಿಯನ್ನು ನುಡಿಯುವ ವರು ಮತ್ತು ಈ ಆಗಮಗಳಲ್ಲಿ ಪಡೆದ ಜ್ಞಾನವನ್ನು ತಮ್ಮ ಭಕ್ತಿಯ ವರ್ತನೆಗೆ ಸರಿಯಾಗಿ ತೂಗಿದವರು.

ಶಶಿಧರನ ಜ್ಞಾನಮುಂ ಬಸವನಾ ಬಕುತಿಯುಂ
ಅಸಮಗಣಕುಲದ ವೈರಾಗ್ಯ ಇವು ಮೂರು
ವಶವಾದ ಸಿದ್ಧೇಶ ದಯವಾಗಲಿ ||

ಎಂದು ಒಬ್ಬರು ಹೇಳಿದ್ದಾರೆ.

## ೧. ಜಗತ್ತು

ಜಗತ್ತು ಎಂದರೆ ಭೂಮಿ ಎಂದು ಕೆಲವರು ಯೋಚಿಸುತ್ತಾರೆ. ಆದರೆ ಭೂಮಿಗೆ ಸಾಮಾನ್ಯ ವಾಗಿ ಭೂತ ಅಥವಾ ಮಹಾಭೂತ ಎಂದು ಹಿಂದೂ ಶಾಸ್ತ್ರವು ಹೇಳುತ್ತದೆ. ಜಗತ್ತು ಎಂಬಲ್ಲಿ ಭೂಮಿ, ಅದರ ಮೇಲೆ ಇರುವ ನೀರು, ಮೋಡ, ಗಾಳಿ, ಆಕಾಶ ಈ ಆಕಾಶಕ್ಕಿಂತಲೂ ಸೂಕ್ಷ್ಮವಾದ ಆತ್ಮತತ್ವ-ಇವೆಲ್ಲವೂ ಸೇರಿ ಜಗತ್ತು ಎಂದು ತಿಳಿದಿರುವಿಕೆಯೇ ಶಾಸ್ತ್ರಸಿದ್ಧವಾದ ವಿಷಯವು. ಇದಕ್ಕೆ " ಬ್ರಹ್ಮಾಂಡ " ಎಂತಲೂ ಕರೆಯುತ್ತಾರೆ.

ತರ್ಕಶಾಸ್ತ್ರವು ಅನುಮಾನ ಪ್ರಮಾಣಗಳಿಂದ ಸಿದ್ಧಮಾಡಿ ತೋರಿಸುವಂತೆ ಯಾವನಾದರೂ ಒಬ್ಬ ವ್ಯಕ್ತಿಯು ಈ ಜಗತ್ತನ್ನು ಮಾಡಿ ಹೊರಗೆ ಇಟ್ಟನೆಂದು ತಿಳಿದುಕೊಳ್ಳುವದು ಅಸಂಭವದ ವಿಷಯವು. ಹಾಗೆ ಹೇಳುವುದಾದರೆ ಮಾಡಿದ ವ್ಯಕ್ತಿಯು ಎಲ್ಲಿರುತ್ತಾನೆ? ಅವನಿರತಕ್ಕ ಸ್ಥಳ ವಾವುದು ? ಅವನ ಲಕ್ಷಣಗಳೇನು ? ಎಂಬ ವಿಚಾರಕ್ಕೆ ಹೋಗಬೇಕಾಗುವುದು. ಈ ವಿಚಾರ ದಿಂದ ಈ ಜಗತ್ತು ಅದನ್ನು ಮಾಡಿದವನಿಗಿಂತ ಭಿನ್ನವಾಗಿದೆ ಎಂಬ ಅಭಿಪ್ರಾಯವು ಹೊರಪಟ್ಟು ಮಾಡಿದವನನ್ನು ಹುಡುಕಿ ಕಂಡುಹಿಡಿವುದೇ ಅಸಾಧ್ಯವಾಗುತ್ತದೆ; ಮತ್ತು ಜಗತ್ತಿನಲ್ಲಿ ನಾನಾ ವಸ್ತುಗಳನ್ನು ಭಾವಿಸಬೇಕಾಗುತ್ತದೆ; ಹೀಗೆ ಬಯಸುವದಾದರೂ ಸರಿಯಲ್ಲ.

ಈಗ ನಾವು ಗಾಳಿಯ ರೂಪದಲ್ಲಿಯ ಇರುವ ಒಂದು ವಸ್ತುವು ಕಠಿಣವಾಗಿ ಕಲ್ಲಿನಂತೆ ಆಗುವುದನ್ನು ಈಗಿನ ಶಾಸ್ತ್ರ (Science) ದಿಂದ ಸಿದ್ಧಮಾಡುತ್ತೇವೆ. ಇದರಂತೆಯೇ ಗಾಳಿಗಿಂತ ಸೂಕ್ಷ್ಮವಾದ ಆಕಾಶ, ಆಕಾಶಕ್ಕಿಂತ ಸೂಕ್ಷ್ಮವಾದ ಆತ್ಮತತ್ವ, ಇದರಿಂದ ಈ ಭೂಮಿ ಮೊದಲಾದ ಜಗತ್ತು ಆಗಿರುವುದೆಂದು ತಿಳಿಯುವದು ಬಹು ಮುಖ್ಯವು. 'ಆತ್ಮನಃ ಆಕಾಶಃ, ಆಕಾಶಾದ್ವಾಯುಃ'



CC-0. Jangamwadi Math Collection, Varanasi. An eGangotri Initiative

ಎಂಬಂತೆ ಕ್ರಮವಿಡಿದು ಭೂಮಿ ಉಂಟಾದುದನ್ನು ಹಿಂದೂ ಶಾಸ್ತ್ರವು ಒಪ್ಪುತ್ತದೆ. ಒಂದು ವಸ್ತುವು ಒಂದು ರೂಪವನ್ನು ಬದಲಾಯಿಸಿ ಮತ್ತೊಂದು ರೂಪವನ್ನು ಹೊಂದುವುದನ್ನು ನಾವು ಸಿದ್ಧಮಾಡಿ ತೋರಿಸುವಂತೆ ಆತ್ಮತತ್ವದ ರೂಪದಲ್ಲಿ ಸೂಕ್ಷ್ಮವಾಗಿ ಮೊದಲು ಇದ್ದುದು ಬರಬರುತ್ತ ಜಗತ್ತಾಗಿ ಪರಿಣಮಿಸಿತೆಂದು ಹೇಳುವದು ಯೋಗ್ಯವಾದ ಅಭಿಪ್ರಾಯವಾಗಿದೆ. ಹೀಗೆ ಹೇಳುವುದೇ ಪರಿಣಾಮವಾದವು.

ಕಬ್ಬಿಣವು ಕರಗಿ ನೀರಾಗುವದಕ್ಕೆ ಅದರಲ್ಲಿ ಉಷ್ಣ ಶಕ್ತಿಯು ಹೆಚ್ಚಾಗಬೇಕು. ನೀರು ಮಂಜುಗಡ್ಡೆ (ಆಣೆಕಲ್ಲು) ಆಗಬೇಕಾದರೆ ಅದರಲ್ಲಿ ಉಷ್ಣಶಕ್ತಿಯು ಕಡಿಮೆಯಾಗಬೇಕು. ಈ ರೂಪಾಂತರಗಳಲ್ಲಿ ಉಷ್ಣಶಕ್ತಿಯ ಕೆಲಸವು ಹೇಗೆ ಅವಶ್ಯವೋ ಹಾಗೆ ಆತ್ಮನಲ್ಲಿರುವ ಶಕ್ತಿಯ ಕೆಲಸವು ಆತ್ಮನನ್ನು ಭೂಮಿಯ ರೂಪಕ್ಕೆ ತಂದಿತೆಂದು ಹೇಳುವುದು ತಪ್ಪಾಗಲಾರದು. ಈ ರೀತಿ ಆತ್ಮನಿಂದ ಭೂಮಿಯವರೆಗೆ ಆಗಿರುವ ಆರು ರೂಪಗಳಲ್ಲಿ: ಆತ್ಮ, ಆಕಾಶ ಇವು ನಿರಾಕಾರ ರೂಪವೆಂದೂ ವಾಯು, ಅಗ್ನಿ ಇವು ನಿರಾಕಾರ-ಸಾಕಾರ ರೂಪವೆಂದೂ ನೀರು, ಭೂಮಿ ಇವು ಸಾಕಾರ ರೂಪವೆಂದೂ ತಿಳಿಯಬೇಕು.

ಸಾಕಾರವೆಂದರೆ ಗಟ್ಟಿಗೊಂಡು ತೋರುವ ರೂಪವು (ಕೈಯಲ್ಲಿ ಹಿಡಿಯಬಹುದಾದ ರೂಪವು). ಸಾಕಾರ-ನಿರಾಕಾರವೆಂದರೆ ಗಟ್ಟಿಗೊಂಡಂತೆ ಕಾಣುತ್ತಿದ್ದಾಗಲೂ ಕೈಗೆ ಗಟ್ಟಿಯಾಗಿ ತೋರುವ, ಸ್ಪರ್ಶವಿಲ್ಲದಿರುವ ವಸ್ತುವು; ಸೂರ್ಯನು ಒಂದು ಆಕಾರದವನೆಂದು ತೋರಿದಾಗ್ಯೂ ಅಲ್ಲಿ ಕೈಯಿಂದ ಮುಟ್ಟಿ ಹಿಡಿಯುವಂಥ ಗಟ್ಟಿವಸ್ತುವು ಒಂದೂ ಇಲ್ಲ. ಈ ಸಾಕಾರ-ನಿರಾಕಾರವು ಪ್ರಾಣಿಯ ಕಣ್ಣು, ಚರ್ಮ ಎಂಬ ಇಂದ್ರಿಯಗಳಿಗೆ ಗೋಚರವಾಗುವ ವಸ್ತು. ನಿರಾಕಾರವೆಂದರೆ ವಾಯುಗಿಂತಲೂ ಸೂಕ್ಷ್ಮವಾಗಿ ಪ್ರಾಣಿಯ ಕಣ್ಣಿನಿಂದಲೂ ಚರ್ಮದಿಂದಲೂ ತಿಳಿಯಲಿಕ್ಕಾಗದ ವಸ್ತು. ಕೇವಲ ಕಿವಿಯಿಂದ ತಿಳಿಯುವ ನಾದ, ಕೇವಲ ಕಣ್ಣಿನಿಂದಲೆ ಗ್ರಹಿಸಬಹುದಾದ ರೂಪ ಮತ್ತು ಭ್ರೂಮಧ್ಯಸ್ಥಾನವಾದ ಹೃದಯದಿಂದ ಗ್ರಹಿಸುವ ಜ್ಞಾನ (ಪ್ರಕಾಶರೂಪವುಳ್ಳ ವಸ್ತು.)— ಹೀಗೆ ಜಗತ್ತಿನಲ್ಲಿ ಮೂರು ಭಾಗಗಳನ್ನು ವಿಂಗಡಿಸಿಕೊಳ್ಳಬೇಕು.

ಸೂರ್ಯನನ್ನು ಆಶ್ರಯಿಸಿಕೊಂಡಂತಹ ಒಂದು ಮಂಡಲವು (Sphere) ಇರುವುದನ್ನು ನಾವು ತಿಳಿಯುತ್ತೇವೆ. ಇದರಂತೆ ಅನೇಕ ಸೂರ್ಯರನ್ನಾಶ್ರಯಿಸಿಕೊಂಡು ಇರುವ ಬೇರೆ ಬೇರೆ ಗ್ರಹಗಳೂ ಇವೆ. ಇವುಗಳಲ್ಲಿ ಪ್ರತಿಯೊಂದು ಮಂಡಲವನ್ನೂ ಒಂದೊಂದು ಬ್ರಹ್ಮಾಂಡವೆಂದು ತಿಳಿಯಬೇಕು. ಹೀಗೆ ಅನೇಕ ಬ್ರಹ್ಮಾಂಡ (ಜಗತ್ತು) ಗಳಿವೆ.

## ೨. ಜೀವ

ಈಗಿನ ಶಾಸ್ತ್ರಕಾರರು ಜೀವ ಎಂಬ ವಸ್ತುವನ್ನು ಈವರೆಗೂ ಪ್ರತ್ಯೇಕವಾಗಿ ಕಂಡು ಹಿಡಿದು ತೋರಿಸುತ್ತಿರುವುದಿಲ್ಲ. ಅದು ದೇಹವೆಂಬುದನ್ನು ಆಶ್ರಯಮಾಡಿಕೊಂಡು ಇರುವುದೆಂಬುದನ್ನು ಎಲ್ಲರೂ ತಿಳಿಯಬಹುದು. ಆದುದರಿಂದ ಇಲ್ಲಿ ಜೀವದ ವಿಷಯದಲ್ಲಿ ವಿವರಿಸಬೇಕಾದ ವಿಷಯವು ದೇಹ ಸಹಿತವಾದರೆ ತಿಳಿಯಲಿಕ್ಕೆ ಕೆಲವು ಮಟ್ಟಿಗೆ ಅನುಕೂಲವಾಗುತ್ತದೆ. ಹಿಂದೆ ಆರು ತತ್ವಗಳೊಡನೆ ಕೂಡಿದ ಜಗತ್ತಿಗೆ 'ಬ್ರಹ್ಮಾಂಡ' ವೆಂದು ಕರೆದಿರುವಂತೆ ಈ ಜೀವ



CC-0. Jangamwadi Math Collection, Varanasi. An eGangotri Initiative

ಸಹಿತವಾದ ದೇಹಕ್ಕೆ 'ಪಿಂಡಾಂಡ'ವೆಂದು ಪೂರ್ವಿಕರು ಕರೆದಿರುತ್ತಾರೆ. ಬ್ರಹ್ಮಾಂಡವೂ ಪಿಂಡಾಂಡವೂ ಒಂದೇ ಸ್ವರೂಪದವುಗಳು. ಪಿಂಡಾಂಡದಲ್ಲಿ ದೇಹದಲ್ಲಿರುವ ಅವಯವಗಳೆಲ್ಲವೂ ಜೀವದಿಂದ ಕೂಡಿಕೊಂಡು ಇರುವುವೆಂಬುದು ನಮಗೆ ಸ್ಪಷ್ಟವಾಗಿ ತಿಳಿದುಬರುತ್ತದೆ. ಇದರಂತೆ ಬ್ರಹ್ಮಾಂಡದಲ್ಲಿ ಸಕಲವಸ್ತುಗಳೂ ಆತ್ಮತತ್ವ (ಜೀವಕಲಾ) ದೊಡನೆ ಕೂಡಿಕೊಂಡಿವೆ ಎಂದು ತಿಳಿವುದಕ್ಕೆ ಅನೇಕರು ಒಪ್ಪುವುದಿಲ್ಲ. ಜೀವದಿಂದಲೇ ಜೀವ ಬೆಳೆಯುತ್ತದೆ—ಎಂಬುದನ್ನು ಎಲ್ಲರೂ ಮಾಸಿಸಲೇಬೇಕು. ಭೂಮಿಯಲ್ಲಿ ಸಸಿಗಳೆಂಬ ಜೀವಿಗಳು ಹುಟ್ಟಿ ಬೆಳೆವುದನ್ನು ನಾವು ನೋಡುತ್ತೇವೆ. ಕಲ್ಲಿನಮೇಲೆ ಹಾವಸೆಯಂತೆ ಇರುವ ಸಣ್ಣ ಸಸಿಗಳೂ ಹುಟ್ಟುವುದನ್ನು ನಾವು ನೋಡುತ್ತೇವೆ. ಆದುದರಿಂದ ಭೂಮಿ ಮತ್ತು ಕಲ್ಲುಗಳಲ್ಲಿ ಜೀವವು ಇರುವದರಿಂದಲೇ ಆ ಜೀವವು ಅವುಗಳ ಮೇಲೆ ಬೆಳೆಯುವ ಹುಲ್ಲಿಗೆ ಅಥವಾ ಸಣ್ಣದೊಡ್ಡ ಸಸಿಗಳಿಗೆ ಜೀವರಸ (protoplasm) ವನ್ನು ಒದಗಿಸಿ ಕೊಡುತ್ತದೆ, ಎಂದು ನಾವು ದೃಢಪಡಿಸಲೇಬೇಕು. ಈಚೆಗೆ ಪಾಶ್ಚಾತ್ಯ ಶೋಧಕರು ಮನೆಗಳಿಗೆ ಹೊಚ್ಚಿದ ತಗಡುಗಳಿಗೂ ಸಹ ರೋಗಗಳು ಬರುವುವೆಂತಲೂ ಅವು ಒಂದಕ್ಕೊಂದು ಮಾತನಾಡುವುವೆಂತಲೂ ಅವಕ್ಕೂ ಜೀವವಿರುವುದೆಂತಲೂ ಕಂಡುಹಿಡಿದಿರುವುದಾಗಿ ಕ್ರಾನಿಕಲ್ ಎಂಬ ಇಂಗ್ಲಿಷ ಪತ್ರಿಕೆಯಲ್ಲಿ ಪ್ರಕಟವಾಗಿದೆ. ಈ ದೆಸೆಯಿಂದ ಬ್ರಹ್ಮಾಂಡದಲ್ಲಿರುವ ಸಕಲ ವಸ್ತುಗಳಿಗೂ ಜೀವ ಉಂಟೆಂಬುದನ್ನು ನಾವು ದೃಢವಾಗಿ ನಂಬಲೇಬೇಕು. ಹೀಗೆ ತಿಳಿವುದೇ ಆತ್ಮಜ್ಞಾನ, ಅಥವಾ ಜೀವನ ಮೂಲರೂಪವು ಸಕಲ ವಸ್ತುಗಳಲ್ಲಿಯೂ ಉಂಟೆಂಬ ಜ್ಞಾನವು.

ಪಿಂಡಾಂಡದಲ್ಲಿಯೂ ನಿರಾಕಾರ, ನಿರಾಕಾರ-ಸಾಕಾರ, ಸಾಕಾರ ಎಂದು ಮೂರು ವಿಭಾಗಮಾಡಿಕೊಳ್ಳಬೇಕು. ನಿರಾಕಾರವೇ ಜೀವ, ಇದಕ್ಕೆ ಕಾರಣತನು ಎಂಬ ಹೆಸರು ಬಂದಿದೆ. ನಿರಾಕಾರ-ಸಾಕಾರವೇ ಮನಸ್ಸು, ಇದಕ್ಕೆ ಸೂಕ್ಷ್ಮತನು ಎಂಬ ಹೆಸರಿದೆ. ಸಾಕಾರವೇ ದೇಹ, ಇದಕ್ಕೆ ಸ್ಥೂಲತನು ಎಂದು ಹೆಸರುಂಟಾಗಿದೆ. ಜಗತ್ತು ಆತ್ಮತತ್ವದಿಂದ ಆಗಿರುವಂತೆ ಪಿಂಡಾಂಡವೂ ಆತ್ಮತತ್ವದಿಂದಲೇ ಆಗಿರುತ್ತದೆ. ಜಗತ್ತಿನಲ್ಲಿ ಆರು ವಿಭಾಗಗಳನ್ನು ಮಾಡಿರುವಂತೆ ಮೇಲೆಕಂಡ ಪಿಂಡಾಂಡದ ಒಂದೊಂದು ತನುವಿನಲ್ಲಿಯೂ ಆರು ವಿಭಾಗಗಳನ್ನು ಪೂರ್ವಿಕರು ಮಾಡಿರುತ್ತಾರೆ. ಈ ದೆಸೆಯಿಂದ ಆರು ಇಂದ್ರಿಯಗಳು, ಆರು ಕರಣಗಳು, ಆರು ವಿಷಯಗಳು, ಆರು ತತ್ವಗಳು— ಇದರಂತೆ ಆರಾರು ಇವೆ ಎಂದು ತಿಳಿಯಬೇಕು. ಇವುಗಳ ಹೆಸರು ಮತ್ತು ವಿವರಗಳನ್ನು ಲೇಖನ ವಿಸ್ತಾರವಾಗುವುದೆಂದು ಇಲ್ಲಿ ಹೇಳಿಲ್ಲ. ಉದಾಹರಣೆಗೆ ಕರ್ಮೇಂದ್ರಿಯಗಳಾದ ಐದರಲ್ಲಿ ಮುಖ್ಯವಾದ ವಾಕ್ (ಮಾತು) ಎಂಬುದು ಮೊದಲು ಮನಸ್ಸಿನಲ್ಲಿ ಮನನ (ತಿಳಿವಳಿಕೆ) ಇಲ್ಲದೆ ಹೊರಗೆ ಬರುವುದಿಲ್ಲವಾದುದರಿಂದ ಮನನವನ್ನು ಆರನೆಯ ಕರ್ಮೇಂದ್ರಿಯವಾಗಿ ಭಾವಿಸಬೇಕು.

ಜೀವ ಎಂಬುದು ಹೇಗೆ ಆಗಿದೆ, ಎಂಬುದನ್ನು ವಿಚಾರ ಮಾಡಲು ಇನ್ನು ಮೇಲೆ ಸುಲಭವಾಗಬಹುದು. ಜಗತ್ತಿನಲ್ಲಿರುವ ಆತ್ಮವು ಗಾಳಿಗಿಂತಲೂ ಆಕಾಶಕ್ಕಿಂತಲೂ ಸೂಕ್ಷ್ಮವಾಗಿದೆ ಎಂದು ಹಿಂದೆ ಹೇಳಿದೆಯಷ್ಟೆ! ಅಂತಹ ಸೂಕ್ಷ್ಮ ವಸ್ತುವೇ ದೇಹದಲ್ಲಿ ಜೀವವಾಗಿ



CC-0. Jangamwadi Math Collection, Varanasi. An eGangotri Initiative

ಬಂದಿರುವುದೆಂದು ತಿಳಿಯಬೇಕು. ಸಸ್ಯದ ಬೀಜಗಳು ಒಂದು ವಿಧದಲ್ಲಿ ಜೀವನ ವಿಷಯ ವನ್ನು ತಿಳಿಯುವುದಕ್ಕೆ ಉದಾಹರಣೆಯಾಗಿರುತ್ತವೆ.

ಒಂದು ಜೋಳದ ಸಸಿಯು ತನ್ನ ಬೆಳವಣಿಗೆಯ ಕಾಲದಲ್ಲಿ ಮಳೆಯಿಲ್ಲದೆ ಸ್ವಲ್ಪ ಒಣಗಿ ಕೆಂಪಾದ ದಂಟು ಆದರೆ, ಅದರ ಕುರುಹಾಗಿ ಜೋಳದ ಕಾಳಿನಲ್ಲಿ ಕೆಂಪು ಚುಕ್ಕೆಯ ಅಥವಾ ಗೆರೆಯ ಗುರುತು ಉಂಟಾಗಿರುತ್ತದೆ. ಇದರಂತೆಯೇ ಜೀವ-ಬೀಜಗಳು ಗಾಳಿ ಗಿಂತಲೂ ಆಕಾಶಕ್ಕಿಂತಲೂ ಸೂಕ್ಷ್ಮವಾಗಿದ್ದು ಅದರಲ್ಲಿ ಮನುಷ್ಯನು ಮಾಡಿದ ಪುಣ್ಯ ಪಾಪ ಗಳ ಸಂಬಂಧದಿಂದ ಕೆಲವು ಗುರುತುಗಳು ಆಗಲಿಕ್ಕೆಬೇಕು. ಮೇಲೆ ಹೇಳಿದ ಕೆಂಪು ಗುರು ತುಳ್ಳ ಜೋಳದ ಬೀಜವನ್ನು ಬಿತ್ತಿದಾಗ ಆ ಬೀಜದಿಂದ ಬೆಳೆದ ಗಿಡವು ಹಿಂದಣ ಕೆಂಪು ಗುರುತಿನ ಫಲವನ್ನು ಅನುಭವಿಸಿದುದು ನಮಗೆ ತಿಳಿಯುತ್ತದೆ. ವಾಯುವಿನಲ್ಲಿ ಸುಗಂಧ ಅಥವಾ ದುರ್ಗಂಧವು ಸೇರಿದರೆ ಅದನ್ನು ಮನುಷ್ಯನ ಬರಿಯ ಕಣ್ಣಿನಿಂದ ಗುರುತಿಸುವುದಕ್ಕಾ ಗದೆ ಆ ಗಂಧವು ಮೂಗಿನ ಹತ್ತಿರ ಬಂದಾಗ ಮನುಷ್ಯನಿಗೆ ಗೊತ್ತಾಗುವುದು. ಆಕಾಶದಲ್ಲಿ ಅವ್ಯಕ್ತವಾಗಿ ಒಂದು ಧ್ವನಿಯು ರೇಡಿಯೋ ಯಂತ್ರದ ಮುಖಾಂತರ ಮಾತ್ರ ಸ್ಪಷ್ಟವಾಗಿ ತಿಳಿಯುವುದು. ಇದರಂತೆ ಜೀವವು ಗಾಳಿಯಲ್ಲಿ ಅಥವಾ ಆಕಾಶದಲ್ಲಿ ಸೂಕ್ಷ್ಮ ರೂಪದಿಂದ ಇದ್ದು ಒಂದು ದೇಹವನ್ನು ಪ್ರವೇಶಿಸಿದಾಗ ಪ್ರಾಣಿಯಾಗಿ ಹುಟ್ಟುವುದು. ಈ ದೆಸೆಯಿಂದಲೇ ಜೀವನಿಗೆ ಜನ್ಮಜನ್ಮಗಳು ಉಂಟೆಂದು ಹಿಂದೂ ಶಾಸ್ತ್ರವು ಹೇಳುತ್ತದೆ. ಕೆಂಪು ಗುರುತುಳ್ಳ ಜೋಳದ ಬೀಜವು ಸಸಿಯಾಗಿ ಬೆಳೆಯುವಾಗ ತನ್ನ ಹಿಂದಿನ ಫಲವನ್ನು ಅನುಭವಿಸುವಂತೆ ಒಂದು ದೇಹವಾಗಿ ಬೆಳೆದ ಜೀವದ ಬೀಜವು ಹಿಂದಿನ ಜನ್ಮದ ಪುಣ್ಯ ಪಾಪಗಳ ಫಲವನ್ನು ಅನುಭವಿಸಲೇ ಬೇಕಾಗುವುದು. ಸಸ್ಯ ಬೀಜಕ್ಕೆ ಗಿಡವು ದೇಹವಾಗಿರುವಂತೆ ಜೀವವೆಂಬ ಬೀಜಕ್ಕೆ ಪ್ರಾಣಿದೇಹವೇ ಗಿಡವು. ಒಂದು ಸಸ್ಯ ಬೀಜದಲ್ಲಿ ಎಲೆ, ಕಾಂಡ, ಹೂ ಮೊದಲಾದ ವೆಲ್ಲವೂ ಅಡಗಿರುವುವು. ಒಂದು ಬೀಜವು ಅನೇಕ ಬೀಜಗಳಾಗಿ ಪರಿಣಮಿಸಲು ಗಿಡಕ್ಕೆ ಹೊರಗಣ ಜಗತ್ತೇ ಸಹಾಯಕರವಾಗಿರುವಂತೆ ಒಂದು ಜೀವವು ಅನೇಕ ಜೀವಗಳಾಗಿ ಪರಿ ಣಮಿಸಲು ಜೀವಿಯ ಪಿಂಡಾಂಡಕ್ಕೆ ಜಗತ್ತೇ ಸಹಾಯಕಾರಿಯಾಗಿರುತ್ತದೆ.

ಒಂದು ಬೀಜವು ಯಾವ ತೊಂದರೆಯೂ ಇಲ್ಲದೆ ಒಂದು ಗಿಡವಾಗಿ ಬೆಳೆದಾಗ ಅದರಿಂದ ಉಂಟಾದ ಬೀಜವು ಯಾವ ಉಪಾಧಿ (ತೊಂದರೆ) ಯೂ ಇಲ್ಲದೆ ಇರುವಂತೆ ಪುಣ್ಯ ಪಾಪಗಳಿಗೆ ಸಿಲುಕದೆ ಇದ್ದ ಜೀವನು ಯಾವ ತೊಂದರೆಯನ್ನೂ ಹೊಂದದೆ ತನ್ನ ಮೂಲ ರೂಪದಲ್ಲಿ ಸಹಜವಾಗಿ ಶುದ್ಧನಾಗಿರುವನು. ಜೀವನಿಗೆ ಪುಣ್ಯ ಪಾಪಗಳು ಸಂಬಂಧಿಸಿ ಇವೆ, ಎಂಬುದನ್ನು ತಿಳಿವುದಕ್ಕೆ ಅವನ ಮನಸ್ಸೇ ಕನ್ನಡಿಯಂತೆ ಒಂದು ಸಾಧನವಾಗಿದೆ. ಕನ್ನಡಿಯ ಮುಂದೆ ಇಟ್ಟ ಪದಾರ್ಥವು ತಾನಿದ್ದಂತೆ ಕನ್ನಡಿಯಲ್ಲಿ ಕಾಣುವುದು. ಇದರಂತೆ ಒಬ್ಬನು ಒಂದು ಪ್ರಾಣಿಯನ್ನು ಕೊಂದಾಗ, ನಾನೊಂದು ಪ್ರಾಣಿಯ ಹಿಂಸೆ ಮಾಡಿದೆನೆಂಬ ಯೋಚನೆಯು ಮನಸ್ಸಿನಲ್ಲಿ ಮೂಡುವುದು; ಇದೇ ಪಾಪವು. ಒಬ್ಬನು ಯಾರಿಗಾದರೂ ಹಣ್ಣನ್ನು ತಿನ್ನಿಸಿ ಸಂತೋಷಪಡಿಸಿದೆನೆಂದು ಯೋಚಿಸುವುದೇ ಪುಣ್ಯವು. ಕನ್ನಡಿಯಲ್ಲಿ



CC-0. Jangamwadi Math Collection, Varanasi. An eGangotri Initiative

ತೋರುವ ಲಕ್ಷಣಗಳು ಮೂಲ ಪದಾರ್ಥಕ್ಕೆ ಸಂಬಂಧಿಸಿರುವಂತೆ ಮನಸ್ಸಿನಲ್ಲಿ ತೋರುವ ಪುಣ್ಯ ಪಾಪಗಳು ಜೀವನಿಗೆ ಸಂಬಂಧಿಸಿ ಇರುವುವು.

ಸುಗಂಧ, ದುರ್ಗಂಧ ಎರಡೂ ಇಲ್ಲದೆ ಇದ್ದಾಗ ಗಾಳಿಯು ಹೇಗೆ ಸಹಜವಾಗಿ ಶುದ್ಧ ವಾಗಿರುವುದೋ ಹಾಗೆ ಪುಣ್ಯ ಪಾಪಗಳು ಎರಡೂ ಇಲ್ಲದಾಗ ಜೀವನು ಸಹಜವಾಗಿ ಶುದ್ಧನಾಗಿ ಇರುವನು. ಇಂತಹ ಶುದ್ಧಜೀವನ ಸ್ವರೂಪಕ್ಕೆ ಆತ್ಮ ಎಂದು ಕರೆಯುತ್ತಾರೆ. ಶ್ರೀ ಶಂಕರಾ ಚಾರ್ಯರು ವಿವರಿಸಿದ ಅದ್ವೈತ (ಶುದ್ಧಾದ್ವೈತ) ದ ತಿಳಿವಳಿಕೆಯ ಪ್ರಕಾರ ಆತ್ಮ ಎಂದು ಕರೆಯಿಸಿಕೊಳ್ಳಲ್ಪಡುವವನು ದೇಹದ ಸುಖದುಃಖಗಳಿಗೆ ಬಾಧ್ಯನಾಗದಿರುವುದೆ ಸಾಕ್ಷಿ ಎಂದು ತಿಳಿವವನಾಗುತ್ತಾನೆ. ಇದರಿಂದ ಜೀವನೇ ಶುದ್ಧ ಸ್ವರೂಪವನ್ನು ಹೊಂದಿದಾಗ ಆತ್ಮನಾಗಿ ಆಗುತ್ತಾನೆ, ಎಂದು ನಾವು ನಿಸ್ಸಂಶಯವಾಗಿ ತಿಳಿಯಬಹುದು.

## ದ್ವೈತಿಗಳ ಮತ

ದ್ವೈತಿಗಳು ಶ್ರೀ ಮಧ್ವಾಚಾರ್ಯರ ಬೋಧೆಯನ್ನನುಸರಿಸಿ ಜೀವನೇ ಬೇರೆ, ಆತ್ಮನೇ ಬೇರೆ, ಭೂಮಿಯೇ ಬೇರೆ, ದೇವನೇ ಬೇರೆ ಎಂದು ವಸ್ತುಗಳಲ್ಲಿ ನಾನಾತ್ವವನ್ನು ಹೇಳುತ್ತಾರೆ. ಇದು ಪೂರ್ಣ ಜ್ಞಾನದ ಮಾತಲ್ಲ. ಒಂದು ಪಕ್ಷಿಯ ಮೊಟ್ಟೆಯಲ್ಲಿ ಆ ಪಕ್ಷಿಯ ಮರಿಗಳೂ ಕೈಕಾಲುಗಳೂ ಅಡಗಿರುವಂತೆ ಜೀವವೆಂಬ ಬೀಜದಲ್ಲಿ ಸ್ಥೂಲವಾದ ದೇಹವು ಅಡಗಿರುವುದು. ಅದು ಮುಂದೆ ಜೀವಸಹಿತವಾದ ದೇಹವೂ ಆಗುವುದು. ಇದರಂತೆಯೇ ಜೀವವು ಸೂಕ್ಷ್ಮ ವಾದ ಆತ್ಮರೂಪವನ್ನೂ ಹೊಂದುವುದು. ಹೀಗೆ ಜಗತ್ತಿನಲ್ಲಿರುವ ವಸ್ತುಗಳೆಲ್ಲಾ ಒಂದೇ ವಸ್ತುವಿನ ನಾನಾರೂಪಗಳಾಗಿವೆ. ನಾನಾವಸ್ತುಗಳು ಇವೆಯೆಂದು ತಿಳಿಯುವುದು ಜ್ಞಾನದ ಅಭ್ಯಾಸದ ಮಕ್ಕಳ ಪಾಠವೇ ಹೊರತು ಪ್ರೌಢ ಪಾಠವಲ್ಲ.

ಜೀವನು ದೇಹದಿಂದ ಪ್ರತ್ಯೇಕವಾಗುತ್ತಾನೆ, ಎಂಬುದರಿಂದಲೇ ಜೀವನು ಅಜಡ, ದೇಹವು ಜಡ, ಎಂದು ತಿಳಿಯುವದಕ್ಕಿಂತಲೂ, ಜೀವಿಯ ದೇಹದಲ್ಲಿ ಜೀವತ್ವವು ವ್ಯಕ್ತವಾಗಿದೆ ಎಂದೂ ಮೃತ ದೇಹದಲ್ಲಿ ಜೀವವು ಕಟ್ಟಿಗೆಯೊಳಗಿನ ಬೆಂಕಿಯಂತೆ ಅವ್ಯಕ್ತವಾಗಿದೆ-ಎಂದು ತಿಳಿಯುವದೇ ಹೆಚ್ಚಿನ ತಿಳಿವಳಿಕೆಯು. ಒಂದು ಬೀಜವು ಸಸಿಯ ಅವಯವಗಳನ್ನು ಗ್ರಹಿಸಿ ಕೊಂಡು ಆ ಸಸಿಯನ್ನು ಬಿಟ್ಟು ಹೊರಗೆ ಬರುವಂತೆ ಜೀವನು ದೇಹದ ಮೂಲ ಅಂಶ ಗಳನ್ನು ಗ್ರಹಿಸಿಕೊಂಡೇ ದೇಹವನ್ನು ಬಿಟ್ಟು ಹೊರಗೆ ಹೋಗುತ್ತಾನೆ.

## ಅದ್ವೈತಿಗಳ ಮತ

ಅದ್ವೈತದ ಪ್ರಕಾರ ಜೀವವನ್ನು ಆತ್ಮ ಎಂದು ತಿಳಿಯುವುದು ಒಂದೇ ವಸ್ತುವಿ ನಿಂದ ಜಗತ್ತಾಗಿದೆ, ಎಂದು ತಿಳಿದಿರುವ ಈಗಿನ ಶಾಸ್ತ್ರ (Science) ಕ್ಕೂ ಸರಿ ಹೋಲು ವುದು. ಹೀಗೆ ಜೀವನನ್ನು ಆತ್ಮಸ್ವರೂಪವಾಗಿ ಮಾಡುವುದು ಬಹು ಮುಖ್ಯವಾದರೂ ಇನ್ನೂ ಮುಂದೆ ತಿಳಿಯಬೇಕಾದ ವಿಷಯವಿರುವುದು. ಅದೇನೆಂದರೆ— ಈ ಆತ್ಮನೇ ಬ್ರಹ್ಮಸ್ವರೂಪ ನಾಗುತ್ತಾನೆ ಎಂಬುದು. ಜೀವನು ಆತ್ಮನಾಗಿದ್ದಾಗ ನಾನು ಸುಖದುಃಖಗಳಿಗೆ ಸಾಕ್ಷಿ ಎಂದು



CC-0. Jangamwadi Math Collection, Varanasi. An eGangotri Initiative

ತಿಳಿದಾಗ, ತಾನು ಮತ್ತು ಅನ್ಯ ಎಂಬ ಎರಡು ಭಾವನೆಗಳು ಅದರಲ್ಲಿ ಗೂಢವಾಗಿ ಅಡಗಿಕೊಂಡಿರುತ್ತವೆ. ( ಆತ್ಮ ಎಂಬುದಕ್ಕೆ ' self ' ಎಂಬದಾಗಿ ಕೆಲವರು ಇಂಗ್ಲಿಷ್ ಪಾರಿಭಾಷಿಕ ಪದವನ್ನೂ ಉಪಯೋಗಿಸಿರುತ್ತಾರೆ; ಇದರಿಂದ ತಾನಲ್ಲದವನು ಅನ್ಯನು ಎಂಬ ಭಾವನೆಯು ಬರಲಿಕ್ಕೇಬೇಕು ) ಈ " ತಾನು " ಎಂಬುದು ನಾನು, ನನ್ನದು ಎಂಬ ಎರಡು ಭೇದಗಳನ್ನು ಒಡಗೂಡಿದೆ. ಅವಕ್ಕೆ ಅಹಂಕಾರ ಮಮಕಾರಗಳೆನ್ನುತ್ತಾರೆ. ಆತ್ಮನಲ್ಲಿ ಇವು ವ್ಯಕ್ತವಾಗಿ ತೋರುತ್ತವೆ. ಅಹಂಕಾರ ಮಮಕಾರಗಳು ಹೋಗಿ ಸರ್ವವೂ ಮಹಾದೇವ ಎಂಬ ಅಥವಾ ಸರ್ವವೂ ಒಂದೇ ವಸ್ತುವು ಎಂಬ ತಿಳಿವು ಬಂದಾಗ ಆ ಆತ್ಮನೇ ಬ್ರಹ್ಮನಾಗುತ್ತಾನೆ.

ಬ್ರಹ್ಮ ಎಂಬಲ್ಲಿ ಭೂಮಿ, ನೀರು ಮೊದಲಾದ ವಸ್ತುಗಳ ನಾಮ, ರೂಪ ಮತ್ತು ಕ್ರಿಯೆಗಳು ಶಾಶ್ವತವೆಂದು ನಂಬದೆ ಮೂಲ ವಸ್ತುವು ಈ ರೂಪಗಳನ್ನು ಹೊಂದಿ ಇವೆಲ್ಲಾ ಕೂಡಿದ ರೂಪಗಳ ಮೂಲವಾದ ನಿರಾಕಾರವಾಗಿ, ದೊಡ್ಡದಾಗಿ ಬ್ರಹ್ಮವೆನಿಸಿಕೊಂಡಿದೆ-ಎಂದು ತಿಳಿಯಬೇಕು. " ಬೃಹತ್ವಾತ್ ಬ್ರಹ್ಮ " ಎಂಬ ಪ್ರಮಾಣವೂ ಇದೆ. ಈ ಮೇರೆಗೆ ವಿಚಾರವು ಉಂಟಾದರೆ ದೇಹವು ಜೀವಕ್ಕಿಂತ ಬೇರೆ ಎಂದು ತಿಳಿಯದೆ ದೇಹವು ಅದರೊಳಗಿನ ಜೀವ ಸಹಿತ ಬ್ರಹ್ಮ ಎಂದು ತಿಳಿಯಬೇಕಾಗುವುದು. ಹೀಗೆ ತಿಳಿಯುವಿಕೆಯಿಂದ " ಸರ್ವಂ ಖಲ್ವಿದಂ ಬ್ರಹ್ಮ " ಎಂಬ ಸ್ಥಿತಿಯೇ ಬಂದಂತಾಗುವುದು. ಈ ಸ್ಥಿತಿಯಲ್ಲಿ ಜೀವನು ಆತ್ಮ ಎಂಬ ಸ್ಥಿತಿಯನ್ನು ಬದಲಿಸಿ ಬ್ರಹ್ಮ ಎಂಬ ಸ್ಥಿತಿಗೆ ಬಂದಂತಾಗುವುದು.

ಹಿಂದೂ ಶಾಸ್ತ್ರದ ಕೆಲವು ಭಾಗದಲ್ಲಿ ಹೇಳಿರುವಂತೆ ' ಅಹಂ ಬ್ರಹ್ಮಾಸ್ಮಿ ' ' ಸೋऽಹಂ ' ಎಂದು ಹೇಳಿ ಆ ಬ್ರಹ್ಮವು ನಿರಾಕಾರವೂ ಚೈತನ್ಯವೂ ಆದುದರಿಂದ ಜೀವನೇ ಬ್ರಹ್ಮವು, ದೇಹವು ಜಡವು, ಎಂದು ಹೇಳುವದಾದರೆ ಆಗ ಬ್ರಹ್ಮನಿಗೆ ಆತ್ಮನ ಸ್ಥಿತಿಯೇ ಬಂದಂತಾಗುವುದು. ಆಗ ಆತ್ಮನೂ ಬ್ರಹ್ಮನೂ ಒಂದೇ ಆಗುವರು. ಈ ಬ್ರಹ್ಮನೇ ನೇತ್ಯಾತ್ಮಕ ಬ್ರಹ್ಮ-ಎಂದರೆ ದೇಹ ನಾನಲ್ಲ, ಇಂದ್ರಿಯ ನಾನಲ್ಲ, ಎಂಬ ಬ್ರಹ್ಮ. ಹೀಗೆ ಹೇಳುವುದು ಬ್ರಹ್ಮನು ನಿರಾಕಾರ ಎಂಬುದನ್ನು ಕಲಿಸುವುದಕ್ಕೆ ಮಾತ್ರ ಆಗಿದೆ. ಆತ್ಮನೂ ಬ್ರಹ್ಮನೂ ಒಂದೇ ಲಕ್ಷಣದವರಲ್ಲ ಎಂದು ಹೇಳುವ ಪ್ರಮಾಣ ಗ್ರಂಥಗಳೂ ಸಿಕ್ಕುವುದರಿಂದ ಆತ್ಮಗಿಂತ ಹೆಚ್ಚಿನ ಲಕ್ಷಣಗಳು ಬ್ರಹ್ಮ ಎಂಬ ಸ್ಥಿತಿಯಲ್ಲಿ ಬರಲೇಬೇಕಾಗುವುದು. ಆಗ ಸರ್ವವೂ ಬ್ರಹ್ಮ ಎಂದು ತಿಳಿಯಬೇಕಾಗುವುದು. ಇದೇ ರೀತಿಯಲ್ಲಿ ಭೂಮಿಯೊಡನೆ ಸೇರಿದ ಎಲ್ಲ ಭೂತಗಳ ಮೂಲ ರೂಪಗಳೂ ಕೂಡಿ ಬ್ರಹ್ಮವಾಗಿದೆ, ಎಂದು ತಿಳಿಯಬೇಕು. ಇದೇ ಸರ್ವಾತ್ಮಕ ಬ್ರಹ್ಮ. ಹೀಗೆ ತಿಳಿವುದೇ ಬ್ರಹ್ಮಜ್ಞಾನಿ ಎಂಬ ಪದದ ಸಾರ್ಥಕತೆಯು. " Atma is Brahma only when freed from Kartritva ( dcer-ship ) " ಎಂದು ದಿವಾನ್‌ಬಹಾದ್ದೂರ ಕೆ. ಎಸ್. ರಾಮಸ್ವಾಮಿ ಶಾಸ್ತ್ರಿಯವರು ಬ್ರಹ್ಮಸೂತ್ರದ ೪ ನೆಯ ಅಧ್ಯಾಯ ೧ ನೆಯ ಪಾದದ ೪ ನೆಯ ಸೂತ್ರಕ್ಕೆ ವ್ಯಾಖ್ಯಾನ ಬರೆಯುವಾಗ ಹೇಳಿರುತ್ತಾರೆ. ಈ ಅಭಿಪ್ರಾಯದಿಂದ ಆತ್ಮ, ಬ್ರಹ್ಮ ಇವರು ಬೇರೆ ಬೇರೆ ಎಂದು ಸ್ಪಷ್ಟವಾಗುತ್ತದೆ. ಮತ್ತು ತಾನು ಎಂಬ ಆತ್ಮನು, ಕರ್ತೃತ್ವವಿಲ್ಲದ ಮತ್ತು ಸರ್ವವೂ ಬ್ರಹ್ಮ ಎಂಬ ಸ್ಥಿತಿಯ ಬ್ರಹ್ಮನಿಗಿಂತ ಕಡಿಮೆ ಲಕ್ಷಣದವನು ಎಂಬುದೂ ಹೊರಪಡುತ್ತದೆ.



CC-0. Jangamwadi Math Collection, Varanasi. An eGangotri Initiative

## ವೀರಶೈವರ ಮತ

ಈ ಬ್ರಹ್ಮಜ್ಞಾನಕ್ಕೆ ತಕ್ಕಂತೆ ಬ್ರಹ್ಮವೃತ್ತಿಯಲ್ಲಿಯೂ ನಡೆಯಬೇಕಾಗುವುದು. ಇದಕ್ಕಾಗಿ ಬ್ರಹ್ಮನಾದ ಜೀವನೇ ಮುಂದೆ 'ಶಿವ' ಎಂಬ ಸ್ವರೂಪವನ್ನು ಹೊಂದಬೇಕು, ಶಿವ ಎಂದರೆ ಆತ್ಮಕ್ಕಿಂತಲೂ ಬ್ರಹ್ಮಕ್ಕಿಂತಲೂ ಸೂಕ್ಷ್ಮ ರೂಪವಾದುದು ಎಂದು ತಿಳಿಯಬೇಕು. ಗಾಳಿಯಲ್ಲಿ ಅಣುಗಳೂ ಪರಮಾಣುಗಳೂ ಹೇಗೆ ಸೇರಿರುವವೋ ಹಾಗೆ ಬ್ರಹ್ಮಾಂಡ, ಪಿಂಡಾಂಡಗಳಲ್ಲಿ ಬ್ರಹ್ಮರೂಪದ ಅಣುಪರಮಾಣಗಳು ತುಂಬಿರುವುವು, ಎಂದು ತಿಳಿವುದೇ 'ಸರ್ವಂ ಶಿವಮಯಂ' ಎಂಬುದರ ಅಭಿಪ್ರಾಯವು. ಶಾಸ್ತ್ರದಲ್ಲಿ ಬ್ರಹ್ಮ ಲಕ್ಷಣವನ್ನು "ಅಣೋರಣೀಯಾನ್ ಮಹತೋ ಮಹೀಯಾನ್" ಎಂದಿರುತ್ತಾರೆ. ಇದರಲ್ಲಿ 'ಅಣೋರಣೀಯಾನ್' ಎಂಬುದೇ ಶಿವ ಎಂಬ ಹೆಸರನ್ನೂ ಮಹತೋಮಹೀಯಾನ್ ಎಂಬುದೇ ಬ್ರಹ್ಮ ಎಂಬ ಹೆಸರನ್ನೂ ಹೊಂದಿರುವುವು. ಆದರೆ ಅಣು ಮತ್ತು ಪರಮಾಣುಗಳು ಚೈತನ್ಯವುಳ್ಳವುಗಳೆಂದು ತಿಳಿವುದೇ ಶಿವ ಎಂದು ಭಾವಿಸುವುದರಲ್ಲಿಯ ವಿಶೇಷ ಸಂಗತಿಯು. 'ಸರ್ವಂ ಖಲ್ವಿದಂ ಬ್ರಹ್ಮ' ಎಂಬುದಕ್ಕೂ 'ಸರ್ವಂ ಶಿವಮಯಂ' ಎಂಬುದಕ್ಕೂ ವ್ಯತ್ಯಾಸವೇನಂದರೆ ನಾಮ ರೂಪ ಕ್ರಿಯೆಗಳನ್ನು ವರ್ಜಿಸಿದ ಸರ್ವವೂ ಕೂಡಿರುವ ದೊಡ್ಡದೊಂದು ರೂಪವು ಎಂದು ತಿಳಿವುದು 'ಸರ್ವಂ ಖಲ್ವಿದಂ ಬ್ರಹ್ಮ' ಎಂಬುದರ ತಾತ್ಪರ್ಯ; ಸರ್ವವೂ ಚೈತನ್ಯವುಳ್ಳ, ಸೂಕ್ಷ್ಮ ಪರಮಾಣುಗಳಿಂದ ತುಂಬಿರುವ ರೂಪವು ಎಂದು ತಿಳಿಯುವವದೇ 'ಸರ್ವಂ ಶಿವಮಯಂ' ಎಂಬುದರ ತಾತ್ಪರ್ಯವು. ಈ ಪ್ರಕಾರ ಜೀವನು ಶಿವನೆಂದು ತಿಳಿವುದೇ ವೀರಶೈವನ ಮುಖ್ಯಾಭಿಪ್ರಾಯವು.

'ಶಿವೋಽಹಂ ಭಾವನಾಧೀರೋ ವೀರಶೈವ ಉದಾಹೃತಃ' ಎಂಬ ಶ್ಲೋಕದ ಅರ್ಥವು ಇಂತಹ ಸೂಕ್ಷ್ಮ ಬ್ರಹ್ಮಸ್ವರೂಪ ಶಿವನೇ ಸರ್ವವೂ ಎಂದು ಶಿವನಿಗೆ ಸರ್ವವನ್ನೂ ಭಕ್ತಿ ಪೂರ್ವಕವಾಗಿ ಒಪ್ಪಿಸಿ ಆ ಪರಮಾಣುರೂಪ ಮಹಾದೇವನೇ ಎಲ್ಲವೂ ಎಂದು ತಿಳಿದು ತಾನೇ ಆ ಶಿವನು ( ಕೇವಲ ಶಿವನು ) ಎಂದು ತಿಳಿದು ಅನುಭಾವಿಸುವ ಕೈವಲ್ಯಭಾವದಲ್ಲಿ ಒಡಮೂಡುತ್ತದೆ. ಇದೇ ಶಿವಾದ್ವೈತವು. "ಶಿವಂ ಪರಾತ್ಪರಂ ಸೂಕ್ಷ್ಮಂ" ಎಂದು ವಾತುಲಾಗಮ ಪ್ರಮಾಣವಿದೆ.

ವಿಶಿಷ್ಟಾದ್ವೈತಿಗಳಾದ ಶ್ರೀ ರಾಮಾನುಜಾಚಾರ್ಯರು ಭೂಮಿ ಮೊದಲಾಗಿ ಆಕಾಶ ಕಡೆಯಾದ ಭೂತಗಳೆಲ್ಲವೂ ಒಂದು ವಿರಾಡ್ರೂಪವು ಎಂದು ಸಾಧಿಸುತ್ತಿದ್ದರೂ ನಾಮ-ರೂಪ-ಕ್ರಿಯೆಗಳನ್ನು ಬಿಡಬೇಕೆಂದು ಹೇಳುವುದಿಲ್ಲ. ಒಳಗೆ ಈ ಹೆಸರುಗಳುಳ್ಳ ವಸ್ತುಗಳನ್ನು ಇಟ್ಟು ಕೊಂಡ ಒಟ್ಟನಲ್ಲಿಯ ರೂಪಕ್ಕೆ ಬ್ರಹ್ಮನೆಂದು ಹೇಳುತ್ತಾರೆ. ಆ ಪ್ರಕಾರ ತನ್ನೊಡನೆ ಇರುವ ದೇಹ, ಇಂದ್ರಿಯ, ಕರಣ ಈ ಹೆಸರುಗಳುಳ್ಳ ವಸ್ತುಗಳನ್ನಿಟ್ಟುಕೊಂಡ ಜೀವನು ಬ್ರಹ್ಮನು ಎಂದು ಬೋಧಿಸುತ್ತಾರೆ. ಆದರೆ ಈ ಹೆಸರು-ರೂಪ-ಕೆಲಸಗಳು ಶಕ್ತಿಯ ಬೇರೆ ಬೇರೆ ನಟನೆಗಳೆಂದೂ ಅವೆಲ್ಲವೂ ಶಿವನ ನಾನಾ ನಾಮ-ರೂಪದ ಕ್ರಿಯೆಗಳೆಂದೂ ಶಿವನ ಈ ಒಂದೊಂದು ರೂಪಕ್ಕೆ ಒಂದೊಂದು ಲಿಂಗ ಎಂಬ ಹೆಸರನ್ನು ಕೊಟ್ಟು ಅವುಗಳ ಅನುಭಾವದಲ್ಲಿಯೇ ಇರಬೇಕೆಂದೂ ವೀರಶೈವರು ಹೇಳುತ್ತಾರೆ. "ಬ್ರಹ್ಮಣಃ ನಾನಾರೂಪಾಣಿ ಭವಂತಿ" ಎಂದು ಉಪನಿಷತ್ತಿನ ಪ್ರಮಾಣವೂ ಇದೆ. "ಲಿಂಗಂ ಪರಂ ಬ್ರಹ್ಮ ಸಚ್ಚಿದಾನಂದ ಲಕ್ಷಣಂ" ಎಂದು ಸೂಕ್ಷ್ಮಾಗಮ



CC-0. Jangamwadi Math Collection, Varanasi. An eGangotri Initiative

೬ ನೆಯ ಪಟಲದಲ್ಲಿ ಹೇಳಲ್ಪಟ್ಟಿದೆ. ಆದುದರಿಂದ ಬ್ರಹ್ಮರೂಪವೇ ಲಿಂಗರೂಪ ಎಂದು ಇವರು ನಂಬಿರುತ್ತಾರೆ. ಹೀಗೆ ತಿಳಿವುದೇ ಶಿವಾದ್ವೈತದ ಮುಖ್ಯ ಅಭಿಪ್ರಾಯವು.

ಶುದ್ಧ ದ್ವೈತಿಗಳಾದ ಶ್ರೀ ಶಂಕರಾಚಾರ್ಯರ ಶಾಲೆಯವರು ಜೀವವು ಮಾಯೆಯಿಂದ ಕೂಡಿದುದು ಎಂದು ಹೇಳುತ್ತಾರೆ; ಎಂದರೆ ಯಾವ ಜೀವನು ತಾನೊಂದು ಲೋಕದ ಪ್ರಾಣಿ ಎಂದು ತಿಳಿದಿರುವನೋ ಅವನು ಮಾಯೆಯಿಂದ ಆವರಿಸಲ್ಪಟ್ಟವನು ಎಂದು ತಿಳಿಯುತ್ತಾರೆ. ಇಲ್ಲಿ ಮಾಯೆ ಎಂಬುದು ಒಂದು ವಸ್ತುವಲ್ಲ. ನಾನು ಮಹಾದೇವನ ರೂಪನೇ (ಶಿವೋಹಂ) ಎಂದು ತಿಳಿವುದು ನಿಜವಾದ ತಿಳವಳಿಕೆ. ಪ್ರಮಾದದಿಂದ ನಾನು ಒಂದು ಪ್ರಾಣಿ ಎಂದು ತಿಳಿವುದೇ ತಪ್ಪು ತಿಳವಳಿಕೆ. ಈ ತಪ್ಪುತಿಳವಳಿಕೆಯೇ ಮಾಯೆ. ವೀರಶೈವರು ಇಂತಹ ಮಾಯೆಗೀಯೆಯ ಗೋಜಿಗೆ ಹೋಗುವುದಿಲ್ಲ. ಮಹಾದೇವನಲ್ಲಿ (ನಿರಾಕಾರ ವಸ್ತುವಿನಲ್ಲಿ) ಇದ್ದ ಮಹಾ ಶಕ್ತಿಯು ಪ್ರಪಂಚದ ಕಡೆಗೆ ತಿರುಗಿದಾಗ (ಪ್ರವೃತ್ತಿ ಮಾರ್ಗವನ್ನು ಹೊಂದಿದಾಗ) ಆ ಮಹಾದೇವನನ್ನು ಜೀವ ಎಂಬ ಹೆಸರಿನವನನ್ನಾಗಿ ಮಾಡಿರುತ್ತದೆ ಎಂದೂ, ಇಂತಹ ಜೀವನು ತನ್ನ ನಿಜಸ್ವರೂಪದ ತಿಳವಳಿಕೆಯ ಕಡೆಗೆ ತಿರುಗಿದಾಗ (ನಿವೃತ್ತಿ ಮಾರ್ಗವನ್ನು ಹೊಂದಿದಾಗ) ಅದೇ ಶಕ್ತಿಯೇ ಭಕ್ತಿ ಎನ್ನಿಸಿಕೊಂಡು ಜೀವನನ್ನು ಶಿವನನ್ನಾಗಿ ಮಾಡುತ್ತದೆ ಎಂದೂ ತಿಳಿದಿರುತ್ತಾರೆ.

## ೩. ಈಶ್ವರ

ಜಗತ್ತನ್ನು ಸೃಷ್ಟಿಸಿದ ಒಬ್ಬ ದೇವನು ಜಗತ್ತಿಗಿಂತ ಬೇರೆ ಉಂಟೆಂದೂ ಅವನು ಈಶ್ವರ ನೆಂದೂ ಕೆಲವರು ತಿಳಿಯುತ್ತಾರೆ. ಈಶ್ವರನನ್ನು ಕೂಡಿಕೊಂಡು ತತ್ವಗಳ ಸಂಖ್ಯೆಯನ್ನು ಎಣಿ ಸುವ 'ಸೇಶ್ವರ ಸಾಂಖ್ಯ' ಹಾಗು ಈಶ್ವರನನ್ನು ಬಿಟ್ಟು ತತ್ವಗಳನ್ನು ಎಣಿಸುವ 'ನಿರೀಶ್ವರ ಸಾಂಖ್ಯ' ಎಂಬುದಾಗಿ ಎರಡು ಭೇದಗಳು ಸಾಂಖ್ಯದಲ್ಲಿ ಇವೆ. ಕೈಲಾಸದಲ್ಲಿ ಪಾರ್ವತೀ ಪತಿಯಾದ ಈಶ್ವರನು ಆಗಮಗಳನ್ನು ಬೋಧಿಸಿದನೆಂದು ಹಿಂದೂ ಗ್ರಂಥಗಳು ಹೇಳುತ್ತವೆ. ಇವನಿಗೆ 'ಶಿವ' 'ಶಂಕರ' ಮೊದಲಾದ ಹೆಸರುಗಳು ಇದ್ದಂತೆ ತಿಳಿಯುತ್ತದೆ. ಅದ್ವೈತ ಶಾಸ್ತ್ರದಲ್ಲಿ ಒಂದು ವ್ಯಕ್ತಿಯಲ್ಲಿ ಇರುವ (ವ್ಯಷ್ಟಿ) ಜೀವನನ್ನು ಜೀವ ಎಂದು ಕರೆಯಬೇಕೆಂದೂ ಅನೇಕ ವ್ಯಕ್ತಿಗಳಲ್ಲಿ ತೋರಿಬರುವ (ಸಮಷ್ಟಿ) ಜೀವನಿಗೆ ಈಶ್ವರ ಅಥವಾ ಈಶ ಎಂದು ಕರೆಯ ಬೇಕೆಂದೂ ಹೇಳಿರುತ್ತದೆ. ಎಂಟು ದಿಕ್ಕುಗಳನ್ನು ಪಾಲಿಸುವ ದೇವತೆಗಳಲ್ಲಿ ಈಶಾನ್ಯ ದಿಕ್ಕಿಗೆ ಅಧಿಪತಿಯಾದವನು ಈಶಾನ್ಯ ಅಥವಾ ಈಶ್ವರ ಎಂದಿದೆ. ಆತ್ಮನು (ಬ್ರಹ್ಮ ಎಂಬ ತತ್ವವು) ಆರು ರೂಪಗಳನ್ನು ಹೊಂದಿದಾಗ ಅಂತರ್ಯಾಮಿ, ಚೈತನ್ಯ, ಭಾವ, ಕರ್ತಾರ, ಕ್ಷೇತ್ರಜ್ಞ, ಶಿವ (ಈಶ್ವರ) ಎಂಬ ಹೆಸರನ್ನು ಹೊಂದುವನೆಂದೂ ಒಂದು ಕಡೆಯಲ್ಲಿ ಬರೆಯಲ್ಪಟ್ಟಿದೆ. ಸದಾಶಿವ, ಈಶ, ಬ್ರಹ್ಮ, ಈಶ್ವರ, ಈಶಾನ ಎಂಬ ಐದು ತತ್ವಗಳು ಶಿವನಿಂದ ಆಗಿರುವುವೆಂದು ವಾತುಲಾಗ ಮವು ಹೇಳುತ್ತದೆ. ತ್ರಿಮೂರ್ತಿಗಳಾದ ದೇವತೆಗಳಲ್ಲಿ ಬ್ರಹ್ಮ, ವಿಷ್ಣು, ರುದ್ರ ಹೀಗೆ ಮೂವರು ಇರುವರೆಂದು ಪುರಾಣಗಳು ಹೇಳುತ್ತವೆ. ಇಲ್ಲಿ ರುದ್ರನಿಗೆ 'ಈಶ್ವರ' 'ಶಿವ' 'ಶಂಕರ' ಎಂದು ಮೊದಲಾಗಿ ಕರೆಯುತ್ತಿದ್ದರೆಂದೂ ಉಲ್ಲೇಖಗಳಿವೆ. ಸಾದಾಖ್ಯ (ಸದಾಶಿವ ತತ್ವ) ಗಳಲ್ಲಿ ಶಿವಸಾದಾಖ್ಯ ಎಂಬುದೊಂದಿರುವುದೆಂದೂ ಇದಕ್ಕೆ ಹೆಚ್ಚಿನದಾಗಿ ಶಿವತತ್ವ ಒಂದು ಉಂಟೆಂದೂ ಇನ್ನೊಂದು ಕಡೆಯಲ್ಲಿ ಆಗಮ ಬೋಧೆ ಇದೆ. ಪಂಚವಿಂಶತಿ ಲೀಲೆಗಳನ್ನು ಶಿವ



CC-0. Jangamwadi Math Collection, Varanasi. An eGangotri Initiative

ಅಥವಾ ಈಶ್ವರನು ಮಾಡಿದನೆಂದೂ ಪುರಾಣಗಳು ಹೇಳುತ್ತವೆ. ಸದ್ಯೋಜಾತ, ವಾಮದೇವ, ಅಘೋರ, ತತ್ಪುರುಷ, ಈಶಾನ ಎಂಬ ಪಂಚಮೂರ್ತಿ ಬ್ರಹ್ಮರು ಇರುವುದಾಗಿ ಉಪನಿಷತ್ತು ಹೇಳುತ್ತದೆ. ಬ್ರಹ್ಮ, ವಿಷ್ಣು, ರುದ್ರ, ಈಶ್ವರ, ಸದಾಶಿವ ಎಂದು ಪಂಚಮೂರ್ತಿಗಳು ಉಂಟೆಂದು ಒಂದು ಆಗಮವು ಹೇಳುತ್ತದೆ. ಕರ್ತೃಸಾದಾಖ್ಯ (ಸಾದಾಖ್ಯ ಎಂದರೆ ಸಂತತ ಶಿವಭಾವ ವನ್ನುಳ್ಳವು) ಎಂಬುದಕ್ಕೆ ಈಶ್ವರ ಎಂಬ ಹೆಸರಿರುವುದಾಗಿ ವಾತುಲಾಗಮದ ೧ ನೆಯ ಪಟಲವ ಲ್ಲಿದೆ. ಇದೇ ಆಗಮ ಪಟಲದಲ್ಲಿ ಶಿವ ಎಂದರೆ ಸೂಕ್ಷ್ಮನು, ಅಪ್ರಮಾಣನು, ಅನಾಮಯನು-ಇಂತಹ ಲಕ್ಷಣಗಳುಳ್ಳದೇ ಶಿವತತ್ವ ಎಂದಿವೆ. ಹೀಗೆ ಈಶ್ವರ ಎಂಬ ಪದದ ಉಪಯೋಗವು ಅನೇಕ ವಿಧಗಳಲ್ಲಿ ಪೂರ್ವಿಕರ ತಿಳಿವಳಿಕೆಯಲ್ಲಿ ಇದ್ದಂತೆ ಗೊತ್ತಾಗುತ್ತದೆ.

ಇಲ್ಲಿ ಶಿರೋಲೇಖದಲ್ಲಿ ಈಶ್ವರ ಎಂದು ಕೊಟ್ಟಿರುವುದು ಯಾರನ್ನು ದೇವ ಎಂಬದಾಗಿ ತಿಳಿಯಬೇಕೋ ಅವನೇ ಈಶ್ವರ ಎಂದು ಯೋಚಿಸುವದಾದರೆ-ಕೆಲವರು ಬ್ರಹ್ಮನನ್ನು ಈಶ್ವರ ಎಂದೂ ಕೆಲವರು ವಿಷ್ಣುವನ್ನು ಈಶ್ವರ ಎಂದೂ, ಕೆಲವರು ಸೂರ್ಯನನ್ನೂ, ಹಾಗೆಯೇ ಗಣಪತಿ ಯನ್ನೂ ವೀರಭದ್ರನನ್ನೂ ಷಣ್ಮುಖನನ್ನೂ, ಅದರಂತೆ ಲಕ್ಷ್ಮಿಯನ್ನೂ ಸರಸ್ವತಿಯನ್ನೂ ಮತ್ತು ದತ್ತಾತ್ರಯನನ್ನೂ, ಶ್ರೀರಾಮ ಮೊದಲಾದ ಇನ್ನೂ ಅನೇಕರನ್ನೂ ದೇವ ಅಥವಾ ದೇವತೆ ಎಂದು ತಿಳಿಯುತ್ತಿದ್ದರೆಂದು ನಮಗೆ ಹಿಂದೂ ಗ್ರಂಥಗಳಿಂದ ತಿಳಿದು ಬರುತ್ತದೆ. ಅನೇಕ ಸಾವಿರ ವರುಷಗಳಿಂದ ಹೀಗೆ ದೇವಭಾವನೆಯು ಬೆಳೆಯುತ್ತಾ ಅದಕ್ಕೆ ತಕ್ಕ ಗ್ರಂಥಗಳು ರಚಿಸ ಲ್ಪಡುತ್ತಾ ಇದ್ದುದರಿಂದಲೇ ಹಿಂದೂ ಗ್ರಂಥಗಳು ಬಂಡಿಗಟ್ಟಲೆಯಾಗಿ ಆಗಿವೆ. ಇವೆಲ್ಲವನ್ನೂ ಕೂಡಿಸಿ ನಿಜತತ್ವದ ಒಂದು ನಿರ್ಣಯವಾಗಿ ಜೀವಶಾಸ್ತ್ರವೊಂದು ಸಿದ್ಧವಾಗುವುದು ಅವಶ್ಯ ವಾಗಿದೆ. ಹಾಗಾದರೆ ಇದುವರೆಗೆ ತಿಳಿದ ವಿಷಯಗಳ ಜೊತೆಗೆ ಮುಂದಿನ ಬೋಧದ ವಿಷಯ ಗಳನ್ನು ಸೇರಿಸುವುದಕ್ಕೆ ಅವಕಾಶವಾಗುವುದು.

ಹಿಂದುಗಳು ೩೩ ಕೋಟಿ ದೇವತೆಗಳು ಉಂಟೆಂದು ನಂಬುವುದರಿಂದ ಇದರಲ್ಲಿ ಒಂದೊಂದು ವ್ಯಕ್ತಿಯನ್ನು ದೇವ ಅಥವಾ ದೇವತೆ ಎಂದೂ ಎಲ್ಲರನ್ನೂ ಕೂಡಿಸಿ ದೇವರೆಂದೂ ನಾವು ಕರೆದು ಇವರೆಲ್ಲರಿಗೂ ಪೂಜ್ಯನಾದ ಮಹಾದೇವನೊಬ್ಬನಿದ್ದಾನೆಂದು ತಿಳಿವುದು ಅತ್ಯವಶ್ಯಕ ವಾದ ವಿಷಯವಾಗಿದೆ. ಏಕೆಂದರೆ ದೇವತೆಗಳಲ್ಲಿ ಸಗುಣ, ನಿರ್ಗುಣ, ಅಥವಾ ಸಾಕಾರ, ನಿರಾಕಾರ ಎಂದು ಎರಡು ವಿಧವಾಗಿ ಇರುವುದೆಂದು ಶಾಸ್ತ್ರವು ಹೇಳುತ್ತದೆ. ಈ ಭೇದಗಳಲ್ಲಿ ಸಗುಣ ಅಥವಾ ಸಾಕಾರ ಎಂಬುದು ಅವಯವಗಳುಳ್ಳ ದೇವನೆಂದೂ ನಿರ್ಗುಣ ಅಥವಾ ನಿರಾಕಾರ ಎಂಬುದು ಅವಯವಗಳಿಲ್ಲದ ದೇವನೆಂದೂ ತಿಳಿಯಬೇಕಾಗಿರುವದು. ಇವರಲ್ಲಿ ಸಗುಣ ಅಥವಾ ಸಾಕಾರವೇ ಮೇಲೆ ಹೇಳಿದ ದೇವತೆಗಳು. ಸಗುಣ ಅಥವಾ ಸಾಕಾರಕ್ಕಿಂತಲೂ ನಿರ್ಗುಣ ನಿರಾಕಾರ ವಸ್ತುವು ಶ್ರೇಷ್ಠವೆಂದು ಹಿಂದು ಗ್ರಂಥಗಳು ಘಂಟಾಘೋಷವಾಗಿ ಸಾರಿಹೇಳುವುದ ರಿಂದ ನಿರಾಕಾರ ವಸ್ತುವೇ ಮಹಾದೇವನೆಂಬ ಹೆಸರಿಗೆ ತಕ್ಕುದಾದುದು. ಅವಯವಗಳುಳ್ಳ ದೇವ ಅಥವಾ ದೇವತೆಯನ್ನು ಮೂರ್ತಿಗಳ ರೂಪದಲ್ಲಿ ಅಥವಾ ಪ್ರತಿಮೆಗಳ ರೂಪದಲ್ಲಿ ಅಥವಾ ಪಟ (Photo) ಗಳ ರೂಪದಲ್ಲಿ ಪೂಜೆಮಾಡುವುದು ಬಾಲ ಪಾಠದಂತೆ ಇರುವುದೇ ಹೊರತು ತಿಳಿದ ಜ್ಞಾನಿಗಳ ಕೆಲಸವಲ್ಲ. ಹೀಗೆ ಮೂರ್ತಿಗಳ ಪೂಜೆಯು ಕಡಿಮೆಯ ತರಗತಿಯದೆಂದು



CC-0. Jangamwadi Math Collection, Varanasi. An eGangotri Initiative

ಭಾವಿಸುವುದಾದರೆ ಪಾರಮಾರ್ಥಿಕವನ್ನು ಬೋಧಿಸುವ ಹಿಂದು ಗ್ರಂಥಗಳ ಬಹಳ ಭಾಗವನ್ನು ಓದಿ ಮುಗಿಸಿದಂತಾಗುವುದು. ಏಕೆಂದರೆ ಈ ಮೂರ್ತಿ ಪೂಜೆಯ ಧಾರ್ಮಿಕ ಗ್ರಂಥಗಳೇ ಬಹಳ " ಅಜ್ಞಾನಾಂ ಭಾವನಾರ್ಥಾಯ ಪ್ರತಿಮಾಃ ಪರಿಕಲ್ಪಿತಾಃ " ಎಂದು ಜಾಬಾಲ ದರ್ಶನ ಎಂಬ ಉಪನಿಷತ್ತಿನ ಶ್ಲೋಕವಿದೆ. ಈ ಹೇಳಿಕೆಯೇ ಬಹಳ ಶ್ರೇಷ್ಠವಾದುದು.

ಇನ್ನು ನಿರಾಕಾರನಾದ ಮಹಾದೇವನ ವಿಷಯವನ್ನು ಯೋಚಿಸುವುದಾದರೆ ಆತ್ಮ, ಬ್ರಹ್ಮ, ಜಗತ್ತು, ಈ ವಿಷಯದ ವಿಚಾರವೇ ಬಹಳವಾಗಿ ಮುಂದೆ ಬಂದು ನಿಲ್ಲುತ್ತದೆ. ಇವುಗಳ ವಿಚಾರಕ್ಕೆ ಹೋಗಬೇಕೆಂಬ ಯೋಚನೆಯು ಬಂದಮೇಲೆ ವಿಷ್ಣುವು ಹೆಚ್ಚು, ರುದ್ರನು ಹೆಚ್ಚು ಲಕ್ಷ್ಮಿಯು ಹೀಗೆ ಮಾಡಿದಳು, ಸರಸ್ವತಿಯು ಹಾಗೆ ಮಾಡುವಳು ಪಾರ್ವತಿಯು ಪರ್ವತರಾಜನ ಮಗಳು, ಎಂಬಿವೇ ಮೊದಲಾದ ಪುರಾಣಗಳ ಅವಶ್ಯಕತೆಯೇ ಇಲ್ಲವಾಗುವುದು. ಈ ಪುರಾಣ ಗಳನ್ನು ಓದುವುದು ನಿಂತುಹೋದರೆ ಹಿಂದುಗಳು ಹೊತ್ತುಕೊಂಡಿರುವ ಪಾರಮಾರ್ಥಿಕ ನೆವದ ಜಗಳದ ಬಹುಭಾರವು ತಗ್ಗಿದಂತಾಗುವುದು. ಇದಲ್ಲದೆ ಈ ಪುರಾಣಗಳ ಅಘಟನ ಘಟನಾ ಸಂಗತಿಗಳೂ ಹಿಂದುಗಳ ಮೂಢ ನಂಬಿಗೆಯನ್ನು ಬೆಳೆಸುವದಕ್ಕೆ ಬಾರದಂತೆ ಆಗುವವು. (ಉದಾ ಹರಣೆಗೆ: ಶಿಲಾದಯ ಋಷಿಯು ಲಕ್ಷಗಟ್ಟಲೆ ವರ್ಷಗಳು ಬದುಕಿದ್ದನು, ಎಂಬುದು ಮುಂತಾಗಿ. )

ಉಪನಿಷತ್ತು, ಶಿವಾಗಮ ಇವುಗಳಲ್ಲಿ ಜೀವ, ಜಗತ್ತು, ಈಶ್ವರ - ಇವುಗಳ ವಿಷಯ ವಾಗಿ ಹೇಳಿದ ಅಂಶಗಳೇ ಬಹಳ ಇರುವವು. ಪುರಾಣಗಳನ್ನು ಓದಿ ಧಾರ್ಮಿಕ ಸಾರವನ್ನು ಗ್ರಹಿಸಲಿಕ್ಕೆ ಹೋಗುವುದು ಬಹಳ ಓದಿ ಸ್ವಲ್ಪ ತಿಳಿದುಕೊಂಡಂತೆ ಆಗುವುದು. ಶ್ರೇಷ್ಠವಾದ ವಿಷಯಗಳನ್ನು ಇವು ಹೇಳುವುದರಿಂದಲೇ ಇವುಗಳಲ್ಲಿನ ವಿದ್ಯೆಯು ಪರಾವಿದ್ಯೆ. ಎಂದು ಪೂರ್ವಿಕರು ಗೊತ್ತುಮಾಡಿರುತ್ತಾರೆ.

ಈ ಪರಾವಿದ್ಯೆಯ ಪ್ರಕಾರ ಹೇಳಲಿಕ್ಕೆ ಬಾರದಂತೆ ಇರುವವನೂ ಮನಸ್ಸಿನಿಂದ ತಿಳಿಯ ಲಿಕ್ಕೆ ಆಗದವನೂ ಆಗಿದ್ದ ಮೂಲವಸ್ತುವಿಗೆ ಹೆಸರು ಹೇಳಲಿಕ್ಕೆ ಬರುವಂತೆ ಇಲ್ಲವಾದುದರಿಂದ ಒಂದು ಹೆಸರಿನ ವಸ್ತುವನ್ನೇ ಪುನಃ ಹೇಳಬೇಕಾದರೆ ಅದು ಎಂಬ ಸರ್ವನಾಮಪದವನ್ನು ಉಪ ಯೋಗಿಸುವಂತೆ ಆ ಮೂಲವಸ್ತುವಿಗೆ ತತ್ ಎಂದು ಕರೆಯುತ್ತಾರೆ. ಈ ' ತತ್ ' ಎಂಬ ವಸ್ತು ವಿನ ಭಾವವನ್ನು ಕೂಡಿಕೊಂಡು ಮುಂದೆ ಆದ ವಸ್ತುಗಳೆಲ್ಲವೂ ತತ್+ತ್ವಮ್ ಎಂಬ ಹೆಸರನ್ನು ಹೊಂದತಕ್ಕವುಗಳು. ಈ ತತ್ವಗಳೇ ಪ್ರಾಣಿಗಳಂತೆ ಜ್ಞಾನವಿಲ್ಲದ ವಸ್ತುಗಳ ರೂಪವನ್ನು ಹೊಂದಿ ದರೆ ಭೂತ ಎಂದು ಹೆಸರು ಪಡೆಯುತ್ತವೆ. ಈ ಭೂತಗಳೇ ನೆಲ, ನೀರು, ಬೆಂಕಿ, ಗಾಳಿ, ಬಯಲು. ಇವುಗಳಲ್ಲಿ ಒಂದನ್ನೇ ಮಹಾಭೂತ ಎಂತಲೂ ಕರೆದಿರುತ್ತಾರೆ. ಈ ತತ್ ಎಂಬ ವಸ್ತುವಿನ ರೂಪವೇ ನೀನು ಆಗಿರುತ್ತೀ ಎಂಬ ಅರ್ಥವುಳ್ಳ (ತತ್+ತ್ವಮ್+ಅಸಿ)= ತತ್ತ್ವ ಮಸಿ) ಎಂಬ ಪದದ ವಿಚಾರಮಾಡಿ ಮಹಾದೇವನ ಅನುಭಾವದ ವಿಷಯದ ವಿಚಾರವನ್ನು ತಿಳಿಯಬೇಕೆಂದು ಹಿಂದು ಗ್ರಂಥಗಳಲ್ಲಿ ಚನ್ನಾಗಿ ವಿವರಿಸಲ್ಪಟ್ಟಿರುತ್ತದೆ.

ಈ ಮೊದಲು ಬ್ರಹ್ಮ ಎಂದು ಹೇಳಲ್ಪಟ್ಟ ಜಗತ್ತಿನ ರೂಪವಾಗಿರುವ ವಸ್ತುವಿಗಿಂತಲೂ (ಬ್ರಹ್ಮಾಂಡಕ್ಕಿಂತಲೂ) ಸೂಕ್ಷ್ಮವಾಗಿ ಇರುವುದೆಂದು ಹೇಳಲ್ಪಟ್ಟ ಶಿವ ಎಂಬ ವಸ್ತುವೂ ಕೂಡಾ



CC-0. Jangamwadi Math Collection, Varanasi. An eGangotri Initiative

ಒಂದು ತತ್ತ್ವವಾಗಿದೆ; ಬ್ರಹ್ಮ ಎಂಬುವೂ ಒಂದು ತತ್ತ್ವವಾಗಿ ಇರುತ್ತದೆ. ಇವುಗಳಲ್ಲಿಯೇ ತತ್ ಎಂಬ ವಸ್ತುವನ್ನಾಗಲಿ ಶಿವ ಎಂಬ ವಸ್ತುವನ್ನಾಗಲಿ ತೋರಿಸಲಿಕ್ಕೆ ಅಥವಾ ಒಂದೇ ಹೆಸರಿಡಲಿಕ್ಕೆ ಬರುವುದಿಲ್ಲ. ಏಕೆಂದರೆ ಅವು ಕೇವಲ ಸೂಕ್ಷ್ಮರೂಪಗಳು. ( ಇಲ್ಲಿ ಬ್ರಹ್ಮ ಎಂಬಲ್ಲಿ ನಾಲ್ಕು ಮುಖದ ಮೂರ್ತಿಯಾದ ಬ್ರಹ್ಮನನ್ನಾಗಲಿ ಶಿವ ಎಂಬಲ್ಲಿ ಐದು ಮುಖದ ಮೂರ್ತಿಯಾದ ಶಿವನನ್ನಾಗಲಿ ಹೇಳಿಲ್ಲವೆಂಬುದನ್ನು ಚೆನ್ನಾಗಿ ನೆನಪಿನಲ್ಲಿಡಬೇಕು. ) ಈ 'ತತ್' ಎಂಬ ವಸ್ತುವನ್ನೇ ವೀರಶೈವರು 'ಶೂನ್ಯ' ಎಂದು ಕರೆದಿರುತ್ತಾರೆ.

ಜಗತ್ತಿನ ರೂಪನಾದ ಬ್ರಹ್ಮನನ್ನು ಒಂದು ರೂಪವುಳ್ಳವನೆಂದು ಮನುಷ್ಯನ ಕಣ್ಣುಗಳಿಂದ ಗ್ರಹಿಸಲಿಕ್ಕೆ ಬರುವಂತೆ, ಅದೇ ರೂಪವುಳ್ಳ ಲಿಂಗವನ್ನೂ 'ಬ್ರಹ್ಮ' ಎಂದು ತಿಳಿಯಬೇಕೆಂದು ವೀರಶೈವರು ನಂಬುತ್ತಾರೆ. ಐದು ಭೂತಗಳನ್ನು ಒಳಗೊಂಡು ಒಂದು ದೊಡ್ಡ ಕೊಪ್ಪರಿಗೆಯಿಂದ ಮುಚ್ಚಲ್ಪಟ್ಟಿರುವಂತೆ ಬ್ರಹ್ಮಾಂಡವು ಹೇಗೆ ಕಾಣುವುದೋ ಹಾಗೆ ಐದು ತತ್ತ್ವಗಳನ್ನು ( ಪಂಚಸೂತ್ರಗಳನ್ನು ) ಒಳಗೊಂಡು ನೀಲಿಯ ಬಣ್ಣದ ಕಂಥೆಯಿಂದ ಹೊದಿಸಲ್ಪಟ್ಟ ಲಿಂಗವು ಬ್ರಹ್ಮನ ರೂಪವಾಗಿದೆ ಎಂದು ತಿಳಿಯುತ್ತಾರೆ. ಲಿಂಗದ ವಿಷಯದಲ್ಲಿ ಸೂಕ್ಷ್ಮಾಗಮದ ಆರನೆಯ ಪಟಲದಲ್ಲಿ:

ಲೀನಂ ಪ್ರಪಂಚರೂಪಂ ಹಿ ಸರ್ವಮೇತಚ್ಚರಾಚರಂ ।
ಸರ್ಗಾದೌ ಗಮ್ಯತೇ ಭೂಯಸ್ತಸ್ಮಾಲ್ಲಿಂಗಮುದೀರಿತಂ ॥

* * * *

ನಿರಾಮಯಂ ನಿರಾಕಾರಂ ನಿರ್ಗುಣಂ ನಿರ್ಮಲಂ ಶಿವಂ ।

* * * *

ತಸ್ಮಾಲ್ಲಿಂಗಂ ಪರಂ ಬ್ರಹ್ಮ ಸಚ್ಚಿದಾನಂದಲಕ್ಷಣಂ ।

" ಪ್ರಪಂಚರೂಪವಾದ ಚರಾಚರ ವಸ್ತುವೆಲ್ಲವೂ ಇದರಲ್ಲಿ ಲೀನವಾಗಿರುವುದರಿಂದಲೂ ಸೃಷ್ಟಿ ಕಾಲದಲ್ಲಿ ಪುನಃ ತೋರಿಬರುವುದರಿಂದಲೂ ಇದಕ್ಕೆ ಲಿಂಗ ಎಂದು ಹೇಳುತ್ತಾರೆ. ಇದು ದೋಷವಿಲ್ಲದುದೂ ಆಕಾರವಿಲ್ಲದುದೂ ಗುಣವಿಲ್ಲದುದೂ ಮಲಗಳಿಲ್ಲದುದೂ ಆಗಿರುತ್ತದೆ. ಈ ಕಾರಣದಿಂದ ಲಿಂಗವು ಸಚ್ಚಿದಾನಂದಲಕ್ಷಣವುಳ್ಳ ಪರಬ್ರಹ್ಮವಾಗಿದೆ " ಎಂದು ಹೇಳಿದೆ.

ಒಬ್ಬ ಉಪಾಧ್ಯಾಯನು ದೊಡ್ಡ ಭೂಮಿಯನ್ನು ತನ್ನ ವಿದ್ಯಾರ್ಥಿಗೆ ತೋರಿಸಲಿಕ್ಕಾಗದೆ ಇರುವುದರಿಂದ ಭೂಗೋಲದ ರೂಪವನ್ನು (Globe) ಮುಂದಿಟ್ಟು ಇದು ಭೂಮಿಯ ರೂಪವೆಂದು ತೋರಿಸುವಂತೆ-ಲಿಂಗವು ಬ್ರಹ್ಮಾಂಡದ ರೂಪವೆಂದು ತೋರಿಸಲಿಕ್ಕೆ ಬರುವಂತೆ ಇದೆ. ಪ್ರಾಣಿಗಳಿಗಿಂತ ಹೆಚ್ಚಿನ ಗುಣಗಳುಳ್ಳ ಮನುಷ್ಯನಲ್ಲಿ ಇರುವ ಚಿತ್ತಕ್ಕೆ ಅಥವಾ ಬುದ್ಧಿಗೆ ಪಂಚಭೂತಗಳು (ಭೂಮಿ ಮೊದಲಾದುವು) ತನ್ನ ದೇಹದಲ್ಲಿ ಇರುವುವೆಂದು ಗೊತ್ತಾಗುತ್ತದೆ. ಭೂಮಿಯಂತೆ ಕಠಿಣ ರೂಪದ ಎಲುಬು, ನೀರಿನಂತೆ ದ್ರವ ರೂಪದ ರಕ್ತ, ಬೆಂಕಿಯಂತೆ ಇರುವ ದೇಹದ ಉಷ್ಣ, ಗಾಳಿಯಂತೆ ದೇಹದಲ್ಲಿ ಇರುವ ಉಚ್ಛ್ವಾಸ ನಿಶ್ವಾಸಗಳು, ಆಕಾಶದಂತೆ ಇರುವ ನಾದ (ಧ್ವನಿ)- ಇವು ದೇಹದಲ್ಲಿ ಇರುವುದರಿಂದ ತನ್ನನ್ನೇ ಬ್ರಹ್ಮನೆಂದು ತಿಳಿಯಬೇಕು. ತಾನು ಬದುಕಿರುವಾಗ ತನ್ನಲ್ಲಿರುವ ಭೂತಗಳು ಜ್ಞಾನದೊಡನೆ ಇರುವುದನ್ನು ಚೆನ್ನಾಗಿ ತಿಳಿಯಬಹುದಾದು



CC-0. Jangamwadi Math Collection, Varanasi. An eGangotri Initiative

ದರಿಂದ ಇವಕ್ಕೆ ತತ್ತ್ವ ಎಂಬ ಹೆಸರನ್ನು ಕೊಟ್ಟು ಪೃಥ್ವಿ, ಜಲ, ಅಗ್ನಿ, ವಾಯು, ಆಕಾಶ ಎಂಬ ಐದು ತತ್ತ್ವ(ಮೂಲವಸ್ತುವಿನ ಭಾಗ)ಗಳು ಇರುವುವೆಂದು ಹಿಂದುಗಳು ತಿಳಿಯುತ್ತಾರೆ.

ಯಾವನಾದರೊಬ್ಬನು ಯಾವಾಗ ನಾನು ಬ್ರಹ್ಮರೂಪನಿರುವೆನೆಂದು ತಿಳಿಯುವನೋ ಆಗ ಅವನು ಜ್ಞಾನಿಯು. ಜ್ಞಾನ ಎಂದರೆ ಈ ತಿಳಿವಳಿಕೆಯೇ. ಇದಿಲ್ಲದೆ ಪ್ರಾಪಂಚಿಕ ವಿದ್ಯೆಗಳನ್ನು ಬಹಳ ಓದಿ 'ಕಲಾವಿದ್ಯೆ' (B. A., M. A.) ಮೊದಲಾದವುಗಳಲ್ಲಿ ತೇರ್ಗಡೆಯನ್ನು ಹೊಂದಿದಾಗ್ಯೂ ಅವನನ್ನು ಜ್ಞಾನವುಳ್ಳವನೆಂದು ಹಿಂದೂ ಶಾಸ್ತ್ರವು ಹೇಳುವುದಿಲ್ಲ. ಪ್ರಾಪಂಚಿಕ ಜ್ಞಾನಕ್ಕೆ ಎಂದರೆ, ನಾನು ಮನುಷ್ಯ, ನಾನು ಇದ್ದೇನೆ, ನನಗೆ ಅದು ಬೇಕು, ಈ ಭೂಮಿಯು ನನಗಿಂತಲೂ ಬೇರೆಯಾಗಿದೆ- ಹೀಗೆ ತಿಳಿಯುವದಕ್ಕೆ ಜ್ಞಾನ ಎಂಬುದಾಗಿ ಕೆಲವು ಕಡೆಯಲ್ಲಿ ಹೇಳಲ್ಪಟ್ಟಿದ್ದರೂ ಮತ್ತೊಂದೆಡೆಯಲ್ಲಿ ಬ್ರಹ್ಮರೂಪನೇ ತಾನು ಎಂದು ತಿಳಿವುದು ಸುಜ್ಞಾನ ಎಂಬ ಸಾಂಕೇತಿಕ ಪದವನ್ನು ಹೊಂದಿರುವುದು ಎಂದೂ, ಇಂತಹ ತಿಳಿವಳಿಕೆ ಹೊಂದಿದವನನ್ನು ಸುಜ್ಞಾನಿ ಎಂದೂ ತಿಳಿದಿರಬೇಕೆಂದು ಬೋಧೆಯು ತೋರಿರುತ್ತದೆ. ಆದುದರಿಂದ ಜ್ಞಾನಿ, ಸುಜ್ಞಾನಿ ಈ ಎರಡನ್ನೂ ಒಂದೇ ಅಭಿಪ್ರಾಯವುಳ್ಳವುಗಳೆಂದು ಗ್ರಹಿಸಬಹುದು. ಆಮೇಲೆ ಜಗತ್ತೂ ಬ್ರಹ್ಮ ರೂಪವೆಂದು ತಿಳಿವುದೇ ಮಹಾಜ್ಞಾನ. ಪಾರಮೇಶ್ವರಾಗಮ ೭ ನೆಯ ಪಟಲ ೭೨ ನೆಯ ಶ್ಲೋಕದಲ್ಲಿ :

"ಜಗತ್ ತದಾತ್ಮಕಂ ಜ್ಞಾನಂ ಮಹಾಜ್ಞಾನಮಿತೀಶ್ವರೀ"

ಎಂದು ಶಿವನು ಪಾರ್ವತಿಗೆ ಹೇಳಿದುದುಂಟು.

ಇನ್ನು ಜಗತ್ತು, ಆತ್ಮ, (ಜೀವ) ಶಿವ, ಈ ಮೂವರೂ ಒಂದೇ ಎಂದು ತಿಳಿವುದು ಸಮ್ಯಕ್‌ಜ್ಞಾನ. ಈ ಜ್ಞಾನವನ್ನು ಹೊಂದಿದವನೇ ಸಮ್ಯಕ್‌ಜ್ಞಾನಿ. ಪಾರಮೇಶ್ವರಾಗಮ ೬ ನೆಯ ಪಟಲದಲ್ಲಿ ಸಮ್ಯಕ್‌ಜ್ಞಾನಿಯ ಲಕ್ಷಣವನ್ನು ಹೀಗೆ ಹೇಳಿರುತ್ತಾರೆ:

ಯೇನ ಭೂತಾನ್ಯಶೇಷಾಣಿ ದ್ರಕ್ಷ್ಯತ್ಯಾತ್ಮನ್ಯಥೋ ಮಯಿ ।
ಪ್ರತ್ಯಯ ತ್ರಿತಯೈಕ್ಯೇನ ಸಮ್ಯಕ್‌ಜ್ಞಾನೀ ಸ ಚಾಸ್ಮ್ಯಹಂ ॥೫೭॥
ಚರಚರಾತ್ಮಕಂ ಸರ್ವಂ ಭಾವಯನ್ ಪರಮಾತ್ಮನಃ ।
ಮಮ ರೂಪಂ ಮಹೇಶಾನಿ ಸಮ್ಯಕ್‌ಜ್ಞಾನೀ ಸ ಉಚ್ಯತೇ ॥೫೮॥

"ಯಾವನಿಂದ ಸಮಸ್ತ ಭೂತ (ಪ್ರಾಣಿ) ಗಳೂ ಆತ್ಮನಲ್ಲಿ ಅನಂತರ ನನ್ನಲ್ಲಿ ನೋಡಲ್ಪಡುವುವೋ ಆತನು ಈ ಮೂರು ಜ್ಞಾನಗಳ ಐಕ್ಯತೆಯಿಂದ ಸಮ್ಯಕ್‌ಜ್ಞಾನಿಯಾಗುತ್ತಾನೆ. ಅವನೇ ನಾನು. ಚಿರಸ್ಥಿರಾತ್ಮಕವಾದ ಸರ್ವವನ್ನೂ ಶ್ರೇಷ್ಠನಾದ ಆತ್ಮನ ಮತ್ತು ನನ್ನ ರೂಪವೆಂದು ಭಾವಿಸುವವನು ಸಮ್ಯಕ್‌ಜ್ಞಾನಿ ಎಂದು ಹೇಳಲ್ಪಡುತ್ತಾನೆ." ಈ ಸಮ್ಯಕ್‌ಜ್ಞಾನವನ್ನು ಪಡೆಯಲಿಕ್ಕೆ ಮೊದಲು ಶಿವಜ್ಞಾನವನ್ನುಹೊಂದಬೇಕೆಂದೂ ಆ ಆಗಮವು ಬೋಧಿಸುತ್ತದೆ.

ನಾನು ಬ್ರಹ್ಮನಿದ್ದೇನೆ ಎಂಬಲ್ಲಿ ಕೂಡಿಕೊಂಡಿರುವ ನಾನು ಎಂಬ ಭಾವವನ್ನು ಬಿಟ್ಟು ಸರ್ವವ್ಯಾಪಿಯಾದ, ಸೂಕ್ಷ್ಮರೂಪಿಯಾದ ಶಿವನೇ ಎಂದು ತಿಳಿದಿರುವುದೇ ಶಿವಜ್ಞಾನವು. ಇದನ್ನು ಉಳ್ಳವನೇ ಶಿವಜ್ಞಾನಿಯು.



CC-0. Jangamwadi Math Collection, Varanasi. An eGangotri Initiative

ನಿರಸ್ತದರ್ಪಸಂಬದ್ಧಃ ಶಿವಜ್ಞಾನರತೋಭವೇತ್ ।
ತೇನ ಶೀಘ್ರಂ ಗಿರಿಸುತೇ ಸಮ್ಯಕ್‌ಜ್ಞಾನಂ ತತೋ ಭವೇತ್ ॥

(ಪಾರಮೇಶ್ವರಾಗಮ ೬ನೆಯ ಪಟಲ ಶ್ಲೋಕ ೫೬)

“ಗರ್ವದಿಂದ ಕೂಡಿರುವಿಕೆಯನ್ನು ಹೊರಗೆ ಹೊಡೆದೋಡಿಸಿದರೆ ಶಿವಜ್ಞಾನದಿಂದ ಕೂಡಿದವನಾಗುತ್ತಾನೆ. ಈ ಶಿವಜ್ಞಾನದಿಂದ ಮುಂದೆ ಸಮ್ಯಕ್‌ಜ್ಞಾನವು ಉಂಟಾಗುತ್ತದೆ.” ಇಲ್ಲಿ ಶಿವಜ್ಞಾನವೆಂದರೆ-ಗರ್ವದಿಂದ ಕೂಡಿಕೊಂಡಿರುವುದನ್ನು ಚದುರಿಸುವದು ಹೇಗೆ ಎಂಬುದನ್ನು ಕೆಳಗೆ ಬರೆದ ಲಕ್ಷಣಗಳಿಂದ ವಿವರಿಸಿರುತ್ತಾರೆ.

ಶಿವನಿಗೆ ಸರ್ವಜ್ಞ ಶಕ್ತಿ, ನಿತ್ಯತೃಪ್ತಿ ಶಕ್ತಿ, ಅನಾದಿ ಬೋಧ ಶಕ್ತಿ, ಸ್ವತಂತ್ರ ಶಕ್ತಿ, ಅಲುಪ್ತ ಶಕ್ತಿ, ಅನಂತ ಶಕ್ತಿ ಎಂಬ ಆರು ಶಕ್ತಿಗಳಿರುತ್ತವೆ.

ಶಿವಜ್ಞಾನವನ್ನು ಹೊಂದಬೇಕೆಂದಿರುವವನಿಗೆ ಸರ್ವಜ್ಞ ಶಕ್ತಿಯ ಚಲನವಲನದಿಂದ ಶಿವಭಕ್ತಿಯು ಹುಟ್ಟುವುದು. (ಇದೇ ಭಕ್ತಸ್ಥಲ). ಮುಂದೆ ನಿತ್ಯತೃಪ್ತಿ ಶಕ್ತಿಯ ನಟನೆಯಿಂದ ಕರ್ಮನಾಶವಾಗುವುದು. (ಇದೇ ಮಹೇಶ್ವರ ಸ್ಥಲ). ಆಮೇಲೆ ಅನಾದಿ ಬೋಧ ಶಕ್ತಿಯ ದೆಸೆಯಿಂದ ಶಿವಬುದ್ಧಿ (ಶಿವನ ತಿಳಿವಳಿಕೆ) ಯು ಆಗುವುದು. (ಇದೇ ಪ್ರಸಾದಿಸ್ಥಲ). ಅನಂತರ ಸ್ವತಂತ್ರ ಶಕ್ತಿಯ ಕಾವ್ಯದಿಂದ ಶಿವನ ವಿಚಾರವು ಹುಟ್ಟುವುದು (ಇದೇ ಪ್ರಾಣಲಿಂಗಿ ಸ್ಥಲ) ತರುವಾಯ ಅಲುಪ್ತ ಶಕ್ತಿಯ ವರ್ತನದಿಂದ ಗರ್ವವು ನಾಶವಾಗುವುದು (ಇದೇ ಶರಣ ಸ್ಥಲ). ಹೀಗೆ ಹೇಳಿರುವುದರಿಂದ ವೀರಶೈವರಲ್ಲಿ ಶರಣ ಸ್ಥಲದ ಲಕ್ಷಣವನ್ನು ಹೊಂದಿ ಆಚರಿಸುವವನಿಗೆ ಗರ್ವನಾಶವಾಗಿ ಶಿವಜ್ಞಾನವು ಬಂದಿತೆಂದು ಭಾವಿಸಬೇಕಾಗುತ್ತದೆ.

ಇಲ್ಲಿ ಗರ್ವವೆಂದರೆ ಅಹಂಕಾರ ಮಮಕಾರಗಳು. ಇವುಗಳನ್ನು ಬಿಟ್ಟು ಯಾವನು ಸೂಕ್ಷ್ಮರೂಪವಾದ ಶಿವನ ಪರಮಾಣು (ಇನ್ನೂ ಸಣ್ಣ ಅಣುವಿದ್ದರೆ ಆ ಅಣು) ರೂಪವೇ ಈ ಲೋಕದ ಸುಖವನ್ನನುಭವಿಸುವವನು, ಆ ಅಣುರೂಪ ಆತ್ಮನೇ ನಾನು ಎಂದು ತಿಳಿವಲ್ಲಿ ಆ ಶಿವನ ಅನುಭಾವವು ಉಂಟಾಗುವುದು. ಇದೇ ಶಿವಜ್ಞಾನವು.

ಬ್ರಹ್ಮನೇ ನಾನು ಎಂದು ತಿಳಿವಳಿಕೆಯನ್ನು ಮಾತ್ರ ಹೊಂದಿದವನು ಬ್ರಹ್ಮಜ್ಞಾನಿಯು. ಆದರೆ ಶಿವನೇ ನಾನು ಎಂಬ ಭಾವನೆಯುಳ್ಳವನು ವೀರಶೈವನು. “ಶಿವೋಽಹಂ ಭಾವನಾ ಧೀರೋ” ಎಂಬ ಶ್ಲೋಕವನ್ನು ಮೇಲೆ ತೋರಿಸಿದೆ. ಇಲ್ಲಿ ಜ್ಞಾನಕ್ಕೂ ಭಾವನೆಗೂ ವ್ಯತ್ಯಾಸವಿದೆ.

“ಜ್ಞಾನಾನಾಂ ಭಾವನಾಖಿಲಾ”

ಎಂದು ಆಗಮ ಪ್ರಮಾಣವೂ ಇದೆ. ಜ್ಞಾನಗಳಲ್ಲಿ ಭಾವನೆಯೇ ಸರ್ವಸ್ವವು ಎಂದು ಇದರ ತಾತ್ಪರ್ಯ. ಭಾವನೆ ಎಂದರೆ ಸಹವರ್ತನೆಯು.

“ಸಹಾನುಭಾವಾ ಯಾ ಸೇವಾ ಸಾ ಭಕ್ತಿರಿತಿ ಕಥ್ಯತೇ”



CC-0. Jangamwadi Math Collection, Varanasi. An eGangotri Initiative

ಎಂಬುದೇ ವೀರಶೈವರ ತಿಳಿವಳಿಕೆ, ಎಂದರೆ ಶಿವನೊಡನೆ ಅವನನ್ನು ಅನುಸರಿಸಿಕೊಂಡು ಇರುವಿಕೆಯು ಯಾವುದೋ ಅದು ಶಿವಭಕ್ತಿಯು ಎಂದು ವೀರಶೈವರು ತಿಳಿಯುತ್ತಾರೆ. ಆದುದರಿಂದಲೇ ಜ್ಞಾನಕ್ಕಿಂತಲೂ ಭಾವನೆಯು ದೊಡ್ಡದಾದುದು. ಯಾವ ಜ್ಞಾನವು ಆಗಿದೆಯೋ ಅದರಂತೆ ನಡೆಯುವುದು ಅನುಭಾವವು. ( ಇದೇ ಭಾವನೆಯು. )

ಇಂತಹ ಶಿವಭಾವನೆಯೊಡನೆ ಕೂಡಿದ ಶರಣಸ್ಥಲವೇ ಶಿವಜ್ಞಾನಿಯಾಗುವುದರ ಸಾಧನೆಯು. ಇಲ್ಲಿಯೂ ಜ್ಞಾನಶಬ್ದವು ಉಪಯೋಗಿಸಲ್ಪಟ್ಟಿತೆಂದು ಆಕ್ಷೇಪಿಸುವುದಾದರೆಪಾರಮೇಶ್ವರಾಗಮದಲ್ಲಿ ಶರಣಸ್ಥಲದ ಮುಂದಿನ ಐಕ್ಯಸ್ಥಲವನ್ನು ಹೇಳುವಾಗ ಅನಂತ ಶಕ್ತಿಯು ಸಮ್ಯಕ್ ಜ್ಞಾನವನ್ನು ಕೊಡುತ್ತದೆ. ("ಅನಂತಶಕ್ತಿರಿತಿ ಮೇ ಸಮ್ಯಕ್‌ಜ್ಞಾನಂ ದದಾತಿ ಸಾ") ಎಂದು ಹೇಳುವುದರಿಂದಲೂ ಸಮ್ಯಕ್‌ಜ್ಞಾನದ ಉಪಾಂಗಗಳಾಗಿ ಆರು ಸ್ಥಲಗಳಿರುವುವೆಂದು ಹೇಳಿರುವುದರಿಂದಲೂ ಇವುಗಳಲ್ಲಿ ಮೊದಲನೆಯದಾದ ಭಕ್ತಿ ಎಂಬುದೇ ಸಹಾನುಭಾವಸೇವೆ ಎಂದು ಹೇಳಿರುವುದರಿಂದಲೂ ಸಮ್ಯಕ್‌ಜ್ಞಾನದಲ್ಲಿ ಸರ್ವವೂ ಶಿವನೇ ಎಂಬ ಭಾವವು ಉಂಟಾಗಿ, ಕೊಡುವವನೂ ಶಿವನೇ, ಕೊಳ್ಳುವವನೂ ಶಿವನೇ, ಕೊಡತಕ್ಕ ಪದಾರ್ಥವೂ ಶಿವನೇ ಆಗಿ, ಜ್ಞಾತೃ, ಜ್ಞಾನ, ಜ್ಞೇಯ ಎಂಬ ತ್ರಿಪುಟಿ ಜ್ಞಾನವು ನಷ್ಟವಾಗುವುದರಿಂದಲೂ ಶಿವನ ಸಹಜ ವರ್ತನನೇ ಆಗಿಬಿಡುವುದರಿಂದಲೂ ಶಿವಜ್ಞಾನ ಮತ್ತು ಸಮ್ಯಕ್‌ಜ್ಞಾನಗಳು ವೃತ್ತಿ ( ನಡತೆ ) ಯೊಡನೆ ಕೂಡಿದುವುಗಳೆಂದು ನಿಸ್ಸಂಶಯವಾಗಿ ನಿರ್ಧರಿಸಬಹುದು.

ಅದ್ವೈತಿಗಳು ಜ್ಞಾನದಲ್ಲಿ ಮಾತ್ರ ಅದ್ವೈತ (ಸರ್ವವೂ ಒಬ್ಬನೇ ಬ್ರಹ್ಮ ಎಂಬ ಜ್ಞಾನ) ವಿರಬೇಕೆಂತಲೂ ಕ್ರಿಯೆಯಲ್ಲಿ ದ್ವೈತ ( ನಾನಾ ವಸ್ತುಗಳಿರುವುವೆಂಬ ಭೇದವಿರಬೇಕೆಂತಲೂ ತಿಳಿದುಕೊಂಡಿರುತ್ತಾರೆ. ) ಇದಕ್ಕೆ ಪ್ರಮಾಣವಾಗಿ :

'ಕ್ರಿಯಾದ್ವೈತಂ ನ ಕರ್ತವ್ಯಂ ಭಾವಾದ್ವೈತಂ ಸಮಾಚರೇತ್'

ಎಂದರೆ ಕ್ರಿಯೆಯ ಅದ್ವೈತವನ್ನು ಮಾಡಬಾರದು, ಭಾವದ ಅದ್ವೈತವನ್ನು ಆಚರಿಸಬೇಕು– ಹೀಗೆ ಉಂಟೆಂದು ಹೇಳುತ್ತಾರೆ. ಆದರೆ ಈ ಶ್ಲೋಕದ ಅರ್ಥವು ಹಾಗಲ್ಲ. ಹಾಗಾದರೆ ನುಡಿಯೊಳಗೊಂದು ವಿಧ, ನಡೆಯೊಳಗೊಂದು ವಿಧ ಆಗುತ್ತದೆ. ಆದುದರಿಂದ ಹಾಗೆ ಮಾಡಬಾರದು.

ಕ್ರಿಯೆಯಿಂದ ಅದ್ವೈತವನ್ನಾಚರಿಸಲಿಕ್ಕೆ ಎಂದಿಗೂ ಬರುವುದಿಲ್ಲ. ಎಂದರೆ ಉಪ್ಪೂ ಸಕ್ಕರೆಯೂ ಒಂದೇ ಎಂಬುದಾಗಿ ಉಪ್ಪಿನ ಬದಲಾಗಿ ಸಕ್ಕರೆಯನ್ನು ಹಾಕಿ ಅಡಿಗೆ ಮಾಡಲಿಕ್ಕೆ ಬರುವುದಿಲ್ಲ. ಆದರೆ ಭಾವದಿಂದ ಅದ್ವೈತವನ್ನು ಆಚರಿಸಬೇಕು. ಎಂದರೆ ಶಿವಾನುಭಾವದಲ್ಲಿ ತಿಳಿಯಬೇಕಾದ ಶಿವನ ರೂಪಗಳಲ್ಲಿ ಒಂದೊಂದು ಬೇರೆಯಾಗಿದ್ದು, ಇವು ಕೊನೆಯಲ್ಲಿ ಒಂದೇ ಆಗಿ ಉಳಿಯುವುವು–ಎಂಬ ಪರಿಣಾಮವಾದದ ಅದ್ವೈತದ ಆಚರಣೆಯನ್ನು ಮಾಡಬೇಕು, ಶಿವನ ಒಂದೊಂದು ರೂಪದ ಕೆಲಸವೂ, ಪ್ರಯೋಜನವೂ ಬೇರೆ ಬೇರೆ ಎಂದು ತಿಳಿದಾಚರಿಸಬೇಕು, ಎಂಬುದೇ ಈ ಶ್ಲೋಕದ ಸರಿಯಾದ ಅಭಿಪ್ರಾಯವು, ಎಂದು ವೀರಶೈವರು ಹೇಳುತ್ತಾರೆ. ಇದಕ್ಕೆ ತಕ್ಕಂತೆ ಅವರ ವರ್ತನವೂ ಇದೆ. ಅವರು ಭೂಮಿಯನ್ನು ಆಚಾರಲಿಂಗವೆಂದೂ, ನೀರನ್ನು ಗುರುಲಿಂಗವೆಂದೂ, ಅಗ್ನಿಯನ್ನು ಶಿವಲಿಂಗವೆಂದೂ, ವಾಯುವನ್ನು



CC-0. Jangamwadi Math Collection, Varanasi. An eGangotri Initiative

ಜಂಗಮಲಿಂಗವೆಂದೂ, ಆಕಾಶವನ್ನು ಪ್ರಸಾದಲಿಂಗವೆಂದೂ, ಆತ್ಮನನ್ನು ಮಹಾಲಿಂಗವೆಂದೂ ತಿಳಿಯುತ್ತಾರೆ, ಮತ್ತು ಹಾಗೆಯೇ ನಡೆಯುತ್ತಾರೆ. ಇವೆಲ್ಲ ಕೊನೆಯಲ್ಲಿ ಒಂದೇ ಎಂದು ತಿಳಿಯುತ್ತಾರೆ. ಆಗ ನಡೆಯೂ ನುಡಿಯೂ ಒಂದೇ ಆಗುತ್ತದೆ. ನುಡಿಯಂತೆಯೇ ನಡೆ ಇರಬೇಕು. ಅದೂ ಕೂಡಾ ಲಿಂಗದೊಳು ನಡೆನುಡಿ ಇರಬೇಕು ಎಂಬುದು ವೀರಶೈವರ ಮುಖ್ಯ ಧ್ಯೇಯ.

ಸಮ್ಯಕ್‌ಜ್ಞಾನದ ನಡತೆಯು ಇವರಲ್ಲಿ ಸಿದ್ಧವಾಗಿದೆ ಎಂಬದನ್ನು ತೋರಿಸಲಿಕ್ಕೆ ಇವರ ಇಷ್ಟಲಿಂಗಧಾರಣೆಯೇ ಹೆಗ್ಗುರುತು. ಹೇಗೆಂದರೆ ಜಗತ್ತಿನಲ್ಲಿ ಆರು ಭೂತಗಳಿರುವಂತೆ ಲಿಂಗದಲ್ಲಿ ಕೆಳಗಿನ ವೃತ್ತವೇ ಆಚಾರಲಿಂಗ, ಅದರ ಮೇಲಿನ ತಗ್ಗಿನ ಪ್ರದೇಶವೇ ಗುರುಲಿಂಗ, ಅದರ ಮೇಲಣ ವೃತ್ತವೇ ಶಿವಲಿಂಗ, ಗೋಮುಖವೇ ಜಂಗಮಲಿಂಗ, ನಾಳವೇ ಪ್ರಸಾದಲಿಂಗ, ಬಾಣವೇ ಮಹಾಲಿಂಗ. ಹೊರಗೆ ಆರು ಭಾಗಗಳು ಕೂಡಿ ಜಗತ್ತು (ಬ್ರಹ್ಮಾಂಡ) ಎನಿಸಿಕೊಂಡಿರುವಂತೆ, ಈ ಆರು ಲಿಂಗಗಳು ಕೂಡಿ ಇಷ್ಟಲಿಂಗವೆನಿಸಿಕೊಂಡಿವೆ. ಜಗತ್ತು ಪ್ರತ್ಯೇಕವಾಗಿ ತೋರುವಂತೆ ಇಷ್ಟಲಿಂಗವೂ ಪ್ರತ್ಯೇಕವಾಗಿ ತೋರುತ್ತದೆ. ಜಗತ್ತು ತನಗೆ ಸಂಬಂಧಿಸಿರುವಂತೆ ಇಷ್ಟಲಿಂಗವೂ ಸಂಬಂಧಿಸಿರುತ್ತದೆ. 'ಲಿಂಗರೂಪಂ ಜಗದ್ರೂಪಂ' ಎಂಬ ಪ್ರಮಾಣವೂ ಇದೆ.

ಜಗತ್ತೂ (ಬ್ರಹ್ಮಾಂಡ) ಆತ್ಮ (ಪಿಂಡಾಂಡ) ವೂ ಒಂದೇ ಎಂದು ತಿಳಿವಂತೆ ಆಧಾರ ಚಕ್ರದ ಸ್ಥಾನವು ಆಚಾರಲಿಂಗವಾದುದು ಎಂದೂ, ಸ್ವಾದಿಷ್ಠಾನ ಚಕ್ರದ ಸ್ಥಾನವು ಶಿವಲಿಂಗವಾದುದು ಎಂದೂ, ಅನಾಹತ ಚಕ್ರದ ಸ್ಥಾನವು ಜಂಗಮಲಿಂಗವಾದುದೆಂದೂ, ವಿಶುದ್ಧಿ ಚಕ್ರದ ಸ್ಥಾನವು ಪ್ರಸಾದಲಿಂಗವಾದುದೆಂದೂ, ಆಜ್ಞಾ ಚಕ್ರದ ಸ್ಥಾನವು ಮಹಾಲಿಂಗ ವಾದುದೆಂದೂ ವೀರಶೈವನು ತಿಳಿಯುತ್ತಾನೆ. ಲಿಂಗದಲ್ಲಿ ಗೋಮುಖವು ಎಡಗಡೆಗೆ ಸ್ವಲ್ಪ ಹೆಚ್ಚು ಹೋಗಿರುವಂತೆ ತನ್ನ ದೇಹದಲ್ಲಿ ಅನಾಹತ ಚಕ್ರವು (ಹೃದಯ = Heart) ಇರತಕ್ಕ ರೀತಿಯು ಮಣಿಪೂರಕ ಚಕ್ರದ (ಹೊಕ್ಕುಳಿನ) ಮೇಲಿನಭಾಗದ ನೇರಕ್ಕೆ ಇರದೆ ಎಡಗಡೆಗೆ ಇರುವುದೇ ಲಿಂಗಕ್ಕೂ ಅಂಗಕ್ಕೂ ಸರಿಹೋಲಿಸುವ ಲಕ್ಷಣವುಳ್ಳುದು ಎಂಬುದನ್ನು ತೋರಿಸುತ್ತದೆ. 'ಪುರುಷೇಶ್ವರಯೋರತ್ರ ನ ವೈಲಕ್ಷಣ್ಯಮಣ್ವಪಿ' ಎಂಬ ಪ್ರಮಾಣವೂ ಇದೆ.

ಇವಲ್ಲದೆ ಇನ್ನೂ ಅನೇಕ ವಿಧಗಳಲ್ಲಿ ಜಗತ್ತು, ಆತ್ಮ, ಶಿವ, ಇವರನ್ನು ಒಂದಾಗಿ ತಿಳಿಯುವ ಆಚರಣೆಗಳು ವೀರಶೈವರಲ್ಲಿ ನೆಲೆಗೊಂಡಿವೆ. ಸ್ಥೂಲ ತನುವಿನಲ್ಲಿ (ದೇಹದಲ್ಲಿ) ಇಷ್ಟಲಿಂಗ, ಸೂಕ್ಷ್ಮ ತನುವಿನಲ್ಲಿ (ಮನಸ್ಸಿನಲ್ಲಿ) ಪ್ರಾಣಲಿಂಗ, ಕಾರಣ ತನುವಿನಲ್ಲಿ (ಆತ್ಮದಲ್ಲಿ) ಭಾವಲಿಂಗ, ಇವು ಮೂರೂ ಪರಸ್ಪರ ಸಂಬಂಧವಾಗಿರುವುದರಿಂದಲೇ ಇಷ್ಟ ಲಿಂಗದ ಧಾರಣವು ಮಾಡಲ್ಪಡುತ್ತದೆ. ಪ್ರಾಣವಿಲ್ಲದಾಗ ದೇಹವು ಹೇಗೆ ಹೆಚ್ಚಿನ ಪ್ರಯೋಜನ ಕಾರಿಯಲ್ಲದುದೋ ಹಾಗೆ ಪ್ರಾಣಲಿಂಗವಿಲ್ಲದಾಗ ಇಷ್ಟಲಿಂಗವೂ ಮುಖ್ಯವಾದ ಪ್ರಯೋಜನ ವಿಲ್ಲದುದು. ಆದುದರಿಂದಲೇ ಪ್ರಾಣ ಹೋದ ದೇಹದೊಳಗಿನ ಇಷ್ಟಲಿಂಗವನ್ನು ಸಮಾಧಿಯಲ್ಲಿ ಹೂಳಿ ಬಿಡುವರೇ ಹೊರತು ಇನ್ನೊಬ್ಬರು ಅದನ್ನು ಧಾರಣಕ್ಕೆ ತೆಗೆದುಕೊಳ್ಳುವುದಿಲ್ಲ. ಆದುದ



CC-0. Jangamwadi Math Collection, Varanasi. An eGangotri Initiative

ರಿಂದ ವೀರಶೈವರ ಲಿಂಗಪೂಜೆಯು ಮೂರ್ತಿ ಪೂಜೆಯಲ್ಲ. ಮೂರ್ತಿ ಎಂದರೆ ಅವಯವಗಳುಳ್ಳದು, ಎಂಬ ಅಭಿಪ್ರಾಯವನ್ನನುಸರಿಸಿ ಇಷ್ಟಲಿಂಗವು ಅವಯವಗಳಿಲ್ಲದುದಾಗಿರುವುದರಿಂದ ಇದು ಮೂರ್ತಿ ಅಲ್ಲವೆಂದು ಭಾವಿಸಬಹುದಾದರೂ, ಇದಕ್ಕೂ ಹೆಚ್ಚಿನ ಒಂದು ಲಕ್ಷಣವನ್ನೂ ಗ್ರಹಿಸಬೇಕಾಗಿದೆ.

ಬ್ರಹ್ಮಸೂತ್ರ ೪ನೆಯ ಅಧ್ಯಾಯ ಒಂದನೆಯ ಪಾದ ಪ್ರತೀಕಾಧಿಕರಣದಲ್ಲಿ: 'ನ ಪ್ರತಿಕೇನ ಹಿ ಸಃ' ಎಂಬ ೪ನೆಯ ಸೂತ್ರಕ್ಕೆ ಶ್ರೀ ಶಂಕರಾಚಾರ್ಯರ ಅಭಿಪ್ರಾಯಾನುಸಾರವಾಗಿ ದಿವಾನ ಬಹಾದ್ದೂರ ಕೆ. ಎಸ್. ರಾಮಸ್ವಾಮಿ ಶಾಸ್ತ್ರಿ ಎಂಬುವವರು ಹೀಗೆ ಅರ್ಥವನ್ನು ಬರೆಯುತ್ತಾರೆ:-

Pratheekas (Symbols or Images) would not be regarded as one with us. He (the worshipper) cannot regard them as being one with him as they are separate from him. But we must not regard Pratheekas (Symbols or Images) as being ourselves. They are different from ourselves and cannot be regarded as being identical with ourselves, nor can we say that they being derivatives of Brahma– and Brahma being one with Atma, they are also to be treated as one with Atma. They can be one with Brahma only, if they transcend name and form, and when they so transcend they will not be Pratheekas. Atma is Brahma only when freed from Kartritwa (doer-ship). Two gold jewels cannot be identical, but both can be one with gold.

"ಮೂರ್ತಿ ಅಥವಾ ಪ್ರತಿಮೆಗಳು ತನ್ನೊಡನೆ ಕೂಡಿರುವುದಿಲ್ಲ. ಯಾವ ಮೂರ್ತಿಯಲ್ಲಿ ತಾನಿಲ್ಲವೋ- ಎಂದರೆ ಯಾವುದು ತನಗಿಂತ ಭಿನ್ನವೆಂದು ಭಾವಿಸಲ್ಪಡುವದರಲ್ಲಿ ಬರುವುದೋ- ಅದು ಮೂರ್ತಿ. ಅದು ನಮ್ಮೊಡನೆ ಏಕರೂಪವಾದುದಲ್ಲ ಮತ್ತು ಅದನ್ನು ನಾವು ಬ್ರಹ್ಮರೂಪವಾದುದು (ಬ್ರಹ್ಮನಿಂದ ಉಂಟಾದುದು) ಎಂದು ಹೇಳಲಿಕ್ಕೂ ಬರುವಂತಿಲ್ಲ. ಬ್ರಹ್ಮನು ಆತ್ಮನೊಡನೆ ಕೂಡಿರುವವನಾದುದರಿಂದ, ನಾಮ ರೂಪಗಳಿಲ್ಲದೆ ಯಾವುದು ಆತ್ಮನೊಡನೆ ಕೂಡಿರುವುದೋ ಅದು ಮೂರ್ತಿ ಅಥವಾ ಪ್ರತಿಮೆಯಲ್ಲ. ಆತ್ಮ ಎಂಬುವವನಲ್ಲಿ ಕರ್ತೃತ್ವವು (ನಾನು ಮಾಡುತ್ತೇನೆ- ಎಂದು ಮಾಡುವಿಕೆ) ಇದೆ. ಈ ಕರ್ತೃತ್ವದಿಂದ ಬಿಡುಗಡೆ ಹೊಂದಿದವನೇ ಬ್ರಹ್ಮ. ಎರಡು ಭಂಗಾರದ ಒಡವೆಗಳು ಏಕರೂಪವಾಗಿರಲಾರವು. ಅವುಗಳಲ್ಲಿನ ಭಂಗಾರವು ಮಾತ್ರ ಒಂದೇ" ಎಂಬ ಅಭಿಪ್ರಾಯವು ಇಲ್ಲಿ ತೋರಿ ಬರುವಂತೆ, ವೀರಶೈವರು ಧರಿಸುವ ಇಷ್ಟಲಿಂಗವು ಆತ್ಮನೊಡನೆ (ತನ್ನ ಸಂಗಡ) ಕೂಡಿರುವುದಾಗಿಯೂ ಬ್ರಹ್ಮಭಾವನೆಯನಂಗೀಕರಿಸಿದುದಾಗಿಯೂ ಒಂದು ದೇವತೆ ಎಂಬ ನಾಮರೂಪಗಳಿಲ್ಲವೆ ಯಾವುದರಲ್ಲಿ ಜಗತ್ತು ಲಯವಾಗಿ ಯಾವುದರಲ್ಲಿ ಉತ್ಪತ್ತಿಯಾಗಿರುವದೋ ಅದೇ ಲಿಂಗ ( ಲಯಗಮನಾಲ್ಲಿಂಗಂ ) ಎಂಬುದಾಗಿ



CC-0. Jangamwadi Math Collection, Varanasi. An eGangotri Initiative

ಕರೆಯಲ್ಪಡುವುದಾಗಿಯೂ ಇರುವುದರಿಂದ ಲಿಂಗವು ಮೂರ್ತಿಯಲ್ಲ, ಅದೊಂದು ಪ್ರತಿಮೆಯಲ್ಲ, ಎಂದು ನಿಸ್ಸಂಶಯವಾಗಿ ಹೇಳಲಿಕ್ಕೆ ಬರುತ್ತದೆ.

ಇಷ್ಟಾದರೂ ವೀರಶೈವರು, ಜೀವನನ್ನು ತಿಳಿದು ನಡೆಯಲಿಕ್ಕೆ ತನುವು ಸಾಧನವಾಗಿರುವಂತೆ ಸೂಕ್ಷ್ಮ ರೂಪನಾದ ಬ್ರಹ್ಮನನ್ನು (ಶಿವನನ್ನು) ತಿಳಿದು ನಡೆವುದಕ್ಕೆ ಇಷ್ಟಲಿಂಗವು ಸಾಧನೆ ಎಂದು ತಿಳಿಯುವರೇ ಹೊರತು ಅದೇ ದೊಡ್ಡದು, ಅದಕ್ಕಿಂತಲೂ ಕಡಿಮೆಯವರು ನಾವು ಎಂದು ತಿಳಿಯುವವರಲ್ಲ. ಮತ್ತು ನಿರಾಕಾರ ವಸ್ತುವಿನ ಹೊರತಾಗಿ ಸಾವಯವ ವಸ್ತುವಿನ ಎಂದರೆ ಅವಯವಗಳುಳ್ಳ ಮೂರ್ತಿಯ ಪೂಜೆಯನ್ನು ಮಾಡುವವರಲ್ಲ.

ಮೇಲಿನ ಬ್ರಹ್ಮಸೂತ್ರದ ವ್ಯಾಖ್ಯಾನದಲ್ಲಿ ಬ್ರಹ್ಮನು ಆತ್ಮನೊಡನೆ ಕೂಡಿರುವವನು ಎಂಬ ಅಭಿಪ್ರಾಯವನ್ನನುಸರಿಸಿ, ಆತ್ಮನನ್ನು ಬ್ರಹ್ಮರೂಪವಾಗಿ ಹೊಂದಿರತಕ್ಕ ಗುರು, ಆತ್ಮವು ಶಿವ ರೂಪವಾಗಿರತಕ್ಕ ಜಂಗಮ, ಹೀಗೆ ತಿಳಿದಾಚರಿಸುವವರನ್ನೇ ತಮ್ಮ ದೇವರು (ಈಶ್ವರರೂಪರು) ಎಂದು ತಿಳಿಯುತ್ತಾರೆ. ಲಿಂಗವೂ ಆತ್ಮದೊಡನೆ ಕೂಡಿದುದು ಎಂದು ಮೇಲೆ ತೋರಿಸಲ್ಪಟ್ಟದೆ. ಗುರುವು ತನುವಿನ ದೇವ ಎಂದೂ ಲಿಂಗವು ಮನದ ದೇವ ಎಂದೂ ಜಂಗಮವು ಅರ್ಥ (ಪ್ರಾಣಾಭಿಮಾನ) ದ ದೇವ ಎಂದೂ ತಿಳಿಯುತ್ತಾರೆ. ಕೊನೆಯಲ್ಲಿ ಮೂರೂ ಒಂದೇ ಎಂದು ತಿಳಿಯುತ್ತಾರೆ.

ಹೀಗೆ ವೀರಶೈವರ ಈಶ್ವರ ಭಾವನೆಯು ಆತ್ಮದಿಂದ ಕೂಡಿದವರಲ್ಲಿ (ಅಥವಾ ಸ್ಪಷ್ಟವಾಗಿ ತಿಳಿವುದಾದರೆ ಜೀವವುಳ್ಳವರಲ್ಲಿ) ಇರುವುದೇ ಹೊರತು ಗುಡಿಗುಂಡಾರಗಳಲ್ಲಿ, ಪ್ರತಿಮೆಗಳಲ್ಲಿ, ಪಟಗಳಲ್ಲಿ ಇಲ್ಲ. ಹಾಗೆ ಕೆಲವರು ಆಚರಿಸಿದರೆ ಅದು ದೀಕ್ಷೆಯನ್ನು ಹೊಂದದೆ ಇರುವ ಶುದ್ಧಶೈವರ ಆಚರಣೆಯೇ ಹೊರತು ವೀರಶೈವ ದೀಕ್ಷೆಯನ್ನು ಹೊಂದಿ, ಆರು ಸ್ಥಲಗಳನ್ನು ಅನುಸರಿಸಿ ನಡೆಯುವ ವೀರಶೈವರ ಆಚರಣೆಯಲ್ಲ. ಇವರ ಆಚರಣೆಯು ಸಮ್ಯಕ್‌ಜ್ಞಾನ ಸ್ವರೂಪವಾದುದು ಎಂಬುದಕ್ಕೆ ಮೇಲೆ ಪಾರಮೇಶ್ವರ ಆಗಮದ ಪ್ರಮಾಣವನ್ನು ಕೊಟ್ಟಿರುತ್ತದೆ. ಹೀಗೆ ಈ ಆಚರಣೆಯು ಹಿಂದುಗಳ ಶ್ರೇಷ್ಠವಾದ ಅಭಿಪ್ರಾಯದ ಆಚರಣೆಯೇ ಆಗಿದೆ – ಎಂಬುದನ್ನು ಸ್ಪಷ್ಟವಾಗಿ ತಿಳಿಯಲಿಕ್ಕೆ ಬರುವಂತಿದೆ.

## ೪. ಮೋಕ್ಷ

ಹಿಂದೂ ಧರ್ಮಕ್ಕೆ ಸೇರಿದ ಪ್ರತಿಯೊಬ್ಬನೂ ಮೋಕ್ಷವನ್ನು ಅಪೇಕ್ಷಿಸುತ್ತಾನೆ, ಎಂಬುದು ಸಹಜವೇ. ಆದರೆ ಮೋಕ್ಷ ಎಂದರೆ ಏನು ಎಂಬುದನ್ನು ವಿಚಾರ ಮಾಡಿದವರು ಬಹಳ ಕಡಿಮೆ ಇರುತ್ತಾರೆ. ಸಾಮಾನ್ಯವಾಗಿ ಮುಚ್ (ಬಿಡು) ಎಂಬ ಧಾತುವಿನ ಮೇಲೆ ಮೋಕ್ಷವೆಂಬ ಪದವು ಹುಟ್ಟಿರುವುದರಿಂದ ಇದಕ್ಕೆ ಬಿಡುಗಡೆ ಎಂದು ಅರ್ಥ ಮಾಡಲಿಕ್ಕೆ ಬರುತ್ತದೆ. ಯಾವುದರ ಬಿಡುಗಡೆ ಎಂಬುದನ್ನು ಯೋಚಿಸಲಿಕ್ಕೆ ಹೋಗುವುದರ ಬದಲಾಗಿ ಸ್ವರ್ಗಕ್ಕೆ ಹೋಗುವುದು, ಕೈಲಾಸಕ್ಕೆ ಹೋಗುವುದು, ವೈಕುಂಠಕ್ಕೆ ಹೋಗುವುದು, ಇವೇ ಮುಂತಾದ ಒಳ್ಳೆಯ ಲೋಕಗಳಿಗೆ ಹೋಗುವಿಕೆಯು ಮೋಕ್ಷವೆಂದು ಕೆಲವರು ತಿಳಿಯುತ್ತಾರೆ. ಒಂದಿ



CC-0. Jangamwadi Math Collection, Varanasi. An eGangotri Initiative

ಲ್ಲೊಂದು ದಿನ ಇಹಲೋಕದ ಬಿಡುಗಡೆಯಾಗುವುದೆಂಬುದು ಸಿದ್ಧವು. ಆ ಬಿಡುಗಡೆ ಎಂಬುದು ಮನುಷ್ಯನ ಜೀವವು ಒಳ್ಳೆಯ ಲೋಕಕ್ಕೆ ಹೋಗುವುದರಲ್ಲಿ ಪರಿಣಾಮವನೆಯ್ದಲಿ ಎಂಬುದೇ ಮೋಕ್ಷಪದದ ಸಾರ್ಥಕತೆ ಎಂದು ತಿಳಿದಿರುತ್ತಾರೆ.

ಪೂರ್ವಕಾಲದಲ್ಲಿ ವಿಂಧ್ಯ ಪರ್ವತದ ಕೆಳಗಿನ ಭಾಗವು ಮೃತ್ಯುಲೋಕ ಅಥವಾ ಮನುಷ್ಯರ ವಾಸಸ್ಥಾನವೆಂದೂ ವಿಂಧ್ಯ ಪರ್ವತದ ಉತ್ತರಕ್ಕೆ ಋಷಿಗಳೇ ಮೊದಲಾದವರ ವಾಸಸ್ಥಾನವೆಂದೂ ಹಿಮಾಲಯ ಪರ್ವತದ ಮೇಲಿನ ಭಾಗವು ದೇವತೆಗಳ ವಾಸಸ್ಥಾನವೆಂದೂ ಗಣಿಸಲ್ಪಡುತ್ತಿದ್ದಿತು.

ಮನುಷ್ಯ ಲೋಕದಲ್ಲಿ ವಿಶೇಷವಾಗಿ ಪುಣ್ಯ ಕೆಲಸ ಮಾಡಿ ಪ್ರಖ್ಯಾತರಾದವರನ್ನು ದೇವತೆಗಳ ಲೋಕಕ್ಕೆ ಕರೆದುಕೊಂಡು ಹೋಗುತ್ತಿದ್ದರು. ಈಗ ಶ್ರೀ. ಗಾಂಧೀಜಿಯವರನ್ನು ಲಂಡನ್ನಿಗೆ ಕರೆಯಿಸಿಕೊಂಡ ಹಾಗೆ ಅರ್ಜುನನನ್ನು ಇಂದ್ರನು ಕರೆಯಿಸಿದ್ದನೆಂದು ಪುರಾಣದ ಮಾತು ಉಂಟು. ಇಂತಹ ಸ್ಥಿತಿಯನ್ನು ಕಂಡವರು ಬರಬರುತ್ತ ಪುಣ್ಯ ಮಾಡಿದವರಿಗೆ ಸ್ವರ್ಗ ಪದವಿ ಪ್ರಾಪ್ತವಾಗುವುದೆಂದು ಪುರಾಣಗಳಲ್ಲಿಯೂ ಹಿಂದುಗಳ ಇತರ ಗ್ರಂಥಗಳಲ್ಲಿಯೂ ಬರೆಯಲಿಕ್ಕೆ ಪ್ರಾರಂಭವಾಯಿತು. ಈಗ ೨೦೦-೩೦೦ ವರ್ಷಗಳ ಹಿಂದೆಯೂ ಕೈಲಾಸಕ್ಕೆ ಅಥವಾ ಸ್ವರ್ಗಕ್ಕೆ ಹೋದರೆಂಬ ಸಂಗತಿಯ ಬರವಣಿಗೆಯನ್ನು ನೋಡಬಹುದು. ಪುಣ್ಯಕೆಲಸ ಮಾಡಿದವನಿಗೆ ಸ್ವರ್ಗಪ್ರಾಪ್ತಿಯೆಂಬುದೊಂದು ಗೊತ್ತುವಳಿಯನ್ನು ತಿಳಿದು ಸ್ವರ್ಗಕ್ಕೆ ಹೋಗುವುದನ್ನು ನೋಡಲಿ ಬಿಡಲಿ ಇವರು ಪುಣ್ಯ ಮಾಡಿದರು, ಸ್ವರ್ಗಕ್ಕೆ ಹೋದರು ಎಂದು ನಿರಾತಂಕವಾಗಿ ಬರೆಯಲಿಕ್ಕೆ ಆರಂಭವಾಯಿತು. ಹೀಗಾಗಿ ಹಿಂದುಗಳ ಸ್ವಾರ್ಗಿಕ ಮೋಕ್ಷ ಎಂಬ ಭಾವನೆಯು ಕಲ್ಪನೆಯಾಗಿ ಉಳಿದುಕೊಂಡಿದೆಯೇ ಹೊರತು ನಿಜ ಎಂಬುದಕ್ಕೆ ಯಾವುದೊಂದು ಉದಾಹರಣೆಯೂ ತಿಳಿದು ಬಂದಿಲ್ಲ. ಇನ್ನಾದರೂ ಇಂತಹ ಮೂಢ ನಂಬಿಗೆಯನ್ನು ಹಿಂದುಗಳು ಬಿಟ್ಟು ಬಿಡುವುದು ಉತ್ತಮ. ಇನ್ನು ಜೀವನಿಗೆ ಬೇರೆಬೇರೆ ಗತಿಗಳು ಉಂಟೆಂದೂ ಒಂದೊಂದು ಸ್ಥಾನದಲ್ಲಿ ಕೆಲವು ದಿವಸ ಅವನು ಇರುವನೆಂದೂ ಯೋಚಿಸಿ ಶ್ರಾದ್ಧ ಮೊದಲಾದ ಕರ್ಮಗಳನ್ನು ಮಾಡುವುದನ್ನು ಕೆಲವುಮಟ್ಟಿಗೆ ಒಪ್ಪಬಹುದಾದರೂ ಮೂಢ ಭಾವನೆಯೂ ಇದರಲ್ಲಿ ಕೆಲವು ಮಟ್ಟಿಗೆ ಸೇರಿರುವುದೆಂದೇ ತಿಳಿಯಬೇಕಾಗಿದೆ. ಜೀವನು ಇನ್ನೊಂದು ಶರೀರದಲ್ಲಿ ಪ್ರವೇಶಿಸಿ ಮಾತಾಡುತ್ತಾನೆ ಎಂಬುದು ನಿಜ. ಆದರೆ ನಾವು ಅವುಗಳಿಗಾಗಿ ಹಾಕಿದ ಆಹಾರವನ್ನು ಅವರು ಉಂಡು ಹೋಗುತ್ತಾರೆ ಎಂದು ಆಲೋಚಿಸುವದು ಅನುಭವಕ್ಕೆ ದೂರವಾದ ವಿಷಯವು. ಜೀವದಂತಹ ಸೂಕ್ಷ್ಮ ವಸ್ತು ಪ್ರತ್ಯೇಕವಾಗಿ ಸೂಕ್ಷ್ಮವಾದ ಆಹಾರ ತೆಗೆದುಕೊಳ್ಳುವುದೇ ಹೊರತು, ಸ್ಥೂಲ ವಸ್ತುವಿನಂತೆ ಆಹಾರ ತೆಗೆದುಕೊಳ್ಳಲಾರದು. ಆದುದರಿಂದ ಪಾರಲೌಕಿಕವೆಂದು ನಡೆಸತಕ್ಕ ಕರ್ಮಗಳ ವಿಷಯದಲ್ಲಿ ಹಿಂದುಗಳು ಬಹಳ ಪರಿಶೋಧನೆ ಮಾಡಿ ಅನೇಕ ತಿದ್ದುಪಡಿಗಳನ್ನು ಮಾಡಿಕೊಳ್ಳಬೇಕಾಗಿದೆ.

ಮೋಕ್ಷ ( ಬಿಡುಗಡೆ ) ಎಂದರೆ ಏನು ಎಂಬದನ್ನು ಇನ್ನೂ ಚೆನ್ನಾಗಿ ಈಗ ವಿಮರ್ಶೆ ಮಾಡೋಣ. ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ, ಸಾಯುಜ್ಯ ಎಂಬುದಾಗಿ ನಾಲ್ಕು ವಿಧವಾದ



CC-0. Jangamwadi Math Collection, Varanasi. An eGangotri Initiative

ಮೋಕ್ಷಗಳನ್ನು ಹಿಂದೂ ಗ್ರಂಥಗಳು ಸಾರಿ ಹೇಳುತ್ತವೆ. ಸಾಲೋಕ್ಯವೆಂದರೆ ಸಗುಣನಾದ ಒಬ್ಬ ದೇವನು ( ಪಾರ್ವತೀ ಪತಿ, ಲಕ್ಷ್ಮೀ ಪತಿ, ಸರಸ್ವತೀ ಪತಿ, ಮುಂತಾದವರಲ್ಲಿ ಒಬ್ಬನು ) ವಾಸ ಮಾಡುವ ಲೋಕದಲ್ಲಿ ವಾಸ ಮಾಡುವಿಕೆ ಎಂದೂ, ಸಾಮೀಪ್ಯವೆಂದರೆ ಆ ದೇವನ ಸಮೀಪದಲ್ಲಿ ಇರುವಿಕೆ ಎಂದೂ, ಸಾರೂಪ್ಯವೆಂದರೆ ಆ ದೇವನ ರೂಪದಂತೆ ರೂಪವನ್ನು ಪಡೆಯುವಿಕೆ, ಎಂದೂ ಸಾಯುಜ್ಯವೆಂದರೆ ದೇವನನ್ನು ಕೂಡುವಿಕೆ, ಎಂದರೆ ಅವನಿಂದ ಭಿನ್ನವಾಗದಂತೆ ಇರುವಿಕೆ ಎಂದೂ ಇದರಲ್ಲಿ ಸಾಯುಜ್ಯವೇ ಹೆಚ್ಚಿನದೆಂದೂ ಇಂತಹ ಮೋಕ್ಷಗಳನ್ನು ಜೀವನು ದೇಹದಿಂದ ಅಗಲಿದ ಮೇಲೆ ಹೊಂದುವುದಕ್ಕಾಗಿ ಮನುಷ್ಯನು ಪ್ರಯತ್ನಿಸಬೇಕೆಂದೂ ಹಿಂದೂಗ್ರಂಥಗಳ ಬಹು ಭಾಗಗಳು ಹೇಳುತ್ತವೆ. ಹೀಗೆ ತಿಳಿದುಕೊಂಡು ನಡೆವುದೂ ಮೂಢ ಭಾವನೆ ಎಂದೇ ಹೇಳಬೇಕಾಗಿದೆ. ಏಕೆಂದರೆ ಆ ಸಗುಣ ದೇವನು ( ದೇವತೆಗಳು ) ಈಗ ಇದ್ದಾನೆ ಎಂದು ಯಾವ ವಿಧದಲ್ಲಿಯೂ ಕಂಡು ಹಿಡಿಯಲ್ಪಟ್ಟಿಲ್ಲ. ಇದಲ್ಲದೆ ಹಿಂದುಗಳ ಗ್ರಂಥಗಳಲ್ಲಿಯೇ ( ಯದ್ ದೃಷ್ಟಂ ತನ್ನಷ್ಟಂ ) ಯಾವುದು ಕಣ್ಣಿಗೆ ಕಾಣುವ ವಸ್ತುವೋ ಅದು ಒಂದಿಲ್ಲೊಂದು ಕಾಲಕ್ಕೆ ನಷ್ಟವಾಗುವುದು ಎಂದು ಹೇಳಲ್ಪಟ್ಟಿರುವುದರಿಂದ ಕಣ್ಣಿಗೆ ಕಾಣುವ ದೇವನೊಡನೆ ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ, ಸಾಯುಜ್ಯಗಳು ಒಂದಿಲ್ಲೊಂದು ದಿನ ಕೊನೆಯನ್ನು ಹೊಂದುತಕ್ಕವುಗಳು ಎಂದು ನಾವು ನಿರ್ಧರ ಮಾಡಬಹುದು. ಈ ದಿಸೆಯಿಂದಲೇ ಬ್ರಹ್ಮ, ವಿಷ್ಣು, ರುದ್ರರಿಗೆ ಆಯುಷ್ಯವು ಉಂಟು; ಅವರೂ ಜನ್ಮ ಜನ್ಮಗಳಿಗೆ ಬರತಕ್ಕವರು ಎಂದು ಹಿಂದು ಗ್ರಂಥಗಳು ನಿರ್ಣಯಿಸಿವೆ. ಭಗವದ್ಗೀತೆಯಲ್ಲಿಯೂ ಕೂಡಾ-ಪುಣ್ಯ ಮಾಡಿದವರು ಸ್ವರ್ಗಾದಿ ಲೋಕಗಳಿಗೆ ಹೋದಮೇಲೆ ಅಲ್ಲಿ ಪುಣ್ಯವನ್ನನುಭವಿಸಿ ಆ ಪುಣ್ಯವು ತೀರಿದಮೇಲೆ ಪುನಃ ಮರ್ತ್ಯ ಲೋಕಕ್ಕೆ ಬರುತ್ತಾರೆ, ಎಂದು ಹೇಳಿರುತ್ತದೆ. ಈ ದೇವತೆಗಳೇ ಶಾಶ್ವತರಲ್ಲ ಎಂದು ಹೇಳಿದ ಮೇಲೆ ಇವರೊಡನೆ ಕೂಡಿದುದು ಹೇಗೆ ಶಾಶ್ವತವಾಗಿ ನಿಲ್ಲುವದು? ಈ ಕಾರಣ ಗಳಿಂದ ಹಿಂದುಗಳು ಈ ವಿಧವಾದ ಗೋಜಿಗೆ ಹೋಗದೆ ಜೀವನ ಮುಂದಿನ ಗತಿ ಏನು ಎಂಬು ದನ್ನು ಸಂಶೋಧನಾತ್ಮಕ ದೃಷ್ಟಿಯಿಂದ ವಿಚಾರಿಸುವುದು ಉತ್ತಮ.

ಒಟ್ಟಿನಲ್ಲಿ ಮೋಕ್ಷ ( ಬಿಡುಗಡೆ ) ಎಂಬುದಕ್ಕೆ ಇಷ್ಟುಮಟ್ಟಿಗೆ ಅರ್ಥ ಮಾಡಬೇಕು. ಯಾವಾಗ ಮನುಷ್ಯನು ನಿರಾಕಾರನಾದ ದೇವ ಅಥವಾ ಮಹಾದೇವನನ್ನು ಮರೆತು ನಾನು ಮನುಷ್ಯ, ಇದು ಭೂಮಿ ಎಂದು ಬೇರೆ ಬೇರೆಯಾಗಿ ವ್ಯವಹಾರ ಮಾಡುವನೋ ಆಗ ಅವನು ಪ್ರಾಪಂಚಿಕ, ಲೌಕಿಕ, ಅಥವಾ ಪ್ರಾಕೃತಿಕ ಎಂದೂ, ಅದೇ ಮನುಷ್ಯನು ಹೆಸರು ಹೇಳಲಿಕ್ಕೆ ಬಾರದ ತತ್ ಎಂಬ ನಿರಾಕಾರ ವಸ್ತುವೂ, ಇದಂ ಎಂದು ಗುರ್ತಿಸಬಹುದಾದ ಇಂದ್ರಿಯಗಳಿಗೆ ಗೋಚರವಾಗತಕ್ಕ ಭೂಮಿ ಮೊದಲಾದ ವಸ್ತುಗಳೂ ಎಲ್ಲವೂ ಒಂದೇ ( ತದಿದಂ ಸರ್ವಂ ) ಎಂಬುದಾಗಿ ತಿಳಿದು ಎಲ್ಲವನ್ನು ಮಹಾದೇವನೆಂದೇ ಯಾವಾಗ ತಿಳಿಯುವನೋ ಆಗ ಅವನು ಪ್ರಾಪಂಚಿಕ ಸ್ಥಿತಿಯಿಂದ ಬಿಡುಗಡೆ ಹೊಂದುವನು, ಅಪ್ರಾಪಂಚಿಕನು, ಅಲೌಕಿಕನು, ಅಪ್ರಾಕೃತಿ ಕನು, ಎಂದು ತಿಳಿಯಬೇಕು. ಈ ಅಪ್ರಾಕೃತಿಕ ವೃತ್ತಿಯೇ ಪ್ರಾಪಂಚಿಕ ವೃತ್ತಿಯ ಬಿಡುಗಡೆ ( ಮೋಕ್ಷ ) ಎಂದು ನಿರ್ಧರ ಮಾಡಲಿಕ್ಕೆ ಯಾವ ಆಕ್ಷೇಪಣೆಯೂ ಬರಲಾರದು. ಇಂತಹ ಮೋಕ್ಷಕ್ಕೆ ಕೈವಲ್ಯ ಎಂದು ಹೆಸರು. ಇದನ್ನು ದೇಹದ ಬಿಡುಗಡೆಯಾದ ಮೇಲೆ ಹೊಂದ ಬಹುದೆಂದು ಅದ್ವೈತಿಗಳು ತಿಳಿದುಕೊಂಡಿರುತ್ತಾರೆ. ದೇಹವು ತಪ್ಪಿದ ಮೇಲೆ ವಿದೇಹ ಮುಕ್ತಿ



CC-0. Jangamwadi Math Collection, Varanasi. An eGangotri Initiative

ಉಂಟೆಂದು ಅವರು ನಂಬುತ್ತಾರೆ. ವೀರಶೈವರು-ಅದೇಕೆ? ಯಾವಾಗ ಪ್ರಾಪಂಚಿಕ ಭಾವನೆಯು ಇರದೆ ಮಹಾದೇವನ ಭಾವನೆಯು ಬಂದಿತೋ ಆಗಲೇ ಕೈವಲ್ಯ, ಆಗಲೇ ವಿದೇಹ ಮುಕ್ತಿ; ಇಂತಹ ಕೈವಲ್ಯವನ್ನು ದೇಹನಿರುವಾಗಲೇ ಹೊಂದಲಿಕ್ಕೆ ಬರುತ್ತದೆ; ಇದಕ್ಕಾಗಿ ದೇಹ ಪಾತವನ್ನು ನಾವು ಕಾಯ್ದು ಕೊಂಡಿರಬೇಕಾಗಿಲ್ಲ—ಎಂದು ಹೇಳುತ್ತಾರೆ. ಈ ದೃಷ್ಟಿಯಿಂದಲೇ ಅವರು 'ಸರ್ವಂ ಲಿಂಗಮಯಂ' ಎಂಬ ಭಾವನೆಯಿಂದ ನಡೆಯುವರು. ಶಿವಶರಣರಾದ ಮೊಗ್ಗೆಯ ಮಾಯಿದೇವರು ಹೇಳಿದಂತೆ :

> ಲಿಂಗದೊಳಿರ್ದು ಲಿಂಗಮನೆ ತಾಳ್ದು ನಿರಂತರ ಲಿಂಗಪೂಜೆಯಂ
> ಲಿಂಗದಿನೊಲ್ದು ವಿಸ್ತರಿಸಿ ಲಿಂಗವೆ ಲಿಂಗಮನರ್ಪಿಸುತ್ತ ಮಹ
> ಲಿಂಗಪದಾರ್ಥಮಂ ಸವಿದು ಲಿಂಗಸುಖಾಸ್ಪದನಾಗಿ ರಾಜಿಪಂ
> ಲಿಂಗನಿಜೈಕ್ಯನಯ್ಯ ಪರಮಪ್ರಭುವೇ ಮಹದೈಪುರೀಶ್ವರಾ

ಎಂಬ ರೀತಿಯಲ್ಲಿ ನಡೆಯುವವರು; ಇದೇ ಕೈವಲ್ಯಭಾವವು. ಎಂದರೆ ಕೇವಲ ಮಹಾದೇವನೇ ಎಲ್ಲವನ್ನೂ ಮಾಡುತ್ತಾನೆ ಎಂಬ ಭಾವವು. ಇವರ ಸಮಾಧಿಯು ಕಾಲದಲ್ಲಿ ದೇಹವನ್ನು ತೆಗೆದು ಕೊಂಡು ಹೋಗುವ ವಿಮಾನಕ್ಕೆ ಕೈವಲ್ಯ ಎಂದು ಕರೆಯುತ್ತಾರೆ. ಭಗವದ್ಗೀತೆಯಲ್ಲಿ ನಿಷ್ಕಾಮ ಕರ್ಮವೇ ಹೆಚ್ಚಿನದು ಎಂದು ಹೇಳಲ್ಪಟ್ಟಿದೆ. ಕಾರ್ಯ ಮಾಡುವವನು ತನ್ನ ಕಾರ್ಯದ ಫಲದಲ್ಲಿ ಇಚ್ಛೆಯುಳ್ಳವನಾಗಿರಬಾರದು ಎಂಬುದೇ ಇದರ ತಾತ್ಪರ್ಯ. ಇದರಲ್ಲಿ ಇನ್ನು ಹೆಚ್ಚಿಗೆ ವಿಚಾರ ಮಾಡಲಿಕ್ಕೆ ಅಂಶವು ಇದೆ. ಫಲ ತನಗೆ ಬೇಡ ಎಂದರೂ ಮಾಡತಕ್ಕವನಿಗೆ ನಾನು (ಕರ್ತೃತ್ವ= doer-ship) ಎಂಬ ಭಾವನೆ ಇದ್ದೇ ಇರುತ್ತದೆ. ಈ ಭಾವನೆಗೆ ತಕ್ಕಂತೆ ಕಾರ್ಯ ಮಾಡಿದ ನನಗೆ ಫಲವು ಬೇಡವೆಂದರೂ ಬರುತ್ತದೆ. ಇದಲ್ಲದೆ ಈ ಭಾವನೆಯುಳ್ಳ ಜೀವನು ನಾನು ಎಂಬುದನ್ನು ಕಳೆದುಕೊಳ್ಳುವವರೆವಿಗೂ ಮತ್ತೆ ಹುಟ್ಟಲೇ ಬೇಕಾಗುವದು. ಜೀವನಿಗೆ 'ನಾನು' ಎಂದು ಹೇಳಿಕೊಳ್ಳುವವರೆವಿಗೂ ಶುದ್ಧತೆ ಇಲ್ಲ. ಈ ಕೈವಲ್ಯದ ಪದ್ಧತಿಯಲ್ಲಿ ಹೀಗೆ ಇಲ್ಲ. ಜೀವನಿಗೆ ನಾನು ಎಂಬುದೂ ಕರ್ತೃತ್ವ (doer-ship)ವೂ ಹೋಗಿ ಶಿವನೇ (ಲಿಂಗವೇ) ಮಾಡುತ್ತಾನೆ, ಎಂಬ ಭಾವನೆ ಬರುವುದು. ಆಗ ಅದರ ಫಲವೂ ಜೀವನಿಗೆ ಅಂಟುವುದಿಲ್ಲ. ಮತ್ತು ಶಿವ ಎಂಬ ಭಾವನೆಯಿಂದ ಜೀವನ ಜೀವತ್ವವು ಇಲ್ಲಿಯೇ ಕಳೆದು ಹೋಗಿರುತ್ತದೆ. ಆದುದರಿಂದ ಜೀವನು ಪುನಃ ಹುಟ್ಟಬೇಕಾದುದಿಲ್ಲ. ಇಂತಹ ಕೈವಲ್ಯ ಭಾವನೆಯ ಕೆಲಸಕ್ಕೆ ನಿರಹಂಭಾವ ಕ್ರಿಯೆ ಎನ್ನುತ್ತಾರೆ. ನಿಷ್ಕಾಮಕರ್ಮಕ್ಕಿಂತಲೂ ಈ ನಿರಹಂ ಭಾವ ಕ್ರಿಯೆಯು ಹೆಚ್ಚಿನದು. ಈ ನಿರಹಂಭಾವಕ್ಕೆ ನಿಸ್ಪೃಹ ಭಾವ, ನಿರೀಹ ಭಾವ ನಿರಪೇಕ್ಷ ಭಾವ ಎಂಬ ಹೆಸರುಗಳೂ ಇವೆ. ಈ ಕೈವಲ್ಯ ಭಾವನೆಯಿಂದ ಮನುಷ್ಯನ ಜೀವವು ಪರಿಶುದ್ಧಿಯನ್ನು ಹೊಂದುವುದೆಂದೂ ಆ ಜೀವನು ಶುದ್ಧನಾದ ಗುರುತು ಆ ಜೀವನಲ್ಲಿ ತೋರಿ ಆದರ ಫಲವನ್ನು ಅನುಭವಿಸುವನೆಂದೂ ನಾವು ನಿಸ್ಸಂಶಯವಾಗಿ ಹೇಳಬಹುದು. ಹಾಗಿಲ್ಲದೆ ದೇಹಪಾತವಾದನಂತರ ಪಡೆಯಬೇಕೆಂಬ ಮುಕ್ತಿಯು ಬಹುದೂರದ ಸಂಗತಿಯಾಗಿ ಇರುತ್ತದೆ. ದೇಹವಿರುವಾಗಲೇ ಮುಕ್ತಿಯ ಸಾಧನೆಯನ್ನು ಮಾಡಿದರೆ ಜೀವನಿಗೆ ಆ ಸಂಸರ್ಗವು ದೇಹವ ಬಿಡುವಾಗ ಸಹಜವಾಗಿಯೇ ಉಳಿದಿರುತ್ತದೆ. 'ಮರ್ತ್ಯಲೋಕವೇ ಕರ್ತಾರನ ಕಮ್ಮಟವಯ್ಯ ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರಯ್ಯಾ' ಎಂದು ಬಸವೇಶ್ವರನೂ ಹೇಳಿರುತ್ತಾನೆ.



CC-0. Jangamwadi Math Collection, Varanasi. An eGangotri Initiative

ಹೀಗೆ ಹಿಂದೂಶಾಸ್ತ್ರಗಳಲ್ಲಿ ಬಹಳ ಮುಖ್ಯವೆಂದೂ ಶ್ರೇಷ್ಠವೆಂದೂ ಹೇಳಲ್ಪಡುತ್ತಿದ್ದ ಭಾಗಗಳ ಆಚರಣೆಯೇ ವೀರಶೈವರಲ್ಲಿ ಬಂದಿರುತ್ತದೆ. ಈ ನಡತೆಯು ಎಲ್ಲರಿಗೂ ಬರಲಿಕ್ಕೆ ಸಾಧ್ಯವಿದೆ. ವೀರಶೈವರ ಮತಕ್ಕೇ ಮಾತ್ರ ಲಿಂಗ ಎಂಬ ವಸ್ತುವು ಕೊಡಲ್ಪಟ್ಟಿದೆ ಎಂದು ಯಾರೂ ತಿಳಿಯಬಾರದು. ಇವರದೊಂದು ಮತವಲ್ಲ ಇವರ ನಡತೆಯು ಹಿಂದುಗಳು ತಿಳಿದಿರುವ ಪೂರ್ಣಯೋಗದ ಆಚರಣೆಯು. ಪ್ರಸಿದ್ಧರಾದ ಶ್ರೀ. ಅರವಿಂದ ಘೋಷರು ಬರೆದ (Yoga and its objects) ಎಂಬ ಪುಸ್ತಕದಲ್ಲಿಯ ಪೂರ್ಣ ಯೋಗದ ನಡತೆಯೇ ಇವರಲ್ಲಿ ಇರುತ್ತದೆ. ಈ ಬಗ್ಗೆ ಪೂರ್ಣಯೋಗವೂ ವೀರಶೈವವೂ ಎಂಬ ಒಂದು ಪುಸ್ತಕವೇ ಸಿದ್ಧವಾಗಿರುತ್ತದೆ. ಇವರು ಧರಿಸುತ್ತಿರುವ ಲಿಂಗವು ಬ್ರಹ್ಮರಂಧ್ರದಿಂದ ಪಡೆದ ಕಲೆಯಿಂದ ಕೂಡಿದುದೇ ಹೊರತು ಯಾವುದಾದರೂ ಮಂತ್ರ ಹೇಳಿ ದೇವನ ಕಲೆಯನ್ನು ಆಹ್ವಾನಿಸಿ ಅಥವಾ ಬೇರೊಂದು ಕಡೆಯ ವಸ್ತುವ ತಂದು ಸೇರಿಸಿ ಕೊಡಲ್ಪಟ್ಟುದಲ್ಲ. ಅವರವರ ಬ್ರಹ್ಮರಂಧ್ರದೊಳಗಿನ ಕಲೆಯನ್ನು ಅವರವರು ಹೊಂದಿ ತಮ್ಮ ದೇಹಾದಿಗಳನ್ನು ಲಿಂಗರೂಪವೆಂದು ತಿಳಿದು ಆ ಪೂರ್ಣ ಯೋಗದ ನಡತೆಯ ಫಲವನ್ನು ಪಡೆಯುವುದಕ್ಕೆ ಯಾರಿಗೂ ಯಾವ ಆತಂಕವೂ ಇರುವುದಿಲ್ಲ.

ತಸ್ಮಾಲ್ಲಿಂಗಂ ಪರಂ ಬ್ರಹ್ಮ ಸದಾ ಧ್ಯಾಯಂತಿ ಯೋಗಿನಃ
ತ್ರೈಗುಣ್ಯ ವಿಷಯಾನ್ ದೇವಾನ್ ತ್ಯಕ್ತ್ವಾ ಲಿಂಗಂ ಚ ನಿರ್ಗುಣಂ
ಭಜಂತಿ ಪರಮಂ ಧಾಮುಶ್ಚೈವಂ ವಿಶ್ವಾದಿ ಕಾರಣಂ

(ಸೂಕ್ಷ್ಮತಂತ್ರ ೬ನೆಯ ಪಟಲ ೨೫ನೆಯ ಶ್ಲೋಕ)

"ಲಿಂಗವನ್ನು ಯೋಗಿಗಳು ಯಾವಾಗಲೂ ಧ್ಯಾನಿಸುತ್ತಾರೆ. ಸತ್ವರಜತಮೋಗುಣಗಳುಳ್ಳ ದೇವತೆಗಳನ್ನು ವರ್ಜಿಸಿ ನಿರ್ಗುಣವೂ ವಿಶ್ವಕ್ಕೆ ಆದಿಕಾರಣವೂ ಆದ ಶ್ರೇಷ್ಠ ಶುದ್ಧ ಸ್ಥಾನವಾದ ಲಿಂಗವನ್ನು ಸೇವಿಸುತ್ತಾರೆ. ಹೀಗಿರುವದರಿಂದ ವೀರಶೈವರ ದೈವಿಕ ಭಾವನೆಯು ಮೂರ್ತಿಪೂಜೆ ಮಾಡುವ ಮೌಢ್ಯ ಸ್ಥಿತಿಯದಲ್ಲ. ಲಿಂಗವು ಮೂರ್ತಿಯಲ್ಲವೆಂಬುದನ್ನು ಈ ಹಿಂದೆಯೇ ತೋರಿಸಿದೆ. ಇನ್ನು ಗುರು ಜಂಗಮರೂ ಮಹಾದೇವನ ಭಾವನೆಯುಳ್ಳವರೇ; ಕೈವಲ್ಯವನ್ನು ತಿಳಿದಾಚರಿಸುವವರೇ. ಆದುದರಿಂದ ವ್ಯಕ್ತವಾಗಿ ಕಾಣತಕ್ಕ ಚೇತನ ಪೂಜೆ ಇವರಲ್ಲಿ ಇರುವುದೇ ಹೊರತು ಅವ್ಯಕ್ತ ಚೇತನ ವಸ್ತು ಪೂಜೆ ಇವರಲ್ಲಿ ಇಲ್ಲವೆ ಇಲ್ಲ. ಈ ಕಾರಣಗಳ ದೆಸೆಯಿಂದ ಇವರ ದೈವಿಕ ಭಾವನೆಯ ಕಡೆಗೆ ಸರ್ವರ ಲಕ್ಷ್ಯವೂ ಬೀಳಬೇಕಾಗಿದೆ.

ಭದ್ರಂ, ಶುಭಂ, ಮಂಗಳಂ.





CC-0. Jangamwadi Math Collection, Varanasi. An eGangotri Initiative

## ಜೀವ-ಜಗತ್ತು-ಈಶ್ವರ-ಮೋಕ್ಷ ಇವುಗಳ ಬಗ್ಗೆ ಕೆಲವು ವಚನಗಳು

(೧) ಕಲ್ಲ ದೇವರು ದೇವರಲ್ಲ. ಮಣ್ಣ ದೇವರು ದೇವರಲ್ಲ. ಮರ ದೇವರಲ್ಲ. ಪಂಚಲೋಹ ದಲ್ಲಿ ಮಾಡುವ ದೇವರು ದೇವರಲ್ಲ. ಸೇತುಬಂಧ, ರಾಮೇಶ್ವರ, ಗೋಕರ್ಣ, ಕಾಶಿ, ಕೇದಾರ ಮೊದಲಾದ ಅಷ್ಟಾಷಷ್ಟಿ ಪುಣ್ಯತೀರ್ಥಂಗಳು ಪುಣ್ಯಕ್ಷೇತ್ರಂಗಳಲ್ಲಿಹ ದೇವರು ದೇವರಲ್ಲ. ತನ್ನ ತಾನರಿದು ತಾನಾರೆಂದು ತಿಳಿದಡೆ ತಾನೇ ದೇವ ನೋಡಾ ಅಪ್ರಮಾಣ ಕೂಡಲಸಂಗಮದೇವಾ.

(೨) ಅಯ್ಯಾ ಸ್ವರ್ಗಲೋಕ ತಾನಿರ್ದಲ್ಲಿ. ಮರ್ತ್ಯ ಪಾತಾಳ ತಾನಿರ್ದಲ್ಲಿ. ಶಾಂಭವ ಶಿವ ಲೋಕ ತಾನಿರ್ದಲ್ಲಿ. ತನ್ನಿಂದಧಿಕಮಪ್ಪ ಮತ್ತೊಂದು ಲೋಕವಿಲ್ಲಾಗಿ, ಇವೆಲ್ಲ ತನ್ನಾಧೀನವಲ್ಲದೆ, ಅವ ರಾಧೀನ ತಾನಲ್ಲ ನೋಡಾ, ಅಪ್ರಮಾಣ ಕೂಡಲಸಂಗಮದೇವಾ.

(೩) ಕುರುಹುಂಟೇ ಮರಳಿ ಲಿಂಗಕ್ಕೆ? ತೆರಹುಂಟೇ ಮರಳಿ ಲಿಂಗಕ್ಕೆ? ಎಲ್ಲೆಡೆಯೊಳು ಪರಿ ಪೂರ್ಣವಾದ ಪರಾತ್ಪರ ಲಿಂಗದ ನಿಲವನರಿಯದೆ, ಹುಸಿಯ ಕಲ್ಪಿಸಿ, ಹುಸಿಯನೇ ಪೂಜಿಸಿ, ಹುಸಿಯ ಫಲಪದವನುಂಡು, ಹುಸಿಯಾಗಿ ಹೋದವರ ಕಂಡು ನಗುತಿರ್ದನಯ್ಯ ನಮ್ಮ ಅಖಂಡೇಶ್ವರಾ.

(೪) ಪುಣ್ಯಪಾಪಂಗಳೆಂಬುವು ತಮ್ಮ ಇಷ್ಟವು ಕಂಡಿರಯ್ಯ! "ಅಯ್ಯಾ" ಎಂದೊಡೆ ಸ್ವರ್ಗ, "ಎಲವೋ" ಎಂದೊಡೆ ನರಕ. "ದೇವಭಕ್ತ, ಜಯ ಜಯ" ಎಂಬ ನುಡಿಯೊಳಗೆ ಕೈಲಾಸವೈದುದು, ಕೂಡಲಸಂಗಮದೇವಾ.

(೫) ಸರ್ವವೂ ಶಿವನಿಂದ ಉದ್ಭವಿಸಿದವೆಂದೊಡೆ, ಆ ಉದ್ಭವಿಸಿದವೆಲ್ಲ ಶಿವನೇ? ಸಕಲ ಬೀಜದ ಬಿತ್ತುವನು ಒಕ್ಕಲಿಗನೆಂದೊಡೆ, ಬೆಳೆ ತಾನೊಕ್ಕಲಿಗನೇ? ಮಡಕೆಯ ಕುಂಬರ ಮಾಡುವನೆಂದೊಡೆ, ಆ ಮಡಕೆ ತಾ ಕುಂಬರನೇ? ಕಬ್ಬುನದ ಕಮ್ಮರ ಮಾಡುವನೆಂದೊಡೆ, ಆ ಕಬ್ಬುನ ತಾ ಕಮ್ಮರನೇ? ಈ ಪರಿಯಲ್ಲಿ ಸಕಲ ಜಗತ್ತು ಸಚರಾಚರವನು ಶಿವನು ಮಾಡುವನೆಂದೊಡೆ, ಆ ಸಚರಾಚರವೆಲ್ಲವೂ ಶಿವನೇ? ಆ ಹಾಗಾದೊಡೆ, ಅಷ್ಟಾದಶವರ್ಣಂಗಳೇಕಾದುವು? ಎಂಬತ್ತೆಂಟು ಲಕ್ಷ ಜೀವರಾಶಿಗಳೇಕಾದುವು? ಸುಖ, ದುಃಖ, ಸ್ವರ್ಗ, ನರಕಂಗಳೇಕಾದುವು? ಆಚಾರ ಅನಾಚಾರಗಳೇಕಾದುವು? ಪುಣ್ಯ, ಪಾಪ, ಭವಿ, ಭಕ್ತ ರೆಂದೇಕಾದುವು? ಇದು ಕಾರಣ ಸದ್ಭಕ್ತ ಸದಾಚಾರದಲ್ಲಿರ್ಪನು, ಅಂತಲ್ಲದೆ ಸರ್ವವೂ ಶಿವನೆಂದೊಡೆ ಘೋರ ನಾಯಕನರಕ, ಕೂಡಲ ಚನ್ನಸಂಗಯ್ಯ.

(೬) ಹೊಸಮುತ್ತಿನ ಸುಪ್ಪಾಣಿಯಂತೆ ಲಿಂಗೈಕ್ಯವು. ಸ್ಪಟಿಕದ ಘಟದೊಳಗಣ ಪ್ರಭೆಯಂತೆ ಲಿಂಗೈಕ್ಯವು. ವಾಯುವಿನ ಸಂಚಲದ ನಿಲವಿನಂತೆ ಲಿಂಗೈಕ್ಯನ ಸಂಬಂಧವದು ಗುಹೇಶ್ವರಾ.

(೭) ಬ್ರಹ್ಮಂಗೆ ಸರಸ್ವತಿಯಾಗಿ ಬೆನ್ನಲಿ ಬಂದಳು ಮಾಯೆ. ವಿಷ್ಣುವಿಂಗೆ ಲಕ್ಷ್ಮಿಯಾಗಿ ಭವಕ್ಕೆ ತಿರಿಗಿಸಿದಳು ಮಾಯೆ. ರುದ್ರಂಗೆ ಉಮಾದೇವಿಯಾಗಿ ಸಿರತೊಡೆಯಲ್ಲಿ ಕಾಡಿದಳು ಮಾಯೆ. ಎಳ್ಳಿಗೆ ಎಣ್ಣೆ, ಮುಳ್ಳಿಗೆ ಮೊನೆಯಾಗಿ, ಹೂವಿಗೆ ಗಂಧವಾಗಿ ಅವರವರಂಗದಲ್ಲಿ ಹಿಂಗದೆ ಪ್ರತಿರೂಪಾಗಿ ಸಂದಿಲ್ಲದೆ ಕಾಡುತಿದ್ದಾಳೆ ಮಾಯೆ. ಥಕ್ಕೆಯ ಉಲುಹು ಅಡಗುವದಕ್ಕೆ ಮುನ್ನವೇ ನಿಶ್ಚೈಸಿಕೊಳ್ಳಿ, ಕಾಲಾಂತಕ ಭೀಮೇಶ್ವರಲಿಂಗವನರಿಯಬಲ್ಲೊಡೆ.

(೮) ಮಡಿಕೆಯೇ ದೈವವು, ಮರದಲ್ಲಿಯ ದೈವವು, ಬೀದಿಯ ಕಲ್ಲೇ ದೈವವು, ಹಣತೆ ದೈವವು, ಬಿಲ್ಲನಾರಿ ದೈವವು ಕಾಣಿರಯ್ಯ. ಕೊಳಗನೇ ದೈವವು, ಗಿಣಿಲು ದೈವವು. ಕಾಣಿರಯ್ಯ. ದೈವ ದೈವವೆಂಬ ಕಾಲಿಡಲಿಂಬಿಲ್ಲವು. ದೇವನೊಬ್ಬನೇ ಕೂಡಲಸಂಗಮದೇವಾ.

(೯) ಇಳೆ ನಿಮ್ಮ ದಾನ, ಬೆಳೆ ನಿಮ್ಮ ದಾನ, ಸುಳಿದು ಬೀಸುವ ವಾಯು ನಿಮ್ಮ ದಾನ, ನಿಮ್ಮ ದಾನವನುಂಡು ಅನ್ಯರ ಹೊಗಳುವ ಕುನ್ನಿಗಳನೇನೆಂಬೆ ರಾಮನಾಥಾ.

(೧೦) ಮಡದಿಯ ಪ್ರಾಣಕ್ಕೆ ಮೊಲೆಮುಡಿ ಇದ್ದಿತ್ತೆ? ಒಡೆಯರ ಪ್ರಾಣಕ್ಕೆ ಇದ್ದಿತ್ತೆ ಯಜ್ಞೋಪ ವೀತ? ಕಡೆಯಲ್ಲಿರ್ದ್ದ ಅಂತ್ಯಜನು ಹಿಡಿದಿದ್ದನೇ ಪ್ರಾಣದಲ್ಲಿ ಹಿಡಿಗೋಲ? ನೀ ಕೊಡಕಿಕ್ಕಿದ ತೊಡಕನೀ ಲೋಕದ ಜಡರೆತ್ತ ಬಲ್ಲರೈ ರಾಮನಾಥಾ?

---

CC-0. Jangamwadi Math Collection, Varanasi. An eGangotri Initiative



# ವೀರಶೈವ ಧರ್ಮಮತವು



## ಹಲವು ಭಾರತ ಧರ್ಮಗಳು

ಭರತ ಭೂಮಿಯು ಅನೇಕ ಧರ್ಮಗಳಿಗೂ ಮತಗಳಿಗೂ ಹುಟ್ಟುನೆಲವಾಗಿದೆ. ಇವುಗಳ ಒಂದೊಂದನ್ನು ಎಣಿಸಿದರೆ ಎಷ್ಟೊಂದು ಆದವುವೊ ತಿಳಿಯದು. ಆದರೆ ಸಾಮಾನ್ಯಗಳನ್ನು ಹಿಡಿದು ಈ ಮತಗಳನ್ನು ಆಯಾಮತದ ಪ್ರಮಾಣಗಳಿಂದ, ಆಯಾ ಮತದ ಉಪಾಸ್ಯ ವಸ್ತುವಿನಿಂದ, ಆಯಾ ಮತದ ತಾತ್ವಿಕ ವಿವೇಚನದಿಂದ ವರ್ಗೀಕರಿಸಬಹುದು.

ಒಂದನೆಯದಾದ ಪ್ರಮಾಣ ಸಾಮಾನ್ಯದಿಂದ ಇವುಗಳನ್ನು ವರ್ಗೀಕರಿಸುವಣ. ಸಾಮಾನ್ಯವೆಂದರೇನು ? ಹಲವು ಒಂದೊಂದು ಅಥವಾ ಪ್ರತಿಸ್ವಯವಾದ ಪದಾರ್ಥಗಳಲ್ಲಿ ಕಂಡು ಬರುವ ಆವುದಾನೊಂದು ಅವುಗಳನ್ನಗಲದ ಪದಾರ್ಥಕ್ಕೆ ಸಾಮಾನ್ಯವೆಂಬ ಹೆಸರು. ಪದಾರ್ಥಗಳನ್ನು ಒಂದೊಂದನ್ನೆ ಅರಿಯುವುದಾಗಲಿ ಎಣಿಕೆ ಮಾಡುವುದಾಗಲಿ ಅಸಂಭವವಾದುದರಿಂದ ತತ್ವಚಿಂತಕರು ಲೋಕಾನುಭವದ ಜನಗಳು ಸಾಮಾನ್ಯದಿಂದಲೆ ಪದಾರ್ಥಗಳನ್ನು ವರ್ಗೀಕರಿಸಿ ಜ್ಞಾನವನ್ನು ಪಡೆವುದು, ಪಡೆದ ಜ್ಞಾನವನ್ನು ಹಬ್ಬಿಸುವುದು ಆಗಿದೆ. ಆದುದರಿಂದ ನಾವು ಇದುವೆ ಮಾರ್ಗದಿಂದ ವೀರಶೈವ ಮತ್ತು ಇತರ ಮತಗಳ ಸಾಮಾನ್ಯ ವಿಶಿಷ್ಟ ಲಕ್ಷಣಗಳನ್ನು ಅರಿಯುವಣ. ಪ್ರಮಾಣ ವಿಭಾಗದಿಂದ ವರ್ಗೀಕರಿಸಲು ಪ್ರಮಾಣವೆಂದರೇನು ಎಂಬುದನ್ನು ಸಾಮಾನ್ಯವಾಗಿ ತಿಳಿಯಬೇಕಾಗಿದೆ. ಆಯಾ ಮತಗಳ ತತ್ವವನ್ನು ಯಥಾರ್ಥವಾಗಿ ತಿಳಿಸುವ ಸಾಧನೆಗಳೆ ಪ್ರಮಾಣಗಳು. ಕೇವಲ ಶಬ್ದವೆ ತಮ್ಮ ಧರ್ಮಪ್ರಮಾಣವೆಂದು ಹೇಳುವ ವೈದಿಕ ಧರ್ಮಗಳು, ಬಲ್ಲ ಅನುಭವಿಗಳಾದ ಬುದ್ಧ ಜಿನಾದಿಗಳು ಹೇಳಿದುದೆ ಧರ್ಮವೆಂಬ ಬೌದ್ಧ ಜೈನಾದಿ ಮತಗಳು, ಎಂದೆಂದಿಗೂ ಅಳಿವಿಲ್ಲದ ನಿತ್ಯನಿರ್ಮಲನಾದ ಪರಶಿವನ ವಾಕ್ಯಗಳೆ ಪ್ರಮಾಣವೆಂಬ ಶೈವ ಮತಗಳು, ಇದರಂತೆಯೆ ಪರವಸ್ತುವೆಂದು ತಾವು ಉಪಾಸಿಸುವ ವಿಷ್ಣ್ವಾದಿ ದೇವತೆಗಳು ಹೇಳಿದುದೆ ಧರ್ಮವೆನ್ನುವ ವೈಷ್ಣವಾದಿ ಮತಗಳು ಎಂದು ವರ್ಗೀಕರಿಸಬಹುದು.

ಇನ್ನು ಉಪಾಸ್ಯವಸ್ತುವಿನಿಂದ ವರ್ಗೀಕರಿಸಲು ಯಜ್ಞವೇ ವೈದಿಕ ಧರ್ಮಕ್ಕೆ ಉಪಾಸ್ಯವು. ವಿಷ್ಣ್ವಾದಿಗಳೆ ವೈಷ್ಣವಾದಿ ಮತಗಳಿಗೆ ಉಪಾಸ್ಯರು. ಶಿವನೆ ಶೈವ ಧರ್ಮಗಳಿಗೆ ಉಪಾಸ್ಯನು. ತತ್ವ ತಾತ್ವಿಕದಿಂದ ವರ್ಗೀಕರಿಸಲು ಯಜ್ಞತತ್ವವಿಚಾರವೆ ವೈದಿಕ ಪೂರ್ವ ಮೀಮಾಂಸಾಶಾಸ್ತ್ರದ ವಿವೇಚನವು. ಬ್ರಹ್ಮ ವಿವೇಚನವೆ ಉತ್ತರ ಮೀಮಾಂಸಾವಿಷಯವು. ದ್ರವ್ಯಾದಿ ಸಪ್ತಪದಾರ್ಥ ವಿವೇಚನವೆ ತಾರ್ಕಿಕಮತಸಾರವು. ಪ್ರಧಾನ ಪುರುಷಾದಿ ೨೫ ತತ್ವಗಳ



CC-0. Jangamwadi Math Collection, Varanasi. An eGangotri Initiative

ವಿವೇಚನವೆ ಸಾಂಖ್ಯಮತಸಾರವು. ವಿಷ್ಣ್ವಾದ್ಯಾಗಮುಗಳಲ್ಲಿಯ ವಾಸುದೇವ ಸಂಕರ್ಷಣಾದಿ ತತ್ತ್ವಗಳ ವಿವೇಚನವೇ ವೈಷ್ಣವಾದಿ ಮತಗಳ ಸ್ವರೂಪವು. ಆಲಯ ವಿಜ್ಞಾನಾದಿ ಪಂಚಸ್ಕಂದ ಗಳ ವಿವೇಚನವೆ ಬೌದ್ಧಧರ್ಮಸ್ವರೂಪವು.

ಜೀವ, ಅಜೀವ, ಆಸ್ರವ, ಸಂಸ್ರವ, ನಿರ್ಜರ, ಬಂಧಮೋಕ್ಷಗಳೆಂಬ ಸಪ್ತ ಪದಾರ್ಥಗಳ ವಿವೇಚನವೆ ಜೈನಮತದ ತಾತ್ತ್ವಿಕವು. ಪೃಥ್ವ್ಯಾದಿ ಶಿವಾಂತವಾದ ೩೬ ತತ್ತ್ವಗಳ ವಿವೇಚನವೆ ಶೈವ ದರ್ಶನಗಳ ತಾತ್ತ್ವಿಕವು. ಈ ವಿಭಾಗಗಳಲ್ಲಿ ಆಯಾ ಮತಗಳ ಅವಾಂತರ ಭೇದಗಳು ಅಂತರ್ಗತವಾಗಿಹವು. ಇನ್ನು ಹಲವು ಮತಗಳ ಪ್ರಮಾಣ ಲಕ್ಷಣಗಳನ್ನು ವಿವರಿಸುವ ಗೊಡ ವೆಗೆ ಹೋಗದೆ ಶಿವಾಗಮಗಳು ಪ್ರಮಾಣವೆನ್ನುವ ಶೈವ ಮತದ ಬಗೆಯಿಂದ ಆ ಆಗಮುಗಳನ್ನು ಪ್ರಮಾಣವೆನ್ನುವಲ್ಲಿ ನಮಗೆ ತೋರುವ ಬಗೆಯಿಂದ ಪ್ರಮಾಣಲಕ್ಷಣವನ್ನು ಈಗ ನೋಡುವಣ.

## ಆತ್ಮನ ಚಿಚ್ಛಕ್ತಿಯು ಧರ್ಮಪ್ರಮಾಣವು

ಆವೊದಾನೊಂದರ ಸಿದ್ಧಿಗೆ ಪ್ರಮಾಣವೂ ಲಕ್ಷಣವೂ ಅವಶ್ಯಕವು. ಪ್ರಮಾಣ ಲಕ್ಷಣ ಗಳಿಲ್ಲದೆ ಏನೊಂದು ಒಡವೆಯಾಗಲಿ ಮಾತಾಗಲಿ ಸಿದ್ಧವಾಗಲಾರದು. ಹಾಗಾದರೆ ಪ್ರಮಾಣ ವೆಂದರೇನು? ಪದಾರ್ಥಗಳನ್ನು ನಮ್ಮ ಬುದ್ಧಿಗೂ ಆ ಬುದ್ಧಿಯಿಂದ ನಮ್ಮ ಆತ್ಮನಿಗೂ ಗೋಚ ರಗೊಳಿಸುವ ಸಾಧನವು. ಧರ್ಮವಾದರು ಒಂದು ಪದಾರ್ಥವಾದುದರಿಂದ ಅದನ್ನರಿಯಲು ಪ್ರಮಾಣವು ಬೇಕು. ಅತಿ ಸೂಕ್ಷ್ಮವಾಗಿ ನೋಡಿದರೆ ಧರ್ಮಕ್ಕೆ ಮನುಷ್ಯನ ಹೃದಯವೆ ಪ್ರಮಾಣವಾಗಿದೆ. ಹೊರಗಿನ ಪ್ರಮಾಣಗಳು ಧರ್ಮವನ್ನರುಹಲು ತುಂಬಾ ಸಾಧನವಾಗವು. ಧರ್ಮವೆಂದರೆ ಧರಿಸುವ ಅಥವಾ ತಾಳುವ ಶಕ್ತಿಯು. ತನ್ನ ಅಂದರೆ ಆತ್ಮನ ತಾಳುವ ಶಕ್ತಿಯು. ಸರ್ವಜ್ಞೇಯ ಪದಾರ್ಥಗಳಿಗೂ ಆಶ್ರಯವಾಗಿರುವುದರಿಂದ ಇತರ ಜ್ಞೇಯಗಳನ್ನು ತಿಳಿಸುವ ಪ್ರಮಾಣಗಳಾದರೂ ಆತ್ಮನಿಂದಲೆ ಧರಿಸಲ್ಪಟ್ಟವಾದುದರಿಂದ ಆತ್ಮನು ಅಥವಾ ಆತ್ಮನ ತಾಳುವ ಶಕ್ತಿಯು ಅನ್ಯಪ್ರಮಾಣಗಳಿಗೆ ಗೋಚರವಾಗದು. ಹೊರಗಿನ ಕೊಡವನ್ನು ಒಳಗಿನ ಕಣ್ಣೊ ಅದನ್ನು ಅದಕ್ಕೂ ಒಳಗಿನ ಬುದ್ಧಿಯೂ ಅದನ್ನು ಅದಕ್ಕೂ ಒಳಗಿನ ವಿದ್ಯೆಯೆಂಬ ಮಾಯಿಕ ತತ್ವವೂ ಆ ವಿದ್ಯೆಯನ್ನು ಆತ್ಮನಚಿಚ್ಛಕ್ತಿಯೂ ಅರಿವುವು. ಚಿಚ್ಛಕ್ತಿಯೆಂದರೆ ಆವುದಾನೊಂದ ರಿಂದ ಆತ್ಮನು ತನ್ನ ಇರುವಿಕೆಯಲ್ಲಿ ಸಂಶಯವನ್ನು ಹೊಂದದೆ ಇತರವೆಲ್ಲವನ್ನು ತಿಳಿವನೊ ಆ ಚೇತನ ಶಕ್ತಿಯು.

ಈ ಶಕ್ತಿಯು ಸರ್ವವನ್ನೂ ತಿಳಿವುದರಿಂದ ಸರ್ವಕ್ಕೂ ನೆಲೆಯಾಗಿದೆ. ಈ ನೆಲೆಯಾಗಿ ರುವಿಕೆಯೆ ಇಲ್ಲಿ ಧರ್ಮವೆನಿಸುತ್ತದೆ. ಧರ್ಮಶಬ್ದವು 'ಧೃ' ಧಾತುವಿಗೆ 'ಮನ್' ಪ್ರತ್ಯಯವು ಸೇರಿ ಆಗಿದೆ. ಈ ಪ್ರತ್ಯಯವು ಧಾರಣ ಶಕ್ತಿಯಲ್ಲಿಯೂ ಧರಿಸಲ್ಪಡುವ ಪದಾರ್ಥದಲ್ಲಿಯೂ ವಾಚಕವಾಗಿದೆ. ಆದರೆ ಇಲ್ಲಿ ನಾವು ಧರ್ಮ ಶಬ್ದವನ್ನು ಧಾರಣಶಕ್ತಿ ಅಥವಾ ನೆಲೆಯಾಗಿರುವ ಬಲ ಎಂಬ ಅರ್ಥದಲ್ಲಿ ಉಪಯೋಗಿಸಿಹೆವು.

ಲೋಕದಲ್ಲಿ ಧರ್ಮಗಳೆಂದು ಪ್ರಸಿದ್ಧವಾಗಿರುವ ಪದಾರ್ಥಗಳನ್ನು ಬಗೆದು ನೋಡಿ ದರೆ ಅವುಗಳಲ್ಲಿ ಒಂದು ಸಾಮಾನ್ಯಾರ್ಥವು ಕಂಡುಬರುವುದು. ಅವೆಲ್ಲ ಆತ್ಮನ ಬಲವನ್ನು ಪ್ರಕಟಗೊಳಿಸಿ ಅವನ ಹುರಳನ್ನು ಬಲಪಡಿಸುವ ಮಾರ್ಗಗಳಾಗಿವೆ. ಮನುಷ್ಯನ ಐಹಿಕ ಜೀವ



CC-0. Jangamwadi Math Collection, Varanasi. An eGangotri Initiative

ನದಲ್ಲಿ ಬರುವ ಸಂಕಟಗಳನ್ನು ಆವನು ಲೆಕ್ಕಿಸದೆ ಎಂತು ನೂಕಬೇಕು ಎಂದು; ಇಲ್ಲವೆ ಇದಕ್ಕೂ ಹೆಚ್ಚಿಗೆ ಆ ಸಂಕಟಗಳನ್ನೂ ಆ ಸಂಕಟಗಳಿಗೆ ಕಾರಣವಾದ ಈ ಜೀವಿತವನ್ನೂ ಇವರ ಅಜ್ಞಾನವನ್ನೂ ಆತ್ಮನಲ್ಲಿ ಹೇಗೆ ಲಯಪಡಿಸಬೇಕು ಎಂದು; ಇವಕ್ಕಿಂತಲೂ ಮೇಲೆ ಈ ಸಂಕಟಗಳಲ್ಲಿರುವ ಈ ಪ್ರಪಂಚದಲ್ಲಿರುವ ಅಜ್ಞಾನ ತಮಸ್ಸನ್ನೇ ಚಿಚ್ಛಕ್ತಿಯ ಸೋಂಕಿನಿಂದ ಎಂತು ಮಾರ್ಪಡಿಸಬೇಕು ಎಂದು ತಿಳಿಸುವುದೆ ಧರ್ಮಗಳ ತಾರತಮ್ಯಾನುಸಾರವಾದ ಪ್ರಯೋಜನವಾಗಿದೆ. ಆದುದರಿಂದ ಧರ್ಮಕ್ಕೆ ಹೃದಯವಲ್ಲದೆ ಬೇರೊಂದು ಪ್ರಮಾಣವಿಲ್ಲಾ.

ಹೃದಯವೆಂದರೆ ಚಿಚ್ಛಕ್ತಿ ಪ್ರಕಟವಾಗುವ ಸ್ಥಾನವು. ಹೃದಿ ಅಯಮ್ ಎಂಬ ಉಪನಿಷದ್ ವಾಕ್ಯವು ಇಲ್ಲಿ ಪ್ರಮಾಣವಾಗಿದೆ. ತನ್ನ ಚಿಚ್ಛಕ್ತಿಯು ವಿವರಿಸಬಾರದ, ವಿವರಿಸಲಿಕ್ಕೆ ಬಂದರೂ ಅದು ತನ್ನಲ್ಲಿ ಹೇಗೆ ಬಂದಿತೆಂದು ಹೇಳಬಾರದ, ಹೇಳಬಂದರೂ ತನ್ನಲ್ಲಿ ಅದು ಸಹಜವಾಗಿರುವ ಅಜ್ಞಾನ ಮಲದಿಂದ ಕುಂಠಿತವಾಗಿ ಬೇರೆ ಬೇರೆ ತೋರಿಕೆಗಳನ್ನು ತನ್ನಲ್ಲಿ ತಾಳುವುದೆ ಸಂಸಾರವು. ಆ ತೋರಿಕೆಗಳನ್ನು ನೂಕುವುದು, ಆ ತೋರಿಕೆಗಳನ್ನು ಅಡಗಿಸುವುದು, ಆ ತೋರಿಕೆಗಳನ್ನು ಮಾರ್ಪಡಿಸುವುದು ತಾರತಮ್ಯಾನುಸಾರವಾದ ಮುಕ್ತಿಯು. ಆತ್ಮನ ಈ ಚಿಚ್ಛಕ್ತಿಯು ಹೊರ ಹೊಮ್ಮಿ ಸೂಸುತ್ತಲು ಹೃದಯದೊಳಗಿಂದಲೆ ಹಾಯುವುದು. ಆ ಹೃದಯವು ಕಾಮಕ್ರೋಧಾದಿಗಳಿಂದ ಸಂಕಲಿತವಾದಾಗ ಚಿಚ್ಛಕ್ತಿಯ ಸ್ವರೂಪವು ಚೆನ್ನಾಗಿ ಹೊಳೆಯದು. ಆದೆ ಈ ದೋಷಗಳು ಹೋಗಲು ಆ ಚಿಚ್ಛಕ್ತಿಯು ನಿರ್ಬಂಧವಿಲ್ಲದೆ ತನ್ನ ನಿಜರೂಪದಲ್ಲಿ ಬೆಳಗುತ್ತ ತನ್ನ ಸ್ವರೂಪವನ್ನು ಕಾಣಿಸುವುದು. ಇಂತು ಹೃದಯವೆ ಧರ್ಮದ ಪ್ರಕಾಶಕ್ಕೆ ಕಾರಣವಾದುದರಿಂದ ಅದುವೆ ಧರ್ಮಜ್ಞಾನಕ್ಕೆ ಪ್ರಮಾಣವಾಗಿದೆ.

### ಶಿವಧರ್ಮಕ್ಕೆ ಶಿವಾನುಭವವೂ ಶಿವಾನುಭವಿಗಳ ವಚನಗಳೂ ಪ್ರಮಾಣವು

ಆದರಿಂದಲೆ ಶಿವಜ್ಞಾನಿಗಳು ಶಿವಾನುಭಾವವೆ ಹೆಚ್ಚಿನ ಪ್ರಮಾಣವೆಂದು ನಂಬಿರುವರು. ಇಲ್ಲಿ ನಾವು ಶಿವಾನುಭವ ಶಿವಾನುಭಾವಗಳ ವಿವೇಕವನ್ನರಿಯಬೇಕು. ಅನುಭವವೆಂದರೆ ಆವುದಾದರೊಂದು ಪದಾರ್ಥದ ಅರಿವು. ನಾನು ಬಿಸಿಲಲ್ಲಿ ಹೋದರೆ ಅದರ ಬೇಗೆಯ ಅನುಭವವಾದಪುದು. ಈ ಅನುಭವವು ಎಲ್ಲ ಕಾಲಗಳಲ್ಲಿಯೂ ಒಂದೆ ತೆರನಾದುದಲ್ಲ. ಆಯಾ ಋತುಮಾನ ಭೇದದಿಂದ ಭಿನ್ನವಾಗಿದೆ. ಮತ್ತು ನಾನು ಈ ಅನುಭವದಲ್ಲಿ ಮುಳುಗಿ ಒಂದಾಗುವದಿಲ್ಲ. ಹೇಗೆಂದರೆ ನನ್ನಲ್ಲಿ ಹಲವು ಅನುಭವಗಳು ಬೇರೆ ಬೇರೆ ಉಂಟಾದಪುವು. ಆದರಂತೆಯೆ ಶಿವಾನುಭವವು ಒಂದಾನೊಂದು ಪುಣ್ಯ ನಿಮಿಷದಲ್ಲಿ ನನ್ನ ಹೃದಯದ ಕಾಮಕ್ರೋಧಾದಿಗಳು ಒಪ್ಪಚಿ ಸರಿದುನೆಂದರೆ ಮೇಘಮಂಡಲದಲ್ಲಿಯ ಮಿಂಚಿನಂತೆ ಹೊಳೆಯಬಹುದು. ಹೊಳೆದ ಬಳಿಕ ಇದು ನನ್ನ ನೆನಪಿನ ಹಾದಿಯಲ್ಲಿ ಬರಬಹುದು. ನಾನದನ್ನು ನೆನಿಸಬಹುದು. ವಸಂತ ಕಾಲದಲ್ಲಿ ವಾಸಿಸಿದ ಮಲ್ಲಿಗೆ ಹೂವನ್ನೂ ಸ್ವಾದಿಸಿದ ಮಾವಿನ ಹಣ್ಣನ್ನೂ ಚಳಿಗಾಲದಲ್ಲಿ ನಾನು ನೆನಿಸಬಹುದು. ಇವುಗಳ ಅನುಭವವನ್ನು ಹೇಳಬಹುದು. ಶಿವಾನುಭಾವವು ಹೀಗಲ್ಲ. "ಅನು" ಎಂದರೆ ಎಡೆಬಿಡದೆ "ಭಾವ" ಎಂದರೆ ಆಗಿರುವಣ ಅಥವಾ ಸಂಗತವಾಗಿರುವಣ ಎಂಬರ್ಥ. ಶಿವಾನುಭಾವವೆಂದರೆ ಹೃದಯವು ಅತ್ಯಂತ ನಿರ್ಮಲವಾದುದರಿಂದ ಎಡೆಬಿಡದೆ ತನ್ನ ಶಿವತ್ವವು ಸೂಸಿ ಹರಿದು ಗಂಗೆಯು ತನ್ನ ಓಘದಿಂದ ಎಲ್ಲನ್ನು ಪವಿತ್ರಿಸುವಂತೆ ನಮ್ಮ ಇರವನ್ನೆ ಶಿವಮಯವನ್ನಾಗಿ ಮಾಡುವುದೆಂಬರ್ಥ.



CC-0. Jangamwadi Math Collection, Varanasi. An eGangotri Initiative

ಹೀಗಾದುದರಿಂದ ಈ ಶಿವಧರ್ಮಕ್ಕೆ ಬೇರೊಂದು ಪ್ರಮಾಣವನ್ನು ಹೇಳಬಾರದಾಗಿದೆ. ಹಾಗು ಇದರ ತಾರತಮ್ಯದಿಂದಲೆ ಇತರ ಧರ್ಮಗಳಿಗೆಯು ಅನುಭಾವದ ಹೊರತಾಗಿ ಪ್ರಮಾಣ ಗಳನ್ನು ಒಪ್ಪಬಾರದಾಗಿದೆ. ಆದೊಡೆಯು ವ್ಯವಹಾರದಲ್ಲಿ ಬೇರೆ ಪ್ರಮಾಣಗಳನ್ನು ಒಪ್ಪದಿದ್ದರೆ ಬರುವಂತಿಲ್ಲ. ಒಂದು ಪದಾರ್ಥದ ಬಣ್ಣವನ್ನು ತಿಳಿಯಲು ನಮ್ಮ ಕಣ್ಣೆ ಮುಖ್ಯ ಪ್ರಮಾಣ ವಾಗಿದೆ. ಆದರೆ ಅದನ್ನು ನಾವು ಕಾಣದಾಗ ಕಂಡವರ ಮಾತನ್ನೂ ಅವರ ತರ್ಕಯುಕ್ತಿ ಗಳನ್ನೂ ಅವಲಂಬಿಸಬೇಕಾಗುವುದು. ಆ ಮಾತಿನಿಂದಲೂ ತರ್ಕಯುಕ್ತಿಯಿಂದಲೂ ಪದಾ ರ್ಥದ ತಿಳಿವು ತಕ್ಕಮಟ್ಟಿಗೆ ಆದ ಬಳಿಕ ನಮ್ಮ ಕಣ್ಣಿನಿಂದ ಅದರ ಅರಿವನ್ನು ಹೊಂದಬಹುದು. ಆ ದೃಷ್ಟಿಯಿಂದ ಇಲ್ಲಿ ಪ್ರಮಾಣ ವಿಭಾಗವನ್ನು ಮಾಡಿ ಅದಕ್ಕನುಸರಿಸಿ ನಮ್ಮ ವೀರಶೈವ ಧರ್ಮದ ಲಕ್ಷಣವನ್ನು ಹೇಳತೊಡಗುವೆವು.

ಮೇಲೆ ವಿವರಿಸಿದ ಪರಿಯಿಂದ ಧರ್ಮವೆಂದರೆ ಆತ್ಮನ ಚಿಚ್ಛಕ್ತಿಯ ತಡೆಯಿಲ್ಲದ ಪ್ರವಾಹ ಎಂಬರ್ಥವಾಯಿತು. ಇಂತಹ ಪ್ರವಾಹವು ಲಭಿಸಲು ನಾವು ಹೆಣಗಬೇಕಾದಪುದು.

ಎಂತು ಹೆಣಗಿದರೆ ಆ ಪ್ರವಾಹವು ಅಂತಾದಪುದು. ಉಂಟಾದ ಪ್ರವಾಹವು ತಡೆ ಯಿಲ್ಲದೆ ಸಾಗಿದಪುದು ಎಂಬ ಅಂಶವನ್ನು ತಿಳಿದಲ್ಲದೆ ಅಂತಹ ಹೆಣಗಾಟವನ್ನು ನಾವು ಕೈಕೊಳ್ಳ ಲಾರೆವು. ಈ ಹೆಣಗಾಟವೆಂದರೆ ನಮ್ಮ ಕ್ರಿಯಾಶಕ್ತಿಯ ಚಲನವು. ಈ ಕ್ರಿಯಾಶಕ್ತಿಯ ಸೋಸಿದ ನಡತೆಯೆ ಸದಾಚಾರವು. ಧರ್ಮದ ಆಚಾರವು. ಇದರ ಪರಿಯನ್ನು ತಿಳಿಯಲು ಅದರಲ್ಲಿ ನುರಿತವರ ಮಾತು ನಮಗೆ ಪ್ರಮಾಣವಾಗಿದೆ. ಆದುದರಿಂದ ಧರ್ಮವು ಏನೆಂಬುದರ ಮೊದಲನೆಯ ತಿಳಿವೆಗೂ ಆ ಧರ್ಮವನ್ನು ಸಾಧಿಸಲು ನಡತೆಯು ಏನಿರಬೇಕೆಂಬುದಕ್ಕೂ ಬಲ್ಲ ವರ ಮಾತುಗಳು ಪ್ರಮಾಣವಾಗಿವೆ. ಪ್ರಮಾಣದಿಂದ ಧರ್ಮವನ್ನು ತಿಳಿದು ಆಚರಿಸಿ ಧರ್ಮದ ಅನುಭವವನ್ನು ಹೊಂದುವೆವು. ಅನುಭವದಿಂದ ಅನುಭಾವಿಗಳಾಗುವೆವು. ಅನುಭಾವಿಗಳಾದ ಬಳಿಕ ಆ ಧರ್ಮಕ್ಕೆ ನಮ್ಮ ಚಿಚ್ಛಕ್ತಿಯೊಂದೆ ಪ್ರಮಾಣವಾದಪುದು.

ಈ ಬಗೆಯಿಂದ ಧರ್ಮವೇನು, ಅದರ ಆಚರಣವೇನು ಎಂಬುದಕ್ಕೆ ಬಲ್ಲವರ ನುಡಿಗಳು ಪ್ರಮಾಣವಾದುವು. ನಮ್ಮೀ ಭರತಭೂಮಿಯಲ್ಲಿ ತಾವು ಸಾಧಿಸತಕ್ಕ ಧ್ಯೇಯ ವಸ್ತುವನ್ನು ಹಲವರು ಬ್ರಹ್ಮವೆಂದೂ, ಹಲವರು ಶಿವನೆಂದೂ, ಹಲವರು ಆತ್ಮನೆಂದೂ ಇನ್ನು ಹಲವರು ಶೂನ್ಯವೆಂದೂ ಕರೆದರು. ಸಾಧಿಸತಕ್ಕ ವಸ್ತುವು ಒಂದೆಯಾದರು ಆಯಾ ತತ್ವಜ್ಞಾನಿಗಳಿಗೆ ಅದು ಗೋಚರಿಸಿದಂತೆ ಅದರ ಸ್ವರೂಪವನ್ನು ನುಡಿದ ಶಬ್ದಗಳು ಬೇರೆಬೇರೆಯಾದುವು. ಒಂದು ಬಗೆಯಿಂದ ಎಲ್ಲ ಶಬ್ದಗಳಲ್ಲಿಯೂ ಒಂದೆ ಒಂದು ಸಾಮಾನ್ಯಾರ್ಥವನ್ನು ಕಾಣಬಹು ದಾದರು ಆಯಾ ತತ್ವಚಿಂತಕರಿಗೆ ಸಲುವಳಿಯಾದ ಆ ಧ್ಯೇಯ ವಸ್ತುವಿನ ಒಂದೊಂದು ಬಗೆಯು ಅವರವರ ಶಬ್ದದಲ್ಲಿ ಒಡೆಮೂಡಿಹುದು.

## ಶಿವಾಗಮಂಗಳ ವಿಚಾರವು

ಶಿವಾಗಮಂಗಳು ತಮ್ಮ ಧ್ಯೇಯ ಪದಾರ್ಥವನ್ನು ಶಿವನೆಂದು ಕರೆದುವು. ಮತ್ತು ಆ ಧ್ಯೇಯವಸ್ತುವನ್ನು ಗೋಚರಿಸಲು ಬೇಕಾದ ವಿಶಿಷ್ಟವಾದ ನಡತೆಯನ್ನು ಶಿವಧರ್ಮವೆಂದು ಕರೆದುವು. ಆಗಮವೆಂದರೇನು? ಒಂದೊಂದು ಶಬ್ದದಲ್ಲಿಯ ಎಲ್ಲ ತಿರುಳನ್ನರಿಯಲು ಆ ಶಬ್ದದ



CC-0. Jangamwadi Math Collection, Varanasi. An eGangotri Initiative

ವ್ಯಾಕರಣಾನುಸಾರವಾದ ವ್ಯುತ್ಪತ್ತಿಯಾವುದು, ಆ ಶಬ್ದಪ್ರಯೋಗಜ್ಞರು ಅದನ್ನಾವ ಅರ್ಥವಲ್ಲಿ ಬಳಸಿದರು ಎಂಬುದನ್ನು ತಿಳಿಯಬೇಕಾಗಿದೆ. 'ಆಗಮ' ಶಬ್ದದಲ್ಲಿ 'ಆ' ಎಂಬ ಉಪಸರ್ಗವೂ 'ಗಮ' ಎಂಬ ಧಾತುವೂ 'ಆ' ಧಾತುವಿಗೆ 'ಅಚ್' ಎಂದರೆ 'ಅ' ಎಂಬ ಪ್ರತ್ಯಯವು ಸೇರಿ ಆಗಿದೆ. ಆಙ್ ಅಂದರೆ 'ಆ' ಎಂಬ ಉಪಸರ್ಗವು ವ್ಯಾಪ್ತಿಯಲ್ಲಿಯೂ 'ಸೂಕ್ಷ್ಮ' ಎಂಬ ಅರ್ಥದಲ್ಲಿಯೂ ಮರ್ಯಾದೆಯಲ್ಲಿಯೂ ವರ್ತಿಸುತ್ತದೆ. 'ಅಚ್' ಪ್ರತ್ಯಯವು ಇಲ್ಲಿ ಕರಣ ಅಥವಾ ಸಾಧನ ಎಂಬ ಅರ್ಥವಲ್ಲಿ ವರ್ತಿಸುವುದು. ಆದುದರಿಂದ ಶಿವಾಗಮವೆಂದರೆ ತತ್ವಗಳನ್ನು ಪೃಥ್ವಿಯನ್ನು ಮೊದಲುಗೊಂಡು ಶಿವತತ್ವದ ವರೆಗೆ ಎಲ್ಲವನ್ನೂ ವ್ಯಾಪಿಸಿ ತಿಳಿಸುವ ಶಾಸ್ತ್ರವೆಂಬ ಅರ್ಥ.

ಈ ಶಿವಾಗಮಗಳ ಕರ್ತೃವಾರು? ಅವು ಎಂದಿನಿಂದ ಬಳಕೆಯಾದುವು ಎಂಬ ವಿಚಾರವೂ ಇಲ್ಲಿ ತಲೆಯೆತ್ತುವುದು. ಶಿವಜ್ಞಾನ ಚಿಂತಕರು ಈ ಶಿವಾಗಮಂಗಳು ಶಿವನಿಂದಲೆ ಸೃಷ್ಟಿ ಕಾರ್ಯದಲ್ಲಿ ಇವುಗಳ ಪ್ರವೃತ್ತಿಯೆಂದು ಹೇಳುವರು. ಶತಸೂತ್ರದಲ್ಲಿ ಉದಾಹರಿಸಿದ ಸ್ವಾಯಂಭುವಾಗಮವಿದು.

ಶ್ಲೋ॥ ಅಥಾತ್ಮಮಲಮಾಯಾಖ್ಯ ಕರ್ಮಬಂಧ ವಿಮುಕ್ತಯೇ ।
ವ್ಯಕ್ತಯೇಚ ಶಿವತ್ವಸ್ಯ ಶಿವಾಜ್ಜ್ಞಾನಂ ಪ್ರವರ್ತತೇ ॥ ೨ ॥

ಆತ್ಮನಿಗುಳ್ಳ ಮಲಮಾಯಾಕರ್ಮವೆಂಬ ಪಾಶಗಳಿಂದ ಬಿಡಿಸಲಿಕ್ಕೂ ಅವನ ಶಿವತ್ವದ ಪ್ರಕಟನೆಗೂ ಶಿವನಿಂದ ಜ್ಞಾನವೂ ಹೊರಟಿತು. ಆ ಜ್ಞಾನವು ಇತ್ತೆರನಾಗಿದೆ. ಒಂದು ಪರವೆಂದೂ ಮತ್ತೊಂದು ಅಪರವೆಂದೂ. ಇದಕ್ಕೆ ದಿವ್ಯಾಗಮವು:—

ಶ್ಲೋ॥ ಜ್ಞಾನಂ ದ್ವಿವಿಧಮಾಖ್ಯಾತಂ ಪರಂಚೈವಾಪರಂ ತಥಾ ।
ಪರಂಚೈವಾವಬೋಧಾಖ್ಯಮಪರಂ ಶಾಸ್ತ್ರಮುತ್ತಮಂ ॥ ೩ ॥

ಪರಜ್ಞಾನವೆಂದರೆ ಅವಬೋಧ. ಅವಬೋಧವೆಂದರೆ ಶಿವನಲ್ಲಿ ಆಳವಾಗಿರುವ ಅಂದರೆ ಶಿವನ ಸ್ವರೂಪದಲ್ಲಿ ಅಡಕಾದ ಚಿಚ್ಛಕ್ತಿ ಅಥವಾ ಜ್ಞಾನಶಕ್ತಿಯು. ಆ ಚಿಚ್ಛಕ್ತಿಯು ಹೊರಹೊಮ್ಮಿ ಪ್ರಕಟವಾದುದೆ ಅಪರಜ್ಞಾನವು. ಹಾಗಾದರೆ ಶಿವನಿಂದ ಶಾಸ್ತ್ರವು ಹೇಗೆ ಹೊರಹೊಮ್ಮಿತು ಎಂದರೆ ಶಿವಾನುಭಾವಿಗಳ ಬಾಯಿಂದ ಎಂದು ಹೇಳುವೆವು. ಇದಕ್ಕೆ ಮೃಗೇಂದ್ರಾಗಮ ಸೂತ್ರವು:—

ಶ್ಲೋ॥ ವಪುಷೋಽವಿದ್ಯಮಾನತ್ವಾದ್ಧೃತ್ಕರ್ಮಂಕರೋತಿ ಸಃ
ತತ್ರ ತತ್ರಾಸ್ಯ ತತ್ಕರ್ತೃವಪುಷಾನುಕೃತಂ ವಪುಃ ॥ ೧೧ ॥

ಶಿವನಿಗೆ ತನ್ನಂತೆ ನಿರವಯವಾದ ಶಕ್ತಿಯಲ್ಲದೆ ಬೇರೊಂದು ಶರೀರವಿಲ್ಲದುದರಿಂದ ಈ ವಿಶ್ವಸೂತ್ರವನ್ನು ನಡಿಸುವಲ್ಲಿ ಆಯಾ ಕರ್ತೃ ಪುರುಷರ ಶರೀರ ಸದೃಶವಾಗಿ ಆ ಶಿವನ ಶರೀರವು ಆಯಾ ಕಾರ್ಯದಲ್ಲಿ ಮಾಡಲ್ಪಟ್ಟಿಹುದು. ಎಂದರೆ ಶಬ್ದಾತ್ಮಕವಾದ ಶಾಸ್ತ್ರವು ನಾಲಗೆಯಿಂದಲ್ಲದೆ ಹೊರಡದಾಗಿ ಶಿವಜ್ಞಾನಿಗಳ ನಾಲಗೆಯೆ ಶಿವಶಾಸ್ತ್ರ ಪ್ರವರ್ತಕವಾದುದೆಂಬರ್ಥ. ಆದರಿಂದಲೆ ವೀರಶೈವರು ಶಿವಜ್ಞಾನಿಗಳ ಜಿಹ್ವೆಯೆ ಗುರುಲಿಂಗವೆಂದು ಹೇಳುವರು.

ತಾತ್ಪರ್ಯವು ಜ್ಞಾನಿಗಳ ಒಡಲಲ್ಲಿ ಹುದುಗಿದ ಶಿವನ ನಿರವಯವ ನಿಷ್ಕಲ ನಿಃಶೂನ್ಯ ಸ್ವಭಾವದ ಸ್ವಪ್ರಕಾಶಾತ್ಮಕ ಶಕ್ತಿಯು ಅವಬೋಧವು. ಆ ಅವಬೋಧವು ಅವರ ಹೃದಯ



CC-0. Jangamwadi Math Collection, Varanasi. An eGangotri Initiative

ದಲ್ಲಿಯೂ ಇಂದ್ರಿಯಗಳಲ್ಲಿಯೂ ತುಂಬಿ ವಚನರೂಪದಿಂದ ಹೊರಬಿದ್ದುದೆ ಶಾಸ್ತ್ರವು. ಅದುವೆ ಶಿವಾಗಮವು. ಅದುವೆ ಶಿವಶರಣರ ವಚನವು. ಅದುವೆ ಶಿವಜ್ಞಾನ ಪ್ರತಿಪಾದಕವಾದ ವೇದೋಪನಿಷದ್ ವಚನಗಳು.

ವೀರಶೈವ ಧರ್ಮಕ್ಕೆ ಶಿವಾಗಮಂಗಳೆ ಪ್ರಮಾಣವು. ಈ ಶಬ್ದಾರ್ಥದಲ್ಲಿ ನಾವು ವಚನಗಳನ್ನೂ, ಶಿವತತ್ವ ಪ್ರತಿಪಾದಕವಾದಮಟ್ಟಿಗೆ ವೇದೋಪನಿಷದ್ ವಾಕ್ಯಗಳನ್ನೂ, ಸಮಾವೇಶ ಪಡಿಸಿರುವೆವು. ವೇದದ ಕರ್ಮಕಾಂಡವಾಗಲಿ ಯಜ್ಞ ವಿಷಯಂಗಳಾಗಲಿ ಉಪನಿಷತ್ತುಗಳ ಶಿವಜ್ಞಾನಬೋಧಕವಲ್ಲದ ಅಂಶಗಳಾಗಲಿ ಪ್ರಮಾಣವಲ್ಲ.

## ಶಿವತತ್ವ ವಿವೇಚನವು.

ಶಿವನೆಂದರೇನು? ಮಂಗಲರೂಪನೆಂದರ್ಥ. ಅಮಂಗಲವೆಂದರೆ ಅಜ್ಞಾನ ಅಸ್ವತಂತ್ರಗಳು. ಮಂಗಲವೆಂದರೆ ಜ್ಞಾನ ಸ್ವತಂತ್ರತೆಗಳು.

ಶ್ಲೋ॥ ದೃಕ್ಕ್ರಿಯಾತ್ಮಕಮೈಶ್ವರ್ಯಂ ಯಸ್ಯ ತದ್ದಾತ್ರಪೂರ್ವಕಂ।
ಈಶ್ವರಸ್ಸೋಽತ್ರ ಮಂತವ್ಯಃ ಶಕ್ತಿದ್ವಯಯುತಃ ಪ್ರಭುಃ ॥ ೮ ॥

ಸರ್ವವಿಷಯ ಜ್ಞಾನಕ್ರಿಯೆಗಳೆ ಐಶ್ವರ್ಯವು. ಆ ಎರಡು ಶಕ್ತಿಗಳು ಆವುದೊಂದು ವಸ್ತುವಿನಲ್ಲಿ ತಾವೇ ಸಿದ್ಧವಾಗಿರುವುವೊ ಅವನು ಈಶ್ವರನು. (ದಾತ್ರಪೂರ್ವಕಂ; ದಾತ್ರ ಭೇದಿಸುವವ ಎಂದರೆ ಅಜ್ಞಾನವನ್ನೂ, ಅಶಕ್ತಿಯನ್ನೂ ಭೇದಿಸುವವ ಎಂದರೆ ಗುರುವು. ಮತ್ತೊಬ್ಬ ಗುರುವಿಲ್ಲದೆ ಸ್ವಾಭಾವಿಕವಾಗಿ ಬಂದುದೆಂಬರ್ಥ.) ಪಶುಗಳೆಂಬ ಅಜ್ಞಾನಾತ್ಮಕ ಅಜ್ಞಾನವೂ ಅಶಕ್ತಿಯೂ ಗುರುವಿನ ದೀಕ್ಷೆಯಿಂದ ನಷ್ಟವಾದಪುದು. ಆ ಬಳಿಕ ಅವನು ಶಿವನಾಗುವನು. ಶಿವನು ಹಾಗಲ್ಲ; ಅವನ ಜ್ಞಾನಶಕ್ತಿಯೂ ಕ್ರಿಯಾಶಕ್ತಿಯೂ ಬೇರೊಬ್ಬ ಗುರುವನ್ನು ಅಪೇಕ್ಷಿಸುವುದಿಲ್ಲ. ಎಂದರೆ ಸ್ವಭಾವಸಿದ್ಧವಾಗಿಹವು.

## ಪಶುತತ್ವ ವಿವರಣೆ.

ಪಶುವೆಂಬ ಬದ್ಧಾತ್ಮನು ಹಾಗಲ್ಲ. ಅವನ ಜ್ಞಾನಕ್ರಿಯಾಶಕ್ತಿಯು ತಡೆಯಲ್ಪಟ್ಟಿದು.

ಶ್ಲೋ॥ ಚೈತನ್ಯಂ ದೃಕ್ಕ್ರಿಯಾರೂಪಂ ತದಸ್ತ್ಯಾತ್ಮನಿ ಸರ್ವದಾ।
ಸರ್ವತಶ್ಚಯತೋ ಮುಕ್ತೌ ಶ್ರೂಯತೇ ಸರ್ವತೋಮುಖಮ್ ॥ ೬೭ ॥
ಸದಪ್ಯಭಾಸಮಾನ ತ್ವಾತ್ತನ್ನಿರುದ್ಧಂ ಪ್ರತೀಯತೇ ॥

—ಮೃಗೇಂದ್ರ ಸಂಹಿತೆ

ಜ್ಞಾನಕ್ರಿಯಾರೂಪವಾದ ಚೈತನ್ಯವು ಎಂದಿಗು ಆತ್ಮನಲ್ಲಿ ಉಳ್ಳುದೆ; ಮುಕ್ತಿಯಲ್ಲಿ ಅದು ಸರ್ವತೋಮುಖವಾಗಿಹುದು. ಹೀಗಿದ್ದರು ಶಿವಾನುಗ್ರಹವಾಗುವ ಮೊದಲು ಅದರ ಸಾಮರ್ಥ್ಯವು ತೋರದರಿಂದ ಅದು ತಡೆಯಲ್ಪಟ್ಟಿದೆಂದು ನಿಶ್ಚಯವಾದಪುದು.

## ಶಿವತ್ವಾಭಿವ್ಯಕ್ತಿಯೆಂಬ ಮೋಕ್ಷವು.

ಈ ಪ್ರತಿಬಂಧವನ್ನು ನೀಗುವುದೆ ಮುಕ್ತಿಯು ಅಥವಾ ಶಿವತ್ವಾಭಿವ್ಯಕ್ತಿಯು.

ಶ್ಲೋ॥ ಅಸ್ಮಾತ್ಪ್ರವಿತತಾದ್ಬಂಧಾತ್ಪರಸಂಸ್ಥಾನಿರೋಧಕಾತ್।
ದೀಕ್ಷೈವ ಮೋಚಯತ್ಯೂರ್ಧ್ವಂ ಶೈವಂ ಧಾಮನಯತ್ಯಪಿ ॥ ೭೯ ॥



CC-0. Jangamwadi Math Collection, Varanasi. An eGangotri Initiative

ಈ ವಿಸ್ತೃತವಾದ ಬಂಧವು ಆತ್ಮನ ಉತ್ಕೃಷ್ಟವಾದ ಸ್ಥಿತಿಯನ್ನು ತಡೆವುದು. ದೀಕ್ಷೆಯೆ ಈ ತಡೆಯಿಂದ ಆತ್ಮನನ್ನು ಬಿಡಿಸಿ ಶಿವತೇಜಸ್ಸನ್ನು ಹೊಂದಿಸುವುದು. ಅದರಿಂದಲೆ ಈ ಅನುಗ್ರಹ ಶಕ್ತಿಗೆ ದೀಕ್ಷೆಯೆಂಬ ಹೆಸರು ಬಂದಿದೆ. ಇದಕ್ಕೆ ಮತಂಗ ಪಾರಮೇಶ್ವರವು.

## ದೀಕ್ಷಾ ಸ್ವರೂಪವು.

ಶ್ಲೋ|| ಅನಯೋಶ್ಯಾಸನೇ ಸಿದ್ಧಾ ದೀಕ್ಷಾ ಕ್ಷಪಣದಾನಯೋಃ ||

ಪಶುತ್ವವನ್ನು ಕೆಡಿಸುವಣ ಶಿವತ್ವವನ್ನು ಕೊಡುವಣ ಎಂಬೆರಡು ಅರ್ಥಯೋಗದಿಂದ ಈ ಅನುಗ್ರಹಣ ಶಕ್ತಿಗೆ ದೀಕ್ಷೆಯೆಂಬ ಹೆಸರಾಯಿತು. ಮತಾಂತರಗಳಲ್ಲಿಯ ಮುಕ್ತಿ ಕಲ್ಪನಕ್ಕೂ ಈ ಮತದ ಮುಕ್ತಿ ಕಲ್ಪನಕ್ಕೂ ಇರುವ ಅಂತರವು ಮತಂಗ ಪಾರಮೇಶ್ವರದಲ್ಲಿ ವಿವರವಾಗಿದೆ. ಅದೆಂತೆಂದೊಡೆ—

ಶ್ಲೋ|| ದಾನಂ ನಾಮ ಸ್ವ ಸತ್ತೈವ ಯಾ ಸಾ ಜ್ಞಾನಕ್ರಿಯಾತ್ಮಿಕಾ || ೯೦ ||
ಸಾಶಕ್ತಿಸ್ತಸ್ಯ ಸ್ಪರ್ಶಾದ್ವ್ಯಕ್ತೀ ಭೂತಾಸುನಿರ್ಮಲಾ ||
ಪತ್ಯುರ್ದಾನಂತ ದೇವೋಕ್ತಂ ನಸ್ಸಯಂ ವ್ಯಜ್ಯತೇ ಪಶೋಃ || ೯೧ ||

ಆತ್ಮನ ಸ್ವಭಾವವಾದ ಜ್ಞಾನಕ್ರಿಯೆಗಳು ಶಿವಾನುಗ್ರಹ ಶಕ್ತಿಯ ಅಜ್ಞಾನಚ್ಛೇದನದಿಂದ ಅಭಿವ್ಯಕ್ತವಾಗುವುದರಿಂದ ದಾನನೆನಿಸಿಕೊಂಡು ದಾನ ಎಂಬ ಶಬ್ದವು 'ದೋ' ಅವಖಂಡನೆಯೆಂಬ ಧಾತುವಿಗೆ ಭಾವಾರ್ಥದಲ್ಲಿ ಲ್ಯುಟ್ ಎಂಬ ಅನಪ್ರತ್ಯಯವು ಸೇರಿ ಆಗಿದೆ. ಕ್ಷಪಣವೆಂದರೆ ಕ್ಷಯಿಸುವಣವೆಂಬರ್ಥವು. ಮಲಮಾಯಾ ಕರ್ಮಗಳನ್ನು ಕಡಿದು ಸಂಸಾರವನ್ನು ಕ್ಷಯಿಸುವುದರಿಂದ ಈ ಶಿವತ್ವಾಭಿವ್ಯಕ್ತಿಯನ್ನು ಮಾಡುವ ಶಕ್ತಿಗೆ ದೀಕ್ಷೆಯೆಂಬ ಹೆಸರು ಬಂದಿತು.

ಇಲ್ಲಿ ಮೇಲಿನ ಪ್ರಮಾಣಗಳಿಂದ ಶೈವಚಿಂತಕರು ಆವ ಮೆಟ್ಟಿನಿಂದ ಧ್ಯೇಯ ಗುರಿಯನ್ನಿಟ್ಟರುಯೆಂಬುದನ್ನು ನಾವು ಕಾಣ್ಬೆವು. ಎಂದರೆ ಅವರು ಆತ್ಮನು ಅಜ್ಞಾನ ಅಸ್ವತಂತ್ರತೆಯೆಂಬ ಬಂಧನದಲ್ಲಿ ಬಿದ್ದಿಹನೆಂದು ತಮ್ಮ ಅನುಭವದಿಂದ ಕಂಡು ತತ್ವಚಿಂತನವನ್ನು ಮಾಡತೊಡಗಿದರು. ಈ ಬಂಧವು ಅಶುಭವಾದುದರಿಂದ ಅದನ್ನು ನೀಗುವ ಉಪಾಯವಾವುದು, ನೀಗಿ ಹೊಂದಿದ ಅವಸ್ಥೆಯಾವುದು ಎಂಬುದನ್ನು ಪರಿಶೀಲಿಸತೊಡಗಿದರು. ಆತ್ಮನ ಬಂಧಕ್ಕೆ ಆತ್ಮನ ಜ್ಞಾನಕ್ರಿಯೆಗಳು ಕಾರಣವೆಂದು ಅರಿತರು. ಆ ಜ್ಞಾನವು ಪ್ರತಿಬಂಧವುಳ್ಳುದೆಂದು ತಮಗೆ ಆಗಾಗ ಉಂಟಾಗುವ ಭ್ರಮದಿಂದಲೂ ಅನ್ಯಥಾ ಜ್ಞಾನದಿಂದಲೂ ಅರಿತರು. ಇಂಥ ಭ್ರಮಾದಿಗಳಲ್ಲಿ ಬೀಳದ ಸ್ಥಿತಿಯು ಶಿವತ್ವ ಅಥವಾ ಮಂಗಲವೆಂದು ಕಂಡರು. ಆ ಸ್ಥಿತಿಯಲ್ಲಿ ಯಾವ ರಾಗದ್ವೇಷಾದಿಗಳಿಲ್ಲದರಿಂದ ಅದಕ್ಕೆ ಶಿವನೆಂದು ಹೆಸರಿಟ್ಟರು.

ಶ್ಲೋ|| ವಿಶ್ವಸ್ಯಾನೇಕರೂಪ ಸ್ಯ ಜ್ಞಾನಮೇಕಂ ಶಿವಾತ್ಮಕಂ |
ವ್ಯಾಪಕಂ ವಿಮಲಂ ಶಾಂತಂ ಭುಕ್ತಿ ಮುಕ್ತೀ ಚ ಯೇನ ತತ್ || ೭೫ ||

ಅನೇಕ ರೂಪವಾದಂಥ ಈ ವಿಶ್ವಕ್ಕೆ ಎಂದರೆ ಆತ್ಮರುಗಳಿಗೆ ಶುದ್ಧಭೋಗವೂ ಮುಕ್ತಿಯೂ ಆವುದರಿಂದ ಸಿದ್ಧಿಸುವುವೊ ಆ ಒಂದು ಜ್ಞಾನವೂ ಅದ್ವಿತೀಯವಾಗಿಹುದು, ನಿರ್ಮಲವಾಗಿಹುದು, ರಾಗದ್ವೇಷರಹಿತವಾಗಿಹುದು, ಸರ್ವಗತವಾಗಿಹುದು.



CC-0. Jangamwadi Math Collection, Varanasi. An eGangotri Initiative

ಆತ್ಮನ ಜ್ಞಾನದಲ್ಲಿ ತೋರುವ ಅನೇಕ ವಿಷಯಗಳಿಂದುಟಾಗುವ ರಾಗದ್ವೇಷಾದಿಗಳಿಗೆ ಆ ಜ್ಞಾನದಲ್ಲಿ ತಾಮ್ರದ ಕಾಳಿಕೆಯಂತೆ ಬೆರೆತ ಮಲವೂ, ಆ ಕಾಳಿಕೆಯಿಂದ ಆಚೆಯ ಶಿವತ್ವದ ಶುದ್ಧ ಜ್ಞಾನದಲ್ಲಿ ಅಡಗಿದ ಜಗತ್ತಿನ ಉಪಾದಾನ ಕಾರಣವಾದ ಸರ್ವವನ್ನೂ ತನ್ನಲ್ಲಿ ಗರ್ಭೀಕರಿಸಿಕೊಂಡುದರಿಂದ ಮಾಯೆ ಎಂಬ ಹೆಸರನ್ನು ತಳೆದ ಜಗತ್ತಿನ ಕಾರಣದಿಂದ ಉದ್ಭವಿಸಿದ ಪದಾರ್ಥಗಳ ಮೋಹವೂ, ಆ ಮೋಹದಿಂದ ಆತ್ಮನ ಕ್ರಿಯಾ ಶಕ್ತಿಯು ಕಲುಷಿತವಾಗಿ ಉಂಟಾದ ಕರ್ಮವೂ ಬಂಧನವೆನಿಸಿದುವು. ಇವುಗಳನ್ನು ತೊಲಗಿಸಲು ಆ ಶಿವತ್ವದ ಶುದ್ಧ ಜ್ಞಾನವೆ ಸಾಧನವಾಗಿ ದೀಕ್ಷೆಯೆನ್ನಿಸಿತು. ಅದರಿಂದ ಪ್ರಕಟವಾದ ಶುದ್ಧ ಜ್ಞಾನದ ಅಭಿವ್ಯಕ್ತಿಯು ಶಿವತ್ವವೆನಿಸಿತು. ಆ ಶುದ್ಧ ಜ್ಞಾನದಲ್ಲಿ ರಾಗದ್ವೇಷಾದಿಗಳ ಉಳುಮೆಗೆ ಆಸ್ಪದವಿಲ್ಲ. ಏಕೆಂದರೆ ಅವು ಮಲದಿಂದಲೂ ಆ ಮಲ ಸಂಸರ್ಗದಿಂದ ಕಲಕಿದ ಜ್ಞಾನವನ್ನು ಮೋಹಿಸುವ ಮಾಯಾ ಶಕ್ತಿಯಿಂದಲೂ ತೋರಿದುವು. ಆದುದರಿಂದ ಈ ಜ್ಞಾನವು ಶಿವ ಅಥವಾ ಮಂಗಲವೆನಿಸಿತು. ಆ ಮಂಗಲತ್ವವುಳ್ಳವನೇ ಶಿವನು.

ಎಂದರೆ ಸಾರಾಂಶವಿದು. ಶಿವಚಿಂತಕರು ಅಮಂಗಲವಾದ ಪಶುತ್ವವೆಂಬ ಬಂಧವನ್ನು ಹರಿಯಲು ಧ್ಯಾನ ನಿಮಗ್ನರಾಗಿ ಕಂಡ ಆ ಮಂಗಲ ಸ್ಥಿತಿಯನ್ನು ಸೋಂಕದ ತತ್ವಕ್ಕೆ ಶಿವನೆಂದು ಕರೆದರು. ಅವರು ಹೊರಟ ಈ ಚಿಂತನ ಪ್ರವೃತ್ತಿಯು ಆತ್ಮನ ಆವ ವರ್ಣ ಜಾತ್ಯಾದಿಯನ್ನು ಹಿಡಿಯದೆ ಕೇವಲ ಅವನ ಆಧ್ಯಾತ್ಮಿಕ ಮುಕ್ತಿ ಲಾಲಸವನ್ನೆ ಹಿಡಿಯುವುದರಿಂದ ಇಲ್ಲಿ ವರ್ಣ ಜಾತ್ಯಾದಿಯು ತತ್ವಚಿಂತನಾಧಿಕಾರಕ್ಕೆ ಕಾರಣವಾಗಲಿಲ್ಲ.

## ಶೈವ ವೀರಶೈವ ಭೇದವು.

ಶೈವ ವೀರಶೈವಗಳೆರಡಕ್ಕೂ ಶಿವಾಗಮಶಾಸ್ತ್ರಗಳೆ ಪ್ರಮಾಣವಾಗಿವೆ. ಆದರೆ ಅವೆರಡರಲ್ಲಿಯ ಭೇದವನ್ನು ಅರಿವುದುಚಿತವು. ದ್ವೈತ್ತಮೊದಲಿನ ಚಿಂತಕರು- ಬದ್ಧಾತ್ಮರುಗಳಿಂದ ಬೇರೆಯವನಾದ ಇನ್ನೊಬ್ಬ ಆತ್ಮನು ಇಹನು, ಅವನ ಜ್ಞಾನಕ್ರಿಯಾಶಕ್ತಿಗಳು ಎಂದಿಗು ನಿರ್ಮಲವಾದುವು, ಆತ್ಮರುಗಳ ಜ್ಞಾನಕ್ರಿಯಾಶಕ್ತಿಗಳು ಮಲದಿಂದ ದೂಷಿತವಾದುವು, ಆ ಮಲವು ಸ್ವಾಭಾವಿಕವಾದರು ತೊಲಗಬಲ್ಲುದು, ಅದು ತೊಲಗಲು ಆತ್ಮನ ಜ್ಞಾನಕ್ರಿಯೆಯು ಶುದ್ಧವಾಗಿ ಅವನು ಶಿವಸಮಾನನಾಗುವನು ಎಂಬರು.

> ಶ್ಲೋ|| ವಿಶುದ್ಧ ಸ್ಸ್ಫಟಿಕಃ ಕಸ್ಮಾತ್ಕಸ್ಮಾತ್ತಾಮ್ರಂ ಸಕಾಳಿಕಂ |
> ಯಥಾತತ್ರ ನಿಮಿತ್ತಂ ನ ತಥಾ ನೈವ ಶಿವಾತ್ಮನೋಃ || ೮೨ ||

ಶಿವನೂ ಆತ್ಮನೂ ಸ್ವಭಾವದಿಂದ ಜ್ಞಾನಕ್ರಿಯಾಶಕ್ತಿಯುಳ್ಳವರಾದರು. ಒಬ್ಬನದು ನಿರ್ಮಲವೂ ಮತ್ತೊಬ್ಬನದು ಮಲಸಹಿತವೂ ಆದುದೇಕೆಂದರೆ ಅವರು ಸ್ಫಟಿಕ ತಾಮ್ರಗಳ ಉದಾಹರಣವನ್ನು ಮುಂದಿಡುವರು. ಎಂದರೆ ಸ್ಫಟಿಕವು ಸ್ವಭಾವದಿಂದಲೆ ವಿಶುದ್ಧವು. ತಾಮ್ರವು ಸ್ವಭಾವದಿಂದಲೆ ಸಕಾಳಿಕವು ( ಕಾಳಿಕಾ ಕಿಲುಬು ) ಹೇಗೊ ಹಾಗೆ ಈ ನಿರ್ಮಲತ್ವಸಮಲತ್ವಗಳಲ್ಲಿ ಕಾರಣವನ್ನು ಹುಡುಕಬಾರದೆಂಬರು.

ಶಿವಚಿಂತಕರು ಇಲ್ಲಿಗೆ ನಿಲ್ಲಲಿಲ್ಲ; ಮುಂದುವರಿದರು. ಶಿವನೆಂದೂ ಆತ್ಮನೆಂದೂ ಭೇದವನ್ನು ಹಿಡಿದು ಶಿವಸಮತ್ವವೆ ಮುಕ್ತಿಯೆಂಬುದು ಅನುಭವದ ಒಂದು ಸ್ಥಿತಿಯಲ್ಲಿ ಸಹಜವೆನ್ನಿಸ



CC-0. Jangamwadi Math Collection, Varanasi. An eGangotri Initiative

ಬಹುದಾದರೂ ತತ್ವಚಿಂತನವು ಮುಂದೆ ಸಾಗಿದಹಾಗೆ ಸಮರ್ಪಕವೆನ್ನಿಸಲಿಲ್ಲ. ಈ ಮುಂದಿನ ಹಾದಿಯೆ ನಮ್ಮ ವೀರಶೈವವು. ಆತ್ಮನ ಸತ್ತೆಯನ್ನೆ ಶಿವನೆಂಬ ಇನ್ನೊಬ್ಬಾತ್ಮನು ಹೊರಪಡಿಸುವನು. ಆ ಶಿವಸಮಾನತ್ವವೆ ಮುಕ್ತಿಯೆಂದೆನ್ನುವುದಕ್ಕಿಂತ ಆ ಶಿವನ ಗಾಢವಾದ ಸ್ವರೂಪದಲ್ಲಿ ಹುದುಗಿದ ಜ್ಞಾನಕ್ರಿಯಾಶಕ್ತಿಯು ಏನೊಂದು ಗೂಢವಾದ ಕಾರಣದಿಂದ ಚಲಿಸಿ ತನ್ನ ಅಗಾಧವಾದ ಸಾಮರ್ಥ್ಯದಿಂದ ವಿಶ್ವರಚನೆಯನ್ನು ಮಾಡುವಲ್ಲಿ ತಾನು ಮಾಡುವ ವಿಶ್ವರಚನೆಗೆ ಒಂದು ಉಪಾಯವೆಂದು ಒಂದು ಹೊಲಬೆಂದು ನಿರಾಲಂಬ ನಿಃಶ್ಶೂನ್ಯ ನಿರಂಶನಾದ ಪರಶಿವನಲ್ಲಿ ಆ ಸ್ಥಿತಿಯನ್ನು ಕೆಡಿಸದೆ ಕೆಡಿಸಲಾರದೆ ಅಂಶಗಳನ್ನು ಕೆದರಿ, ಆ ಕೆದರಿದ ಅಂಶಗಳಲ್ಲಿ ಶಿವನನ್ನು ಅಡಗಿಸಿ ಈ ವಿಶ್ವವನ್ನು ಮಾಡಬಾರದೇಕೆ? ಎಂದು ಚಿಂತಿಸಿದರು. ಇಂತು ಶಿವನನ್ನು ತನ್ನಲ್ಲಿ ಹುದುಗಿಸಿಕೊಂಡ ಆತ್ಮನಿಗೆ ತಮ್ಮ ಪರಿಭಾಷೆಯಿಂದ ಅಂಗನೆಂದು ಹೆಸರಿಟ್ಟರು. ಅಂಗದಲ್ಲಿ ಆತ್ಮನು ಅಡಗಿರುವಂತೆ ಆತ್ಮನಲ್ಲಿ ಶಿವನಡಗಿರುವುದರಿಂದ ಆ ಆತ್ಮನಿಗೆ ಅಂಗನೆಂದರು.

ನಾವು ಮೇಲೆ ಶಿವಶಬ್ದದ ಪ್ರವೃತ್ತಿಯನ್ನೂ ದೀಕ್ಷಾದಿ ಶಬ್ದಗಳ ಅರ್ಥವನ್ನೂ ಚಿಂತಕರು ಹೊರಟ ಮೆಟ್ಟನ್ನೂ ಶಿವಶಾಸ್ತ್ರಗಳ ಉಗಮವನ್ನೂ ತೋರಿಸಲು ಉದಾಹರಿಸಿದ ಪ್ರಮಾಣಗಳು ಈ ಶೈವದ ಮೆಟ್ಟನಿಂದಲೆ. ಹಾಗಾದರೆ ಅವು ವೀರಶೈವಕ್ಕೆ ಪ್ರಮಾಣವೆಂತು? ಎನಲಾಗದು. ಶಿವನು ಬೇರೆಯಾಗಿ ಆತ್ಮನು ಬೇರೆಯಾಗಿ ಶಿವಸಂಪರ್ಕದಿಂದ ಆತ್ಮನ ಕ್ರಿಯಾಜ್ಞಾನಶಕ್ತಿಯು ಅಭಿವ್ಯಕ್ತವಾಯಿತೆಂಬುದು ಕೊನೆಯಲ್ಲಿ ಆ ಶಿವನೂ ಆ ಆತ್ಮನೂ ಬೇರೆಯಾಗಿರಲಾರರೆಂಬ ಸಿದ್ಧಾಂತದಲ್ಲಿ ಪರಿಣಮಿಸಿ ವೀರಶೈವವಾದವುದು. ಮೊದಲು ತನ್ನಿಂದ ಬೇರೆ ಎಂದು ತಿಳಿದ ಶಿವನನ್ನು ಈ ನಿರ್ಮಲ ಜ್ಞಾನದಿಂದ ತನ್ನಲ್ಲಿ ಹುದುಗಿದ ಒಳದಿರುಳಲ್ಲದೆ ಶಿವನು ಬೇರಲ್ಲವೆಂದಾದವುದು. ಬೇರೆಂಬ ಭಾವವನ್ನು ಇಳುಹಿ ಒಳದಿರುಳೆಂಬ ಅರುಹನ್ನೊಳಗೊಂಡರೆ ಒಳಗಡಗಿದ ಶಿವನಲ್ಲಿ ವಿಶುದ್ಧವಾದ ಜ್ಞಾನಕ್ರಿಯೆಯೂ ಅಘಟಿತಘಟನಾಕುಶಲವಾಗಿ ಆತ್ಮನೆಂಬ ಅಂಗವನ್ನೆಬ್ಬಿಸಲು ಆ ಅಂಗನ ಅನುಗ್ರಹಕ್ಕಾಗಿ ಆ ಶಿವಾತ್ಮನು ತೋರಿಸುವ ಅನುಗ್ರಹವನ್ನು ಆ ಶಿವನ ಮತ್ತು ಅಂಗಾತ್ಮನ ಜ್ಞಾನಾಜ್ಞಾನಗಳು ವಿವರಿಸಲಿಕ್ಕಾಗಿ ಶೈವಾಗಮಗಳ ಪ್ರಮಾಣಗಳೆ ಸಲುವಳಿಯಾದವುವು.

## ಶಿವ ಲಿಂಗ ಶಬ್ದಗಳ ವಿಚಾರವು.

ಶಿವಾಗಮಗಳಲ್ಲಿ ಶಿವನಿಗೆ ಲಿಂಗವೆಂಬ ಶಬ್ದವು ಬಂದಿದೆ ಶಿವಾಲಯ ನಿರ್ಮಾಣ ಶಿವಲಿಂಗ ಪ್ರತಿಷ್ಠಾಪನ ಶಿವಲಿಂಗ ಪೂಜಾದಿ ವಿಷಯಗಳು ಹೇರಳವಾಗಿ ಕಾಮಿಕಾದಿ ಮಹಾಸಂಹಿತೆಗಳಲ್ಲಿ ಉಂಟು. ತಾತ್ವಿಕ ವಿಚಾರವೆಂಬ ಉಪಾಗಮಗಳಲ್ಲಿ ಶಿವತತ್ವ ವಿಚಾರವು ಕಂಡುಬರುವುದು. ಶಿವಲಿಂಗಪೂಜೆಯು ಶಿವಾರ್ಚನವೆ. ಆದರೆಯು ಶಿವನಿಗೆ ಪತಿಯೆಂತಲೂ ಆತ್ಮನಿಗೆ ಪಶುವೆಂತಲೂ ಸಂಜ್ಞೆಯಿಹುದು. ಲಿಂಗಾಂಗಗಳೆಂಬ ಸಂಜ್ಞೆಗಳಿಲ್ಲ. ಶೈವಶಾಸ್ತ್ರದ ಜ್ಞಾನ, ಜ್ಞೇಯ, ಅನುಷ್ಠಾನ, ಅಧಿಕಾರ, ಸಾಧನ, ಸಾಧ್ಯವೆಂಬ ಷಡರ್ಥಗಳಲ್ಲಿ ಜ್ಞಾನವೆಂದರೆ ಪತಿ, ಪಶು, ಪಾಶಗಳು, ಪಶುಪತಿ, ಆತ್ಮರುಗಳ ಸಮ್ಯಗ್ಜ್ಞಾನವು; ಜ್ಞೇಯವೆಂದರೆ ಪಶು, ಪತಿ, ಪಾಶಗಳು; ಅನುಷ್ಠಾನವೆಂದರೆ ಶಿವಪೂಜಾದಿ ಕ್ರಿಯೆಯು; ಅಧಿಕಾರವೆಂದರೆ ಬಂಧ ನಿವೃತ್ತಿಯನ್ನು ಹೊಂದಬೇಕೆಂಬ ಲಾಲಸೆಯು; ಸಾಧನವೆಂದರೆ ಶಿವಯೋಗಾಭ್ಯಾಸವು; ಸಾಧ್ಯವೆಂದರೆ ಶಿವಸಮಾನತ್ವವು – ಎಂದು ವಿವರಿಸುವುದುಂಟು. ಆದರೆ ವೀರಶೈವದಲ್ಲಿ ಅಂಗ-ಲಿಂಗ, ಶಕ್ತಿ-ಭಕ್ತಿ, ಹಸ್ತ-ಮುಖ, ಪದಾರ್ಥ-ಪ್ರಸಾದ ಎಂಬ



CC-0. Jangamwadi Math Collection, Varanasi. An eGangotri Initiative

ಎಂಟು ಪದಾರ್ಥಗಳು ಗಣಿಸಪಡುವುವು. ಇಲ್ಲಿ— ಜ್ಞೇಯವೆಂದರೆ ಈ ಎಂಟು ಪದಾರ್ಥಗಳು. ಜ್ಞಾನವೆಂದರೆ ಇವುಗಳ ಸಮ್ಯಗ್ ಜ್ಞಾನವು. ಅನುಷ್ಠಾನವೆಂದರೆ ಆಯಾ ಲಿಂಗಗಳನ್ನು ಅಂಗನು ಅರ್ಚಿಪುದು. ಅಧಿಕಾರವೆಂದರೆ ಆಯಾ ಲಿಂಗವನ್ನು ಸಮರಸಗೊಂಬ ಲಾಲಸವು. ಸಾಧನವೆಂದರೆ ಆಯಾ ಲಿಂಗಕ್ಕೆ ಆಯಾ ಪದಾರ್ಥಾರ್ಪಣವು. ಸಾಧ್ಯವೆಂದರೆ ಆಯಾ ಲಿಂಗಮುಖದಿಂದ ಆಯಾ ಪ್ರಸಾದಲಾಭವೂ ಮತ್ತು ಆ ಪ್ರಸಾದ ದ್ವಾರದಿಂದ ಆಯಾ ಲಿಂಗ ಸಾಮರಸ್ಯವು.

## ಶೈವ ವೀರಶೈವಗಳಲ್ಲಿ ಪರಿಭಾಷಾ ವಿವರವು

ಈ ಪರಿಭಾಷಾ ಭೇದವು ಏಕೆ ಬಂದಿತು? ಮೇಲೆ ವಿವರಿಸಿದಂತೆ ತತ್ವಚಿಂತಕರು ಆತ್ಮನು ಶಿವನ ಅಂಗನೆಂಬ ವಿಚಾರಕ್ಕೆ ಹೆಜ್ಜೆ ಇಟ್ಟಾಗ ಆ ಅಂಗ ಶಬ್ದಕ್ಕೆ ಅನುಗುಣವಾದ ಶಬ್ದವನ್ನು ಪ್ರಯೋಗಿಸಬೇಕಾಯಿತು. ಅಂತಹ ಪ್ರಯೋಗಕ್ಕೆ ಶಿವಶಬ್ದಕ್ಕಿಂತಲೂ ಲಿಂಗ ಶಬ್ದವು ಸುಗಮವಾಯಿತು. ಹೇಗೆಂದರೆ ಶಿವನು ಮತ್ತು ಆತ್ಮನುವೆಂಬಿವರಲ್ಲಿ ನಾವು ಮೇಲೆ ಎತ್ತಿದ "ವಿಶುದ್ಧ ಸ್ಫಟಿಕಸ್ಮಾತ್ ಕಸ್ಮಾತ್ ಸಕಾಲಿಕ"ವೆಂಬ ಸೂತ್ರದಲ್ಲಿ ಶಿವಾತ್ಮರುಗಳ ಸ್ವಭಾವವು ನಿಸರ್ಗಭಿನ್ನವೆಂದು ಸೂಚನೆಯಾದವುದು. ಆದರೆ ಈ ಮುಂದಿನ ಮೆಟ್ಟನ ಚಿಂತಕರಿಗೆ ನಿಸರ್ಗಭಿನ್ನತ್ವವೂ ಶಿವಸಂಪರ್ಕದಿಂದ ವಿಶುದ್ಧತ್ವವೂ ಮುಂದಿನ ವಿಚಾರಸರಣಿಗೆ ತೊಂದರೆಯನ್ನುಂಟು ಮಾಡುತ್ತಿದ್ದುವು. ಮತ್ತು ಆ ಮುಂದಿನ ಚಿಂತನದಲ್ಲಿ ಸ್ಫುಟವಾಗಬಹುದಾದ ಅಭಿವ್ಯಕ್ತಿಗೂ ತೊಡಕಾಗುತ್ತಿದ್ದುವು. ಆದುದರಿಂದ ದೀಕ್ಷಾ ಕಾಲದಲ್ಲಿ ಶಿಷ್ಯನನ್ನು ಸಂಸ್ಕರಿಸುವಾಗ—

ಏವಂ ಮನ್ತ್ರಮುಪಾದಿಶ್ಯ ಶಿಷ್ಯಾಙ್ಗಮಪಿ ದೇಶಿಕಃ ||
ಶಿವಾಙ್ಗಮಿತಿ ಸಂಚಿಂತ್ಯ ಲಿಂಗಸಂಸ್ಕಾರಮಾಚರೇತ್ ||

ಎಂದು ಶಿಷ್ಯನ ಅಂಗವು ಶಿವಾಂಗವೆಂದು ತಿಳಿದು ಲಿಂಗಕ್ಕೆ ಮಾಡಿದ ಸಂಸ್ಕಾರವನ್ನು ಅದಕ್ಕೆ ಮಾಡಬೇಕೆಂದು ಹೇಳಿರುವುದಾದರು ಪರಿಭಾಷೆಯಲ್ಲಿ ಲಿಂಗಾಂಗವೆನ್ನುವರಲ್ಲದೆ ಶಿವಾಂಗವೆನ್ನುವುದಿಲ್ಲ. ಪರಿಭಾಷೆಯೆಂದರೆ ಪರಿಷ್ಕೃತ ಭಾಷೆಯು. ಅಂದರೆ ತತ್ವಚಿಂತನಕ್ಕೆ ಅನುಕೂಲವಾಗುವಂತೆ ಸಂಸ್ಕರಿಸಿದ ಶಬ್ದವೆಂಬರ್ಥ. ಲಿಂಗ ಶಬ್ದವನ್ನು ಸಾಮರಸ್ಯ ಜ್ಞಾನಬೋಧೆಗೆ ಅನುಕೂಲವಾಗುವ ಅರ್ಥಬೋಧಕವಾಗುವಂತೆ ಪ್ರಯೋಗಿಸಲು ಸುಗಮವಾಗಿ ಬರುವುದು. 'ಲಿಂಗ' ಪದವು 'ಲೀನ' ಎಂದರೆ 'ಅಡಗಿದ' ಎಂಬ ಅರ್ಥವನ್ನು ಬೋಧಿಸಲು ಸಮರ್ಥವಾಗಿದೆ. ಪಾರಮೇಶ್ವರಾಗಮದಲ್ಲಿ-

ಲೀನಾರ್ಥಕ ಮಪಿತ್ವೀಶಿಯತ್ತಲ್ಲಿಙ್ಗಮುದಾಹೃತಮ್ ||
ತಲ್ಲಿಙ್ಗಮಯಮಿತ್ಯೇತಚ್ಛರೀರಂ ತಸ್ಯ ಧಾರಣಾತ್ || ೯೧ ||

ಎಂದು ಹೇಳಿರುವುದು. ಶಿವನು ಆತ್ಮನಲ್ಲಿ ಹುದುಗಿರುವನೆಂಬರ್ಥವನ್ನು ಲಿಂಗಪದವು ಬೋಧಿಸುವಷ್ಟು ಸುಗಮವಾಗಿ ಶಿವಪದವು ಬೋಧಿಸುವುದಿಲ್ಲ. ಆದರಿಂದ ಶಿವ ಮತ್ತು ಲಿಂಗಪದವು ಏಕಾರ್ಥವಾಗಿವೆಯಾದರೂ ಲಿಂಗಪೂಜೆಯಲ್ಲಿ ಉಪದೇಶವಾಗುವ ಮತ್ತು ವೀರಶೈವನ ಅರ್ಪಣಾದಿಕ್ರಿಯೆಗಳಲ್ಲಿ ಉಚಿತವಾದ ಮಂತ್ರವು ಶಿವಷಡಕ್ಷರಾತ್ಮವಾಗಿದೆಯಾದರೂ ವೀರಶೈವರು ಸಿದ್ಧಾಂತ ಪರಿಭಾಷೆಯಲ್ಲಿ ಲಿಂಗ ಶಬ್ದವನ್ನು ಬಳಸಿದರು. ಮತ್ತೆಂದರೆ ಲಿಂಗಶಬ್ದದಲ್ಲಿ ಲಯಗೊಳ್ಳುವ ಅರ್ಥವಿದ್ದಂತೆ ಲಯಸಿಕೊಳ್ಳುವ ಅರ್ಥವಾದರೂ ಇದೆ. ಆದರಿಂದಲೆ ಸಾಂಖ್ಯಶಾಸ್ತ್ರದಲ್ಲಿ ಸರ್ವ ಪ್ರಪಂಚವನ್ನು ತನ್ನಲ್ಲಿ ಹುದುಗಿಸಿಕೊಂಬ ಪ್ರಧಾನಕ್ಕೆ ಲಿಂಗವೆಂಬ ಸಂಜ್ಞೆಯುಂಟು. ಅಂದರೆ ಲಿಂಗಾಂಗ



CC-0. Jangamwadi Math Collection, Varanasi. An eGangotri Initiative

ಶಬ್ದಗಳ ಪರಿಭಾಷಾ ಕಲ್ಪನದಿಂದ ವೀರಶೈವರು ಸಮರಸ ಸಿದ್ಧಾಂತವನ್ನು ಬೋಧಿಸಲು ಅತ್ಯಂತ ಅನುಕೂಲವಾಗಿರುವ ಶಬ್ದಗಳನ್ನು ಕಂಡುಹಿಡಿದರು. ಅಂಗದಲ್ಲಿ ತಾನಡಗಿ ಅಂಗವನ್ನು ತಾನಡಗಿಸಿಕೊಂಬ ಪದಾರ್ಥವೆ ಲಿಂಗವು. ಆ ಲಿಂಗಕ್ಕೆ ತಾನು ಮೇಲುಹೊದಿಕೆಯಾಗಿ ಆ ಲಿಂಗದಲ್ಲಿಯೆ ಅಡಗುವ ಪದಾರ್ಥವು ಅಂಗವು.

## ವೀರಶೈವವೂ ಉಪನಿಷತ್ತುಗಳೂ

ಅಂಗ ಶಬ್ದವನ್ನು ವೀರಶೈವರು ಆತ್ಮವಾಚಕವಾಗಿ ಪರಿಷ್ಕರಿಸಿದುದರಿಂದ ಮತ್ತು ತಮ್ಮ ಧ್ಯೇಯ ವಸ್ತುವನ್ನು ಲಿಂಗ ಶಬ್ದದಿಂದ ಪರಿಭಾಷಿಸಿದುದರಿಂದ ವೀರಶೈವ ಸಿದ್ಧಾಂತವು ತನ್ನದೊಂದು ಸ್ವರೂಪವನ್ನು ಸ್ಫುಟವಾಗಿಯೂ ಒಡೆಮೂಡುವಂತೆಯೂ ಪ್ರಕಾಶಿಸಲು ಅನುವಾಯಿತು. ವೇದಾಂತಿಗಳು ತಮ್ಮ ಧ್ಯೇಯವನ್ನು ಬ್ರಹ್ಮವೆಂದೂ ಸಾಂಖ್ಯರು ತಮ್ಮದನ್ನು ಆತ್ಮನೆಂದೂ ಹೇಳಿರುವರು. ವೀರಶೈವ ಪ್ರಕರಣಗಳಲ್ಲಿ ಲಿಂಗಕ್ಕೆ ಬ್ರಹ್ಮವೆಂತಲು ಅಂಗಕ್ಕೆ ಆತ್ಮನೆಂತಲು ಶಬ್ದ ಪ್ರಯೋಗವಾಗುವುದುಂಟು.

ಶ್ಲೋ॥ ಏಕಮೇವ ಪರಂಬ್ರಹ್ಮ ಸಚ್ಚಿದಾನಂದ ಲಕ್ಷಣಂ
ಶಿವತತ್ವಂ ಶಿವಾಚಾರ್ಯಾಃ ಸ್ಥಲಮಿತ್ಯಾಹುರಾದರಾತ್ ॥
ಲಿಂಗಸ್ಥಲಂ ಶಿವಃ ಸಾಕ್ಷಾತ್ ಜೀವಾತ್ಮಾಂಗಸ್ಥಲಂ ಭವೇತ್
ಲಿಂಗಾಂಗಸ್ಥಲಯೋರೈಕ್ಯಂ ಶಿವಜೀವೈಕ್ಯಮೇವ ಹಿ ॥

ಅನುಭವಸೂತ್ರ ಅಧಿಕರಣ ೨.

ಅಂದಬಳಿಕ ಲಿಂಗಾಂಗ ಶಬ್ದಗಳು ಬ್ರಹ್ಮಾತ್ಮ ಶಬ್ದಗಳ ಪರ್ಯಾಯಗಳೆನಬೇಕು. ಎಂದು ಹಲವರಿಗೆನಿಸಬಹುದು. ಈ ಭ್ರಾಂತಿಯಿಂದಲೆ ಶಬ್ದಗಳ ವಿಶೇಷಾರ್ಥವನ್ನರಿಯದ ಹಲವರಿಂದ ನಮ್ಮ ವೀರಶೈವ ಮತವು ಅದ್ವೈತಾದಿಮತಗಳ ರೂಪಾಂತರವೆಂದು ಭಾವಿಸಪಟ್ಟು ನಮ್ಮ ಸಮಾಜವು ಇತರ ಮತಗಳಿಗೆ ಈಡಾಗಿದೆ. ಆದುದರಿಂದ ಈ ವಿಷಯವನ್ನು ಸ್ವಲ್ಪ ವಿವರಿಸುವುದು ಅವಶ್ಯಕವಿದೆ.

ನಿಜವಾಗಿ ನೋಡಿದರೆ ರೂಢಿಯಲ್ಲಿ ಪರಿಯಾಯವೆಂದು ಬಳಕೆಯಾಗುವ ಶಬ್ದಗಳು ಸರ್ವಾಂಶದಲ್ಲಿಯೂ ಸಮಾನಾರ್ಥವಾಗಿರುವುದಿಲ್ಲ. ಅವು ಒಂದೆ ಒಂದು ಪದಾರ್ಥವಾಚಕವೆಂದು ಕೋಶಗಳಲ್ಲಿ ಪರಿಗಣಿತವಾದರೂ ಆ ಪದಾರ್ಥದ ಒಂದೊಂದು ವಿಶೇಷವನ್ನು ಬೋಧಿಸುವುವು. ಧಾರಣಪ್ರಯೋಗದಲ್ಲಿ ಈ ವಿಶೇಷಾರ್ಥಗಳ ತಿಳಿವು ಅಷ್ಟೊಂದು ಬೇಕಾಗಿರದರಿಂದ ಆ ಶಬ್ದಗಳನ್ನು ಪರ್ಯಾಯಗಳಂತೆ ಬಳಸುವೆವು. ಒಂದು ಶಬ್ದವನ್ನು ತೆಗೆದು ಮತ್ತೊಂದನ್ನು ಹಾಕಿದರು ಅರ್ಥನಿರ್ವಾಹವಾಗುವುದು. ಆದರೆ ಒಮ್ಮೊಮ್ಮೆ ಆಯಾ ವಿಶೇಷಾರ್ಥಗಳನ್ನು ಹೇಳುವಾಗ ಅದಕ್ಕನುಗುಣವಾಗಿಯೆ ಶಬ್ದಪ್ರಯೋಗವನ್ನು ಮಾಡಬೇಕಾದಪುದು. ಒಂದು ಉದಾಹರಣವನ್ನು ನೋಡುವಣ. ಅಶ್ವ, ತುರಗ, ಹಯವೆಂಬುವು ಒಂದೆ ಒಂದು ಕುದುರೆ ಎಂಬ ಅರ್ಥವನ್ನು ಬೋಧಿಸುತ್ತಿದೆಯೆಂದು ನಾವು ಕಲಿವೆವು. ಆದರೆ ಈ ಮೂರು ಸಂಸ್ಕೃತ ಶಬ್ದಗಳೂ ನಾಲ್ಕನೆಯ ಕುದುರೆಯೆಂಬ ಕನ್ನಡ ಶಬ್ದವೂ ಒಂದೆ ವಸ್ತುವಿನ ವಿಶೇಷಾರ್ಥವನ್ನು ಸೂಚಿಸುವುವು. 'ಅಶ್ವ' ಶಬ್ದವು 'ಅಶ' ಅಂದರೆ ವ್ಯಾಪಿಸು ಅಥವಾ ಗುಂಪಾಗು ಎಂಬ ಧಾತುವಿಗೆ 'ವನ್' ಎಂಬ ಪ್ರತ್ಯಯವು ಸೇರಿ ಉಂಟಾಗಿದೆ. ಆದರ ಅರ್ಥವು ಮೊದಲನೆಯ ವ್ಯಾಪ್ತಿಯೆಂಬ ಅರ್ಥದಿಂದ ಶೀಘ್ರದಲ್ಲಿ



CC-0. Jangamwadi Math Collection, Varanasi. An eGangotri Initiative

ಮುಟ್ಟುವ ಮೆಟ್ಟನ್ನು ಹೊಂದುವದೆಂಬರ್ಥ. ಎರಡನೆಯ ಅರ್ಥದಲ್ಲಿ ಸೈನ್ಯದಲ್ಲಿ ಒಂದು ಅಂಗವಾಗಿ ಹಿಂಡುಗೂಡುವದೆಂದೂ ಆದಪುದು. ಸೇನೆಗಳಲ್ಲಿ ಕುದುರೆಗಳನ್ನು ಇನ್ನೂ ಇದೆವರೆಗೆ ಮನುಷ್ಯರು ಬಳಸುತ್ತ ಬಂದಿರುವರು. 'ತುರಗ' ಶಬ್ದವು 'ತುರೇಣ' ಅಂದರೆ ವೇಗದಿಂದ ನಡೆಯುವುದು ಎಂಬರ್ಥದಲ್ಲಿ ಬರುವುದು. ವೇಗದಿಂದ ನಡೆವುದೆಂಬರ್ಥ. 'ಹಯ' ಶಬ್ದವು 'ಹಯ್'ಗತೌ ಎಂಬ ಧಾತುವಿಗೆ 'ಅಚ್' ಎಂಬ ಪ್ರತ್ಯಯವು ಕೂಡಿ ಆಗಿದೆ. ಅಂದರೆ ಚೆಂದನ್ನ ನಡಿಗೆವುಳ್ಳುದುಯೆಂಬರ್ಥ. ಮೊದಲನೆಯ 'ಅಶ್ವ' ಶಬ್ದದಲ್ಲಿ ತನ್ನನ್ನು ಏರಿದವನ ತಾಣಕ್ಕೆ ಮುಟ್ಟಿಸುವ ಶಕ್ತಿಯೂ, ಎರಡನೆಯ ಅರ್ಥದಲ್ಲಿ ತೀವ್ರವಾದ ನಡಿಗೆಯೂ, ಮೂರನೆಯ ಅರ್ಥದಲ್ಲಿ ಒಪ್ಪು ನಡಿಗೆಯೂ ಶಬ್ದ ಪ್ರವೃತ್ತಿಗೆ ಕಾರಣವಾಗಿದೆ. ಕನ್ನಡ 'ಕುದುರೆ' ಎಂಬ ಶಬ್ದವು 'ಕುದುರು' ಅಂದರೆ ಗಟ್ಟಿಯಾಗಿ ನಿಲ್ಲು ಎಂಬ ಧಾತುವಿನಿಂದ ಹುಟ್ಟಿ ಕುದುರೆಯ ಭಾರವನ್ನು ಹೊರುವ ಶಕ್ತಿಯ ಬೋಧಕವಾಗಿದೆ. ಆವನೊಬ್ಬನು ಗಟ್ಟಿಮುಟ್ಟಾಗಿರುವನೆಂಬುದಕ್ಕೆ ಅವನೇನು ಕುದುರೆಯಾಗಿಹನು ಎನ್ನುತ್ತೇವೆ. ಸಾಮಾನ್ಯವಾಗಿ ಈ ನಾಲ್ಕು ಶಬ್ದಗಳನ್ನು ವಿವೇಚನವಿಲ್ಲದೆ ಬಳಸಬಹುದಾದರೂ ವಿಶೇಷಾರ್ಥವನ್ನು ಬೋಧಿಸುವುದು ಆವಶ್ಯಕವಿದ್ದಾಗ ಇವುಗಳನ್ನು ಒಂದಕ್ಕೆ ಮತ್ತೊಂದನ್ನು ಬಳಿಸಲಾಗದು. ರೂಢಿಯ ಬಳಿಕೆಯಲ್ಲಿ ಹೀಗಿರುವಾಗ ಪಾರಿಭಾಷಿಕ ಶಬ್ದಗಳ ಗತಿಯನ್ನು ಬೇರೆ ಹೇಳಲು ಆವಶ್ಯಕವಿಲ್ಲ. ಲಿಂಗ ವಸ್ತುವಿಗೆ ಬ್ರಹ್ಮವೆಂದು ಕರೆವುದರಿಂದ ವೀರಶೈವಾಚಾರ್ಯರು ಆ ಎರಡು ಶಬ್ದಗಳ ವಿಶೇಷಾರ್ಥದಲ್ಲಿರುವ ಅಂತರವನ್ನು ಮರೆಯಲಿಲ್ಲ. ಗೊತ್ತಿಲ್ಲದ ಶಬ್ದಾರ್ಥವನ್ನು ವಿವರಿಸುವಾಗ ಬೋಧ್ಯನಿಗೆ ಗೊತ್ತಿದ್ದ ಶಬ್ದದಿಂದಲೆ ಹೇಳಬೇಕಾದಪುದು. 'ಬ್ರಹ್ಮ' ಶಬ್ದವು 'ಶಿವ' ಅಥವಾ 'ಲಿಂಗ' ಎಂಬ ಶಬ್ದಕ್ಕಿಂತಲು ಹೆಚ್ಚು ಬಳಿಕೆಯನ್ನುಳ್ಳದು. ಬ್ರಹ್ಮ ಚಿಂತಕರು ಲಿಂಗ ವೇದಿಗಳು ಗುರಿಯಿಟ್ಟ ಪದಾರ್ಥವು ಈ ವಿಶ್ವ ಕಾರಣವಾದ ಬ್ರಹ್ಮಕ್ಕಿಂತಲು ಬೇರಹುದೆಂದು ತಿಳಿದರೆ, ಅದಲ್ಲವೆಂದು ಶಿವಾಚಾರ್ಯರು ಹೇಳಬೇಕಾಗಿದೆ. ಬ್ರಹ್ಮವೇ ಶಿವನೆಂದು ಹೇಳುವುದರಿಂದ ಉಪನಿಷತ್ತುಗಳು ಚಿಂತಿಸಿದ ಬ್ರಹ್ಮವನ್ನೆ ನಮ್ಮ ಶಾಸ್ತ್ರವು ಕಂಡುಹಿಡಿದು ಉಪನಿಷತ್ತುಗಳು ಕಾಣದ ಒಂದು ರಹಸ್ಯವನ್ನು ಆ ವಸ್ತುವಿನಲ್ಲಿ ಕಂಡುಹಿಡಿದಿದೆ ಎಂಬ ಭಾವವು.

## ವೇದಾಂತಪ್ರವೃತ್ತಿ

ಬ್ರಹ್ಮವೆಂದರೆ 'ಬೃಹ್ ವೃದ್ಧೌ' ಎಂಬ ಧಾತುವಿಗೆ 'ಮನಿನ್' ಪ್ರತ್ಯಯವು ಸೇರಿ ಬೆಳೆವುದು. ಅಂದರೆ ವ್ಯಾಪಕವಾದುದು ಎಂಬರ್ಥವನ್ನೀವುದು. ವೇದಕಾಲದ ಋಷಿಗಳು ತಾವೆಸಗುವ ಯಜ್ಞಗಳಲ್ಲಿ ಪೂಜಿಸುವ ದೇವತೆಗಳು ಒಂದೆಯಾಗಿವೆಯೊ ಹಲವಾಗಿವೆಯೊ ಆ ಯಜ್ಞದ ರಹಸ್ಯವೇನು? ಇಲ್ಲಿ ಮಾಡಿದ ಯಜ್ಞವು ಅಲ್ಲಿ ಫಲ ಕೊಡುವದೆಂತು? ಯಜ್ಞದಲ್ಲಿ ಹವಿಸ್ಸಾಗುವ ಪಶುವಿನ ರಹಸ್ಯವೇನು? ಯಜ್ಞವನ್ನು ಮಾಡಿದರೆ ತೀರಿತೊ? ಅದರ ಗೂಢ ತತ್ವವನ್ನು ಅರಿಯತಕ್ಕುದೊ? ಎಂಬಿವೆಲ್ಲ ವಿಷಯಗಳನ್ನು ಮನನ ಮಾಡುತ್ತಿದ್ದರು. ಛಾಂದೋಗ್ಯಾದಿ ಉಪನಿಷತ್ತುಗಳನ್ನು ಮೇಲೆ ಮೇಲೆ ನೋಡಿದರೂ ಈ ಅರ್ಥವು ಕಂಡುಬರುವುದು. ಬೃಹದಾರಣ್ಯಕವನ್ನು ನೋಡುವಣ. ಈ ಆರಣ್ಯಕವು 'ಉಷಾವಾ ಅಶ್ವಸ್ಯ ಮೇಧ್ಯಸ್ಯಶಿರಃ' ಇತ್ಯಾದಿಯಾಗಿ ಮೊದಲಾದಪುದು. ಅಶ್ವಮೇಧಯಾಗದಲ್ಲಿ ಆಹುತಿಯಾಗುವ ಅಶ್ವವನ್ನು ದೃಷ್ಟಿ ವಿಶೇಷದಿಂದ ಸಂಸ್ಕರಿಸುವ ರಹಸ್ಯವಿದ್ಯೆ ಇದು. ಆ ಬಳಿಕ ಎರಡನೆಯ ಬ್ರಾಹ್ಮಣದಲ್ಲಿ– 'ನೈವೇಹ ಕಿಂಚಿನಾಗ್ರ ಆಸೀತ್' ಎಂದು ಮೊದಲಾಗಿ ಯಜ್ಞಾಧಾರವಾದ ಅಗ್ನಿಯ ಉತ್ಪತ್ತಿಯು ಬರುತ್ತದೆ. ಆ ಬಳಿಕ ಯಜ್ಞದಲ್ಲಿ



CC-0. Jangamwadi Math Collection, Varanasi. An eGangotri Initiative

ಬಳಿಕೆಯಾಗುವ ಉದ್ಗೀತಾದಿಗಳೆಂಬ ವೇದ ಭಾಗಗಳು ಯಜಮಾನನ ಪ್ರಾಣಾದಿಗಳಲ್ಲದೆ ಬೇರೆ ಅಲ್ಲೆಂಬ ರಹಸ್ಯವು ಹೇಳಲ್ಪಡುವುದು. ಜನಕರಾಜನ ಸಭೆಯಲ್ಲಿ ಯಜ್ಞದ ಆಧ್ಯಾತ್ಮ ವಿಚಾರವೆ ತೋರಿ ಬರುತ್ತದೆ. ಇಂತಹ ಯಜ್ಞ ರಹಸ್ಯವನ್ನರಿತು ಯಜ್ಞವನ್ನು ಎಸಗಿದರೆ ಅದು ವೀರ್ಯವತ್ತರವೆಂದು ಋಷಿಗಳ ಅಭಿಪ್ರಾಯವು. ಛಾಂದೋಗ್ಯದಲ್ಲಿ ಉದ್ಗೀತವೆಂಬ ಸಾಮವಿಶೇಷದ ವಿಚಾರವೆ ಆರಂಭದಲ್ಲಿ ತೋರಿಬರುವುದು. ಹೀಗೆ ವಿಚಾರವನ್ನು ಮಾಡುತ್ತ ಯಜಮಾನನೆಂಬ ಆತ್ಮನು ವಿಚಾರ ವಿಷಯವಾದನು. ಯಜಮಾನನ ಪ್ರಾಣಾದಿಗಳೆಲ್ಲ ಯಜ್ಞಾಂಗವಾದ ಸಾಮಾದಿ ವೇದಗಳ ಸ್ವರೂಪವನ್ನು ಹೊಂದುತ್ತಲೂ ಅವನ ಇಂದ್ರಿಯಂಗಳೆ ಉಪಾಸ್ಯವಾದ ದೇವತಾ ಸ್ವರೂಪಗಳನ್ನು ಹೊಂದುತ್ತಲೂ ಬಹಿರಂಗದ ಯಜ್ಞವೆ ಅಂತರಂಗದಲ್ಲಿ ಸಮಾವೇಶವಾಯಿತು. ಈ ಜ್ಞಾನದೊಡನೆ ಯಜ್ಞವನ್ನೆಸಗಬೇಕೆಂಬುದೆ ಕರ್ಮಜ್ಞಾನ ಸಮುಚ್ಚಯವಾದುವು. ಬರಬರುತ್ತ ಕೆಲವು ಉಪನಿಷತ್ತುಗಳು ಈ ಕರ್ಮಾಂಗಗಳಿಲ್ಲದೆ ಆತ್ಮನನ್ನು ನಾವು ಲಕ್ಷಿಸಬಹುದು; ಆ ಲಕ್ಷಣವು ನಮ್ಮ ಮುಕ್ತಿಗೆ ಸಾಕು ಎಂದು ಮುಂದುವರಿದವು. ಇಂತಹ ಉಪನಿಷತ್ತುಗಳ ಕೋಟಿಯಲ್ಲಿ ಮುಂಡಕವು ಒಂದು. ಆದರೆ ಅದಾದರು ಯಜ್ಞಾಂಗಗಳ ವಿಚಾರವನ್ನು ಬೇರ್ಪರಿಸಿ ಕಿತ್ತಿಲ್ಲ. ಒಂದೊಂದು ಉಪನಿಷತ್ತು ತಕ್ಕೊಂಡು ಇಲ್ಲಿ ಈ ವಿಷಯವನ್ನು ಚರ್ಚಿಸಲು ಸ್ಥಳವಿಲ್ಲ ಅವಕಾಶವಿಲ್ಲ. ಕೇವಲ ದಿಗ್ದರ್ಶನವನ್ನು ಮಾಡಿರುವೆವು. ತಾತ್ಪರ್ಯವೆಂದರಿದು:- ಬ್ರಹ್ಮ ವಿಚಾರವು ಯಜ್ಞ ವಿಚಾರದಿಂದ ಹೊರಟಿತು. ಮಾಡುವ ಯಜ್ಞಗಳು ಆ ಯಜ್ಞಗಳಲ್ಲಿ ಆಹುತಿಯನ್ನು ಇಡುವ ದೇವತೆಗಳು ಅವುಗಳಲ್ಲಿ ಪ್ರಯೋಗವಾಗುವ ಋಗಾದಿಗಳು ಅನಂತವಾಗಿರುವುದರಿಂದ ಅವೆಲ್ಲವುಗಳ ರಹಸ್ಯವನ್ನು ತನ್ನಲ್ಲರಿತರೆ ಆ ಯಜ್ಞಫಲವು ಸುಗಮವೆಂದೂ ರಹಸ್ಯವನ್ನರಿಯದೆ ಮಾಡಿದ ಯಜ್ಞವು ನಿರರ್ಥಕವೆಂದೂ ಪ್ರಾರಂಭವಾದ ಮೀಮಾಂಸದಿಂದ ಬ್ರಹ್ಮವಿದ್ಯೆಯು ಹೊರಟಿತು. ಸರ್ವ ಯಜ್ಞಗಳನ್ನೂ ಯಜ್ಞ ಸಾಧನಗಳನ್ನೂ ಒಳಗೊಂಡ ಆತ್ಮನೆ ಬ್ರಹ್ಮವೆಂದೂ ಅವನಿಂದಲೆ ಈ ಜಗತ್ತು ಯಜ್ಞಾರ್ಥವಾಗಿ ಹುಟ್ಟಿತೆಂದೂ ಈ ಮೀಮಾಂಸಕರು ಮೊದಲು ಅರಿತರು.

ಕರ್ಮ ಬ್ರಹ್ಮೋದ್ಭವಂ ವಿದ್ಧಿ ಬ್ರಹ್ಮಾಕ್ಷರಸಮುದ್ಭವಂ
ತಸ್ಮಾತ್ ಸರ್ವಗತಂ ಬ್ರಹ್ಮನಿತ್ಯಂ ಯಜ್ಞೇ ಪ್ರತಿಷ್ಠಿತಂ ||

(ಭಗವದ್ಗೀತೆ: ಮೂರನೆಯ ಅಧ್ಯಾಯ, ಶ್ಲೋಕ ೧೫)

ಇಂತಾಗಿ ಉಪನಿಷತ್ತಿನ ಬ್ರಹ್ಮ ವಿದ್ಯೆಗೆ ಯಜ್ಞ ವಿಚಾರವೆ ಕಾರಣವು. ಅಂದರೆ ಯಜಮಾನನೆಂಬ ಆತ್ಮನು ಸರ್ವಯಜ್ಞಮಯವಾಗಿರುವನು ಎಂಬ ವಿಚಾರದಿಂದ ಮುಂದೆ ಈ ಬಹಿರಂಗ ಯಜ್ಞಗಳು ಆವಶ್ಯಕವಹುದೊ ಅಲ್ಲವೊ—ಎಂಬ ವಿಚಾರದಿಂದ ಕೇವಲ ಬ್ರಹ್ಮವಾದವು ಜನಿಸಿತು.

## ಸಾಂಖ್ಯವೂ ವೀರಶೈವವೂ.

ಕಪಿಲನೆ ಮೊದಲಾದ ಹಲವರು ತತ್ವಜ್ಞರು ಈ ಜಗತ್ತನ್ನು ಯಜ್ಞವೆಂಬ ಕರ್ಮಸಂಬಂಧವಾಗದೆ ತನ್ನ ಅಂತರಂಗದ ಸುಖದುಃಖ ಮೋಹಾದಿಗಳಿಂದ ಪರೀಕ್ಷಿಸಿದರು. ಈ ಪರೀಕ್ಷೆಯ ಉಗಮಕ್ಕೆ ತಮಗೆ ಬಂಧಕವಾದ ಈ ಸುಖದುಃಖ ಮೋಹಗಳಿಂದ ಬಿಡುಗಡೆಯು ಸೈದ ಬೇಕೆಂಬ ಹವಣಿಕೆಯೆ ಮೊದಲು.



CC-0. Jangamwadi Math Collection, Varanasi. An eGangotri Initiative

ಇವರು, ತನ್ನಲ್ಲಿ ತೋರುವ ಜಡವಾದ ದೇಹೇಂದ್ರಿಯಾದಿಗಳೂ ಆ ದೇಹೇಂದ್ರಿಯಾದಿಗಳಿಗೆ ಗೋಚರವಾದ ಹೊರಗಣ ಪದಾರ್ಥಗಳೂ ಜಡವಾಗಿಹವಾಗಿ ಚೇತನವಾದ ತನಗೆ ಸಂಬಂಧಪಡಲಾರವು ಎಂಬ ವಿಚಾರದಿಂದ ಕೃತಕೃತ್ಯರಾದರು. ಇವರಿಗೆ ಪರಿಭಾಷೆಯಲ್ಲಿ ಬ್ರಹ್ಮಶಬ್ದವನ್ನು ಬಳಸುವ ಪ್ರಸಂಗ ಬರಲಿಲ್ಲ. ಉಪನಿಷನ್-ಮೀಮಾಂಸಕರಿಗೆ ಸರ್ವ ಯಜ್ಞವನ್ನೂ ಯಜ್ಞಾಂಗವನ್ನೂ ತನ್ನಲ್ಲಿ ಗರ್ಭೀಕರಿಸಿಕೊಂಡು ಯಜಮಾನನಿಹನೆಂದು ಬೋಧಿಸಬೇಕಾದುದರಿಂದ ಆ ಆತ್ಮನು ಬ್ರಹ್ಮ ಅಂದರೆ ಸರ್ವವನ್ನು ಗರ್ಭೀಕರಿಸಿಕೊಂಡವನೆಂದು ಹೇಳಬೇಕಾಯಿತು.

ವೀರಶೈವ ಸಿದ್ಧಾಂತದಲ್ಲಿ ಲಿಂಗಾಂಗ ಶಬ್ದಗಳು ಬಳಕೆಯಾಗಿ ಲಿಂಗವೆಂದರೆ ಸರ್ವವನ್ನು ಗರ್ಭೀಕರಿಸಿಕೊಂಡ ವಸ್ತುವೆಂಬ ಭಾವವಾಯಿತು.

« ಲಿಕಾರೋಲಯಬುದ್ಧಿಸ್ಥೋಬಿನ್ದುನಾ ಸ್ಥಿತಿರುಚ್ಯತೆ
ಗಕಾರಾತ್ಸೃಷ್ಟಿರಿತ್ಯುಕ್ತಂಲಿಂಙ್ಗಂ ಸೃಷ್ಟ್ಯಾದಿ ಕಾರಣಮ್ ||
ಲೀನಂ ಪ್ರಪಞ್ಚರೂಪಂ ಹಿ ಸರ್ವಮೇತಚ್ಚರಾಚರಮ್
ಸರ್ಗಾ ಪೌಗಮ್ಯತೇ ಭೂಯಸ್ತಸ್ಮಾಲಿಙ್ಗ ಮುದೀರಿತಮ್ ||

ಸೂಕ್ಷ್ಮಾಗಮ, ೬ ನೆಯ ಪಟಲ, ಶ್ಲೋಕ ೭-೮.

ಈ ಭಾವವು ವೇದಾಂತದ ಬ್ರಹ್ಮದಲ್ಲಿಯು ಬೋಧವಾದುದರಿಂದ ತಮ್ಮ ಸಿದ್ಧಾಂತವನ್ನು ಇತರರಿಗೆ ಹೇಳುವಾಗ ವೀರಶೈವರು 'ಬ್ರಹ್ಮ'ಶಬ್ದವನ್ನು ಬಳಸಿದರು. ಆದರೆ ಹಾಗೆ ಮಾಡುವುದರಿಂದ 'ಬ್ರಹ್ಮ' ಶಬ್ದಕ್ಕೆ ಒಂದು ವಿಶೇಷಾರ್ಥವನ್ನು ಕೊಟ್ಟರಲ್ಲದೆ 'ಲಿಂಗ' ಶಬ್ದವನ್ನು ಬ್ರಹ್ಮವಾದಿಗಳ ಬ್ರಹ್ಮ ಶಬ್ದಕ್ಕೆ ಪರಿಯಾಯವೆನಲಿಲ್ಲ. ಆ ವೇದಾಂತಿಗಳ ಬ್ರಹ್ಮ ಪದಾರ್ಥದಲ್ಲಿ ಅವರು ಕಾಣದ ಒಂದು ವಿಶೇಷವನ್ನು ವೀರಶೈವರು ತೋರಿಸಿದರು. ಅಂದರೆ ಆ ಬ್ರಹ್ಮವೂ ಸರ್ವ ಚರಾಚರವನ್ನು ಗರ್ಭೀಕರಿಸಿದ ವಸ್ತುವಷ್ಟೆ ಅಲ್ಲ; ಆದರೆ ಅದು ತನ್ನ ಉಪಾಸಕನಲ್ಲಿ ಒಡೆಮೂಡಿ ಆ ಉಪಾಸಕನ ಅಂಗೇಂದ್ರಿಯಾದಿ ವ್ಯವಹಾರಗಳನ್ನು ಪರಿಶುದ್ಧಗೊಳಿಪುದು. ಆದರಂತೆಯೆ ಸಾಂಖ್ಯ ವೇದಾಂತಿಗಳ 'ಆತ್ಮ'ಶಬ್ದವನ್ನು ಅಂಗ ಪದಾರ್ಥಕ್ಕೆ ಉಪಯೋಗಿಸುವಲ್ಲಿ ತಮ್ಮ'ಅಂಗ' ಶಬ್ದದ ವಿಶೇಷಾರ್ಥವನ್ನು ಕೆಡಿಸದೆ ಅವರಿರ್ವರ ಸಿದ್ಧಾಂತದಲ್ಲಿ ತೋರದ ವಿಶೇಷವನ್ನು ಆತ್ಮನಲ್ಲಿ ತೋರಿಸಿದರು. ಅಂದರೆ ಆತ್ಮನು ಯಜ್ಞಾದಿ ಕರ್ಮವನ್ನೂ ಕರ್ಮಸಾಧನವನ್ನೂ ಗರ್ಭೀಕರಿಸಿದ ಬ್ರಹ್ಮವು ಎಂಬ ವೇದಾಂತಿಯ ಮತದಲ್ಲಿ ಕರ್ಮವು ಎಂತಾದೊಡೆಯು ಬಂಧವಹುದು. ಬಂಧನಕ್ಕೆ ಬೀಜವಾದ ಕರ್ಮವನ್ನು ಆತ್ಮನಲ್ಲಿ ಅಂಗೀಕರಿಪುದು ನಿತ್ಯಮೋಕ್ಷವಾಗದು. ಇದನ್ನು ಪರಿಹರಿಸಲು ಬ್ರಹ್ಮವು ನಿಷ್ಕ್ರಿಯವು. ಅದರಿಂದ ಆ ಬ್ರಹ್ಮರೂಪನಾದ ಆತ್ಮನೂ ನಿಷ್ಕ್ರಿಯನು ಎಂಬ ಕೇವಲಾತ್ಮವಾದವು ಪರಿಣಮಿಸಿತು. ಈ ವಾದವನ್ನು ಚೆನ್ನಾಗಿ ಪರಿಶೀಲಿಸಲು ನಿಷ್ಕ್ರಿಯಾತ್ಮನತ್ತಣಿಂದ ಜಗದುತ್ಪತ್ತಿಯಾಗಲಾರದು. ಮತ್ತೇನಂದರೆ ಇರುವಿಕೆಯೂ ಕ್ರಿಯೆ ಆದುದರಿಂದ ಅದಕ್ಕೂ ಮೇಲೆ ಸರ್ವ ಕ್ರಿಯೆಗಳಿಗೂ ಮೂಲವಾದುದರಿಂದ ನಿಷ್ಕ್ರಿಯನಾಗಿ ಆತ್ಮನು ಉಂಟೆನಲಾಗದು. ಆದರೆ ಅಂಗನೆಂಬ ಆತ್ಮನು ಶುದ್ಧ ಕ್ರಿಯಾಜ್ಞಾನಮಯನಾದುದರಿಂದ ಈ ದೋಷವು ಪರಿಹೃತವಾದಪುದು. ಇಂತಹ ಅಂಗನು ಲಿಂಗವೆಂಬ ಪರವಸ್ತುವಿನಲ್ಲಿ ಬೆರೆತುದರಿಂದ ಅವನಲ್ಲಿ ಸಮರಸನಾದುದರಿಂದ ಜ್ಞಾನಕ್ರಿಯೆಗಳು ಬಂಧನವಾಗಲಿಲ್ಲ. ಸಾಂಖ್ಯಸಿದ್ಧಾಂತದಲ್ಲಿ ಪುರುಷನು ಅಸಂಗೋದಾಸೀನನು. ಅವನಿಗೆ ಜಡಸಂಗವು ಜಡಚೇತನವಿಭಾಗ ಜ್ಞಾನವಿಲ್ಲುದರಿಂದ ಉಂಟಾ



CC-0. Jangamwadi Math Collection, Varanasi. An eGangotri Initiative

ಯಿತು. ಅಂತಃಕರಣದ ಸತ್ವಶುದ್ಧಿಯಿಂದ ವಿವೇಕವಾಗಲು ಆ ಸಂಗವು ತೊಲಗಿ ಆತ್ಮನು ಜಡ ವಿಶ್ವದ ಸುಖದುಃಖಗಳನ್ನು ಹೊಂದನು. ಈ ತತ್ವದಲ್ಲಿ ಒಂದು ದೋಷವಿಹುದು. ಕೇವಲ ವಿವೇಚನದಿಂದ ಬಂಧನವು ನಿಜವಾಗಿಯೂ ಹರಿಯದು. ಹಾಗಿದ್ದರೆ ರೋಗನಿದಾನದಿಂದ ರೋಗವು ಅಳಿಯಬೇಕಾಗಿದ್ದಿತು. ಆತ್ಮನೆಸಗುವ ಬಂಧವಿಮೋಚನಪ್ರವೃತ್ತಿಯಿಂದಲೆ ಆತ್ಮನು ಉದಾಸೀನನಲ್ಲವೆನಬೇಕು. ಆದುದರಿಂದ ಈ ತೋರುವ ಜಡ ಜಗತ್ತು ಅಳಿಯಲು ವಿಚಾರ ದಿಂದೊಡಗೂಡಿದ ಕಲುಷರಹಿತವಾದ ಸತ್ಕ್ರಿಯೆಯು ಬೇಕು. ಆ ಕ್ರಿಯಾ ಶಕ್ತಿಯನ್ನು ಆತ್ಮನಲ್ಲಿ ಒಡಂಬಟ್ಟಲ್ಲದೆ ಗತ್ಯಂತರವಿಲ್ಲ. ಅದಲ್ಲದೆ ಆತ್ಮನು ತನ್ನಲ್ಲಿ ಶಿವನನ್ನು ಹುದುಗಿಸಿ ಕೊಂಡಿರುವನೆಂಬ ಅರ್ಥದಿಂದ ಆತ್ಮನ ಕ್ರಿಯಾ ಜ್ಞಾನಶಕ್ತಿಗಳು ಹುದುಗಿದ ಶಿವನ ಕ್ರಿಯಾ ಜ್ಞಾನ ಶಕ್ತಿಗಳೇ ಅಹುದಲ್ಲದೆ ಬೇರೆಯಲ್ಲ. ಶಿವನಲ್ಲಿ ಈ ಜಗತ್ತಿಗೆ ಕಾರಣವಾದ ಪ್ರಧಾನವು ಹುದುಗಿ ಶಿವನಿಗಧೀನವಾಗಿರುವುದರಿಂದ ಒಮ್ಮೆ ಆತ್ಮನು ತನ್ನ ಮರೆಯಲ್ಲಿರುವ ಶಿವಸ್ವರೂಪ ವನ್ನು ಹೊಂದಿದನಾದರೆ ಈ ಜಡವು ಅವನನ್ನು ಪುನಃ ಬಂಧಿಸದು. ಪ್ರಧಾನವು ತನ್ನಲ್ಲಡಗದಿದ್ದರೆ ತನ್ನಿಂದನ್ಯವಾಗಿ ಮತ್ತೊಮ್ಮೆ ಬಾಧಿಸದಿರದು. 'ಆತ್ಮ' ಶಬ್ದದಲ್ಲಿ ಪ್ರಧಾನವನ್ನು ಮೀರಿದ ಪ್ರಧಾನ ವನ್ನು ತನ್ನಲ್ಲಿ ಗರ್ಭೀಕರಿಸಿದ ಮಂಗಲ ಎಂಬ ಅರ್ಥವು ಹೊರಡುವುದಿಲ್ಲ. ಅಂಗನೆಂಬುವುದರಿಂದ ಇಂತಹ ಮಂಗಲಾತ್ಮನನ್ನು ತನ್ನ ಜ್ಞಾನಹೃದಯದಲ್ಲಿ ತಾಳಿ ಅವನೇ ತಾನಾದವನೆಂಬ ಅರ್ಥವು ಹೊರಡುವುದರಿಂದ ಆತ್ಮ ಶಬ್ದದಲ್ಲಿಲ್ಲದ ವಿಶೇಷವು ಹೊರಟಿತು.

ಆದುದರಿಂದ ಲಿಂಗಕ್ಕೆ ಬ್ರಹ್ಮನೆಂದುದರಿಂದಾಗಲಿ ಅಂಗನಿಗೆ ಆತ್ಮನೆಂದುದರಿಂದಾಗಲಿ ಉಪನಿಷತ್ ಸಿದ್ಧಾಂತವನ್ನು ಅಥವಾ ಕಪಿಲನ ಸಿದ್ಧಾಂತವನ್ನು ವೀರಶೈವವು ಎತ್ತಿ ಪರ್ಯಾಯ ದಿಂದ ಹೇಳಿತೆನ್ನುವದಾಗಲಿ ಅಥವಾ ಆ ಸಿದ್ಧಾಂತಗಳನ್ನು ಪರಿಷ್ಕರಿಸಿ ತನ್ನದೊಂದು ಸಿದ್ಧಾಂತ ವನ್ನು ಮಾಡಿತೆಂದಾಗಲಿ ಎನ್ನಲಾಗದು.

### ವೇದಾಂತ ಸಾಂಖ್ಯಾದಿಗಳಿಗೂ ವೀರಶೈವಕ್ಕೂ ಪ್ರಸ್ಥಾನಭೇದ

ವೇದಗಳ ಪ್ರಮಾಣದಿಂದ ಹೊರಟ ಬ್ರಹ್ಮಜ್ಞಾನಕ್ಕೂ ಕಪಿಲಾದಿ ಋಷಿಗಳ ಯೋಗಿ ಪ್ರತ್ಯಕ್ಷದಿಂದ ಹೊರಟ ಸಾಂಖ್ಯಾದಿಮತಗಳಿಗೂ ವೀರಶೈವಕ್ಕೂ ಈ ರೀತಿಯಾಗಿ ಪ್ರಸ್ಥಾನ ಅಥವಾ ಪ್ರಮಾಣ ಭೇದವಿದೆ. ವೇದವು ಯಜ್ಞಮಯವಾಗಿದೆ. ಆ ಯಜ್ಞವು ಕರ್ಮಮಯ ವಾಗಿ ವೇದವಾಕ್ಯದಿಂದಲೆ ವಿಹಿತವಾಗಿದೆ. ವೇದಾಧ್ಯಯನವು ಶ್ರುತಿ, ಸ್ಮೃತಿ ಪ್ರಮಾಣಗಳಿಂದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯರಿಗೆ ಮಾತ್ರ ವಿಹಿತವಾಗಿದೆ.

ಉಪನಯನಂ ವಿದ್ಯಾರ್ಥಸ್ಯ ಶ್ರುತಿ ತಃ ಸಂಸ್ಕಾರಃ

ಆಪಸ್ತಂಭ ಧರ್ಮಸೂತ್ರ.

ಉಪನಯನವೆಂದರೆ ವೇದದಲ್ಲಿ ಪ್ರಯೋಜನವುಳ್ಳವನನ್ನು (ವೇದಾಧ್ಯಯನ ಮಾಡ ಬೇಕೆಂಬುವವನನ್ನು) ಶ್ರುತಿ ಪ್ರಮಾಣದಿಂದ ಸಂಸ್ಕರಿಸುವುದು ಎಂಬುವುದರಿಂದಲೂ

ಉಪನಯನಂ ಬ್ರಾಹ್ಮಣಸ್ಯಾಷ್ಟಮೇ ಏಕಾದಶದ್ವಾದಶಯೋಃ
ಕ್ಷತ್ರಿಯ ವೈಶ್ಯಯೋಃ ಶೂದ್ರ ಏಕಜಾತಿಃ ನಚಸಂಸ್ಕಾರಮರ್ಹತಿ
ಅಸ್ಯವೇದಮುಪಶೃಣ್ವತ ಸ್ತ್ರಪುಜತುಭ್ಯಾಂ ಶ್ರೋತ್ರಪ್ರತಿ ಪೂರಣಂ।



CC-0. Jangamwadi Math Collection, Varanasi. An eGangotri Initiative

ಎಂಬ ಮತಾಂತರದ ಶಾಸ್ತ್ರಾಂತರಗಳಿಂದಲೂ ಶೂದ್ರನಿಗೆ ಉಪನಯನವಿಲ್ಲ ವೇದಾಧ್ಯಯನವಿಲ್ಲ. ಆದುದರಿಂದ ವೇದ ಪ್ರಮಾಣಕವಾದ ಬ್ರಹ್ಮಜ್ಞಾನವು ತ್ರಿವರ್ಣದವರಿಗೆ ಮಾತ್ರ ಉಂಟು. ವೀರ ಶೈವವು ಹಾಗಲ್ಲ.

ಯೇಷು ಯೇಷು ಮಹಾದೇವಿ ಭಕ್ತಿರ್ವ್ಯಭಿಚಾರಿಣೀ || ೨೪ ||
ಯೋಗ್ಯಾಸ್ತ ಏವ ಮನ್ತ್ರಸ್ಯ ಭಕ್ತಿರೇವಾತ್ರ ಕಾರಣಮ್ ||

ಸೂಕ್ಷ್ಮಾಗಮ, ೩ ನೆಯ ಪಟಲ.

ಎಂಬ ಪ್ರಮಾಣದಿಂದ ಶಿವನಲ್ಲಿ ಅವ್ಯಭಿಚರಿತವಾದ ಭಕ್ತಿಯನುಳ್ಳವರೆಲ್ಲರು ಇಲ್ಲಿ ಅಧಿಕಾರಿಗಳು. ಸಾಂಖ್ಯಾದಿ ಮತಗಳು ಕೇವಲ ತತ್ತ್ವವನ್ನು ವಿಮರ್ಶಿಸುವುವಾದರು ಲೌಕಿಕವಾದ ವರ್ಣಧರ್ಮ ವನ್ನು ಮೀರದದರಿಂದ ಅವಾದರೂ ತ್ರಿವರ್ಣದವರಿಗಲ್ಲದೆ ಇತರರಿಗೆ ಸಲ್ಲವು ಇಂತಾಗಿ ಈ ವೀರ ಶೈವವು ವಸ್ತು ಪರೀಕ್ಷಣದಲ್ಲಿ ಆವುದೊಂದು ಉಪಾಧಿಯನ್ನು ಅಂಗೀಕರಿಸದೆ ಆಧ್ಯಾತ್ಮಿಕಾಧಿಕಾರ ವುಳ್ಳವರೆಲ್ಲರನ್ನು ಉದ್ಧರಿಪುದರಿಂದ ವಿಶ್ವವ್ಯಾಪಕ ಧರ್ಮವೆಂದು ಹೇಳುವಲ್ಲಿ ಸಂದೇಹವಿಲ್ಲ. ಸಾಂಖ್ಯ ಯೋಗಗಳು ತ್ರಿವರ್ಣದವರಿಗಲ್ಲದೆ ಸಲ್ಲವೆಂಬುವಲ್ಲಿ ಆ ಮತಗಳ ಪ್ರವರ್ತಕರು ತಮ್ಮ ಆಧ್ಯಾತ್ಮ ವಿಚಾರಗಳನ್ನು ಉಪನಯನದ ಉಪೋದ್ಘಾತವಿಲ್ಲದೆ ಹೇಳಿರುವರಾದರೂ ತಮ್ಮ ತತ್ತ್ವ ವಿಚಾರಾಧಿ ಕಾರಕ್ಕೆ ಸರ್ವರು ಅರ್ಹರೆಂದು ಮುಕ್ತಕಂಠವಾಗಿ ಹೇಳಿಲ್ಲ. ಹಾಗು ಆ ಮತಗಳ ವಿಷಯವು ಉತ್ತರ ಮೀಮಾಂಸ ಸೂತ್ರಗಳಲ್ಲಿ ಬಂದಾಗ ಸಾಂಖ್ಯ ಸ್ಮೃತಿಯನ್ನು ಮನುಸ್ಮೃತಿಯೊಡನೆ ಹೋಲಿಸಿಯಿದೆ. ಅದರಿಂದ ಈ ಶಾಸ್ತ್ರಗಳು ಸ್ವಭಾವತಃ ವರ್ಣಧರ್ಮಕ್ಕೆ ಸಂಬಂಧಪಟ್ಟಿಲ್ಲವಾದರು ಅದನ್ನು ನಿರಾಕರಿಸದರಿಂದ ಸಂಕುಚಿತವಾಗಿವೆ.

ಇಂತು ಪ್ರಮಾಣಭೇದದಿಂದ ವೀರಶೈವವು ವೈದಿಕ ಮತಕ್ಕೂ ಸಾಂಖ್ಯ ಮತಕ್ಕೂ ಯೋಗ ಮತಕ್ಕೂ ಭಿನ್ನವಾಗಿದೆ. ಮೇಲೆ ನಾವು ಯೋಗಮತದ ವಿಷಯಕ್ಕೆ ಏನೂ ಹೇಳದೆ ಇಲ್ಲಿ ಒಮ್ಮೆಗೆಲೆ ಅದನ್ನು ತಂದುದು ಒಪ್ಪಲ್ಲವೆನಬಾರದು. ಸಾಂಖ್ಯ ಯೋಗಗಳಲ್ಲಿ ಅಲ್ಪ ಭೇದ ವಿರುವುದರಿಂದ ಅದನ್ನು ಸಾಂಖ್ಯದೊಡನೆ ಇಲ್ಲಿ ತಂದಿರುವೆವು. ಉಪಾಸ್ಯ ವಸ್ತುವಿನ ವಿಚಾರದಲ್ಲಿ ಯೋಗವು ವಿಮರ್ಶವಡೆವುದು.

## ಶಿವಾಗಮ ವಿಷಯವು

ಶೈವ ವೀರಶೈವ ಧರ್ಮಗಳಿಗೆ ಪ್ರಮಾಣವಾದ ಶಿವಾಗಮಗಳು ಎಂದರೇನು? ಅವು ಎಂದು ಉದ್ಭವಿಸಿದುವು? ಯಾರು ಅವುಗಳನ್ನು ನಿರ್ಮಿಸಿದರು? ಎಂಬುದನ್ನು ನಾವೀಗ ನೋಡು ವಣ. ಈ ಭೂಮಿಯಲ್ಲಿ ಶ್ರುತಿ ಸ್ಮೃತಿಗಳು ಧರ್ಮ ಪ್ರಮಾಣವಾಗಿವೆ. ಶಿವಾಗಮವೆಂದರೆ ಬಹುಜನವರಿಯದು. ಶೈವರು ಈ ಶಿವಾಗಮಗಳು ಶಿವನಿಂದಲೆ ಬಂದುವೆಂದು ನಂಬುವರು. ಇವು ಕಾಮಿಕಾದಿ ವಾತೂಲಾಂತವಾಗಿ ೨೮ ಸಂಹಿತೆಗಳುಂಟು; ಅಂದರೆ—

ಕಾಮಿಕಂ ಯೋಗಜಂ ಕಾರಣಂ ಅಜಿತಂ ತಥಾ।
ದೀಪ್ತಂ ಸೂಕ್ಷ್ಮಂ ಸಹಸ್ರಂ ಚ ಅಂಶುಮಾನ ಸುಪ್ರಭೇದಕಂ
ವಿಜಯಂ ಚೈವ ನಿಶ್ವಾಸಂ ಸ್ವಯಂಭೂಮಥಾನಲಂ
ವೀರಂಚ ರೌರವಂ ಚೈವ ಮಕುಟಂ ವಿಮಲಂ ತಥಾ।
ಚಂದ್ರಜ್ಞಾನಂ ಚ ಬಿಂಬಂ ಚ ಪ್ರೋದ್ಗೀತಂ ಲಲಿತಂ ತಥಾ।



CC-0. Jangamwadi Math Collection, Varanasi. An eGangotri Initiative

ಸಿದ್ಧಂ ಸಂತಾನ ಸರ್ವೋಕ್ತಂ ಪಾರಮೇಶ್ವರಮೇವ ಚ
ಕಿರಣಂ ವಾತುಲಂ ಚೈವ ಅಷ್ಟಾವಿಂಶತಿ ಸಂಹಿತಾಃ ॥
ಸುಪ್ರಭೇದಾಗಮ, ತಂತ್ರಾವತಾರಪಟಲ ( ೩ ರಿಂದ ೬ ರ ವರೆಗೆ )

ಈ ಆಗಮಗಳಿಗೆ ತಂತ್ರಗಳೆಂತಲೂ ಹೆಸರುಂಟು.

ತನೋತಿ ವಿಪುಲಾನರ್ಥಾನ್ ತತ್ವಮಂತ್ರಸಮಾಶ್ರಿತಾನ್
ತ್ರಾಣಂ ಚ ಕುರುತೇ ಪುಂಸಾಮ್ ತೇನ ತಂತ್ರಮಿತಿ ಸ್ಮೃತಂ
ಸುಪ್ರಭೇದಾಗಮ, ಮಂತ್ರಾವತಾರಪಟಲ ೧-೨.

ಅಂದರೆ ತತ್ವಗಳ ಮತ್ತು ಮಂತ್ರಗಳ ಸಂಬಂಧವಾದ ಅನೇಕಾರ್ಥವನ್ನು ವಿವರಿಸಿ ಆ ವಿವರಣ ದಿಂದಾದ ಜ್ಞಾನಬೋಧದಿಂದ ಆತ್ಮರುಗಳನ್ನು ರಕ್ಷಿಸುವ ತನದಿಂದ ಶಿವಾಗಮಗಳಿಗೆ ತಂತ್ರವೆಂಬ ಹೆಸರುಂಟಾಯಿತು. ಇನ್ನು ತತ್ವವೆಂದರೆ:—

### ಶಿವಾಗಮ ರೀತ್ಯಾ ೩೬ ತತ್ವಗಳು :

ಶ್ಲೋ॥ ಆಪ್ರಲಯಂ ಯತ್ತಿಷ್ಠತಿ ಸರ್ವೇಷಾಂ ಭೋಗದಾಯಿ ಭೂತಾನಾಂ
ತತ್ವಮಿತಿ ಪ್ರೋಕ್ತಂ ನ ಶರೀರಘಟಾದಿ ತತ್ವಮತಃ ॥ ೭ ॥
ಭೋಜಪ್ರಣೀತ ತತ್ವಪ್ರಕಾಶಿಕಾ

ಪ್ರಲಯಾಂತವಾಗಿ ಆವುದೊಂದು ನಿಲ್ಲುವದೊ ಮತ್ತು ಎಲ್ಲ ಆತ್ಮರುಗಳಿಗೆ ಭೋಗವನ್ನುಂಟು ಮಾಡುವುದೊ ಅದು ತತ್ವವೆಂದು ಈ ಶಿವಶಾಸ್ತ್ರದಲ್ಲಿ ಬಳಕೆಯಾಗಿದೆ. ಶರೀರವಲ್ಲಾಗಲಿ ಮಡಕೆ ಯಲ್ಲಾಗಲಿ ಈ ಪ್ರಲಯಾಂತವಾಗಿ ಉಳಿವತನವಿಲ್ಲದುದರಿಂದ ಅವು ತತ್ವವಲ್ಲ. ಈ ೩೬ ತತ್ವಗಳೆಂದರೆ:—

ಭೂವಾರ್ಯಗ್ನಿ ಮರುತ್ ಖ ಗಂಧ ರಸ ರೂಪ ಸ್ಪರ್ಶ ಶಬ್ದಾನ್ ಭಗಂ ।
ಪಾಯು ಪಾದ ಕರಾಸ್ಯ ನಾಸಾ ರಸನಾ ದೃಕ್ ತ್ವಕ್ಕುಥಿ ಮಾನಸಂ ।
ಗರ್ವಂ ಧೀ ಗುಣಮತ್ರ ರಾಗ ಪುರುಷಾನ್ ವಿದ್ಯಾ ನಿಯತೌ ಕಲಾಂ ।
ಕಾಲಂ ಮೋಹಕ ಬೋಧಕೇಶ್ವರ ಸದೇಚ್ಛಚ್ಛಕ್ತಿ ಮಾಡೇ ಶಿವಂ ॥
ಅಘೋರಶಿವಾಚಾರ್ಯಕೃತ ತತ್ವಪ್ರಕಾಶಿಕಾ ವೃತ್ತಿ.

ಭೂಮಿ, ಜಲ, ಅಗ್ನಿ, ವಾಯು, ಆಕಾಶವೆಂಬ ಪಂಚಭೂತಗಳು; ಗಂಧ, ರಸ, ರೂಪ, ಸ್ಪರ್ಶ, ಶಬ್ದವೆಂಬ ಈ ಪಂಚ ಭೂತಗಳಿಗೆ ಕಾರಣವಾದ ಪಂಚತನ್ಮಾತ್ರಗಳು; ಗುಹ್ಯ, ಗುದ, ಪಾದ, ಹಸ್ತ, ಮುಖ ಎಂಬ ೫ ಕರ್ಮೇಂದ್ರಿಯಗಳು; ನಾಸಿಕಾ, ಜಿಹ್ವಾ, ನೇತ್ರ, ಸ್ಪರ್ಶ, ಶ್ರೋತ್ರವೆಂಬ ಪಂಚಜ್ಞಾನೇಂದ್ರಿಯಗಳು; ಮನಸ್ಸು, ಅಹಂಕಾರ, ಬುದ್ಧಿ, ಎಂಬ ೩ ಅಂತಃಕರ ಣಗಳು; ಗುಣ, ರಾಗ, ವಿದ್ಯಾ, ನಿಯತಿ, ಕಲಾ, ಕಾಲ, ಪ್ರಕೃತಿ, ಪುರುಷವಿದ್ಯಾ, ಈಶ್ವರ, ಸದಾ ಶಿವ, ಶಕ್ತಿ, ಶಿವವೆಂಬುವೆ ೩೬ ತತ್ವಗಳು. ಇಲ್ಲಿ ಶಿವಶಬ್ದವು ಬಿಂದುವಾಚಕವಾಗಿದೆ. ಅಂದರೆ ಪರಶಿವನು ಈ ೩೬ ತತ್ವಗಳ ಆಚೆಯಲ್ಲಿಹನು. ಎಂದರೆ ತತ್ವಗಳಿಂದ ಮತ್ತು ತಾತ್ವಿಕಗಳಿಂದ ( ತಾತ್ವಿಕಗಳು ತತ್ವದಿಂದ ಹುಟ್ಟುವ ಕಾರ್ಯಗಳು ) ಆಚೆ ಇಹನು. ಈ ೩೬ ತತ್ವಗಳು ಒಂದ ಕ್ಕೊಂದು ಕಾರ್ಯಕಾರಣಭಾವದಿಂದಿಹುದರಿಂದ ಕೆಲವು ತಾತ್ವಿಕಗಳಾಗಿವೆಯಾದರೂ ಇವೆಲ್ಲ ಪ್ರಳಯದ ವರೆಗೆ ಉಳಿವುದರಿಂದ ಇವುಗಳಿಗೆ ತತ್ವಗಳೆನ್ನುವರು.



CC-0. Jangamwadi Math Collection, Varanasi. An eGangotri Initiative

ಪಂಚತನ್ಮಾತ್ರಗಳು, ಪಂಚಭೂತಗಳು ಎಂಬಿವು ಇಂದ್ರಿಯಗಳಿಂದ ವ್ಯಾಪ್ತವಾಗಿ ವ್ಯವಹಾರಯೋಗ್ಯವಾದವುವು ಆ ಕರಣಗಳು ಸ್ವಯಮೇವ ವ್ಯವಹರಿಸಲಾರದರಿಂದ ಈ ಪಂಚ ಭೂತಗಳನ್ನೂ ಪಂಚತನ್ಮಾತ್ರಗಳನ್ನೂ ಆಶ್ರಯಿಸಿ ವ್ಯವಹರಿಸುತ್ತವೆ.

ಕಾರ್ಯಮಿದಂ ದಶಧಾ ಯತ್ ತತ್ ಕರಣೈಃ ಕಾರ್ಯತ್ವಾ ತೇಸಮಾವಿಶ್ಯ ।
ಕರಣಾನ್ಯ ಸಮರ್ಥತ್ ಕಾರ್ಯಂ ಸಂಶ್ರಿತ್ಯ ಚೇಷ್ಟಂತೇ ॥

ಭೂತಗಳೆಂದರೆ ವಿವರಿಸುವ ಆವಶ್ಯಕತೆ ಇಲ್ಲ. ತನ್ಮಾತ್ರಗಳೆಂದರೇನು ?

ತನ್ಮಾತ್ರಾಣ್ಯವಿಶೇಷಾ ಶಬ್ದಾದಿನಾಂ ಪ್ರಕೀರ್ತಿತಾಃ ಶಾಸ್ತ್ರೇ। ತತ್ವಪ್ರಕಾಶಿಕಾ ೬೧.

ಶಬ್ದ, ಸ್ಪರ್ಶ, ರಸ, ರೂಪ, ಗಂಧವೆಂಬ ೫ ವ್ಯವಹಾರಕ್ಕೆ ಯೋಗ್ಯವಲ್ಲದ ಅನಿಭಿವ್ಯಕ್ತ ಸ್ಥಿತಿಯಲ್ಲಿ ತನ್ಮಾತ್ರಗಳೆನಿಸುತ್ತವೆ. ಮತ್ತು ಈ ಪಂಚ ತನ್ಮಾತ್ರಗಳಿಂದ—

ಭೂತಾನಿ ಪಂಚ ತೇಭ್ಯೋ ಭವಂತಿ ತಾನ್ಯೇಕ ಗುಣವೃದ್ಧ್ಯಾಃ

ಎಂಬ ಅದೇ ಪ್ರಮಾಣದಿಂದ ಶಬ್ದತನ್ಮಾತ್ರದಿಂದ ಆಕಾಶವೂ ಸ್ಪರ್ಶತನ್ಮಾತ್ರದಿಂದ ವಾಯುವೂ ರೂಪತನ್ಮಾತ್ರದಿಂದ ಅಗ್ನಿಯೂ ರಸತನ್ಮಾತ್ರದಿಂದ ಜಲವೂ ಗಂಧತನ್ಮಾತ್ರದಿಂದ ಪೃಥ್ವಿಯೂ ಹುಟ್ಟುವುವು. ಇವುಗಳು ಉತ್ತರೋತ್ತರವಾಗಿ ಒಂದೊಂದು ಗುಣಾಧಿಕವನ್ನು ಹೊಂದುತ್ತ ಆಕಾಶಕ್ಕೆ ಶಬ್ದ ಒಂದು ಗುಣವು, ವಾಯುವಿಗೆ ಶಬ್ದ-ಸ್ಪರ್ಶವೆಂಬ ೨ ಗುಣಗಳು, ಅಗ್ನಿಗೆ ಶಬ್ದ-ಸ್ಪರ್ಶ-ರೂಪವೆಂಬ ೩ ಗುಣಗಳು, ಜಲಕ್ಕೆ ಶಬ್ದ-ಸ್ಪರ್ಶ-ರೂಪ-ರಸವೆಂಬ ೪ ಗುಣಗಳು, ಪೃಥ್ವಿಗೆ ಶಬ್ದ-ಸ್ಪರ್ಶ-ರೂಪ-ರಸ-ಗಂಧವೆಂಬ ೫ ಗುಣಗಳು.

ಸಾರಾಂಶ:- ಇಂದ್ರಿಯಗಳು ಪಂಚ ತನ್ಮಾತ್ರಗಳನ್ನೂ ಅವುಗಳ ಕಾರ್ಯವಾದ ಆಕಾಶಾದಿಗಳನ್ನೂ ವ್ಯಾಪಿಸದೆ ಈ ದಶವು ವ್ಯವಹಾರಸಮರ್ಥವಾಗದು. ಇಂದ್ರಿಯಗಳು ವ್ಯಾಪಿಸಿದ ಬಳಿಕ ಆ ತನ್ಮಾತ್ರಗಳು ಆ ಭೂತಗಳಲ್ಲಿ ವಿಶೇಷಾಭಿವ್ಯಕ್ತಿಯನ್ನು ಹೊಂದಿ ಅವುಗಳ ಗುಣಗಳೆನಿಸುತ್ತ ಇಂದ್ರಿಯ ವಿಷಯಗಳೆನಿಸಿದವುವು. ಪಂಚಭೂತಗಳು ಅವಕಾಶ, ವ್ಯೂಹನ, ಪಾಕ, ಸಂಗ್ರಹ, ಧಾರಣವೆಂಬ ಕಾರ್ಯಗಳನ್ನು ಮಾಡಿದವುವು. ಅಂದರೆ ಆಕಾಶವು ಇಂಬುಗೊಡುವುದು. ವಾಯುವು ಅವಯವಗಳನು ಹೊಂದಿಪುದು. ಅಗ್ನಿಯು ಪರಿಪಾಕಗೊಳಿಪುದು. ಜಲವು ಬಿಗಿ ಹಿಡಿವುದು. ಭೂಮಿಯು ಧಾರಣಂಗೈವುದು.

ಇಂದ್ರಿಯಗಳು ಅಹಂಕಾರ ತತ್ವದಿಂದ ಹುಟ್ಟಿದವುವು. ಆ ಅಹಂಕಾರವು ಜೀವನ, ಸೌರಂಭ, ಗರ್ವವೆಂಬ ೩ ವಿಧವನು ತಾಳಿದವುದು. ಜೀವನವೆಂದರೆ ಪ್ರಾಣಾದಿ ದಶವಾಯುಗಳನ್ನು ಪ್ರವರ್ತಿಪುದು. ಪ್ರಾಣಾದಿಗಳ ಪ್ರವರ್ತನವಿಲ್ಲದೆ ಜೀವನವಿಲ್ಲ. ಸೌರಂಭವೆಂದರೆ ಪ್ರವರ್ತನವು. ಪ್ರವರ್ತನಕ್ಕೆ ಪ್ರಯತ್ನವು ಬೇಕು. ಗರ್ವವೆಂದರೆ ನಾನು ನಾನು ಎಂಬ ಗ್ರಾಹಕಾಧ್ಯಾವಸಾಯವು. ಅದಿಲ್ಲದೆ ಸೌರಂಭವಿಲ್ಲ; ಜೀವನವಿಲ್ಲ. ಈ ಅಹಂಕಾರವು ಸಾತ್ವಿಕ, ರಾಜಸ, ತಾಮಸವೆಂಬ ಭೇದದಿಂದ ಮೂದೆರನಾಗಿದೆ. ತೈಜಸವೆಂಬ ಸಾತ್ವಿಕಾಹಂಕಾರದಿಂದ ಮನವು ಹುಟ್ಟಿತು. ವೈಕಾರಿಕವೆಂಬ ರಾಜಸಾಹಂಕಾರದಿಂದ ಇಂದ್ರಿಯಂಗಳು ಹುಟ್ಟಿದುವು. ಭೂತಾದಿ ಎಂಬ ತಾಮಸಾಹಂಕಾರದಿಂದ ಶಬ್ದಾದಿ ಪಂಚ ತನ್ಮಾತ್ರಾದಿಗಳು ಹುಟ್ಟಿದುವು. ಮನವು ಇಚ್ಛಾಸ್ವಭಾವವಾಗಿ ಅದರ ವ್ಯಾಪಾರವು ಸಂಕಲ್ಪವಾಗಿದೆ. ಜ್ಞಾನೇಂದ್ರಿಯಂಗಳು ಶಬ್ದ, ಸ್ಪರ್ಶ,



CC-0. Jangamwadi Math Collection, Varanasi. An eGangotri Initiative

ರಸ, ರೂಪ, ಗಂಧಗಳೆಂಬ ೫ ವಿಷಯಂಗಳನು ಗ್ರಹಿಸಿದವುವು. ಕರ್ಮೇಂದ್ರಿಯಂಗಳು, ನಾಲಗೆಯು ನುಡಿವಣ, ಹಸ್ತವು ಹಿಡಿವಣ, ಪಾದವು ನಡೆವಣ, ಗುದವು ಬಿಡುವಣ, ಉಪಸ್ಥ ( ಗುಹ್ಯ ) ಆನಂದಿಸುವಣ ಎಂಬ ಕಾರ್ಯಗಳನು ಮಾಡಿದವುವು. ಅಂದರೆ ಅಹಂಕಾರದಿಂದ ಪಂಚ ತನ್ಮಾತ್ರಗಳು, ಮನಸ್ಸು, ದಶೇಂದ್ರಿಯಗಳು ಜನಿಸಿದವುವು. ಪಂಚತನ್ಮಾತ್ರಗಳಿಂದ ಪಂಚಭೂತ ಗಳುದಯಿಸಿದುವು. ಅಹಂಕಾರವು ತಾನೂ ತನ್ನ ಕಾರ್ಯಕುಲವಾದ ಮನ ಇಂದ್ರಿಯಂಗಳೂ ಈ ಭೂತ ತನ್ಮಾತ್ರಗಳೆಂಬ ದಶಕಗಳನ್ನು ವ್ಯಾಪಿಸಿ ಶಬ್ದಾದಿ ಪಂಚ ವಿಷಯಗಳನ್ನು ವ್ಯಕ್ತೀ ಕರಿಸಿತು. ಆಕಾಶಾದಿ ಪಂಚಭೂತಗಳ ಅವಕಾಶಾದಿ ಕಾರ್ಯಗಳಿಗೆ ಅನುವುಗೊಟ್ಟಿತು. ಆ ವಾಯುವನ್ನು ಪಂಚಪ್ರಾಣವಾಗಿ ಪರಿಣಮಿಸಿತು. ಇಷ್ಟೆಲ್ಲ ಕಾರ್ಯಕ್ಕಾಗಿ ಆ ಪಂಚಭೂತಗಳು ಶರೀರ ಪಿಂಡಾಕೃತಿಯಾದುವು.

ಅಹಂಕಾರವು ಬುದ್ಧಿತತ್ವದಿಂದ ಜನಿಸಿತು. ಆ ಬುದ್ಧಿತತ್ವವು ನಿಶ್ಚಯರೂಪವು. ಅಂದರೆ ವಿಷಯಾಧ್ಯವಸಾಯರೂಪವು.

ಭವತಿ ಗುಣತ್ರಧೀರ್ ವಿಷಯಾಧ್ಯವಸಾಯರೂಪಿಣಿ ಚೇಹ |
ಸಾಪಿ ತ್ರಿವಿಧಾ ಗುಣತಃ ಪ್ರೋಕ್ತಾ ಕರ್ಮಾನುಸಾರೇಣ ||೫೨||

ತತ್ವಪ್ರಕಾಶಿಕಾ

ಇದು ಮಡಕೆಯು ಎಂಬ ನಿಶ್ಚಯವು ಬುದ್ಧಿಯ ಕಾರ್ಯವಾಗಿದೆ. ಆ ಬುದ್ಧಿಯು ಆತ್ಮನ ಕರ್ಮಾನುಸಾರವಾಗಿ ಸಾತ್ವಿಕ, ರಾಜಸ, ತಾಮಸವೆಂಬ ೩ ಭೇದಗಳನ್ನು ಹೊಂದುವುದು. ಆ ಬುದ್ಧಿಯು ಗುಣತತ್ವದಿಂದ ಹುಟ್ಟಿತು. ಆ ಗುಣತತ್ವವು ಅವ್ಯಕ್ತವೆಂಬ ಪ್ರಕೃತಿಯಿಂದ ಮೂಡಿತು.

ಅವ್ಯಕ್ತಾದ್ ಗುಣತತ್ವಂ ಪ್ರಖ್ಯಾವ್ಯಾಪಾರನಿಯಮರೂಪಮಿಹ |
ಸತ್ವಂ ರಜಸ್ತಮೋಪಿ ಚ ಸುಖದುಃಖೇ ಮೋಹ ಇತ್ಯಪಿ ಚ ||೫೦||

ತತ್ವಪ್ರಕಾಶಿಕಾ

ಆತ್ಮನ ಭೋಗಸಾಧನವಾದ ಜಗತ್ತನ್ನೆಲ್ಲ ತನ್ನ ಗರ್ಭದಲ್ಲಿ ಒಡೆದು ತೋರದೆ ತಾಳಿಪುದ ರಿಂದ ಇದು ಅವ್ಯಕ್ತವೆನಿಸಿತು. ಈ ಅವ್ಯಕ್ತದಿಂದ ಬೆಳಗು, ನಡೆ, ನಿಲ್ವಿಕೆ ಎಂಬ ಹೆಸರಿನ ಗುಣ ಗಳಾದುವು. ಅವಕ್ಕೆ ಸತ್ವ, ರಜಸ್, ತಮವೆಂಬ ಹೆಸರುಂಟು. ಸುಖ ದುಃಖ ಮೋಹಗಳೆಂದೂ ಇವಕ್ಕನ್ನುವರು.

ಸಾಂಖ್ಯಾದಿ ಶಾಸ್ತ್ರಗಳು ಈ ಅವ್ಯಕ್ತ ತತ್ವದಿಂದಲೆ ಮುಂದೆ ಸಾಗಿ ತಮ್ಮ ಸಂಪ್ರದಾಯ ವನ್ನು ವಿವರಿಸಿದವುವು. ಈ ತತ್ವಗಳು ೨೫ ಗಣನೆಯಾದವುವು. ಆದರೆ ಶೈವ ಸಿದ್ಧಾಂತವು ಈ ಪ್ರಕೃತಿ ತತ್ವಕ್ಕೂ ಆಚೆಯವಾದ ತತ್ವಗಳನ್ನು ವಿವರಿಸುವುದು. ಅಂದರೆ ಪ್ರಕೃತಿಯು ಆತ್ಮನಿ ಗಾಗಿ ಗುಣಾದಿ ವಿಕಾಸಂಗೊಳ್ಳಲು ಆತ್ಮನ ಭೋಕ್ತೃತ್ವವು ಕಾರಣವಾಗಿದೆ. ಭೋಕ್ತೃತ್ವವು ಎಲ್ಲಿಂದ ಬಂದಿತು ? ಅದು ಕಲಾ, ಕಾಲ, ನಿಯತಿ, ವಿದ್ಯಾ, ರಾಗವೆಂಬ ತತ್ವಗಳಿಂದ ಉಂಟಾಯ್ತು. ಈ ತತ್ವಗಳು ಆತ್ಮನನ್ನು ಸಂಬಂಧಿಸಿ ಅವನಿಗೆ ಭೋಕ್ತೃತ್ವವನ್ನುಂಟು ಮಾಡಿದವುವು. ಕಲಾ ತತ್ವವು ಆತ್ಮನ ಆವರಣವಾದ ಮಲವನ್ನು ಒಪ್ಪಚಿ ಓರೆಗೈದು ಅವನ ಕರ್ತೃತ್ವ ಶಕ್ತಿಯನ್ನು ತೆರೆವುದು. ಅದರಿಂದ ಅವಕ್ಕೆ ಕಲವಿಭಜನೆ ಎಂಬ ಧಾತುವಿನರ್ಥಗತಿಯಿಂದ ಕಲಾ ಎಂಬ ಹೆಸರಾಯಿತು.



CC-0. Jangamwadi Math Collection, Varanasi. An eGangotri Initiative

ಮುಲಂ ನೃಣಾಮೇಕತಸ್ತು ಕಲಯಿತ್ವಾ ವ್ಯಂಜೇತೇ ಕರ್ತೃಶಕ್ತಿಂ ಕಲೇತ ತೇನೇಹ ಕಥಿತೇಯಂ ।

ಇದಕ್ಕೆ ಕಾಲ ನಿಯತಿ ಎಂಬ ತತ್ವಗಳು ಸಹಾಯಕವನೆಸಗಿ ಪುರುಷಭೋಗವಾದ ಸೃಷ್ಟಿಗೆ ಕಾರಣವಾಯಿತು. ನಿಯತಿ ಎಂದರೆ ನಿಯಮನವು. ಇಂತಹ ಕಾರಣದಿಂದ ಇಂತಹ ಕಾರ್ಯವಾಗಬೇಕು, ತಪ್ಪಬಾರದು ಎಂಬುದೇ ನಿಯತಿ.

ನಿಯತಿರ್ ನಿಯಮನರೂಪಾ ಮಾಯಾತ ಸಾಪ್ಯನಂತರಂ ಭವತಿ ।

ಕಾಲವೆಂದರೆ ನಾನಾವಿಧ ಶಕ್ತಿಯಿಂದ ಕೂಡಿ ಈ ಜಗತ್ತನ್ನು ಮುಂದಾಗುವುದು, ಈಗಾದವುದು, ಅಂದಾದುದು ಎಂಬ ಬಗೆಯಿಂದ ವಿಂಗಡಿಸುವುದಕ್ಕೆ ಕಾರಣವಾದುದೆ ಕಾಲತತ್ವವು. ಈ ಕಾಲವು ವಿಚಿತ್ರ ಶಕ್ತಿಗಳನ್ನುಳ್ಳುದು.

ನಾನಾವಿಧಶಕ್ತಿಮಯೀ ಸಾ ಜನಯತಿ ಕಾಲತತ್ವಮೇವಾದೌ
ಭಾವಿಭವದ್ಭೂತಮಯಂ ಕಲಯತಿ ಜಗದೇಷಃ ಕಾಲೋತಃ ॥೪೧॥

ಈ ಮಾಯಾ ತತ್ವವು ನಾನಾವಿಧ ಶಕ್ತಿಯಿಂದ ಕೂಡಿದುದು. ಕಾಲತತ್ವವನ್ನೆ ಅದು ಮೊತ್ತ ಮೊದಲು ಹಡೆವುದು. ಈ ಕಾಲತತ್ವವು ಭಾವಿಭವದ್ಭೂತವಾದ ಜಗತ್ತನ್ನು ವಿಭಾಗಿಸುವುದರಿಂದ ಇದಕ್ಕೆ ಕಾಲವೆಂಬ ಹೆಸರು. ರಾಗವೆಂದರೆ ವಿಷಯಗಳಲ್ಲಿ ಅದು ಇದು ಎನ್ನದೆ ಸಾಮಾನ್ಯವಾಗಿ ಆತ್ಮನನ್ನು ತೊಡಕಿಸುವುದು.

ರಾಗೋಭಿಸಂಗಾತ್ಮಾ ವಿಷಚ್ಛೇದಂ ವಿನ್ಯೈವ ಸಾಮಾನ್ಯಾಃ ॥೪೪॥

ತತ್ವಪ್ರಕಾಶಿಕಾ

ಈ ಶ್ಲೋಕಗಳಲ್ಲಿ ಮಾಯೆ ಎಂಬ ಒಂದು ತತ್ವವೂ ಬಂದಿತು. ೩೬ ತತ್ವಗಳಲ್ಲಿ ಈ ತತ್ವಪರಿಗಣನೆಯನ್ನು ನಾವು ನೋಡಿಲ್ಲ; ಇದೆಲ್ಲಿಯದು ಎಂದರೆ— ಮಾಯೆಯು ಈ ವಿಶ್ವದ ಶಕ್ತಿರೂಪವು. ಇದನ್ನು ನಾವು ತತ್ವ ವಿಚಾರವೆಂಬ ಮುಂದಿನ ಸಂದರ್ಭದಲ್ಲಿ ಸ್ಪಷ್ಟೀಕರಿಸುವೆವು. ಕಾಲ, ನಿಯತಿ, ಕಲಾ ವಿದ್ಯಾ, ರಾಗ ತತ್ವಗಳಿಂದ ಸಂಬಂಧವನ್ನೈದಿದ ಆತ್ಮನು ಭೋಕ್ತೃವೆನಿಸನು. ಆ ಭೋಕ್ತೃವಿಗಾಗಿ ಪ್ರಕೃತಿಯಿಂದ ಗುಣಾದಿಭೂಮ್ಯಂತವಾದ ತತ್ವಂಗಳು ಜನಿಸಿದುವು—ಎಂಬಲ್ಲಿ ೩೧ ತತ್ವಗಳು ಆದುವು. ಇವಕ್ಕೆ ಉತ್ತರವಾಗಿ ವಿದ್ಯಾ, ಈಶ್ವರ, ಸದಾಶಿವ, ಶಕ್ತಿ, ಶಿವ, ಎಂಬ ತತ್ವಗಳು ಉಂಟು. ಶಿವನ ಜ್ಞಾನಕ್ರಿಯಾತ್ಮಕವಾದ ಶಕ್ತಿಯು ಬಿಂದುವೆಂಬ ತತ್ವದಲ್ಲಿ ತುಂಬಿ ಪ್ರಕಟವಾಗಿ ಜಗತ್ ಸೃಷ್ಟ್ಯಾದಿ ಕಾರ್ಯಗಳ ಮಾಡಿದವುದು. ಆ ಬಿಂದುವಿಗೆ ಶೈವಶಾಸ್ತ್ರದಲ್ಲಿ ಶಿವನೆಂತಲೂ ಹೆಸರುಂಟು. ಅದುವೆ ಶಿವತತ್ವವು. ಈ ಬಿಂದು ಅಥವಾ ಶಿವತತ್ವವು ಸೃಷ್ಟಿ ಮುಖವಾದ ಮೊದಲನೆಯ ಸ್ಫುರಣವೆ ಶಕ್ತಿತತ್ವವು. ಈ ಬಿಂದುವಿನಲ್ಲಿ ಜ್ಞಾನಕ್ರಿಯಾಶಕ್ತಿಗಳು ಉತ್ಕರ್ಷಾಪಕರ್ಷಗಳಿಲ್ಲದೆ ಸಮಾನಪ್ರವೃತ್ತಿಯನ್ನೈದುವುದೆ ಸದಾಶಿವತತ್ವವು. ಈ ಬಿಂದುವಿನಲ್ಲಿ ಶಿವನ ಕ್ರಿಯಾಶಕ್ತಿಯು ಜ್ಞಾನಶಕ್ತಿಯನ್ನು ತನ್ನಲ್ಲಿ ಗರ್ಭೀಕರಿಸಿ ಸರ್ವ ಕೃತವಾದುದೆ ಈಶ್ವರತತ್ವವು. ಕರ್ತೃಶಕ್ತಿಯನ್ನು ಅಂಗೀಕರಿಸಿ ಜ್ಞಾನಶಕ್ತಿಯು ಅಧಿಕವಾಗಿ ಜ್ಞಾನಪ್ರದವಾದುದೆ ವಿದ್ಯಾತತ್ವವು. ಇಂತಿವು ೩೬ ತತ್ವಗಳನ್ನು ಶೈವಾಗಮವು ಸ್ಪಷ್ಟೀಕರಿಪುದು; ಮತ್ತು ಮಂತ್ರಗಳ ಅರ್ಥವನ್ನೂ ಪ್ರಯೋಜನವನ್ನೂ ವಿವರಿಸಿದವುದು.



CC-0. Jangamwadi Math Collection, Varanasi. An eGangotri Initiative

## ಮಂತ್ರಗಳೆಂದರೇನು ?

ವಾತುಲಾಗಮವು ಹೀಗೆನ್ನುವುದು:

ಮನನಂ ಸರ್ವಪಕ್ಷೇಷು ತ್ರಾಣಂ ಸಂಸಾರಸಾಗರಾತ್ ॥
ಮನನತ್ರಾಣಧರ್ಮತ್ವಾನ್ಮಂತ್ರ ಇತ್ಯಭಿಧೀಯತೇ ॥೭॥
ಆಹ್ವಾನತಃ ಸ್ವನಾಮ್ನಾ ತು ಜನಃ ಸನ್ನಿಹಿತೇ........

ಅತ್ಯಂತ ಸೂಕ್ಷ್ಮವಾದ ಶಿವತತ್ವದ ಮನನವು ಏತರಿಂದಾದವುದು ? ಆ ಮನನದಿಂದ ಸಂಸಾರ ಸಾಗರವು ಏತರಿಂದ ದಾಟಲಾಗಪುದೊ, ಅಂದರೆ ಸಂಸಾರಸಾಗರದಿಂದ ಆತ್ಮನ ತ್ರಾಣವಾದ ಪುದೊ, ಅದುವೆ ಮಂತ್ರವು. ಅಂತಹ ಮಂತ್ರಗಳ ರಹಸ್ಯವನ್ನು ಬಿಡಿಸಿ ಹೇಳುವುದು ಶಿವಾಗ ಮದ ವಿಷಯವಾಗಿದೆ. ಈ ಬಗೆಯಾಗಿ ತತ್ವಗಳ ಅರ್ಥವನ್ನೂ ಮಂತ್ರಗಳ ಪರಿಯನ್ನೂ ಬಿಚ್ಚಿ ಹೇಳುವುದರಿಂದ ಶಿವಾಗಮಕ್ಕೆ ತಂತ್ರವೆಂಬ ಹೆಸರು ಬಂದಿತು. ಮಂತ್ರವಿಷಯವು ಗೋಪ್ಯವಾ ದುದರಿಂದ ರಹಸ್ಯಬೋಧವಾದುದರಿಂದ ಇಲ್ಲಿ ಬರೆಯಲಾರೆವು.

ಈ ಶಿವಾಗಮಗಳನ್ನು ಶಿವನು ತನ್ನ ಪಂಚಮುಖಗಳಿಂದ ತನ್ನ ಪಂಚವಕ್ತ್ರಗಳಿಂದ ಹೇಳಿದನು. ಶಿವಶಾಸ್ತ್ರದಲ್ಲಿ ಶಿವನು ನಿಷ್ಕಲನೆಂದೂ ಸಕಲನಿಷ್ಕಲನೆಂದೂ ಸಕಲನೆಂದೂ ಹೇಳ ಪಡೆವನು. ಮೇಲಿನ ೩೬ ತತ್ವಗಳ ವಿಚಾರದಲ್ಲಿ ನಾವು ಕಲಾತತ್ವವನ್ನು ಬಗೆದೆವು. ಕಲಾ ತತ್ವವು ಆತ್ಮನ ಭೋಕ್ತೃತ್ವ ಸಂಪಾದಕವಾಗಿದೆ ಎಂದು ಅರಿತೆವು. ಈ ಸಕಲನಿಷ್ಕಲ ತತ್ವ ವಿಚಾರದಲ್ಲಿ ಕಲಾಶಬ್ದಾರ್ಥವು ಹಾಗಲ್ಲ.

ಕಲನಾ ಕಾಲಶಿಲ್ಪೇಷು ವೃದ್ಧೌ ಮೂಲಧನಸ್ಯ ಚ ।
ಇಂದೋರಂಶೇ ಕಲಾ ಧ್ಯಾನೇಷ್ವವ್ಯಕ್ತಮಧುರೇ ಕಲಂ ॥

ಎಂಬ ಶಾಶ್ವತ ಕೋಶ ಪ್ರಮಾಣದಿಂದ ಕಲಾಶಬ್ದವು ಧ್ಯಾನ ಪರ್ಯಾಯವಾಗಿದೆ. ನಿಷ್ಕಲ ವೆಂದರೆ ಧ್ಯಾನಿಸಲು ಬಾರದುದಾಗಿವುಳ್ಳುದೆಂಬರ್ಥ. ಸಕಲ ನಿಷ್ಕಲವೆಂದರೆ ಯೋಗಿಗಳ ಅತ್ಯಂತ ಸೂಕ್ಷ್ಮಧ್ಯಾನಗೋಚರವಾಗುಳ್ಳವೆಂಬರ್ಥ. ಸಕಲವೆಂದರೆ ಯೋಗಿಗಳ ಧ್ಯಾನಾರ್ಹವೆಂಬರ್ಥ.

ಯೋಗಿನಾಂ ಚ ಯತೀನಾಂ ಚ ಜ್ಞಾನಿನಾಂ ಮನ್ತ್ರಿಣಾಂ ತಥಾ ॥
ಧ್ಯಾನಪೂಜಾನಿಮಿತ್ತಾಯ ಸಕಲಂ ನಿಷ್ಕಲಂ ಭವೇತ್ ॥೨೮॥

ವಾತುಲಾಗಮ, ತತ್ವಭೇದಪಟಲ

## ನಿಷ್ಕಲ, ಸಕಲ ನಿಷ್ಕಲ, ಸಕಲ ಪರಶಿವ ತತ್ವವು

ಧ್ಯಾನಾರ್ಹನಲ್ಲದ ಪರಶಿವನು ಧ್ಯಾನಗೋಚರನಾಗಲು ಸಕಲ ನಿಷ್ಕಲನೂ ಪೂಜಾ ಸ್ತುತಿಗೋಚರನಾಗಲು ಸಕಲನೂ ಆದವುನೆಂಬರ್ಥ. ಪರಶಿವನಿಗೆ ಈ ಆಕಾರವು ಏತರಿಂದ ಸಮನಿಪುದು ? ಅವನಲ್ಲಿ ಅವಿನಾಭಾವಿನಿಯಾದ ಶಕ್ತಿಯಿಂದ. ಇಲ್ಲಿ ಮತಂಗಪಾರಮೇಶ್ವರವು:—

ಅಥ ಪತ್ಯುರಧಿಷ್ಠಾನಂ ಸ್ವಶಕ್ತಿಕಿರಣಾತ್ಮಕಂ ತಸ್ಯಾಂ ದಿವಿಷು ದೀಪ್ತಾತ್ಮಾನಾಂ ಸಂಕ್ಷೋಭಲ ಮೂರ್ತಿಮಾಕಾಷ್ಠಾ ಸೈವ ಪರಾ ಸೂಕ್ಷ್ಮಾ ಸರ್ವದಿಕ್ಕಾಮೃತಾತ್ಮಿಕಾ ಪ್ರಧ್ವಸ್ತಾವರಣಾ ಶಾಂತಾ ವಸ್ತು ಮಾತ್ರಾತಿಲಾಲಸಾ ಆದ್ಯಂತೋ ಪರತಾ ಸಾಧ್ವೀ ಮೂರ್ತಿತ್ವೇನೋಪಚರ್ಯತೇ ॥

ತೃತೀಯಪಟಲ



CC-0. Jangamwadi Math Collection, Varanasi. An eGangotri Initiative

ಇನ್ನು ಆ ಪತಿಯೆಂಬ ಶಂಭುವಿಗೆ ಅಧಿಷ್ಠಾನವೆಂಬ ಗದ್ದುಗೆಯು ಆವುದು ? ಅದು ಹಬ್ಬುಗೆಗೊಂಡ ಅವನ ಸ್ವಭಾವವೆ ಆದ ಶಕ್ತಿಯು. ಆ ಪ್ರಕಾಶಮಯವಾದ ಶಕ್ತಿಯೆಂಬ ಗದ್ದುಗೆಯಲ್ಲಿ ಅವನು ನಿಷ್ಕಂಪನಾಗಿಯೂ ಅಚಲಪ್ರಶಸ್ತಮೂರ್ತಿಯನುಳ್ಳವನಾಗಿಯೂ ಇರುವನು. ಆ ಅತ್ಯಂತ ಸೂಕ್ಷ್ಮವಾದ ಸರ್ವದಿಕ್ಕುಗಳನ್ನೂ ವ್ಯಾಪಿಸಿದ ಅಮರಣಾತ್ಮಿಕೆಯಾದ ಶಕ್ತಿಯು ಅಜ್ಞಾನದ ಮರೆಯನ್ನು ಬರಗೊಡುವುದಿಲ್ಲ. ಆ ಶಿವಸ್ಥಿತಿಯು ಶಾಂತವಾಗಿದೆ. ವಸ್ತುಮಾತ್ರವಾಗಿದೆ. ಪರಮಾನಂದಮಯವಾಗಿದೆ. ಅದು ಸರ್ವಾತ್ಮರುಗಳ ಪರಾಕಾಷ್ಠವಾಗಿದೆ. ಆ ಶಕ್ತಿಯಿಂದ ಶಿವನಿಗೆ ಆದಿ ಇಲ್ಲ. ಅಂತ್ಯವಿಲ್ಲ. ಇಂತಹ ಶಕ್ತಿಯಿಂದ ಶಿವನಿಗೆ ಬರುವ ರೂಪವು ಎಂತಹದೆಂದರೆ:—

ಇಂದ್ರಚಾಪಮಿವಾಕಾಶೇ ದರ್ಪಣೇ ಪ್ರತಿಬಿಂಬವತ್
ಮಾಂಸಾಸ್ಥಿರುಧಿರಂ ನ ಚ ।

ಆ ಪರಶಿವನು ಭಕ್ತರ ಅನುಗ್ರಹಕ್ಕಾಗಿ ತಾಳುವ ಶರೀರವು ದರ್ಪಣದಲ್ಲಿ ತೋರುವ ಪ್ರತಿಬಿಂಬದಂತೆ ಎಲುವು ಮಾಂಸರಕ್ತಗಳಿಂದ ಕೂಡಿಲ್ಲ. ಅದು ಆಕಾಶದಲ್ಲಿ ತೋರುವ ಕಾಮನ ಬಿಲ್ಲಿನಂತೆ ಪ್ರಕಾಶಮಯವಾಗಿದೆ.

ಸರ್ವಾಂಗೈರಪಿ ಸಂಪೂರ್ಣಂ ಸವಾವಯ ಸುಂದರಮ್ ॥
ಏವಂ ತತ್ಸ್ಮೃತಿಮಾತ್ರೇಣ ಮೂರ್ತಿ ಸಕಲರೂಪಸ್ಯತ್ ॥೮೫॥
ನಿಷ್ಕಲಂ ತದಭಾವೇತು ತತ್ ಸ್ಯಾತ್ ಸಕಲನಿಷ್ಕಲಂ ॥
ಸವಿರ್ಯಂ ಚೈವ ನಿರ್ದೇಹಂ ಮಾಂಸಾಸ್ಥಿರುಧಿರಂ ನ ಚ ॥೮೬॥
ಇನ್ದ್ರಚಾಪಮಿವಾಕಾಶೇ ದರ್ಪಣೇ ಪ್ರತಿಬಿಮ್ಬವತ್ ॥
ಇತ್ಯೇತನ್ಮನ ಸಾಕಲ್ಪಸಕಲಂ ನಿಷ್ಕಲಂ ಭವೇತ್ ॥೮೭॥

ವಾತುಲಾಗಮ, ತತ್ವಭೇದಪಟಲ

ಇಂತಹ ಪರಶಿವನು ಪಂಚಮುಖ ದಶಭುಜ ಪಾದದ್ವಯಗಳಿಂದಯುಕ್ತವಾದ ಅನಂತ ದಿವ್ಯಾಭರಣ ಸಮೇತವಾದ ನಾನಾಯುಧಧರವಾದ ರೂಪವನ್ನು ತಳೆವನು. ಈ ರೂಪವು ಆಕಾರಮಾತ್ರವಾಗಿರದೆ ಪರಶಿವನ ತತ್ವರೂಪವಾಗಿದೆ. ಆದುದರಿಂದಲೆ—

ಶಿವರೂಪಾದಿಚಿಂತಾ ಯಾ ಸಾ ಸೇವಾ ಮಾನಸೀ ಸ್ಮೃತಾ

ಎಂದು ಆ ಶಿವಚಿಂತನವು ಸೇವೆಯಲ್ಲಿ ಎಣಿಸಲ್ಪಡುತ್ತದೆ. ಈ ವಿಷಯವನ್ನು ನಾವು ಉಪಾಸನ ವಿಷಯವನ್ನು ವಿವರಿಸುವಾಗ ಸ್ಪಷ್ಟೀಕರಿಸಿದಪೆವು.

### ಶಿವವಕ್ತ್ರಸ್ವರೂಪ, ಶಿವಯೋಗನಿಷ್ಠದಿಂದಲೇ ಶಿವಾಗಮಂಗಳ ಪ್ರಕಟನೆ

ಶಿವನ ಐದುಮುಖಗಳಿಂದ ಈ ಸರ್ವ ಆಗಮಗಳ ಉತ್ಪತ್ತಿಯು. ಮುಖವೆಂದರೂ ವಕ್ತ್ರವೆಂದರೂ ಒಂದೇ. ಈ ವಕ್ತ್ರವೆಂದರೆ ವಚನ ಪ್ರಾಣಶಕ್ತಿಯು ಎಂದು ಶಿವಾಗಮಿಕರು ಹೇಳುವರು. ಶಿವನು ಮಾಂಸಾಸ್ಥಿರುಧಿರಂಗಳಿಲ್ಲದ ಶರೀರದಿಂದ ಈ ಆಗಮುಗಳನ್ನು ಉಸಿರಿದನೆಂತು? ಎಂದರೆ ಮೃಗೇಂದ್ರಾಗಮ ವಚನವನ್ನು ಹೇಳುವೆವು.

ಶ್ಲೋಕ॥ ವಪುಷೋಽವಿದ್ಯಮಾನತ್ವಾತ್ ದದ್ಯತ್ ಕರ್ವರ್ಕಾಮೋತಿನಾಸಃ ।
ತಾಸ್ಯ ಸ ವಪುಸ್ತೇನ ತತ್ರ ತತ್ಪ್ರಾಸ್ಯ ತತ್ಕರ್ತೃವಪುಷಾನುಕೃತಂ ವಪುಃ ॥



CC-0. Jangamwadi Math Collection, Varanasi. An eGangotri Initiative

ಭೌತಿಕ ಶರೀರವು ಪರಮಾತ್ಮನಿಗೆ ಇಲ್ಲದರಿಂದ ಅವನು ಸರ್ವಕೃತ್ಯಗಳನ್ನು ಹೇಗೆ ಮಾಡುವ ನೆಂದರೆ– ಆರಾರನ್ನು ಅವನು ಪ್ರೇರಿಸುವನೋ ಅವರವರ ಶರೀರವನ್ನು ಅನುವರ್ತಿಸಿ ಆಯಾ ಕಾರ್ಯವನ್ನು ಮಾಡಿದಪುದು. ಎಂಬುದರಿಂದ ಸ್ವಯೋಗನಿಷ್ಠರಾದ ಯೋಗಿಗಳ ಶರೀರದಿಂದಲೆ ಅವನು ಶಿವಾಗಮಂಗಳನ್ನು ಉಸಿರಿದನೆಂದು ತಾತ್ಪರ್ಯವು.

## ಶಿವನು ಬುದ್ಧಿಗೆ ವಿಷಯವಾಗನು.

ಯೋಗಿಗಳ ಧ್ಯಾನಕ್ಕೆ ಈಡಾಗುವ ಪರಶಿವಶರೀರವು ಮಾಂಸಾಸ್ಥಿರುಧಿರಂಗಳಿಲ್ಲದುದು ಎಂದು ಹೇಳಿದೆವು. ಅಂತಹ ಶರೀರವನ್ನು ಕಾಣಲು ಸಾಧನವಾವುದು? ನಮಗಿರುವ ಜ್ಞಾನೇಂದ್ರಿಯ ಗಳೂ ಬುದ್ಧಿಯೂ ಪರಶಿವನ ಆ ದಿವ್ಯರೂಪವನ್ನು ಸಾಕ್ಷಾತ್ಕರಿಸಲು ಸಮರ್ಥವಾದುವಲ್ಲ. ನಮ್ಮ ಬುದ್ಧಿಯು ನಮ್ಮ ಜೀವಾತ್ಮನನ್ನೂ ಕಾಣದು. ಅಂದಬಳಿಕ ಪರಶಿವನನ್ನು ಕಾಣುವ ಪರಿಯು ಹೇಗೆ?

> ಪರಿಣಾಮಿೀ ಪುಮಾನ್ ಭೋಗ್ಯಃ ಪ್ರಾಪ್ತಸ್ತದ್ಗೋಚರೋ ಯದಿ ।
> ವಿಪರೀತಾ ಚ ಬುದ್ಧಿಸ್ಸ್ಯಾತ್ ॥

ಪುರುಷನು ಬುದ್ಧಿಗೋಚರನಾದರೆ ಅವನು ಭೋಗ್ಯವಸ್ತುವಾದಪನು. ಬುದ್ಧಿಗೋಚರವಾದ ಸಮಸ್ತವಸ್ತುಗಳು ಭೋಗ್ಯವಾಗಿವೆ. ಇಂತು ಪುರುಷನು ಭೋಗ್ಯವಾಗಲು ಬುದ್ಧಿಯು ಭೋಕ್ತೃ ವಾದಪುದು. ಬುದ್ಧಿಯು ಗುಣತತ್ವದ ಕಾರ್ಯವಾದುದರಿಂದ ಕಲಾದಿ ತತ್ವಗಳಲ್ಲಿ ಒಂದಾಗಿ ಪಾಶವಾಗಿದೆ. ಆದುದರಿಂದ ಅದು ಶಿವನನ್ನು ಪ್ರಕಾಶಿಸಲಾರದು.

> ಅಂತಃಕರಣವೃತ್ತಿರ್ಯಾ ಬುದ್ಧ್ಯಾಖ್ಯಾ ಸಾ ಮಹೇಶ್ವರಂ ।
> ನ ಪ್ರಕಾಶಯಿತುಂ ಶಕ್ತಾ ಪಾಶತ್ವಾನ್ನಿಗಡಾದಿವತ್ ॥

ಬುದ್ಧಿಯೆಂಬ ಅಂತಃಕರಣ ವೃತ್ತಿಯು ಪಾಶವಾಗಿಹುದರಿಂದ ಮಹೇಶನನ್ನು ಪ್ರಕಾಶಿಸಲಾರದು. ಅದೊಂದು ಸಂಕಲೆಯಂತೆ ಪುರುಷನನ್ನು ಬಿಗಿವುದಾಗಿ ಶಿವಪ್ರಕಾಶಕವಾಗದು. ಈ ಪ್ರಮಾಣ ಗಳನ್ನು ವಿಶ್ವಾರಾಧ್ಯರಚಿತ ಮಲಯರಾಜಸ್ತವಟೀಕೆಯಿಂದ ಎತ್ತಿದೆ.

## ಹಾಗಾದರೆ ಆ ಪರಶಿವನನ್ನು ಕಾಣಲು ಉಪಾಯವಾವುದು ?

ಶಿವನು ತನ್ನಲ್ಲಿ ಭಕ್ತಿಯನುಳ್ಳವರನ್ನು ಅನುಗ್ರಹಶೀಲನಾಗಿ ಪಾಶಗಳಿಂದ ಬಿಡಿಸಲು ತನ್ನ ಶಕ್ತಿಯಿಂದ ಕಾರಣವಾದಪನು. ಆದರಿಂದಲೆ ಅವನಿಗೆ ಹರನೆಂಬ ಹೆಸರು ಬಂದಿದೆ.

> ಹರಣಂ ಹಾನಿರುದ್ದಿಷ್ಟಾ ಭೋಗೇಷ್ವಭಿರತಾತ್ಮನಾಂ ।
> ಪುದ್ಗಲಾನಾಂ ಶರ್ವೈರ್ಗತ್ವಾ ಲಿಂಗಂ ಸಂಪೃತ್ಯ ವೇಗತಃ ॥
> ನಿವರ್ತಯತಿ ಸಂಭೋಗಂ ತಸ್ಮಿನ್ನೇವ ಭವಾಲಯೇ ।
> ವಿನಿವೇಶಯಿತುಂ ಶಕ್ತಾ ಪತ್ಯುಃ ಸಾ ವಶವರ್ತಿನೀ ॥
>
> ಮತಂಗಪಾರಮೇಶ್ವರ ಪತಿಪಟಲ.

ಹರಣಾತ್ ಹರಃ, ಹರಣಗೈವುದರಿಂದ ಹರನು. ಹರಣವೆಂದರೆ ಹಾನಿಯು; ಅಂದರೆ ತೊಲಗಿಸು ವುದು. ಭೋಗದಲ್ಲಿ ಆಸಕ್ತಿಯನ್ನು ಹೊಂದಿದ ಆತ್ಮರುಗಳ ಸೂಕ್ಷ್ಮಶರೀರವನ್ನು ಮೆಲ್ಲನೆ ಪ್ರವೇ ಶಿಸಿ ಸಂಹರಿಸಿ ವೇಗದಿಂದ ಆತ್ಮನ ಸಂಭೋಗವನ್ನು ತೊಲಗಿಸುವುದು ಶಿವನ ಹಾರಿಣೀಯೆಂಬ



CC-0. Jangamwadi Math Collection, Varanasi. An eGangotri Initiative

ಶಕ್ತಿಯು. ಆ ಶಕ್ತಿಯು ಅದೇ ಸಂಸಾರಗೃಹದಲ್ಲಿ ಆತ್ಮರುಗಳನ್ನು ಸ್ಥಾಪಿಸಲು ಸಮರ್ಥವಾಗಿದ್ದೊಡೆಯೂ ಪತಿಯ ವಶವರ್ತಿನಿಯಾದುದರಿಂದ ಅನುಗ್ರಹೀತರನ್ನು ಉದ್ಧರಿಸುವಳು ಅದರಿಂದ ಆತ್ಮನ ದೃಕ್ಛಕ್ತಿ ಸಾಮರ್ಥ್ಯವು ಬೆಳೆದು ಆತ್ಮನು ತನ್ನ ಬುದ್ಧ್ಯಾದಿಗಳಿಗೆ ಗೋಚರನಲ್ಲದ ಶಿವನನ್ನು ಸಾಕ್ಷಾತ್ಕರಿಸಿದಪನು.

ಶಿವಾರ್ಕಶಕ್ತಿದೀಧಿತ್ಯಾ ಸಮರ್ಥೀಕೃತ ಚಿದ್ದೃಶಾ ।
ಶಿವಂ ಶಕ್ತ್ಯಾದಿಭಿಸ್ಸಾರ್ಧಂ ಪಶ್ಯತ್ಯಾತ್ಮಾ ಗತಾವೃತಿಃ ॥

ಶತಸೂತ್ರದಲ್ಲಿ ಉದಾಹರಿಸಿದ ನಿಶ್ವಾಸ ಸೂತ್ರವು.

ಶಿವನೆಂಬ ಸೂರ್ಯನ ಶಕ್ತಿಕಿರಣದಿಂದ ತನ್ನ ಜ್ಞಾನನೇತ್ರವು ಸಬಲವಾಗಲು ಮಲಾವರಣವು ಕಳೆದು ಆತ್ಮನು ಶಕ್ತ್ಯಾದಿ ತತ್ವಗಳಿಂದ ಕೂಡಿದ ಶಿವನನ್ನು ಕಂಡಪನು. ಇಂತು ಪರಶಿವನನ್ನು ಕಾಣುತ್ತಲು ಪರಶಿವನೊಡನೆ ಯೋಗವಾಗಿ ಆ ಶಿವಸಾಮರ್ಥ್ಯದಿಂದ ಅವಭೋಧ ಜ್ಞಾನವು ಆತ್ಮನಲ್ಲಿ ಪ್ರಕಟವಾಗಿ ಶಾಸ್ತ್ರಮುಖವಾಗಿ ಹೊರಹೊಮ್ಮಿದುದು. ಈ ಶಾಸ್ತ್ರವೆ ಕಾಮಿಕಾದಿ ೨೮ ಆಗಮುಗಳು.

### ಆಗಮಂಗಳ ಭಾಷಾಶೈಲಿಯು.

ಇಷ್ಟು ಪುರಾತನವಾದ ಆಗಮುಗಳು ಭಾಷಾಶೈಲಿಯಲ್ಲಿ ಅತ್ಯಂತ ಆಧುನಿಕವಾಗಿ ತೋರುತಿವೆಯಲ್ಲ ? ಇದುವೆ ಆಗಮುಶಾಸ್ತ್ರದ ರಹಸ್ಯವು. ಆಗಮುಸಂಹಿತೆಗಳ ಸಂಖ್ಯೆಯನ್ನು ನಾವು ನೋಡಿದರೆ ಅವು ಅನಂತಾನಂತವಾಗಿವೆ. ಕಾಮಿಕಾಗಮುದ ತಂತ್ರಾವತಾರ ಪಟಲದಲ್ಲಿ ಇದನ್ನು ವಿಸ್ತೃತವಾಗಿ ಕಾಣಬಹುದು.

ಕಾಮಿಕವು ಪರಾರ್ಧಗ್ರಂಥ ಸಂಖ್ಯೆಯನುಳ್ಳುದಾಗಿದೆ. ಯೋಗಜವು ಲಕ್ಷಸಂಖ್ಯೆಯನುಳ್ಳುದು. ಇತ್ಯಾದಿಯಾಗಿ ಸಂಖ್ಯಾಕೀರ್ತನವಿದೆ. ಈ ಸಂಖ್ಯೆಗಳನ್ನು ಹೇಳುವ ತಾತ್ಪರ್ಯವು ನಮಗೆ ತೋರುವುದೆಂದರೆ- ಆಯಾಶಿವಚಿಂತಕರು ಶಿವಧ್ಯಾನದಿಂದ ಕಂಡು ಹೇಳಿದ ಶಿವಾನುಭವ ಸಿದ್ಧವಾದ ವಚನಗಳೂ ಆಗಮುದಲ್ಲಿಯೆ ಸಮಾವೇಶವಾದುವು. ಆಯಾಕಾಲದ ಶಿವಯೋಗ ಚಿಂತಕರು ಆಯಾಕಾಲದ ಭಾಷಾನುರೂಪವಾಗಿ ಶಿವರಹಸ್ಯವನ್ನು ವ್ಯಕ್ತಪಡಿಸಿದರು. ಇಲ್ಲಿ 'ಆಗಮು' ಶಬ್ದವು ಶಿವತಂತ್ರವಾಚಕವಾಗಿ ಒಂದು ವಿಶೇಷಾರ್ಥವನ್ನು ಸೂಚಿಪುದು. ಆಗಮುವೆಂದರೆ ಸಂಪ್ರದಾಯವೆಂದೂ ಹೇಳುವುರು. ವೇದಾಂತಗಳಂತೆ ಗತಕಾಲದ ಕೆಲವರ ಅನುಭವಕ್ಕೆ ಮಹತ್ವವನಿಡದೆ ಗತಕಾಲದ ಶಿವಾನುಭವಕ್ಕೆ ಆಯಾಕಾಲದ ಶಿವಾನುಭವಿಗಳು ತಮ್ಮ ಅನುಭಾವದ ಸಂಗ್ರಹವನ್ನು ಸೇರಿಸಿ ಹೇಳುತ್ತಹೋದರು. ಈಗ ನಮುಗೆ ಸಿಕ್ಕುವ ಸಂಹಿತೆಗಳು ತೀರ ಆಧುನಿಕ ಭಾಷೆಯಲ್ಲಿ ದೊರೆವುವು. ಆದರೆ ಅವುಗಳಲ್ಲಿ ಹುದುಗಿದ ತತ್ವಜ್ಞಾನಸಂಚಯವು ವೇದಕಾಲಕ್ಕಿಂತಲೂ ಪ್ರಾಚೀನವೆಂದು ಹೇಳಬಹುದು. ಹಾಗೆ ಹೇಳಲಾಗದಿದ್ದರೆ ವೇದಸಮಕಾಲವೆಂದು ಹೇಳಲು ಅಭ್ಯಂತರವಿಲ್ಲ.

### ಶ್ವೇತಾಶ್ವೇತರೋಪನಿಷತ್ತೂ ಶಿವಾಗಮಿಕ ಮಾಯಾದಿತತ್ವಗಳೂ.

ಇದೆಂತು ? ಶ್ವೇತಾಶ್ವೇತರೋಪನಿಷತ್ತು ನಮಗೆ ಸಾಕ್ಷಿಯಾಗಿದೆ. ಆ ಉಪನಿಷತ್ತಿನ ೫ನೆಯ ಅಧ್ಯಾಯದ ೪ನೆಯ ಮತ್ತು ೫ನೆಯ ಮಂತ್ರಗಳು ಶಿವಾಗಮುಸಿದ್ಧಾಂತವನ್ನು ಪ್ರಕಟಿಸುತ್ತವೆ.



CC-0. Jangamwadi Math Collection, Varanasi. An eGangotri Initiative

ಸರ್ವಾ ದಿಶ ಊರ್ಧ್ವಮಧಶ್ಚತಿರ್ಯಕ್ ಪ್ರಕಾಶಯನ್ ಭ್ರಾಜತೇ ಯದ್ವನಡ್ವಾನ್ ।
ಏವಂ ಸ ದೇವೋ ಭಗವಾನ್ವರೇಣ್ಯೋ ಯೋನಿಸ್ವಭಾವಾನಧಿತಿಷ್ಠತ್ಯೇಕಃ ॥೪॥
ಯಚ್ಚ ಸ್ವಭಾವಂ ಪಚತಿ ವಿಶ್ವಯೋನಿಃ ಪಾಚ್ಯಾಂಶ್ಚ ಸರ್ವಾನ್ ಪರಿಣಾಮಯೇದ್ಯಃ ।
ಸರ್ವಮೇತದ್ವಿಶ್ವಮಧಿತಿಷ್ಠತ್ಯೇಕೋ ಗುಣಾಂಶ್ಚ ಸರ್ವಾನ್ವಿನಿಯೋಜಯೇದ್ಯಃ ॥೫॥

ಮೇಲೆ, ಕೆಳಗೆ, ಸುತ್ತಲು ಇಂತಿವೆಲ್ಲ ದಿಕ್ಕುಗಳನ್ನು ಬೆಳಗುತ್ತ ಸೂರ್ಯನೆಂತು ಈ ಜಗತ್ತಿನ ಸರ್ವಚೇಷ್ಟೆಗಳಿಗೆ ಕಾರಣವಾಗುವನೊ ಅಂತೆಯೆ ಆ ಪ್ರಕಾಶಮಾನನಾದ ಭಗವಂತನು ಸರ್ವರಿಂದಲೂ ವರಣೀಯನಾಗಿ ಯೋನಿಸ್ವಭಾವವನ್ನು ಪ್ರೇರಿಸುವನು. ಆವುದೊಂದು ವಿಶ್ವಯೋನಿಯಾದ ಸ್ವಭಾವವನ್ನು ಪಾಕಗೊಳಿಸುವುದೊ, ಪಚನಯೋಗ್ಯವಾದ ಎಲ್ಲವನ್ನು ಪರಿಣಾಮಗೊಳಿಸುವುದೊ, ಆವನು ತಾನೊಬ್ಬನೆಯಾಗಿ ಈ ವಿಶ್ವವನ್ನೆಲ್ಲ ಅಧಿಷ್ಠಿಸುವನೊ ಮತ್ತು ಎಲ್ಲ ಗುಣಗಳನ್ನು ತಕ್ಕತಕ್ಕಂತೆ ಹೊಂದಿಪನೊ ಆ ಪರಶಿವನನ್ನು ತಿಳಿದು ಆತ್ಮನು ಮುಕ್ತಿಯನೈದುವನು.

ಶಿವನು ಸೃಷ್ಟಿ, ಸ್ಥಿತಿ, ಸಂಹಾರ, ತಿರೋಧಾನ, ಅನುಗ್ರಹವೆಂಬ ಪಂಚಕೃತ್ಯಗಳನ್ನು ಸ್ವಶಕ್ತಿಯಿಂದ ಎಸಗುವನು. ನಾಲ್ಕನೆಯ ಮಂತ್ರದಲ್ಲಿ ವರ್ಣಿತವಾದ ಕೃತ್ಯವು ಸಂಹಾರದಲ್ಲಿಯೂ ಪರಮೇಶ್ವರನು ಮಾಡುವ ವ್ಯಾಪಾರವಾಗಿದೆ. ಇದು ಶಿವಾಗಮಂಗಳಲ್ಲಿ ಅತಿ ಸ್ಪಷ್ಟವಾಗಿ ಬಂದಿದೆ. ಆ ಶಿವಾಗಮಸಿದ್ಧಾಂತವೆ ಈ ಮಂತ್ರದಲ್ಲಿ ವ್ಯಕ್ತವಾಗಿದೆ. ಅದಿಂತು ಮೃಗೇಂದ್ರಾಗಮದ ಪತಿಸ್ವರೂಪಪಟಲದಲ್ಲಿ ಪ್ರಮಾಣವಿದು —

ಸ್ವಾಪೇಽಪ್ಯಾಸ್ತೇ ಬೋಧಯನ್ ಬೋಧಯೋಗ್ಯಾನ್
ರೋಧ್ಯಾನ್ ರುಂಧನ್ ಪಾಚಯನ್ ಕರ್ಮಿಕರ್ಮ
ಮಾಯಾಶಕ್ತಿರ್ವ್ಯಕ್ತಿಯೋಗ್ಯಾಃ ಪ್ರಕುರ್ವನ್
ಪಶ್ಯನ್ ಸರ್ವಂ ಯದ್ಯಥಾ ವಸ್ತುಜಾತಮ್ ॥

ಪ್ರಲಯವೆಂಬ ಸ್ವಾಪದಲ್ಲಿಯೂ ಪತಿಯು ಒಂದೊಂದು ಪದಾರ್ಥವನ್ನು ಸಮಗ್ರವಾಗಿ ಇದ್ದಂತೆ ತಿಳಿದನಾಗಿ ಬೋಧಾರ್ಹರನ್ನು ಬೋಧಿಸುವನಾಗಿಯೂ ರೋಧಶಕ್ತಿಯಿಂದ ರೋಧ್ಯರನ್ನು ಬಂಧಿಸುವನಾಗಿಯೂ ಕರ್ಮಿಗಳ ಕರ್ಮವನ್ನು ಪಾಕಗೊಳಿಸುವನಾಗಿಯೂ ಮಾಯಾಶಕ್ತಿಗಳನ್ನು ಮುಂದಿನ ಸರ್ಗಕ್ಕೆ ಯೋಗ್ಯವಾಗುವಂತೆ ಅರಳಿಸುತ್ತಲೂ ಇರುವನು.

ಶ್ವೇತಾಶ್ವತರೋಪನಿಷತ್ತಿನಲ್ಲಿ ಹೇಳುವ ಪಾಚ್ಯಪಾಕವೂ ಪರಿಣಾಮವೂ ಗುಣಾಧಿಷ್ಠಾನವೂ ಈ ಆಗಮೋಕ್ತವ್ಯಾಪಾರವಲ್ಲದೆ ಬೇರೊಂದಲ್ಲ. ಉಳಿದ ಆವ ಬೃಹದಾರಣ್ಯಕಾದ್ಯುಪನಿಷತ್ತಿನಲ್ಲಿ ಈ ವಿಷಯವು ಬಂದಿಲ್ಲ. 'ಸ್ವಭಾವಂ ಪಚತಿ' ವೆಂಬುವಲ್ಲಿ 'ಸ್ವಭಾವ' ಶಬ್ದವನ್ನು ನಾವು ಆತ್ಮನ ಕರ್ಮಪರವಾಗಿ ತಿಳಿಯಬೇಕು. ಕರ್ಮಪಾಕದಂತೆ ಸೃಷ್ಟಿಯಾದಪುದು. ೪ನೆಯ ಮಂತ್ರದೊಳಗಿನ'ಯೋನಿಸ್ವಭಾವ' ಶಬ್ದಗಳನ್ನುಮಾಯಾ ಕರ್ಮಗಳ ಪರವಾಗಿ ತಿಳಿಯಬೇಕು. ಮಾಯೆಗೆ ಆಗಮಶಾಸ್ತ್ರದಲ್ಲಿ 'ಯೋನಿ'ಶಬ್ದಪ್ರಯೋಗವು ಕಂಡುಬರುತ್ತಿದೆ. ಮತ್ತು ಆ ಮಾಯೆಯಲ್ಲಿಯೆ ಆತ್ಮರುಗಳ ಕರ್ಮವು ಹುದುಗಿಹುದೆಂದು ಹೇಳಿಯಿದೆ. ಆ ಮಾಯೆಯಲ್ಲಿ ಈ ಜಗದ್ರೂಪವಾದ ಸರ್ವವಸ್ತುಗಳು ಶಕ್ತಿರೂಪವಾಗಿ ಹುದುಗಿರುವುವೆಂದು ಆಗಮಸಿದ್ಧಾಂತವು. ಅಂದರೆ ಅದಕ್ಕೆ ಬೀಜವೆಂತಲೂ ಗ್ರಂಥಿಯೆಂತಲೂ ಹೆಸರುಂಟು. ಮಾಯಾಕರ್ಮಗಳು ಕೂಡಿಯೆ ಪಾಕವನ್ನು ಹೊಂದುತ್ತ ಕಾರ್ಯಸಮರ್ಥವಾಗುತ್ತವೆ.



CC-0. Jangamwadi Math Collection, Varanasi. An eGangotri Initiative

ತದೇಕಮಶಿವಂ ಬೀಜಂ ಜಗತಶ್ಚಿತ್ರಶಕ್ತಿಮತ್ ।
ಸಹಕಾರ್ಯಾರ್ಥಿಕಾರಾಂತಸಂರೋಧಿ ವ್ಯಾಪ್ಯ ನಶ್ವರವ್ ॥

ಆ ಮಾಯೆಯು ಈ ಜಗತ್ತಿಗೆ ಒಂದೆ ಬೀಜವಾಗಿ ಮೋಹಕವಾಗಿಹುದು. ಅದು ವಿವಿಧಶಕ್ತಿ ಯುಕ್ತವಾಗಿಹುದು.

ಕರ್ಮದ ಅಧಿಕಾರವಿರುವತನಕ ಆತ್ಮನಿಗೆ ಪ್ರತಿಬಂಧಕವಾಗಿಹುದು. ತನ್ನ ಕಾರ್ಯಗಳಾದ ಕಲಾದಿ ತತ್ವಗಳನ್ನು ವ್ಯಾಪಿಸಿಹುದು. ಮಹಾಪ್ರಳಯದಲ್ಲಾದರೂ ಕರ್ಮಗಳನ್ನೂ ಜಗತ್ಕಾರ್ಯಗಳನ್ನೂ ಹುದುಗಿಸಿಕೊಂಡು ನಾಶರಹಿತವಾಗಿಹುದು. ಕರ್ಮವು ಪಾಕಹೊಂದಿ ಆತ್ಮನ ಜನ್ಮಾಯುಃಭೋಗಗಳನ್ನು ಉಂಟು ಮಾಡುವುದೆಂಬಲ್ಲಿ ವಿಶ್ವಸಾರೋತ್ತರಾಗಮವು ಪ್ರಮಾಣವಾಗಿದೆ.

ಧರ್ಮಾಧರ್ಮಾತ್ಮಕಂ ಕರ್ಮ ತಚ್ಚ ತ್ರಿವಿಧಮರ್ಥತಃ ।
ಜಾತ್ಯಾಯುರ್ಭೋಗದಂ ಯೇನ ನಾಮಿಶ್ರಂ ಪಚ್ಯತೇ ಕ್ವಚಿತ್ ॥ ೩೧ ॥

ಶತಸೂತ್ರದಲ್ಲಿ ೩೧ನೆಯ ಅಂಕೆಯಲ್ಲಿ ಉದಾಹರಿಸಿದ ಸೂತ್ರವು. ಆ ಉಪನಿಷತ್ತಿನ ೨ನೆಯ ಅಧ್ಯಾಯದ ೧೫ನೆಯ ಮಂತ್ರವು :

ಯದಾತ್ಮತತ್ತ್ವೇನ ತು ಬ್ರಹ್ಮತತ್ತ್ವಂ ದೀಪೋಪಮೇನೇಹ ಯುಕ್ತಾಃ ಪ್ರಪಶ್ಯೇತ್ ।
ಅಜಂ ಧ್ರುವಂ ಸರ್ವತತ್ತ್ವೈರ್ವಿಶುದ್ಧಂ ಜ್ಞಾತ್ವಾ ದೇವಂ ಮುಚ್ಯತೇ ಸರ್ವಪಾಶೈಃ ॥

ಆವಾಗ ದೀಪದಂತೆ ಆತ್ಮತತ್ತ್ವದಿಂದ ಹುಟ್ಟದ, ಚ್ಯುತಿ ಇಲ್ಲದ, ಆವ ತತ್ವದ ಸೋಂಕಿಲ್ಲದ, ಅತಿ ಶುದ್ಧವಾದ ಪ್ರಕಾಶಮಾನವಾದ ಬ್ರಹ್ಮತತ್ತ್ವವನ್ನು ಕಾಣುವನೋ ಆಗ ಸರ್ವಪಾಶಗಳಿಂದಲು ತೊಲಗುವನು. ಇಲ್ಲಿ 'ಪಾಶ' ಪದಾರ್ಥವು ಶಿವಾಗಮಸಿದ್ಧಾಂತದಿಂದ ಬಂದಿದೆ. ಉಳಿದ ಆವ ಉಪನಿಷತ್ತಿನಲ್ಲಿಯೂ ಈ ಪಾಶಶಬ್ದವನ್ನು ನಾವು ಕಾಣೆವು. ಅಥರ್ವಶಿಖಾಜಾಬಾಲುಪನಿಷತ್ತುಗಳಲ್ಲಿ 'ಪಾಶುಪತವ್ರತ' 'ಪಾಶು' ಶಬ್ದಗಳನ್ನು ಕಾಣುವೆವಾದರು ಈ ಉಪನಿಷತ್ತಿನಂತೆ ಅವು ಶೈವಾಗಮ ಸಿದ್ಧಾಂತ ಸಂಕ್ರಾಂತವಾಗಿವೆ.

ಪ್ರಾವೃತೀ ಶಬಿತೀ ಕರ್ಮ ಮಾಯಾಕಾರ್ಯಂ ಚತುರ್ವಿಧಂ ।
ಪಾಶಜಾಲಂ ಸಮಾಸೇನ ಧರ್ಮಾ ನಾಮ್ನೈವ ರೋತಿತಾಃ ॥

ಮೃಗೇಂದ್ರಾಗಮ, ಪರದೋಷನಿರಾಸಪಟಲ.

ಆವರಣವೂ ತಿರೋಧಾನವೆಂಬ ಶಕ್ತಿಯೂ ಕರ್ಮವೂ ಮಾಯಾಕಾರ್ಯವಾದ ಕಲಾದಿಯೂ ಇಂತಿದೆಲ್ಲ ಚತುರ್ವಿಧವು ಪಾಶವೆನಿಪುದು. ಆಯಾ ಪಾಶದ ಧರ್ಮವು ಅದದರ ಹೆಸರಿನಿಂದಲೆ ಹೇಳವಡೆದುದು. ೫ನೆಯ ಅಧ್ಯಾಯದ ೧೪ನೆಯ ಮಂತ್ರವಿದು :

ಭಾವಗ್ರಾಹ್ಯಮನೀಡಾಖ್ಯಂ ಭಾವಾಭಾವಕರಂ ಶಿವಂ ।
ಕಲಾಸರ್ಗಕರಂ ದೇವಂ ಯೇ ವಿದುಸ್ತೇ ಜಹುಸ್ತನುಂ ॥

ಶುದ್ಧಭಾವದಿಂದ ಗ್ರಹಿಸಲು ಯೋಗ್ಯವಾದ ನಿರ್ದೇಹಿಯಾದ ಭಾವರೂಪವಾದ ಜಗತ್ತನ್ನೂ ಆ ಜಗತ್ತನ್ನು ಹುದುಗಿಸಿ ಅಭಾವ ಅಥವಾ ಬೀಜರೂಪವಾದ ಮಾಯೆಯನ್ನೂ ಮಾಡುವ ಮತ್ತು ಕಲಾಸೃಷ್ಟಿಗೆ ಕಾರಣನಾದ ಶಿವನನ್ನು ಆರು ತಿಳಿವರೊ ಅವರು ಶರೀರದಿಂದ ಮುಕ್ತರಾದಪರು. ಶಿವಶಕ್ತಿ ಪ್ರೇರಿತವಾಗಿ ಮಾಯೆಯು ತನ್ನ ಕಾರ್ಯಗಳಾದ ಕಲಾದಿಗಳನ್ನು ಹುಟ್ಟಿಸುವುದೆಂದು ಶಿವಾಗಮಸಿದ್ಧಾಂತವು. ಈ ವಿಷಯದಲ್ಲಿ ನಾವು ಮೃಗೇಂದ್ರಾಗಮವನ್ನು ಮೇಲೆ ಉದಾಹರಿಸಿರುವೆವು.



CC-0. Jangamwadi Math Collection, Varanasi. An eGangotri Initiative

ಕಲಾದಿಸೃಷ್ಟಿಪ್ರಕಾರವನ್ನು ತತ್ವಪ್ರಕಾಶಿಕೆಯಿಂದುದಾಹರಿಸಿದ ಪ್ರಮಾಣಗಳಿಂದ ತೋರಿಸಿರುವೆವು.

೬ ನೆಯ ಅಧ್ಯಾಯದ ೨ ನೆಯ ಮಂತ್ರದಲ್ಲಿ ಶಿವನನ್ನು ಕಾಲಕಾರನೆಂದು ಹೇಳಿಯಿದೆ. ಆ ಕಾಲತತ್ವವು ಕಲಾತತ್ವಸಹಕಾರಿಯಾಗಿ ಮಾಯೆಯಿಂದಲೆ ಹುಟ್ಟುವುದೆಂದು ತತ್ವಪ್ರಕಾಶಿಕೆಯಿಂದ ಆಗಮಸಿದ್ಧಾಂತವು ತಿಳಿವುದು. ೪ ನೆಯ ಅಧ್ಯಾಯದ ೯ ನೆಯ ಮಂತ್ರದಲ್ಲಿ—'ಅಸ್ಮಾನ್ಮಾಯೀ ಸೃಜತೇ ವಿಶ್ವಮೇತತ್ತಸ್ಮಿಂಶ್ಚಾನ್ಯೋ ಮಾಯಯಾ ಸನ್ನಿರುದ್ಧಃ'ಎಂದು ಹೇಳಿದೆ. ಮಾಯೆಯನ್ನು ತನ್ನ ವಶದಲ್ಲಿಟ್ಟುಕೊಂಡ ಶಿವನು ಈ ಮಾಯೆಯಿಂದ ಈ ವಿಶ್ವವನ್ನು ಹುಟ್ಟಿಸುವನು, ಅದರಲ್ಲಿ ಇನ್ನೊಬ್ಬನು ಆ ಮೋಹಕವಾದ ಮಾಯೆಯಿಂದ ಕಟ್ಟುವಡೆದಿಹನು ಎಂದು ಹೇಳಿದೆ. ಇದು ಶಿವಾಗಮಸಿದ್ಧಾಂತದ ಸಾರವಾಗಿದೆ. ಈ ವಿಷಯದಲ್ಲಿ ಶತಸೂತ್ರರತ್ನದಲ್ಲುದಾಹರಿಸಿದ ಸ್ವಾಯಂಭುವ ಮತ್ತು ಪರಾಖ್ಯಸೂತ್ರಗಳ ಬಲದಿಂದ ತೋರುವುದು.

ಅತ್ಯಂತ ಮಲಿನಸ್ಯಾಸ್ಯ ಪ್ರಾಗುಕ್ತಸ್ಯಾವಿಕಾರಿಣಃ ।
ಕಲಾಸಂಬಂಧಮಾಯಾತಿ ಶಿವೇಚ್ಛಾನುವಿಧಾಯಿನೀ ॥ ೪೬ ॥
ಕರ್ಮಣಾ ದೇಹಸಂಯೋಗೋ ವಿಭೋರಪಿ ಮಹೇಶ್ವರಾತ್ ।
ಅಶಕ್ತತ್ವಾತ್ಸ್ವತೋನಾಸ್ಯ ಸಾಮರ್ಥ್ಯಂ ಕರ್ಮಯೋಜನೇ ॥ ೪೭ ॥
ಪಶುತ್ವರುದ್ಧಚಿಚ್ಛಕ್ತೇಸ್ಸ್ವಾತಂತ್ರ್ಯಂ ನ ಪಶೋರತಃ ।
ಕರ್ಮಚಿದ್ರಹಿತಂ ತಸ್ಮಾದ್ಯೋಜಕಂ ತದಪೇಕ್ಷತೇ ॥೪೮॥
ಯೋಜಕಸ್ಸಮಹೇಶಾನ ಸ್ವೇಚ್ಛಯಾ ಬಲವಾನ್ಯತಃ ।

ಈ ಅವಿಕಾರಿಯಾದ ಅತ್ಯಂತ ಮಲಿನನಾದ ಆತ್ಮನೊಡನೆ ಶಿವಶಕ್ತಿಗಧೀನವಾದ ಕಲಾತತ್ವವು ಸಂಬಂಧವಡೆವುದು. ವಿಭುವಾದ ಮಹೇಶ್ವರನ ದೆಶೆಯಿಂದಲೆ ಆತ್ಮನಿಗೆ ಕರ್ಮನೊಡನೆಯೂ ದೇಹದೊಡನೆಯೂ ಸಂಯೋಗವಾದಸುದು. ಮಲಾವರಣವು ಮುಸುಗಿ ಅಶಕ್ತನಾದುದರಿಂದ ಆತ್ಮನು ತಾನಾಗಿ ಕರ್ಮದೊಡನೆ ಸಂಯೋಗಹೊಂದಲು ಸಮರ್ಥನಾಗಿಲ್ಲ. ಮಲಋದ್ಧಚೈತನ್ಯನಾದಆತ್ಮನು ಸ್ವತಂತ್ರನಾಗಲಾರನು. ಕರ್ಮವು ಜಡವಾಗಿದೆ. ಆದುದರಿಂದ ತಾನಾಗಿ ಆತ್ಮನ ಬಳಿಸಾರದು. ಆದು ತನ್ನನ್ನು ಆತ್ಮನೊಡನೆ ಕೂಡಿಸಲು ಒಬ್ಬನನ್ನು ಬಯಸಿದಪುದು. ಆದುದರಿಂದ ಮಲಾವರಣವಿಲ್ಲದುದರಿಂದ ಬಲವಂತನಾದ ಮಹೇಶನೆ ಆತ್ಮಕಲಾಕರ್ಮಗಳನ್ನು ಸಂಯೋಜನಂಗೈವನು. ಮೊದಲನೆಯ ಅಧ್ಯಾಯದ ೬ನೆಯ ಮಂತ್ರದಲ್ಲಿ ಶಿವಾತ್ಮರುಗಳ ಭೇದವ ತೋರಿಸಿ ಆತ್ಮನು ಪ್ರೇರ್ಯನೆಂದೂ ಶಿವನು ಪ್ರೇರಕನೆಂದೂ ಆ ಜ್ಞಾನಬಲದಿಂದಲೆ ಅಮೃತತತ್ವವೆಂಬ ಮೋಕ್ಷವೆಂದೂ ಹೇಳಿಯದೆ. ಇದು ಶೈವಾಗಮಗಳ ಶಿವಸಮಾನತಾರೂಪ ಮುಕ್ತಿಯಲ್ಲದೆ ಬೇರಲ್ಲವೆಂದು ತೋರುವುದು.

ಸರ್ವಾ ಜೀವೇ ಸರ್ವಸಂಸ್ಥೇ ಬೃಹಂತೇ ಅಸ್ಮಿನ್ಹಂಸೋ ಭ್ರಾಮ್ಯತೇ ಬ್ರಹ್ಮಚಕ್ರೇ ।
ಪೃಥಗಾತ್ಮಾನಂ ಪ್ರೇರಿತಾರಂಚ ಮತ್ವಾ ಜುಷ್ಟಸ್ತತಸ್ತೇನಾಮೃತತ್ವಮೇತಿ ॥

ಸರ್ವಕ್ಕೆಲ್ಲ ಸ್ಥಿತಿಲಯ ಕಾರಣವಾದ ಈ ಮಹತ್ತಾದ ಬ್ರಹ್ಮಚಕ್ರದಲ್ಲಿ ಆತ್ಮನು ತಿರುಗುವನು. ಅಥವಾ ತಿರುಗಿಸಲ್ಪಡುವನು. ತನ್ನನ್ನೂ ಪ್ರೇರಕನನ್ನೂ ವಿಂಗಡಿಸಿ ತಿಳಿದು ಅದರಿಂದ ಪ್ರೀತಿಸಿ ಆ ಬಳಿಕ ಅದರಿಂದ ಅಮೃತತತ್ವವ ಹೊಂದುವನು.

ಈ ಮೊದಲು ಉದಾಹರಿಸಿದ ಅತ್ಯಂತ ಮಲಿನಸ್ಯಾಸ್ಯ ಮುಂತಾದ ಪ್ರಮಾಣಗಳಿಂದ ಆತ್ಮನು ಹೇಗೆ ಸಂಸೃತಿಯನ್ನು ಹೊಂದುವನೆಂದು ಆಗಮಗಳು ತಿಳಿಪುವು. ಇನ್ನು ಮುಕ್ತಿಯ ಸ್ವರೂಪವು ಹೇಗೆಂದರೆ– ರೌರವದಲ್ಲಿ :



SRI JAGADGURU VISHWARADHYA
JNANA SIMHASAN JNANAMANDIR
LIBRARY
Jangamawadi Math, Varanasi
Acc. No. 7896
CC-0. Jangamwadi Math Collection, Varanasi. An eGangotri Initiative

ಜಲಂಜಲೇ ಯಥಾ ಕ್ಷಿಪ್ತಂ ಕ್ಷೀರೇಕ್ಷೀರವಿವಾರ್ಪಿತಂ ।
ತದ್ವೈವ ಹ್ಯೇಕತಾಂ ಯಾತಿ ದೀಕ್ಷಾಮಂತ್ರೇಣ ಮಂತ್ರವಿತ್ ॥

ಸ್ವಯಂಭುವದಲ್ಲಿ —

ನಾದೇಯಮಿವ ಸಂಪ್ರಾಪ್ತಂ ಸಲಿಲಂ ಲವಣಾಂಭಸಿ

ಎಂದು ಹೇಳಿದಂತೆ ನೀರಲ್ಲಿ ನೀರು ಹಾಲಲ್ಲಿ ಹಾಲು ಚೆಲ್ಲಿದಂತೆ ದೀಕ್ಷಾಮಂತ್ರದಿಂದ ಆತ್ಮನು ಶಿವನೊಡನೆ ಬೆರೆವುದು. ಅಥವಾ ನದಿಯ ನೀರು ಸಮುದ್ರದ ನೀರಿನಲ್ಲಿ ಕೂಡಿದಂತೆ ಶಿವಾತ್ಮರು ಕಲೆವುದು ಮೋಕ್ಷವು. ಇದನ್ನು ಶತಸೂತ್ರ ಟೀಕಾಕರ್ತೃವಾದ ಶ್ರೀ ಚೆನ್ನವೀರೇಶನು ಒಳ್ಳೇ ಸಮಂಜಸವಾಗಿ ಶಿವಾಪೃಥಕ್ಪ್ರಕಾಶವೆನ್ನುವನು. ಈ ಮುಕ್ತಿಯೆ

ಪ್ರಥಗಾತ್ಮಾನಂ ಪ್ರೇರಿತಾರಂ ಚ ಮತ್ವಾ ಜುಷ್ಟಸ್ತತಸ್ತೇನಾಮೃತತ್ವಮೇತಿ ॥

ಎಂದು ಶ್ವೇತಾಶ್ವೇತರದಲ್ಲಿ ಹೇಳಿಯಿದೆ. ೪ನೆಯ ಅಧ್ಯಾಯದ ೭ನೆಯ ಮಂತ್ರದಲ್ಲಿ —

ಸಮಾನೇ ವೃಕ್ಷೇ ಪುರುಷೋ ನಿಮಗ್ನೋಽನೀಶಯಾ ಶೋಚತಿ ಮುಹ್ಯಮಾನಃ ।
ಜುಷ್ಟಂ ಯದಾ ಪಶ್ಯತ್ಯನ್ಯಮೀಶಮಸ್ಯ ಮಹಿಮಾನಮಿತಿ ವೀತಶೋಕಃ ॥

ಒಂದೆ ಮರದಲ್ಲಿ ಆತ್ಮನು ಮೋಹದಿಂದ ಆ ಮರದಲ್ಲಿ ಮುಳುಗಿ ಅಸ್ವತಂತ್ರತೆಯಿಂದ ದುಃಖಪಡೆವನು. ಆವಾಗ ಅದೇ ವೃಕ್ಷದಲ್ಲಿ ತನ್ನಂತೆ ದುಃಖಪಡದೆ ಸ್ವತಂತ್ರನಾದ ಈಶನನ್ನು ಕಾಂಬನೊ ಆಗ ಆ ಈಶನ ಮಹಿಮೆಯನ್ನು ಹೊಂದುವನು; ಹೊಂದಿ ಶೋಕರಹಿತನಾಗುವನು-ಎಂದು ಹೇಳಿದ ಈಶಮಹಿಮಪ್ರಾಪ್ತಿಯು ಶಿವಾಗಮಸಿದ್ಧಾಂತ ಮೋಕ್ಷವೆಂಬುವಲ್ಲಿ ಸಂಶಯವಿಲ್ಲ.

ಈ ಉಪನಿಷತ್ತಿಗೆ ಶಾಂಕರಭಾಷ್ಯವಿದೆ. ಆ ಭಾಷ್ಯದಲ್ಲಿ ಈ ಮಂತ್ರಗಳ ಅರ್ಥವು ಬೇರೆ ವಿಧವಾಗಿ ಸ್ವಸಿದ್ಧಾಂತಾನುಗುಣವಾಗುವಂತೆ ವಿವರಣವಾಗಿದೆ. ಶಿವಸಿದ್ಧಾಂತದೊಡನೆ ಹೋಲಿಸಿ ಬರೆದ ನಮ್ಮ ವಿವರಣವು ಅಹುದು ಅಲ್ಲವೊ ಎಂಬುದನ್ನು ಓದುಗರು ನೋಡಲಿ. ಹಾಗೆ ನೋಡುವಾಗ ಉಪನಿಷತ್ತುಗಳ ಮತ್ತು ಶಿವಾಗಮಂಗಳ ಪ್ರವರ್ತನದಲ್ಲಿ ಕಾಣುವ ವಿಶೇಷವನ್ನು ಲಕ್ಷ್ಯದಲ್ಲಿಡಲಿ. ಆ ವಿಶೇಷವನ್ನು ನಾವು ಮೇಲೆ ತೋರಿಸಿರುವೆವು.

ಇಂತು ಶ್ವೇತಾಶ್ವೇತರ ಉಪನಿಷತ್ತುಗಳಲ್ಲಿ ಶಿವಸಿದ್ಧಾಂತದ ಕುರುಹುಗಳು ಕಂಡುಬರುವುದರಿಂದ ಶಿವಾಗಮಂಗಳು ಅತಿ ಪ್ರಾಚೀನವಾದುವೆಂದು ನಾವು ಹೇಳುವುದು ಪಕ್ಷಪಾತವಲ್ಲೆಂದು ಸುಜ್ಞರ ಅರಿಕೆಯಾಗದಿರದು. ಶಿವಾಗಮಂಗಳು ವಿಧಿಸಿದ ಈ ಪರಿಯನ್ನು ನೆನಪಿಡಲು ಶಿವನು ತನ್ನ ಮುಕ್ತಿಪ್ರದವಾದ ಜ್ಞಾನವನ್ನು ತನ್ನಿಂದ ಅನುಗ್ರಹಿಸಲ್ಪಡುವ ಪಶುಸಂಘಕ್ಕೆ ಉಂಟುಮಾಡುವ ಅನುಗ್ರಹವೆ ಆಗಮಗಳ ಮೂಲವೆಂದು ತಿಳಿವುದು. ಅನುಗ್ರಹದಿಂದ ಆತ್ಮನ ಜ್ಞಾನಶಕ್ತಿಯು ಮಲವನ್ನು ನೀಗಲು, ತೋರಿದ ನಿರ್ಮಲಜ್ಞಾನವು ನುಡಿಗೆ ಬರಲು ಅದುವೆ ಆಗಮವು. ಹೀಗಾಗಲು ಅನುಗ್ರಹೀತಾತ್ಮನು ಆವ ನುಡಿಯಲ್ಲಿ ಹೇಳಿದರು ಆ ಶಬ್ದಪ್ರಮಾಣವು ಆಗಮವೆನ್ನಲೇಬೇಕು. ಶ್ರೀಮದ್ಬಸವಾದಿಪ್ರಮಥರ ವಚನಸಿದ್ಧಾಂತವನ್ನು ಬಗೆಗೊಟ್ಟು ನೋಡಿದರೆ ಆ ವಚನಗಳು ಕಾಮಿಕಾದ್ಯಾಗಮಗಳ ಜ್ಞಾನಕಾಂಡವನ್ನೆ ಮುಂದುವರಿಸುತ್ತ ಸಮಗ್ರತೆಯನ್ನುಂಟುಮಾಡಿವೆ ಎಂದು ಕಾಣುವೆವು. ಸೂಕ್ಷ್ಮಾಗಮ-ವಾತುಲಾಗಮಗಳಲ್ಲಿ ಲಿಂಗಾಂಗಸಾಮರಸ್ಯ ಸಿದ್ಧಾಂತದ ಅಪ್ರಗಲ್ಭರೂಪವನ್ನು ನಾವು ಕಾಣಬಹುದು. ವಾತುಲಾಗಮದ ೧೧ನೆಯ ಪಟಲದಲ್ಲಿ—



CC-0. Jangamwadi Math Collection, Varanasi. An eGangotri Initiative

ಹಸ್ತಮಸ್ತಕ ಸಂಯೋಗಾದ್ ಭೂತಿಪಟ್ಟಸ್ಯ ಧಾರಣಾತ್ ॥
ಶಿವದೇಹೀತಿ ವಿಜ್ಞೇಯಃ ಸರ್ವಪಾಪೈಃ ಪ್ರಮುಚ್ಯತೇ ॥೩೧॥
ಗುರುಣಾ ದತ್ತಲಿಙ್ಗಂ ತು ಶಿವಮನ್ತ್ರೇಣ ಧಾರಯೇತ್ ॥
ಮೂರ್ಧ್ನಿ ಕಣ್ಠೇ ಭುಜೇ ಹಸ್ತೇ ಹೃತ್‌ಸ್ಥಲೇ ನಾಭಿಮಣ್ಡಲೇ ॥೩೩॥
ಏತೇಷಾಮೇಕದೇಶೇ ತು ಧಾರಯೇಚ್ಛಿವಲಿಙ್ಗಕಮ್ ॥
ಏಕಕಾಲಂ ದ್ವಿಕಾಲಂ ವಾ ತ್ರಿಕಾಲಂ ವಾ ಸಮರ್ಚಯೇತ್ ॥೩೩॥

ಮತ್ತು

ಗುರುಲಿಙ್ಗೇ ಸದಾಭಕ್ತಿಂ ಕಾರಯೇದ್‌ಭಸಿತೇವ್ರತೀ ॥
ಸ್ವೀಕರೋತಿ ಯದಾ ಲಿಙ್ಗಂ ಗುರುಣಾ ದೀಕ್ಷಯಾಣುನಾ ॥
ತದಾಪ್ರಭೃತಿ ಲಿಙ್ಗೈಕ್ಯಮವಿನಾಭಾವಯೋಗತಃ ॥೪೯॥
ದೇಹಂ ಪ್ರಾಣೇನ ಸಂಸ್ಥಾಪ್ಯ ಪ್ರಾಣಂ ಲಿಙ್ಗೇನ ನಿಕ್ಷಿಪೇತ್ ॥
ಪ್ರಾಣೇನ ನಿಕ್ಷಿಪೇಲ್ಲಿಙ್ಗಂ ಪೃಥಗ್ಭಾವಂ ನ ಕಾರಯೇತ್ ॥೫೦॥
ವೀರಶೈವಕ್ರಮಃ ಪ್ರೋಕ್ತಃ ಪ್ರಾಯಶ್ಚಿತವಿವರ್ಜಿತಃ ॥

ಎಂಬೀ ಶ್ಲೋಕಗಳನ್ನು ನೋಡಿರಿ.

ವೀರಶೈವ ಧರ್ಮ ತಾತ್ವಿಕದ ಅಲ್ಪವಿವರಣವನ್ನು ಮುಂದೆ ಮಾಡುವೆವು. ಪ್ರಮಾಣ ವಿಷಯವು ಇಲ್ಲಿ ಮುಗಿಯಲಿ.

## ಉಪಾಸ್ಯವಿಚಾರವು

ಪ್ರಮಾಣವಿಚಾರದಲ್ಲಿ ಉಪಾಸ್ಯವಿಚಾರವು ಬಹುಶಃ ಆಗಿದೆ. ಆದರೂ ಅಲ್ಲಿ ಪ್ರಸಂಗ ವಶದಿಂದ ಬಂದುದನ್ನು ಈಗ ಮುಖ್ಯವಾಗಿ ವಿಚಾರಿಸುವಣ. ಉಪಾಸನವೆಂದರೆ ಒಂದು ಪದಾರ್ಥ ಕ್ಕಾಗಿ ಎಡೆಬಿಡದೆ ಪ್ರಯತ್ನಿಸುವುದು. ಸರ್ವಧರ್ಮಗಳಿಗೂ ಮನುಷ್ಯನು ತನ್ನ ಗೂಢವಾದ ಒಂದು ಸ್ವರೂಪವನ್ನು ಹುಡುಕಿ ಆ ಸ್ವರೂಪದಲ್ಲಿ ಮಗ್ನನಾಗಬೇಕೆಂಬ ಹವಣಿಕೆಯೆ ಮೂಲವು. ಇಂತಹ ಎಡೆಬಿಡದ ಹವಣಿಕೆಗೆ ಉಪಾಸನವೆನ್ನುವರು. ಉಪಾಸನ ಶಬ್ದವು 'ಆಸು ಕ್ಷೇಪೇ' ಎಂಬ ಧಾತು ವಿನ ಹಿಂದೆಯಾಗಲಿ 'ಆಸ ಉಪದೇಶನೆ' ಎಂಬ ಧಾತುವಿನ ಹಿಂದೆಯಾಗಲಿ 'ಉಪ' ಎಂಬ ಉಪ ಸರ್ಗವು ಸೇರಿ ಆಗಿದೆ. ಅದಕ್ಕೆ 'ಟಾಪ್' ಎಂಬ ಸ್ತ್ರೀಲಿಂಗ ಪ್ರತ್ಯಯದ ಆ ಕಾರವು ಸೇರಿ ಉಪಾ ಸನಾ ಎಂಬ ರೂಪವಾದಪುದು. 'ಅಸು ಕ್ಷೇಪೆ' ಎಂಬ ಧಾತುವಿದ್ದಾಗ ಉಪಾಸನ ಶಬ್ದಕ್ಕೆ ಅಭ್ಯಾಸ ವೆಂಬ ಅರ್ಥವಾದಪುದು. ಅಭ್ಯಾಸವೆಂದರೆ ಹವಣಿಕೆಯು. ಇನ್ನು ಉಪವೇಶನೆ ಅನ್ನುವ ಧಾತು ವಿದ್ದಾಗ ಸಮೀಪದಲ್ಲಿ ಅಥವಾ ಒಂದು ವಸ್ತುವನ್ನು ಕುರಿತು ಎಡೆಬಿಡದೆ ಕುಳಿತಿರುವಣ ಎಂಬ ಅರ್ಥವಾದಪುದು.

ಇದರಲ್ಲಿಯೂ ಹವಣಿಕೆಯ ಅರ್ಥವು ಬಂದೆ ಬಂದಪುದು. ಧ್ಯೇಯವಾದ ವಸ್ತುವನ್ನು ಹವಣಿಸುವಲ್ಲಿ ಪೂಜ್ಯಭಾವವು ಬೇಕು. ಆದುದರಿಂದ 'ಉಪಾಸನಾ'ಶಬ್ದಕ್ಕೆ ಪೂಜೆ, ಶುಶ್ರೂಷೆ ಎಂಬ ಅರ್ಥವು ಬರುತ್ತಿದೆ. ಶಿವಾಗಮಂಗಳು ಉಪಾಸಿಸುವ ವಸ್ತುವು ಶಿವನು.

ವರಂ ಪ್ರಾಣಪರಿತ್ಯಾಗಶ್ಛೇದನಂ ಶಿರಸೋಪಿವಾ ।
ನತ್ವನಭ್ಯರ್ಚ್ಯ ಭುಂಜೀಯಾದ್ ಭಗವಂತಂ ತ್ರಿಲೋಚನಂ ॥
(ಕಾಮಿಕಾಗಮ ಶಿವಾರ್ಚನಾ ವಿಧಿಪಟಲ)

ಪ್ರಾಣವನ್ನು ಬಿಡುವುದೊಳ್ಳಿತು. ತಲೆಗಡಿದು ಹೋವುದೊಳ್ಳಿತು. ಆದರೆ ಸಮಗ್ರೈಶ್ವರ್ಯ



CC-0. Jangamwadi Math Collection, Varanasi. An eGangotri Initiative

ಸಂಪನ್ನನಾದ ತ್ರಿಲೋಚನನನ್ನು ಪೂಜಿಸದೆ ಉಣಗೊಂಬುದು ಉಚಿತವಲ್ಲ. ವೇದವು ಇಂದ್ರಾದಿ ಹಲವು ದೇವತೆಗಳನ್ನೂ ಆತ್ಮನನ್ನೂ ಉಪಾಸಿಪುದು. ಇನ್ನುಳಿದ ಹಲವು ಧರ್ಮಗಳು ತಮತಮ ಗಭಿಷ್ಟವಾದ ದೇವತೆಗಳನ್ನು ಉಪಾಸಿಸಿದಪುವು.

## ತತ್ವವಿಚಾರವು

ಶಿವಾಗಮಂಗಳನ್ನು ಕುರಿತು ಬರೆವಾಗ ೩೬ ತತ್ವಂಗಳನು ನೋಡಿದೆವು. ಈ ೩೬ ತತ್ವಂಗಳಲ್ಲಿ ವಿಶ್ವವೆಲ್ಲ ಅಡಕವಾಗಿಹುದು. ಇವುಗಳನ್ನು ಶೈವರು ಆರು ವರ್ಗಗಳೆಂದು ಹಂಚುವರು. ಈ ವರ್ಗಗಳಿಗೆ ಅಧ್ವವೆನ್ನುವರು. ಅಧ್ವವೆಂದರೆ ಮಾರ್ಗವು. ಜೀವನು ಈ ಪ್ರಪಂಚದಲ್ಲಿ ಈ ಆರು ಮಾರ್ಗಗಳಿಂದ ಪರತತ್ವವನ್ನು ಹೊಂದುವನು. ಅದರಿಂದ ಇವುಗಳಿಗೆ ಅಧ್ವವೆಂಬ ಹೆಸರುಂಟಾಯಿತು.

ತತ್ವೈಕಮೇಕಂ ಸಂಪ್ರಾಪ್ಯ ಕಲಾದಿಷ್ವಜರಾಮರಂ
ಪದಮಾಸಾದ್ಯತೇ ಪುಂಭಿರತೋ ಧ್ವಾನಃ ಕಲಾದಯಃ
(ಶ್ರೀಮದಘೋರ ಶಿವಾಚಾರ್ಯ ಕೃತ ರತ್ನತ್ರಯಕಾರಿಕಾ ೮೮)

ಲೋಕದಲ್ಲಿ ಮಾರ್ಗಗಳಲ್ಲಿ ಒಂದು ಅಡಿಯಿಂದ ಹಿಡಿದ ನೆಲವನ್ನು ಬಿಟ್ಟು ಮತ್ತೊಂದು ಅಡಿಯಿಂದ ಹಿಡಿದ ಭೂಪ್ರದೇಶವನ್ನು ಹೊಂದುತ್ತ ಮನುಷ್ಯನು ಹೇಗೆ ತನಗೆ ಬೇಕಾದ ಗ್ರಾಮ ವನ್ನು ತಲುಪುವನೊ ಅದರಂತೆಯೆ ಕಲೆಗಳಲ್ಲಾಗಲಿ, ತತ್ವಗಳಲ್ಲಾಗಲಿ, ಭುವನಗಳಲ್ಲಾಗಲಿ, ವರ್ಣಗಳಲ್ಲಾಗಲಿ, ಪದಗಳಲ್ಲಾಗಲಿ, ಮಂತ್ರಗಳಲ್ಲಾಗಲಿ ಅಶುದ್ಧವಿಷಯಂಗಳಲ್ಲಿ ಕರ್ಮ ಭೋಗಕ್ಕಾಗಿಯೂ ಶುದ್ಧವಿಷಯಂಗಳಲ್ಲಿ ದೀಕ್ಷೆಯಿಂದ ಸರ್ವಜ್ಞತ್ವಾದಿ ಪ್ರಾಪ್ತಿಗೋಸುಗ ವಿಶಿಷ್ಟ ಸಂಬಂಧವು ಆಗುತ್ತದೆ. ಆದುದರಿಂದ ಕಲಾದಿಗಳು ಅಧ್ವವೆನಿಸುತ್ತವೆ. ಅಂದರೆ ಆತ್ಮನು ಮಲಸಹಿತನಾದಾಗ ಕಲಾಕಾಲಾದಿ ತತ್ವಗಳಿಂದ ಕೂಡಿ ಈ ತತ್ವಗಳನ್ನು ಅನುಭವಿ ಸುತ್ತ ಸಂಸಾರಿಯಾದಪನು. ಈ ಕಲಾದಿಗಳ ಸ್ವರೂಪವನ್ನು ಮೇಲೆ ಹೇಳಿರುತ್ತೇವೆ. ಸ್ವಾಭಾ ವಿಕವಾದ ಸ್ಥಿತಿಯಲ್ಲಿ ಈ ಕಲಾದಿಗಳು ಆತ್ಮನನ್ನು ಅವನ ಮೂಲ ಅಜ್ಞಾನವೆಂಬ ಮಲದ ದೆಶೆ ಯಿಂದ ಬಂಧಿಸುವುವಾಗಿ ಅಶುದ್ಧ ವಿಷಯಗಳೆನಿಪುವು. ಆ ಸ್ಥಿತಿಯಲ್ಲಿ ಶಿವಶಕ್ತಿಯು ಮಲ ಮಾಯಾಕರ್ಮಗಳನ್ನು ಆತ್ಮಬಂಧನವೆಂಬ ತನ್ನ ಪಾಶಕಾರ್ಯದಲ್ಲಿ ಅನುಗ್ರಹಿಸುವುದರಿಂದ ಆ ಶಕ್ತಿಯು ತಿರೋಧಾನ ಪಾಶವೆನಿಪುದು.

ಪಾಶಾನುಗ್ರಾಹಿತ್ವಾತ್ ಪುರುಷ ತಿರೋಧಾಯಿಕಾ ವಿಭೋಃ ಶಕ್ತಿಃ।
ಪಾಶತ್ವೇನಾಭಿಹಿತಾ ಕಥಿತಾಃ ಪಾಶಾಶ್ಚತುರ್ವಿಧಾಸ್ತ್ವೇವಮ್ ॥೨೦॥ ತತ್ವಪ್ರಕಾಶಿಕಾ ಶ್ಲೋ॥ ತಾಸಾಂ ಮಾಹೇಶ್ವರೀ ಶಕ್ತಿಸ್ಸರ್ವಾನುಗ್ರಾಹಿಕಾ ಶಿವಾ।
ಧರ್ಮಾನುವರ್ತನಾದೇವ ಪಾಶ ಇತ್ಯುಪಚರ್ಯತೇ ॥೩॥ ಮೃಗೇಂದ್ರಾಗಮ

ಅಂದರೆ ಶಿವಶಕ್ತಿಯು ಸ್ವತಃ ಪಾಶವಲ್ಲ. ಸರ್ವಾನುಗ್ರಹಸ್ವರೂಪಿಣಿಯಾದುದರಿಂದ ಮಲಮಾಯಾಕರ್ಮಗಳನ್ನು ಅನುಗ್ರಹಿಸುವಾಗ ಉಪಚಾರದಿಂದ ತಿರೋಧಾನ ಅಂದರೆ ಆತ್ಮನ ಸ್ವರೂಪವನ್ನು ಅಡಗಿಸುವ ಪಾಶವೆನಿಪುದು. ಮುಂದೆ ಆತ್ಮನು ಪುಣ್ಯವಿಶೇಷದಿಂದ ಶಿವಪ್ರಸಾದ ವಾಗಲು ಆ ಶಕ್ತಿಯು ಆತ್ಮನನ್ನು ಅನುಗ್ರಹಿಸುವಾಕೆಯಾಗಿ ದೀಕ್ಷಾ ಅಥವಾ ಅನುಗ್ರಹಶಕ್ತಿ ಎನಿಸುವಳು. ಆಗ ಈ ತತ್ವತಾತ್ವಿಕಗಳೆ ಪರಿಶುದ್ಧಂಗಳಾಗಿ ಮೋಕ್ಷಹೇತುವಪ್ಪುವು. ಅಂದರೆ ವಿಷಯಾಸಕ್ತನಾದವನಿಗೆ ಮಲ್ಲಿಗೆಹೂವು ತನ್ನ ವೇಶ್ಯೆಯ ತುರುಬಿಗೆ ಮುಡಿಯಲ್ತಕ್ಕುದಾಗಿ



CC-0. Jangamwadi Math Collection, Varanasi. An eGangotri Initiative

ಅಶುದ್ಧ ವಿಷಯವೆನಿಸಿ ಅಂತಃಕರಣದ ಮಾಲಿನ್ಯವನ್ನು ಬೆಳೆಯಿಸುತ್ತ ಬಂಧಹೇತುವಾಯಿತು. ಅದುವೆ ಭಕ್ತನಿಗೆ ಲಿಂಗಪೂಜಾನಿಮಿತ್ತವಾಗಿ ಶುದ್ಧವಿಷಯವೆನಿಸಿ ಮೋಕ್ಷಕಾರವಪ್ಪುದು. ಈ ಸ್ಥಿತಿಯಲ್ಲಿ ಆತ್ಮನು ಒಂದೊಂದು ತತ್ವದಲ್ಲಿ ಮುಕ್ತಿಮಾರ್ಗದಿಂದ ಸಂಚರಿಸಿ ಪರಶಿವಪದವನ್ನು ಮುಟ್ಟುವುದರಿಂದ ಈ ಆರು ವರ್ಣಾಧ್ವಾದಿಗಳು ಅಧ್ವವೆನಿಸಿಮುವು. ಈ ಆರು ಅಧ್ವಗಳನ್ನು ಮತ್ತೊಮ್ಮೆ ನೋಡಲು ಅವು ಎರಡುತೆರನಾಗಿ ಭಾಗವಡೆದಪುವು. ನಮ್ಮ ಅನುಭವವನ್ನು ಪರೀಕ್ಷಿಸಿದರೆ ಅದನ್ನೆಲ್ಲ ಬುದ್ಧಿಮಯವಾದ ಅರಿತವೂ ಆ ಅರಿತದ ವಿಷಯವೂ ಎಂದು ಹೇಳ ಬಹುದು. ಈ ಅರಿತವನ್ನು ಬಿಟ್ಟು ವಿಷಯವಿಲ್ಲ. ವಿಷಯವನ್ನು ಬಿಟ್ಟು ಅರಿತವಿಲ್ಲ. ಒಂದೊಂದು ಬುದ್ಧಿಯ ಅರಿತಕ್ಕೆ ಮತ್ತದರ ವಿಷಯಕ್ಕೆ ಒಂದೊಂದು ಹೆಸರುಂಟು. ಆದುದರಿಂದ ಈ ಷಡ ಧ್ವಗಳು ಶಬ್ದಮಯವಾಗಿ ಆಗಲಿ ಅರ್ಥಮಯವಾಗಿ ಆಗಲಿ ರಾಶಿಯಾದವುವು. ವರ್ಣ, ಮಂತ್ರ, ಪದವೆಂಬುವೆ ೩ ಶಬ್ದಮಯವಾದ ಅಧ್ವಗಳು. ಕಲಾ, ತತ್ವ, ಭುವನವೆಂಬುವೆ ಅರ್ಥ ಮಯವಾದ ಅಧ್ವಗಳು. ಇಂತೀ ಆರು ಅಧ್ವಗಳಿಗೆ ವರ್ಣಾಧ್ವ, ಮಂತ್ರಾಧ್ವ, ಪದಾಧ್ವ ವೆಂದೂ, ಕಲಾಧ್ವ, ತತ್ವಾಧ್ವ, ಭುವನಾಧ್ವವೆಂದೂ ಶೈವಶಾಸ್ತ್ರದಲ್ಲಿ ಸಂಜ್ಞೆಯುಂಟು. ಅಕಾ ರಾದಿ ಕ್ಷಕಾರಾಂತವಾದ ೫೧ ಮಾತೃಕೆಗಳೆ ವರ್ಣಾಧ್ವವು. ಶಿವಾಯನಮಃ ಎಂಬು ಮೊದ ಲಾದ ೮೧ ಪದಾಧ್ವವು. ಹೃದಯಾಯ ನಮಃ ಎಂಬ ೧೧ ಮಂತ್ರಾಧ್ವವು. ಮಾತೃಕೆಗಳಲ್ಲಿ ಸರ್ವ ಶಾಸ್ತ್ರಗಳ ಸಮಾವೇಶವಾದಪುದು. ನಿವೃತ್ತಿ, ಪ್ರತಿಷ್ಠಾ, ವಿದ್ಯಾ, ಶಾಂತಿ, ಶಾಂತ್ಯತೀತೆ ಎಂಬ ೫ ಕಲಾಧ್ವವು. ಪೃಥ್ವ್ಯಾದಿ ಶಿವಾಂತವಾದ ೩೬ ತತ್ವಾಧ್ವವು. ಕಾಲಾಗ್ನಿ ಮೊದಲಾದ ಅನೇಕ ಭುವನಂಗಳೆ ಭುವನಾಧ್ವವು. ಈ ೬ ಅಧ್ವಗಳಿಗೆ ಬಿಂದುವು ಆಧಾರವಾಗಿದೆ. ಅಂದರೆ ಭುವನಾ ಧ್ವಕ್ಕೆ ತತ್ವಾಧ್ವವೂ ತತ್ವಾಧ್ವಕ್ಕೆ ಕಲಾಧ್ವವೂ ಒಂದಕ್ಕೊಂದು ಆಧಾರವಾಗಿವೆ. ಮಂತ್ರಾಧ್ವಕ್ಕೆ ಪದಾಧ್ವವೂ ಪದಾಧ್ವಕ್ಕೆ ವರ್ಣಾಧ್ವವೂ ಕಾರಣವಾಗಿವೆ. ಅಂದರೆ ಈ ಬಿಂದುವೆಂಬ ವಸ್ತುವಿ ನಿಂದ ಶಬ್ದಾರ್ಥರೂಪವಾದ ಪ್ರಪಂಚವು ಹೊರಟು ಆ ಬಿಂದುವಿನಲ್ಲಿಯೆ ಅಡಗಿದಪುದು. ಆ ಬಿಂದುವು ನಿರ್ವಿಕಲ್ಪಕ, ಜ್ಞಾನೋಪೇತನಾದ ಪರಶಿವನು ಅಶರೀರಕರ್ತೃವಾಗಿರುವನು. ಆ ಬಿಂದುವು ಪರಶಿವಶಕ್ತಿಯ ಪ್ರಥಮಕಾರ್ಯವಾಗಿಹುದರಿಂದ ಅದರಲ್ಲಿ ಪರಿಪೂರ್ಣಪರಂಜ್ಯೋತಿ ಸ್ವರೂಪವು ಮಾರ್ಪೊಳೆವುದು. ಇನ್ನು ಹೆಚ್ಚಿನ ವಿಶೇಷವನ್ನು ಶಿವಾಗಮ ಗ್ರಂಥಗಳಿಂದ ಅರಿಯ ಬಹುದು. ಇಂತು ಶೈವ ದರ್ಶನವನ್ನು ಸಂಕ್ಷೇಪವಾಗಿ ವಿವರಿಸಿ ಆ ಶೈವದ ಉತ್ತರಭಾಗವಾದ ವೀರಶೈವದತ್ತ ಹೊರಳುವಾ.

### ಈ ವೀರಶೈವವು ಶೈವದ ಫಲವಾಗಿದೆ

ಭಕ್ತಿಯ ಅತ್ಯಂತ ಪರಿಪಾಕವಾಗಿದೆ. ಆದುದರಿಂದಲೆ ವೀರಶೈವ ಶಿರೋಮಣಿಕಾರನು ಉದಾಹ ರಿಸಿದ ಯೋಗಜಾಗಮವು :

ಅನಾದಿಭಕ್ತರೂಪೇಣ ಭಗವಾನ್ ಪರಮಶ್ಶಿವಃ<br>
ಪಂಚಾಚಾರಾಂಶ್ಚ ಷಡ್ರೂಪಾಣ್ಯಷ್ಟಾವಾವರಣಾನಿ ಚ<br>
ಲಿಂಗಾಂಗಸಾಮರಸ್ಯಂ ಚ ಮುಕ್ತಿಮಾಹ ಜಗದ್ಗುರುಃ

ಷಡ್ಗುಣೈಶ್ವರ್ಯ ಸಂಪನ್ನನಾದ ಪರಶಿವನು ಅನಾದಿ ಭಕ್ತಸ್ವರೂಪದಿಂದ ಪಂಚಾಚಾರಗಳನ್ನೂ ಆರು ರೂಪುಗಳನ್ನೂ ಎಂಟು ಆವರಣಗಳನ್ನೂ ಲಿಂಗಾಂಗಸಾಮರಸ್ಯವನ್ನೂ ಇಂತೆಂಬ ಮುಕ್ತಿ ಮಾರ್ಗವನ್ನು ಉಪದೇಶಿಸಿದನು ಎಂದು ಹೇಳಿದೆ.



CC-0. Jangamwadi Math Collection, Varanasi. An eGangotri Initiative

ಆಗಮುಗಳಲ್ಲಿ ಈ ಅನಾದಿಭಕ್ತನ ಲಕ್ಷಣವು ಹೇಳಲ್ಪಟ್ಟ ವಿವರವಿದು. ಶಿವತತ್ವರತ್ನಾಕರ ೧ನೆಯ ಕಲ್ಲೋಲ ೩ನೆಯ ತರಂಗದಿಂದ ನಾವು ಈ ವಿಷಯವನ್ನು ಎತ್ತುವೆವು.

ಅದಾವನಾದಿಭಕ್ತಸ್ಯ ಲಕ್ಷಣಂ ವಕ್ಷ್ಯೇತೇ ಕ್ರಮಾತ್ ॥೯॥
ಯದಸ್ತಿ ತತ್ಪರಂ ಬ್ರಹ್ಮ ತದನಾದಿ ಭಜೇದ್ ಯತಃ
ತಸ್ಮಾದನಾದಿಭಕ್ತೋಽಯಮಿತ್ಯುಕ್ತಸ್ತತ್ವವೇದಿಭಿಃ ॥೧೦॥

ಮೊದಲು ನಿನಗೆ ಅನಾದಿ ಭಕ್ತನ ಲಕ್ಷಣವನ್ನು ಪರಿವಿಡಿಯಿಂದ ಹೇಳುವೆನು. ಆವುದೊಂದು ಪರಬ್ರಹ್ಮವೆಂಬ ಅನಾದಿ ತತ್ವವುಂಟೊ ಆ ಅನಾದಿ ತತ್ವವನ್ನು ಹೊಂದುವುದರಿಂದ ಇವನು ಅನಾದಿ ಭಕ್ತನೆಂದು ತತ್ವವನು ಬಲ್ಲವರಿಂದ ಹೇಳಪಡೆದನು.

ಲಿಂಗಂ ಜಂಗಮ ಆದಿಃ ಸ್ಯಾತ್ ಭಕ್ತಶ್ಚಾನಾದಿರೂಪಕಃ
ಅಂಗಂ ಲಿಂಗಮಿತಿ ಪ್ರೋಕ್ತಂ ಪ್ರಾಣೋ ಜಂಗಮ ಉಚ್ಯತೇ ॥೧೨॥
ಲಿಂಗಜಂಗಮಯೋರೈಕ್ಯಸ್ವರೂಪೋ ಭಕ್ತ ಉಚ್ಯತೇ
ಜಂಗಮೋ ಲಿಂಗರೂಪಃಸ್ಯಾಲ್ಲಿಂಗಂ ಜಂಗಮರೂಪಕಂ ॥೧೩॥
ಲಿಂಗಜಂಗಮ ಸಂಯೋಗೋಽನಾದಿಭಕ್ತಸ್ಯ ಲಕ್ಷಣಂ
ಲಿಂಗಜಂಗಮಭಕ್ತಾಶ್ಚ ತ್ರಯಸ್ತ್ವೇಕಸ್ವರೂಪಕಾಃ ॥೧೪॥
ದೇಹಃ ಪ್ರಾಣಾಸ್ತಥಾತ್ಮಾ ಚೇತ್ಯಾಗಮಾನ್ವಯ ನಿರ್ಣಯಃ

ಲಿಂಗವು ಜಂಗಮವು ಆದಿ ಎನಿಸಿತು. ಅನಾದಿರೂಪನು ಭಕ್ತನು. ಆ ಭಕ್ತನ ಅಂಗವೆ ಲಿಂಗನು. ಅವನ ಪ್ರಾಣವೆ ಜಂಗಮವು. ಲಿಂಗ-ಜಂಗಮ-ತತ್ವಗಳ ಐಕ್ಯವೆ ಭಕ್ತನು. ಜಂಗಮವು ಲಿಂಗ ರೂಪವಾಗಿದೆ. ಲಿಂಗವು ಜಂಗಮರೂಪವಾಗಿದೆ. ಲಿಂಗ ಜಂಗಮಗಳ ಸಂಯೋಗವು ಅನಾದಿ ಭಕ್ತನ ಲಕ್ಷಣವಾಗಿದೆ. ಲಿಂಗ, ಜಂಗಮ, ಭಕ್ತರೆಂಬ ತ್ರಿಪದಾರ್ಥಗಳು ಒಂದೆ ಸ್ವರೂಪವಾಗಿವೆ. ದೇಹವು, ಪ್ರಾಣವು, ಆತ್ಮವು ಹೇಗೋ ಹಾಗೆ ಈ ಮೂರೆಂಬುದು ಆಗಮತಾತ್ಪರ್ಯ ನಿರ್ಣಯ ವಾಗಿದೆ.

ಭಕ್ತನಿಗೆ ಆದಿ ಇಲ್ಲ. ಲಿಂಗ ಜಂಗಮಕ್ಕೆ ಆದಿಯುಂಟು ಎಂಬುದರ ಅರ್ಥವೇನು? ಲಿಂಗವೆಂಬ ಪರಮಾತ್ಮನು ಭಕ್ತಿಯ ಮಹಿಮೆಯಿಂದಲ್ಲದೆ ತೋರನು. ಆ ಭಕ್ತಿಗೆ ಭಕ್ತನ ಸ್ವವಿಮರ್ಶವೆ ಮೊದಲು. ಸ್ವವಿಮರ್ಶವೆಂದರೆ ತನ್ನ ಭಾನವು. ದೇಹಾದಿ ಕೋಶಗಳಿಂದಾವರಿಸಿದ ಅಜ್ಞಾನವನ್ನು ದಾಂಟಿ ತನ್ನ ಭಾನವು ತೋರಿದಲ್ಲದೆ ತನ್ನಲ್ಲಿ ಒಡಗೂಡಿದ ಭಕ್ತಿಯು ತೋರ ಲಾರದು. ಈ ಭಕ್ತಿಯಿಂದಲೆ ಲಿಂಗವು ತೋರುವುದು. ಅದರಿಂದ ಲಿಂಗಕ್ಕೆ ಭಕ್ತನ ಭಾನವೆ ಆದಿಯು. ಆ ಭಕ್ತನು ಮತ್ತೊಂದು ಭಾನವನ್ನು ಅಪೇಕ್ಷಿಸಿದುದರಿಂದ ಅನಾದಿಯು ಆತ್ಮನ ಒಳದಿರುಳು ಲಿಂಗವಾಗಿದೆ. ಶ್ರೀಮದಲ್ಲಮ ಪ್ರಭುವಿನ ಈ ವಚನವು ಇಲ್ಲಿ ಸಾಕ್ಷಿಯಾಗಿದೆ —

ಆದಿಯಾಧಾರವಿಲ್ಲದಂದು। ಹಮ್ಮು ಬಿಮ್ಮುಗಳಿಲ್ಲದಂದು। ಸುರಾಳನಿರಾಳವಿಲ್ಲದಂದು। ಸಚರಾಚರವೆಲ್ಲ ರಚನೆಗೆ ಬಾರದಂದು। ಗುಹೇಶ್ವರಾ ನಿಮ್ಮ ಶರಣನುದಯಿಸಿದನಂದು.

ಪ್ರ. ದೇ. ವ. ೫ (ಪಿಂಡ ಜ್ಞಾನ ಸ್ಥಲ)

ನಾದಬಿಂದುಗಳಿಲ್ಲದಂದು, ನಿರ್ಭಯನೆಂಬ ಗಣೇಶ್ವರನು। ಉತ್ಪತ್ತಿ ಸ್ಥಿತಿ ಲಯವಿಲ್ಲದಂದು, ಅಕ್ಷಯನೆಂಬ ಗಣೇಶ್ವರನು। ಓದು ವೇದಂಗಳಿಲ್ಲದಂದು ಓಂಕಾರನೆಂಬ ಗಣೇಶ್ವರನು। ಯುಗ ಜುಗವಿಲ್ಲ ದಂದು, ಊರ್ಧ್ವಮುಖನೆಂಬ ಗಣೇಶ್ವರನು। ಗುಹೇಶ್ವರನೆಂಬ ಲಿಂಗವಿಲ್ಲದಂದು ನಿರ್ಮಾಯನೆಂಬ ಗಣೇಶ್ವರನು।

ಪ್ರ. ದೇ. ವ. ೬ (ಪಿಂಡ ಜ್ಞಾನ ಸ್ಥಲ)



CC-0. Jangamwadi Math Collection, Varanasi. An eGangotri Initiative

ಇಲ್ಲಿ ಒಂದು ಕ್ಷಣ ನಾವು ವಿಚಾರಮುಖರಾಗುವಣ. ಅನಾದಿ ಭಕ್ತನು ಈ ವೀರಶೈವವನ್ನು ಪ್ರಕಟಿಸಿದನೆಂದು ಹೇಳುವ ಅರ್ಥವೇನು? ಈ ಧರ್ಮವು ವೈದಿಕ ವಿಧಿವಾಕ್ಯಗಳಿಂದ ಹೇಳಪಡೆದುದಲ್ಲ. ಆದರೆ ಶಿವನಲ್ಲಿ ತನ್ನನ್ನು ಸಮರಸೀಕರಿಸದ (ಭಜೇದ್ಯತಃ) ಭಕ್ತನು ಆಚರಿಸಿದ ಆಚರಣದಿಂದಲೆ ಈ ಧರ್ಮ ಪ್ರಕಟವಾಯಿತ್ತೆಂಬರ್ಥ. ಅದರಿಂದಲೆ 'ಪಂಚಾಚಾರಾನ್ ಆಹ' ಎಂದು ಯೋಗಜಾಗಮ ವಾಕ್ಯವಿದೆ. ವೀರಶೈವ ಶಾಸ್ತ್ರಗಳಲ್ಲಿ ಈ ಅನಾದಿ ಭಕ್ತನೆಂದರೆ ಶ್ರೀಬಸವೇಶನೆಂದು ಪ್ರಸಿದ್ಧಿಯಿದೆ.

ಗುರುರೂಪಂ ಲಿಂಗರೂಪಂ ಪರತರಚರರೂಪಂ ಪ್ರಸಾದಸ್ವರೂಪಂ ।
ಹರಪಾದಾಂಭಃಸ್ವರೂಪಂ ಭಸಿತಲಸಿತರೂಪಂ ಸುರುದ್ರಾಕ್ಷರೂಪಂ ॥
ವರಷಡ್ವರ್ಣಸ್ವರೂಪಂ ಪರಮಶಿವಮಯಾನಾದಿಭಕ್ತಸ್ವರೂಪಂ ।
ಪರಚಿಚ್ಛಕ್ತಿಸ್ವರೂಪಂ ಬಸವನಸದೃಶಾನಂದಸತ್ಯಸ್ವರೂಪಂ ॥
(ಶ್ರೀಮದ್ ವೃಷಭೇಂದ್ರವಿಜಯದ ೪೨ನೆಯ ಆಶ್ವಾಸದ ೫೩ನೆಯ ಶ್ಲೋಕ)

ಈ ಶ್ಲೋಕದಲ್ಲಿ ಚಿಚ್ಛಕ್ತಿಸ್ವರೂಪನೆಂದೂ ಅನಾದಿಭಕ್ತರೂಪನೆಂದೂ ಶ್ರೀಬಸವೇಶನನ್ನು ಹೇಳುವುದು ಲಕ್ಷಿಸತಕ್ಕುದಾಗಿದೆ. ಪರಶಿವಶಕ್ತಿಯು ಪರಶಿವನೊಡನೆ ಅವಿನಾಭಾವಸಂಬಂಧದಿಂದಿರುವಂತೆ ಅನಾದಿ ಭಕ್ತನಾದ ಬಸವನು ಅವಿನಾಭಾವಸಂಬಂಧದಿಂದ ಶಿವನೊಳು ಸಮವೇತನಾಗಿಹನೆಂಬುದು ತಾತ್ಪರ್ಯವು.

ಶಿವನಲಿ ಸಮವೇತವಾದ ಶಕ್ತಿಯು ಜ್ಞಾನ-ಕ್ರಿಯಾ-ಸ್ವರೂಪವಾಗಿಹಳು. ಪರಶಿವನಲಿ ಜ್ಞಾನವೆಂಬುದಷ್ಟೇ ಅಲ್ಲ, ಕ್ರಿಯೆಯೂ ಉಂಟು. ಜ್ಞಾನ-ಕ್ರಿಯೆಗಳು ಒಂದಕ್ಕೊಂದು ಭಿನ್ನವಾಗಿರದೆ ಒಂದೆ ಶಕ್ತಿಯ ತೋರಿಕೆಗಳಾಗಿವೆ—ಎಂಬುದೆ ವೀರಶೈವ ಸಿದ್ಧಾಂತವು. ಅಥವಾ ಶೈವ-ವೀರಶೈವಗಳಿಗೆ ಸಮ್ಮತವಾದ ಸಿದ್ಧಾಂತವು. ಅನಾದಿಭಕ್ತನು ಶಿವನಲ್ಲಿ ಸಮವೇತನಾಗಿಹನೆಂದರೆ ಅನಾದಿಭಕ್ತನ ಜ್ಞಾನ-ಕ್ರಿಯೆಗಳು ಶಿವನನ್ನು ವಿಷಯೀಕರಿಸಿ, ಶಿವನೊಳು ಬೆರೆದು, ಶಿವಶಕ್ತಿಯೊಡನೆ ಏಕಾಕಾರವಾಗಿ, ಭಕ್ತನು ಶಿವನೊಳು ಏಕಪದಾರ್ಥವಾಗಿ ಉಳಿವನೆಂಬರ್ಥ. ವೀರಶೈವಾಮೃತ ಪುರಾಣದ ಮೊದಲನೆಯ ಕಾಂಡದ ೨ನೆಯ ಸಂಧಿಯಲ್ಲಿ ಶ್ರೀ ಗುಬ್ಬಿಯ ಮಲ್ಲಣಾರ್ಯನು ಉದಾಹರಿಸಿದ ಶ್ಲೋಕವಿದು:

ದೃಗ್ದೃಶ್ಯರೂಪೇಣ ಸಲಿಂಗಭಕ್ತಂ । ತದೇಕರೂಪಂ ಪರಿಪೂರ್ಣಭಾವಂ ॥
ವಹ್ನ್ಯುಷ್ಣರೂಪಂ ಕುಸುಮಾಗ್ರಗಂಧಂ । ತದ್ರೂಪಮೇವಂ ಸುಪದಾರ್ಥರೂಪಂ ॥೮॥

ಈ ಶುಭವಾದ ಪದಾರ್ಥ (ಅಖಂಡವಸ್ತು) ರೂಪವು ದೃಗ್ದೃಶ್ಯರೂಪವಾಗಿ ಲಿಂಗಭಕ್ತಸ್ವರೂಪವಾಗಿಹುದು. ಅದು ಒಂದೆ ರೂಪವಾಗಿ ಪರಿಪೂರ್ಣವಿಹುದು. ಅದಕ್ಕೆ ಬೆಂಕಿಯ ಮತ್ತು ಶಕೆಯ ಅಥವಾ ಹೂವಿನ ಮತ್ತದರ ಕೊನೆಯ ಪರಿಮಳದ ಹೋಲು ಹೇಳಬಹುದು.

ಈ ವಿಧವಾಗಿ ಭಕ್ತಸ್ವರೂಪವಿಹುದರಿಂದ ಭಕ್ತನು ಅನಾದಿ ಭಕ್ತನೆನಿಸಿದನು. ಅವನ ಜ್ಞಾನಕ್ರಿಯೆಗಳು ಲಿಂಗಜಂಗಮವೆನಿಸಿದುವು; ಅವನ ದೇಹಪ್ರಾಣಗಳೆನಿಸಿದುವು. ಅದೆಂತೆಂದರೆ— ಆತ್ಮನ ಕ್ರಿಯೆಯು ಶರೀರದಲ್ಲಿಯೂ ಜ್ಞಾನವು ಪ್ರಾಣದಲ್ಲಿಯೂ ವ್ಯಕ್ತವಾಗಿಹವು. ಇಲ್ಲೊಂದು ಆಕ್ಷೇಪವು ತೋರಬಹುದು. ಪ್ರಾಣದಲ್ಲಿ ಆತ್ಮನ ಜ್ಞಾನವು ತೋರುವುದೆಂದು ಅನುಭವವಿಲ್ಲ. ಅದು ಬುದ್ಧಿಯಲ್ಲಿ ತೋರಿದಪುದು; ಮನದಲ್ಲಿ ತೋರಿದಪುದು. ಇಂತಿರಲು ಪ್ರಾಣದಲ್ಲಿ ಜ್ಞಾನವು ತೋರುವುದೆಂದು ಹೇಳುವ ಬಗೆಯೆಂತು ಆಹುದು? ಪ್ರಾಣವ್ಯಾಪಾರವಿಲ್ಲದೆ ಬೆಳಗೆಯಿಲ್ಲ; ಜೀವನ



CC-0. Jangamwadi Math Collection, Varanasi. An eGangotri Initiative

ವಿಲ್ಲ. ಸಸ್ಯಾದಿಗಳು ಪ್ರಾಣಿಸುತ್ತಲೆ ಬದುಕುವುವು. ಬದುಕುವಲ್ಲಿ ಅರುವು ಇರಬೇಕು. ಅರುವಿಲ್ಲದ ಹೆಣವು ಬದುಕದು. ಆದುದರಿಂದ ಪ್ರಾಣದಲ್ಲಿ ಅರುವಿದೆ. ಪ್ರಾಣವಿರುತ್ತಲೆ ದೇಹವು ಸಚೇತನವಿದೆ.

ಭಕ್ತನ ಕ್ರಿಯೆಗಳು ಶುದ್ಧಕ್ರಿಯೆಗಳಾದುದರಿಂದ ಲಿಂಗಕ್ರಿಯೆಗಳಾಗಿವೆ. ಕ್ರಿಯೆಗಳ ನಿಧಾನನೆ ದೇಹವಾಗಿರುವುದರಿಂದ ಲಿಂಗವೆ ಅವನ ದೇಹವಾಯಿತು. ಭಕ್ತನಿಗೆ ವಿಷಯ ಮಲಿನತೆಯನು ಕಳೆದ ಅರಿವೆ ಜ್ಞಾನವು. ಆ ಜ್ಞಾನವೆ ಪ್ರಾಣವು ಆಗಿಹುದರಿಂದ ಭಕ್ತನ ಪ್ರಾಣವೆ ಜಂಗಮವು. ದೇಹ ಪ್ರಾಣಗಳಿಗೆ ಆತ್ಮನು ಅಂಗಿ (ಪ್ರಧಾನ) ಯಾಗಿರುವಂತೆ ಲಿಂಗಜಂಗಮಕ್ಕೆ ಭಕ್ತನು ಅಂಗಿ ಅಥವಾ ಆತ್ಮನು.

ಮುಂದಿನ ವಿಚಾರಕ್ಕೆ ಸಾಗುವ ಮೊದಲು ಈ ಆಚಾರಗಳು ಈ ಜ್ಞಾನವು ಅನಾದಿ ಭಕ್ತನಲ್ಲಿ-ಅಂದರೆ ಆವ ಮಹಾಪುರುಷನ ಚರಿತ್ರದಿಂದ ಅವನನ್ನು ವೀರಶೈವ ಶರಣರು ಅನಾದಿ ಭಕ್ತನೆಂದು ಕರೆದರೊ ಆ ಮಹಾಪುರುಷನಲ್ಲಿ-ಎಲ್ಲಿಂದ ಬಂದುವು ? ಅಥವಾ ಈ ಅನಾದಿ ಭಕ್ತನ ಚರಿತ್ರವು ಈ ಭೂಮಿಯಲ್ಲಿ ಎಂತು ವಿಕಾಸವನ್ನೈದಿತು? ಶಿವಾಗಮುಗಳು ೩೬ ತತ್ವಗಳ ಮತ್ತು ಷಡಧ್ವಗಳ ಸಿದ್ಧಾಂತವನ್ನು ಶಿವಸ್ವರೂಪ ಜ್ಞಾನಕ್ಕಾಗಿ ವಿವರಿಸುವಲ್ಲಿ ಶಿವಭಕ್ತಿಯನ್ನು ಪ್ರಧಾನೀ ಕರಿಸಿದುವು. ಶಿವಭಕ್ತಿ ಇಲ್ಲದ ಕೇವಲ ಜಾತಿ-ಧರ್ಮ ನಿಷ್ಠರಾದ ಮಾನವರಿಗೆ ಜ್ಞಾನವಾಗುವುದು ಶಕ್ಯವಲ್ಲೆಂದು ಶಿವಾಗಮಂಗಳ ಮತವು. ಆದುದರಿಂದಲೆ ಶ್ರೀಮತ್ಕಾಮಿಕವು.—

> ವರಂ ಪ್ರಾಣಪರಿತ್ಯಾಗಶ್ಛೇದನಂ ಶಿರಸೋಽಪಿ ವಾ
> ನತ್ವನಭ್ಯರ್ಚ್ಯ ಭುಂಜಿದ್ ಯಾಭಗವಂತಂ ತ್ರಿಲೋಚನಂ

ಎಂದು ಶಿವಭಕ್ತಿಯನ್ನು ಮಹೀಕರಿಸುವುದು. ಶ್ವೇತಾಶ್ವೇತರೋಪನಿಷತ್ತು—

> ಯಸ್ಯ ದೇವೇ ಪರಾಭಕ್ತಿಃ ಯಥಾ ದೇವೇ ತಥಾ ಗುರೌ
> ತಸ್ಯೈವ ಕಥಿತಾಹ್ಯರ್ಥಾಃ ಪ್ರಕಾಶಂತೇ ಮಹಾತ್ಮನಃ

ಎಂದು ಹೇಳುವುದು. ಈ ಭಕ್ತಿಮಾರ್ಗದಲ್ಲಿ ನುರಿತ ಹಲವರು ಗೂಢವೇದಿಗಳು ಶಿವನಲ್ಲಿ ತಮ್ಮ ಬಾಳುವೆಯನ್ನು ಎರಕಗೊಳಿಸಿ ಪ್ರಸಿದ್ಧಿಯನ್ನೈದಿದರು. ಇವರೆಂದರೆ ತಮಿಳು ನಾಡಿನ ೬೩ ಮಂದಿ ಪುರಾತನ ಶರಣರು. ಅವರಲ್ಲಿಯು ನವಮುಗ್ಧರೆಂದು ಹೆಸರುಪಡೆದ ೯ ಮಂದಿ ಮುಗ್ಧಭಕ್ತರು. ಮುಗ್ಧವೆಂದರೆ ಮೂಢವೆಂಬ ಅರ್ಥವಲ್ಲ. ಸುಂದರವೆಂಬ ಅರ್ಥವು. ಆ ಭಕ್ತಿಯ ಸೌಂದರ್ಯವು ತನ್ನ ನಿರತಿಶಯದಿಂದ ಇತರ ಭಾವಗಳನ್ನು ಮರೆವುದರಲ್ಲುಂಟು. ಇದು ಗೂಢವೇದಿಗಳಿಗಲ್ಲದೆ ಬಾಹ್ಯೇಂದ್ರಿಯವೇದಿಗಳಿಗೆ ಬರಲಾರದು. ಆಂಗ್ಲಭಾಷೆಯಲ್ಲಿ "Mystic" ಶಬ್ದದಿಂದ ಬೋಧವಾಗುವ ಅರ್ಥವೆ ನಮ್ಮ ಮುಗ್ಧಶಬ್ದದಲ್ಲುಂಟು. ಆದಕ್ಕೆ ನಾವು ಗೂಢವೇಧಿಯೆಂದು ಹೊಸ ಹೆಸರಿನಿಂದ ಕರಿದೆವು.

ಶೈವ ವೀರಶೈವಗಳಿಗೆ ತೋರುವ ಅಂತರವನ್ನು ಮೇಲೆ ನಾವು ಹೇಳಿರುವೆವು. ಅದರಲ್ಲಿ ಸಮಾನತಾ-ಸಾಮರಸ್ಯಗಳ ಲಕ್ಷಣದಿಂದ ಭೇದವನು ತೋರಿಸಿರುವೆವು. ಆದರೆ ಸಾಮರಸ್ಯವೆಂದರೇನು? ಅದನ್ನು ಈ ಜೀವಿತದಲ್ಲಿ ವ್ಯವಹರಿಸುವುದೆಂತು? ವ್ಯವಹರಿಸಿದರಾರು? ಎಂಬುದು ತಿಳಿಯದೆ ವೀರಶೈವಸಿದ್ಧಾಂತದ ಮನೋಹರತ್ವವು ಗೋಚರಿಸದು. ನಾವಿಲ್ಲಿ ಎರಡು ಕಥೆಗಳನ್ನು ತೆಗೆದು



CC-0. Jangamwadi Math Collection, Varanasi. An eGangotri Initiative

ಕೊಂಬೆವು. ಒಂದು ಕಣ್ಣಪ್ಪನದು. ಮತ್ತೊಂದು ಬಿಜ್ಜಮಹಾದೇವಿಯದು. ಈ ಎರಡು ಚರಿತ್ರೆಗಳಲ್ಲಿ ವೀರಶೈವ ಧರ್ಮದ ಸಾಮರಸ್ಯ ಸಿದ್ಧಾಂತವು ಅತಿ ಸುಗಮವಾಗಿ ಒಡೆದು ತೋರಿದಪುದು.

ಕಾಳಹಸ್ತಿಯ ಅಡವಿಯಲೊಂದು ಪಕ್ಕಣವು. ಆ ಪಕ್ಕಣದೊಡೆಯನು ಒರ್ವ ಶಬರನು. ಅವನ ಹೆಸರು ನಾವರಿಯೆವು. ಕಣ್ಣಪನೆಂಬುದು ಅವನಿಗೆ ತನ್ನ ಚರಿತ್ರದಿಂದ ಬಂದ ಹೆಸರು ಈ ಬೇಡನು ತನ್ನ ಬೇಡತನದಲ್ಲಿ ಬದುಕಿರಲು ಒಂದಾನೊಂದುದಿನ ಆವುದೊಂದು ಹಿಂದಣ ಪುಣ್ಯದಿಂದ ಅಥವಾ ಶಿವನ ನಿರ್ವ್ಯಾಜ ಪ್ರಸಾದದಿಂದ ಒಂದು ಕನಸು ಬಂದುದು. ಆ ಕನಸಿನಲ್ಲಿ 'ಅಗೋ! ಶಬರಾ, ಅತ್ತಣ ಕಾಡಿನಲ್ಲಿರುವ ಶಿವಲಿಂಗವು ನಿನ್ನ ಪ್ರಾಣದಧಿದೇವತೆಯು. ಆ ಲಿಂಗವನು ಪೂಜಿಸು, ಪರಾನಂದವನು ಹೊಂದು' ಎಂದುಪದೇಶವು. ಬೇಡನೆದ್ದು ನೋಡುವಲ್ಲಿ ಹಿಂದೆ ತನಗೆಂದಿಗೂ ಗೋಚರಿಸದ ಹಾದಿ. ಆ ಹಾದಿಯ ಹಿಡಿದು ಹೋಗುವಲ್ಲಿ ತುದಿಗೊಂದು ಶಿವಾಲಯವು. ಅಲ್ಲಿ ಶಿವಲಿಂಗ ಮೂರ್ತಿಯು. ಚಂದ್ರಮನ ಕಂಡ ಉದಧಿಯಂತೆ, ತಾಯಿ ಕಂಡ ಕರುವಿನಂತೆ, ರವಿಯ ಕಂಡ ಕಮಲದಂತೆ ಕಣ್ಣಪನಿಗಾದ ಹಿಗ್ಗಿನ ಸುಗ್ಗಿ. ಏನೊಂದನರಿಯದ ಬೇಡನಿಗೆ ಮಹೇಶ್ವರ ಮೂರ್ತಿಯ ಲೀಲಾಕಥನಗಳ ಅರಿವು. ಆ ಅರಿವುಗಳ ಹೆಣೆತವು ತನ್ನ ಜೀವಿತದೊಡನೆ. ಆ ಲಿಂಗವನು ಕಣ್ಣಪನು ಸಂಬೋಧಿಸುವ ಬಗೆಯು ವಿಚಿತ್ರವಾದುದು. ಪರಶಿವಮೂರ್ತಿಯು ತನ್ನ ಚಿಚ್ಛಕ್ತಿಯ ಎರಡುಮೈಯಾದ ಜ್ಞಾನಕ್ರಿಯೆಗಳೊಡನೆ ಆನಂದಸಾಗರವಾಗಿಹ ತತ್ವವು ತಲೆಯೊಳಗಿನ ಗಂಗೆ, ತೊಡೆಯ ಮೇಲಣ ಪಾರ್ವತಿಯ ರೂಪದಿಂದ ಹೊಳೆವುದು. ಅದರೊಡನೆ ಹಲವು ಹೆಂಡರನಾಳುವ ಮಾನವನ ಬಾಳುವೆಯ ತೊಂದರೆಯ ಸಂಗಳಿಕೆ. ಇವೆರಡು ಕೂಡಿ ಕಣ್ಣಪನು ಲಿಂಗವನುದ್ದೇಶಿಸಿ 'ಇಬ್ಬರು ಹೆಂಡರ ಕದನಕಂಜಿ ಬೇಸತ್ತು ಅಡವಿಯ ಸೇರಿದೆಯೊ?' ಎನ್ನುವನು. ಭಕ್ತವತ್ಸಲನಾಗಿ ಪರಶಿವನು ಪುಣ್ಯಕ್ಷೇತ್ರಗಳಲಿ ಲಿಂಗಾಕಾರದಿಂದ ಮೆರೆವನೆಂಬ ಅರಿವು. ಇಂತಹ ಶ್ರೀಶೈಲದಲಿ ಚಂಚರು ವಿಪುಳವೆಂಬ ಅರಿವು. ಆ ಚಂಚರ ತುಡುಗುತನವು ಮಾನವರನು ಬಾಧಿಸುವುದೆಂಬ ನೆನಪು— ಇವೆರಡರ ಜೋಡಣೆಯಲ್ಲಿ 'ಶ್ರೀಗಿರಿಯಿಂದ ಚಂಚರಿಗೆ ಬೇಸತ್ತು ಬಂದೆಯೊ?' ಎಂಬ ಸಂಬೋಧನೆ. ಇಂತು ಹಲವು ಸಂಬೋಧನೆಗಳಿಗೆ ಉತ್ತರವಿಲ್ಲದಿರಲು ಶಿವನು ಹಸಿದನೆಂಬ ಭಾವನೆ. ಆ ಹಸಿವ ಹಿಂಗಿಸಲು ಶಿವಲಿಂಗ ಪೂಜೆಯ ಮಾಡಿ ನೈವೇದ್ಯವ ಉಣಿಸಬೇಕೆಂಬ ಕಲ್ಪನೆ. ಇಂತು ಶಿವನೊಳು ತನ್ನ ಧರ್ಮಗಳನ್ನು ಸಂಘಟಿಸುವ ಭಾವವು. ಈ ಭಾವದಿಂದ ಪೂಜೆಮಾಡ ಹವಣಿಸಿ ತನಗೆ ಬಲ್ಲಂತೆ ಮುಕ್ಕಳ ನೀರಿನಿಂದ ಮಜ್ಜನ. ಆ ಮೊದಲು ಮೊದಲಿದ್ದ ನಿರ್ಮಾಲ್ಯ ಪುಷ್ಪಗಳನ್ನು ಕೆರವಿನಿಂದ ಸರಿಸುವಣ. ತನ್ನ ಮಂಡೆಯಲ್ಲಿ ಮುಡಗಿದ ಹೂವುಗಳನು ಶಿವನ ಮಂಡೆಗೇರಿಸುವಣ. ಕೊನೆಗೆ ತಾನು ಸವಿನೋಡಿದ ಮಾಂಸಖಂಡವನು ಶಿವನಿಗರ್ಪಿಸುವಣವು.

ಈ ಮುಗ್ಧ ಭಕ್ತಿಯನರಿಯದ ಪಾರ್ವನು ಶಬರನನ್ನು ಕೊಲಲೆಣಿಸಲು ಆ ಭಕ್ತಿಯನ್ನು ಪ್ರಕಟಿಸಲು ಶಿವಲಿಂಗಕ್ಕೆ ಕಣ್ಬೇನೆ. ಅದನು ನೋಡಿ ಶಬರನು ಬೆದರುವನು. ಆ ಬೇನೆಗಣ್ಣಿಗಾಗಿ ತನ್ನ ಕಣ್ಣು ಕೊಡುವನು. ಅಂದವನು ಕಣ್ಣಪನು. ಶಿವಲಿಂಗಕ್ಕೆ ವೇದಾಗಮೋಕ್ತವಾದ ಪೂಜೆಯನೆಸಗುವ ಪಾರ್ವನು ಕಣ್ಣಪನ ಭಕ್ತನಾಗುವನು.

ಇನ್ನು ಅಮ್ಮವ್ವೆಯ ಕತೆಯು. ಬಿಜ್ಜಮಹದೇವಿ ಎಂಬ ಶರಣೆ. ಶಿವನಿಗೆ ಸತಿಸುತರುಂಟು. ಆದರೆ ಶಿವನ ತಾಯಿಯುಂಟೆಂದು ಆಕೆಯು ಎಲ್ಲಿಯೂ ಕೇಳಿಲ್ಲ. ಸಮುದ್ರಮಥನದಲಿ ಹುಟ್ಟಿದ



CC-0. Jangamwadi Math Collection, Varanasi. An eGangotri Initiative

ಘೋರವಿಷವನು ಕುಡಿದು ದೇವತೆಗಳನು ಶಿವನು ರಕ್ಷಿಸಿದನೆಂದು ಅಮ್ಮವ್ವೆಯು ಕೇಳಿಹಳು. ಶಿವನಿಗೆ ಜಡೆಯುಂಟು. ಶಿವನು ಸುಡುಗಾಡೊಳಾಡುವನು. ವಿಷವು ಪ್ರಾಣವನು ಅಗಲಿಪುದು. ಕೂದಲು ಎಣ್ಣೆಗಾಣದೆ ಜಡೆಗಟ್ಟಿದಪುದು. ಸ್ಮಶಾನದೊಳಾಡುವುದು ಭೂತಭಯ ಕಾರಣವು. ಇಂತಹ ಅಲ್ಲದ ತೊಡಕುಗಳು ಶಿವನನ್ನು ಅಳಿಸಲಿಲ್ಲವಾದರೂ ಮುಂದೆ ಇಂತಹೆ ಒದಗುಗಳಿಗೆ ಇಂಬುಳಿದರೆ ಏನಾಗುವುದೊ? ತಾಯಿಯುಳ್ಳೊಡೆ ಶಿವನಿಗೆ ಇವುಗಳನಾಗಗೊಡುತಿರಲಿಲ್ಲ ಎಂದು ಅಮ್ಮವ್ವೆಯ ನೆನಹು. ತಾನು ತಾಯಿಯಾಗಬೇಕು. ಮುಂದೆಂದಿಗು ಶಿವನಿಗೆ ಇಂತಹೆ ಸಂಕಟಗಳು ಒದಗಬಾರದೆಂಬ ಬಯಕೆ. ಆ ಬಯಕೆಯಿಂದ ತಾನು ಶಿವನಿಗೆ ತಾಯಿಯಾಗುವಳು. ಶಿವನು ಕೂಸಾಗಿ ಆಕೆಯ ಉಪಚಾರಗೊಳ್ಳುವನು. ಒಂದು ದಿನ ಘನವಾದ ಬೇನೆ. ಆ ಬೇನೆಯಿಂದ ಶಿಶುವು ಬಾಳದೆಂಬ ಅಂಜಿಕೆಯಲ್ಲಿ ಅಮ್ಮವ್ವೆಯು ಕೂಸಿಗಿಂತ ಮೊದಲು ಪ್ರಾಣವ ನೀಗಲು ಹವಣಿಸುವಳು. ಶಿವನು ಮೆಚ್ಚಿ ರೂಪುದೋರುವನು. ಅಮ್ಮವ್ವೆಗೆ ಅದುಬೇಡ. ಶಿವನು ನಿರೋಗನಾಗಿರಲೆಂಬ ಬಯಕೆ. ಹಾಗೆ ಆಗಲೆಂದು ಶಿವನ ಆಶ್ವಾಸನ.

ಈ ಎರಡು ಕಥೆಗಳಲ್ಲಿ ಭಕ್ತರು ಶಿವಾಗಮ ಮಾರ್ಗದಿಂದ ಎಷ್ಟು ಮುಂದುವರಿದಿದ್ದರೆಂದು ನಾವು ಕಾಂಬೆವು. ಶಿವನನ್ನು ತಮ್ಮಲ್ಲಿ ಮಾರ್ಪಡಿಸಿ ಶಿವನೊಡನೆ ಬಾಳುವ ಮುಗ್ಧ ಭಕ್ತಿಯು ಆಗಮವಚನಗಳಿಗೆ ಕಾಣದುದು ಈ ಭಕ್ತರಿಗೆ ಕಂಡಿದ್ದಿತು. ಈ ರಹಸ್ಯವೆ ಶ್ರೀಬಸವೇಶನ ಆಚರಣಕ್ಕೆ ಮೂಲವಾಗಿ ಮಾರ್ಪಟ್ಟಿತು. ಶಿವನು ಶಿವಭಕ್ತರೊಡನಾಡುವನು. ಶಿವನು ಹಸಿವನು. ಶಿವನು ಉಣ್ಣುವನು. ಶಿವನು ಬಳಲುಸುವನು. ಶಿವನು ಬೇಡುವನು. ಸಾರಾಂಶ ಶಿವನು ಶಿವಭಕ್ತರಲ್ಲಿ ಬೆರೆದು ವ್ಯವಹರಿಸುವನು. ಕಣ್ಣಪನು ಶಿವನಿಗೆ ತನ್ನ ಕಣ್ಣನಿತ್ತನು. ಶಿವನ ಬೇನೆಗಣ್ಣನು ತಾನು ಕೊಂಡನು. ಇಂತು ಪರಸ್ಪರ ವಿನಿಮಯದಿಂದ ಶಿವನೊಳಗೆ ಭಕ್ತನು ಭಕ್ತನೊಳಗೆ ಶಿವನು ಸಮರಸವಾದರು. ಅಮ್ಮವ್ವೆಯು ಭಕ್ತಿಯಿಂದ ಶಿವನು ಕೂಸಾದನು. ತನ್ನ ಅಖಂಡಾನಂದವನ್ನು ಅಮ್ಮವ್ವೆಗಿತ್ತನು. ಇಂತು ಶಿವನೂ ಭಕ್ತರೂ ಸಮರಸವಾಗಿ ವರ್ತಿಪುದೆ ನಿಜವಾದ ಮುಕ್ತಿಯು. ಇಹದಲ್ಲಿ ಈ ಸಮರಸ ಭಕ್ತಿಯನು ಆಚರಿಸಿದವನೆ ಪರದಲ್ಲಿ ಶಿವನೊಡನೆ ಬೆರೆವನು.

ಕಣ್ಣಪ್ಪನು ಬೇಡನು. ಅಮ್ಮವ್ವೆಯು ಹೆಂಗಸು. ವರ್ಣಧರ್ಮದಲ್ಲಿ ಬೇಡನಿಗೂ ಹೆಂಗಸಿಗೂ ಧರ್ಮಾಧಿಕಾರವಿಲ್ಲ. ಜ್ಞಾನಾಧಿಕಾರವಿಲ್ಲ. ಕಣ್ಣಪನು-ಅಮ್ಮವ್ವೆಯು ಪಡೆದ ಸುಖವು ಋಷಿಗಳ ಬಾಳಿನಲ್ಲಿ ದೊರೆಯಲಿಲ್ಲ. ಆದುದರಿಂದ ಈ ಸಮರಸ ಭಕ್ತಿಮಾರ್ಗದಲ್ಲಿ ಕುಲಗಳಿಂದ ಅಂತರವಿಲ್ಲ; ಗಂಡುಹೆಣ್ಣೆಂಬ ಅಂತರವಿಲ್ಲ — ಎಂಬುದೆ ಸಿದ್ಧಾಂತವು.

ಈ ಸಿದ್ಧಾಂತವು ಕೇವಲ ವಿಧಿನಿಷೇಧಾತ್ಮಕವಾದ ಶಾಸ್ತ್ರವಚನಗಳಿಂದಾಗದು. ಅದನು ಪೂರ್ಣ ವಿಕಾಸಗೊಳಿಸಲು ತಕ್ಕಕಾಲದಲ್ಲಿ ಆ ಶಿವಭಕ್ತಿಯ ಪಿಂಡವೆ ತಾನಾದ ಮಹಾಪುರುಷನ ಉದಯವು ಆವಶಕ್ಯವು. ಅಂತಹ ಉದಯಕ್ಕೆ ಮೊದಲಾಗಿ ನಿರ್ವ್ಯಾಜ ಶಿವಭಕ್ತಿಯನುಳ್ಳ ಶರಣರುದಯವು ಬೇಕು. ಸೂರ್ಯೋದಯದ ಮೊದಲು ಅರುಣೋದಯವು. ಬೇಡರದಾಸಿಮಯ್ಯ, ಶಂಕರದಾಸಿಮಯ್ಯ, ಚೆನ್ನಯ್ಯ ಎಂಬೆಂತಿಹರೆ ಮೊದಲಾದ ಶಿವಶರಣರು ಈ ಭಕ್ತಿಮಾರ್ಗವನು ಮತ್ತಿಷ್ಟು ಮುಂದರಿಸಿದರು. ಆದರೆ ಶ್ರೀಬಸವೇಶನುದಯವಾಗದೆ ವೀರಶೈವವು ಎಲ್ಲ ಬಗೆಯಿಂದ ಅರಳಲು ಆಗುವಂತಿರಲಿಲ್ಲ.



CC-0. Jangamwadi Math Collection, Varanasi. An eGangotri Initiative

ಶಿವನ ನಿಸ್ಸೀಮ ಭಕ್ತಿಯೆಂಬ ಸಮರಸಭಾವಕ್ಕೆ ಆತ್ಮನು ಅಧೋಮಾರ್ಗದಲ್ಲಿ ಹಂಬಲಿಸುವ ಕುಲಾಭಿಮಾನ, ಧನಾಭಿಮಾನ, ರಾಜ್ಯಾಭಿಮಾನ ಇಂತಿವೆಲ್ಲವನ್ನು ತನುವ್ಯಸನ-ಮನೋವ್ಯಸನ-ಸ್ತ್ರೀವ್ಯಸನಾದಿಗಳನ್ನು ನೀಗಿ ಶಿವಭಕ್ತರಲ್ಲಿ ಹೆಮ್ಮೆ ಇಲ್ಲದೆ ನಡೆದ ಮಹಾಪುರುಷನಿಂದಲ್ಲದೆ ನಿರ್ವಂಚಕಭಕ್ತಿಯ ಅಗಾಧವಾದ ಮಹಿಮೆಯು ಪ್ರಕಟವಾಗದು. ಅತ್ಯಂತ ಉಚ್ಚಸ್ಥಿತಿಯಲ್ಲಿ ತಾನಿದ್ದು ಆ ಉಚ್ಚಸ್ಥಿತಿಯ ಅಭಿಮಾನವನುಡುಗಿ ಲಿಂಗದಲ್ಲಿಯೂ ಲಿಂಗನಿಷ್ಠರಲ್ಲಿಯೂ ಆಳ್ತನವನು ಹೊಂದುವ ಹಣಿಹವು ಇತರ ಕುಲಗಳಲ್ಲಿಯೂ ಇತರ ಹೋರೆಗಳಲ್ಲಿಯೂ ವ್ಯವಹರಿಸುವ ಭಕ್ತರ ಬಾಳುವೆಯು ಎನಿತೊಂದು ನಿರ್ಮಲವಾಗಿರಬಹುದಾದರೂ ಎನಿತೊಂದು ನಿರ್ವಂಚಕವಾಗಿರಬಹುದಾದರೂ ತೀರದು. ಆದುದರಿಂದ ಶ್ರುತಿಗಳಲ್ಲಿ ಹಿರಿಯದೆಂದು ಹೊಗಳಿಸಿಕೊಂಡ ಬ್ರಾಹ್ಮಣವರ್ಣದಲ್ಲಿ ಜನಿಸಿ ರಾಜೈಶ್ವರ್ಯವನು ಹೊಂದಿ ಸಕಲವಿಭವಗಳಿಗೆ ಆಸ್ಪದವಾಗುವ ರೂಪಿನಿಂದಲೆ ಭಕ್ತಿಪಿಂಡವು ಅವತರಿಸಿ ನಡೆದು ನುಡಿದು ವೀರಶೈವವನ್ನು ಆದೇ ತಾನಾಗಿ ಪ್ರತಿಷ್ಠಿಸಬೇಕಾಗಿದ್ದಿತು. ಆ ಪಿಂಡವೆ ಅನಾದಿಭಕ್ತ ಬಸವೇಶನು.

ಪಂಚಾಚಾರಗಳನ್ನು ಹೇಳಿದನೆಂಬ ಶಬ್ದಗಳು ಇರುವವರಿಂದ ಆಚಾರಗಳು ನಡಿಯವೆ ಶಬ್ದದಿಂದ ಸ್ಥಾಪಿಸಲು ಅಶಕ್ಯವಾದುದರಿಂದ ಅನಾದಿಭಕ್ತನು ಈ ಆಚಾರಗಳಂತೆ ನಡೆದ ಮಹಾಪುರುಷನೆ ಇರಬೇಕು. ಅಂತಹ ಮಹಾಪುರುಷನು ಬಸವಣ್ಣನೆ ಎಂದು ಅವನನ್ನು ಅನಾದಿಭಕ್ತನೆಂದೂ ಭಕ್ತಿಭಾಂಡಾರಿಯೆಂದೂ ವೀರಶೈವ ವಾಙ್ಮಯವು ಕರೆವುದರಿಂದ ಮೊಗ್ಗೆಯ ಮಾಯಿದೇವನಂತಹ ಅನೇಕ ವೀರಶೈವ ಪ್ರವರ್ತಕಾಚಾರ್ಯರು ಶ್ರೀಬಸವನನ್ನು ವೀರಶೈವ ಪ್ರಥಮಾಚಾರ್ಯನೆಂದೂ ಅಷ್ಟಾವರಣರೂಪನೆಂದೂ ಕರೆವುದರಿಂದ ವೀರಶೈವ ಧರ್ಮದ ರಹಸ್ಯೋಪದೇಶಗಳಲ್ಲಿ ಶಿವಪೂಜೆ, ಶಿವಜ್ಞಾನ, ಶಿವಚಿಂತನಗಳ ಪ್ರಕ್ರಿಯೆಗಳಲ್ಲಿ ಶ್ರೀಬಸವ ನಾಮಾಕ್ಷರಗಳು ಪ್ರಣವಗಳಾಗಿ ಬಳಕೆಯಾಗುವುದರಿಂದಲೂ ಮತ್ತಾರಿಗೂ ಅನಾದಿಭಕ್ತನೆಂಬ ಹೆಸರು ಪ್ರಸಿದ್ಧವಿಲ್ಲುದರಿಂದಲೂ ಯೋಗಜಾಗಮದ ಅನಾದಿಭಕ್ತಪದವು ಶ್ರೀಬಸವೇಶನನ್ನೆ ಕುರಿತು ಇಹುದೆಂದು ಸಿದ್ಧಾಂತವು. ಶ್ರೀಮಾಯಿದೇವನ ವೃತ್ತವಿದು:

ಜಯ ಬಸವೇಶ ಭಕ್ತಜನಭಾಗ್ಯಶುಭೋದಯ ವೀರಶೈವನಿ<br>
ರ್ಣಯಪರಮಾವತಾರ ಶರಣಾಗತರಕ್ಷಕ ಚಿದ್ಘನಪ್ರಭಾ<br>
ಮಯ ಜಗದಾದಿದೇಶಿಕ ಪುರಾತನಪುಂಗವ ಶಾಂಭವೈಪುರಾಶ್ರಯ<br>
ಜಯ ಸೋಮನಾಥ ಜಯದೇವ ಜಯಾವಿರತಂ ಶಿವಾಧವಾ

ಈ ಪದ್ಯದಲ್ಲಿಯ ವೀರಶೈವ ನಿರ್ಣಯ ಪರಮಾವತಾರ, ಪುರಾತನಪುಂಗವ, ಜಗದಾದಿದೇಶಿಕ ಎಂಬೀ ವಿಶೇಷಣಗಳು ನಾವು ಮೇಲೆ ಹೇಳಿದುದಕ್ಕೆ ಪ್ರಮಾಣವಾಗಿವೆ. ಈ ಅರ್ಥವನ್ನು ಬಿಚ್ಚುವ ಶ್ರೀಬಸವೇಶ್ವರ ವಚನಗಳನ್ನು ನಾವು ಮುಂದೆ ಉದಾಹರಿಸುವೆವು. ಅಷ್ಟರಲ್ಲಿ ಪಂಚಾಚಾರಗಳೆಂದರೇನು? ಅವುಗಳು ಶ್ರೀಬಸವ ಚರಿತೆಯಲ್ಲಿ ಹೇಗೆ ಮೂಡಿವೆ ಎಂಬುದನ್ನು ನೋಡುವಣ.

ಆಚಾರವೆಂದರೇನು? ಆಚಾರವು ಅನಾದಿಭಕ್ತನ ಲಕ್ಷಣವು ಏಕಾಯಿತು? ಆಚಾರವೆಂದರೆ ನಡೆ. ಆಚಾರವೆಂದರೆ 'ಆಙ್ (ಸಮಂತಾತ್) ಸುತ್ತಲು' 'ಚಾರ' ನಡೆವಣ ಎಂದರೆ ಬಂಧನ ರೂಪವಾದ ನಡತೆಯನುಳಿದು ವಿಸ್ತೃತವಾದ ಉದಾರವಾದ ವರ್ತನದಲ್ಲಿ ನಡೆವಣ. ಈ ನಡತೆಯು ಒಂದೆಯಾದರೂ ವ್ಯವಹಾರದ ಬಳಕೆಯಲ್ಲಿ ಐದೆರನಾಗಿಹುದು. ಅದು ಒಂದೆ ಎಂಬುದು ಭಕ್ತನು



CC-0. Jangamwadi Math Collection, Varanasi. An eGangotri Initiative

ಆದರಿಂದ ತನ್ನ ಗುರಿಯಾದ ಶಿವಸಾಮರಸ್ಯವನ್ನು ಹೊಂದುವುದು. ನಮ್ಮ ಶರೀರದಿಂದಲೂ ಮನಸ್ಸಿನಿಂದಲೂ ಭಾವನೆಯಿಂದಲೂ ನಮ್ಮ ಕ್ರಿಯೆಗಳು ಹುಟ್ಟುವುವು. ನಮ್ಮ ಶರೀರದಿಂದ ಹುಟ್ಟುವ ಕ್ರಿಯೆಗಳು ನಮ್ಮ ದೇಹವನ್ನೂ ನಮ್ಮ ಸಂತತಿಯನ್ನೂ ಹಿಡಿದು ನಡೆವುವು. ನಮ್ಮ ಮನಸ್ಸಿನಿಂದ ಹುಟ್ಟುವ ಕ್ರಿಯೆಗಳು ನಮ್ಮ ಆಕಾಂಕ್ಷೆಯನ್ನೂ ನಂಬುಗೆಯನ್ನೂ ಹಿಡಿದು ಹುಟ್ಟುವವು. ನಮ್ಮ ಭಾವದಿಂದ ಹುಟ್ಟುವ ಕ್ರಿಯೆಗಳು ನಮ್ಮ ಗುಣಗಳನ್ನು ನೆಮ್ಮಿ ಜರುಗುವುವು. ಹೀಗೆ ನಾವು ಈ ವ್ಯಾಪಾರಗಳನ್ನು ವಿಂಗಡಿಸಿದರೆ ಇವುಗಳಲ್ಲಿ ಒಂದಕ್ಕೊಂದು ಬೆರೆಯದ ಸಿಡಿದುವೊಡೆದ ಭಾಗಗಳನ್ನು ಕಲ್ಪಿಸುವುವೆಂದು ತಿಳಿಯಕೂಡದು. ಒಂದೊಂದು ಕ್ರಿಯೆಯಲ್ಲಿಯೂ ಶರೀರ ಮನೋಭಾವಗಳ ವ್ಯಾಪಾರವು ಇರಲೆಬೇಕು. ಗುಣಪ್ರಧಾನ ಭಾವದಿಂದ ಅಥವಾ ಲಿಂಗಾಂಗಿಭಾವದಿಂದ ಈ ಭಾಗವನ್ನು ಮಾಡಿಹೆವು. **ಶಾರೀರಕ ಕರ್ಮಗಳು:** ಸಂತತಿ ಹಿಡಿದು ಬಂದುವು: ಶರೀರಸಂಬಂಧ, ಊಟ-ಉಪಚಾರ. **ಮನಃಸಂಬಂಧಿ ಕೆಲಸಗಳು:** ಸ್ನೇಹ ವೈರಗಳಿಂದ ಆಗುವ ಕೆಲಸಗಳು: ವಿಷಯಾಸಕ್ತಿ. **ಭಾವಸಂಬಂಧವಾದ ಕೆಲಸಗಳು:** ಆಯಾ ದೇವತೆಗಳ ಉಪಾಸನೆ: ಈ ತ್ರಿವಿಧ ಕರ್ಮಗಳು ಲೋಕದ ಬಳಕೆಯಿಂದ ಮಾಡಿದುವಾದರೆ ರಾಗ ದ್ವೇಷಾದಿಗಳಿಗೆ ಇಂಬಾಗುತ್ತವಾಗಲಿ, ಪರಲೋಕ ಸಂಬಂಧವಾದ ಪುಣ್ಯಪಾಪಗಳಿಗೆ ಇಂಬಾಗುತ್ತವಾಗಲಿ ನಮಗೆ ಸುಖ-ದುಃಖಾತ್ಮಕವಾದ ಸಂಸಾರವನು ಉಂಟುಮಾಡುವುವು. ಇವು ಸಂಕುಚಿತ ವರ್ತನಗಳು. ಇನ್ನು ಆಚಾರಗಳೆಂದರೆ :– **ಲಿಂಗಾಚಾರ, ಶಿವಾಚಾರ, ಸದಾಚಾರ** ವೆಂಬ ಮೂರು ಆಚಾರಗಳು. ಈ ಮೂರರಲ್ಲಿ ಲಿಂಗಾಚಾರ ಶಿವಾಚಾರಗಳಲ್ಲಿ ನಿಯತಾಚಾರ ಗಣಾಚಾರವೆಂಬುವು ಹುಟ್ಟಿ ಐದು ಆಚಾರಗಳಾಗಿವೆ. ಹೀಗಾಗಿ ಕೆಲವೆಡೆಗಳಲ್ಲಿ ಆಚಾರವು ತ್ರಿವಿಧವೆಂದೂ ಕೆಲವೆಡೆಯಲ್ಲಿ ಪಂಚವಿಧವೆಂದೂ ಹೇಳುವುದುಂಟು. ಪಂಚವಿಧಾಚಾರವು ತ್ರಿವಿಧಾಚಾರದಲ್ಲಿಯೆ ಒಳಪಡುವುದರಿಂದ ಆಚಾರ ಲಿಂಗವು ಪಂಚವಿಧವೆನ್ನದೆ ತ್ರಿವಿಧವೆನ್ನುವರು.

## ಆಚಾರ ಲಿಂಗವೆಂದರೇನು?

ವೀರಶೈವ ಧರ್ಮದಲ್ಲಿ ಮತ್ತದರ ತಾತ್ವಿಕ ವಿವೇಚನದಲ್ಲಿ ಅಂಗ ಲಿಂಗವೆಂಬ ಎರಡು ಪದಾರ್ಥಗಳು ಉಂಟೆಂದು ಮೇಲೆ ಹೇಳಿರುವೆವು. ಅಂಗವೆಂಬುದು ಬೇರೊಂದು ಲಿಂಗದಿಂದ ಒಡೆದ ವಸ್ತುವಲ್ಲ. ಲಿಂಗವು ದೀಪವಾದರೆ ಅಂಗವು ಆ ದೀಪದ ಪ್ರಕಾಶವು. ಲಿಂಗವು ಕುಸುಮವಾದರೆ ಅಂಗವು ಅದರ ಸುಗಂಧವು. ಲಿಂಗದ ಪ್ರಕಟತೆಯೆ ಅಂಗವೆನ್ನಲು ಅಭ್ಯಂತರವಿಲ್ಲ. ದ್ವೈತಾದ್ವೈತ ವಿಶಿಷ್ಟಾದ್ವೈತಗಳು ಆತ್ಮ ಪರಾತ್ಮರುಗಳ ಭೇದಾಭೇದದ ವಿಚಾರದಲ್ಲಿ ತೊಡಗುವಂತೆ ಈ ಸಾಮರಸ್ಯಸಿದ್ಧಾಂತವು ಲಿಂಗಾಂಗ ಭಾವವನ್ನು ವಿಚಾರಿಸ ತೊಡಗುವುದು. ಅಂಗನ ಒಂದೊಂದು ಪರಿಸ್ಥಿತಿಯಲ್ಲಿಯೂ ಲಿಂಗಸಮರಸವು ಉಂಟೇ ಉಂಟು. ಅಂಗನು ಶಿವಸಾಮರಸ್ಯವನು ಹೊಂದಿ ಅನುಭವಿಸಲು ಅಂಗನ ತನುಕರಣಮಾನಸಗಳು ಒಂದು ವಿಶಿಷ್ಟವಾದ ಪರಿಶುದ್ಧಿಯನ್ನು ಹೊಂದಬೇಕಾಗಿದೆ. ನಮ್ಮ ತನುಕರಣಮಾನಸಗಳು ವಿಶಿಷ್ಟವಾದ ಅನುಭವವನ್ನು ಹೊಂದಲು ಉಪಯುಕ್ತವಾದ ಸಾಧನಗಳಾಗಿವೆ. ಆದುದರಿಂದಲೆ ನೈಯಾಯಿಕಾಚಾರ್ಯರು 'ಭೋಗಾಯತನಂ ಶರೀರಂ,' ಶರೀರವು ಭೋಗಗಳ ಮೆಟ್ಟು ಎಂದು ಹೇಳುವರು. ಇಲ್ಲಿ ಭೋಗವೆಂದರೆ ಅನುಭವವು. ಲೋಕದಲ್ಲಾದರೂ ಭೋಗ ಶಬ್ದವನ್ನು ಅನುಭವ ಶಬ್ದ ಪರ್ಯಾಯವಾಗಿ ಬಳಸುವುದುಂಟು. 'ನನಗದರ ಅನುಭವವಿಲ್ಲ' ಎನ್ನುವಲ್ಲಿ 'ನನಗದರ ಅನುಭೋಗವಿಲ್ಲ' ಎನ್ನುವು



CC-0. Jangamwadi Math Collection, Varanasi. An eGangotri Initiative

ದುಂಟು. ಪ್ರಾಕೃತಭೋಗಗಳನ್ನು ಅಂದರೆ ನಿಸರ್ಗದಲ್ಲುಂಟಾಗುವ ಬಿಸಿಲು-ಚಳಿಗಳ ಹಸಿವು-ತೃಷೆಗಳ ಎಂಬಿಂತಹ ದ್ವಂದ್ವಗಳ ಅನುಭವವನ್ನು ಈ ನಮ್ಮ ದೇಹದಿಂದ ಬೇರೊಂದು ಸಂಸ್ಕಾರದ ಅಪೇಕ್ಷೆಯಿಲ್ಲದೆ ನಾವು ಹೊಂದುವೆವು. ಈ ದ್ವಂದ್ವಾನುಭವದಲ್ಲಿ ನಮಗೂ ಇತರ ಪ್ರಾಣಿಗಳಿಗೂ ಆವುದೊಂದು ಭೇದವಿಲ್ಲ. ಆದರೆ ಈ ನಿಸರ್ಗಾನುಭವವನ್ನು ದಾಟಿ ಇವಕ್ಕೂ ಮಿಗಿಲಾದ, ಸುಂದರವಾದ, ಸಂಸ್ಕೃತವಾದ ಅನುಭವವನ್ನು ಹೊಂದಲು ನಮಗೆ ಸಂಸ್ಕಾರಗಳು ಬೇಕು. ಈ ವಿಷಯದಲ್ಲಿ ಒಂದು ಉದಾಹರಣವನು ಇಡುವಣ. ಕಾವ್ಯಾನಂದವನ್ನು ಹಿಡಿದು ಮಾತಾಡುವುದೆಂದರೆ ಕಾವ್ಯದ ರಸವನ್ನು ಅರಿತು ಆಸ್ವಾದನಗೊಳ್ಳಲು ಮಮ್ಮಟಾಚಾರ್ಯನು ಹೇಳುವಂತೆ 'ಕಾವ್ಯಜ್ಞಶಿಕ್ಷಯಾಭ್ಯಾಸಃ' ಬೇಕು. ಕಾವ್ಯಜ್ಞರಿಂದ ಕಾವ್ಯಾಭ್ಯಾಸವನ್ನು ಹೊಂದದೆ ನಮ್ಮ ಮನಸ್ಸು ಅಥವಾ ಅಂತಃಕರಣವು ಕಾವ್ಯದ ಸೌಂದರ್ಯವನ್ನು ಕಾಣಲಾರದು.

ಅದರಂತೆಯೆ ಶಿವಾನುಭವವು ನಮಗೆ ಉಂಟಾಗಲು ನಮ್ಮ ಶರೀರವನ್ನೂ ಅಂತಃಕರಣವನ್ನೂ ತಕ್ಕ ಹದಕ್ಕೆ ತರಬೇಕಾಗಿದೆ. ಈ ಹದಗೊಳಿಸುವ ನಡತೆಯೆ ಆಚಾರವು. ಈ ಆಚಾರವು ಕೇವಲ ಕುತೂಹಲದಿಂದ ನಮಗೆ ಅಳವಡದು. ಸರ್ವವಿದ್ಯೆಗಳಲ್ಲಿಯೂ ಕುತೂಹಲದ ಆಚೆಯಲ್ಲಿರುವ ಆಸಕ್ತಿಯು ಬೇಕು. ಆಸಕ್ತಿಯಿಲ್ಲದೆ ಕೇವಲ ಕುತೂಹಲದಿಂದ ಆವುದೊಂದು ವಿದ್ಯೆಯು ಅಳವಡದು. ಅಂತಹ ಆಸಕ್ತಿಗೆ ತನ್ನಲ್ಲಿರುವ ಊಣಯವನ್ನು ಅಂದರೆ ಕೊರತೆಯನ್ನು ನೀಗಬೇಕೆಂಬ ಹಂಬಲವು ಬೇಕು. ಆ ಹಂಬಲವನ್ನು ಶ್ರೀಬಸವೇಶ್ವರನ ಒಂದು ವಚನದಿಂದ ನಾವಿಲ್ಲಿ ಮಂಡಿಸಬಹುದು.

ವಚನ: ತನ್ನ ವಿಚಾರಿಸಲೊಲ್ಲದು, ಇದಿರ ವಿಚಾರಿಸಹೋಹುದೀ ಮನವು. ಏನ ಮಾಡುವೆನೀ ಮನವನು, ಎಂತು ಮಾಡುವೆನೀ ಮನವನು, ಕೂಡಲಸಂಗಮದೇವನ ಶರಣರ ನಚ್ಚದ ಮಚ್ಚದ ಬೆಂದ ಮನವನು?

ಅಥವಾ ಶ್ರೀಮತ್ ಸೂಕ್ಷ್ಮಾಗಮದಲ್ಲಿ ಹೇಳಿದಂತೆ—

ಕಾ ವಾ ಗತಿರ್ಮಮೇತ್ಯೇವಂ ಧ್ಯಾಯಮಾನೋದಿವಾನಿಶಮ್.

ಹಗಲಿರುಳು ನನ್ನ ಗತಿ ಯಾವುದು ಎಂದು ವಿಚಾರಿಸುತ್ತಿರುವ ಆತ್ಮನಿಗೆ ಆಚಾರದಲ್ಲಿ ಅಭಿಲಾಷೆ ಉಂಟಾದಪುದು. ನಮ್ಮ ನಡತೆಯು ನಮ್ಮ ಜ್ಞಾನದ ಮೇಲೆ ಕ್ರಿಯೆಯನ್ನು ಉಂಟುಮಾಡುತ್ತಲೂ ಅದರಿಂದ ಪ್ರತಿಕ್ರಿಯೆಯನ್ನು ಹೊಂದುತ್ತಲೂ ಇರುವುದು. ಈ ಜ್ಞಾನಾಚಾರದ ಕ್ರಿಯೆ ಪ್ರತಿಕ್ರಿಯೆಗಳಿಂದ ನಮ್ಮ ಭಾವವು ಉಂಟಾದಪುದು. ನಮ್ಮ ಪ್ರತಿಯೊಂದು ಆಚಾರವೂ ನಮ್ಮಲ್ಲಿ ಒಂದು ಸಂಸ್ಕಾರವನ್ನು ಹುಟ್ಟಿಸುವುದು. ಆ ಸಂಸ್ಕಾರವು ನಮ್ಮ ಮುಂದಿನ ಜ್ಞಾನಕ್ಕೂ ಮುಂದಿನ ಕ್ರಿಯೆಗೂ ಬೀಜವಾಗುತ್ತಲು ಭಾವವೆನಿಸಿಕೊಂಬುದು. ಒಂದು ಮಲ್ಲಿಗೆ ಹೂವುಂಟು. ಅದನು ನಾನೀಗ ಸಂಪಾದಿಸಿದೆನು. ನನಗೆ ಹಿರಿಯರು ಹೇಳಿದ ಬುದ್ಧಿಯಿಂದಾಗಲಿ ಇಲ್ಲವೆ ಪುರಾತನ ಸಂಸ್ಕಾರದಿಂದಾಗಲಿ ಆ ಹೂವನ್ನು ಲಿಂಗಪೂಜೆಗಾಗಿ ಬಳಸಿದೆನೆಂದರೆ ಆ ಬಳಕೆಯೆ ನನ್ನಲ್ಲಿ ಒಂದು ಸಂಸ್ಕಾರವನ್ನು ಮೂಡಿಸಿ ಬಿಡುವುದು. ಆಗ ಮತ್ತೊಮ್ಮೆ ಮಲ್ಲಿಗೆ ಹೂವನ್ನು ನೋಡಲು ಆ ಭಾವದ ಬಲದಿಂದ ಶಿವಪೂಜೆಗಾಗಿ ಅದನ್ನು ಬಳಸಬೇಕೆಂಬ ಬುದ್ಧಿಯೂ ನಡತೆಯೂ ಉಂಟಾದಪುವು. ಆದುದರಿಂದ ಆಚಾರಗಳಿಗೆ ವೀರಶೈವ ಮತವು ಅತ್ಯಂತ ಮೇಲ್ಮೆಯನ್ನು ಕಲ್ಪಿಸಿರುವುದು. ಒಂದೊಂದು ಆಚಾರದಿಂದಲೂ ಆತ್ಮನು ಸಂಸ್ಕಾರವನ್ನು ಹೊಂದುತ್ತ ಪರಿಶುದ್ಧನಾಗಹತ್ತುವನು. ಈ ಪರಿಶುದ್ಧಿಯಲ್ಲಾದ ಸ್ವಾತ್ಮತತ್ವಪ್ರಕಾಶವೆ ಲಿಂಗವು. ಇಂತು ಆಚಾರವು ನಡತೆಯಲ್ಲಿ ಸಾಧನವಾಗುತ್ತಲೂ ಆ ಸ್ವಾತ್ಮಾಯುಷ್ಕರ್ಣದಲ್ಲಿ ಸಾಧ್ಯವಾಗುತ್ತಲೂ ಹೋಗು



CC-0. Jangamwadi Math Collection, Varanasi. An eGangotri Initiative

ವುದರಿಂದ ಈ ಸಾಧ್ಯಸಾಧನ ಭಾವಗಳನ್ನು ತನ್ನಲ್ಲೊಡಗೊಂಡು ಆಚಾರ ಲಿಂಗವಾಯಿತು. ಈ ಲಿಂಗವು ಲಿಂಗಾಚಾರವೆಂದೂ ಶಿವಾಚಾರವೆಂದೂ ಸದಾಚಾರವೆಂದೂ ತ್ರಿವಿಧವಾಗಿದೆ.

## ಲಿಂಗಾಚಾರವೆಂದರೇನು ?

'ಲಿಂಗಾಚಾರ' ಶಬ್ದವನ್ನು ನಾವು ಹೀಗೆ ಬಿಡಿಸಬಹುದು. ಲಿಂಗಸಿದ್ಧಿಗಾಗಿ ಇರುವ ಆಚಾರವು ಲಿಂಗಾಚಾರವು. ಲಿಂಗವೆ ಆಚಾರವು ಲಿಂಗಾಚಾರವು. ಮೊದಲನೆಯ ವಿಗ್ರಹದಿಂದ ಆಚಾರವು ಸಾಧನವೆಂದೂ ಎರಡನೆಯ ವಿಗ್ರಹದಿಂದ ಅದು ಸಾಧ್ಯವೆಂದೂ ಅರ್ಥವಾದಪುದು. ಈ ಲಿಂಗಾಚಾರದ ಸ್ವರೂಪವೆಂದರೆ ಲಿಂಗವನ್ನು ಧರಿಸುವುದು. ಲಿಂಗವೆಂದರೆ ಅಂಗನಲ್ಲಿ ತಾನು ಇಳಿದು ತನ್ನಲ್ಲಿ ಅಂಗನನ್ನು ಇಳಿಸಿಕೊಳ್ಳುವುದೆಂಬ ವಿವರವನ್ನು ಮೇಲೆ ಹೇಳಿರುವೆವು. ಆದುದ ರಿಂದ ಈ ಅರ್ಥವನ್ನು ಒಂದೊಂದು ಬಗೆಯಲ್ಲಿ ಪ್ರಕಟಿಸುವ ಪ್ರಕಾರವಾಗಿ ಲಿಂಗವು ಇಷ್ಟ, ಪ್ರಾಣ, ಭಾವವೆಂಬ ಮೂರು ವಿಧವನ್ನು ಹೊಂದಿದೆ. ಇಷ್ಟಲಿಂಗವೆಂಬ ಶಬ್ದವು 'ಇಷ್ಟಗತೌ' ಎಂಬ ಗಮನಾರ್ಥಕ ಧಾತುವಿನಿಂದ 'ಇಷ್ಟ ವಾಂಛಾಯಾಮ್' ಎಂಬ ವಾಂಛಾರ್ಥಕ ಧಾತುವಿ ನಿಂದ 'ಯಜ್-ದೇವಪೂಜಾ ಸಂಗತಿಕರಣ ಯಜನ ದಾನೇಷು' ಎಂಬ ಧಾತುವಿನಿಂದ ಹುಟ್ಟಿದೆ. ಅಂದರೆ ಭಕ್ತನ ಶರೀರ ಸಂಗತವಾಗಿ ಪೂಜೆಗೊಂಬ ಶಿವಲಿಂಗವೆಂಬರ್ಥ. 'ಯಜ್' ಧಾತುವಿನಿಂದ 'ಇಷ್ಟ' ಶಬ್ದದ ವ್ಯುತ್ಪತ್ತಿಯನ್ನು ಹೇಳುವಾಗ ಈ ಎಲ್ಲ ಅರ್ಥಗಳು ಒಬ್ಬುಳಿಯಾಗಿ ಬರುವುದರಿಂದ ಅದನ್ನೆ ನಾವು ಈಗ ವಿಚಾರಿಸಿ ಈ ಲಿಂಗದ ಸ್ವರೂಪವನ್ನು ನಮ್ಮ ತಿಳುವಳಿಕೆಗೆ ತಂದು ಕೊಳ್ಳುವುದು ಉಚಿತವು. 'ದೀಕ್ಷಾ' ಶಬ್ದಾರ್ಥವನ್ನು ವಿವರಿಸುವಾಗ 'ದಾನಕ್ಷಪಣರೂಪತ್ವಾತ್ ದೀಕ್ಷಾ' ಎಂದು ಆಗಮನಿರ್ವಚನವನ್ನು ಕಂಡಿರುವೆವು. ಮತ್ತು ದಾನ ಶಬ್ದಾರ್ಥವು 'ದಾನಂ ನಾಮ ಸ್ವವಸತ್ಯೇವ ಯಾ ಸಾ ಜ್ಞಾನ ಕ್ರಿಯಾತ್ಮಕಾ' ಎಂದು ಶಿವಾಗಮಗಳಲ್ಲಿ ಪ್ರಸಿದ್ಧವಾಗಿದೆ. ಅಂದರೆ ಜ್ಞಾನಕ್ರಿಯಾತ್ಮಕವಾದ ತನ್ನ ಉಳುಮೆಯೆ 'ದಾನ' ಶಬ್ದಕ್ಕರ್ಥವು. ಗುರುವಿನಿಂದ ಶರೀರದಲ್ಲಿ ಸಂಗತವಾಗಿ ಜ್ಞಾನಕ್ರಿಯಾತ್ಮಕವಾದ ಅಂಗನ ಉಳುಮೆಯನ್ನು ವ್ಯಕ್ತಪಡಿಸುವ ಲಿಂಗವು ಇಷ್ಟಲಿಂಗವು.

## ಇಷ್ಟಲಿಂಗ ಪ್ರಯೋಜನವು

ಇಷ್ಟಲಿಂಗವನ್ನು ಏಕೆ ಧರಿಸಬೇಕು? ಅದಿಲ್ಲದೆ ಸತ್ಕ್ರಿಯೆ ಸದಾಚಾರಗಳಾಗವೊ? ಎಂಬ ಪ್ರಶ್ನೆಯು ಇಲ್ಲಿ ಬರುವದು. ಸತ್ಕ್ರಿಯೆಗಳೆಂಬಲ್ಲಿ ವೀರಶೈವವು ಲಿಂಗಪೂಜೆ ಲಿಂಗಾಚಾರವನ್ನೆ ಗುರುತಿಸುವುದು. ಸತ್ಕ್ರಿಯೆವೆಂದರೆ ಬರೆ ಒಳ್ಳೇ ಕೆಲಸವಲ್ಲ. ಲಿಂಗಪೂಜಾ ಲಿಂಗಾಚಾರಗಳಿಲ್ಲದ ಕ್ರಿಯೆಗಳು ಎಷ್ಟು ಒಳ್ಳೆಯವಾದರೂ ಅವುಗಳಿಂದ ಬಂಧನವು ಅಳಿಯದೆನ್ನುವರು. ಈ ಸತ್ಕ್ರಿಯೆಯೆ ಉಳಿದ ಸತ್ಕ್ರಿಯೆಗಳ ಆತ್ಮವು. ಅವು ಈ ಸತ್ಕ್ರಿಯೆಗೆ ಅಂಗವು. ಇದಿಲ್ಲದೆ ಅವುಗಳಿಗೆ ಆತ್ಮವಿಲ್ಲ. ಅವುಗಳಿಂದ ಪ್ರಯೋಜನವಿಲ್ಲ. ಈ ಲಿಂಗಾಚಾರಕ್ಕೆ ಸತ್ಕೃತಿಗಳು ಅಂಗವಾಗಿವೆ. ಆದುದರಿಂದ ಶ್ರೀಬಸವೇಶನು ತನ್ನ ಹಲವು ವಚನಗಳಲ್ಲಿ ನೈತಿಕಾಚಾರವಿಲ್ಲದೆ ಲಿಂಗವು ನೆಲೆ ಗೊಳ್ಳದೆಂದು ಹೇಳಿರುವನು.

**ವಚನ:** ಮನೆಯೊಳಗೆ ಮನೆಯೊಡೆಯನಿದ್ದಾನೋ, ಇಲ್ಲವೊ? ಹೊಸ್ತಿಲಲ್ಲಿ ಹುಲ್ಲು ಹುಟ್ಟಿ, ಮನೆ ಯೊಳಗೆ ರಜತುಂಬಿ, ಮನೆಯೊಳಗೆ ಮನೆಯೊಡೆಯನಿದ್ದಾನೋ, ಇಲ್ಲವೊ? ತನುವಿನಲಿ ಹುಸಿ ತುಂಬಿ, ಮನದೊಳಗೆ ವಿಷಯ ತುಂಬಿ, ಮನೆಯೊಳಗೆ ಮನೆಯೊಡೆಯನಿಲ್ಲ, ಕೂಡಲ ಸಂಗಮದೇವಾ!



CC-0. Jangamwadi Math Collection, Varanasi. An eGangotri Initiative

ವಚನ: ತೊರೆಯ ಮೀವ ಅಣ್ಣಗಳಿರಾ, ತೊರೆಯ ಮೀವ ಸ್ವಾಮಿಗಳಿರಾ, ತೊರೆಯಿಂ ಭೋ, ತೊರೆಯಿಂ ಭೋ, ಪರನಾರಿಯ ಸಂಗವ ತೊರೆಯಿಂ ಭೋ। ಪರಧನದಾಮಿಷವ ತೊರೆಯಿಂ ಭೋ, ಇವ ತೊರೆಯದೆ ಹೋಗಿ, ತೊರೆಯ ಮಿಂದರೆ, ಬರುದೊರೆ ಹೋಹುದು, ಕೂಡಲ ಸಂಗಮದೇವಾ॥

ವಚನ: ಕೋಪಿ ಮಜ್ಜನಕ್ಕೆರೆದರೆ ರಕ್ತದ ಧಾರೆ। ಪಾಪಿ ಹೂವನೇರಿಸಲು ಮಸೆವಾಯುಧದ ಗಾಯ। ಕೂಪರನಾರನೂ ಕಾಣೆನು, ಮಾದಾರ ಚನ್ನಯ್ಯನಲ್ಲದೆ। ಕೂಪರನಾರನೂ ಕಾಣೆನು, ಡೋಹರ ಕಕ್ಕಯ್ಯನಲ್ಲದೆ. ವ್ಯಾಪ್ತಿಯುಳ್ಳವ ನಮ್ಮ ಮಡಿವಾಳ ಮಾಚಯ್ಯ ಕಕ್ಕಯ್ಯನಲ್ಲದೆ। ವ್ಯಾಪ್ತಿಯುಳ್ಳವ ನಮ್ಮ ಮಡಿವಾಳ ಮಾಚಯ್ಯ, ನಿನ್ನ ಪತ್ತಿಗರಿವರಯ್ಯ, ಕೂಡಲ ಸಂಗಯ್ಯಾ॥

ಇವುಗಳನ್ನು ನೋಡಿದರೆ ನೈತಿಕಾಚಾರವೆ ಅಂಗ. ಲಿಂಗಾಚಾರವೆ ಲಿಂಗ. ನೈತಿಕ-ಲಿಂಗಾಚಾರಗಳಿಗೆ ಸಾಮರಸ್ಯವನ್ನು ಹೊಂದಿಸುವುದೆ ಲಿಂಗಾಚಾರದ ರಹಸ್ಯವು. ಇಂತಹ ನಿಕಟವಾದ ಸಾಮರಸ್ಯವನ್ನು ಹೊಂದಲು ಲಿಂಗದ ಅರಿವೂ ಲಿಂಗಸಂಬಂಧವೂ ಶರೀರಕ್ಕೆ ಬೇಕು. ಈ ತತ್ವದಿಂದಲೆ ಲಿಂಗಧಾರಣವನ್ನು ವೀರಶೈವ ಧರ್ಮತತ್ವವು ಕೇವಲೀಕರಿಸುತ್ತದೆ.

ಇಂತು ಶರೀರಸಂಗತವಾದ ಲಿಂಗಕ್ಕೆ ನೈತಿಕಾಚಾರವೆ ಲಿಂಗದೊಡನೆ ಬೆಸೆವ ಬೆಸುಗೆಯು ಮತ್ತು ಆ ಲಿಂಗಾಂಗಗಳಿಗೆ ಪರಸ್ಪರ ಸಂಬಂಧವನ್ನು ಚೇತನೀಕರಿಸುವುದು ಮಂತ್ರವು. ಮಂತ್ರವೆಂದರೆ ಮಂತ್ರಾರ್ಥತತ್ವದ ಮನನದಿಂದ ರಕ್ಷಣಗೈವುದೆಂಬರ್ಥ.

ಮನನತ್ರಾಣರೂಪತ್ವಾನ್ಮಂತ್ರ ಇತ್ಯಭಿಧೀಯತೇ

ಲಿಂಗಕ್ಕೆ ಮತ್ತು ಅಂಗಕ್ಕೆ ಸಂಬಂಧವನ್ನುಂಟುಮಾಡುವುದು, ಅಂದರೆ ಆ ಸಂಬಂಧವನ್ನು ಸಮರ್ಥೀಕರಿಸುವುದು ಮಂತ್ರವೆಂದು ಹೇಳಿದೆವು. ಇನ್ನು ಮಂತ್ರಾರ್ಥವನ್ನು ವಿಚಾರಿಸುವಣ 'ಶಿವಾಯ ನಮಃ'ಎಂಬುದು ಐದಕ್ಷರದ ಮಂತ್ರವು. ಇದರಲ್ಲಿ 'ನಮಃ' ಎಂಬ ಅಂಶದಿಂದ ನಮಸ್ಕಾರ ಅಥವಾ ಶರಣಾಗುವಿಕೆಯು ಅರ್ಥವಾಗುವುದು. 'ಶಿವಾಯ' ಎನ್ನುವುದರಿಂದ ಪ್ರಸಿದ್ಧಾರ್ಥದಿಂದ ಶಿವನಿಗೆ ಎಂಬರ್ಥವು ಉಕ್ತವಾದಪುದು. ಆದರೆ ವೀರಶೈವ ಚಿಂತಕರು 'ಶಿವಾಯ' ಎಂಬ ಮೂರಕ್ಷರದಲ್ಲಿ 'ಶಿವ+ಅಯ' ಎಂಬ ಎರಡು ಪದಗಳನ್ನು ಮಾಡಿ ಶಿವನೊಡನೆ ಸಂಬಂಧವೆಂದು ಅರ್ಥ ಮಾಡುವರು. ಅಂದರೆ ಅಂಗನು ಸರ್ವಥಾ ಶಿವನನ್ನು ಶರಣುಹೊಕ್ಕು ಅವನನ್ನು ಆಶ್ರಯಿಸುವುದೆ ಶಿವನೊಡನೆ ಸಂಬಂಧವೆಂದು ಹೇಳುವರು. ವೀರಶೈವ ಶಾಸ್ತ್ರದಲ್ಲಿ ಸಂಬಂಧವೆಂದರೆ ಯಾವಾಗಲೂ ಸಾಮರಸ್ಯವೆಂಬ ಅರ್ಥ. ಲಿಂಗಾಚಾರದಲ್ಲಿ ಈ ಮಂತ್ರಾರ್ಥವು ಅಂಗನು ತನ್ನ ಕ್ರಿಯೆಗಳನ್ನು ಲಿಂಗಕ್ಕರ್ಪಿಸಿ ತನ್ನ ಪ್ರಾಕೃತ ದೇಹಕ್ರಿಯೆಗಳಿಲ್ಲದಿರುವುದೆಂಬುದೆ ಲಿಂಗಾಚಾರದಲ್ಲಿ ಈ ಮಂತ್ರಕ್ಕರ್ಥವು. ಈ ಮಂತ್ರಾರ್ಥವನ್ನು ಚಿಂತಿಸಿ ಅಂಗನು ಲಿಂಗಾಚಾರದಲ್ಲಿ ಲೀನನಾಗುವುದೆ ಈ ಮಂತ್ರಾರ್ಥವು. ಇದಾಗಲು ಅಂಗದ ಮೇಲೆ ಲಿಂಗವು ಅವಶ್ಯವಾಗಿ ಬೇಕು. ಇದುವೆ ಲಿಂಗ ಧಾರಣದ ಮಹತ್ವವು.

ಇಲ್ಲೊಂದು ಪ್ರಶ್ನೆಯು ಹುಟ್ಟುವುದು. ಅಂಗದ ಮೇಲೆ ಶಿಲಾಮಯವಾದ ಲಿಂಗವು ಬೇಕಾಗುವ ಅಗತ್ಯವೇನು? ಅದಿಲ್ಲದೆ ಕೇವಲ ಶಿವಾಚಾರದಿಂದ ಪ್ರಾಕೃತದೇಹದ ಕ್ರಿಯೆಗಳನ್ನು ಅಳಿವುದು ಸಾಧ್ಯವಲ್ಲವೇನು? ಶ್ರವಣ, ಕೀರ್ತನ, ಸ್ಮರಣ, ಪಾದಸೇವನ, ಅರ್ಚನ, ವಂದನ, ದಾಸ್ಯ, ಸಖ್ಯ, ಆತ್ಮನಿವೇದನವೆಂಬ ನವವಿಧ ಭಕ್ತಿಗಳಿಂದ ತನ್ನ ಜೀವನವನ್ನೆ ಶಿವಾರ್ಪಿತವಾಗಿಸಿ ಶಿವಮಯನಾಗುವುದು ಅಶಕ್ಯವೊ? ೬೩ ಮಂದಿ ಪುರಾತನರು ಈ ನವವಿಧ ಭಕ್ತಿಯನ್ನೆ ಆಚರಿಸಿ ಮುಕ್ತರಾಗಲಿಲ್ಲವೆ? ಒಂದುವೇಳೆ ಲಿಂಗವನ್ನು ಅಂಗದ ಮೇಲೆ ಧರಿಸಿದರೂ ಅದು ಶಿಲಾಮಯ



CC-0. Jangamwadi Math Collection, Varanasi. An eGangotri Initiative

ವಾಗಿರುವುದರಿಂದ ದೇಹಸಮನ್ವಯವೆಂದರೆ ದೇಹದಲ್ಲಿ ಏಕಾರ್ಥವಾಗುವ ಬಗೆಯು ಹೇಗೆ? ಧರಿಸಿದ ವಸ್ತ್ರದ ಅಥವಾ ಸಜ್ಜೆಯ ಸೂತ್ರವು ತಪ್ಪಿದರೆ ಇಷ್ಟಲಿಂಗವು ಉರುಳಿ ಬೀಳುತ್ತದೆ. ಈ ಆಕ್ಷೇಪಕ್ಕೆ ಉತ್ತರವು ದೊರೆಯದಿದ್ದರೆ ಉಳಿದ ಆಚಾರಗಳು ಎಂತಾದರಾಗಲಿ ಲಿಂಗಧಾರಣವು ವಿಶ್ವಾಸದ ಒಂದು ಗುರುತಲ್ಲದೆ ತಾತ್ವಿಕವಾದುದಲ್ಲವೆನ್ನಬಹುದು.

ಇದನ್ನು ನಾವು ಉತ್ತರಿಸುವುದು ಅವಶ್ಯವಾಗಿದೆ. ಪುರಾತನರಲ್ಲಿ ಕಲಿಗಣನಾಥನನ್ನು ಉಳಿದು ಮತ್ತು ಮಾದರ ಚೆನ್ನಯ್ಯನನ್ನು ಉಳಿದು ಇತರರು ಅಂಗದಲ್ಲಿ ಲಿಂಗಧರಿಸಿದ್ದರೆಂಬುದು ಕಂಡುಬರುವುದಿಲ್ಲೆಂಬುದು ನಿಜವು. ಕಣ್ಣಪ್ಪನಾಗಲಿ ದೀಪದ ಕಲಿಯಾರನಾಗಲಿ ಅಂಗದ ಮೇಲೆ ಲಿಂಗವನ್ನು ಧರಿಸಿದವರಲ್ಲ. ಶ್ರೀಚೆನ್ನಬಸವೇಶ್ವರ ಪುರಾಣವನ್ನು ಬರೆದ ಶ್ರೀ ವಿರೂಪಾಕ್ಷ ಪಂಡಿತರು ಹೇಳಿದಂತೆ ಈ ಪುರಾತನರಿಗೆ ಕೈಲಾಸದ ಬಾಗಿಲಲ್ಲಿ ಶ್ರೀ ನಂದಿಕೇಶ್ವರನು ಲಿಂಗ ಧಾರಣವನ್ನು ಗೈದು ಮಾರ್ಗದೋರಿಸಿದನೆಂಬುದು ಸರಿಬೀಳದು. ಆದರೆಯೂ ಲಿಂಗಧಾರಣವು ಅವಶ್ಯಕರ್ತವ್ಯವೆಂದು ಶ್ರೀಮದ್ಬಸವಾದಿ ಪ್ರಮಥರ ಸಿದ್ಧಾಂತವು. ಆವುದಾದರೊಂದು ತತ್ವವು ಅವಶ್ಯವಹುದೊ ಅಲ್ಲವೊ ಎಂಬುದನ್ನು ವಿಚಾರಿಸುವಲ್ಲಿ ನಾವು ಆ ವಿಷಯದ ಸುಕರಸಾಧನತ್ವ ವನ್ನೂ ಪರೀಕ್ಷಿಸಬೇಕಾಗುವುದು. ಶರೀರವನ್ನು ಲಿಂಗಾಚಾರಮಯವನ್ನಾಗಿಸಲು ಲಿಂಗಧಾರಣವು ಅತ್ಯಂತ ಸುಕರಮಾರ್ಗವಾಗಿದೆ ಎಂದಾದರೆ ನಮ್ಮ ಸಿದ್ಧಾಂತವು ಸಮಂಜಸವಾಗುವುದು. ಇದ ನೀಗ ಪರೀಕ್ಷಿಸುವಾ. ಶಿವಭಕ್ತಿಗೆ ಶಿವಮಂತ್ರವು ಆವಶ್ಯಕವು. ಶಿವಮಂತ್ರಕ್ಕೆ ಶಿವಲಿಂಗವೆ ವಾಚ್ಯವು. ಮಂತ್ರಕ್ಕೂ ಲಿಂಗಕ್ಕೂ ನಿತ್ಯಸಂಬಂಧವು. ॥ ನಮಃ ಪೀಠಮಿತಿ ಪ್ರೋಕ್ತಮ್ । ಶಿಕಾರೋ ಮಧ್ಯಮೀರಿತಂ ॥ ವಕಾರೋ ಗೋಮುಖಂ ವೃತ್ತಂ । ಯಕಾರೋ ಗೋಲಕಂ ಸ್ಮೃತಮ್ ॥ ಓಂಕಾರೋ ಲಿಂಗಮಾಖ್ಯಾತಂ । ಮಂತ್ರೇ ಲಿಂಗಂ ಪ್ರತಿಷ್ಠಿತಮ್ ॥ ಎಂಬ ಪ್ರಮಾಣದಿಂದ ಲಿಂಗ ಮೂರ್ತಿಯ ಪೀಠಾದ್ಯವಯವಗಳು ಮಂತ್ರದ ವರ್ಣಗಳಾಗಿವೆ. ಗುರು ಉಪದೇಶಿಸಿದ ಮಂತ್ರಕ್ಕೆ ವಾಚ್ಯವಾದ ಲಿಂಗವು ಮಂತ್ರವು ಲಿಂಗದಲ್ಲಿರುವಂತೆ, ಅಂಗದ ಮೇಲಿರುವುದು ಸಮಂಜಸವು. ಮಂತ್ರವು ನಾಲಿಗೆಯಲ್ಲಿ, ಲಿಂಗವು ಗುಡಿಯಲ್ಲಿ; ಅಥವಾ ಮಂತ್ರವು ನುಡಿಯಲ್ಲಿ, ಲಿಂಗವು ಜಗುಲಿ ಯಲ್ಲಿ— ಇಂತೆಂಬುದು ಸಮಂಜಸವಾಗದು. ಹಾಗಾದರೆ ಪುರಾತನರಿಗೆ ಲಿಂಗಸಾಮರಸ್ಯ ವಿದ್ದಿಲ್ಲವೇನು? ಇದ್ದಿತು? ಆದರೆ ಅಷ್ಟೊಂದು ಸುಲಭವಾಗಿರಲಿಲ್ಲ. ಲಿಂಗಕ್ಕೂ ಮಂತ್ರಕ್ಕೂ ಸಮನ್ವಯವಿದ್ದೆ ಇದ್ದಿತು. ಅವರದೊಂದು ಕಷ್ಟತರವಾದ ಸಾಧನೆ. ನಾವು ಇನ್ನು ಕೆಲರು ಅನ್ನುವಂತೆ ಪುರಾತನರಿಗೆ ಕೈಲಾಸದ ಬಾಗಿಲಲ್ಲಿ ಲಿಂಗಧಾರಣವಾಯಿತೆಂದು ಹೇಳಲಾರೆವು. ಈ ದೇಹವು ಪಾರ್ಥಿವವು. ಪಾರ್ಥಿವ ದೇಹಕ್ಕೆ ಪಾರ್ಥಿವ ಲಿಂಗಧಾರಣವೆ ಅವಶ್ಯವಾದದ್ದು. ಕೈಲಾಸ ಬಾಗಿಲಲ್ಲಿ ಪಾರ್ಥಿವ ದೇಹವಿಲ್ಲ. ಆವುದೊಂದು ಉಪಾಯದಿಂದ ಕಾರ್ಯವು ಅತ್ಯಂತ ಸುಲಭವಾದರೆ ಆ ಉಪಾಯವು ಅವಶ್ಯಾಂಗೀಕರಣೀಯವು. ಮತ್ತೇನಂದರೆ ಅಂಗದ ಮೇಲೆ ಲಿಂಗವನ್ನು ಧರಿಸಿ ಆಚರಿಸುವಲ್ಲಿ ಘನತರವಾದ ಸಾಮರಸ್ಯವು ಉಂಟಾಗುವುದು. ಲಿಂಗವಿರಹಿತ ದೇಹದ ಶಿವಕ್ರಿಯೆಗಳಿಂದ ಅಷ್ಟು ನಿಬಿಡವಾದ ಸಾಮರಸ್ಯವು ಜರಗದು. ಈ ಘನವಿರಲ ಸಾಮರಸ್ಯವನ್ನು ನೋಡುವಲ್ಲಿ ಪ್ರತ್ಯಾತ್ಮಸ್ಥಿತಿಯನ್ನು ಲಕ್ಷೀಕರಿಸಬೇಕಲ್ಲದೆ ಭಿನ್ನಾತ್ಮರುಗಳನ್ನು ಹೋಲಿಸಬಾರದು. ಅಂದರೆ ೬೩ ಮಂದಿ ಪುರಾತನರಲ್ಲಿ ಆವನೊಬ್ಬನಗಿಂತ ಲಿಂಗಧಾರಣದ ಅವಶ್ಯಕತೆಯನ್ನು ಸಾರುವ ನಿಮ್ಮಲ್ಲಿ ನಿಬಿಡತರವಾದ ಸಾಮರಸ್ಯವಿದೆಯೊ ಎಂದು ಕೇಳಬಹುದು.



CC-0. Jangamwadi Math Collection, Varanasi. An eGangotri Initiative

ನಾವೆನ್ನುವುದು ಹಾಗಲ್ಲ. ಪುರಾತನರನ್ನೆ ಹಿಡಿದು ಹೇಳಬೇಕಾದರೆ ಆ ಒಬ್ಬೊಬ್ಬ ಪುರಾತನನು ಸಾಧಿಸಿದ ಸಾಮರಸ್ಯವು ಲಿಂಗಧಾರಣದಿಂದ ಎನಿತೊಂದು ಮಡಿಮಿಗಿಲಾಗುತ್ತಿದ್ದಿತು? ಅವರ ಘನತರವಾದ ಭಕ್ತಿಯು ನಮಗಿಲ್ಲವುದರಿಂದ ಲಿಂಗಧಾರಣದಿಂದಲಾದರೂ ನಾವು ಅಷ್ಟು ಸಮ ರಸಭಾವವನ್ನು ಹೊಂದಿರಲಾರೆವು. ಆದರೆಯು ನಮಗೆ ಪರಮಾತ್ಮನು ಕರುಣಿಸಿದ ಭಕ್ತಿಯಲ್ಲಿ ಲಿಂಗಧಾರಣವಿಲ್ಲದೆ ನಮಗಾಗಬಹುದಾದ ಶಿವಸಂಬಂಧಕ್ಕಿಂತಲು ಸಾವಿರಾರು ಮಡಿಯಿಂದ ನಮ್ಮ ಶಿವಸಂಬಂಧವು ಹೆಚ್ಚಾಗಿದೆ ಎಂದು ಹೇಳಬಹುದು. ಹೀಗೆ ಶಿವಸಂಬಂಧವನ್ನು ಘನೀ ಕರಿಸುವಲ್ಲಿ ಲಿಂಗವು ದೇಹಸಮನ್ವಿತವಾಗಿರಬೇಕು. ಸಮನ್ವಯವೆಂದರೆ ಅಂಶಂಶಾಭಾವ ಅಥವಾ ಗುಣಗುಣಿಭಾವವು. ಇವೆರಡರಲ್ಲಿಲ್ಲದೆ ನಿತ್ಯಸಂಬಂಧವು ಉಂಟಾಗದು. ಇದಕ್ಕೆ ನಮ್ಮ ಉತ್ತರವು:—

ಸೂಕ್ಷ್ಮಾಗಮವು ಲಿಂಗದಲ್ಲಿ ಪ್ರಾಣವನ್ನು ನಿಕ್ಷೇಪಿಸಿ ಪ್ರಾಣದಲ್ಲಿ ಲಿಂಗವನ್ನು ನಿಕ್ಷೇಪಿಸಿ ಗುರುವು ಶಿಷ್ಯನ ಅಂಗದ ಮೇಲೆ ಲಿಂಗವನ್ನು ಧರಿಸಬೇಕೆಂದು ಹೇಳಿಯಿದೆ. ಶ್ರೀಮ ದಲ್ಲಮಪ್ರಭು ಈ ಅಷ್ಟಾವರಣದ ನಿಲುಕಡೆಯನ್ನು ಹೇಳಿದ ವಚನವಿವು:

ಕಾಣದುದನರಸುವರಲ್ಲದೆ ಕಂಡುದನರಸುವರೇ। ಘನಕ್ಕೆ ಘನವಾದ ವಸ್ತು ತಾನೆ ಗುರುವಾದ ತಾನೆ ಲಿಂಗವಾದ ತಾನೆ ಜಂಗಮವಾದ ತಾನೆ ಪ್ರಸಾದವಾದ ತಾನೆ ಮಂತ್ರವಾದ ತಾನೆ ತಂತ್ರವಾದ ತಾನೆ ಯಂತ್ರವಾದ ತಾನೆ ಸಕಲವಿದ್ಯಾಸ್ವರೂಪವಾದ। ಇಂತಿವೆಲ್ಲವನೊಳಕೊಂಡು ಎನ್ನ ಕರಸ್ಥಲಕ್ಕೆ ಬಂದ ಬಳಿಕ ಇನ್ನು ನಿರ್ವಿಕಾರ ಕಾಣಾ ಗುಹೇಶ್ವರಾ ॥೧॥

ಆಣವಮಲ ಮಾಯಾಮಲ ಕಾರ್ಮಿಕಮಲವೆಂಬ ಮಲತ್ರಯಂಗಳಂ ಕಳೆದುಳಿದು ನಿರ್ಮಲ ವಾದ ಶಿಷ್ಯನು। ಕಾಯಜೀವದ ಭ್ರಾಂತಿಸೂತಕವ ವಿವರಿಸಿ ಕಳೆದು ನಿಶ್ಶಂಕನಾದ ಗುರುವು। ಉಭಯ ಭಾವದೊಳಗೆ ಆವುದು ಮುಂದು ಆವುದು ಹಿಂದೆಂದಲರಿಯಲಹುದೇ। ಕರಸ್ಥಲಕ್ಕೆ ಕಾರುಣ್ಯವ ಮಾಡಿದರೆ ಮನಸ್ಥಲಕ್ಕೆ ಹಂಗಿಲ್ಲ। ಮನಸ್ಥಲದಲ್ಲಿ ಸೆರಗೊಡ್ಡಿ ಬೇಡಿದರೆ ಕರಸ್ಥಲದ ಲಿಂಗ ಕೈಸಾರಿತ್ತು। ಗುರುಸ್ಥಲದ ನಿಲವು ಪರಸ್ಥಲದಲಡಗಿದರೆ ಭಾವ ಬೆರಗಾಯಿತ್ತು ಗುಹೇಶ್ವರಾ।೨॥

ಇವುಗಳ ಶಬ್ದಾರ್ಥವನ್ನು ನೋಡಿದರೆ ಪ್ರಾಣದಲ್ಲಿ ಲಿಂಗವು ಲಿಂಗದಲ್ಲಿ ಪ್ರಾಣವು ಏಕಾರ್ಥ ವಾಗಿದೆ ಎಂದೂ ಘನಕ್ಕೆ ಘನವಾದ ವಸ್ತುವೆ ಲಿಂಗವಾಗಿ ಕರಸ್ಥಲಕ್ಕೆ ಕೈಸಾರಿತೆಂದೂ ಗೋಚರ ವಾಗುತಲಿದೆ. ಇದನ್ನೆ ಬಿಚ್ಚಿ ಅನುಭವಕ್ಕೆ ಬರುವಂತೆ ಹೇಳುವುದೆ ಈಗ ನಮ್ಮ ಕಾರ್ಯವು.

ಲಿಂಗವೆಂದರೆ ಈ ವಿಶ್ವದ ಸೃಷ್ಟಿ-ಸ್ಥಿತಿ-ಲಯಗಳನ್ನು ತನ್ನಲ್ಲಿ ತೋರಿಸುವ ವಸ್ತು ವೆಂಬರ್ಥ. ಶಿಷ್ಯನ ಈ ದೇಹವು ಸೃಷ್ಟ್ಯಂತರ್ಗತವಾಗಿದೆ. ಆ ಲಿಂಗವು ಸೃಷ್ಟಿಯ ಒಂದೊಂದು ಒಡವೆಯಲ್ಲಿಯೂ ಪರಿಪೂರ್ಣವಾಗಿದೆ. ಸೃಷ್ಟ್ಯಂತರ್ಗತವಾದ ದೇಹಗಳು ಒಂದನ್ನೊಂದು ಹಿಂಗಿ ರುವುವಾದರೂ ಅವುಗಳಲ್ಲಿ ಗೂಢವಾದ ಮೂಲ ವಸ್ತುವು ಒಂದೊಂದರಲ್ಲಿಯು ಪರಿಪೂರ್ಣ ವಾಗಿರುವುದರಿಂದಲೆ ಅನಂತ ದೇಹಗಳು ಪರಸ್ಪರ ಹೋಲಿಕೆಯಿಂದ ಅನಂತ ಸ್ಥಾನಗಳಲ್ಲಿ ತೋರಿ ದಪುವು. ಆ ದೇಹಗಳ ತೋರಿಕೆಯಲ್ಲಿ ಕಾಲಕ್ರಮವಿಲ್ಲ. ಪರಿಚ್ಛಿನ್ನನಾದ ಕುಂಬಾರನು ಮಾಡುವ ಹಲವು ಮಡಕೆಗಳು ಪರಸ್ಪರ ಹೋಲಿಮೆಯನುಳ್ಳುವಾದರೂ ಏಕಕ್ಷಣದಲ್ಲಿ ಹುಟ್ಟುವುದಿಲ್ಲ. ಈ ವಿಶ್ವದಲ್ಲಿ ಒಂದೆ ಕ್ಷಣದಲ್ಲಿ ಅನಂತ ಸಮಾನಾಕಾರವಾದ ದೇಹಗಳು ಹುಟ್ಟುವುವು. ಅನಂತ ಸಮಾನಾಕಾರವಾದ ದೇಹಗಳು ನಾಶಹೊಂದುವುವು. ಅನಂತ ಸಮಾನಾಕಾರವಾದ ದೇಹಗಳು ಜವ್ವನವ ತಳೆದವುವು. ಆದುದರಿಂದ ಈ ವಿಶ್ವನಿಯಂತನಾದ ಪರಮಾತ್ಮನು ಸರ್ವ ದೇಹಗಳಲ್ಲಿಯೂ ಸರ್ವ ಸ್ಥಾನಗಳಲ್ಲಿಯೂ ಪರಿಪೂರ್ಣ ಸ್ಥಿತಿಯಿಂದ ಇರುವನೆಂದು ಅನ್ನಬೇಕು. ವಿಶ್ವದಲ್ಲಿ



CC-0. Jangamwadi Math Collection, Varanasi. An eGangotri Initiative

ಪರಿಪೂರ್ಣನಿರುವಂತೆ ನಮ್ಮ ದೇಹದ ಸರ್ವೇಂದ್ರಿಯಗಳಲ್ಲಿಯೂ ಸರ್ವಾಂಗಗಳಲ್ಲಿಯೂ ಪರಿಪೂರ್ಣನಾಗಿರುವನು. ಈ ಪರಿಪೂರ್ಣನಾದ ಪರಮಾತ್ಮನ ಇರುವು ನಮ್ಮ ಮಲತ್ರಯಗಳಿಂದ ಮರೆಯಾಗಿದೆ. ಆ ಮಲತ್ರಯದ ಸ್ವರೂಪವನ್ನು ನಾವು ಮೇಲೆ ವಿವರಿಸಿರುವೆವು. ಪರಮಾತ್ಮನ ಇರುವನ್ನು ಎಚ್ಚರದೋರುವ ವಾಕ್ಯವು ಮಂತ್ರವು. ಬಿಂದುವಿನಲ್ಲಿ ಪ್ರತ್ಯಾತ್ಮಾನುಭವಕೆ ಬರುವ ತೋರಿಕೆಗಳೂ ಆ ತೋರಿಕೆಗಳ ಶಬ್ದಗಳೂ ಗೂಢವಾಗಿವೆ ಎಂದು ಮೇಲೆ ಹೇಳಿರುವೆವು. ಆ ಬಿಂದುವಿಗೆ ಚೇತನವಾದುದು ಪರಮಾತ್ಮ ಶಕ್ತಿಯು. ‖ ಶಿವತತ್ತ್ವೇ ಪರೇಸೂಕ್ಷ್ಮೇ ಬಿಂದು ರೂಪಂತು ಜಾಯತೇ ‖ ಎಂದು ಶ್ರೀ ಮದ್ವಾತುಲವು ಹೇಳುವುದು. ಈ ಶಕ್ತಿಯೆ ಅಗಾಧ ಲೀಲೆಯಿಂದ ಬಿಂದುವನು ತೋರಿಸಿ ಆ ಬಿಂದುವಿನಲ್ಲಿ ಸರ್ವ ತೋರಿಕೆಗಳನ್ನು ಅಡಗಿಸಿರುವುದು. ಆ ಶಕ್ತಿಯ ಸ್ಫುಟರೂಪವೆ ವೈಖರಿ ಶಬ್ದವು. ಈ ಸ್ಫುಟವೈಖರಿಶಬ್ದವನ್ನೆ ಹಿಡಿದು ಹಿಂದೆ ಹಿಂದೆ ಹೋದಂತೆ ನಾವು ಮೂಲ ಶಕ್ತಿಯನ್ನು ತಲ್ಪುವೆವು. ಆ ತಲ್ಪಿದ ಶಕ್ತಿಯು ಮುಂದೆ ಸಾಗಿದಂತೆ ವೈಖರೀ ಶಬ್ದವನ್ನು ಕ್ರಮಾತ್ಕ್ರಮಾ ವಿಲಾಸದಿಂದ ತಲ್ಪುವೆವು. ಬಿಂದುವಿನ ಆಚೆಯಲ್ಲಿ ಈ ಶಕ್ತಿಯು ನಿಷ್ಕಲ ಪರಶಿವತತ್ವದಲ್ಲಿ ಚಿಚ್ಛಕ್ತಿಯೆಂದು ಲೀನವಾಗಿಹಳು. ನಿಷ್ಕಲ ಪರತತ್ವವು ಚಿದ್ರೂಪವಾಗಿರದಿದ್ದಡೆ ಜಡವಾಗುತಲಿದ್ದಿತು. ಜಡವೆಂದರೆ ಅಸದ್ರೂಪ. ಸರ್ವಜಡಪದಾರ್ಥಗಳು ಚಿತ್‌ಸಂಪರ್ಕದಿಂದ ದೀಪ್ತಿಯನ್ನು ಹೊಂದಿ ಪ್ರಕಾಶಿಸಿದಪುವು. ಶಿವನಲ್ಲಿ ಸಮವೇತವಾದ ಈ ಚಿಚ್ಛಕ್ತಿಯು ಮಂತ್ರಕ್ಕೆ ಮೂಲವಾಗಿಹುದರಿಂದ ಶಿವಬೋಧಕವಾಗಿದೆ. ಆದುದರಿಂದಲೆ ಶ್ರೀ ಮದ್ವಾತುಲವು —

ಆಹ್ವಾನತಃ ಸ್ವನಾಮ್ನಾ ತು ಜನಃ ಸನ್ನಿಹಿತೋ ಯಥಾ ।
ತಥಾ ಮನ್ತ್ರಪ್ರಯೋಗೇಣ ಶಿವಃ ಸನ್ನಿಹಿತೋ ಭವೇತ್ ‖೮‖

ಎಂಬ ಶ್ಲೋಕದಲ್ಲಿ ಈ ಮಂತ್ರವನ್ನು ಶಿವನನ್ನು ಸಂಬೋಧಿಸುವ ನಾಮವೆಂದು ಹೇಳಿತು. 'ನಮಃ ಶಿವಾಯ' ಎಂಬ ಮಂತ್ರದಿಂದ ಚಿಚ್ಛಕ್ತಿಯವರೆಗೆ ತಲ್ಪಿ ಅಲ್ಲಿ ಸ್ಫುಟವಾದ ಶಿವತತ್ವವನ್ನು ಬಿಂದು ಕ್ರಮದಿಂದ ಮೇಲೆ ಮೇಲೆ ಬರುತ್ತ ಎಚ್ಚರದಪ್ಪದೆ ಎಳೆದು ತರುವುದೆ ಮಂತ್ರದ ಕಾರ್ಯವು. ಪ್ರಾಣವು ಮಂತ್ರೋಚ್ಚಾರಣವನ್ನು ಮಾಡುವ ಸಾಧನವು. ಶಬ್ದಾರ್ಥವನ್ನು ನೆನಹಿನಲ್ಲಿಟ್ಟು ಏರುತ್ತಲಿದ್ದ ಶಬ್ದವು ವಾಯುವಿನೊಡನೆ ಸಂಕಲಿತವಾಗಿ ಏಳುವುದು. ಹಾಗೆ ಏಳುವಾಗ ಹೊರಹೊಮ್ಮಬೇಕೆಂಬ ಶಬ್ದವು ವಾಯುವು ಆ ಹೃದಯಾದಿ ಸ್ಥಾನಗಳನ್ನು ಹೊಡೆದಂತೆ ಉಚ್ಚರಿತವಾಗುವುದು. ಉಚ್ಚರಿತವಾಗುತ್ತ ಆ ಶಬ್ದಗತ ಶಕ್ತಿಯೊಡನೆ ಸಮವೇತವಾದ ಶಿವತತ್ವವು ವ್ಯಕ್ತವಾಗುತ್ತ ದೇಹದ ಘಟಕಗಳಲ್ಲಿಯೂ ವ್ಯಕ್ತವಾಗುವುದು. ಆ ಘಟಕಗಳು ಶಿವಕ್ರಿಯಾಮಯವಾಗುತ್ತ ತಮ್ಮಲ್ಲಿ ವ್ಯಕ್ತವಾದ ಶಿವತತ್ವಗಳನ್ನು ಕರಸ್ಥಲದಲ್ಲಿ ಇಷ್ಟಲಿಂಗರೂಪವಾಗಿ ತೋರಿಸಿದಪುವು. ಹಾಗಾದರೆ ಅಂತರ್ಗತಕ್ರಿಯೆಯು ಲಿಂಗಾಕಾರವಾಗಿ ಮಾರ್ಪಡುವುದನ್ನು ನಾವು ಕಾಣುವುದಿಲ್ಲವೇಕೆ ಎನ್ನಬಹುದು. ಅಂತರ್ಗತಕ್ರಿಯೆಯು ದೇಹವನ್ನು ವ್ಯಾಪಿಸಿ ಲಿಂಗಾಕಾರವನ್ನು ಹೊಂದಲು ಪಂಚಸೂತ್ರಘಟಿತವಾದ ಶಿಲಾಲಿಂಗವು ಒಂದು ಆವಶ್ಯಕವಾದ ಉಪಾದಾನವು. ಸಿಂಪೆಯ ಹುಳುವು ರಚಿಸುವ ಮುತ್ತು ಅದರ ಅಂಗದೊಳಗಿರುವ ಸಾಮಗ್ರಿಯಿಂದಲೆ. ಆದರೆ ಆ ಸಾಮಗ್ರಿಯನ್ನು ಕೆದರುವುದಕ್ಕಾಗಿ ಒಂದು ಸೂಕ್ಷ್ಮವಾದ ರೀತಿಯ ಕಣವು ಬೇಕಾದಪುದು. ಅದರಂತೆಯೆ ಶರೀರಾವಯವಗಳಲ್ಲಿ ವ್ಯಕ್ತವಾದ ಶಿವಕ್ರಿಯೆಯು ಈ ಪಂಚಸೂತ್ರಾತ್ಮಕ



CC-0. Jangamwadi Math Collection, Varanasi. An eGangotri Initiative

ವಾದ ಶಿಲಾಲಿಂಗವನ್ನು ಗ್ರಹಿಸಿ ಜಠರಾಗ್ನಿಯು ಅನ್ನವನ್ನು ಜೀರ್ಣಿಸಿ ರಕ್ತವನ್ನು ಮಾಡುವಂತೆ ಈ ಕ್ರಿಯಾಶಕ್ತಿಯು ಈ ಶಿಲಾಮಯ ಲಿಂಗವನ್ನು ಗ್ರಹಿಸಿ ತನ್ನೊಳಗೆ ಏಕಾರ್ಥವನು ಮಾಡಿ ದೇಹಸಮವೇತವನ್ನು ಮಾಡುತ್ತದೆ.

ಹೀಗೆ ಶರೀರದಲ್ಲಿ ಲಿಂಗಧಾರಣವಾದುದಲ್ಲದೆ ಈ ಶರೀರದ ಕ್ರಿಯೆಗಳು ಮಾಂಸಪಿಂಡದ ಕ್ರಿಯೆಗಳಲ್ಲದೆ ಲಿಂಗಕ್ರಿಯೆಗಳಾಗವೆಂದು ವೀರಶೈವ ಲಿಂಗಾಚಾರದ ತತ್ವಸಿದ್ಧಾಂತವು. ಮಾಂಸ ಪಿಂಡ ಕ್ರಿಯೆಗಳಂದರೇನು? ಪ್ರಾಣಿಮಾತ್ರಗಳಲ್ಲಿ ತೋರುವ ಹಸಿವು-ತೃಷೆ-ನಿದ್ರಾದಿಗಳೂ ಕಾಮ ಕ್ರೋಧಾದಿಗಳಿಗೆ ಇಂಬಾದ ವ್ಯವಹಾರಗಳೂ ಮಾಂಸಪಿಂಡ ಕ್ರಿಯೆಗಳೆನಿಸುತ್ತವೆ. ಒಂದೊಂದು ಪ್ರಾಣಿಮಾತ್ರದಲ್ಲಿಯೂ ಈ ಮಾಂಸಪಿಂಡ ಕ್ರಿಯೆಗಳಲ್ಲದೆ ಅಂತರ್ಗತನಾದ ಪರಶಿವನ ಸತ್ತ್ವವನ್ನು ತೋರ್ಪಡಿಸುವ ಅಥವಾ ವ್ಯಕ್ತೀಕರಿಸುವ ಮಂಗಲಮಯವಾದ ಆ ವ್ಯವಹಾರಗಳೂ ಉಂಟು. ಆದರೆ ಆ ವ್ಯವಹಾರಗಳ ಮೇಲೆ ಅಜ್ಞಾನದ ಹೊರಿಯಿಂದಾದ ಪಟಲವು ಅವುಗಳ ವಿಕಾಸಕ್ಕೆ ಅವಕಾಶವನ್ನೀಯದೆ ಅವುಗಳನ್ನು ಅಣಗಿಸುತ್ತ ಮುಂದೆ ಬರಗೊಡುವುದಿಲ್ಲ. ಪ್ರಾಣಿಯಲ್ಲಿರುವ ವಾಸನೆಗಳು ಉದ್ಬೋಧಹೊಂದಿ ಪ್ರಕಾಶಿಸಲು ವಯೋಮಾನವೂ ಉತ್ತೇಜಕಗಳೂ ಬೇಕಾದವುವು. ಹಸುಳತನದಲ್ಲಿ ಈ ವಾಸನೆಗಳಿಗೆ ಅವಕಾಶವಿರದರಿಂದ ಬಾಲ್ಯದ ಮನೋಹರತ್ವವು ಅಂತರ್ಗತವಾದ ಶಾಂತಿಯದೊಂದು ಕುರುಹಾಗಿದೆ. ಆ ಕಾಲದಲ್ಲಿ ಯೋಗ್ಯನಾದ ಶಿವಯೋಗಸಂಪತ್ತಿಯನುಳ್ಳ ಗುರುವು ತನ್ನ ಸಂಸ್ಕಾರಗಳಿಂದ ಲಿಂಗಧಾರಣಂಗೈಯಲು ಆಗಾಗಿನ ಸದ್ಬೋಧಗಳು ಶಿವಕ್ರಿಯೆಗಳನ್ನು ಅರಳಿಸುತ್ತ ದೇಹದ ಪ್ರಾಕೃತಕ್ರಿಯೆಗಳು ಮಾರ್ಪಟ್ಟು ಲಿಂಗಕ್ರಿಯೆಗಳಾಗುವುವು.

ಲಿಂಗಧಾರಣವನ್ನು ಗೈವ ಗುರುವು ಶಿಷ್ಯನಿಗೆ ಹೊರತಾದವನಲ್ಲ. ಆ ಶಿಷ್ಯನ ಅಂತರಂಗದ ಶಿವನೆ ಬಹಿರಂಗದಲ್ಲಿ, ಅಂತರಂಗ ಬಹಿರಂಗದ ಭೇದವ ಕಳೆದು, ಗುರುವೆನಿಸುವನೆಂದು ಈ ತತ್ವಶಾಸ್ತ್ರದ ಸಿದ್ಧಾಂತವು. ಗುರು, ಲಿಂಗ, ಜಂಗಮ, ಪ್ರಸಾದ, ಪಾದೋದಕ, ಭಸ್ಮ, ರುದ್ರಾಕ್ಷ, ಮಂತ್ರಗಳೆಂಬ ಅಷ್ಟಾವರಣಗಳು ಭಕ್ತನಿಂದಲೆ ಹೊರಟು ಭಕ್ತನಲ್ಲಿಯೆ ಲಯವಾದವುವು. ಗುರುವು ಶಿಷ್ಯನಂಗದಿಂದ ಹೊರಟು ದೀಕ್ಷಾಗುರುವೆನಿಸುವನು. ಈ ಹೊರಗೆ ನಿಂತ ಭಾವವು ನಿಜವಾಗಿಯೂ ಹೊರಗಿನದಲ್ಲ. ಗುರುತತ್ವದ ರಹಸ್ಯವನರಿಯದ ಮಾನವನಿಗೆ ಅದೊಂದು ಹೊರಗಿನ ರೂಪು. ಹೊರಗೆ ನಿಂದುದೆ ಆ ಗುರುತತ್ವವು. ಪುನಃ ತಾನು ಹೊರಹೊಮ್ಮಿದ ಭಕ್ತನಲ್ಲಿಯೆ ಲಯವಾದವುದು. ವೀರಶೈವ ತತ್ವದಲ್ಲಿ ಅರಿಯಲ್ಪಡತಕ್ಕ ವಸ್ತುವೆಂದರೆ ಅಂಗನೆಂಬ ಭಕ್ತನೆ. ದೀಕ್ಷಾಗುರುವಾಗಿ ಇಷ್ಟಲಿಂಗ ಸಂಬಂಧವನು ಶರೀರದಲಿ ಹೊಂದಿಸಿ ಆ ಗುರುವು ಶಿಕ್ಷಾರೂಪದಿಂದ ಅಂತರಂಗವನ್ನು ವೇಧಿಸಲು ತೊಡಗುವನು. ದೀಕ್ಷೆಯೆಂದರೆ ಶಿಷ್ಯನ ಅಂಗವನ್ನು ಶಿವನ ಅಂಗವೆಂದು ಭಾವಿಸಿ ಆ ಭಾವ ಪೂರ್ಣ ದೃಷ್ಟಿಯಿಂದ ಅದನ್ನು ನೋಡಿ ಆ ಅಂಗವು ಶಿವಮಂತ್ರಾತ್ಮಕವಾದುದೆಂದು ಮನವರಿತು ಆ ಶಿಷ್ಯನ ದೇಹದಲ್ಲಿ ಅತಿಸೂಕ್ಷ್ಮವಾಗಿ ಅಡಗಿದ ಮೋಡದೊಳಗಿನ ಮಿಂಚಿನಂತಹ ಶಿವಕಲೆಯನ್ನು ಹಿಡಿದು ಸುಸಂಸ್ಕೃತವಾದ ಲಿಂಗದಲ್ಲಿ ನೆಲೆಗೊಳಿಸಿ ಆ ಲಿಂಗವನ್ನು ಶಿವಕಲಾಸ್ಥಾನವಾದ ದೇಹದಿಂದ ತೊಲಗಿಸಿದರೆ ಕಲೆಯು ನಿಲ್ಲದೆಂದು ಅದನ್ನು ಶರೀರದಲ್ಲಿಯೆ ನಿಲ್ಲಿಸುವನು. ಆಗ ಆ ಕಲೆಯು ತನ್ನ ಗೂಢಸ್ಥಾನವನ್ನು



CC-0. Jangamwadi Math Collection, Varanasi. An eGangotri Initiative

ಪುನಃ ಪ್ರವೇಶಿಸಲು ಒಳಗಿಂದ ಹೊರಗೂ ಹೊರಗಿಂದ ಒಳಗೂ ಕಲಾಪ್ರವೇಶವಾಗಿ ಭಕ್ತನ ಅಂಗವೆಲ್ಲ ಲಿಂಗಮಯವಾದಪುದು.

ಹೀಗೆ ಲಿಂಗಕಳೆಯು ಅಂತರಂಗವನ್ನು ವ್ಯಾಪಿಸಲು ಬರುವ ಅಡ್ಡಿಗಳನ್ನು ದೂರ ಮಾಡಲು ಗುರುವು ಹೇಳಬೇಕಾದ ಬೋಧವೇ ಶಿಕ್ಷೆಯು. ಅತ್ಯಂತ ಪವಿತ್ರ ಗಾತ್ರಗಳಲ್ಲಿ ಇಂತಹ ಅಡ್ಡಿಯು ಇರದರಿಂದ ಲಿಂಗಧಾರಣ ಮಾತ್ರದಿಂದಲೆ ಶಿವತ್ವವಾದಪುದು. ಮತ್ತು ಸ್ವಾನುಭವವು ನೆಲೆಗೊಳ್ಳುವುದು. ಈ ಸ್ಥಿತಿಯನ್ನುದ್ದೇಶಿಸಿ ಶರಣರ ವಚನಗಳಲ್ಲಿಯೂ ಆಗಮ ಶಾಸ್ತ್ರಗಳಲ್ಲಿಯೂ ಲಿಂಗಧಾರಣ ಮಾತ್ರದಿಂದ ಶಿವತ್ವವಹುದೆಂದು ಉಕ್ತಿಯುಂಟು.

ಲಿಂಗಧಾರಣಮಾತ್ರೇಣ ಶಿವತ್ವಪ್ರಾಪ್ತಿರೇವ ಹಿ ॥

ಎಂಬ ಶ್ರೀಮತ್‌ಪಾರಮೇಶ್ವರ ವಚನವು ಅಂತಹ ವಚನಗಳಲ್ಲಿ ಒಂದಾಗಿದೆ. ನಮ್ಮಂತಹ ಸಾಮಾನ್ಯರಲ್ಲಿ ಇದು ಅಭ್ಯಾಸ ಸಾಧ್ಯವಾಗಿದೆ. ಈ ಅಭ್ಯಾಸ ಕ್ರಮವೆ ಷಟ್ಸ್ಥಲ ಸಿದ್ಧಾಂತವು. ಗುರುವು ಶಿಕ್ಷೆಯಿಂದ ಶಿಷ್ಯನಾತ್ಮದ, ಮಂತ್ರದ, ಲಿಂಗದ, ಗುರುವಿನ ಅಭೇದ ಸಾಮರಸ್ಯವನ್ನು ಮನಗಾಣಿಸುವನು.

ಗುರುಲಿಂಗಾತ್ಮಮಂತ್ರಾಣಮೈಕ್ಯಂ ಸಂಭಾವಯೇತ್ ಸುಧೀಃ ॥

ಎಂದು ವೀರಶೈವದ ಮಾರ್ಗವು ತಾನು ಗುರುವು ಲಿಂಗವು ಮಂತ್ರವು ಎಂಬಿವುಗಳ ಏಕತ್ವವನು ಅನುಸಂಧಾನ ಮಾಡಬೇಕೆಂಬುದೆ ಈ ಶಿಕ್ಷಾ ವಿಷಯವು. ಈ ಶಿಕ್ಷೆಗೆ ಬೇಕಾದ ಆಚಾರಾದಿ ಸಂಪತ್ತಿಯೆ ಭಕ್ತನ ಕ್ರಿಯಾಚರಣವು. ದೀಕ್ಷೆಯಿಂದ ಕೋಮಲ ಬುದ್ಧಿಗೆ ಹೊರಗೆ ಕಂಡ ಗುರುವನ್ನು ಭಕ್ತನು ತನ್ನಿಂದಲು ಲಿಂಗದಿಂದಲು ಮಂತ್ರದಿಂದಲು ಬೇರೆ ಎಂದು ಭಾವಿಸಿದ್ದನು. ಈ ಭಾವವು ಸಲ್ಲದು. ಇವೆಲ್ಲ ಒಂದೆಯಾಗಿವೆಯೆಂಬ ಭಾವವೆ ಸಮರಸ ಸಿದ್ಧಾಂತವು. ಇಂತಹ ಸುಶಿಕ್ಷಣದಿಂದ ಸ್ವಾನುಭಾವವು ದೃಢವಾಗಲು ಗುರುವು ತನ್ನಿಂದ ಭಿನ್ನವಲ್ಲ ಎಂಬ ಬೋಧವು ಅಳವಡುವುದು. ಗುರುಲಿಂಗ ತ್ರಿವಿಧದಲ್ಲಿ ದೀಕ್ಷಾ, ಶಿಕ್ಷಾ, ಸ್ವಾನುಭವವೆಂಬ ತ್ರಿವಿಧತ್ವವನ್ನು ಹೇಳುವುದು ಇದೇ ರಹಸ್ಯವನ್ನು ಒಳಗೊಂಡಿದೆ.

ವೀರಶೈವ ಸಿದ್ಧಾಂತದ ಪರಿಯು ಹೀಗಿರುವುದರಿಂದ ವರ್ಣಧರ್ಮದ ನಡೆತೆಗೆ ಇಲ್ಲಿ ಆಸ್ಪದವಿಲ್ಲ. ಗುರುವು ಬ್ರಾಹ್ಮಣನು. ಶಿಷ್ಯನು ಬ್ರಾಹ್ಮಣಾದಿ ತ್ರಿವರ್ಣದಲ್ಲಿ ಒಬ್ಬನು ಎಂಬ ಜಾತಿವಾದವು ಇಲ್ಲಿ ಸಲ್ಲದು. ತಾನು ಜಪಿಸುವ ಮಂತ್ರವು ತನ್ನ ಪ್ರಾಣಸಂಗತವಾದ ತನ್ನ ವಿಮರ್ಶರೂಪವು. ತಾನು ಪೂಜಿಸುವ ಲಿಂಗವು ತನ್ನ ಶಿವಕ್ರಿಯಾಮಯವಾದ ಚೈತನ್ಯವು. ತಾನು ಇವುಗಳ ಪ್ರಕಟತೆಯನ್ನು ತನ್ನಿಂದ ಭಿನ್ನವಾಗಿ ಅನುಭವಿಸುವ ಚಿದಾತ್ಮನು. ಈ ಚಿದಾತ್ಮನೆಂದರೆ ಅಖಂಡ ಜ್ಞಾನಕ್ರಿಯಾಮಯನು. ಇಂತಿರಲು ಗುರುವಿಗೊಂದು ತನಗೊಂದು ಭಿನ್ನ ಜಾತಿಗಳೆಲ್ಲಿಂದ ಬರಬಹುದು? ಹಾಗಾದರೆ ಪೂಜ್ಯಪೂಜಕಭಾವಗಳು ಅಳಿದು ಹೋಗ ಬಹುದಲ್ಲ? ಪೂಜ್ಯಪೂಜಕ ಭಾವದ ಸ್ಥಿತಿಗೆ ಜಾತಿಯು ಪ್ರಯೋಜಕವಲ್ಲ. ಜಾತಿಭೇದದಿಂದ ಪೂಜ್ಯಪೂಜಕ ಭಾವವು ಸಮಗ್ರತೆಯನು ಹೊಂದಲಾರದು. ನಾವು ಪೂಜಿಸುವ ಶಿವನು ನಮ್ಮಿಂದ ಬೇರಲ್ಲವೆಂಬ ಭಾವವೆ ಉತ್ಕೃಷ್ಟಪೂಜೆಯು.

ಆತ್ಮತ್ವೇನ ನಮಸ್ಕಾರಸ್ತದುತ್ಕೃಷ್ಟನಮಸ್ಕೃತಿಃ ॥



CC-0. Jangamwadi Math Collection, Varanasi. An eGangotri Initiative

ಆ ಪರಶಿವನನ್ನು ಆತ್ಮರೂಪನೆಂದು ನಮಸ್ಕರಿಸುವುದೆ ಉತ್ಕೃಷ್ಟವಾದ ಅವನ ನಮಸ್ಕೃತಿಯು. ಈ ಭಾವವನ್ನೆ ಶ್ರೀಮನ್ನಿಜಗುಣ ಶಿವಯೋಗಿಗಳು:—

ಸೋಹಂ ಭಾವ । ದಾದರಣೆಯಳಿಯದಿರಲದೆ ಪ್ರದಕ್ಷಿಣವು ॥೪॥

ಎಂದು ಹೇಳುವರು. ಶ್ರೀಚೆನ್ನಬಸವೇಶ್ವರ ವಚನವಿವು:-

ಹರ ತನ್ನ ರೂಪ ತೋರಬೇಕೆಂದು ಗುರುವಾಗಿ ಬಂದು ಮನಸ್ಥಳಕ್ಕೆ ಮಂತ್ರವಾವ ತನುಸ್ಥಳಕೆ ಪ್ರಸಾದವಾದ ಕರಸ್ಥಳಕ್ಕೆ ಲಿಂಗವಾದ । ಇಂತಿ ತ್ರಿವಿಧದಲ್ಲಿ ತ್ರಿವಿಧ ಸಾಹಿತ್ಯವಾದನಯ್ಯಾ ಕೂಡಲ ಚೆನ್ನಸಂಗನಬಸವಣ್ಣನು ॥೨೧॥

ಮಾಂಸಪಿಂಡವೆಂದೆನಿಸದೆ ಮಂತ್ರಪಿಂಡವೆಂದೆನಿಸದೆ ಬಸವಣ್ಣ ವಾಯುಪ್ರಾಣಿಯೆಂದಿನಿಸದೆ ಲಿಂಗಪ್ರಾಣಿಯೆಂದೆನಿಸಿದೆ ಬಸವಣ್ಣ । ಜಗದ್ಭರಿತನೆಂಬ ಶಬ್ದಕ್ಕೆ ಆಗಲಿಸದೆ ಶರಣ ಭರಿತ ಲಿಂಗವೆನಿಸದೆ ಕೂಡಲಚೆನ್ನಸಂಗನಬಸವಣ್ಣ ॥೨೩॥

ಸೆರೆವಿಡಿದಂಗೆ ಕರುಣೆ ಕಣ್ದೆರೆವೆಯ ಮಾಡಬೇಕೆಂದು ಸುರಹಿಂದೆ ಬಂದ ಕಾಯದ ಕರ್ಮವ ಕಳೆದು ಗುರುಲಿಂಗ ಜಂಗಮವ ಕರುಣಿಸಿ ಕಣ್ದೆರೆವೆಯ ಮಾಡಿದ ಪ್ರಾಣಲಿಂಗ ಸಂಬಂಧವೆಂತಿದ್ದುದೆಂದರೆ— ಆನೆ ನುಂಗಿದ ನೋಟದಂತೆ, ಬಯಲು ನುಂಗಿದ ಬ್ರಹ್ಮಾಂಡದಂತೆ, ಮುತ್ತು ನುಗಿಂದ ಜಲದಂತೆ, ಪುಷ್ಪ ನುಂಗಿದ ಪರಿಮಳದಂತೆ, ಅಗ್ನಿ ನುಂಗಿದ ಕರ್ಪುರದಂತೆ ಇಪ್ಪ ಮಹಾನುಭಾವರ ನುಡಿಗೆ ಗುರಿಯಾದೆ ನಾಗಿ ಎನ್ನ ಪರಿಯಾಯ ಕೆಟ್ಟಿತಯ್ಯಾ ಕೂಡಲಚೆನ್ನಸಂಗಮದೇವ ॥೨೪॥

ಏಕತ್ವಾನುಸಂಧಾನದಿಂದ ಅಲ್ಲದೆ ಸಾಮರಸ್ಯಾನುಭವವು ಉಂಟಾಗದು. ಈ ಅನು ಸಂಧಾನಕ್ಕೆ ತನ್ನ ಕ್ರಿಯೆಯಲ್ಲಿ ಅಂಗೀಕರಿಸಿದ ಗುರುಲಿಂಗಾದಿಗಳಲ್ಲಿ ಪ್ರಾಕೃತ ದೃಷ್ಟಿಯಿಂದ ತೋರುವ ಭೇದಕಾರಣವಾದ ಗುಣಗಳನ್ನು ತಿರಸ್ಕರಿಸಿ ಧ್ಯಾನಪರನಾಗಬೇಕೆಂಬ ಸಾಧನ ವಿಶೇಷವನ್ನು ಗುರುವು ಉಪದೇಶಿಸುವ ಮೊದಲು ಪ್ರಥಮ ಪೀಠಿಕೆಯಾಗಿ ಹೇಳುವ ಉಪದೇಶ ವಿದು: 'ಗುರುವಿನಲ್ಲಿ ಗುಣವನೆಣಿಸಬೇಡ. ಲಿಂಗದಲ್ಲಿ ಕಠಿಣವನರಸಬೇಡ. ಜಂಗಮದಲ್ಲಿ ಕುಲವನೆಣಿಸಬೇಡ. ಪ್ರಸಾದದಲ್ಲಿ ರುಚಿಯನೆಣಿಸಬೇಡ' ಈ ಸದುಪದೇಶದ ಸಾರವನ್ನು ವಿವರಿಸುವ ಮೊದಲು ಇದರ ರಹಸ್ಯವನರಿಯದೆ ಈಗ ಲಿಂಗವಂತರೆನಿಸಿಕೊಂಬ ಸಮಾಜದಲ್ಲಿ ಉಂಟಾದ ಅನರ್ಥಭಾವನೆಗಳನು ಅಲ್ಲೆನದಿದ್ದರೆ ಅವು ಈ ಸದುಪದೇಶದ ಫಲಗಳೆನಿಸಿ ವೀರಶೈವ ಸಿದ್ಧಾಂತವೆ ಇಂತಹುದೆಂಬ ಕಷ್ಟಕಲ್ಪನವು ತೋರಬಹುದು. ಹಲವು ಪುರಾಣ ಪ್ರಬಂಧಗಳಲಿ ನಮಗೆ ಕೇಳಿ ಬರುವ ಕಥೆಗಳ ನೀತಿಯು ಈಗಿರುವ ಕಷ್ಟಕಲ್ಪನೆಗಳಿಗೆ ಪೋಷಕವಾಗಿದೆ. ಗುರುವಿ ನಲ್ಲಿ ಗುಣವನೆಣಿಸಬೇಡವೆಂಬುದನ್ನು ಸಾಮಾನ್ಯ ಜನವು ಗುರವು ಎಂತಹ ದುರಾಚಾರಿಯಾಗಿರ ಬಹುದು ಉನ್ಮಾರ್ಗಗಾಮಿಯಾಗಿರಬಹುದು ಅವನನ್ನು ಹೊಂದಿ ನಾವು ಕೃತಾರ್ಥರಾಗಬಹುದು ಎಂಬ ತಿಳುವಳಿಕೆಯನ್ನು ತಳೆದಿರುವರು. ಇದು ಸಮಂಜಸವಾದುದಲ್ಲ. "ಹರ ತನ್ನ ರೂಪ ತೋರಬೇಕೆಂದು" ಗುರುವಾದನೆಂದು ಶರಣರ ಉಕ್ತಿಯು. ಇಷ್ಟು ಘನವಾದ ಯೋಗ್ಯತೆಯ ನುಳ್ಳ ಗುರುವು ಅವಗುಣಿಯಾಗಿರುವುದು ಶಕ್ಯವೊ? ಹಾಗಾದರೆ ಗುರುವಿನಲ್ಲಿ ಗುಣವನೆಣಿಸಬೇಡ ವೆಂಬ ಉಕ್ತಿಯ ತಾತ್ಪರ್ಯವೇನು? ಅದರ ತಾತ್ಪರ್ಯವನ್ನು ಲಿಂಗದಲ್ಲಿ ಕಠಿಣವನರಸಬೇಡೆಂಬ ಉಕ್ತಿಯು, ಪ್ರಸಾದದಲ್ಲಿ ರುಚಿಯನರಸಬೇಡೆಂಬ ಉಕ್ತಿಯ ಸಂಬಂಧದೊಡನೆ ನಾವು ಅರಿಯ ಬಹುದು.



CC-0. Jangamwadi Math Collection, Varanasi. An eGangotri Initiative

ಲಿಂಗವು ಶಿಲಾಮಯವಾಗಿರುವುದರಿಂದ ಅದರಲ್ಲಿ ಕಠಿಣತ್ವವು ಗೋಚರಿಸಿದಪುದು. ಪ್ರಸಾದವು ಅನ್ನಮಯವಾಗಿ ಅದರಲ್ಲಿ ಷಡ್ರುಚಿಗಳು ತೋರಿದಪುವು. ಲಿಂಗದಲ್ಲಿ ಕಠಿಣತ್ವವನ್ನೂ ಪ್ರಸಾದದಲ್ಲಿ ರುಚಿಯನ್ನೂ ನೋಡಿದರೆ ಲಿಂಗವು ಶಿಲಾಮಯವಾಗಿಯೂ ಪ್ರಸಾದವು ಅನ್ನ ಮಯವಾಗಿಯೂ ಮೊದಲಿದ್ದಂತೆ ಉಳಿದಪುವು. ಅದೆ ಆ ಲಿಂಗವನ್ನು ಗುರುವು ತೋರಿಸಿದ ಮಾರ್ಗದಿಂದ ಮಂತ್ರರೂಪವಾಗಿ ಕಂಡುದಾದರೆ ಆ ಲಿಂಗವು ಪೂಜಾ ಧ್ಯಾನಗಳಿಗೆ ಅಂಗವಾಗಿ ಫಲಪ್ರದವಾದಪುದು. ಪ್ರಸಾದವು ಅನ್ನದ ಷಡ್ರುಚಿಗಳಿಂದ ನಾಲಗೆಯಲ್ಲಿ ನಾಲಗೆಯ ಮುಖ ದಿಂದ ಶರೀರದಲ್ಲಿ ಮನೋವಿಕಾರಗಳನ್ನು ಹುಟ್ಟಿಸಿ ನಮ್ಮ ಲೋಲುಪತೆಯನ್ನು ಹೆಚ್ಚಿಸುವುದು. ಹಾಗಲ್ಲದೆ ಗುರೂಕ್ತಮಾರ್ಗದಿಂದ ಮಂತ್ರಮಯವಾದ ಜಿಹ್ವಾವ್ಯಾಪಾರದಿಂದಲು ಲಿಂಗದಲ್ಲಿ ನಟ್ಟ ನೇತ್ರದೃಷ್ಟಿಯಿಂದಲು ಶಿವಪೂಜಾ ಪವಿತ್ರವಾದ ಹಸ್ತಸ್ಪರ್ಶದಿಂದಲು ಉಪಭೋಗಿಸಲು ಆತ್ಮನ ಅಂತಃ ಪ್ರಸನ್ನತೆಯೆ ಪ್ರಸಾದವೆಂಬ ಭಾವವನ್ನು ತೋರಿಸುವುದು. ಅದರಂತೆಯೆ ಗುರುವು ನರರೂಪದಿಂದಿಹುದರಿಂದ ಅವನ ಮನುಷ್ಯತ್ವ ಗುಣವು ಮೇಲ್ಮೆಯನು ಹೊಂದಿದರೆ ಗುರು ಬೋಧವು ನಿರರ್ಥವಾಗಿ ಪರಿಣಮಿಸುವುದು. ಗುರುವಿನಲ್ಲೆ ಗುಣವನೆನಿಸಬೇಡವೆಂದರೆ ಅವನ ನರತ್ವವನೆಣಿಸಬೇಡವೆಂಬರ್ಥ. ಹಾಗಲ್ಲದೆ ಸದ್ಗುಣಗಳನರಸಬೇಡೆಂಬ ಅರ್ಥವಾದರೆ ಶಾಸ್ತ್ರ ಗಳಲ್ಲಿ ಹೇಳಿದ ಗುರುರೂಪ ಪ್ರದರ್ಶಕಗಳಾದ ವಿಶೇಷಣಗಳು ವ್ಯರ್ಥವಾದಪುವು.

ಗುರುವು ಲಿಂಗಧಾರಣವಂಗೈಯಲು ಶಿಷ್ಯನ ಸರ್ವದುರ್ಗುಣಗಳು ಕಳೆವವೆಂದು ಶಿವ ಶರಣರ ವಚನಗಳು ಸಾರಿದಪುವು.

**ವಚನ:** ಗುರುಕಾರುಣ್ಯ ಹಸ್ತಮಸ್ತಕ ಸಂಯೋಗದಲಿ ಪೂರ್ವಗುಣವಳಿದು ಪುನರ್ಜಾತನಾಗಿ ಕರಣಾ ದಿಗಳ ಕಳೆದು ಶಿವಲಿಂಗದಲ್ಲಿ ಉಳಿದು ಅನುಪಮಸುಖಸಾರಾಯ ಶರಣನೆನಿಸಿ ಇದನರಿದು ಲಿಂಗದಲಿ ಇದ್ದೆ । ಅರಿದು ಜಂಗಮದಲ್ಲಿ ಕರುಣವ ಪಡೆದು ಭವಿಯನೊಲ್ಲೆನೆಂಬು ಬೇರೆ ನಿಂದ ಕಾರಣ ಕೂಡಲ ಚೆನ್ನಸಂಗಮ ದೇವಾ ನಿಮ್ಮ ಶರಣರ ಭವಕಲ್ಪಿತವ ಕಳೆದಾ ॥೨೫॥

ಶಿಷ್ಯನಿಗೆ ಗುರುವಿನ ಹಸ್ತಸಂಪರ್ಕದಿಂದ ಈ ಗುಣಗಳುಂಟಾಗಲು ಆ ಗುರುವಿಗೆ ಅದೆ ದೀಕ್ಷೆಯಿಂದ ಇವು ಉಂಟಾಗಿರಬೇಕೆಂಬುದು ಸಹಜವಲ್ಲವೆ? ಹಾಗಾದರೆ ನರತ್ವದ ಗುಣ ಗಳಾವುವು? ಬಾಲ್ಯ, ಯೌವನ, ಸ್ಥವಿರತ್ವಗಳೆಂಬ ವಯೋಮಾನದಿಂದ ಬರುವ ಗುಣಗಳು. ಸೌಂದರ್ಯ, ಕುರೂಪಗಳೆಂಬ ದೇಹಾಕಾರ ಗುಣಗಳು. ಮಿತವಚನ ವಾಗ್ಮಿತ್ವಗಳೆಂಬ ಪಾಂಡಿತ್ಯ ಗುಣಗಳು ಇಂತಿವುಗಳನ್ನು ಅರಿಸಬೇಡವೆಂಬುದೆ ಗುರುವಿನಲ್ಲಿ ಗುಣಗಳನರಸಬೇಡೆಂಬ ವಚನದ ತಾತ್ಪರ್ಯವು. ಗುರುವಿನಲ್ಲಿ ಅಪರಿಹಾರ್ಯವಾದ ನರತ್ವವನ್ನೂ ಲಿಂಗದಲ್ಲಿ ಅಪರಿಹಾರ್ಯವಾದ ಕಠಿಣತ್ವವನ್ನೂ ಪ್ರಸಾದದಲ್ಲಿ ಅಪರಿಹಾರ್ಯವಾದ ರುಚಿಯನ್ನೂ ಭಾವಶುದ್ಧಿಯಿಂದ ಕಳೆಯ ಬೇಕೆಂಬ ತಾತ್ಪರ್ಯವು.

ವಸ್ತುಗಳಲ್ಲಿ ಸಂಗತವಾದ ಗುಣಗಳನ್ನು ಭಾವದಿಂದ ಕಳೆವುದೆಂತು? ಅಹುದು. ಇದೀಗ ಕೇಳತಕ್ಕ ಪ್ರಶ್ನೆಯು. ಇದಕ್ಕೊಂದು ಉತ್ತರವೆಂದರೆ ಭಾವದಲ್ಲಿರುವ ಅಂತಹದೊಂದು ಸಾಮರ್ಥ್ಯವು. ಇದನ್ನು ಸ್ಪಷ್ಟೀಕರಿಸುವಣ. ಮೊದಲು ಮನುಷ್ಯಮಾತ್ರರ ಅನುಭವಗೋಚರ ವಾದ ವಿಷಯವನ್ನು ಹಿಡಿದು ಹೇಳುವೆವು. ತಂದೆತಾಯಿಗಳಲ್ಲಿ ದೇವತಾಬುದ್ಧಿಯನ್ನು ಮಾಡ ಬೇಕೆಂದು ಭರತ ಧರ್ಮಗಳು ಹೇಳಿದಪುವು. ಉಳಿದ ಧರ್ಮಗಳಲ್ಲಿಯೂ ತಂದೆತಾಯಿಗಳನ್ನು



CC-0. Jangamwadi Math Collection, Varanasi. An eGangotri Initiative

ಪೂಜ್ಯಭಾವದಿಂದ ಕಾಣಬೇಕೆಂಬ ನೀತಿಯುಂಟು. ಹೀಗೆ ಕಾಣುವಾಗ ಅವರಲ್ಲಿಯ ಮನುಷ್ಯತ್ವವನ್ನೂ ಬುದ್ಧಿಮಾಂದ್ಯಾದಿಗಳನ್ನೂ ಭಾವದಿಂದ ದೂರೀಕರಿಸಿದಲ್ಲದೆ ಆಗದು. ವೀರಶೈವ ಧರ್ಮದ ತತ್ವವೆಂದರೆ ತನ್ನನ್ನು ಶಿವನಲ್ಲಿ ಸಹಕರಿಸುವುದು. ಹಾಗಾಗಲು ತನ್ನಲ್ಲಿಯ ದುರ್ಗುಣಗಳನ್ನು ಇಲ್ಲದಂತೆ ತೂರಿಕಳೆದು ಮನುಷ್ಯತ್ವಾದಿಯನ್ನು ಭಾವದಿಂದಲೆ ಕಳೆಯಬೇಕಾದವುದು. ಆದುದರಿಂದ ಮಾಯಾ-ಲೋಭಾದಿಗಳಿಂದುಂಟಾದ ದುಷ್ಟತ್ವವನ್ನು ಬೇರ್ಪರಿಸಿ ಕೀಳಬೇಕು. ಮನುಷ್ಯಭಾವವು ಅಜ್ಞಾನ-ಅಂಧಕಾರವನ್ನು ಕಳೆದಬಳಿಕ ಮುಕ್ತಿಸಾಧನವೆ ಆಗಿದೆ. ಆಗ ಅದರಲ್ಲಿಯ ಅಪರಿಹಾರ್ಯವಾದ ಗುಣಗಳನ್ನು ಭಾವದಿಂದಲ್ಲದೆ ಬೇರೆ ಬಗೆಯಿಂದ ಕಳೆಯಲಾಗುವುದಿಲ್ಲ. ಹಾಗೆ ಕಳೆದು ಅನುಭವಕ್ಕೆ ಬರುವ ಸಾಮರಸ್ಯಾನಂದವು ಭಕ್ತಜನಕ್ಕೆ ಈ ಭಾವ ಸಾಮರ್ಥ್ಯವನ್ನು ವ್ಯಕ್ತೀಕರಿಸಿದವುದು.

ಇಂತು ಭಕ್ತನಲ್ಲಿ ಸಮರಸವಾದ ಶಿವತತ್ವವೆ ಆ ಭಕ್ತನಿಂದ ಹೊರಟು ಹೊರಗೂ ಒಳಗೂ ಶಿವಾಭೇಧವನ್ನು ಪ್ರಕಟಗೊಳಿವುದು. ಪರಮಪವಿತ್ರಾಂತಃಕರಣರಿಗೆ ಕ್ಷಣ ಮಾತ್ರದಲ್ಲಿ ಗೋಚರಿಸುವ ವೀರಶೈವ ರಹಸ್ಯವನ್ನು ಷಟ್‌ಸ್ಥಲಗಳಿಂದ ಹೇಳಲು ನಮ್ಮಿಂದಾದಷ್ಟು ಹೆಣಗುವೆವು. ಈ ಷಟ್‌ಸ್ಥಲಗಳು ನಿಚ್ಚಣಿಕೆಯ ಹಲ್ಲಿನಂತೆ ಒಂದರ ಮೇಲೊಂದು ವಿಂಗಡವಾಗಿ ನಿಚ್ಚಣಿಕೆಯ ಎರಡು ಡವಿಗೆಗಳಲ್ಲಿ ಸೇರಿರುವಂತೆ ಸೇರಿರುವುವೆಂದು ಮೊದಲು ಭ್ರಮೆಯಾಗಬಹುದು. ಅವು ಹಾಗೆ ಸೇರಿಲ್ಲ. ಮತ್ತು ಒಂದರಿಂದ ಮತ್ತೊಂದು ಸಿಡಿದು ಒಡೆದಿಲ್ಲ. ಈ ಸ್ಥಲಗಳನ್ನು ನಾವು ಈ ದೇಹದೊಂದಿಗೆ ಹೋಲಿಸಬಹುದು; ಶರಣರು ಹಾಗೆ ಹೋಲಿಸಿಯೂ ಇರುವರು. ದೇಹದ ಭಿನ್ನ ಭಿನ್ನ ಭಾಗಗಳಲ್ಲಿ ನಡೆದ ವ್ಯಾಪಾರವು ಆಯಾ ಭಾಗವೊಂದನ್ನೆ ಅನ್ವಯಿಸದೆ ಸಮಗ್ರ ಶರೀರಕ್ಕೂ ಸಂಬಂಧವಾಗಿಹುದು. ಕಾಲಿಗೆ ನಟ್ಟ ಮುಳ್ಳಿನ ವೇದನೆಯು ಶರೀರವನ್ನೇ ಬಾಧಿವುದು. ತಲೆನೋವು ಸಮಸ್ತ ಶರೀರದಲ್ಲಿ ಜಾಡ್ಯವನ್ನು ಹುಟ್ಟಿಸುವುದು. ಒಂದೊಂದು ಭಾಗದಲ್ಲಿ ಆಯಾ ಬೇನೆಯು ಸ್ಥಾನವನ್ನು ಹೊಂದಿದರೂ ಅದರ ಸಾಮಾನ್ಯ ವ್ಯಾಪ್ತಿಯು ದೇಹವನ್ನೆಲ್ಲ ತುಂಬುವುದು. ಈ ಷಟ್ಸ್ಥಲಗಳ ಸಂಬಂಧವು ದೇಹಾವಯವಗಳಿಗಿಂತಲು ನಿಕಟತರವಾದುದು. ಒಂದೊಂದೂ ಸ್ಥಲವೆನಿಸುವುದು. ಸ್ಥಲವೆಂದರೆ — ಸ್ಥಾನ ಅಥವಾ ಮೆಟ್ಟು ಎಂಬ ಅರ್ಥವು. ಒಂದೊಂದು ಸ್ಥಲವು ತನ್ನಲ್ಲಿ ಈ ಸಾಮರಸ್ಯದ ಸರ್ವಾಂಗವನ್ನೂ ತುಂಬಿಕೊಂಡಿದೆ. ಮುಂದಿನ ಸ್ಥಲವು ಹಿಂದಿನ ಸ್ಥಲದ ಭದ್ರುತರವಾದ ರೂಪವಾಗಿದೆ. ಈ ಆರು ಸ್ಥಲಗಳೂ ಭಕ್ತಿಯ ಆಯಾ ಅವಸ್ಥೆಯನ್ನು ಗರ್ಭೀಕರಿಸುತ್ತಲೂ ಉತ್ತರಾವಸ್ಥೆಯು ಪೂರ್ವಾವಸ್ಥೆಯನ್ನು ತನ್ನಲ್ಲಿ ಅಡಗಿಸುತ್ತಲೂ ಇರುವಂತೆ ಇವು ಅಲ್ಲ. ಭಕ್ತ, ಮಾಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ, ವೆಂಬ ಈ ಆರು ಸ್ಥಲಗಳು ಹಿಂದಿನ ಸ್ಥಳವನ್ನು ತಮ್ಮಲ್ಲಿ ಇಲ್ಲದಾಗಿಸುವುದಿಲ್ಲ. ಐಕ್ಯಸ್ಥಳದಲ್ಲಿ ಭಕ್ತಿಸ್ಥಳದ ಶ್ರದ್ಧಾಭಕ್ತಿಯು ಇಲ್ಲವಾಗಿ ಸಮರಸಭಕ್ತಿಯು ಬಂದಿಲ್ಲ. ಭಕ್ತಿಸ್ಥಳಕ್ಕೆ ಆಧಾರವಾದ ಶ್ರದ್ಧಾಭಕ್ತಿಯು ನವನವತರವಾದ ನಿಷ್ಠಾದಿ ಅವಸ್ಥೆಯನ್ನು ಹೊಂದುವುದಾದರೂ ಆ ಶ್ರದ್ಧೆಯು ಇಲ್ಲವಾದರೆ ಮುಂದಿನ ಭಕ್ತಿಗಳು ನಿರಾತ್ಮಕವಾದವುವು. ಮುಪ್ಪಿನಲ್ಲಿ ಹಸುಳತನವಿಲ್ಲ. ಹಸುಳತನದಲ್ಲಿ ಮುಂದಾಗುವ ಮುಪ್ಪು ಹುದುಗಿರುವುದಾದರೂ ಮುಪ್ಪಿನಲ್ಲಿ ಹಸುಳತನವು ಇಲ್ಲ. ಲಿಂಗದಲ್ಲಿ ಶ್ರದ್ಧೆಯು ಮೂಡಿ ಆ ಶ್ರದ್ಧೆಯು ಲಿಂಗಾನುಭವದ ಮೆಟ್ಟು. ಮೆಟ್ಟನಲ್ಲಿ ನಿಷ್ಠಾದ್ಯಾಕಾರಗಳನ್ನು ಹೊಂದುವುದಾದರೂ ಅವುಗಳೊಡನೆ ತಾನೂ ಇದ್ದೇ ಇರುವುದು. ಅದರಂತೆಯೆ ಮುಂದಿನ ಎಲ್ಲ



CC-0. Jangamwadi Math Collection, Varanasi. An eGangotri Initiative

ಭಕ್ತಿಗಳು. ನಿಜವಾಗಿ ಭಕ್ತಿಯು ಅಖಂಡವಾಗಿದೆ. ಅದಕ್ಕೆ ಬಂದ ಪರಿಯಾಯ ನಾಮಗಳು ಭಕ್ತನ ಅವಸ್ಥಾಮೂಲಕವಾಗಿ ಬಂದಿವೆ. ಹಿಮಪರ್ವತದಲ್ಲಿ ಉದ್ಗಮಿಸಿದ ಗಂಗಾಪ್ರವಾಹವು ಸಮುದ್ರವನ್ನು ಕೂಡುವವರೆಗೆ ಒಂದೆಯಾಗಿ ಆಯಾ ಭಿನ್ನಭಿನ್ನ ಸ್ಥಾನಗಳಲ್ಲಿ ಭಿನ್ನಭಿನ್ನ ಕ್ಷೇತ್ರ ಗಾಮಿನಿ ಎನಿಸುವಂತೆ ಈ ಭಕ್ತಿಯು ಅಂಗನ ತನುಕರಣ ಭಾವಗಳಲ್ಲಿ ಸೂಸಿ ಆತನ ಕರಣಗಳ ಜ್ಞಾನಗಳಿಂದ ಭಿನ್ನ ಭಿನ್ನ ಹೆಸರುಗಳನ್ನು ಹೊಂದುವುದಾದರೂ ಹಿಂದಿನ ಹೆಸರೂ ಈ ರೂಪವೂ ಅಚ್ಚಳಿಯದೆ ಮುಂದೆಮುಂದೆ ಸಾಗಿದಪುದು. ಈ ವಿವರವನ್ನು ನಾವೀಗ ಬಿಚ್ಚಿ ಹೇಳತೊಡಗುವೆವು.

ನಮ್ಮ ಭಾವವು ತಿಳಿಯಲೆಂದು ಇದುವರೆಗೆ ಈ ವಿಷಯವನ್ನು ಬಿಚ್ಚಿ ನಮ್ಮ ಉಕ್ತಿಗಳಿಂದಲೆ ಹೇಳಿದೆವು. ಇಷ್ಟು ಸ್ಪಷ್ಟವಾದ ವಿವರಣವು ಶಬ್ದಮಯವಾಗಿ ಎಲ್ಲಿಯೂ ಹೇಳವಡೆದಿಲ್ಲ. ಆದರೆ ಶರಣರ ವಚನವಲ್ಲಿ ಇದನ್ನು ನಾವು ಬಿಚ್ಚಳವಾಗಿ ಕಾಣಬಹುದು. ಷಟ್ಸ್ಥಲಗಳನ್ನು ಒಂದೊಂದನ್ನಾಗಿ ನೋಡಿದರೆ ಅವುಗಳಲ್ಲಿ ಪ್ರತಿಯೊಂದು ಆರಾರಾಗಿ ಒಡೆದಿರುವುದನ್ನು ಕಂಡಪೆವು. ಭಕ್ತನ ಮಹೇಶ, ಭಕ್ತನ ಪ್ರಸಾದಿ, ಭಕ್ತನ ಪ್ರಾಣಲಿಂಗಿ, ಭಕ್ತನ ಶರಣ, ಭಕ್ತನ ಐಕ್ಯ ಅವರಂತೆ ಮುಂದೆ ಹೋಗಹೋಗುತ್ತ ಐಕ್ಯನ ಭಕ್ತ, ಐಕ್ಯನ ಮಹೇಶ, ಐಕ್ಯನ ಪ್ರಸಾದಿ, ಐಕ್ಯನ ಪ್ರಾಣಲಿಂಗಿ, ಐಕ್ಯನ ಶರಣ, ಐಕ್ಯನ ಐಕ್ಯವೆಂಬ ವಿವರವನ್ನು ಈ ವಚನಗಳಲ್ಲಿ ನೋಡ ಬಲ್ಲೆವು. ಒಮ್ಮೆಗೆಲೆ ಇದೊಂಪೇನೋ ದಿಗಿಲುಬಡಿಸುವ ಒಡಪಿನಂದದೆ ತೋರಬಹುದು. ಲಿಂಗ ಧಾರಣದ ವಿಸ್ತಾರದಿಂದಲೆ ಇದನ್ನು ನಾವು ಕಾಣಬಹುದು. ಒಬ್ಬೊಬ್ಬ ಲಿಂಗವಂತನೂ ತಾನು ಧರಿಸಿದ ಲಿಂಗವನ್ನು ಅಗಲಬಾರದೆಂದು ಆ ಅಗಲಿಕೆಯು ತನ್ನ ಆಧ್ಯಾತ್ಮಿಕದ ಅಳಿವೆಂದು ಬಲ್ಲ ನೈಸಲೆ. ಈ ಒಂದು ಮಾತಿನಲ್ಲಿ ಷಟ್ಸ್ಥಲಗಳು ಅಡಕವಾಗಿವೆ. ಅಥವಾ ಹೀಗೆನ್ನಬಾರದು- ಇದೊಂದು ಷಟ್ಸ್ಥಲದ ಅಖಂಡತ್ವವನ್ನು ಸೂಚಿಸುತ್ತದೆ. ಇದು ಭಕ್ತಿಯ ಪರಮಾವಧಿ. ಒಂದು ಕಲ್ಲುಸಕ್ಕರೆಯ ಹರಳನ್ನು ಹಿಡಿಯಿರಿ. ಅದರಲ್ಲಿರುವ ರಸವು ಅಖಂಡವು. ಹೇಗೆ ಅದರಲ್ಲಿಯ ಸ್ಫಟಿಕಾಕಾರವೂ ಬೆಳ್ಳನ್ನ ಬಣ್ಣವೂ ಹೊಳೆಯುವ ನುಣುಪೂ ಕೈಗೆ ಹತ್ತುವ ನಯವೂ ನಾಲಗೆ ಯಲ್ಲಿಯ ರುಚಿಯೂ ಜೊಲ್ಲಿನೊಡನೆ ಏಕಾಕಾರವಾಗುವುದೊ ಹಾಗೆ ಈ ಆರು ಧರ್ಮಗಳು ಒಂದನ್ನೊಂದು ಬಿಟ್ಟಿಲ್ಲ. ಅದರಂತೆಯೆ ಲಿಂಗಧಾರಣವನ್ನು ಹೊಂದಬೇಕೆಂಬ ಶ್ರದ್ಧೆಯು ಅವನ್ನಗಲಬಾರದಲ್ಲ ಎಂಬ ನಿಷ್ಠೆಯೂ ಅದರಿಂದ ತಾನು ನಿರ್ಮಲನೆಂಬ, ಅದು ಇತರ ವಸ್ತುಗಳಿಗಿಂತ ಅತ್ಯಂತ ಪ್ರಿಯವೆಂಬ, ತಾನು ಅದರಿಂದಲೆ ಕೃತಾರ್ಥನೆಂಬ, ತನ್ನ ಶರೀರದಿಂದಲೂ ಒಡೆಯಬಾರದೆಂಬ ಭಕ್ತಾದಿ ಷಟ್ಸ್ಥಲಗಳೂ ಉಂಟಾಗಿವೆ. ಅವೆಲ್ಲ ಈಗ ಒಂದು ಲಿಂಗಧಾರಣ ಮಾತ್ರದಿಂದ ಶ್ರದ್ಧೆಯ ಹೆಸರಿನಿಂದ ಒಪ್ಪುತ್ತಿರುವವಾದರೂ ಮೇಲಿನ ಪರಿಯಲ್ಲಿ ವಜ್ರದ ಒಂದೊಂದು ಹೊಳಹಿನಲ್ಲಿ ಅದರ ಎಲ್ಲ ಆಕಾರಗಳು ತುಂಬಿರುವಂತೆ ತುಂಬಿವೆ. ಇಲ್ಲಿ ಶ್ರದ್ಧೆಯೆಂದರೇನು? ಒಡೆದು ನೋಡುವಣ. ಶ್ರದ್ಧೆಯೆಂಬಲ್ಲಿ 'ಶ್ರತ್ ಧಾ' ಎಂಬ ಎರಡು ಪದಗಳಿಗೆ 'ಶ್ರತ್' ಅಂದರೆ ಶ್ರಿ ಆಶ್ರಯಿಸುವಣ ಎಂಬ ಧಾತುವಿಗೆ ಗತಿಯೆಂಬ ಗುಣಾದಿ ಪ್ರತ್ಯಯವು ಹತ್ತಿ ಆಗಿದೆ. ಅದರ ಅರ್ಥವು ಆಶ್ರಯಿಸುವಿಕೆ 'ಧಾ' ಅಂದರೆ 'ಧಾ' ಧಾತುವಿಗೆ ಅಙ್ ಪ್ರತ್ಯಯವು ಸೇರಿ ಆಗಿದೆ. ಶ್ರತ್ ಅವ್ಯಯವು ಅದಾಗಿ ಅದು—



CC-0. Jangamwadi Math Collection, Varanasi. An eGangotri Initiative

ಸದೃಶಂ ತ್ರಿಷು ಲಿಂಗೇಷು ಸರ್ವಾಸು ಚ ವಿಭಕ್ತಿಷು
ವಚನೇಷು ಚ ಸರ್ವೇಷು ಯನ್ನವ್ಯೇತಿ ತದವ್ಯಯಂ

ಎಂಬ ವೈಯಾಕಾರಣಿ ಪ್ರಮಾಣದಿಂದ ಸರ್ವ ವಿಭಕ್ತಿಗಳಲ್ಲಿಯೂ ಏಕರೂಪವಾಗಿದೆ. ಆದುವ
ರಿಂದ ಶ್ರಧ್ಧಾ ಶಬ್ದವನ್ನು ಶ್ರತ್+ಧಾ ಅಂದರೆ ಆಶ್ರಯಣದ ಇಡುವಣ ಎಂದು ಅರಿಯಬರುವುದು.
ಈ ಶಬ್ದಕ್ಕೆ ವಿಶ್ವಾಸ ಮೊದಲಾದ ಇನ್ನಿತರ ಅರ್ಥಗಳು ಈ ಯೋಗಿಕಾರ್ಥದ ಗುಣಧರ್ಮ
ಗಳಾಗಿ ಬೋಧವಾಗುತ್ತವಲ್ಲದೆ ಮುಖ್ಯವಾಗಿ ಅಲ್ಲ. ಹೀಗೆ ನೋಡಲು ಲಿಂಗಶ್ರದ್ಧೆಯೆಂದರೆ ಲಿಂಗ
ದಲ್ಲಿ ತನ್ನ ಆಶ್ರಯವನ್ನು ಇಡುವಿಕೆ. ಅಂದರೆ ಲಿಂಗವೇ ತನ್ನ ಆಶ್ರಯವೆಂಬ ಬುದ್ಧಿ. ಈ
ಬುದ್ಧಿಯು ಭಕ್ತನಲ್ಲಿ ಸಹಜವಾಗಿ ಪ್ರಾಪ್ತವಾದುದಲ್ಲದೆ ಹೊರಗಿನಿಂದ ಬಂದುದಲ್ಲ. ತಾಯ ಬಳಿ
ಯನ್ನು ಕರುವು ಹಿಡಿವಂತೆ ಶಿವನ ಬಳಿಯನ್ನು ಭಕ್ತನು ಹಿಡಿಯಬಲ್ಲನು. ಅದರ ಭಾವವನ್ನು
ನಾವು ವರ್ಣಿಸಲರಿಯವು. ಆದರೆ ಈ ವ್ಯವಹಾರದಲ್ಲಿ ಶಬ್ದ ಸಂಜ್ಞೆಗಳಿಲ್ಲದೆ ನಡೆಯದಾಗಿ
ಇದಕ್ಕೆ ನಾವು ಸಹಜಪ್ರವೃತ್ತಿಯೆಂದು ಹೆಸರಿಡಬಹುದು. ಇದರಲ್ಲಿ ಮೌಢ್ಯದ ಕೇವಲ ಪರ
ವಾಕ್ಯಾವಲಂಬನದ ಸಂಪರ್ಕವಿಲ್ಲ. ಜೇನ್ನೊಣವು ಪುಷ್ಪಗಳ ಮರೆಯಲ್ಲಡಗಿದ ಮಕರಂದವನ್ನು
ತನ್ನ ಸ್ವಕೀಯವೆಂದೇ ಭಾವಿಸಿ ಕೂಡಿಸುವುದು. ನಾನಾ ಪುಷ್ಪಗಳಲ್ಲಿ ಹುದುಗಿದ ಆ ಮಕರಂದ
ವನ್ನು ತನ್ನಲ್ಲಿಡುವ ಬೇರೊಂದರೊಡನೆ ಹೋಲಿಸಬಾರದ ಒಂದು ತನ್ನದೇ ಆದ ಆಧ್ಯಾತ್ಮಿಕ
ಗುಣದಿಂದ ಆ ಪುಷ್ಪಗಳಲ್ಲೆಲ್ಲ ತಿರುಗಿ ಸಂಪಾದಿಸುವುದು. ಅದರಂತೆ ಭಕ್ತನು ತನ್ನ ಆಶ್ರಯವನ್ನು
ಆಶಿಸಿದ ಆ ಲಿಂಗವನ್ನು ಸ್ವಕೀಯವೆಂದೇ ಗುರುವಿನಿಂದಲೂ ಬಲ್ಲ ಶರಣರಿಂದಲೂ ಸೆಳೆದು
ಕೊಂಬನು. ಅಂದರೆ ತನ್ನಲ್ಲಿಯೆ ಲಿಂಗದಿರುವನ್ನು ಕಂಡುಹಿಡಿವನು. ಶ್ರೀಬಸವೇಶ್ವರನ ಒಂದು
ವಚನದಲ್ಲಿ ಇದನ್ನು ಬಹು ಸರಸವಾಗಿ ನಾವು ಕಾಂಬೆವು.

ವಚನ: ಮಡಕೆಯ ಮಾಡುವರೆ ಮಣ್ಣೇ ಮೊದಲು । ತೊಡಿಗೆಯ ಮಾಡುವರೆ ಹೊನ್ನೇ ಮೊದಲು ।
ಶಿವಪಥವನರಿವಡೆ ಗುರುಪಥವೇ ಮೊದಲು । ಕೂಡಲಸಂಗಮದೇವರನರಿವಡೆ ಶರಣರ ಸಂಗವೇ ಮೊದಲು.

ಮಣ್ಣು ತಿದ್ದಿಲ್ಲದ ಅಳಿವಿಲ್ಲದ ತೆರತೆರನಾದ ಆಕಾರವನ್ನು ಹೊಂದಲುಳ್ಳ ಒಡವೆಯು. ಮಡ
ಕೆಯು ಮಣ್ಣಿನ ಈ ಧರ್ಮದ ಬಲದಿಂದ ಆಕೃತಿಗೊಂಡ ಪದಾರ್ಥವು ಮಣ್ಣು ಮಡಕೆಗೆ ಆಧಾರ
ವಾಗಿದೆ ಆಶ್ರಯವಾಗಿದೆ; ಮಡಕೆಯು ಆತ್ಮವೆಯಾಗಿದೆ. ಮಡಕೆಗೆ ತನ್ನ ಅರಿವು ಇತ್ತೆಂದು
ಕಲ್ಪಿಸುವಣ. ಅದು ಮಣ್ಣು ತನಗಾಶ್ರಯವೆಂದೂ ತನ್ನ ಆತ್ಮವೆಂದೂ ತಿಳಿವುದಾದರೆ ತನಗೆ
ಬರುವ ಕೇಡುಪಾಡುಗಳು ತನ್ನನ್ನು ಅಳಿವಿಲ್ಲದ ಮಣ್ಣಿನಲ್ಲಿ ಎಂದೂ ಬಾಧಿಸವೆಂಬ ತಿಳುವಳಿಕೆ
ಯಿಂದ ಎಷ್ಟು ಸೊಗಸು ಹೊಂದಬಹುದು. ಅದರಂತೆಯೆ ಆತ್ಮನು ತನಗೆ ಶಿವನು ಅಥವಾ
ಲಿಂಗವು ಒಳಗಣ ಆತ್ಮನೆಂದು ಕಂಡರೆ ಆ ಶಿವನನ್ನು ತಾನು ಇನಿತುದಿನ ಕಳಕೊಂಡೆನಲ್ಲ, ದಂದುಗ
ಗೊಂಡೆನಲ್ಲ, ಅವನನ್ನು ನೆಲೆಯಾಗಿ ಹೊಂದಬೇಕಲ್ಲ ಎಂಬ ಹಂಬಲವನ್ನು ತಾಳುವನು.
ಈ ಹಂಬಲವೆ ಶ್ರದ್ಧಾಭಕ್ತಿಯು. ' ಭಕ್ತಿ ' ಶಬ್ದವಾದರೂ ನಿಜವಾಗಿ ಇದನ್ನೇ ಸೂಚಿಸುತ್ತಿದೆ.
ಅದು ' ಭಜ್ ' ಧಾತುವಿಗೆ ' ಕ್ತಿನ್ ' ಪ್ರತ್ಯಯವು ಸೇರಿ ಆಗಿದೆ. ಭಜವೆಂದರೆ ಸೇವಿಸುಯೆಂಬ
ಅರ್ಥ; ಅಂದರೆ ತತ್ಪರನಾಗಿರು ಎಂಬರ್ಥ. ಅದಕ್ಕೆ ಪಾತ್ರವಾಗಿರು ಎಂಬ ಇನ್ನೊಂದರ್ಥವೂ
ಉಂಟು. ಈ ಎರಡೂ ಅರ್ಥಗಳು ಈ ಶಬ್ದದಲ್ಲಿ ಹುದುಗಿವೆ. ಸೇವೆಯಲ್ಲಿ ಮತ್ತೆರಡು ಬಗೆ
ಗಳುಂಟು. ಅರಸನನ್ನು ಸೇವಿಸುವೆವು. ಅನ್ನವನ್ನು ಸೇವಿಸುವೆವು. ಹೀಗಾಗಿ ಲಿಂಗಭಕ್ತಿಯೆಂದರೆ



CC-0. Jangamwadi Math Collection, Varanasi. An eGangotri Initiative

ಲಿಂಗದಲ್ಲಿ ತತ್ಪರತೆ. ಲಿಂಗದ ಊಳಿಗ. ಲಿಂಗಕ್ಕೆ ತಾನು ಪಾತ್ರವಾಗಿರುವಣ. ಹೇಗೆ ಮಡಿಕೆಯು ಮಣ್ಣಿನಿಂದಲ್ಲದೆ ತೋರದದರಿಂದ ಮಣ್ಣೇ ತನಗೆ ಆಧಾರವಾಗಿ ಉಳ್ಳದು. ಅದರಂತೆಯೆ ಮಣ್ಣಾದರೂ ಮಡಕೆಯಲ್ಲ ಮಡಕೆಯನ್ನು ಬಿಟ್ಟು ತೋರದರಿಂದ ಮಣ್ಣಿಗೆ ಮಡಕೆಯು ಪಾತ್ರವಾಗಿದೆ. ಈ ಬಗೆಯ ಪರಸ್ಪರ ಸಂಬಂಧದ ಅಪರೋಕ್ಷವಾದ ಹೊಳಹು ಶ್ರದ್ಧಾ ಭಕ್ತಿಯು. ಮತ್ತೀ ಶ್ರದ್ಧಾ ಭಕ್ತಿಯು ಮೇಲೆ ತೋರಿಸಿದಂತೆ ಷಡ್ರೂಪವಾಗಿದೆ.

ಇದಿರಲಿ. ಇದಕ್ಕೆ ಇಷ್ಟಲಿಂಗದ ಮೂರ್ತರೂಪವೇಕೆ ಬೇಕು? ಜೀವಾತ್ಮನ ಸ್ವರೂಪವನ್ನು ಏನೆಂದು ಹೇಳುವಣ. ಅವನು ಮೂರ್ತನೊ ಅಮೂರ್ತನೊ. ಮೂರ್ತನೆಂದರೆ ಶರೀರವೆ ಜೀವಾತ್ಮನಾಗಬೇಕು. ಅಮೂರ್ತನೆಂದರೆ ವ್ಯವಹರಣೆಗೆ ಬಾರನು. ಆದುದರಿಂದ ಜೀವಾತ್ಮನು ಮೂರ್ತಾಮೂರ್ತರೂಪಗಳನ್ನೊಳಗೊಂಡ ಚೈತನ್ಯನೆನಬೇಕು. ಶಿವನಾದರೂ ಮೂರ್ತಾಮೂರ್ತ ರೂಪಗಳನ್ನೊಳಗೊಂಡ ಚೈತನ್ಯವು. ಜೀವನು ಮೂರ್ತವಾದ ಶರೀರದಲ್ಲಿ ಮೂರ್ತನಾಗಿಯೂ ಅಮೂರ್ತವಾದ ಭಾವದಲ್ಲಿ ಚಿನ್ಮಾತ್ರವಾಗಿಯೂ ತೋರುವನು. ಭಾವದಲ್ಲಿ ತೋರಿ ಅಂಗದಲ್ಲಿ ತೋರದಿದ್ದರೆ ಮೇಲೆ ವಿವರಿಸಿದ ಶ್ರದ್ಧಾಭಕ್ತಿಯು ಪರಿಣತವಾಗದು. ಆದುದರಿಂದ ಶರೀರಕ್ಕೆ ಇಷ್ಟಲಿಂಗವು ಅವಶ್ಯವು. ನಾವು ಹೇಳಿದ ಮಾತಿನಲ್ಲಿ ಕೆಲವು ಶರಣರ ವಚನಗಳನ್ನು ಇದಿರಿಡಬಹುದು.

ವಚನ ೫೭: ಎಣ್ಣೆ, ಬತ್ತಿ, ಪ್ರಣತೆಕೂಡಿ ಜ್ಯೋತಿಯ ಬೆಳಗಯ್ಯಾ. ಅಸ್ತಿ, ಮಾಂಸ, ದೇಹ, ಪ್ರಾಣನೀ ಪ್ರಾಣವಾಯಿತ್ತು. ದೃಷ್ಟಿವರಿದು, ಮನ ಮುಟ್ಟದಪರಿ ಇನ್ನೆಂತೊ? ಮುಟ್ಟ ಲಿಂಗವ ಕೊಂಡೊಡೆ ಕೆಟ್ಟತ್ತು ಜ್ಯೋತಿಯ ಬೆಳಗು. ಇದು ಕಷ್ಟವೆಂದರಿದೆನು ಗುಹೇಶ್ವರಾ.

ಈ ವಚನದಲ್ಲಿ ಲೋಕಪ್ರಸಿದ್ಧವಾದ ದೀವಿಗೆಗೂ ಲಿಂಗವೆಂಬ ಜ್ಯೋತಿಗೂ ವೈಷಮ್ಯವನ್ನು ಶ್ರೀ ಮದಲ್ಲಮಪ್ರಭುವು ಒಳ್ಳೇ ಸರಸವಾಗಿ ಸೂಚಿಸಿರುವನು. ಬತ್ತಿಯು ಪ್ರಣತಿಯನ್ನಾಶ್ರಯಿಸಿ ಆ ಪ್ರಣತೆಯಲ್ಲಿಯ ಎಣ್ಣೆಯನ್ನು ಕುಡಿದು ಹೊರಗಣ ಅಗ್ನಿಸಂಯೋಗದಿಂದ ದೀಪವಾದಪುದು. ಈ ದೀಪವು ಪ್ರಕಾಶಮಯವಾದುದಾದರೂ ಬತ್ತಿಯ ಅಳಿವಿಗೆ ಕಾರಣವಾದುದು. ತನ್ನ ಸ್ವರೂಪವಲ್ಲದರಿಂದ ಬತ್ತಿಯು ನಿಜದಲ್ಲಿ ಪ್ರಕಾಶಮಯವಲ್ಲ. ಲಿಂಗ ಜ್ಯೋತಿಯು ಹಾಗಲ್ಲ. ಜೀವನನ್ನು ಮುಟ್ಟಿ ಅವನನ್ನು ಜೋತ್ಪ್ರಕಾಶನನ್ನಾಗಿ ಮಾಡಿದೊಡೆ ಆ ಲಿಂಗ ಜ್ಯೋತಿಗೂ ಕೇಡು ಅಂಗನಿಗೂ ಕೇಡು. ದೀಪದಲ್ಲಿ ಎಣ್ಣೆಬತ್ತಿಗಳ ಅಂಶದಿಂದ ಕಾಡಿಗೆಯುಂಟಾಗಿ ಕುಂದುಂಟು. ಎಣ್ಣೆ ಬತ್ತಿಗಳಿಗೆ ದೀಪದ ಸಂಬಂಧದಿಂದ ಅಳಿವುಂಟು. ಜ್ಯೋತಿರ್ಲತೆಗಳಲ್ಲಿ ಬೆಳಗುವ ಪ್ರಕಾಶದಂತೆ ಒಳಗಡಗಿದ ಲಿಂಗವೆ ಪ್ರಕಾಶಮಯವಾದರೆ ಅದುವೆ ನಿಜವಾದ ಅಂಗಲಿಂಗ ಸಂಬಂಧ. ಈ ವಿವರವನ್ನು ಶ್ರೀ ಮದಲ್ಲಮಪ್ರಭು —

ಮುಟ್ಟ ಲಿಂಗವ ಕೊಂಡೊಡೆ ಕೆಟ್ಟತ್ತು ಜ್ಯೋತಿಯ ಬೆಳಗು.

ಶ್ರದ್ಧಾ ಭಕ್ತಿಯ ಸ್ವರೂಪವನ್ನು ನಾವು ಶಿವಜೀವರುಗಳಲ್ಲಿರುವ ವರ್ಣಿಸಲುಬಾರದ ಒಂದು ಬಗೆಯ ಒಳಗಣ ಸಂಬಂಧವೆಂದು ಹೇಳಿದೆವು. ಇದನ್ನು ಪ್ರಭುದೇವರು ಬಲು ಸೊಗಸಾಗಿ ಹೇಳಿರುವರು.

ವಚನ ೫೮: ಎತ್ತಣ ಮಾಮರ? ಎತ್ತಣ ಕೋಗಿಲೆ? ಎತ್ತಣಿಂದೆತ್ತ ಸಂಬಂಧವಯ್ಯಾ? ಬೆಟ್ಟದ ನೆಲ್ಲಿಯಕಾಯಿ ಸಮುದ್ರದೊಳಗಣ ಉಪ್ಪು ಎತ್ತಣಿಂದೆತ್ತ ಸಂಬಧವಯ್ಯಾ ?

ಮಾವಿನ ತಳಿರ ರುಚಿಗೂ ಕೋಗಿಲೆಯ ರಸನೇಂದ್ರಿಯಕ್ಕೂ ಪರಸ್ಪರ ನಿಕಟ ಸಂಬಂಧವಿರುವುದರಿಂದಲ್ಲದೆ ಕೋಗಿಲೆಯು ಮಾಮರವನು ಬಯಸುವುದು. ಬೆಟ್ಟದ ನೆಲ್ಲಿಯಕಾಯಿಯ ಹುಳಿರಸಕ್ಕೂ



CC-0. Jangamwadi Math Collection, Varanasi. An eGangotri Initiative

ಸಮುದ್ರದ ಉಪ್ಪಿಗೂ ಪರಸ್ಪರ ಪೂರಕತ್ವವಿರುವುದರಿಂದಲ್ಲದೆ ಅವುಗಳ ಒಂದುಗೂಟದ ಮನೋಹರತೆ. ಅದರಂತೆಯೆ ಲಿಂಗವೆಂಬ ಪರಶಿವನಿಗೂ ಅಂಗನೆಂಬ ಆತ್ಮನಿಗೂ ಐಕ್ಯಸಮರಸವು ಮತ್ತು ಆ ಐಕ್ಯಸಮರಸದ ಪರಮಾನಂದವು. ಶಿಷ್ಯನು ಲಿಂಗಧಾರಣಕ್ಕಾಗಿ ಹುಡುಕುವ ಗುರುವು ನಿಜವಾಗಿ ಶಿಷ್ಯನ ಸ್ವರೂಪವೆಂಬಲ್ಲಿ ಶ್ರೀಪ್ರಭುವಿನ ವಚನ ಉಂಟು.

ವಚನ : ೬೩ ಗುರು–ಶಿಷ್ಯ ಸಂಬಂಧವನರಸಲೆಂದು ಹೋದರೆ ತಾನೇ ಗುರುವಾದ ತಾನೇ ಶಿಷ್ಯನಾದ ತಾನೇ ಲಿಂಗವಾದ. ಗುಹೇಶ್ವರಾ ನಿಮ್ಮ ಶರಣನ ಕಾಯದ ಕೈಯಲ್ಲಿ ಲಿಂಗವ ಕೊಟ್ಟರೆ ಭಾವ ಬತ್ತಲೆಯಾಯಿತ್ತು.

ಇರಲಿ. ಈ ಶ್ರದ್ಧಾ ಭಕ್ತಿಯು ನಿಷ್ಠಾರೂಪವನ್ನು ತೋರ್ಪಡಿಸಿದಾಗ ಅದುವೆ ಮಾಹೇಶ್ವರ ಸ್ಥಲಕ್ಕೆ ಕಾರಣವೆನಿಸಿತು. 'ನಿಷ್ಠಾ' ಶಬ್ದವು 'ಷ್ಠಾ' (ಗತಿ-ನಿವೃತೌ) ಎಂಬ ಧಾತುವಿಗೆ 'ನಿ' ಎಂಬ ಉಪಸರ್ಗವು ಸೇರಿ ಆಗಿದೆ. ಈ ಉಪಸರ್ಗದ ಅರ್ಥವು 'ನಿ' (ನಿತರಾಮ್ ಅತಿಶಯೇನ) ಎಂದು ಆಗುವುದು. 'ನಿಷ್ಠಾ' ಶಬ್ದದ ಎರಡು ಅವಯವಗಳ ಒಂದು ಬೆರಸಿದ ಅರ್ಥವು ಅತ್ಯಂತವಾಗಿ ಕದಲದೆ ಇರೋಣ ಎಂದಾಯಿತು. ತಾನು ಧರಿಸಿದ ಲಿಂಗದಲ್ಲಿ ಈ ಶರೀರಭೋಗಗಳಿಂದ ಮನಸ್ಸಿನ ರಾಗಾದ್ಯರಿಗಳಿಂದ ಈಹ ಪರ ಲೋಕಗಳ ಆಶೆಯಿಂದ ಕದಡದಿರುವುವೆ ನಿಷ್ಠಾ ಭಕ್ತಿಯು. ಶ್ರದ್ಧೆಯ ಬಲವತ್ತರವಾದ ರೂಪವೆ ನಿಷ್ಠಾಭಕ್ತಿಯೆಂಬಲ್ಲಿ ಸಂಶಯವಿಲ್ಲ. ಅಂಕುರಿಸಿದ ಶ್ರದ್ಧೆಯನ್ನು ಶರೀರಕ್ಕೆ ಶರೀರವನ್ನು ತಗಲಿದ ಜ್ಯಾತ್ಯಾದಿ ಭ್ರಮೆಗಳೂ ಮನಸ್ಸನ್ನು ಅಂಟಿದ ಕಾಮಾರಿಷಡ್ವರ್ಗಗಳೂ ಭಾವವನ್ನಾವರಿಸಿದ ಇಹಪರ ಸುಖಗಳೂ ಮುಸುಕಿ ಮಾಜಿಸಬಹುದು. ಶ್ರದ್ಧೆಯು ಇವುಗಳನ್ನೆಲ್ಲ ಗೆದ್ದು ತಾನು ಬಲಿಷ್ಠವಾಗಹತ್ತಿದರೆ ಅದುವೆ ನಿಷ್ಠಾಭಕ್ತಿಯು. ವಚನಕಾರರು ಶ್ರದ್ಧಾಭಕ್ತಿಯಿಂದ ಆಚಾರಲಿಂಗವು ಪೂಜ್ಯವೆಂದೂ ಆ ಲಿಂಗಕ್ಕೆ ಸುಚಿತ್ತವೆಂಬ ಹಸ್ತವೆಂದೂ ಗಂಧವೆಂಬ ದ್ರವ್ಯವೆಂದೂ ಆ ಲಿಂಗಾರ್ಪಿತ ಗಂಧವೆ ಪ್ರಸಾದವೆಂದೂ ಗಂಧಗ್ರಹಣಕ್ಕೆ ನಾಶಿಕವೆ ಮುಖವೆಂದೂ ಅದನ್ನು ಸ್ವೀಕರಿಸಲು ಲಿಂಗಕ್ಕೆ ಕ್ರಿಯಾಶಕ್ತಿಯೆಂತಲೂ ಹೇಳುವರು. ಮತ್ತು ಮಾಹೇಶ್ವರ ಸ್ಥಲಕ್ಕೆ ಗುರುಲಿಂಗವೆ ಪೂಜ್ಯವೆಂದೂ ಅದಕ್ಕೆ ಸುಬುದ್ಧಿಯೆ ಹಸ್ತವೆಂದೂ ಜಿಹ್ವೆಯೆ ಮುಖ್ಯವೆಂದೂ ರಸವೇ ಪದಾರ್ಥವೆಂದೂ ರುಚಿಯೇ ಪ್ರಸಾದವೆಂದೂ ಜ್ಞಾನಶಕ್ತಿಯೆ ಆ ಗುರುಲಿಂಗದ ಶಕ್ತಿಯೆಂದೂ ಹೇಳುವರು. ಇದರ ವಿವರವನು ಕೆಲಮಟ್ಟಿಗೆ ಇಲ್ಲಿ ಹೇಳುವೆವು.

ಶಿವನಲ್ಲಿ ತನ್ನ ಶ್ರದ್ಧೆಯು ಮೂಡಿದುದಕ್ಕೆ ಅಂಗನ ಆಚಾರವು ಶಿವಾಭಿಮುಖವಾಗಬೇಕು. ಆಚಾರವೆಂದರೆ ನಮ್ಮಲ್ಲಿ ಹುದುಗಿದ ವಾಸನೆಯಿಂದ ಉಂಟಾಗುವ ಪ್ರವೃತ್ತಿಯು. ನಮ್ಮ ವಾಸನೆಗಳು ವಿಷಮಯವಾದಾಗ ನಮ್ಮ ಆಚಾರಗಳೂ ವಿಷಮಯವೇ. ಶ್ರದ್ಧಾಭಕ್ತಿಯು ಶಿವನಭಿಮುಖವಾಗುತ್ತಲು ಆ ಅಭಿಮುಖ್ಯವನ್ನು ತಡೆಯುವ ಆಚಾರಗಳನ್ನೂ ಅವುಗಳಿಗೆ ಮೂಲವಾದ ವಾಸನೆಗಳನ್ನೂ ಕೆಡಿಸುತ್ತ ಶಿವಾಭಿಮುಖ್ಯಕ್ಕೆ ಪೋಷಕವಾದ ಆಚಾರಗಳನ್ನೂ ವಾಸನೆಗಳನ್ನೂ ಬೆಳೆಸುವುದು. ಈ ವಾಸನೆಗಳಲ್ಲಿಯೂ ಆಚಾರಗಳಲ್ಲಿಯೂ ಹುದುಗಿದ ಚೈತನ್ಯವೆ ಲಿಂಗವಾಗಿರುವುದರಿಂದ ಇಂತಹ ಆಚಾರಕ್ಕೆಯೆ ಆಚಾರಲಿಂಗವೆಂದರು. ಆಚಾರಕ್ಕೆ ಈ ದೇಹವೆ ಮೂಲವು. ಅದು ಪೃಥ್ವೀಮಯವು. ಪೃಥ್ವಿಯ ವಿಶೇಷಸ್ಥಾನವು ನಾಶಿಕವು. ಗಂಧವತೀ ಪೃಥ್ವಿಯೆಂದು ತಾರ್ಕಿಕರ ಲಕ್ಷಣವು. ನಾಶಿಕವು ಗಂಧಗ್ರಾಹಕವು. ಆಯಾ ವಿಷಯಗಳನ್ನು ಸೊಗಯಿಸುವ ಅಥವಾ ದೂರೀಕರಿಸುವ ವಾಸನೆಗಳು ಪಂಚೇಂದ್ರಿಯಗಳಲ್ಲಿಯೂ ವಾಸಿಸುವುವಾದರೂ



CC-0. Jangamwadi Math Collection, Varanasi. An eGangotri Initiative

ಘ್ರಾಣೇಂದ್ರಿಯವೆ ಗಂಧಗ್ರಹಣದಲ್ಲಿ ಕರಣವಾಗಿರುವುದರಿಂದ ಅದನ್ನು ಆಚಾರಲಿಂಗಕ್ಕೆ ಮುಖ ವೆಂದೂ ವೀರಶೈವ ತತ್ವಜ್ಞರು ಹೇಳುವರು. ಇನ್ನು ಚಿತ್ತದ ಕಾರ್ಯವು ಆದ ಅನುಭವಗಳನ್ನು ಸಂಚಯಿಸುವುದು. ತರತರದ ವಾಸನೆಗಳನ್ನು ತರತರದ ವಿಷಯಗಳನ್ನು ಚಿತ್ತದಿಂದಲೆ ನಾವು ಸಂಗ್ರಹಿಸುತ್ತೇವೆ. 'ಚಿತ್ತವಿಟ್ಟು ಕೇಳಿರಿ, ಚಿತ್ತವಿಟ್ಟು ಓದಿರಿ' ಎಂಬುವ ಪರಿಪಾಠ ಉಂಟು. ಆದುದರಿಂದ ಈ ಆಚಾರಲಿಂಗವನ್ನು ಧರಿಸಲಿಕ್ಕೆ ಸುಚಿತ್ತವೆ ಹಸ್ತವಾಯಿತು. ನಾಸಿಕವೆ ಮುಖ ವಾಯಿತು. ಸುಗಂಧವೆ ಪದಾರ್ಥವಾಯಿತು. ಆ ಸುಗಂಧವನು ಆತ್ಮನು ವಿಷಯಾಭಿರತಿಯನ್ನು ಳಿದು ಲಿಂಗಾರ್ಪಿತವನ್ನಾಗಿ ಭೋಗಿಪುದೆ ಗಂಧಪ್ರಸಾದವಾಯಿತು. ಈ ಆಚಾರಲಿಂಗಪೂಜೆಯಲ್ಲಿ ದೇಹಶೌಚ, ನಿತ್ಯಲಿಂಗಾರ್ಚನೆ, ಮನಸ್ಸಿನ ಸದಾಚಾರಗಳು ಇತ್ಯಾದಿ ಅಡಕವಾಗಿವೆ. ಇದ ರಿಂದ ಶರೀರಗತ ಭೂತತ್ವದ ಮತ್ತು ಭೂತತ್ವದ ಕಾರ್ಯಗಳ ಶುದ್ಧಿಯು.

ಇನ್ನು ಮಾಹೇಶ್ವರ ಸ್ಥಲದಲ್ಲಿ ಗುರುಲಿಂಗ ಪೂಜ್ಯವೆಂಬೆವು. ಗುರುಲಿಂಗವೆಂದರೆ ತನ್ನಲ್ಲಿ ಬೆಳೆಯಹತ್ತಿದ ಶಿವಜ್ಞಾನವೂ ಆ ಶಿವಜ್ಞಾನಕ್ಕೆ ಉದ್ಬೋಧಕನಾದ ಗುರುವೂ ಆಹುದು. ಆ ಗುರು ವನ್ನು ಲಿಂಗದಂತೆಯೆ ಆತ್ಮಭಾವದಿಂದ ಕಾಣಬೇಕಲ್ಲದೆ ಬೇರೊಂದು ಅನ್ಯಭಾವದಿಂದ ಕಾಣ ಲಾಗದೆಂಬದನ್ನು ಮೇಲೆ ವಿವರಿಸಿದ್ದೇವೆ. ಶ್ರದ್ಧಾಭಕ್ತಿಯ ಆಚಾರಸಂಪತ್ತಿಗೆ ಕ್ರಿಯಾಶಕ್ತಿಯು ಅಂಗವಾದಂತೆ ಈ ನಿಷ್ಠಾಭಕ್ತಿಯ ಜ್ಞಾನಸಂಪತ್ತಿಗೆ ಜ್ಞಾನಶಕ್ತಿಯು ಅಂಗವಾಗಿದೆ. ಈ ಗುರು ಲಿಂಗಕ್ಕೆ ಬುದ್ಧಿಯೆ ಹಸ್ತವು. ಬುದ್ಧಿಯಲ್ಲಿ ಸಾರಾಸಾರ ವಿವೇಕವಿದೆ. ಸಾರಾಸಾರ ವಿವೇಕದಿಂದಲೆ ಜ್ಞಾನವು. ಆ ಜ್ಞಾನಾನುಗುಣವಾಗಿಯೆ ಪದಾರ್ಥಗಳಲ್ಲಿ ರುಚ್ಯರುಚಿಗಳು. ಹೆಂಡಗುಡಕನ ಅಜ್ಞಾನದಿಂದ ಹೆಂಡದಲ್ಲಿಯ ರುಚಿಯು. ಹಾಲುಗುಡಿವವನ ಸುಜ್ಞಾನದಿಂದಲೆ ಹಾಲಿನಲ್ಲಿಯ ರುಚಿಯು. ಈ ರುಚಿಯು ಶಬ್ದಾದಿ ಪಂಚವಿಷಯಗಳಿಂದ ಪಂಚೇಂದ್ರಿಯಂಗಳಲ್ಲಿ ನೆಲೆಸಿದೆ ಯಾದರು ಇದರ ಮುಖ್ಯಸ್ಥಾನವು ನಾಲಗೆಯು. ಒಂದೊಂದು ಇಂದ್ರಿಯದಲ್ಲಿಯೂ ಪಂಚೇಂದ್ರಿ ಯಂಗಳ ಕಾರ್ಯವು ಉಂಟೆಂದು ಶಿವಾಗಮಂಗಳ ಸಿದ್ಧಾಂತವು. ಆದರಿಂದ ನಾಲಗೆಯು ಗುರು ಲಿಂಗಕ್ಕೆ ನೆಲೆಯೆನಿಸಿತು. ಗುರುಲಿಂಗವು ನಾಲಗೆಯಲ್ಲಿ ನೆಲಸಿ ಆತ್ಮನ ಸದ್ರುಚಿಗಳನ್ನು ಪುಟ ಗೊಳಿಸಿ ಸಂಸಾರ ಮಾರ್ಗದಿಂದ ತಿರುಗಿಸಿ ಶಿವಪಥದಲ್ಲಿ ಅವನನ್ನು ನಡೆಯಿಪುದು. ರುಚಿ-ಸ್ವಾದ ನವು ಆವಾವ ಇಂದ್ರಿಯ ಮುಖದಲ್ಲಿದ್ದರೂ ಅಲ್ಲಲ್ಲಿ ಅದು ನಾಲಗೆಯ ಕಾರ್ಯವೆ. ಈ ವಿಷಯ ದಲ್ಲಿ ಮೃಗೇಂದ್ರಾಗಮ ದೀಪಿಕೆಯಲ್ಲಿ ಅಘೋರ ಶಿವಾಚಾರ್ಯರ ವಚನವು ಮನನೀಯವಾಗಿದೆ.

ನನ್ವೇವಂ ಭ್ರೂಲತೋತ್ಕಂಪಾದೀನಾಂ ದಂತಚ್ಛದನಾದೀ ನಾಂಚ ಕರ್ಮಣಾಂ ಕರಣಾಂತರಾಣಿ ಕಲ್ಪನೀಯಾನಿ ಇತ್ಯನಂತ ತಾ ಕರ್ಮೇಂದ್ರಿಯಾಣಾಂ ಪ್ರಸಜತೇ ನ ಚ ಪಂಚತ್ವಮಿತಿ । ತತ್ಸತ್ಯಂ ಯದಿ ಮುಖ್ಯತಯಾ ಶರೀರೈಕದೇಶವೃತ್ತೀಂದ್ರಿಯಾ ಣಿ ಅಭ್ಯುಪ ಗಮ್ಯೆರನ್ ತ್ವ ಗಿಂದ್ರಿಯವತ್ ಸರ್ವಶರೀರ ವ್ಯಾಪಕತ್ವೇನ ತೇಷಾಂ ಕರ್ಮೇಂದ್ರಿಯಾಣಾಮಿಷ್ಟತ್ವಾತ್ ಹಸ್ತಸ್ಯೈವ ವ್ಯಾಪಾರಃ ಭ್ರೂಕ್ಷೇಪಾದಿಃ ।

ಕರ್ಮೇಂದ್ರಿಯಗಳನ್ನು ತಾರ್ಕಿಕರು ಅಂಗೀಕರಿಸುವುದಿಲ್ಲ. ಆ ವಾದವನ್ನು ನಿರಾಕರಿಸುವಲ್ಲಿ ಅಘೋರ ಶಿವಾಚಾರ್ಯರ ಮತವಿದು. ವಚನ, ದಾನ, ಸಂಹ್ಲಾದ, ವಿಸರ್ಗ, ವಿಹೃತಿ ಎಂಬ ಐದು ವೃತ್ತಿಗಳಿಂದ ಐದು ಕರ್ಮೇಂದ್ರಿಯಂಗಳನು ಕಲ್ಪಿಸಲಾಗುವುದಿಲ್ಲ. ಹುಬ್ಬು ಹಾರಿಸುವಣ



CC-0. Jangamwadi Math Collection, Varanasi. An eGangotri Initiative

ಮೊದಲಾದ ಎಸಿತೆನಿತೊ ಚಲನಗಳು ಶರೀರದಲ್ಲಾಗುವುದರಿಂದ ಬೇರೆ ಬೇರೆ ಕರ್ಮೇಂದ್ರಿಯಾದಿಗಳನ್ನು ಕಲ್ಪಿಸಬೇಕಾದೀತು ಎಂಬ ತಾರ್ಕಿಕನ ಮಾತಿಗೆ ಕರ್ಮೇಂದ್ರಿಯಗಳು ಶರೀರದ ಏಕದೇಶದಲ್ಲಿ ಬಾಹುಲ್ಯವಾಗಿ ಕಂಡವು ಸೂಕ್ಷ್ಮರೂಪದಿಂದ ಸರ್ವಶರೀರ ವ್ಯಾಪಿಯಾಗಿವೆ. ಆದುದರಿಂದ ಹುಬ್ಬು ಹಾರಿಸುವಣ ಮುಂತಾದ ಕಾರ್ಯಗಳು ಹಸ್ತಾದಿ ಕರ್ಮೇಂದ್ರಿಯಗಳವೆಯೆಂದು ಹೇಳಬೇಕು. ಇನಿತಾಗಿ ಕರ್ಮೇಂದ್ರಿಯಗಳ ಅಸಂಖ್ಯತ್ವವು ಒದಗುವುದಿಲ್ಲ. ಅವು ನಿಯತವಾಗಿ ಐದೇ ಆಗುವುವು ಎಂದು ಹೇಳುವರು. ಹಾಗಲ್ಲದೆ ಜ್ಞಾನೇಂದ್ರಿಯಗಳನ್ನೆಲ್ಲ ಮನಸ್ಸು ಪ್ರವರ್ತಿಸುವುದರಿಂದ ಆ ಮನಸ್ಸಿನಲ್ಲಿ ಪಂಚವಿಷಯಗಳ ರುಚಿಯು ಇರುವುದು. ಆ ರುಚಿಯು ಆವಾವ ಇಂದ್ರಿಯವಿಷಯದಲ್ಲುಂಟೊ ಆಯಾ ವಿಷಯ ಸ್ವಾದದಲ್ಲಿ ಆಯಾ ಇಂದ್ರಿಯವು ನಾಲಗೆಯ ವ್ಯಾಪಾರವನ್ನೇ ಮಾಡುತ್ತದೆನ್ನಲು ಅಡ್ಡಿ ಇಲ್ಲ. ಈ ನ್ಯಾಯವನ್ನು ಪ್ರತಿಯೊಂದು ಇಂದ್ರಿಯದಲ್ಲೂ ಅನ್ವಯಿಸತಕ್ಕುದು. ಹಾಗೆ ಅನ್ವಯಿಸಿಯೆ ವಚನಕಾರರು ಒಂದೊಂದು ಲಿಂಗದಲ್ಲಿಯೇ ಆರಾರು ಲಿಂಗಗಳನ್ನು ಕಾಣುವರು. ಆಚಾರಲಿಂಗದೊಳಗಣ ಆಚಾರಲಿಂಗ, ಆಚಾರಲಿಂಗದೊಳಗಣ ಗುರುಲಿಂಗ, ಆಚಾರಲಿಂಗದೊಳಗಣ ಶಿವಲಿಂಗ, ಆಚಾರಲಿಂಗದೊಳಗಣ ಜಂಗಮಲಿಂಗ, ಆಚಾರಲಿಂಗದೊಳಗಣ ಮಹಾಲಿಂಗ, ಗುರುಲಿಂಗದೊಳಗಣ ಆಚಾರಲಿಂಗ, ಗುರುಲಿಂಗದೊಳಗಣ ಗುರುಲಿಂಗ, ಗುರುಲಿಂಗದೊಳಗಣ ಶಿವಲಿಂಗ, ಗುರುಲಿಂಗದೊಳಗಣ ಜಂಗಮಲಿಂಗ, ಗುರುಲಿಂಗದೊಳಗಣ ಪ್ರಸಾದಲಿಂಗ, ಗುರುಲಿಂಗದೊಳಗಣ ಮಹಾಲಿಂಗ ಇತ್ಯಾದಿ.

ಭಕ್ತನು ಸರ್ವ ಪದಾರ್ಥಗಳಲ್ಲಿಯ ವಿಷಯ ರುಚಿಯನ್ನು ಹಿಂಗಿಸಿ ಶಿವಪ್ರಸಾದ ರುಚಿಯನ್ನು ಬಲಿಸಿ ಆ ರುಚಿಯನ್ನು ತನ್ನ ನಿಷ್ಠಾಭಕ್ತಿಯಿಂದ ಜ್ಞಾನಶಕ್ತಿಯುಕ್ತವಾದ ಗುರುಲಿಂಗಕ್ಕೆ ನಿವೇದಿಸಿ ಸುರುಚಿಪ್ರಸಾದವನ್ನು ಸ್ವೀಕರಿಸಬೇಕು. ರುಚಿಗೆ ಜಲತತ್ವವು ಆಶ್ರಯವಾದುದರಿಂದ ಭಕ್ತನ ಈ ಸ್ಥಲದ ಆಚರಣೆಯಿಂದ ಅವನ ಶರೀರೇಂದ್ರಿಯಗತ ಜಲತತ್ವವೂ ಅದರ ಕಾರ್ಯಗಳೂ ಶುದ್ಧವಾದವುವು.

## ಪ್ರಸಾದಿಸ್ಥಲ

ಶಿವಭಕ್ತಿಯು ಶ್ರದ್ಧಾ-ನಿಷ್ಠಾಭಾವದಿಂದಲೆ ಶಿವನಲ್ಲಿ ಅಂದರೆ ಲಿಂಗದಲ್ಲಿ ಯಾವಾಗಲೂ ಎಚ್ಚರವಿರುವ ರೂಪನ್ನು ಹೊಂದುವುದು. ಇದಕ್ಕೆ ಅವಧಾನಭಕ್ತಿಯೆಂದರು. ಇದು ಭಕ್ತಿಯ ವಿವರಣದಲ್ಲಿ ಸ್ವಾಭಾವಿಕವಾಗಿದೆ. ಶ್ರದ್ಧೆಯೆ ನಿಷ್ಠೆಯಾಗುತ್ತಲು ಆ ನಿಷ್ಠೆಯು ಅವಧಾನರೂಪವನ್ನು ತಾಳಿದವುದು. ಅವಧಾನವೆಂದರೆ ಎಚ್ಚರ. ಆವುದಾನೊಂದು ವಸ್ತುವಿನಲ್ಲಿ ನಮ್ಮ ನಿಷ್ಠೆಯಿದ್ದರೆ ನಾವು ಅದನ್ನು ಕಳೆಯಲಾರದೆ ಎಚ್ಚರದಿಂದ ವರ್ತಿಸಿದವೆವು. ಶಿವನಿಷ್ಠೆಯುಳ್ಳಾತನು ಶಿವನಲ್ಲಿ ಎಚ್ಚರವನ್ನು ತಾಳಿ ಆ ಶಿವತತ್ವವು ತನ್ನ ಕಣ್ಮರೆಯಾಗಬಾರದೆಂದು ಕ್ಷಣಕ್ಷಣದಲ್ಲಿಯೂ ಎಚ್ಚರಪಡುವನು. ಇಂತಹ ಎಚ್ಚರಕ್ಕೆ ಅಂತಃಕರಣವು ಅತ್ಯಂತ ನಿರ್ಮಲ ಅಥವಾ ಪ್ರಸನ್ನವಾಗಿರಬೇಕಾದುದರಿಂದ ಭಕ್ತನಿಗೆ ಇದು ಪ್ರಸಾದಿಸ್ಥಳವೆನಿಸುತ್ತದೆ. ಈ ಅವಧಾನ ಭಕ್ತಿಗೆ ಶಿವಲಿಂಗವೆ ಪೂಜ್ಯವು. ಶಿವಲಿಂಗವೆಂದರೆ ಪರಮಾತ್ಮನ ಮಂಗಳಸ್ವರೂಪವೆಂಬರ್ಥ. ಆ ಮಂಗಳಸ್ವರೂಪವು ನಮಗೆ ಗೋಚರಿಸಲು ನಮ್ಮ ಅಹಂಕಾರವು ಅಳಿಯಬೇಕು. ಅಹಂಕಾರದಲ್ಲಿ ಆತ್ಮನ ಗರ್ವವಿದೆ. ಆ ಗರ್ವದಿಂದ ಶಿವಸ್ವರೂಪದ ಎಚ್ಚರವಿಲ್ಲದಾಗಿದೆ. ಆತ್ಮನ ಅಹಂಕಾರವು ಬಲಿದು, ಎಲ್ಲೆಲ್ಲಿಯೂ ತಾನೆಂಬ ಹೆಮ್ಮೆಯಿಂದ ಸರ್ವಕ್ರಿಯೆಗಳಲ್ಲಿ ಪ್ರವರ್ತನಾಗಿ ಆ ಕ್ರಿಯೆಗಳು



CC-0. Jangamwadi Math Collection, Varanasi. An eGangotri Initiative

ಕೈಗೂಡದಿರಲು ಸಂಸಾರದುಃಖದಲ್ಲಿ ತೊಳಲಿ ಬಳಲುವನು. ಇದರಿಂದ ಚಂಚಲತ್ವವು ಉಂಟಾಗಿ ಶಿವಸ್ವರೂಪವು ಗೋಚರಿಸದು. ಸಂಸಾರದ ಬೇಗೆಯು ಹೆಚ್ಚಳವಾದಪುದು. ಇದನ್ನು ನೀಗಲು ಭಕ್ತನು ನಿರಹಂಕರಣವೆಂಬ ಹಸ್ತದಲ್ಲಿ ಶಿವಲಿಂಗನನ್ನು ಧರಿಸಿ ಅನಧಾನ ಭಕ್ತಿಯಿಂದ ಸರ್ವ ವಿಷಯ ರೂಪಗಳನ್ನು ಇಚ್ಛಾಶಕ್ತಿಯುಕ್ತವಾದ ಶಿವಲಿಂಗಕ್ಕೆ ನೇತ್ರವೆಂಬ ಮುಖದಿಂದ ಅರ್ಪಿಸಿ ಆ ರೂಪ ಪ್ರಸಾದವನ್ನು ಹೊಂದತಕ್ಕುದು. ಹೀಗೆ. ಅರ್ಪಿಸುವಲ್ಲಿ ಭಕ್ತನು ತಾನು ಕಂಡ ಪದಾರ್ಥಗಳಲ್ಲಿ ಹೇಯವಾದವುಗಳನ್ನು ವರ್ಜಿಸಿ ಶೋಭನವಾದವುಗಳನ್ನೆ ಗ್ರಹಿಸಿ ಅವುಗಳನ್ನು ಶುಚಿದೇಹದಿಂದಲೂ ಮನಸ್ಸಿನಿಂದಲೂ ಶಿವಲಿಂಗಕ್ಕೆ ನಿವೇದಿಸಿ ಉಪಭೋಗಿಸತಕ್ಕುದಾಗಿದೆ.

ಶ್ರದ್ಧಾಭಕ್ತಿಯಿಂದ ಲಿಂಗದಲ್ಲಿ ಪ್ರೇಮವುಂಟಾಗಿ ಆ ಪ್ರೇಮದಿಂದ ಇತರ ಸರ್ವಜಾತಿ ವರ್ಣಾದಿ ಧರ್ಮಗಳು ಜಾರಿ ಲಿಂಗಧಾರಣಾಂತು ಶುದ್ಧ ಶರೀರಿಯಾದಪನು. ಶುದ್ಧ ಶರೀರಗಳ ಲ್ಲದ ಸತಿಪುತ್ರಾದಿಗಳನ್ನೂ ಬಾಂಧವರನ್ನೂ ಒಲ್ಲೆನೆಂಬನು. ಆ ಶ್ರದ್ಧೆಯೆ ನಿಷ್ಠೆಯಾಗಿ ಆ ನಿಷ್ಠೆ ಯಿಂದ ವಿವೇಕವು ತಲೆದೋರಿ ವಿವೇಕದಿಂದಾದ ಸಮ್ಯಗ್-ಜ್ಞಾನದಿಂದ ಪ್ರಾಪಂಚಿಕ ಮೋಹಗ ಳನ್ನು ತೊಲಗಿ ಸ್ವಧರ್ಮರತಿಯುಂಟಾಗಿ ಪರದಾರಾದಿ ವ್ಯಸನಗಳನ್ನು ಹಿಂಗಿದವನಾಗಿ ಲಿಂಗದಲ್ಲಿ ಎಚ್ಚರದಿಂದ ಬಂದ ಸತ್ಪದಾರ್ಥಗಳನ್ನೆಲ್ಲ ಲಿಂಗಾರ್ಪಿತವಾಗಿ ಭುಂಜಿಸುವನು. ಶಿವಲಿಂಗಕ್ಕೆ ಕಣ್ಣಿನ ಸ್ಥಾನವನ್ನು ಇಟ್ಟಿರುವುದೆಂದರೆ ಸರ್ವಪದಾರ್ಥಗಳನ್ನು ನೋಡಲು ಕಣ್ಣೆ ಕಾರಣವು. ನೋಡಿದ ಪದಾರ್ಥಗಳಲ್ಲಿ ಮನಸ್ಸಿನ ರುಚಿ ಉದ್ಭವಿಪುದು. ರುಚಿಯುಂಟಾದ ಪದಾರ್ಥವನ್ನು ಅಹಂಕರಣೆಯುಕ್ತನಾಗಿ ಆತ್ಮನು ಭುಂಜಿಪನು. ಇದನ್ನು ಶಿವಲಿಂಗವನ್ನು ನೇತ್ರೇಂದ್ರಿಯದಲ್ಲಿ ಸ್ಥಾಪಿಸುವುದರಿಂದ ನೀಗಬಹುದು. ದೇಹದಲ್ಲಿ ಧರಿಸಿದ ಇಷ್ಟಲಿಂಗವೆ ಸದಾಚಾರಮೂಲವಾಗಿ ಆಚಾರಲಿಂಗವೆನಿಸಿ ಘ್ರಾಣೇಂದ್ರಿಯಗತವಾಯಿತು. ಆ ಇಷ್ಟಲಿಂಗವೆ ಜ್ಞಾನೋದಯಕ್ಕೆ ಕಾರಣ ವಾಗಿ ಗುರುಲಿಂಗವೆನಿಸಿ ವಿವೇಕಾಚರಣೆಯಲ್ಲಿ ನಿಲ್ಲಿಸಿ ಆ ಸದ್ರುಚಿಗಳನ್ನು ಹೋಗಲಾಡಿಸಿತು. ಆ ಇಷ್ಟಲಿಂಗದ ರೂಪದರ್ಶನವೆ ಶಿವಲಿಂಗವೆನಿಸಿ ನೇತ್ರೇಂದ್ರಿಯದಲ್ಲಿ ನಿಂದು ಸರ್ವಶೋಭನ ಪದಾರ್ಥಗಳಲ್ಲಿ ಹೊಳೆದು ಇತರ ಪದಾರ್ಥಗಳನ್ನು ದೂರೀಕರಿಸಿ ಭಕ್ತನಿಂದ ನಿವೇದಿತವಾದ ಸತ್ಪದಾರ್ಥಗಳನ್ನು ಅಂಗೀಕರಿಸಿ ಅವನ ಅಹಂಕಾರವನ್ನು ಕೆಡಿಸಿ ತನ್ನಲ್ಲಿ ಎಚ್ಚರವನ್ನು ಸ್ಥಿರ ಪಡಿಸಿ ನೈರ್ಮಲ್ಯವನ್ನುಂಟುಮಾಡಿತು. ಇದರಿಂದ ಶರೀರೇಂದ್ರಿಯಂಗಳಲ್ಲಿರುವ ಅಗ್ನಿತತ್ವವೂ ಅದರ ಕಾರ್ಯಗಳೂ ಶುದ್ಧವಾದವು.

## ವಚನಗಳು

ಮಾಹೇಶ್ವರ ಮತ್ತು ಪ್ರಸಾದಿಸ್ಥಳಗಳ ವಿಷಯದಲ್ಲಿ ಕೆಲವು ವಚನಗಳನ್ನು ಉದಾ ಹರಿಸಿ ನಾವಿಲ್ಲಿ ಬರೆದುದನ್ನು ಗಟ್ಟಿಗೊಳಿಸುವಣ.

ವಚನ ೭೦: ಕುರಿವಿಂಡು ಕಬ್ಬಿನ ಉಲಿವ ತೋಟವ ಹೊಕ್ಕು ತೆರನನರಿಯದೆ ತನಿರಸದ ಹೊರಗಣ ಎಲೆಯನೆ ಮೆಲೆದವು. ನಿಮ್ಮನರಿವ ಮದಕರಿಯಲ್ಲದೆ ಕುರಿಬಲ್ಲುದೇ ಕೂಡಲಸಂಗಮದೇವ ?

ವಚನ ೭೧: ವೇದವನೋದಿದರೇನು ? ಶಾಸ್ತ್ರವ ಕೇಳಿದರೇನಯ್ಯ ? ಜಪವ ಮಾಡಿದರೇನು ? ತಪವ ಮಾಡಿದರೇನಯ್ಯ ? ಏನು ಮಾಡಿದರೇನು, ನಮ್ಮ ಕೂಡಲಸಂಗಯ್ಯನ ಮನಮುಟ್ಟದನ್ನಕ್ಕ ?



CC-0. Jangamwadi Math Collection, Varanasi. An eGangotri Initiative

ವಚನ ೩ : ಅಗ್ಘವಣಿ, ಪತ್ರಿ, ಪುಷ್ಪ, ಧೂಪ, ದೀಪ, ನಿವಾಳಿಯಲ್ಲಿ ಪೂಜಿಸಿ ಪೂಜಿಸಿ ಬಳಲುತಿಪ್ಪಾರೆ, ಏನೆಂದರಿಯರು; ಎಂತೆಂದರಿಯರು. ಜನ ಮರುಳೊ ? ಜಾತ್ರೆ ಮರುಳೊ ? ಎಂಬಂತೆ ಎಲ್ಲರೂ ಪೂಜಿಸಿ, ಏನನೂ ಕಾಣದೆ ಲಯಕ್ಕೊಳಗಾಗಿ ಹೋದರು ಗುಹೇಶ್ವರಾ.

ವಚನ ೭ : ಮಜ್ಜನಕ್ಕೆರೆದು, ಫಲವ ಬೇಡುವರಯ್ಯಾ! ತಮಗೆಲ್ಲಿಯದೋ ಆ ಫಲವು ಸಿತಾಳಕ್ಕಲ್ಲದೆ ? ಪತ್ರಿ ಪುಷ್ಪದಲ್ಲಿ ಪೂಜಿಸಿ ಫಲವ ಬೇಡುವರು ! ತಮಗೆಲ್ಲಿಯದೋ ಆ ಫಲವು ಗಿಡುಗಳಿಗಲ್ಲದೆ ? ಸುಯಿಧಾನವನರ್ಪಿಸಿ, ಪ್ರಸಾದದ ಫಲವ ಬೇಡುವರು ! ತಮಗೆಲ್ಲಿಯದೊ ಆ ಫಲವು ಹದಿನೆಂಟು ಧ್ಯಾನಕ್ಕಲ್ಲದೆ ? ಲಿಂಗದೊಡವೆಯ ಲಿಂಗಕ್ಕೆ ಕೊಟ್ಟು, ಫಲವ ಬೇಡುವ ಸರ್ವ ಅನ್ಯಾಯಿಗಳನೇನೆಂಬೆ ! ಗುಹೇಶ್ವರಾ ?

ಮೊದಲಿನವೆರಡು ಶ್ರೀಮದ್ಬಸವ ವಚನಗಳು. ಕೊನೆಯವೆರಡು ಶ್ರೀಮದಲ್ಲಮಪ್ರಭುವಿನವು. ಪೂರ್ವದ ಶಿವಜ್ಞಾನಿಗಳು ಇವನ್ನು ಮಾಹೇಶ್ವರ ಸ್ಥಲಕ್ಕೆ ಸಂಪಾದಿಸಿರುವರು. ಶಿವಭಕ್ತಿಯು ನಿಷ್ಠೆ ಇಲ್ಲದೆ ಬಱಿಯ ಮೇಲೆ-ಮೇಲಿನ ವಿಚಾರದಿಂದ ಉಂಟಾಗದು. ಕುಱಿಯ ಹಿಂಡು ಕಬ್ಬಿನ ತನಿರಸವನ್ನು ಸವಿಯಲಾರದೆ ಮೇಲಿನ ಎಲೆಗಳನ್ನಷ್ಟೆ ಮೆಲಿದವುದು. ಅದರ ಹಲ್ಲು ಆ ತನಿರಸಕ್ಕೆ ಇಳಿವಂತಹವಲ್ಲ. ಅವುಗಳ ಸಾಮರ್ಥ್ಯವು ಅನಿತೊಂದಲ್ಲ. ಗಜವಾದರೊ ತನ್ನ ಗಟ್ಟಿಯಾದ ಹಲ್ಲುಗಳಿಂದ ಕಬ್ಬಿನೊಳಗಣ ರಸವನು ಹೀರಿ ಸವಿಯಬಲ್ಲದು. ಈ ವಚನದಲ್ಲಿ ಕರಿಗೆ ಮದವೆಂಬ ವಿಶೇಷಣವು ಬಲು ಮಾರ್ಮಿಕವಾಗಿದೆ. ಕರಿಯು ಮದದಿಂದ ಮತ್ತೊಂದನ್ನು ಲಕ್ಷಿಸುವುದಿಲ್ಲ. ಅದರಂತೆಯೆ ಶಿವನಿಷ್ಠನಾದ ಭಕ್ತನು ಲೋಕ-ಲೌಕಿಕಾಚಾರಗಳನ್ನು ಲೆಕ್ಕಿಸದೆ ಶಿವನಲ್ಲಿಯೆ ನಟ್ಟ ಭಕ್ತಿಯುಳ್ಳವನಾಗಿ ಶಿವನನ್ನು ಪೂಜಿಸುವನು. ಅಂತಹ ಭಕ್ತಿಗಲ್ಲದೆ ಶಿವನು ತನ್ನ ಸ್ವರೂಪವನ್ನು ತೋರನು. ಇಂತಹ ಶಿವಭಕ್ತಿಗೆ ವೇದ, ಶಾಸ್ತ್ರಾದಿ ಜ್ಞಾನವು ಅಷ್ಟೊಂದು ನೆರವಾಗದು. ವೇದದಲ್ಲಿ ಹಲವು ದೇವತೆಗಳ ಉಪಾಸನವು, ಹಲವು ಕರ್ಮಗಳ ವಿವರಣವು ಉಂಟು. ಅವುಗಳಿಂದ ಶಿವಭಕ್ತಿಯು ಮರೆಯಾದವುದು. ವೇದಸಂಹಿತೆಯಲ್ಲಿರುವ ರುದ್ರಸೂಕ್ತಗಳು ರುದ್ರನನ್ನು ಮರುದಿಂದ್ರಾದಿ ದೇವತೆಗಳೊಡನೆ ಬೆರೆಯಿಸಿ ಹೇಳಿದವುವಾದುದರಿಂದ ಅನನ್ಯ ಶಿವಭಕ್ತಿಗೆ ಅಷ್ಟೊಂದು ಎಚ್ಚರವಾಗವು. ಅಥರ್ವಶಿಖ, ಕೈವಲ್ಯ, ಶ್ವೇತಾಶ್ವೇತರಾದ್ಯುಪನಿಷತ್ತುಗಳಲ್ಲಿ —

ಶಿವ ಏಕೋ ಧ್ಯೇಯಃ ಸರ್ವಮನ್ಯಾತ್ಪರಿತ್ಯಜ್ಯ ಯದಾ ಚರ್ಮವದಾಕಾಶಂ ವೇಷ್ಟಯಿಷ್ಯಂತಿ ಮಾನವಾಃ ॥
ತದಾ ಶಿವಂ ವಿಜ್ಞಾಯ ದುಃಖಸ್ಯಾಂತು ಭವಿಷ್ಯತಿ ಜ್ವಾಲಾಯ ನಮಃ ಜ್ವಲ ಲಿಂಗಾಯ ನಮಃ ॥

ಇತ್ಯಾದಿಯಾಗಿ ಕೇವಲ ಶಿವೋಪಾಸನವನ್ನು ವಿಧಿಸುವುದಾದರೂ ಇವುಗಳ ಘೋಷಣೆಯು ನಿಬಿಡವಾದ ಇತರ ಶಬ್ದ ಘೋಷಣದಲ್ಲಿ ಅಡಗಿದೆ. ಅದರಂತೆಯೆ ಇತರ ಶಾಸ್ತ್ರಗಳಾಗಲಿ, ಮಂತ್ರಗಳಾಗಲಿ, ತಪಸ್ಸಾಗಲಿ ಶಿವಭಕ್ತಿಯ ಹೊಲಬನ್ನು ತಿಳಿಸವು. ಶಿವನನ್ನು ಮುಟ್ಟಿದ ಮನವೆ ಶಿವನನ್ನು ಅರಿವುದು.

ಮನೋತೀತವಾದ ಶಿವತತ್ತ್ವವನು ಮನವು ಅರಿವುದೆಂತು ? ಎನಲಾಗದು. ಮನವು ಭಕ್ತಿಪ್ರೇರಿತವಾಗಿ ಶಿವನನ್ನು ಧ್ಯಾನಿಸಹತ್ತಲು ಅದು ಶಿವಮಯವಾಗಿಯೆ ಶಿವನನ್ನು ಕಾಣುವಲ್ಲಿ ಆತ್ಮನ ಚಿಚ್ಛಕ್ತಿಯ ಸ್ವರೂಪವನ್ನೇ ಹೊಂದುವುದು.

ಸಿ. ರಾ. ವ. ೩೧೬ : ವಾಯು ಮಿತ್ರನಾಗುವದದು ಲೇಸು. ಮನವೆ ಬೇಡ ಬೇಡ. ಹೋದಹೋದಲ್ಲಿ ವಸ್ತುರೂಪವಾಗುವದದು. ಅದು ಲೇಸೇ ? ಮನವೇ ಅಲ್ಲಲ್ಲ. ವಾಯು ಬಿಟ್ಟು ವಾಯುವೈರಿಯಾದರೆ ವಾಯುವೆ ಮನವೆ ನಿನ್ನ ಸಾಹಸ-ಕಪಿಲಸಿದ್ಧ ಮಲ್ಲಿಕಾರ್ಜುನಾ.



CC-0. Jangamwadi Math Collection, Varanasi. An eGangotri Initiative

ಶ್ರೀಮದಲ್ಲಮಪ್ರಭುವಿನ ವಚನಗಳಲ್ಲಾದರು ಕೇವಲ ವಿಧಿವಿಹಿತವೆಂದು ಮಾಡುವ ಶಿವ ಪೂಜೆಯೂ ಫಲಾಕಾಂಕ್ಷೆಯಿಂದ ಮಾಡುವ ಶಿವಪೂಜೆಯೂ ನಿಜವಾದ ಸುಖವನ್ನುಂಟುಮಾಡವು. ಕೇವಲ ಶಿವನಿಷ್ಠೆಯಿಂದ ಮಾಡಿದ ಪೂಜೆಯು ಆ ಶಿವನನ್ನೆ ಭಕ್ತನಲ್ಲಿ ತೋರಪಡಿಸುವುದು ಎಂದು ಹೇಳಿಯಿದೆ. ಅದರಂತೆಯೆ ಪ್ರಸಾದಿ ಸ್ಥಳದಲ್ಲಿಯಾದರು ವಚನಗಳನ್ನು ಉದಾಹರಿಸುವೆವು.

ವಚನ: ಶುದ್ಧವ ಗುರುವಿಂಗೆ ಕೊಟ್ಟು ಶುದ್ಧವಾಯಿತ್ತೆಂಬೆನಯ್ಯ. ಸಿದ್ಧವ ಲಿಂಗಕ್ಕೆ ಕೊಟ್ಟು ಸಿದ್ಧ ವಾಯಿತ್ತೆಂಬೆನಯ್ಯ. ಪ್ರಸಿದ್ಧವ ಜಂಗಮಕ್ಕೆ ಕೊಟ್ಟು ಪ್ರಸಿದ್ಧವಾಯಿತ್ತೆಂಬೆನಯ್ಯ. ಗುರು–ಲಿಂಗ–ಜಂಗಮವು ವನೇಕತ್ರಯವಾಗಿ ಕಾಣಲರಿಯದಿದ್ದರೆ ಶುದ್ಧ, ಸಿದ್ಧ, ಪ್ರಸಿದ್ಧ ಒಡನೆ ನುಡಿವುತ್ತಿದ್ದಾನೆ. ತನು–ಮನ–ಧನವ ನಿವೇದಿಸಲರಿಯರಾಗಿ ಕೂಡಲಸಂಗಮದೇವ ಒಲಿ ಎಂದೊಡೆಂತೊಲಿವ ?

ವಚನ : ಶಿವಾಚಾರವೆಂಬುದೊಂದು ಬಾಳಬಾಯಿಧಾರೆ, ಲಿಂಗ ಮೆಚ್ಚಬೇಕು, ಜಂಗಮ ಮೆಚ್ಚಬೇಕು, ಪ್ರಸಾದ ಮೆಚ್ಚಿ ತನ್ನಲ್ಲಿ ಸ್ವಾಯತವಾಗಿರಬೇಕು. ಬಿಚ್ಚಿ ಬೇರಾದರೆ, ಮೆಚ್ಚ ನಮ್ಮಾ ಕೂಡಲಸಂಗಮದೇವ.

ಶಿವನನ್ನು ದೊರಕಿಸಬೇಕೆಂಬ ಹಂಬಲದಿಂದ ಶುದ್ಧವಾದ ತನುವನ್ನು ಗುರುಪಾದದಲ್ಲಿ ನೀಡಿ ಲಿಂಗಸಂಬಂಧವನ್ನು ಹೊಂದಿದರಿಂದ ತನುವು ಶುದ್ಧ ಪ್ರಸಾದವಾಯಿತ್ತು. ಹಲವು ಸಂಕಲ್ಪ ವಿಕಲ್ಪ ಗಳನ್ನು ತೊರೆದು, ಶಿವನನ್ನು ಅವಧಾನದಿಂದ ಚಿಂತಿಸಿ, ಲಿಂಗದಡಿಯಲ್ಲಿಯೆ ನಿಂದ ಮನಸ್ಸು ಸಿದ್ಧ ವಸ್ತುವಾಗಿ ಮನವು ಸಂಕಲ್ಪ-ವಿಕಲ್ಪಗಳಿಂದ ಚಲಿಸುತ್ತಿರುವಾಗ ಅದು ಆವುದೊಂದು ನಿಜವಾದ ರೂಪವನ್ನು ಹೊಂದದರಿಂದ ಸಿದ್ಧವೆನಿಸದು. ಲಿಂಗನಿಷ್ಠೆಯಿಂದ ಏಕರೂಪವಾಗಲು ಅದೆ ಸಿದ್ಧವೆನಿ ಸಿತು. ಶುದ್ಧ ತನುವಿನಿಂದ ಸಿದ್ಧಮನಸ್ಸಿನಿಂದ ನಿಷ್ಪನ್ನವಾದುದರಿಂದ ಪ್ರಕರ್ಷರೂಪದಿಂದ ಸಿದ್ಧ ವೆನಿಸುವ ಧನವನ್ನು ಶಿವಭಕ್ತಿಗರ್ಪಿಸಿ ಆ ಸಂಪತ್ತನ್ನು ವಿನಿಯೋಗಿಸುವುದೆ ಪ್ರಸಿದ್ಧವೆನಿಸಿತು. ಈ ಅರ್ಪಣತ್ರಯದಲ್ಲಿ ನಾವು ಮೇಲೆ ವಿವರಿಸಿದ ರೀತಿಯಲ್ಲಿ ಗುರು-ಲಿಂಗ-ಜಂಗಮವು ಏಕವೆಂದೇ ಭಾವನೆ ಇರಬೇಕು. ಅಂತಹ ಅರ್ಪಣದಿಂದ ತನು-ಮನ-ಧನವು ಶುದ್ಧವಾಗಿ ಶಿವಾರ್ಪಿತವೆನಿಸಿ ಭಕ್ತನು ಶಿವಸಮಾವೇಶವನ್ನು ಹೊಂದುವನು. ಈ ಶಿವಾಚಾರವೆಂಬುದು ಅಲಗಿನ ಬಾಯಂತೆ ಬಲು ಹದನಾದುದು. ಗುರು-ಲಿಂಗ-ಜಂಗಮವು ಮೆಚ್ಚಿ ಪ್ರಸಾದವು ತನ್ನಲ್ಲಿ ಸ್ವಾಯತವಾಗಬೇಕು.

## ಪ್ರಾಣಲಿಂಗಿಸ್ಥಳ

ಅವಧಾನಭಕ್ತಿಯಿಂದ ಎಚ್ಚರವಾಗಿ ನಡೆವ ಭಕ್ತನಲ್ಲಿ ಶಿವಸ್ವರೂಪಾನುಭವವು ತೋರು ವುದು. ಇದುವೆ ಪ್ರಾಣಲಿಂಗಿಯ ಸ್ಥಳವು.

ವಚನ : ಮರ್ತ್ಯಲೋಕದ ಮಾನವರು ದೇಗುಲದೊಳಗೊಂದು ದೇವರ ಮಾಡಿದಡೆ ಅನು ಬೆರಗಾದೆ ನಯ್ಯಾ ! ನಿಚ್ಚಕ್ಕೆ ನಿಚ್ಚ ಅರ್ಚನೆಯ ಪೂಜನೆಯ ಮಾಡಿಸಿ ಭೋಗವ–ಮಾಡುವವರ ಕಂಡು ನಾನು ಬೆರಗಾ ದೆನು ! ಗುಹೇಶ್ವರಾ ನಿಮ್ಮ ಶರಣರು ಹಿಂದೆ ಲಿಂಗವನಿರಿಸಿ ಹೋಗರು.

ವಚನ : ಹೊಟ್ಟೆಯಮೇಲೆ ಕಟ್ಟೋಗರದ ಮೊಟ್ಟೆಯ ಕಟ್ಟಿದರೇನು ? ಹಸಿವು ಹೋವುದೆ ? ಅಂಗದ ಮೇಲೆ ಲಿಂಗಸ್ವಾಯತವಾದರೇನು ? ಇಟ್ಟ ಕಲ್ಲು ಮೆಳೆಯ ಮೇಲೆ ಸಿಕ್ಕಿದಡೆ, ಆ ಕಲ್ಲು ಲಿಂಗವೆ ? ಆ ಮೆಳೆ ಭಕ್ತನೆ ? ಇಟ್ಟಾತ ಗುರುವೆ ? ಇಂತಪ್ಪವರ ಕಂಡಡೆ ನಾನು ನಾಚುವೆನಯ್ಯ ! ಗುಹೇಶ್ವರಾ.

ಈ ವಚನಗಳು ಪ್ರಾಣಲಿಂಗಿಸ್ಥಳದ ಮರ್ಮವನ್ನು ಅರುಹಿದವುವು. ಲೋಕದ ಮಾನವರು ಲಿಂಗ ವೊಂದನ್ನು ದೇವಾಲಯದಲ್ಲಿ ನಟ್ಟು ಲಿಂಗಪೂಜೆಗಾಗಿ ಕೆಲವು ವಿನಿಯೋಗಾದಿಗಳನ್ನು ನೇಮಿಸಿ ವಿನಿಯೋಗಾಂತರದಲ್ಲಿ ಲಿಂಗಪ್ರಸಾದವನ್ನು ಸೇವಿಸುವರು. ವಿನಿಯೋಗವು ತಪ್ಪಿದರೆ ತಮ್ಮ ಪ್ರಾಣವನ್ನೆ ಕೊಡುವರು. ತಾವು ಸತ್ತಬಳಿಕ ಆ ಲಿಂಗವು ಇಲ್ಲಿಯೆ ಉಳಿವುದು. ಗುಹೇಶ್ವರನ



CC-0. Jangamwadi Math Collection, Varanasi. An eGangotri Initiative

ಶರಣರು ಅಂತಲ್ಲ. ತಮ್ಮೊಡನೆ ತಮ್ಮ ಲಿಂಗವೂ ಪರವಸ್ತುವಾಗಿ ಉಳಿದಪರು. ಈ ಗುಡಿ ಗುಂಡಾರಗಳಲ್ಲಿ ಪೂಜೆಯ ಮಾಡದೆ ದೇಹದಲ್ಲಿ ಇಷ್ಟಲಿಂಗವ ಧರಿಸಿ ಪೂಜೆಯ ಮಾಡುವರಾದರೂ ಆ ಇಷ್ಟಲಿಂಗದ ಹೊಲಬು ತಿಳಿಯದೆ ಅಂದರೆ ಇಷ್ಟಲಿಂಗದ ಸತ್ಕ್ರಿಯಾರಾಧನದಿಂದ ತಮ್ಮ ಕ್ರಿಯಾಶಕ್ತಿಯು ಶುದ್ಧವಾಗಿ ಅಂತಹ ಕ್ರಿಯಾಶಕ್ತಿಯುಕ್ತ ಚೈತನ್ಯವೆ ತಮ್ಮಲ್ಲಿ ಪ್ರಕಟವಾಗಿ ಆ ಪ್ರಕಟ ಚೈತನ್ಯದ ಕುರುಹೇ ಇಷ್ಟಲಿಂಗವೆಂದರಿಯದೆ ಹೋದರೆ ಲಿಂಗದ ಶಿಲಾಭಾವವು ಅಳಿಯದು. ತಮ್ಮ ಜೀವಭಾವವು ಅಳಿಯದು. ಚೈತನ್ಯಕ್ಕೆ ಚೈತನ್ಯ ಸಂಗತ. ಜಡಕ್ಕೆ ಜಡವು ಸಂಗತ. ಇಷ್ಟಲಿಂಗದ ಮರ್ಮವ ತಿಳಿಯದೆ ಕೇವಲ ಪ್ರತೀಕವನ್ನು ಧರಿಸುವುದೆಂದರೆ ಜಡಕ್ಕೆ ಜಡವು ಕೂಡಿದಂತಾಗಿ ಬಿದಿರ ಮೆಳೆಯ ಮೇಲೆ ಕಲ್ಲು ಇಟ್ಟಂತೆ ಆದಪುದು. ಆದರೆ ಕ್ರಿಯಾಚಾರ ದಿಂದ ಇಷ್ಟಲಿಂಗವು ಸಾಧ್ಯವಾಗಲು ಆತ್ಮನ ಕರಣಗಳಲ್ಲೆಲ್ಲ ಲಿಂಗಚೈತನ್ಯವು ತುಂಬಿ ಲಿಂಗೇಂದ್ರಿಯಂಗಳಾದಪುವು.

ಈ ಪ್ರಾಣಲಿಂಗ ಸ್ಥಳಕ್ಕೆ ಸೇವ್ಯವು ಜಂಗಮಲಿಂಗವಾಗಿದೆ. ಆ ಜಂಗಮಲಿಂಗಕ್ಕೆ ಸುಮನವೆಂಬ ಹಸ್ತವು ಆದಿಶಕ್ತಿಯು. ಭಕ್ತನಿದನ್ನು ಅನುಭವ-ಭಕ್ತಿಯಿಂದ ಪೂಜಿಸಿ ತ್ವಗಿಂದ್ರಿಯವೆಂಬ ಲಿಂಗ ಮುಖಕ್ಕೆ ತನಗೆ ತಟ್ಟುವ ಸ್ಪರ್ಶದ್ರವ್ಯಗಳನ್ನು ತಂದು ಸುಸ್ಪರ್ಶ ಪ್ರಸಾದವನ್ನು ಸ್ವೀಕರಿಸಬೇಕು.

ಆವುದಾನೊಂದು ಒಡವೆಯನ್ನು ಅವಧಾನಪೂರ್ವಕ ನೋಡದೆ ಆ ಒಡವೆಯ ಅನುಭವವು ಆಗದು. ಅನುಭವಕ್ಕೆ ತಕ್ಕ ಉಪಕರಣಗಳೂ ಚಿತ್ತೈಕಾಗ್ರವೂ ಬೇಕು. ಮೊದಲಿನ ಎರಡು ಸ್ಥಳಗಳಿಂದ ನಮ್ಮ ಚಿತ್ತಶುದ್ಧಿಗಳು ಭೂಜಲಸಂಬಂಧವಾದ ಇಂದ್ರಿಯಗಳು ಪರಿಷ್ಕೃತಿಯನ್ನು ಹೊಂದಿ ಈ ಲಿಂಗದ ಅನುಭವಕ್ಕೆ ಸಹಾಯಕಗಳಾಗುತ್ತವೆ. ಪ್ರಸಾದಿ ಸ್ಥಳವಲ್ಲಿ ಈ ಶರೀರೇಂದ್ರಿಯಗಳು ಲಿಂಗದಲ್ಲಿ ನಿವೇದಿತವಾಗಿ ಲಿಂಗಮಗ್ನವಾದಪುವು. ಆಗ ಅವು ಲಿಂಗವನ್ನು ತಿಳಿವವು. ಒಂದೆ ಒಂದು ಲಿಂಗಕ್ಕೆ ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗ, ಮಹಾಲಿಂಗವೆಂದು ಹೆಸರಿಟ್ಟುದಕ್ಕೆ ಪ್ರಯೋಜನವೇನು? ಎಂಬುದನಿಷ್ಟು ನೋಡಬಹುದು.

ಅಖಂಡವಾದ ಒಂದೇ ಭಕ್ತಿಯು ಒಂದೇ ಲಿಂಗವನ್ನು ಸಾಕ್ಷಾತ್ಕರಿಸುವುದು ನಿಜವು. ಆದರೆ ಆ ಭಕ್ತಿಯು ಭಿನ್ನ ಭಿನ್ನೇಂದ್ರಿಯಂಗಳಲ್ಲಿ ಭಿನ್ನ ಭಿನ್ನ ಕರಣಗಳಲ್ಲಿ ಪ್ರವಹಿಸುತ್ತಿರುವುದರಿಂದ ಅಲ್ಲಲ್ಲಿಯ ಇಂದ್ರಿಯ ಕರಣಂಗಳ ದ್ವಾರಾ ಒದಗುವ ಅನುಭಾವಾನುಗುಣಾನುವಾಗಿ ಆ ಚೈತನ್ಯವು ಸ್ಪಷ್ಟತೆಗಾಗಿ ಭಿನ್ನ ಭಿನ್ನ ನಾಮಗಳನ್ನು ತಳೆದರೂ ಏಕರೂಪವಾಗಿದೆ. ಶರೀರವನ್ನು ಹರಡಿದ ವಾಯುವು ಒಂದೆಯಾಗಿದ್ದರು ಪ್ರಾಣಾಪಾನ ವ್ಯಾನೋದಾನ ಸಮಾನವೆಂದೂ ನಾಗ ಕೂರ್ಮ ಕೃಕರ ದೇವದತ್ತ ಧನಂಜಯವೆಂದೂ ಹೆಸರುಗಳನ್ನೂ ಬಳಿಹೆಸರುಗಳನ್ನೂ ತಾಳುವಂತೆ ಹಾಗು ಒಂದೆ ಚೈತನ್ಯವು ನಾನಾ ಇಂದ್ರಿಯಂಗಳಲ್ಲಿ ವ್ಯಾಪಿಸಿ ಬೇರೆ ಬೇರೆ ಜ್ಞಾನವೆನಿಸಿಕೊಳುವಂತೆಯೂ ಈ ಒಂದು ಅಖಂಡಲಿಂಗವು ಆಗಿದೆ.

ಇನ್ನು ಜಂಗಮಲಿಂಗವೆಂದರೇನು? ಜಂಗಮವೆಂದರೆ ಅತಿಸೋಲಾದ ಅರಿವು ಎಂಬ ಅರ್ಥವು. ಈ ಶಬ್ದವು 'ಗಮ್' ಧಾತುವಿನಿಂದ ಹುಟ್ಟಿದೆ. ಇದನಂತ 'ಗಮ್' ಧಾತುವಿಗೆ 'ಅಚ್' ಪ್ರತ್ಯಯವು ಸೇರಿ ಜ್ಞಾನ ಶೀಲವಾದುದೆಂಬರ್ಥದಲ್ಲಿ ಹುಟ್ಟಿದೆ. ಆಚಾರಲಿಂಗ, ಗುರುಲಿಂಗ, ಶಿವ



CC-0. Jangamwadi Math Collection, Varanasi. An eGangotri Initiative

ಲಿಂಗಗಳು ಯಥಾಕ್ರಮವಾಗಿ ಸದಾಚಾರಕ್ಕೂ ವಿವೇಕಕ್ಕೂ ಎಚ್ಚರಕ್ಕೂ ಉಪಾಸ್ಯವಾದಂತೆ ಈ ಲಿಂಗವು ಜ್ಞಾನಕ್ಕೆ ಉಪಾಸ್ಯವಾಗಿದೆ. ಈ ಜ್ಞಾನವು ಶಿವಸ್ವರೂಪವಾಗಿದ್ದು ಮನಸ್ಸಿನಲ್ಲಿ ತುಂಬಿಹುದು. ಮನಸ್ಸಿನಲ್ಲಿರುವ ಈ ಜ್ಞಾನಕ್ಕೆ ಮನವೇ ಹಸ್ತವು. ಭಕ್ತಿಯು ಅನುಭವರೂಪ ದಿಂದಲೆ ಇದನ್ನು ಅರಿಯಬೇಕಾಗಿರುವುದರಿಂದ ಅನುಭವ-ಭಕ್ತಿಯಿಂದಲೆ ಇದನ್ನು ಪೂಜಿಸು ವೆವು. ಸರ್ವವಿಷಯಗಳು ಆಯಾ ಇಂದ್ರಿಯಗಳ ಸೋಂಕಿನಿಂದ ತಮ್ಮ ತಮ್ಮ ಜ್ಞಾನವನ್ನು ಒದಗಿಪುದರಿಂದ ಲಿಂಗವಂತನಿಗೆ ಪ್ರಸಾದಮಯವಾದ ಈ ಒಡವೆಗಳ ಸೋಂಕು ಜಂಗಮಲಿಂಗದಲ್ಲಿ ಉಂಟಾಗುವುದರಿಂದ ಸೋಂಕಿಗೆ ಆಧಾರವಾದ ತ್ವಗಿಂದ್ರಿಯವೇ ಜಂಗಮಲಿಂಗದ ಮುಖ ವೆನಿಸಿತು. ಇಚ್ಛಾ, ಜ್ಞಾನ, ಕ್ರಿಯೆಗಳು ಆಯಾ ಪದಾರ್ಥದ ಜ್ಞಾನದನಂತರದಲ್ಲಿ ತೋರುವುದರಿಂದ ಇವುಗಳಿಗೆ ಈ ಶಕ್ತಿಯು ಆದಿಯಾಗಿದೆ. ಅದರಿಂದ ಜಂಗಮಲಿಂಗಕ್ಕೆ ಆದಿಶಕ್ತಿಯು ಎಂದು ಶರಣರು ನುಡಿದರು.

ಇಲ್ಲೊಂದು ಸಂಶಯವು ತೋರಿಬರುವುದು. ಗುರುಲಿಂಗದ ಜ್ಞಾನಶಕ್ತಿಗೂ ಈ ಜಂಗಮಲಿಂಗದ ಆದಿಶಕ್ತಿಗೂ ಭೇದವೇನು? 'ಗಮ್' ಧಾತುವು ಜ್ಞಾನಾರ್ಥಕವೆಂದು ಹೇಳಿದಿರಿ. ಜಂಗಮಲಿಂಗವೆಂದರೆ ಜ್ಞಾನಲಿಂಗವೆಂದಂತಾಯಿತು. ಇದು ತತ್ವವಿವೇಚನಕ್ಕೆ ಸರಿಯಾಗಲಾರದು ಎನಬಹುದು.

ಗುರುಲಿಂಗದ ಜ್ಞಾನಶಕ್ತಿಯೆಂದರೆ ಒಂದೊಂದು ಇಂದ್ರಿಯಂಗಳಲ್ಲಿ ತೋರಿಬರುವ ಚೈತನ್ಯವು. ಜಂಗಮಲಿಂಗದ ಚೈತನ್ಯವೆಂದರೆ ಆ ಸರ್ವ ಇಂದ್ರಿಯಂಗಳಿಗೆ ಪ್ರೇರಕವಾದ ಮನಸ್ಸಿ ನಲ್ಲಿ ವ್ಯಾಪಿಸಿದ ಚೈತನ್ಯವು. ಅದು ಒಂದೊಂದು ವಿಷಯಕ್ಕೆ ಅಲ್ಲದೆ ಸರ್ವ ವಿಷಯಗಳಿಗೂ ಸಾಧಾರಣವಾಗಿ ಸಂಬಂಧಪಡುವುದು. ಆದುದರಿಂದ ಆ ಲಿಂಗಕ್ಕೆ ಆದಿಶಕ್ತಿಯೆಂದು ಹೇಳಬೇಕು. ಆದಿಶಕ್ತಿಯುಕ್ತವಾದ ಜಂಗಮಲಿಂಗವು ಮನಃಕರಣದಲ್ಲಿ ನಿರೀಕ್ಷಿಸಿದ ಶುದ್ಧ ಪದಾರ್ಥಗಳಲ್ಲಿ ಇಚ್ಛೆಯುಂಟಾಗಿ ನಿರಹಂಕರಣ ಹಸ್ತದಲ್ಲಿರುವ ಶಿವಲಿಂಗಕ್ಕೆ ನಿವೇದಿತವಾದವುದು. ಹೀಗೆ ಇಚ್ಛಿಸ ಲ್ಪಟ್ಟ ಪದಾರ್ಥಗಳನ್ನು ಆಯಾ ಇಂದ್ರಿಯ ಮುಖದಿಂದ ಜ್ಞಾನಶಕ್ತಿಯುಕ್ತವಾದ ಗುರುಲಿಂಗವು ಅರಿವುದು. ಹೀಗೆ ಅರಿತ ಪದಾರ್ಥಗಳಲ್ಲಿ ಆಚಾರಲಿಂಗವು ನಾಸಿಕಾಮುಖದಿಂದ ವಾಸನೆಗಳನ್ನು ಸಂಗ್ರಹಿಸುವುದು. ಅದರಂತೆಯೆ (ವಾಸನದಂತೆಯೆ) ಜ್ಞಾನ, ಜ್ಞಾನದಂತೆ ಇಚ್ಛೆ, ಇಚ್ಛೆಯಂತೆ ಅನುಭವವೂ ಉಂಟಾಗುವುದು. ಇದೇ ವಿಚಾರವನ್ನು ಮುಂದಿನ ಎರಡು ಲಿಂಗಗಳಿಗೆ ಆಚಾರ ಲಿಂಗವಾದಿಯಾಗಿ ಮಹಾಲಿಂಗಾಂತವಾಗಿಯೂ ಮಹಾಲಿಂಗದಿಂದ ಆಚಾರಲಿಂಗದಪರ್ಯಂತರವೂ ಹೊಂದಿಸತಕ್ಕುದು.

ಈ ಜಂಗಮಲಿಂಗವು ಮನವನ್ನು ಬಳಿಸಿ ಇಂದ್ರಿಯಗಳಿಗೆ ಗೋಚರವಾದ ಎಲ್ಲ ಪದಾರ್ಥ ಗಳಲ್ಲಿ ಶುಚಿತ್ವವನ್ನು ಮಾಡುವುದರಿಂದ ಈ ಸ್ಥಳಕ್ಕೆ ಪ್ರಾಣಲಿಂಗಿಸ್ಥಳವೆಂಬ ಹೆಸರು ಬಂದಿತು. ಏಕೆಂದರೆ ಈ ಶರೀರಸ್ಥಿತಿಗೆ ಎಲ್ಲ ವ್ಯವಹಾರಗಳಿಗೆ ಕಾರಣವಾದ ಮನಸ್ಸು ಪಂಚಪ್ರಾಣಗಳನ್ನೆ ಆಶ್ರಯಿಸಿ ಇದೆ. ಮನವನ್ನು ತುಂಬಿದ ಚೈತನ್ಯವು ಪ್ರಾಣವನ್ನೂ ತುಂಬಿದೆ.

ನ ಪ್ರಾಣೇನ ನಾಪ್ರಾಣೇನ ಮರ್ತ್ಯೋ ಜೀವತಿ ಕಶ್ಚನ
ಇತರೇಣ ತು ಜೀವಂತಿ ಯಸ್ಮಿನ್ನೇತೌ ಸಮಾಶ್ರಿತೌ

ಎಂಬ ಉಪನಿಷದ್ವಾಕ್ಯವನ್ನೂ 'ಲಿಂಗಮಧ್ಯೇ ಜಗತ್ಸರ್ವಂ' ಎಂಬ ಶಿವಾಗಮ ವಾಕ್ಯವನ್ನೂ ಇಲ್ಲಿ



CC-0. Jangamwadi Math Collection, Varanasi. An eGangotri Initiative

ಉದಾಹರಿಸಬಹುದು. ಮತ್ತೇನೆಂದರೆ ಮನಸ್ಸು ಚಾಂಚಲ್ಯದಿಂದ ವಾಯುತತ್ವ ಬಳಕೆಯನುಳ್ಳ ದಾಗಿದೆ. ಪ್ರಾಣಗಳಾದರೂ ಲಿಂಗಚೈತನ್ಯದಿಂದಲೆ ತೋರಿದವುವು. ಆದುದರಿಂದ ಈ ಸ್ಥಳಕ್ಕೆ ಪ್ರಾಣಲಿಂಗಿಸ್ಥಳವೆಂಬುದು ಸುಸಂಗತವಾಗಿದೆ.

ಜಂಗಮ ಲಿಂಗಾರ್ಚನದಿಂದ ಮನವೂ ವಾಯುತತ್ವವೂ ಅದರ ಕಾರ್ಯಗಳೂ ಶುದ್ಧ ವಾದವುವು.

## ಶರಣಸ್ಥಲವು

ಶರಣನೆಂದರೆ ' ಶರಣಂ ಗೃಹರಕ್ಷಿತ್ರೋಃ ' ಎಂಬ ಕೋಶದಿಂದ ಗೃಹವು ಅಥವಾ ರಕ್ಷಕನು ಉಳ್ಳವನೆಂಬರ್ಥ.'ಶರಣಂ ವಿದ್ಯತೆ ಅಸ್ಯ ಇತಿ ಶರಣಃ' 'ಅರ್ಶ್ಯ ಆದಿಭ್ಯಃ ಅಚ್' ಎಂಬ ಸೂತ್ರದಿಂದ ಶರಣ ಶಬ್ದಕ್ಕೆ ಉಳ್ಳ ಎಂಬರ್ಥದ ' ಅಚ್ ' ಪ್ರತ್ಯಯವು ಸೇರಿ ಇದಾಗಿದೆ. ' ಶೃಣಾತಿ ಹಿ ನಸ್ಥ್ಯೈ ತಾಮಸಂ ಇತಿ ಶರಣಃ ಕರ್ತರಿ ಲ್ಯುಟ್ ' ಅಂದರೆ ಅಜ್ಞಾನವನ್ನು ಛೇದಿಸಿದವನೆಂಬರ್ಥ. ಶರಣ ಶಬ್ದವನ್ನು ಇವೆರಡೂ ವ್ಯುತ್ಪತ್ತಿಗಳಿಂದ ನಾವು ತಿಳಿಯಬಹುದು. ಅಂದರೆ ಅಜ್ಞಾನವನ್ನು ಛೇದಿ ಸಿದವನಾಗಿ ಶಿವನೆಂಬ ರಕ್ಷಕನನ್ನು ಅಥವಾ ಶಾಂತಿಸ್ಥಾನವ ಉಳ್ಳವನೆಂಬರ್ಥ.

ಪ್ರಾಣಲಿಂಗಿಸ್ಥಳದಲ್ಲಿ ಶಿವಾನುಭವವು ಪೂರ್ಣವಾದ ಬಳಿಕ ಆ ಅನುಭವದಿಂದ ಭಕ್ತನಿಗೆ ಹಲವು ತರದ ಭ್ರಮೆಗಳು ತೋರದರಿಂದ ಅವನು ಅಜ್ಞಾನಾಂಧಕಾರವನ್ನು ಮೀರಿದವನೆನಿ ಸಿದವನು. ಅಜ್ಞಾನಾಂಧಕಾರದಿಂದ ನಮಗೆ ಶಿವತತ್ವದ ಮರವೆಯು. ಅಜ್ಞಾನವು ಹೋಗುತ್ತಲೆ ಆ ಶಿವತತ್ವವು ಕಣ್ಣುಂಬ ತೋರಿದುದಾಗಿ ಸಾಕ್ಷಾತ್ಕರಿಸಿದ ಶಿವನು ನಮಗೆ ಸುಖಶಾಂತಿಯ ಗೃಹವಾಗಲಿ ರಕ್ಷಕನಾಗಲಿ ಆದವನು.

ಶ್ರದ್ಧಾಭಕ್ತಿಯಿಂದ ಒಂದೊಂದು ಸ್ಥಳದಲ್ಲಿಯೂ ನಮಗೆ ಒಂದೊಂದು ಬಗೆಯಿಂದ ಶಿವನ ಸಾಕ್ಷಾತ್ಕಾರವು ಆಗುತ್ತಿರಲು ಈ ಶರಣಸ್ಥಲದಲ್ಲಿ ತಾಮಸವು ಹರಿಯಿತೆಂಬುದರ ಅರ್ಥವೇನು ? ಒಂದೊಂದು ಸ್ಥಳದಲ್ಲಿ ಹೇಳುತ್ತಿರಲು ಅಲ್ಲಲ್ಲಿಯೆ ಆಯಾ ಲಿಂಗಪೂಜೆಯಿಂದ ಆಗುವ ಫಲವನ್ನು ಪರಿಶೀಲಿಸಿದರೆ ಒಂದೇ ಒಂದು ಸ್ಥಳದಲ್ಲಿ ಸರ್ವವು ದೊರೆಯಬೇಕು. ಎಂದರೆ- ಇದು ಅಹುದು. ಆದರೆ ಬೇರೆ ಬೇರೆ ಆತ್ಮರುಗಳ ಸ್ಥಿತಿಯು ಬೇರೆ ಬೇರೆ ಇಹುದು. ಇವ ಲ್ಲದೆ ಅಂತಃಕರಣವು ಅತ್ಯಂತ ಚಂಚಲವಾದುದು. ಅಂತಃಕರಣದ ಒಂದು ಸ್ಥಿತಿಯಲ್ಲಿ ದೊರೆತ ಸಮಾಧಾನವು ಮತ್ತೊಂದು ಸ್ಥಿತಿಯಲ್ಲಿ ನಿಲ್ಲುವುದಿಲ್ಲ. ಭಕ್ತಿಯ ಶ್ರದ್ಧೆಯು ತುಂಬಿದ ಅಂತಃಕರಣದಲ್ಲಿ ಉಂಟಾದ ಶಿವಾನುಭಾವವು ಅನೇಕ ಲೌಕಿಕ ದರ್ಶನಗಳಿಂದ ಆಘಾತವನ್ನು ಹೊಂದಿದವುದು. ಆಗ ಅಲ್ಲಿ ವಿವೇಕವು ಬೇಕು. ವಿವೇಕವೆಂದರೆ ಪರೀಕ್ಷೆಯು. ಜಗತ್ತಿನ ಸೌಂದರ್ಯಾದಿಗಳನ್ನೂ ವ್ಯವಸ್ಥೆಯನ್ನೂ ಕಂಡು ಅಂತಃಕರಣವು ಶ್ರದ್ಧೆಗೆ ಇಂಬುಗೊಡುವುದು. ಆದರೆ ಜಗತ್ತಿನಲ್ಲಾಗುವ ಅನೇಕ ಗತ್ಯಂತರಗಳನ್ನೂ ಕರ್ಮವಿಪಾಕವೈಚಿತ್ರ್ಯದಿಂದ ಕಂಡುಬರುವ ನೀತಿವಂತರ ದುಃಖವನ್ನೂ ಅನೀತಿವಂತರ ಸುಖವನ್ನೂ ಕಂಡು ಅಂತಃಕರಣವು ತಲ್ಲಣಿಸಿ ಆ ಶ್ರದ್ಧೆಯನ್ನು ಹಿಡಿವುದಿಲ್ಲ. ಆಗ ಆತ್ಮನು ವಿವೇಕಪರನಾಗಿ ಕರ್ಮವೈಚಿತ್ರ್ಯವನ್ನು ಹಿಡಿದು ಅಂತಃಕರಣವನ್ನು ಶ್ರದ್ಧೆಗೆ ತಕ್ಕುದನ್ನಾಗಿ ಮಾಡಿಪರೆ ಆ ಶ್ರದ್ಧೆಯೇ ನಿಷ್ಠೆಯಾದವುದು. ಹಾಗಾದರೂ ತನ್ನ ಇಂದ್ರಿಯಗಳು ಬಲಿಯಲು ಆ ಇಂದ್ರಿಯಗಳ ಎಳೆದಾಟದಿಂದ ಮನಸ್ಸು ಇಂದ್ರಿಯಸುಖದತ್ತ ತಿರುಗಿ ವಿವೇಕದಿಂದ ಉರುಳಿ ಆತ್ಮನು ಸಂಸೃತಿ ಬದ್ಧನಾದವನು. ಇಂತಹ



CC-0. Jangamwadi Math Collection, Varanasi. An eGangotri Initiative

ಸ್ಥಿತಿಯಲ್ಲಿ ಬಲು ಎಚ್ಚರವು ಬೇಕು. ಇಂದ್ರಿಯಗಳನ್ನು ತಡೆದು ಶರೀರದ ಚಾಂಚಲ್ಯವನ್ನು ಬಿಗಿದು ಅವುಗಳನ್ನೆಲ್ಲ ಪರಮಾತ್ಮನ ಸೇವೆಯಲ್ಲಿ ನಿಯೋಜಿಸಲು ಈ ಭಕ್ತಿಯು ಒಳ್ಳೆ ಏಕಾಗ್ರವಾಗಿ ಅವಧಾನಭಕ್ತಿ ಎನಿಸಿದಪುದು. ಈ ಅವಧಾನವು ಸ್ಥಿರವಾದುದೆ ಅನುಭವವು. ಈ ಅನುಭವದಿಂದ ಮುಂದಿನ ಮೆಟ್ಟೀ ಆನಂದಭಕ್ತಿಯೆನಿಸುವುದು.

ಅನುಭವಭಕ್ತಿಯ ವರೆಗೆ ಸಾಧ್ಯವಾದ ಮೆಟ್ಟುಗಳು ಒಂದಿಲ್ಲೊಂದು ಬಗೆಯಿಂದ ಜಾರಬಹುದು. ಹಾಗೆ ಜಾರದಿದ್ದರೆ ಅಷ್ಟರಿಂದಲೆ ಆತ್ಮನು ಈ ಬಂಧನವನ್ನು ನೀಗಿದಪನು. ಭಕ್ತಿಯು ಅಖಂಡವಾಗಿದೆಯೆಂದು ನಾವು ಹಿಂದೆ ಹೇಳಿರುವೆವು. ನಮ್ಮ ಅಂತಃಕರಣದಿಂದ ಅದು ಜಾರದಂತೆ ಮಾಡುವ ಪ್ರಯತ್ನ ವಿಶೇಷಗಳೇ ಒಂದೊಂದು ಸ್ಥಲದ ಕ್ರಿಯೆಗೂ ಜ್ಞಾನಕ್ಕೂ ಹೇತುವಾದಪುದು.

ಶರಣಸ್ಥಲದಲ್ಲಿ ಪ್ರಸಾದಲಿಂಗವು ಪೂಜ್ಯವು. ಇಲ್ಲಿ ಕತ್ತಲೆಯು ಹರಿದು ಹೋದುದರಿಂದ ಅಂದರೆ ಮುಂದಾವಕಾರಣದಿಂದಲು ಅಜ್ಞಾನವು ನಮ್ಮನ್ನು ಮುಸುಕದಂತಾದುದರಿಂದ ಈ ಆನಂದ ಭಕ್ತಿಗೆ ಪೂಜ್ಯವಾದ ಲಿಂಗವು ಪ್ರಸಾದಲಿಂಗವೆನಿಸಿತು. ಪ್ರಸಾದಲಿಂಗಕ್ಕೆ ಪರಾಶಕ್ತಿಯು. ಪರಾ ಅಂದರೆ ಪರಿಪೂರ್ಣವಾದುದೆಂಬರ್ಥ. ಅಥವಾ ಪ್ರೀತಿಕರವಾದುದೆಂಬ ಅಥವಾ ಸರ್ವತ್ರ ವ್ಯವಹರಿಸುವದೆಂಬರ್ಥ. ಈ ಎಲ್ಲ ಅರ್ಥದಲ್ಲಿಯೂ ಪರಾ ಎಂಬ ಹೆಸರು ಈ ಶಕ್ತಿಗೆ ಬಂದಿದೆ. 'ಪೃ' ಧಾತುವು ಬೇರೆ ಬೇರೆ ಗಣಗಳಲ್ಲಿ ಈ ಮೂರು ಅರ್ಥಗಳಲ್ಲಿಯೂ ವರ್ತಿಸುವುದು. ಭಕ್ತನ ಎಲ್ಲ ಅಂತಃಕರಣಗಳಲ್ಲಿಯೂ ಇಂದ್ರಿಯಗಳಲ್ಲಿಯೂ ವ್ಯವಹರಿಸಿ ಶಿವಸಾಕ್ಷಾತ್ಕಾರದಿಂದ ಅವನನ್ನು ಪ್ರೀತಿಗೊಳಿಸಿ ಪರಿಪೂರ್ಣಿಯಾಗಿ ಪಾಲಿಸುವಳೆ ಪರಾಶಕ್ತಿಯು. 'ಪೃ' ಧಾತುವಿಗೆ ಭಾವದಲ್ಲಿ 'ಅಪ್' ಅಥವಾ ಕರ್ತೃವಿನಲ್ಲಿ 'ಅಚ್' ಪ್ರತ್ಯಯವು ಸೇರಿ ಈ 'ಪರಾ'ಶಬ್ದವಾಗಿದೆ. ಈ ಪ್ರಸಾದಲಿಂಗಕ್ಕೆ ಸುಜ್ಞಾನವೆಂಬ ಹಸ್ತ. ಸುಜ್ಞಾನವೆಂದರೆ ಚೆನ್ನಾದ ತಿಳಿವು. ಇಲ್ಲಿ ಜ್ಞಾನ ಶಬ್ದಕ್ಕೆ ಮತ್ತು ಅದರ ಸಮಾನಾರ್ಥವಾದ ತಿಳಿವು ಶಬ್ದಕ್ಕೆ ಕರಣಾರ್ಥದಲ್ಲಿ ಅರಿವೆಯ ಸಾಧನವೆಂದು ಅರ್ಥಮಾಡಬೇಕು. ಅಂದರೆ ಆಯಾ ಇಂದ್ರಿಯಗಳೂ ಅಂತಃಕರಣವೂ ನಮ್ಮನ್ನು ಪ್ರಮಾದಕ್ಕೆಳಸದ ಸ್ಥಿತಿಯೆಂದು ತಿಳಿಯಬೇಕು. ಈ ಪರಿಯಿಂದಲ್ಲದೆ ನಮಗೆ ಆನಂದಭಕ್ತಿಯು ಸ್ಥಿರಗೊಳಲಾರದು. ಲಿಂಗಕ್ಕೆ ಶ್ರೋತ್ರೇಂದ್ರಿಯವೆ ಮುಖವು. ಶ್ರೋತ್ರೇಂದ್ರಿಯವೆಂದರೆ ಆಕಾಶದಿಂದ ಹುಟ್ಟಿದ ಇಂದ್ರಿಯವು. ನಮ್ಮ ಶ್ರವಣವು ಶಬ್ದವಿಷಯವನ್ನು ಹಿಡಿಯುವುದಾಗಿದೆ. ಶಬ್ದವು ಇತರ ಸರ್ವಪ್ರಮಾಣ ವೃತ್ತಿಗಳನ್ನು ತನ್ನಲ್ಲಿ ಸೇರಿಸಿಕೊಳ್ಳಬಲ್ಲುದು. ಆದುದರಿಂದಲೆ ವೈಯ್ಯಾಕರಣರು —

ಶ್ರೀವಾಗ್ದೇವಿಗೆ ಶಬ್ದದಿ ।
ನಾವಾವಿಂದ್ರಿಯದ ವಿಷಯಮುಮಂ ಶ್ರೋತ್ರದೊಳು ॥
ದ್ಭುವಿಪ ನಿರ್ಮಲ ಮೂರ್ತಿಗಿ ।
ಳಾವಂದ್ಯೆಗೆ ಶಾಸ್ತ್ರಮುಖದೊಳವನತನಪ್ಪೆಂ ॥

— ಕೇಶಿರಾಜ

ಇತ್ಯಾದಿಯಾಗಿ ಶಬ್ದವನ್ನು ಸ್ತುತಿಸುವರು. ಸುಶಬ್ದವೆ ಈ ಲಿಂಗಕ್ಕೆ ಪದಾರ್ಥವು ಮತ್ತು ಆ ಸುಶಬ್ದದಿಂದಾದ ಬೋಧವೆ ಲಿಂಗಪ್ರಸಾದವು. ಪ್ರಸಾದಲಿಂಗದ ಸೇವೆಯಿಂದ ಆಕಾಶತತ್ವವೂ ಆಕಾಶತತ್ವದ ಸರ್ವಕಾರ್ಯಗಳೂ ನಿರ್ಮಲವಾದಪುವು.



CC-0. Jangamwadi Math Collection, Varanasi. An eGangotri Initiative

## ಐಕ್ಯಸ್ಥಳವು

ಅಂಗವು ಲಿಂಗವು ನಾನು ನೀನೆಂಬ ಭೇದವಿಲ್ಲದೆ ಒಂದೆ ಒಂದು ವಸ್ತುಮಾತ್ರವಾಗಿ ಉಳಿದ ಸ್ಥಳವು ಐಕ್ಯಸ್ಥಳವು. ಆತ್ಮನ ದೇಹಾದಿಕರಣಗಳು ಒಂದೊಂದು ತಮ್ಮ ಕಾರಣಪರಂಪರೆಗಳಲ್ಲಿ ಅಡಗಿ ಆ ಕಾರಣವು ಮೂಲಪ್ರಕೃತಿಯಲ್ಲಿ ಹುದುಗಿ ಮೂಲಪ್ರಕೃತಿಯು ಶಕ್ತಿಯಲ್ಲಡಗಿ ಆ ಶಕ್ತಿಯು ಶಿವನಲ್ಲಿ ಅಭೇದವನ್ನು ಹೊಂದಿದ ಅನುಭವವು ಐಕ್ಯಸ್ಥಳದ ಮರ್ಮವು. ಇದು ಆಗುವುದೆಂತು ? ಪರಿಚ್ಛಿನ್ನವಾದ ದೇಹಾದಿಗಳಲ್ಲಿ ವ್ಯವಹರಿಸುವ ಜೀವನು ಅಪರಿಚ್ಛಿನ್ನಾನಂದವಾದ ಶಕ್ತಿಯೊಡನೆ ಕೂಡಿದ ಶಿವನಲ್ಲಿ ಐಕ್ಯವಹುದು ಅಸಂಭವವೆನಲಾಗದು.

ಉತ್ತರ ಮೀಮಾಂಸಕರಿಗೆ ದೇಹಾದಿಕರಣಗಳು ಮಾಯಾಕಲ್ಪಿತವಾದವುಗಳು. ಮಾಯೆಯೆಂದರೆ ಮಿಥ್ಯಯಾದುದು. ಅಂದರೆ ತೋರಿಕೆಗೆ ವಸ್ತುರೂಪವೆಂದಾದರೂ ತಿಳಿದು ನೋಡಿದಲ್ಲಿ ಅವಾಸ್ತವಿಕವಾದುದು. ಮಾಯೆಯ ಮಿಥ್ಯಾತ್ವಜ್ಞಾನದಿಂದಲೆ ನಾವು ಮಾಯೆಯನ್ನು ಮೀರಿ ಆ ಪರಬ್ರಹ್ಮವೆಂಬ ಚೈತನ್ಯದಲ್ಲಿ ಒಂದಾದಪೆವು. ಬ್ರಹ್ಮದಲ್ಲಿ ಮಾಯೆಯು ಪುಸಿಯಾಗಿ ಬ್ರಹ್ಮಸತ್ತೆಯಿಂದ ಉಂಟೆಂದು ತೋರುವುದು. ಹಗ್ಗದಲ್ಲಿ ಹಾವು ತೋರಿ, ಹಗ್ಗದ ಸತ್ತೆಯನ್ನು ತನ್ನಲ್ಲಿ ತೋರಿಸಿ, ಹಗ್ಗವನ್ನು ಮರೆಮಾಡುವಂತೆ ಮಾಯೆಯು ಬ್ರಹ್ಮಸತ್ತೆಯನ್ನು ತಾನು ಕಡವೀಸಿಕೊಂಡು ಬ್ರಹ್ಮವನ್ನು ಇಲ್ಲೆನಿಸಿ ಮರೆವುದು. ಈ ಮಾಯೆಯಿಂದ ಅಖಂಡವಾದ ಚೈತನ್ಯದಲ್ಲಿ ಜೀವೇಶವೆಂಬ ಚೈತನ್ಯಗಳು ತೋರಿದಪುವು ಈಶನಲ್ಲಿ ಮಾಯೆಯು ಮೋಹಕವಾದುದು. ಜೀವನಲ್ಲಿ ಮೋಹಕವಾಗಿ ಅವಿದ್ಯೆಯೆನಿಪುದು. ಈಶನಲ್ಲಿ ವಶವರ್ತಿಯಾಗಿ ಅವನ ಸರ್ವಜ್ಞತ್ವ ಸರ್ವಕರ್ತೃತ್ವ ಮುಂತಾದ ರೂಪವಾಗಿಹುದು. ವಿದ್ಯೆಯಿಂದ ಅವಿದ್ಯೆಯು ಅಳಿದ ಬಳಿಕ ಜೀವನವೂ ಇಲ್ಲ, ಈಶನೂ ಇಲ್ಲ. ಮಡಕೆಯಲ್ಲಿಯೂ ಮಠದಲ್ಲಿಯೂ ಆಕಾಶವು ತುಂಬಿಹುದು. ಮಡಕೆಯೂ ಮಠವೂ ಅಳಿದ ಬಳಿಕ ಆಕಾಶವೊಂದು ಉಳಿಯುವಂತೆ ಜೀವನೂ ಶಿವನೂ ಎಂಬಿಬ್ಬರೂ ಅಳಿದು ಪರಬ್ರಹ್ಮವೊಂದೇ ಉಳಿವುದು. ಅದುವೇ ಮುಕ್ತಿಯು — ಎಂಬ ವೇದಾಂತಿಯ ಮತವು ಈ ಐಕ್ಯಸ್ಥಳವೆಂಬ ವೀರಶೈವ ಮತಕ್ಕೆ ಸಮ್ಮತಿಯಾದುದಲ್ಲ.

ಈ ವೇದಾಂತಮತದ ನಿರಾಸವನ್ನು ವೀರಶೈವರು ಮಾಡುವ ಬಗೆ ಇದು. ಮಾಯೆಯು ಪರಬಹ್ಮದಲ್ಲಿ ತೋರಿ ಮಾಯಾ, ಅವಿದ್ಯೆಗಳೆಂಬ ಸ್ವಾಶ್ರಯವನ್ನು ಮೋಹಿಸದ ಮತ್ತು ಮೋಹಿಸುವ ಎಂಬೆರಡು ರೂಪಗಳನ್ನು ಆ ಚೈತನ್ಯದ ಪ್ರತಿಫಲನವು ಅಥವಾ ಪಡಿನೆಳಲು ತನ್ನಲ್ಲಿ ಬಿದ್ದು ಹೊಂದುತ್ತದೆಂದು ವೇದಾಂತಿಯ ಮತವು. ಮಾಯೆಯು ಜಡವಾದುದರಿಂದ ಜಡದಲ್ಲಿ ಅಜಡ ಬ್ರಹ್ಮದ ಪ್ರತಿಫಲನವು ಉಂಟಾಗಲಾರದು. ಸ್ವಚ್ಛವಾದ ಕನ್ನಡಿಯಲ್ಲಿ ಮುಖವು ಪ್ರತಿಬಿಂಬಿಸುವುದು. ಎರಡೂ ಜಡಪದಾರ್ಥಗಳೇ. ಮತ್ತೇನೆಂದರೆ ತುಂಬಿದ ಬಾವಿಯಲ್ಲಿ ಮುಳುಗಿದ ಕನ್ನಡಿಯಲ್ಲಿ ನೀರಿನ ಪ್ರತಿಬಿಂಬವು ಉಂಟಾಗದು. ಬಿಂಬ, ಪ್ರತಿಬಿಂಬ ಭಾವಕ್ಕೆ ಭಿನ್ನದೇಶಗಳಿರಬೇಕು. ನೀರೊಂದೆಡೆಯಲ್ಲಿ; ಕನ್ನಡಿಯೊಂದೆಡೆಯಲ್ಲಿ. ಪರಬ್ರಹ್ಮವು ಎಷ್ಟೂ ತೆರಪಿಲ್ಲದೆ ಸರ್ವದೇಶಕಾಲಗಳನ್ನು ತುಂಬಿಕೊಂಡಿದೆ. ಅಲ್ಲಿ ತೋರಿದ ಮಾಯೆಯು ತನಗೆ ದೇಶಾಂತರವಿಲ್ಲದೆ ಇರುವುದರಿಂದ ಬ್ರಹ್ಮವನ್ನು ಪ್ರತಿಬಿಂಬಿಸಿಕೊಳ್ಳಲಾರದು. ಮತ್ತೇನೆಂದರೆ ನಿರಂಶವಾದ ಬ್ರಹ್ಮವು ಮಾಯೆಯಿಂದ ಅಂಶವನ್ನು ಹೊಂದಲಾರದು. ಅಂಶವನ್ನು ಹೊಂದಿದಲ್ಲದೆ ಜೀವೇಶಭೇದವು ಘಟಿಸದು. ವೇದಾಂತಿಗಳು ಮುಕ್ತಿಯಲ್ಲಿ ಬ್ರಹ್ಮವು ಮಾತ್ರ ಅವಸ್ಥಿತವಾದವುದು. ಆದರೆ ಅದರಲ್ಲಿ ಎರಡನೆಯ



CC-0. Jangamwadi Math Collection, Varanasi. An eGangotri Initiative

ಪದಾರ್ಥಗಳು ಇಲ್ಲದುದರಿಂದ ತಾನಿಹೆನೆಂಬ ಪ್ರತಿಭೆಯು ಉಳಿಯಲಾರದು. ಸತ್ಯ ಜ್ಞಾನಾನಂದವಾಗಿ ಉಳಿವುದಾದರೂ ಅಸ್ಮಿ ಇಹೆನು, ಪ್ರಕಾಶೆ ಹೊಳೆದಪೆನು, 'ನಂದಾಮಿ ಸೊಗಸಿಹೆನು' ಎಂಬ ತೋರಿಕೆಗಳಿಲ್ಲದೆ ಇಹುದು ಎನ್ನುವರು. ಇದಕ್ಕೆ ಪರಬ್ರಹ್ಮದ ಈ ರೂಪು ಅದರ ಜಡತ್ವ ಸಾಧಕವಾಗಿದೆ. ಜ್ಞಾನರೂಪವಾದ ಪರಬ್ರಹ್ಮದಲ್ಲಿ ತಾನಿಹೆನೆಂಬ ಸ್ಫುರಣವು ತೋರದಿದ್ದಡೆ ಪರಬ್ರಹ್ಮವು ಕನ್ನಡಿಯಂತೆಯೇ ಜಡವಾದಪುದು. ಕನ್ನಡಿಯು ಹಸನಾದುದೂ ಬೆಳಗುವುದೂ ಆಗಿದೆ. ಆದರೆ ತನ್ನ ಹಸನಿನ ಮತ್ತು ಬೆಳಗಿನ ಭಾವವು ಅದರಲ್ಲಿ ಇಲ್ಲದುದರಿಂದ ಅದು ಜಡವಾಗಿದೆ. ಪರಬ್ರಹ್ಮವಾದರೂ ಹೀಗೆಯೆ ಭಾನವಿಲ್ಲದದು. ಆದರೆ ಕನ್ನಡಿಗೂ ಇದಕ್ಕೂ ಇರುವ ಅಂತರವೇನು? ಇಂತಹ ಜಡಮೋಕ್ಷವು ಆತ್ಮನಾಶವೆ ಸರಿ. ಏಕೆಂದರೆ ಸಂಸಾರದಿಶೆಯಲ್ಲಿ ಆತ್ಮನಿಗೆ ತಾನೆಂಬ ಭಾನವಿದೆ. ಅದು ನಷ್ಟವಾಪುದಕ್ಕಿಂತ ಬೇರೆ ನಾಶವದಾವುದು?

ಇನ್ನು ಈ ವೀರಶೈವದ ಐಕ್ಯವು ಎಂತು? ಈ ಐಕ್ಯಕ್ಕೆ ಸಮರಸವೆನ್ನುವರು. ಸಮರಸವೆಂದರೆ ಭಿನ್ನವಾಗಿ ತೋರುವ ಎರಡು ಪದಾರ್ಥಗಳು ತಮ್ಮ ನಿಜಸ್ಥಿತಿಯ ಒಂದೆ ಒಂದು ರೂಪವನ್ನು ಹೊಂದುವುದು. ಪರಶಿವನಲ್ಲಿ ಅನನ್ಯವಾದ ಒಂದು ಶಕ್ತಿಯುಂಟು. ಆ ಶಕ್ತಿಯು ಅವನ ಅಸ್ಮಿ-ಪ್ರಕಾಶೆ-ನಂದಾಮಿ ಎಂಬ ಭಾನವಾಗಿದೆ. ಈ ಶಕ್ತಿಯು ಅತ್ಯಂತ ಸಮರ್ಥವಾದುದು. ತನ್ನಲ್ಲಿ ಶಕ್ತಿ, ಭಕ್ತಿಯೆಂಬ ಇಬ್ಬಗೆಯನ್ನು ತಾಳಬಲ್ಲುದು. ಈ ಇಬ್ಬಗೆಯು ವಿಚಾರಾಂತದಲ್ಲಿ ಏಕರೂಪವಾಗಿದೆ. ಮೇಲೆ ವಿವರಿಸಿದ ವಿವರಣದಲ್ಲಿ ಭಕ್ತಿಯೆಂದರೆ ಪ್ರೇಮವೆಂದಾಗುವುದು. ಆ ಪ್ರೇಮವು ತನ್ನಲ್ಲಿ ನಿರತಿಶಯವಾಗಿದೆ. ಅಂದರೆ ತನಗಿಂತ ಬೇರಾವುದೂ ಪ್ರೇಮಾಸ್ಪದವಾದ ಪದಾರ್ಥವಿಲ್ಲ. ತನ್ನ ಪ್ರೇಮದಿಂದ ತನ್ನ ನಿಜಾತಿಶಯವನ್ನು ತಿಳಿವುದು ಶಿವತತ್ತ್ವಪ್ರಾಪ್ತಿಯು. ತನ್ನಲ್ಲಿ ಹುದುಗಿದ ಅತಿಶಯವೆ ಶಿವತತ್ತ್ವವು. ಹುದುಗಿಕೊಂಡಿರುವ ಶಿವತತ್ತ್ವದಲ್ಲಿರುವ ಸಮರ್ಥತೆಯೆ ಶಕ್ತಿಯು. ಒಂದೆ ಚೈತನ್ಯದಲ್ಲಿ ಅಂಗಲಿಂಗಗಳ ಉತ್ಪತ್ತಿಯು ಹೇಗಾಯಿತೆಂದರೆ ಒಂದು ದೃಷ್ಟಾಂತದಿಂದ ಅದನ್ನು ಹೇಳಬಹುದು. ಸೂರ್ಯನ ಪ್ರಖರವಾದ ಕಿರಣದಲ್ಲಿ ಮಂಜೂ ಮೋಡವೂ ಪ್ರಖರ ಕಿರಣಗಳನ್ನು ಮಂದೀಕರಿಸುವಂತೆ ಶಿವನ ಶಕ್ತಿಪ್ರಭಾವದಿಂದ ಉತ್ಪನ್ನವಾದ ಮಾಯೆಯು ಶಿವನಲ್ಲಿ ಅಂಗಲಿಂಗವೆಂಬ ಭೇದಕ್ಕೆ ಕಾರಣವಾಯಿತು. ಮಾಯೆಯು ಅನಿರ್ವಾಚ್ಯವಾದುದೂ ಅನಾದಿಯಾದುದೂ ಎಂದು ವೇದಾಂತಿಗಳ ಹೇಳಿಕೆ. ವೀರಶೈವರದು ಹಾಗಲ್ಲ. ಅದು ಪರಶಿವ ಶಕ್ತಿಯಿಂದ ಉತ್ಪನ್ನವಾದುದೆಂದು ಹೇಳುವರು. ನಿರಂಶವಾದ ಮತ್ತು ಸ್ವಚ್ಛವಾದ ಪರಶಿವಶಕ್ತಿಯಲ್ಲಿ ಈ ಜಡವಾದ ಮಾಯಾಶಕ್ತಿಯು ಹೇಗೆ ಪುಟ್ಟಿತೆಂದರೆ ನಿರಂಶವಾದ ಪರಮಾಣುಗಳಿಂದ ಸಾಂಶವಾದ ದ್ವೆಣುಕವು ಹುಟ್ಟಿ ಜಗತ್ತಿಗೆ ಪ್ರಾರಂಭವಾದಪುದೆಂದು ಪರಮಾಣುವಾದಿಗಳು ಹೇಳುವಂತೆ ನಿರಂಶಿಕವಾದ ಶಕ್ತಿಯಿಂದ ಸಾಂಶಿಕವಾದ ಮಾಯೆಯು ಹುಟ್ಟಿದಪುದು. ಅದರಂತೆಯೆ ಶುದ್ಧ ವಿದ್ಯೆಯೆನಿಸುವ ಬಿಂದು ತತ್ತ್ವವು ಹುಟ್ಟುವುದು. ಬಿಂದುವೆಂದರೆ ಶುದ್ಧ ಮಾಯೆಯೆಂಬರ್ಥ. ಶುದ್ಧ ಮಾಯೆಯಿಂದ ೧೧ ಶುದ್ಧ ತತ್ತ್ವಗಳೂ ಮಾಯೆಯಿಂದ ೨೫ ತತ್ತ್ವಗಳೂ ಹುಟ್ಟುವ ಶೈವಸಿದ್ಧಾಂತವು ವೀರಶೈವರಿಗೆ ಸಮಾನವಾದುದು.

ಈ ಮಾಯಾ ತತ್ತ್ವಗಳಲ್ಲಿ ಚೈತನ್ಯವು ಜಡತ್ವವನ್ನು ಹೇಗೆ ತಾಳಿತು? ಎಂದರೆ ಆ ಚೈತನ್ಯದ ಸಾಮರ್ಥ್ಯವು ತೋರದಂತಾಗಿ ಸೂರ್ಯ ಕಿರಣಗಳು ಪ್ರಖರವಾಗಿದ್ದರೂ ಮಂಜು ದಾಟಿ ಬರುವಲ್ಲಿ ಅವುಗಳ ಪ್ರಖರತೆಯು ತೋರದು. ಪರಶಿವನ ಅದ್ವಿತೀಯ ಸಾಮರ್ಥ್ಯದಿಂದ ಅಂದರೆ



CC-0. Jangamwadi Math Collection, Varanasi. An eGangotri Initiative

ಶಕ್ತಿಯಿಂದ ತನ್ನ ಸ್ವರೂಪವನ್ನು ಹಾನಿಗೊಳಿಸದೆ ಅವನು ಆತ್ಮರನ್ನು ತೋರ್ಪಡಿಸಬಲ್ಲನು. ಆತ್ಮರುಗಳಲ್ಲಿರುವ ಪ್ರೇಮವು ವಿಕಾಸವನ್ನು ಹೊಂದುತ್ತ ತಮ್ಮಲ್ಲಿ ಆಗಂತುಕವಾದ ಮಾಯಾ ಧರ್ಮಗಳನ್ನು ಕ್ರಿಯಾಜ್ಞಾನ ಸಾಮರ್ಥ್ಯದಿಂದ ಬೇರ್ಪಡಿಸಿ ಆ ಮಾಯೆಯನ್ನು ಶಕ್ತಿಯಲ್ಲಡಗಿಸಿ ಶಿವಸ್ವರೂಪವಾಗಿ ಉಳಿವುದೆ ಶಿವಸಾಮರಸ್ಯವು. ಇದನ್ನು ನಾವು ಶ್ರೀ ಸಿದ್ಧರಾಮೇಶ್ವರನ ಎರಡು ವಚನಗಳಿಂದ ಅರಿಯಬಹುದು.

ವಚನ: ಸರ್ವಂ ಶಿವಮಯಂ ಜಗತ್ತೆಂಬ ವಾಕ್ಯವನರಿಯದೆ ಹೋಗದಿರಾ ಮನವೆ. ಪಂಚತತ್ವ ಸ್ವರೂಪಾಯ ಎಂಬ ಶ್ರುತಿಶಾಖೆಯರಿಯದೆಯಲ್ಲ ಮನವೆ. ಲಿಂಗಮಧ್ಯೆ ಜಗತ್ಸರ್ವಂ ಎಂಬ ಮಹಾ ವಾಕ್ಯವ ಮರೆದೆಯಲ್ಲ ಮನವೆ. ಸರ್ಪ ರಜ್ಜುವೆಂದು ನಂಬಿ ಕಪಿಲ ಸಿದ್ಧಮಲ್ಲಿಕಾರ್ಜುನಂಗೆ ಬೇರೆಯಾದೆ ಯಲ್ಲ ಮನವೆ.

ವಚನ: ದೇಹನಾನೆಂದು ನಂಬಿದೆ ಎಲೆ ಮನವೆ ದೇಹದಲ್ಲಿಹ ಗುಣಂಗಳು ನಿನ್ನಲ್ಲಿ ಕಂಡಯ್ಯಾ ಮನವೆ. ಪೃಥ್ವಿಯ ಗುಣ ಶಾಂತಿ, ಉದಕದ ಗುಣ ಸ್ವಾದ, ಅಗ್ನಿಯ ಗುಣ ಸರ್ವ ಭಕ್ಷಣ, ವಾಯುವಿನ ಗುಣ ನಿರ್ಮಲತ್ವ, ಆಕಾಶದ ಗುಣ ನಿರ್ವಯಲು, ಈ ಪಂಚತತ್ವದ ಗುಣ ನಿನ್ನಲ್ಲಿರಲು ನೀನೆ ಪಂಚಮುಖ ನೋಡಾ ಮನವೆ ಕಪಿಲ ಸಿದ್ಧಮಲ್ಲಿಕಾರ್ಜುನಾ.

ವಚನ: ಲಿಂಗವೇ ಅಂಗವಾಗಿಹೆನೆಂಬವನ ಭಾವ ಇದರಲ್ಲೆ ನಿಶ್ಚಯ ನೋಡಾ. ಮನವೆ ನಿಂದಾ ಸ್ತುತಿಗಳಲ್ಲಿ ಹರ್ಷ ರೋಷಗಳಿಲ್ಲದಿರಬೇಕು. ನೀಚಾನೀಚ ಗುಣವ ನೋಡದೆ ನಮ್ರ ಭಾಷಾವಂತನಾಗ ಬೇಕು. ಸರ್ವ ಜೀವಿಗಳ ತನ್ನಂತೆ ತಿಳಿದು ನೋಡಬೇಕು. ಸಂಶಯಾಸಂಶಯವಳಿದು ನಿಶ್ಚಿಂತನಾಗಬೇಕು. ಆಕಾಶದ ಬೆಳಗಿನ ಬೆಳಗು ನೋಡಿ ಬೆಳಗುಮಯನಾಗಬೇಕು, ನೋಡಾ ಎಲೆ ಮನವೆ ಕಪಿಲ ಸಿದ್ಧಮಲ್ಲಿ ಕಾರ್ಜುನನಲ್ಲಿ.

ಈ ವಚನಗಳಿಂದ ಅದ್ವೈತ ಮತಕ್ಕೂ ಸಾಮರಸ್ಯ ಅಥವಾ ಶಿವಾಭಿನ್ನ ಮತಕ್ಕೂ ಇರುವ ಅಂತರವನ್ನು ನಾವು ಗೊತ್ತುಪಡಿಸಬಹುದು. ಶಿವಚೈತನ್ಯವು ಆಯಾ ಭೂತಗಳಲ್ಲಿಯೂ ಆಯಾ ಆತ್ಮರುಗಳಲ್ಲಿಯೂ ವ್ಯಾಪಿಸಿ ಒಳಹೊರಗೆಲ್ಲ ವ್ಯಾಪಕವಾಗಿ ಅವುಗಳಿಗೆ ತಾನೇ ಆಧಾರ ವಾಗಿ ಅವುಗಳನ್ನು ತನ್ನಲ್ಲಿ ಗರ್ಭೀಕರಿಸಿ ತಾನವುಗಳಲ್ಲಿ ತುಂಬಿ ನಿಂತಿಹುದು. ನಮಗೆ ಆ ಪರ ವಸ್ತುವು ತೋರಲು ಈ ಭೂತಾದಿ ಸೃಷ್ಟಿಯನ್ನು ಮಿಥ್ಯವೆನಲುಬಾರದು. ರಜ್ಜು ಸರ್ಪವು ಎನ್ನಲುಬಾರದು. ಆಯಾ ಭೂತಗಳಲ್ಲಿರುವ ನಿತ್ಯ ಸ್ವರೂಪಗಳನ್ನು ಕುರಿತು ಶಿವಾಗಮಂಗಳು ಶಿವಮಯಂ ಸರ್ವಜಗತ್ ಎಂದು ಸಾರುವುವು – ಎಂದು ನಮ್ಮ ಮತವು. ಅದ್ವೈತ ಮತದಂತೆ ಬಾಧ ಸಾಮಾನ್ಯಾಧಿಕರಣದಿಂದ ಎಂಬುದಲ್ಲ. ಬಾಧ ಸಾಮಾನ್ಯಾಧಿಕರಣವೆಂದರೆ ಹಾವೇ ಹಗ್ಗವು ಎಂಬುವಲ್ಲಿ ಹಾವು ಎಂಬ ಪದಕ್ಕೂ ರಜ್ಜುಯೆಂಬ ಪದಕ್ಕೂ ಸಾಮಾನ್ಯಾಧಿಕರಣ ವೆಂಬ ಪದವಿರುತ್ತದೆ. ಸಾಮಾನ್ಯಾಧಿಕರಣವೆಂದರೆ ಭಿನ್ನ ಪ್ರವೃತ್ತಿ ನಿಮಿತ್ತಗಳಾದ ಎರಡು ಶಬ್ದಗಳು ಒಂದೇ ಅರ್ಥವನ್ನು ತೋರಿಸುವುದು. ಇಲ್ಲಿ ಹಾವು ಎಂಬ ಶಬ್ದದ ಪ್ರವೃತ್ತಿಯು ಹರಿವುದಾಗಿದೆ. ಹರಿವುದರಿಂದ ಹಾವೆನಿಸಿತು. ಹಗ್ಗವೆಂಬ ಶಬ್ದದ ಪ್ರವೃತ್ತಿಯು ಅದು ಸಂಸ್ಕೃತ ಪ್ರಗ್ರಹವೆಂಬದರಿಂದ ಬಂದಿದುದಾದರೆ ಬಹಳವಾಗಿ ಹಿಡಿಯುವುದು ಅಥವಾ ಕಟ್ಟುವುದು ಎಂಬರ್ಥ. ನಮ್ಮ ಬಗೆಯಲ್ಲಿ ಇದು ಹೊಸೆಯೆಂಬ ಧಾತುವಿನ ಹುರಿಯೆಂಬ ಇನ್ನೊಂದು ರೂಪದಿಂದ ಬಂದಿದೆ. ಹೊಸೆ ಅಥವಾ ಹುರಿಯೆಂದರೆ ಹಲವು ಎಳೆಗಳನ್ನು ತಿರುವಿ ಒಂದಕ್ಕೊಂದು ಕೂಡಿಸುವಣ. ಒಂದ ಕ್ಕೊಂದು ಕೂಡಿಸಿ ಒಂದೇ ಸೂತ್ರವನ್ನು ಮಾಡುವಣವು. ಇದು ಹೇಗೇ ಇರಲಿ. ಹಾವು ಹಗ್ಗವೆಂಬ



CC-0. Jangamwadi Math Collection, Varanasi. An eGangotri Initiative

ಶಬ್ದಗಳ ಪ್ರವೃತಿ ನಿಮಿತ್ತಗಳು ಬೇರೆಯಾಗಿದ್ದು ಇಲ್ಲಿ ಒಂದೇ ವಸ್ತುವನ್ನು ತೋರಿಸುತ್ತವೆ. ಅದರಂತೆಯೆ ರಾಮನು ದಶರಥನ ಮಗನುಯೆಂಬಲ್ಲಿ ರಾಮ ಮತ್ತು ಮಗನುಯೆಂಬ ಶಬ್ದಗಳ ಪ್ರವೃತ್ತಿನಿಮಿತ್ತಗಳು ಬೇರೆಯಾಗಿವೆ. ಈ ವಾಕ್ಯದಲ್ಲಿಯೂ ಒಂದೆ ಪದಾರ್ಥವನ್ನು ತೋರಿಸುತ್ತದೆ. ಮೊದಲನೆಯ ವಾಕ್ಯದಲ್ಲಿ ಸಾಮಾನ್ಯಾಧಿಕಾರಣ್ಯವು ಸರ್ಪವನ್ನು ಬಾಧಿಸುವುದು. ಎರಡನೆಯ ವಾಕ್ಯದಲ್ಲಿ ಅದು ರಾಮನಿಗೂ ಮಗನಿಗೂ ಮಾತಾಡುವವನ ಅಪೇಕ್ಷೆಯಂತೆ ಒಂದಕ್ಕೊಂದು ವಿಶೇಷಣ-ವಿಶೇಷ್ಯ ಭಾವವನ್ನು ಸೂಚಿಸುತ್ತದೆ. ಇದಕ್ಕೆ ಸಂಸರ್ಗ ಸಾಮಾನ್ಯಾಧಿಕರಣವೆನ್ನುವರು. ಸರಿಗೆಯು ಬಂಗಾರವು ಎಂಬುವಲ್ಲಿ ತಾದಾತ್ಮ್ಯದ ಸಾಮಾನ್ಯಾಧಿಕರಣವಿದೆ ಅದರಂತೆ 'ಸರ್ವಂ ಶಿವಮಯಂ ಜಗತ್' ಎಂಬುವಲ್ಲಿ ತಾದಾತ್ಮ್ಯದಲ್ಲಿ ಸಾಮಾನ್ಯಧಿಕರಣವಿದೆ. ಉಪನಿಷದ್ವಾಕ್ಯಗಳಲ್ಲಾದರು 'ಸರ್ವಂ ಖಲ್ವಿದಂ ಬ್ರಹ್ಮತಜ್ಜಾಲನ್' ಎಂಬಿದೇಯಾದ ವಾಕ್ಯಗಳಲ್ಲಿ ಇದೇ ತಾದಾತ್ಮ್ಯ ಭಾವವಿದೆಯೆಂದು ಲಿಂಗವಂತ ತತ್ವಚಿಂತಕರ ಬಗೆಯು.

ಈ ತಾದಾತ್ಮ್ಯವನ್ನು ಕಾಣುವ ಪರಿಯನ್ನು ಎರಡನೆಯ ವಾಕ್ಯವು ಸೂಚಿಸುತ್ತದೆ. ನಾನು ದೇಹವೆಂಬ ಮತಿಯು ಆತ್ಮನಲ್ಲಿ ತಾನಾಗಿಯೆ ಬಂದಿದೆ. ಆತ್ಮನಲ್ಲಿ ಹುದುಗಿದ ಪರಮಾತ್ಮನ ಕಾರ್ಯಗಳು ಈ ಭೂತಗಳು. ಆ ಭೂತಗಳ ಕಾರ್ಯವೇ ಶರೀರವು. ಶರೀರವು ಭೂತಗಳಿಂದ ಬೇರೆಯಾಗಿಲ್ಲ. ಭೂತಗಳು ಪರಮಾತ್ಮನ ತತ್ವಗಳಿಂದ ಬೇರೆಯಾಗಿಲ್ಲ. ತಾನು ಶಿವನೆಂಬುದನ್ನು ಕಾಣಲು ದೇಹವು ಮಿಥ್ಯವೆಂಬ ಬಗೆಯು ಬೇಡ. ಆದರೆ ಆ ದೇಹದಲ್ಲಿಯ ಭೂತಗಳ ಗುಣಧರ್ಮಗಳನ್ನು ಚೆನ್ನಾಗಿ ತಿಳಿದುನೋಡಿದರೆ ಆ ಧರ್ಮಗಳು ಪರಶಿವನ ಧರ್ಮಗಳೆ ಆಗಿವೆ. ಪೃಥ್ವಿಯ ಶಾಂತಗುಣ, ನೀರಿನ ಸ್ವಾದುಗುಣ, ಸರ್ವ ಭಕ್ಷಣವೆಂಬ ಅಗ್ನಿಯ ಗುಣ, ವಾಯುವಿನ ಸ್ಥೈರ್ಮಲ್ಯ ಗುಣ, ಆಕಾಶದ ನಿರ್ವಯಲ ಗುಣ, ಇಂತೀ ಗುಣಗಳು ಶಿವನ ಗುಣಗಳೇ ಆಗಿವೆ. ಅಂದಬಳಿಕ ದೇಹದ ಈ ಪಂಚಭೂತಗಳಲ್ಲಿ ಈ ಪಂಚಗುಣಗಳನ್ನು ಕಂಡು ಆ ಗುಣಗಳು ಶಿವನನೆಂದರಿತರೆ 'ದೇಹೋ ಅಹಮ್' ಎಂಬ ಮತಿಯೇ 'ಶಿವೋಹಂ' ಎಂಬ ಮತಿಯಾಗಿ ಪರಿಣಮಿಸಿತು. ಹಾಗಲ್ಲದೆ ರಜ್ಜು-ಸರ್ಪ ನ್ಯಾಯವನ್ನು ಅವಲಂಬಿಸಿದರೆ ಈ ಸಾಮರಸ್ಯವನ್ನು ಕಾಣಲಿಕ್ಕೆ ಇಂಬಿಲ್ಲ. ದೇಹದಲ್ಲಿಯ ಪಂಚಭೂತಗಳ ಈ ಗುಣಗಳನ್ನು ಅನುಭವಿಸಲು ಆ ದೇಹವು ಶುದ್ಧ ಸ್ಫಟಿಕದಂತಾಗಬೇಕು. ಅಥವಾ ಕಾಸಿದ ಬಂಗಾರದಂತಾಗಬೇಕು. ಹಾಗಾಗಲು ಸತ್ಕ್ರಿಯೆಗಳ ಘರ್ಷಣವು ಬೇಕು. ಅಥವಾ ಸತ್ಕ್ರಿಯಾಘರ್ಷಣ ಜನ್ಯವಾದ ಅಗ್ನಿಯು ಬೇಕು. ಆದರಿಂದ ಈ ಶಿವಾದ್ವೈತ ಅಥವಾ ಲಿಂಗವಂತ ಮತದಲ್ಲಿ ಕ್ರಿಯಾ-ಜ್ಞಾನ ಸಾಮರಸ್ಯವನ್ನೇ ಮುಕ್ತಿಯ ಉಪಾಯವನ್ನಾಗಿ ಹೇಳುವರು. ಮೇಲೆ ಹೇಳಿದ ಮೂರನೆಯ ವಚನವು ಇಂತಹ ಲಿಂಗೈಕ್ಯನ ಸಮರಸಭಾವದ ಜೀವನ್ಮುಕ್ತ ಬಾಳುವೆಯನ್ನು ಗುರುತಿಸುವುದು. ಸರ್ವತ್ರ ಶಾಂತವಾದ ಶಿವತತ್ವವೆ ತನ್ನ ದೇಹ ಮನೋಭಾವಗಳಲ್ಲಿ ತುಂಬಿರುವುದರಿಂದ ಲಿಂಗ ಸಮರಸನು ಅತ್ಯಂತ ಶಾಂತಿಯುಳ್ಳವನಾಗಿಹನು. ನರರು ಮಾಡುವ ಹೊಗಳು, ತೆಗಳಿಕೆಗಳು ಮನುಷ್ಯನ ಹೆಚ್ಚಿನ ಮತ್ತು ಕಡಿಮೆಯ ನೆಲೆಗಳನ್ನು ಅವಲಂಬಿಸಿಯವೆ. ಸಮರಸ ಸಾಮ್ರಾಜ್ಯದಲ್ಲಿ ಸುಳಿವ ಲಿಂಗವಂತನು ಈ ಹೀನೋತ್ತಮ ಸ್ಥಿತಿಗಳನ್ನು ಮಾರಿರುವವನು. ಹೀಗಾಗಿ ಅವನಿಗೆ ನಿಂದಾಸ್ತುತಿಗಳು ಕಳವಳಗೊಳಿಸಲಾರವು. ತಾನು ಶಾಂತಿಸಾಗರನಾಗಿರುವುದರಿಂದ ಮನುಷ್ಯರ ಹೀನೋತ್ತಮತೆಗಳಿಂದ ಕಡಿದವನಾಗಿ ಸರ್ವ ಪ್ರಾಣಿಗಳಲ್ಲಿಯೂ ಹಿತಮಿತವಿನಿಮಯ ವಚನನಾದಪನು. ಸರ್ವ ಜೀವಿಗಳನ್ನು ತನ್ನಂತೆ



CC-0. Jangamwadi Math Collection, Varanasi. An eGangotri Initiative

ತಿಳಿವನು. ಶಿವಮಯನಾಗಿ ಸಂಚರಿಸುವ ಶಿವಯೋಗಿಯಲ್ಲಿ ಅಪಾರ ಕರುಣೆಯು ಸ್ವಾಭಾವಿಕವು. ಆ ಅಪಾರ ಕರುಣೆಯೆ ತನ್ನಂತೆ ಸರ್ವವನ್ನು ಕಾಣುವಲ್ಲಿ ಕಾರಣವು. ಶಿವಜ್ಞಾನವೆ ಪರಮಜ್ಞಾನವಾಗಿರುವುದರಿಂದ ಆ ಪರಮ-ಜ್ಞಾನವು ದೊರಕಲು ತಾನು ಅಭ್ಯಾಸಿಸಿದ ಕ್ರಿಯಾ-ಜ್ಞಾನಗಳು ಈಗ ಸಫಲವಾಗಿ ಆ ಜ್ಞಾನದ ನಿಶ್ಚಯದಿಂದ ತಾನೇನೊ ಬದ್ಧನೊ, ಮುಕ್ತನೊ, ಸ್ವರ್ಗಿಯೊ, ಕರ್ತನೊ, ಅಕರ್ತನೊ ಎಂಬಿವೆ ಮೊದಲಾದ ಸಂಶಯಗಳು ನಿಲ್ಲಲಾರವು. ಸುತ್ತಲು ಪ್ರಕಾಶಿಸುವ ಆಕಾಶವೆಂಬ ಶಿವಶಕ್ತಿಯ ಬೆಳಗಿನಲ್ಲಿ ತನ್ನ ಕರ್ಮ ಬುದ್ಧಿಂದ್ರಿಯಗಳು, ಅಂತಃಕರಣವು ಎಂಬಿವುಗಳ ಪ್ರಕಾಶವು ಅಡಗಿ ಆ ಶಿವಶಕ್ತಿಯ ಬೆಳಗಿನಲ್ಲಿ ತಾನು ಒಂದಾಗಿ ಆ ಶಕ್ತಿಯು ಶಿವನಲ್ಲಿ ಸಮರಸವಾದಂತೆ ತಾನೂ ಸಮರಸನಾದಹನು. ಇಲ್ಲಿ ಎಲೆ ಮನವೆ ಎಂಬ ಸಂಬೋಧನವು ಆ ಮನವೇ ವಿಚಾರಮುಖವಾಗಿ ತಾನು ನಿಲ್ಲಲು ತಾನೇ ಶಿವಚೈತನ್ಯ ಶಕ್ತಮಯವಾದವುದೆಂದು ಸೂಚಿಸುತ್ತಿದೆ. ವಿಚಾರವು ಮನೋಧೀನವಾಗಿದೆ. ಆ ಮನವು ಶಿವತತ್ವಮಯವಾಗಲು ಎಲ್ಲವೂ ಶಿವಮಯವು. ಈ ಅರ್ಥವನ್ನು ಶ್ರೀಮದಲ್ಲಮಪ್ರಭುವಿನ ಒಂದು ವಚನವನ್ನು ಉದಾಹರಿಸಿ ಗಟ್ಟಿಗೊಳಿಸುವಣ.

ವಚನ: ಘನವ ಮನವು ಕಂಡು, ಅವಗ್ರಾಹಕವಾಯಿತ್ತು. ಕಂಡು ಕಂಡು, ಮನ ಮಹಘನವಾಯಿತ್ತು. ತತ್ತಲ್ಲೀಯ್ಯವಾಯಿತ್ತು. ತದ್ಗತ ಶಬ್ದ ಮುಗ್ಧವಾದುದನೇನೆಂಬೆ ಗುಹೇಶ್ವರಾ?

ಮನವು ಹಲವು ವಸ್ತುಗಳನ್ನು ಬೇರೆ ಬೇರೆಯಾಗಿ ಕಂಡು ನಮ್ಮ ಅನುಭವದಲ್ಲಿ ಭೇದವನ್ನು ಹುಟ್ಟಿಸುತ್ತಿದೆ. ಘನವೆಂದರೆ ಅವಿರಳವೆಂಬರ್ಥ. ಈ ಜಗತ್ತಿನೊಳಗಿನ ಎಲ್ಲ ಪದಾರ್ಥಗಳು ಬೇರೆ ಬೇರೆಯಾಗಿ ತೋರಿದರೂ ಅವುದೊ ಒಂದು ಪದಾರ್ಥದಲ್ಲಿ ಭೇದವಿಲ್ಲದೆ ಕೂಡಿಯವೆ. ಈ ವಸ್ತುವು ಘನವು. ಇದರಲ್ಲಿ ಆ ಭಿನ್ನ ಭಿನ್ನವೆಂದು ತೋರುವ ವಸ್ತುಗಳು ಬೇರೆ ಬೇರೆಯಾಗಿರದೆ ಆ ಘನದಲ್ಲಿ ಅಡಗಿ ಹೋಗಿವೆ. ಪೃಥ್ವ್ಯಾದಿ ಭೂತಗಳು ಶಬ್ದಾದಿ ಗುಣಗಳಿಂದ ಭಿನ್ನ ಭಿನ್ನವಾಗಿಯೂ ವಿರಳವಾಗಿಯೂ ಒಂದಕ್ಕೊಂದು ಒಡೆದು ನಮ್ಮ ಮನಸ್ಸಿಗೆ ಗೋಚರಿಸುತ್ತವೆ. ಆದರೆ ಈ ಶಬ್ದಾದಿ ಸಾತಿಸ್ವಿಕ (ಒಂದೊಂದರ) ಗುಣಧರ್ಮಗಳಿಂದ ಒಡೆದು ತೋರುವವಾದರೂ ಈ ಗುಣಗಳೊಡನೆ ಅವು ಈ ಮಹಾ ವಿಸ್ತೃತವಾದ ವಿಶ್ವದಲ್ಲಿ ಕೀಲಿಸಿ ಅವೆ. ಆ ವಿಶ್ವವು ಇವುಗಳನ್ನೊಳಗೊಂಡು ಘನಗಂಭೀರವಾಗಿದೆ. ಅಂತಹ ವಿಶ್ವಗಳು ಇದುಯೆಂಬ ಬುದ್ಧಿಗೆ ಗೋಚರವಾಗುವುದರಿಂದ ತಾವೂ ತಮ್ಮನ್ನು ಗೋಚರಿಸುವ ಬುದ್ಧಿಯೂ ಕೂಡಿ ಚೈತನ್ಯದಲ್ಲಿ ಅಡಕವಾಗಿವೆ. ಚೈತನ್ಯವು ಅವುಗಳನ್ನು ತನ್ನ ಹೊರಗೆ ಬಿಡದೆ ಅತ್ಯಂತ ಘನಗಂಭೀರವಾಗಿ ಒಳಕೊಂಡು ಮೆರೆವುದು. ಮನವು ಒಡೆದು ತೋರುವ ಭೂತಗಳನ್ನು ಕಾಣುತ್ತಲೂ ವ್ಯಾಕುಲವಾಗದೆ ಸ್ಥಿಮಿತವಾಗಿ ನಿಂದೊಡೆ ಅವೆಲ್ಲವುಗಳಲ್ಲಿಯ ವಿಶ್ವವ್ಯಾಪ್ತಿಯನ್ನು ಕಾಂಬುದು. ಒಂದೊಂದು ಆಕಳನ್ನು ಕಂಡ ಮನವು ಆ ಆಕಳುಗಳಲ್ಲಿಯ ಆಕಳುತನವನ್ನು ಕಾಣುವಂತೆ ಈ ಪ್ರಕಾರವು. ಪಂಚಭೂತಗಳನ್ನು ಕಾಣುತ್ತಲು ಅವುಗಳ ಪರಸ್ಪರ ಸಂಬಂಧವನ್ನೂ ಸಾಹಿತ್ಯವನ್ನೂ ಕಂಡು ಈ ವಿಶ್ವಭಾನವು ಆದಕ್ಕಾಗುವುದು. ಆ ವಿಶ್ವಭಾನದಲ್ಲಿ ಇವು ಬೇರೆ ಬೇರೆಯಾಗಿ ಸಿಡಿದುನಿಲ್ಲದೆ ಅಖಂಡವಾಗಿ ತೋರಿದವುವು. ಬರಬರುತ್ತ ಇಂತಹ ವಿಶ್ವಗಳು ಮಹಾದ್ಭುತವಾದ ಮತ್ತೊಂದು ಘನವಸ್ತುವಿನಲ್ಲಿ ಅಂದರೆ ಚೈತನ್ಯದಲ್ಲಿ ಊರಿ ನಿಂತುದು ಗೋಚರಿಪುದು. ಇಷ್ಟೆಲ್ಲ ಕಂಡಬಳಿಕ ಮನಕ್ಕಾವ ಠಾವು? ಆ ಮನವು ಈ ಘನಗಂಭೀರದಲ್ಲಿ ಅಡಕವಾಗಿದೆಯೊ ಅದರ ಹೊರಗೆ ನಿಂತಿದೆಯೊ? ಮನವೂ ಆ ಚೈತನ್ಯದಲ್ಲಿ ಊರಿಕೊಂಡಿದೆ. ಆ ಚೈತನ್ಯವಿಲ್ಲದಿದ್ದರೆ ಮನಕ್ಕೆ



CC-0. Jangamwadi Math Collection, Varanasi. An eGangotri Initiative

ನೆಲೆಯಿಲ್ಲ. ಇಂತಾದಬಳಿಕ ಆ ಘನಗಂಭೀರವನ್ನು ನೋಡನೋಡುತ್ತ ಮನವು ಅದರಲ್ಲಡಗಿ ಆ ಘನಗಂಭೀರವೇ ತಾನಾದವುದು. ಅಂಗನನ್ನು ಲಿಂಗದಿಂದ ವಿಂಗಡಿಸಲು ಈ ಮನವೇ ಸೇತುವು. ಘನಗಂಭೀರದ ನಿಬಿಡವಾದ ತೆರೆಗಳ ಆ ಸ್ಫಾಲನದಿಂದ ಈ ಸೇತುವು ಹರಿದು ಹೋಗಲು ಅಂಗಲಿಂಗಗಳಿಗೆ ತೆರಪಿಲ್ಲದೆ ಸಾಮರಸ್ಯವಾದವುದು. ಇಷ್ಟಲಿಂಗ ಧಾರಣದಿಂದ ಅಂಗನ ಶರೀರವು ತನ್ನ ತನುತ್ವವನ್ನು ಕಳೆದು ಘನಗಂಭೀರದ ವಿಶಾಲತೆಯನ್ನು ತಳೆಯಿತು. ಆ ವಿಶಾಲತೆ ಯಲ್ಲಿ ಸರ್ವ ವಿಶ್ವಗಳನ್ನೂ ತನ್ನಲ್ಲಿಯೆ ಕಂಡಿತು. ಕಂಡ ವಿಶ್ವಗಳನ್ನು ತನ್ನಲ್ಲಿಯೆ ಹುದುಗಿಸಿ ಕೊಂಡಿತು. ಇಷ್ಟಲಿಂಗದ ಧಾರಣ, ಪೂಜನಗಳಿಂದ ಶಾರೀರಕ ಸಂಕೋಚಭಾವವು ಅಳಿಯಿತು. ಈ ಸಂಕೋಚಭಾವವನ್ನಳಿದು ವಿಶಾಲವನ್ನೈದಿದಾಗ ಪ್ರಾಣಲಿಂಗದ ಧ್ಯಾನವು ಕೂಡಿತು. ಪ್ರಾಣ ಲಿಂಗದ ಧ್ಯಾನದಿಂದ ವಿಶ್ವವೊಂದು ಭಾವದಲ್ಲಡಗಿದಾಗ ಆ ಭಾವದ ಸಾಮರಸ್ಯವು ನಿಲುಕಡೆ ಯಾಯಿತುಯೆಂಬುದೇ ಶ್ರೀಮದಲ್ಲಮ ಪ್ರಭುವಿನ ವಚನದ ಅರ್ಥವು.

ಇಲ್ಲಿಯವರೆಗೆ ಈ ನಿಬಂಧವನ್ನು ಮುಗಿಸುವ ಮೊದಲು ಅದ್ವೈತಕ್ಕೂ ಸಾಮರಸ್ಯಕ್ಕೂ ತೋರುವ ಭೇದಗಳನ್ನು ನಮ್ಮಿಂದಾದಷ್ಟು ವಿವರಿಸಿದೆವು. ಈ ವಿವರಣದಲ್ಲಿ ನಮ್ಮ ಮಾತುಗಳು ಅಷ್ಟೊಂದು ಹಸನಾಗಿರಲಿಕ್ಕಿಲ್ಲ. ವಿಚಾರಸರಣಿಯಲ್ಲಿ ಕೆಲಕೆಲವು ನಡುವಿನ ಮೆಟ್ಟಲುಗಳು ಹಾರಿರಬಹುದು. ಆದರೆ ಒಂದು ಮಾತು ವಿಶದವು. ಶಿವಾದ್ವೈತವೆಂಬ ಸಾಮರಸ್ಯವಾದದಲ್ಲಿ ಜಗತ್ತನ್ನು ನಾವು ಸಟೆಯೆನಬೇಕಾಗಿಲ್ಲ. ಅದೊಂದು ಅನುಭವದ ಮೆಟ್ಟು. ಆ ಅನುಭವದ ಮೆಟ್ಟು ಸಟೆಯಾದರೆ ಮುಂದಿನದೆಲ್ಲ ಸಟೆಯಾಗಬೇಕು. ನಮ್ಮ ಜ್ಞಾನವು ಉಳಿದೆಲ್ಲ ಶಾಸ್ತ್ರಗಳ ಲ್ಲಿಯೂ ಒಂದೊಂದು ಮೆಟ್ಟಲನ್ನು ಅಕ್ರಮಿಸುತ್ತ ಮುಂದಿನ ಮೆಟ್ಟಲಲ್ಲಿ ಹಿಂದಿನ ಮೆಟ್ಟಲನ್ನು ಸೇರಿಸುತ್ತ ನಡೆವುದಾದರೆ ಶಿವಜ್ಞಾನ ಒಂದರಲ್ಲಿ ಅದೇಕೆ ವಿಪರೀತವಾಗಬೇಕು? ಜಗತ್ತು ದಿಟವೆಂದು ಶಿವಾತ್ಮತೆಯಲ್ಲವನ್ನು ಅಡಗಿಸುವ ರೀತಿಯನ್ನು ನನ್ನ ಎಡಬಗೆಗೆ ತೋರಿದಂದದಲ್ಲಿ ಬಣ್ಣಿಸಿರುವೆನು. ಬಲ್ಲವರು ಅದರ ಕೊಂಕುಗಳನ್ನು ತಿದ್ದಲಿ. ಎಲ್ಲರೂ ಅದನ್ನು ಪರೀಕ್ಷಿಸಲಿ.

ಈ ಐಕ್ಯ ಸ್ಥಳದಲ್ಲಿ ಮಹಾಲಿಂಗವು ಪೂಜ್ಯವು. ಪ್ರಸಾದಲಿಂಗವೆಂದರೆ ಮತ್ತೊಂದು ಗಜಬಜೆಯಿಲ್ಲದೆ ಶರಣನಿಗೆ ಗೋಚರಿಸಿದ ಪರವಸ್ತುವೆಂದು ಹೇಳಿದೆವು. ಈಗ ಆ ಶರಣನ ಆನಂದ ಭಕ್ತಿಯು ಸಮರಸ ಭಕ್ತಿಯಾಗಿ ಪರಿಣಮಿಸಿ ಲಿಂಗವನು ಪೂಜಿಸುತ್ತಿರಲು ಆ ಲಿಂಗದಲ್ಲಿ ತಾನು ಬೆರೆದುದರಿಂದ ಅಂಗನು ಅದರಲ್ಲಿ ಐಕ್ಯನಾಗಿ ನಿಂದನು. ಹಿಂದಿನ ಐದು ಅನುಭವಗಳಲ್ಲಿ ಲಿಂಗವು ತನ್ನಲ್ಲಿ ಶರಣನ ದೇಹಾದಿಕರಣಗಳನ್ನು ಸೆಳೆದುಕೊಳ್ಳುತ್ತ ಈಗ ಆ ಶರಣನನ್ನೇ ಎಳೆದುಕೊಂಡು ಬಿಟ್ಟಿತು. ಅದರಿಂದಲೆ ಇದು ಮಹಾಲಿಂಗವು. ಈ ಮಹಾಲಿಂಗಕ್ಕೆ ಚಿಚ್ಛಕ್ತಿ ಚೇತನವು. ಚಿತ್ ಎಂದರೆ ಚೇತನವು. ಚೇತನವೆಂದರೆ ಸರ್ವವನ್ನೂ ತನ್ನಲ್ಲೊಳಗೊಂಡು ತಾನೊಂದೇ ನಿರಾಬಾಧ ವಾಗಿ ನಿಲ್ಲುವಣವು. ಆ ಲಿಂಗಕ್ಕೆ ಸದ್ಭಾವವೆಂಬ ಹಸ್ತ. ಸದ್ಭಾವವೆಂದರೆ ಉಳಿದ ಭಾಗಗಳೆಲ್ಲ ಬಯಲಾಗಿ ಲಿಂಗಭಾವ ಒಂದೇ ಉಳಿದುದು. ಈ ಲಿಂಗಕ್ಕೆ ಆತ್ಮನ ಅಂತಃಕರಣವೆ ಮುಖವು. ಈ ಮುಖದಲ್ಲಿ ಅಂತಃಕರಣದ ಅನುಭವಗಳೆ ಪದಾರ್ಥವು. ಆ ಪದಾರ್ಥವನ್ನು ಲಿಂಗಕ್ಕರ್ಪಿಸಿ ಉಂಟಾದ ಪರಿಣಾಮ ತೃಪ್ತಿಯೆ ಪ್ರಸಾದವು. ಆ ಪ್ರಸಾದವನ್ನುಂಡು ತೆಕ್ಕನೆ ತೀವಿ ಲಿಂಗದಡಿ, ಲಿಂಗದಡಿದಾವರೆಯಲ್ಲಿ ಲೀನನಾದ ಭಕ್ತನೆ ಪರಮಯೋಗಿಯು, ಪರಮಜ್ಞಾನಿಯು, ಪರಮ ಕೃತಾರ್ಥನು. ಇಂತೆಂಬಲ್ಲಿಗೆ ಶ್ರೀ ಬಸವೇಶ ಚರಣಗಳಲ್ಲಿ ನಿಬಂಧ ಸಮಾಪ್ತಿ.



CC-0. Jangamwadi Math Collection, Varanasi. An eGangotri Initiative



# ಷಟ್‌ಸ್ಥಲಗಳು

ಅಂಗನು ಅಂದರೆ ಜೀವಾತ್ಮನು-ಲಿಂಗದಲ್ಲಿ ಅಂದರೆ-ಪರಮಾತ್ಮನೆಲ್ಲಿ ಐಕ್ಯವಾಗಬೇಕಾದರೆ ನಮ್ಮವರು ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಎಂಬ ಆರು ಅವಸ್ಥೆಗಳನ್ನು ಕಲ್ಪಿಸಿರುವರು. ಈ ಅವಸ್ಥೆಗಳಿಗೆ ಷಟ್‌ಸ್ಥಲಗಳೆಂದು ಹೆಸರು. ಲಿಂಗಾಂಗಸಾಮರಸ್ಯವೆಂದರೂ ಒಂದೇ, ಷಟ್‌ಸ್ಥಲ ಜ್ಞಾನವೆಂದರೂ ಒಂದೇ. ನಮ್ಮ ಷಟ್‌ಸ್ಥಲಗಳು ಲೌಕಿಕ ಪಾರಮಾರ್ಥಗಳೆರಡನ್ನೂ ಒಳ್ಳೆ ಜಾಣ್ಮೆಯಿಂದ ಕೂಡಿಸಿಕೊಂಡು ಹೋಗುತ್ತವೆ. ಷಟ್‌ಸ್ಥಲವೆಂದರೆ ಆಚಾರವಿಲ್ಲದೆ ಬರೇ ಶಾಸ್ತ್ರಾರ್ಥಪ್ರತಿಪಾದನೆಮಾಡುವ ಗೊಳ್ಳು ವೇದಾಂತವಲ್ಲ. ಅನುಭವವಿಲ್ಲದ ಕೇವಲ ಅಂಧಶ್ರದ್ಧೆಯ ಕ್ರಿಯೆಯನ್ನು ಪ್ರತಿಪಾದಿಸುವ ಮಳ್ಳು ಸಿದ್ಧಾಂತವೂ ಅಲ್ಲ. ನಮ್ಮ ಷಟ್‌ಸ್ಥಲದಲ್ಲಿ ಸುಲಲಿತವಾದ ವೇದಾಂತವೂ ಸುಗಮವಾದ ಸಿದ್ಧಾಂತವೂ ಕೂಡಿಕೊಂಡಿದೆ. ಷಟ್‌ಸ್ಥಲ ಮಾರ್ಗದಲ್ಲಿ ಅದ್ವೈತದಂತೆ ಕೇವಲ ಜ್ಞಾನಕ್ಕಷ್ಟೇ ಮಹತ್ವವಿಲ್ಲ; ದ್ವೈತದಂತೆ ಕೇವಲ ಭಕ್ತಿಗಷ್ಟೇ ಪ್ರಾಧಾನ್ಯವಿಲ್ಲ. ಭಕ್ತಿ-ಜ್ಞಾನ ಸಮುಯಚ್ಚವೇ ಷಟ್‌ಸ್ಥಲ ಮಾರ್ಗದ ರಹಸ್ಯವು.

ಪರಮಾತ್ಮನು ತನ್ನ ಲೀಲಾಮಾತ್ರದಿಂದ ಜೀವ-ಜಗತ್ತುಗಳನ್ನು ನಿರ್ಮಿಸಿದ ವಿಕಾಸವಾದವೂ ಆ ಜೀವ-ಜಗತ್ತುಗಳನ್ನು ತನ್ನೊಳಗೆ ಅಡಗಿಸಿಕೊಳ್ಳುವ ಆಕುಂಚನವಾದವೂ ಷಟ್‌ಸ್ಥಲದಲ್ಲಿ ಅಡಕವಾಗಿವೆ. ಈ ವಿಕಾಸತತ್ವಕ್ಕೆ ಪರಮಾತ್ಮನ ಪ್ರವೃತ್ತಿಮಾರ್ಗವೆಂದೂ ಆಕುಂಚನತತ್ವಕ್ಕೆ ನಿವೃತ್ತಿಮಾರ್ಗವೆಂದೂ ನಮ್ಮವರು ಹೇಳುವದುಂಟು. ಷಟ್‌ಸ್ಥಲದಲ್ಲಿ "ಅನೇಕತ್ವದಲ್ಲಿ ಏಕತ್ವ, ಏಕತ್ವದಲ್ಲಿ ಅನೇಕತ್ವ" ( There is unity in diversity and diversity in unity ) ಎಂಬ ತತ್ವವೂ ನೆಲೆಗೊಂಡಿದೆ. ನಮ್ಮ ಷಟ್‌ಸ್ಥಲದಲ್ಲಿ ಕೇವಲ ಸಾಕಾರೋಪಾಸನೆಯಿಲ್ಲ, ಕೇವಲ ನಿರಾಕಾರೋಪಾಸನೆಯೂ ಇಲ್ಲ. ಸಾಕಾರ-ನಿರಾಕಾರಗಳೆರಡರ ಉಪಾಸನೆಯುಂಟು. ಸಾಕಾರದಿಂದ ನಿರಾಕಾರ, ನಿರಾಕಾರದಿಂದ ಸಾಕಾರ ಜನಿಸುವುದರಿಂದ ಸಾಕಾರ-ನಿರಾಕಾರಗಳೆರಡೂ ನಮ್ಮ ಮತದಲ್ಲಿ ಎಡೆಬಿಡದೆ ಕೂಡಿಕೊಂಡು ಹೋಗುತ್ತವೆ.

ಈ ಷಟ್‌ಸ್ಥಲಗಳ ವಿವರಣೆಯು ಸೂಕ್ಷ್ಮಾಗಮ, ಪಾರಮೇಶ್ವರಾಗಮ, ವಾತುಲಾಗಮಾದಿಗಳಲ್ಲಿ ಪ್ರತಿಪಾದಿತವಾಗಿರುವದೇನೋ ನಿಜ. ಆದರೆ ವಚನ ವಾಙ್ಮಯದಲ್ಲಿ ಅವು ಒಳ್ಳೆ



CC-0. Jangamwadi Math Collection, Varanasi. An eGangotri Initiative

ರಸಭರಿತವಾಗಿಯೂ ಸ್ಫೂರ್ತಿದಾಯಕವಾಗಿಯೂ ವಿವರಿಸಲ್ಪಟ್ಟವೆ. ಯಾವ ಶಿವಶರಣನ ವಚನಗಳನ್ನು ತೆಗೆದುಕೊಂಡರೂ ಅವು ಷಟ್‌ಸ್ಥಲಗಳ ಕ್ರಮದಲ್ಲಿಯೇ ಬರೆಯಲ್ಪಟ್ಟವೆ. ಆದರೆ ಭಗವದ್ಗೀತೆಯಂತೆ ಜ್ಞಾನಯೋಗ, ಭಕ್ತಿಯೋಗ, ಕರ್ಮಯೋಗ ಇತ್ಯಾದಿ ಕ್ರಮಗಳು ಅಲ್ಲಿ ಕಂಡು ಬರುವುದಿಲ್ಲ. ವಚನಗಳನ್ನು ಷಟ್‌ಸ್ಥಲಗಳ ಕ್ರಮದ ಮೇರೆಗೆ ವಿವೇಚಿಸುವುದೇ ವೀರಶೈವ ಧರ್ಮದ ವೈಶಿಷ್ಟ್ಯವು. ರಾ| ಸಾ| ಪಿ. ಜಿ. ಹಳಕಟ್ಟಿಯವರು ಇತ್ತೀಚಿಗೆ ಪ್ರಕಟಿಸಿದ "ವಚನಶಾಸ್ತ್ರಸಾರ ಭಾಗ ೨" ರಲ್ಲಿ ಈ ಷಟ್‌ಸ್ಥಲಗಳ ವಿವರವು ಒಳ್ಳೆ ಪರಿಪೂರ್ಣವಾಗಿಯೂ ರಸಭರಿತವಾಗಿಯೂ ಇದ್ದದ್ದು ಕಂಡು ಬರುತ್ತದೆ. ಷಟ್‌ಸ್ಥಲಗಳ ಮಾಧುರ್ಯವನ್ನು ಸವಿಯಬೇಕೆಂಬ ರಸಿಕರು ಆ ವಚನಶಾಸ್ತ್ರಸಾರವನ್ನು ಅವಶ್ಯವಾಗಿ ಓದಲೇಬೇಕು.

ಮೊದಲು ಪರಮಾತ್ಮನು ತನ್ನ ಲೀಲಾಮಾತ್ರದಿಂದ ಕ್ರಮೇಣ ಲಿಂಗ ಮತ್ತು ಅಂಗ ರೂಪದಿಂದ ಜಗತ್ತಿನಲ್ಲಿ ಹೇಗೆ ಉದ್ಭವಿಸಿದನೆಂಬದನ್ನಷ್ಟು ವಿಚಾರಿಸೋಣ. ಪರಶಿವನು ಮೊದಲು ಭಾವಲಿಂಗವಾಗಿಯೂ ನಂತರ ಪ್ರಾಣಲಿಂಗವಾಗಿಯೂ ಆ ಬಳಿಕ ಇಷ್ಟಲಿಂಗವಾಗಿಯೂ ಉದ್ಭವಿಸಿದನು. ಆ ಭಾವಲಿಂಗವು ಕ್ರಿಯಾಭೇದದಿಂದ ಮಹಾಲಿಂಗ, ಪ್ರಸಾದಲಿಂಗವೆಂಬೆರಡು ತೆರನಾಯಿತು. ಆ ಪ್ರಾಣಲಿಂಗವು ಜಂಗಮಲಿಂಗ, ಶಿವಲಿಂಗ ಎಂಬೆರಡು ರೂಪದಿಂದ ಕಂಗೊಳಿಸಿತು. ಇಷ್ಟಲಿಂಗವು ಗುರುಲಿಂಗ, ಆಚಾರಲಿಂಗವೆಂಬೆರಡು ಭೇದವುಳ್ಳದ್ದಾಯಿತು. ಒಂದೇ ಪರವಸ್ತುವು ಮೊದಲು ಮೂರಾಗಿ ಕೊನೆಗೆ ಆರಾದ ಪ್ರವೃತ್ತಿಗೆ ಲಿಂಗಷಟ್‌ಸ್ಥಲವೆಂಬ ಹೆಸರು.

ಅದೇ ಪರಮಾತ್ಮನು ಆರು ಲಿಂಗಗಳಾದ ಬಳಿಕ ಆರು ಶಕ್ತಿಗಳ ಸಹಾಯದಿಂದ ಆರು ಅಂಗಗಳನ್ನು ನಿರ್ಮಿಸಿ ತಾನು ಅವುಗಳಲ್ಲಿ ನೆಲಸಿದನು. ಅದು ಹೇಗೆಂದರೆ ಮೊದಲು ಆ ಪರವಸ್ತುವು ಯೋಗಾಂಗ, ಭೋಗಾಂಗ, ತ್ಯಾಗಾಂಗ ಎಂಬ ಮೂರು ಅಂಗವುಳ್ಳದ್ದಾಯಿತು. ಯೋಗಾಂಗವು ಕ್ರಿಯಾಭೇದದಿಂದ ಐಕ್ಯ–ಶರಣ ಎಂಬೆರಡು ತೆರನಾಯಿತು. ಭೋಗಾಂಗವು ಪ್ರಾಣಲಿಂಗಿ-ಪ್ರಸಾದಿ ಎಂಬೆರಡು ರೂಪದಿಂದ ಪರಿಣಮಿಸಿತು. ತ್ಯಾಗಾಂಗವು ಮಾಹೇಶ್ವರ-ಭಕ್ತ ಎಂಬೆರಡು ಭೇದವನ್ನು ತಾಳಿತು. ಈ ಮೇರೆಗೆ ಒಂದೇ ಪರವಸ್ತುವು ಮೊದಲು ಮೂರು ಕೊನೆಗೆ ಆರು ಅಂಗಗಳನ್ನು ಧರಿಸಿದ ಪರಿಗೆ ಅಂಗಷಟ್‌ಸ್ಥಲವೆಂಬ ಹೆಸರು.

ಪರಮಾತ್ಮನು ಆರು ಲಿಂಗಗಳಾಗಿ ಆರು ಅಂಗಗಳಲ್ಲಿ ಅಳವಟ್ಟ ರೀತಿಗೆ ಪ್ರವೃತ್ತಿಮಾರ್ಗವೆನ್ನುವರು. ಆ ಆರು ಲಿಂಗಗಳು ಆರು ಅಂಗಗಳಲ್ಲಿ ಯಾವ ಯಾವ ಶಕ್ತಿಗಳಿಂದ ಅಳವಟ್ಟವೆಂಬದನ್ನಷ್ಟು ವಿವೇಚಿಸೋಣ. ಮಹಾಲಿಂಗವು ಚಿಚ್ಛಕ್ತಿಯ ಸಹಾಯದಿಂದ ಐಕ್ಯಸ್ಥಲವಾಯಿತು. ಪ್ರಸಾದಲಿಂಗವು ಪರಾಶಕ್ತಿಯ ಸಹಾಯದಿಂದ ಶರಣಸ್ಥಲವಾಯಿತು. ಜಂಗಮಲಿಂಗವು ಆದಿಶಕ್ತಿಯ ಸಹಾಯದಿಂದ ಪ್ರಾಣಲಿಂಗಿ ಸ್ಥಳವಾಯಿತು. ಶಿವಲಿಂಗವು ಇಚ್ಛಾಶಕ್ತಿಯ ಸಹಾಯದಿಂದ ಪ್ರಸಾದಿ ಸ್ಥಲವಾಯಿತು. ಗುರುಲಿಂಗವು ಜ್ಞಾನಶಕ್ತಿಯ ಸಹಾಯದಿಂದ ಮಹೇಶ ಸ್ಥಲವಾಯಿತು. ಆಚಾರಲಿಂಗವು ಕ್ರಿಯಾಶಕ್ತಿಯ ಸಹಾಯದಿಂದ ಭಕ್ತ ಸ್ಥಲವಾಯಿತು. ಇದು ಲಿಂಗವು ಅಂಗವನ್ನು ಧರಿಸಿದ ರೀತಿಯು—ಅಂದರೆ ಪರಮಾತ್ಮನ ಪ್ರವೃತ್ತಿಮಾರ್ಗವು.

ಇನ್ನು ಅಂಗವು ಲಿಂಗದಲ್ಲಿ ಬೆರೆಯುವ ರೀತಿಗೆ ನಿವೃತ್ತಿಮಾರ್ಗವೆನ್ನುವರು. ಅದು ಪ್ರವೃತ್ತಿಮಾರ್ಗದ ವಿರುದ್ಧಕ್ರಮದಲ್ಲಿ ಸಾಗುತ್ತದೆ. ಅಂದರೆ ಹಿಂಬರಿಕೆಯಾಗಿ ಹೋಗುತ್ತದೆ.



CC-0. Jangamwadi Math Collection, Varanasi. An eGangotri Initiative

ಅಂಗವು ಅಂದರೆ–ಜೀವಾತ್ಮನು ಲಿಂಗದಲ್ಲಿ ಅಂದರೆ–ಪರಮಾತ್ಮನಲ್ಲಿ ಬೆರೆಯಲಿಕ್ಕೆ ಕ್ರಿಯಾಭೇದದಿಂದ ನಮ್ಮವರು ಗುರುಸ್ಥಲ, ಲಿಂಗಸ್ಥಲ, ಜಂಗಮಸ್ಥಲ ಎಂಬ ಮೂರು ಸ್ಥಲಗಳನ್ನು ಕಲ್ಪಿಸಿದ್ದಾರೆ. ಗುರುಸ್ಥಲದಲ್ಲಿ ಭಕ್ತ-ಮಹೇಶಸ್ಥಲಗಳು ಅಡಕವಾಗುತ್ತವೆ. ಲಿಂಗಸ್ಥಲದಲ್ಲಿ ಪ್ರಸಾದಿ-ಪ್ರಾಣಲಿಂಗಿಸ್ಥಳಗಳು ಕೂಡಿ ಹೋಗುತ್ತವೆ. ಜಂಗಮಸ್ಥಲದಲ್ಲಿ ಶರಣ-ಐಕ್ಯಸ್ಥಳಗಳು ಬೆರೆತಿರುತ್ತವೆ.

ಈ ಷಡಂಗಗಳು ಷಡ್ವಿಧ ಭಕ್ತಿಯಿಂದ ಕೂಡಿಕೊಂಡು ಷಡ್ಲಿಂಗಗಳಲ್ಲಿ ಸಮರಸವಾಗುವುವು. ಅದು ಹೇಗೆಂದರೆ ಭಕ್ತನು ಶ್ರದ್ಧಾಭಕ್ತಿಯಿಂದ ಆಚಾರಲಿಂಗದಲ್ಲಿ ಬೆರೆಯುವನು. ಮಹೇಶನು ನಿಷ್ಠಾಭಕ್ತಿಯಿಂದ ಗುರುಲಿಂಗದಲ್ಲಿ ಬೆರೆಯುವನು. ಪ್ರಸಾದಿಯು ಅವಧಾನ ಭಕ್ತಿಯಿಂದ ಶಿವಲಿಂಗದಲ್ಲಿ ಬೆರೆಯುವನು. ಪ್ರಾಣಲಿಂಗಿಯು ಅನುಭಾವ ಭಕ್ತಿಯಿಂದ ಜಂಗಮಲಿಂಗದಲ್ಲಿ ಬೆರೆಯುವನು. ಶರಣನು ಆನಂದ ಭಕ್ತಿಯಿಂದ ಪ್ರಸಾದಲಿಂಗದಲ್ಲಿ ಬೆರೆಯುವನು. ಐಕ್ಯನು ಸಮರಸಭಕ್ತಿಯಿಂದ ಮಹಾಲಿಂಗದಲ್ಲಿ ಬೆರೆಯುವನು.

ಆಚಾರಲಿಂಗವು ಗುರುಲಿಂಗದಲ್ಲಿಯೂ ಗುರುಲಿಂಗವು ಶಿವಲಿಂಗದಲ್ಲಿಯೂ ಶಿವಲಿಂಗವು ಜಂಗಮಲಿಂಗದಲ್ಲಿಯೂ ಜಂಗಮಲಿಂಗವು ಪ್ರಸಾದಲಿಂಗದಲ್ಲಿಯೂ ಪ್ರಸಾದಲಿಂಗವು ಮಹಾಲಿಂಗದಲ್ಲಿಯೂ ಅಡಗುವುವು. ಅಂದರೆ ಇಷ್ಟಲಿಂಗವು ಪ್ರಾಣಲಿಂಗದಲ್ಲಿಯೂ ಪ್ರಾಣಲಿಂಗವು ಭಾವಲಿಂಗದಲ್ಲಿಯೂ ಬೆರೆಯುವವೆಂಬರ್ಥ. ಇದಕ್ಕೆ ನಿವೃತ್ತಿಮಾರ್ಗವೆಂಬ ಹೆಸರು.

ಇನ್ನು ನಾವು ಅಂಗವು ಲಿಂಗದಲ್ಲಿ ಸಮರಸ ಹೊಂದಲಿಕ್ಕೆ ಅವಶ್ಯಕವಾದ ಆಯಾಯ ಅವಸ್ಥೆಗಳನ್ನು ಕುರಿತು ವಿವೇಚಿಸೋಣ. ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಇವೇ ಆರು ಆ ಅವಸ್ಥೆಗಳು. ಈ ಅವಸ್ಥೆಗಳು ಪರಸ್ಪರ ಸಂಬಂಧವುಳ್ಳವುಗಳಾಗಿವೆ. ಒಂದನ್ನು ಬಿಟ್ಟು ಇನ್ನೊಂದಕ್ಕೆ ಅಸ್ತಿತ್ವವಿಲ್ಲ. ಅವು ಅಷ್ಟು ತೊಡಕು ತೊಡಕಾಗಿ ಹೆಣೆಯಲ್ಪಟ್ಟಿವೆ. ಅವುಗಳು ಒಂದಕ್ಕೊಂದು ಸಂಬಂಧಪಟ್ಟಿದ್ದರೂ ಒಂದೊಂದರ ವೈಶಿಷ್ಟ್ಯವೇ ಬೇರೆ. ಒಂದೊಂದು ಅವಸ್ಥೆಯು ತನ್ನಷ್ಟಕ್ಕೆ ತಾನೇ ಪರಿಪೂರ್ಣವಾಗಿರುತ್ತದೆ. ಆದ್ದರಿಂದ ನಾವು ಒಂದು ಸ್ಥಲವು ಇನ್ನೊಂದು ಸ್ಥಲಕ್ಕಿಂತ ಹೆಚ್ಚು ಅಥವಾ ಕಡಿಮೆಯೆಂದು ಭಾವಿಸಬಾರದು. ಭಕ್ತಸ್ಥಲವು ಎಲ್ಲಕ್ಕೂ ಕಡಿಮೆಯಲ್ಲ; ಐಕ್ಯಸ್ಥಲವು ಎಲ್ಲಕ್ಕೂ ಹೆಚ್ಚಲ್ಲ. ಹಾಗೆ ತಿಳಿಯುವದು ಶುದ್ಧ ತಪ್ಪು. ಒಂದೊಂದು ಸ್ಥಲದಲ್ಲಿ ಉಳಿದ ಸ್ಥಲಗಳು ಅಂಶರೂಪದಿಂದ ಇದ್ದೇ ಇರುತ್ತವೆ. ಆದಾಗ್ಯೂ ಆಯಾಯ ಸ್ಥಲಗಳ ವೈಯಕ್ತಿಕ ವೈಶಿಷ್ಟ್ಯವೇ ಬೇರೆ. ಉದಾಹರಣಾರ್ಥವಾಗಿ ಭಕ್ತಸ್ಥಲದಲ್ಲಿ ಭಕ್ತನ ಭಕ್ತ, ಭಕ್ತನ ಮಹೇಶ, ಭಕ್ತನ ಪ್ರಸಾದಿ, ಭಕ್ತನ ಪ್ರಾಣಲಿಂಗಿ, ಭಕ್ತನ ಶರಣ, ಭಕ್ತನ ಐಕ್ಯ ಎಂಬ ಉಪಸ್ಥಲಗಳನ್ನು ಏರ್ಪಡಿಸಿರುವರು. ಇದರಂತೆ ಉಳಿದ ಪ್ರತಿಯೊಂದು ಸ್ಥಲದಲ್ಲಿಯೂ ಈ ಬಗೆಯ ಆರಾರು ಉಪಸ್ಥಲಗಳು ಏರ್ಪಟ್ಟು ಒಟ್ಟು ೩೬ ಸ್ಥಲಗಳಾಗಿವೆ. ಈ ಮೂವತ್ತಾರು ಸ್ಥಲಗಳು ಕ್ರಿಯಾಭೇದದಿಂದ ಮುಂದೆ ೪೪ ಅಂಗಸ್ಥಳ, ೫೭ ಲಿಂಗಸ್ಥಳ ಹೀಗೆ ೧೦೧ ಸ್ಥಲಗಳಾಗಿ ವಿವರಿಸಲ್ಪಟ್ಟಿವೆ. ಈ ನೂರೊಂದು ಸ್ಥಲಗಳೂ ಪರವಸ್ತುವೊಂದರಲ್ಲಿಯೇ ಲೀನವಾಗುತ್ತವೆ. ಇದೇ 'ಏಕತ್ವದಲ್ಲಿ ಅನೇಕತ್ವ, ಅನೇಕತ್ವದಲ್ಲಿ ಏಕತ್ವ' ಎಂಬ ತತ್ವವು.



CC-0. Jangamwadi Math Collection, Varanasi. An eGangotri Initiative

ಆ ನೂರೊಂದು ಸ್ಥಲಗಳ ವಿವರವನ್ನು ಕೆಳಗೆ ಕೊಟ್ಟಿದೆ.

| ಅಂಗಸ್ಥಲ | ಭಾಗ | ಲಿಂಗಸ್ಥಲ | ಭಾಗ |
|---|---|---|---|
| ೧ ಭಕ್ತಸ್ಥಲ | ೧೫ | ೧ ಆಚಾರಲಿಂಗ | ೯ |
| ೨ ಮಹೇಶ | ೯ | ೨ ಗುರುಲಿಂಗ | ೯ |
| ೩ ಪ್ರಸಾದಿ | ೭ | ೩ ಶಿವಲಿಂಗ | ೯ |
| ೪ ಪ್ರಾಣಲಿಂಗಿ | ೫ | ೪ ಜಂಗಮಲಿಂಗ | ೧೨ |
| ೫ ಶರಣ | ೪ | ೫ ಪ್ರಸಾದಲಿಂಗ | ೯ |
| ೬ ಐಕ್ಯ | ೪ | ೬ ಮಹಾಲಿಂಗ | ೯ |
| | ೪೪ | | ೫೭ |

ಜಗತ್ತಿನ ಸಜೀವ ಪ್ರಾಣಿಗಳೆಲ್ಲ ಪೃಥ್ವಿ, ಅಪ್ಪು, ತೇಜ, ವಾಯು, ಆಕಾಶ, ಆತ್ಮಗಳೆಂಬ ಷಟ್-ಭೂತಗಳಿಂದುದಿಸಿದಂತೆ ನಮ್ಮಲ್ಲಿಯೂ ಈ ತತ್ವಗಳು ನೆಲಸಿರುತ್ತವೆ. ಹೇಗಂದರೆ ಪೃಥ್ವಿಯೇ ನಾಸಿಕವು, ಅಪ್ಪುವೇ ಜಿಹ್ವೆಯು, ತೇಜವೇ ನೇತ್ರವು, ವಾಯುವೇ ತ್ವಕ್ಕು, ಆಕಾಶವೇ ಶ್ರೋತ್ರ, ಆತ್ಮವೇ ಹೃದಯ ಇವೇ ಷಟ್‌ಸ್ಥಲಗಳು. ಅದು ಹೇಗೆಂದದರೆ:— ಭಕ್ತಸ್ಥಲವೇ ನಾಸಿಕವು, ಮಹೇಶಸ್ಥಲವೇ ಜಿಹ್ವೆಯು, ಪ್ರಸಾದಿಸ್ಥಲವೇ ನೇತ್ರವು, ಪ್ರಾಣಲಿಂಗಿಸ್ಥಲವೇ ತ್ವಚವು, ಶರಣ ಸ್ಥಲವೇ ಶ್ರೋತ್ರವು, ಐಕ್ಯಸ್ಥಲವೇ ಹೃದಯವು, ಇವೇ ಅಂಗಸ್ಥಲಗಳು. ಈ ಇಂದ್ರಿಯಗಳ ಭೌತಿಕ ತತ್ವವು ಹಿಂಗಿ ಇವುಗಳಲ್ಲಿ ಶಿವತತ್ವವನ್ನು ತುಂಬುವದೇ ಲಿಂಗಾಂಗ ಸಾಮರಸ್ಯದ ರಹಸ್ಯವು. ಅರ್ಥಾತ್ ಇಂದ್ರಿಯಂಗಳ ಅಂಗಗುಣಗಳನ್ನು ಲಿಂಗಗುಣಗಳನ್ನಾಗಿ ಮಾರ್ಪಡಿಸುವದೇ ಷಟ್ ಸ್ಥಲ ತತ್ವದ ಮರ್ಮವು. ಅಂದರೆ ನಾಸಿಕವನ್ನು ಆಚಾರಲಿಂಗವನ್ನಾಗಿಯೂ, ಜಿಹ್ವೆಯನ್ನು ಗುರು ಲಿಂಗವನ್ನಾಗಿಯೂ, ನೇತ್ರವನ್ನು ಶಿವಲಿಂಗವನ್ನಾಗಿಯೂ, ತ್ವಚವನ್ನು ಜಂಗಮಲಿಂಗವನ್ನಾ ಗಿಯೂ, ಶ್ರೋತ್ರವನ್ನು ಪ್ರಸಾದಲಿಂಗವನ್ನಾಗಿಯೂ, ಹೃದಯವನ್ನು ಮಹಾಲಿಂಗವನ್ನಾಗಿಯೂ ಮಾಡಬೇಕು. ಇದರಲ್ಲಿಯೇ ಷಟ್‌ಸ್ಥಲಸಿದ್ಧಾಂತದ ಸೊಬಗು ಸೌಂದರ್ಯವಿದೆ.

ಭಕ್ತ-ಮಹೇಶಸ್ಥಲಗಳಿಗೆ ಇಷ್ಟಲಿಂಗ ಪೂಜೆಯೇ ಮುಖ್ಯ. ಪ್ರಸಾದಿ-ಪ್ರಾಣಲಿಂಗಿ ಸ್ಥಳಗಳಿಗೆ ಪ್ರಾಣಲಿಂಗಾನು ಸಂಧಾನವೇ ಪ್ರಾಧಾನ್ಯ. ಶರಣ-ಐಕ್ಯ ಸ್ಥಲಗಳಿಗೆ ಭಾವಲಿಂಗದಲ್ಲಿ ಬೆರೆದು ತಲ್ಲೀನವಾಗುವದೇ ಪ್ರಾಮುಖ್ಯ. ಆದರೆ ಪ್ರಸಾದಿ-ಪ್ರಾಣಲಿಂಗಿ ಸ್ಥಳದವರು ಇಷ್ಟಲಿಂಗ ಪೂಜೆಯನ್ನು ಬಿಡಬೇಕೆಂಬರ್ಥವಲ್ಲ. ಅದರಂತೆ ಶರಣ-ಐಕ್ಯಸ್ಥಲದವರು ಪ್ರಾಣಲಿಂಗಾನು ಸಂಧಾನವನ್ನು ತ್ಯಜಿಸಬೇಕೆಂಬರ್ಥವಲ್ಲ. ಪ್ರತಿಯೊಂದು ಸ್ಥಲದಲ್ಲಿಯೂ ಮೂರು ಲಿಂಗದ ಪೂಜೆಯು ನಡೆದೇ ಇರುತ್ತದೆ. ಆದರೆ ಆಯಾಯ ಸ್ಥಲಗಳಲ್ಲಿ ಆಯಾಯ ಲಿಂಗಗಳ ಪೂಜೆಯು ಅಧಿಕ ಪ್ರಮಾಣದಲ್ಲಿರುತ್ತದೆಂಬದಿಷ್ಟೇ ಅದರ ಅರ್ಥ.

ಕರಸ್ಥಲದಲ್ಲಿ ಇಷ್ಟಲಿಂಗವನ್ನೂ, ಉರಸ್ಥಲದಲ್ಲಿ ಪ್ರಾಣಲಿಂಗವನ್ನೂ, ಶಿರಸ್ಥಲದಲ್ಲಿ ಭಾವ ಲಿಂಗವನ್ನೂ ಅಳವಡಿಸಬೇಕೆಂದು ಷಟ್‌ಸ್ಥಲವು ಪ್ರತಿಪಾದಿಸುತ್ತದೆ. ಅಂದರೆ ಕರವನ್ನೂ ಹೃದಯ ವನ್ನೂ ಭಾವವನ್ನೂ ಸುಸಂಸ್ಕೃತಗೊಳಿಸಬೇಕೆಂಬರ್ಥ. ಕರದ ಸಂಸ್ಕೃತಿಯೆಂದರೆ ಸತ್ಕ್ರಿಯೆಗಳ



CC-0. Jangamwadi Math Collection, Varanasi. An eGangotri Initiative

ನ್ನಾಚರಿಸುವುದು, ಉರದ ಸಂಸ್ಕೃತಿಯೆಂದರೆ ನಮ್ಮ ಭಾವನೆಗಳನ್ನೆಲ್ಲ ಉದಾತ್ತಗೊಳಿಸುವುದು, ಶಿರದ ಸಂಸ್ಕೃತಿಯೆಂದರೆ ಲಿಂಗಾಂಗ ಸಾಮರಸ್ಯದ ಬಗ್ಗೆ ಸಾರಾಸಾರ ವಿಚಾರಿಸುವುದು. ಕರದ ಸಂಸ್ಕೃತಿಯೇ ಕ್ರಿಯೆಯೆಂದೂ ಉರದ ಸಂಸ್ಕೃತಿಯೇ ಯೋಗವೆಂದೂ ಶಿರದ ಸಂಸ್ಕೃತಿಯೇ ಜ್ಞಾನ ವೆಂದೂ ನಾವು ಕರೆಯುತ್ತೇವೆ. ಒಟ್ಟಿನಮೇಲೆ ಷಟ್‌ಸ್ಥಲ ಸಂಪಾದನೆಯೆಂದರೆ ಕ್ರಿಯಾ – ಯೋಗ-ಜ್ಞಾನ ಸಮುಚ್ಚಯಗಳ ಸಂಪಾದನೆಯು. ಯೋಗವು ಕ್ರಿಯಾ-ಜ್ಞಾನಗಳೆರಡನ್ನೂ ಜೋಡಿಸುವ ಕೊಂಡಿಯಾಗಿರುತ್ತದೆ.

ಇನ್ನು ಪರಮಾತ್ಮನು ಸಾಕಾರನೂ ನಿರಾಕಾರನೂ ಆಗಿದ್ದಾನೆಂದು ನಮ್ಮ ಷಟ್‌ಸ್ಥಲ ಶಾಸ್ತ್ರವು ಪ್ರತಿಪಾದಿಸುತ್ತದೆ. ಸಾಕಾರ-ಪರಮಾತ್ಮನು ನಾದ-ಬಿಂದು-ಕಲೆಯುಳ್ಳವನಾಗಿದ್ದಾನೆ. ಸಾಕಾರ-ಪರಮಾತ್ಮನ ಮೂರು ರೂಪಗಳೇ ಗುರು-ಲಿಂಗ-ಜಂಗಮವೆಂದು ನಾವು ತಿಳಿಯುತ್ತೇವೆ. ಆದ್ದರಿಂದ ಗುರುವೇ ನಾದ, ಲಿಂಗವೇ ಬಿಂದು, ಜಂಗಮವೇ ಕಳೆ. ಆದಕಾರಣ ನಾವು ಲಿಂಗಪೂಜೆ ಮಾಡುವಾಗ ನಾದ-ಬಿಂದು-ಕಲಾಯುಕ್ತವಾಗಿಯೇ ಮಾಡಬೇಕಾಗುವುದು. ಪಂಚಾಕ್ಷರಿ ಮಂತ್ರ ವನ್ನು ಪಠಿಸುವದೇ ನಾದ; ಲಿಂಗವನ್ನು ಪ್ರೇಮದಿಂದಲೂ ಅನಿಮಿಷದೃಷ್ಟಿಯಿಂದಲೂ ನಿರೀಕ್ಷಿಸು ವದೇ ಬಿಂದು; ಪತ್ರಿ, ಪುಷ್ಪಾದಿಗಳಿಂದ ಅಂದಚಂದವಾಗಿ ಪೂಜಿಸಿ ಆನಂದಪಡುವದೇ ಕಲೆ. ನಾದಕ್ಕೆ ನಾಮವೆಂದೂ ಬಿಂದುವಿಗೆ ರೂಪವೆಂದೂ ಕಲೆಗೆ ಕ್ರಿಯೆಯೆಂದೂ ಬೇರೆ ಹೆಸರುಗಳಿವೆ.

ಸಾಕಾರವಿಡಿದೇ ನಿರಾಕಾರ ಉದಯಿಸುವುದರಿಂದ ನಿರಾಕಾರವೆಂಬ ಪ್ರತ್ಯೇಕ ಹೆಸರಿಗೆ ನಮ್ಮ ಶಾಸ್ತ್ರದಲ್ಲಿ ಇಂಬಿಲ್ಲ. ಅದರಂತೆ ನಿರಾಕಾರದಿಂದಲೇ ಸಾಕಾರ ಉದಯಿಸುವುದರಿಂದ ಸಾಕಾರವೆಂಬುದು ಪ್ರತ್ಯೇಕ ಶಬ್ದವಿಲ್ಲ. ಸಾಕಾರ-ನಿರಾಕಾರಗಳೆರಡೂ ಒಳ್ಳೆ ಬಂಧುರವಾಗಿ ಬೆಸೆ ಯಲ್ಪಟ್ಟಿವೆ. ದ್ವೈತಿಗಳು ಬರಿಯ ಸಾಕಾರವನ್ನಷ್ಟೇ ಮನ್ನಿಸುವರು. ಅದ್ವೈತಿಗಳು ನಿರಾಕಾರ ವನ್ನು ಮಾತ್ರ ಪ್ರತಿಪಾದಿಸುವರು. ಆದರೆ ನಮ್ಮವರು ಸಾಕಾರ-ನಿರಾಕಾರಗಳೆರಡನ್ನೂ ಮನ್ನಿಸುವರು. ಸಾಕಾರ-ನಿರಾಕಾರಗಳ ಉಪಾಸನೆಯೇ ಷಟ್‌ಸ್ಥಲದ ಗುಟ್ಟು.

ವಚನಕಾರರು ಷಟ್‌ಸ್ಥಲಗಳ ಲಕ್ಷಣಗಳನ್ನು ಸುಗಮವಾಗಿ ಹೇಳಿದ್ದಾರೆ. ಅವುಗಳನ್ನು ಇದರಡಿಯಲ್ಲಿ ಕೊಟ್ಟಿದೆ.

(೧) ಕಿಂಕುರ್ವಾಣತೆಯಿಂದ ಉಳ್ಳುದನರಿತು ಮಾಡುವಲ್ಲಿ ಭಕ್ತ. ನಿಷ್ಠೆನಿಬ್ಬೆರಸಿ ಗಟ್ಟಿಗೊಂಡು ಅಭಿಲಾಷೆ ಸಮನಿಸದೆ ಪರಿಚ್ಛೇದ ಬುದ್ಧಿಯುಳ್ಳಲ್ಲಿ ಮಹೇಶ್ವರ. ಅನರ್ಪಿತವ ಸಮನಿ ಸದೆ ಬಂದುದ ಕಾಯದ ಕರಣದ ಕೈಗಳಲ್ಲಿ ಕೊಟ್ಟು ಲಿಂಗಸಹಿತ ಭೋಗಿಸುವಲ್ಲಿ ಪ್ರಸಾದಿ. ಪ್ರಾಣಕ್ಕೆ ಪ್ರಾಣವಾಗಿ ಕಾಲಸ್ಥಿತಿಯನರಿದು ಎಚ್ಚರಿಕೆಗುಂದದಿಪ್ಪಲ್ಲಿ ಪ್ರಾಣಲಿಂಗಿ. ತನಗೆ ಲಿಂಗ ವಾಗಿ ಲಿಂಗಕ್ಕೆ ತಾನಾಗಿ ಹೆಚ್ಚು ಬೇರಿಲ್ಲದಿರ್ದೊಡೆ ಶರಣ. ಸದಾಚಾರಸಂಪತ್ತಿನಲ್ಲಿ ಬಂದ ಅನುಭಾವವನು ಮೀರಿ ಹೆಸರಡಗಿದ ಸುಖವದು ಲಿಂಗೈಕ್ಯ. ಇದು ಕಾರಣ ಚೆನ್ನಸಂಗಯ್ಯನಲ್ಲಿ ಬಸವಣ್ಣಂಗಲ್ಲದೆ ಷಟ್‌ಸ್ಥಲವಪೂರ್ವ.

(೨) ಭಕ್ತನಾದಡೆ ತನುಮನಧನದಾಸೆಯನಳಿದಿರಬೇಕು. ಮಹೇಶ್ವರನಾದೊಡೆ ಪರಧನ, ಪರಚಿಂತೆ, ಪರಾಂಗನೆಯರ ಎಡೆಯಳಿದುಳಿದಿರಬೇಕು. ಪ್ರಸಾದಿಯಾದೊಡೆ ಸುಖ ರುಚಿಯನಗ್ರಹವಂ ಮರೆದು ಪ್ರಸಾದ ಘಟವಳಿಯದೆ ಉಳಿದಿರಬೇಕು. ಪ್ರಾಣಲಿಂಗಿಯಾದೊಡೆ



CC-0. Jangamwadi Math Collection, Varanasi. An eGangotri Initiative

ಘಟದಾಶೆಯ ತೊರೆದು, ಪ್ರಾಣಲಿಂಗದೊಳಗೆ ಬೆರಸಿ ಬೇರಿಲ್ಲದಿರಬೇಕು. ಲಿಂಗೈಕ್ಯನಾದಡೆ ಆಪ್ಯಾಯನದೆಡೆಯಡಗಿ ಸುಖದುಃಖಮಂ ತಾಳದೆ ನಿಭ್ರಾಂತನಾಗಿರಬೇಕು. ಇಂತೀ ಷಟ್‌ಸ್ಥಲ ವಾರಿಗೆಯೂ ಅಳವಡದು. ಸೊಡ್ಡಳದೇವನು ಷಟ್‌ಸ್ಥಲದ ಭಕ್ತಿಯನು ಬಸವಣ್ಣಂಗೆ ಮೂರ್ತಿಯ ಮಾಡಿದನು.

( ೩ ) ಭಕ್ತಂಗೆ ಕ್ರಿಯೆ, ಮಹೇಶ್ವರಂಗೆ ನಿಶ್ಚಯ, ಪ್ರಸಾದಿಗೆ ಅರ್ಪಣ, ಪ್ರಾಣಲಿಂಗಿಗೆ ಯೋಗ, ಶರಣಂಗೆ ನಿಬ್ಬೆರಗು, ಐಕ್ಯಂಗೆ ನಿರ್ಲೇಪ. ಇಂತೀ ಷಟ್‌ಸ್ಥಲವ ಗ್ರಹಿಸಿನಿಂದ ವಿರಕ್ತನ ಏಕಸ್ಥಲದಾಟ, ನಿಜತತ್ವದ ಕೂಟ. ಶಂಭುವಿಂದತ್ತ, ಸ್ವಯಂಭುವಿಂದತ್ತ ಅತಿಬಳನೋಡಾ ಮಾತುಳಂಗ ಮಧುಕೇಶ್ವರನು.

( ೪ ) ವಿಶ್ವಾಸದಿಂದ ಭಕ್ತನಾಗಿ, ಆ ವಿಶ್ವಾಸದೊಳಗಣ ನಿಷ್ಠೆಯಿಂ ಮಹೇಶ್ವರನಾಗಿ, ಆ ನಿಷ್ಠೆಯೊಳಗಣ ಸಾವಧಾನದಿಂ ಪ್ರಸಾದಿಯಾಗಿ, ಆ ಸಾವಧಾನದೊಳಗಣ ಸ್ವಾನುಭಾವದಿಂ ಪ್ರಾಣಲಿಂಗಿಯಾಗಿ, ಆ ಸ್ವಾನುಭವದೊಳಗಣ ಅರುವಿನಿಂ ಶರಣನಾಗಿ, ಆ ಅರಿವು ನಿಜದಲ್ಲಿ ಸಮರಸಭಾವವನೈದಿದೊಡೆ ಅದೇ ಐಕ್ಯಸ್ಥಲ ಗುಹೇಶ್ವರಾ.

( ೫ ) ಭಕ್ತನಾದರೆ ಕಿಂಕರರ ಕಿಂಕರನಾಗಿರಬೇಕು. ಮಹೇಶ್ವರನಾದರೆ ಆದಿ-ಅನಾದಿ ಯನರಿದಿರಬೇಕು. ಪ್ರಸಾದಿಯಾದರೆ ಒಡಲ ಗುಣವಿರಹಿತನಾಗಿರಬೇಕು. ಪ್ರಾಣಲಿಂಗಿಯಾದರೆ ಬಾಹ್ಯವಿಚಾರವಿಲ್ಲದಿರಬೇಕು. ಶರಣನಾದರೆ ನಿಸ್ಸಂಗಿಯಾಗಿರಬೇಕು. ಐಕ್ಯನಾದರೆ ಬಯಲು ಬಯಲಾಗಿರಬೇಕು. ಇಂತಪ್ಪ ಸ್ಥಲವನ್ನರಿಯದೆ ಕೂಡಲ ಚೆನ್ನಸಂಗಯ್ಯನಲ್ಲಿ ಸುಸಂಗತಿ ಯೆನಿಸಬಾರದು.

ಇನ್ನು ಯಾವ ಯಾವ ಶರಣರು ಯಾವ ಯಾವ ಸ್ಥಲದವರಿದ್ದರೆಂಬುದನ್ನು ಒಂದು ವಚನವು ಹೇಳುತ್ತದೆ. ಅದನ್ನೇ ಇಲ್ಲಿ ಕೊಟ್ಟಿದೆ:—

"ತ್ರಿವಿಧ ಪದಾರ್ಥವ ಗುರು ಲಿಂಗ ಜಂಗಮಕ್ಕೆ ನಿರ್ವಂಚನೆಯಿಂದ ಸಮರ್ಪಿಸುವ ಭಕ್ತ ಸ್ಥಲವುಳ್ಳವನೇ ಬಸವಣ್ಣನು. ಪಂಚಮಹಾಪಾತಂಗಳ ಬಿಟ್ಟು ಪಂಚಾಚಾರವನೊಡಲು ಮಾಡಿ ಕೊಂಡು ಏಕಲಿಂಗ ನಿಷ್ಠೆಯಿಂದಾಚರಿಸುವ ಮಹೇಶ್ವರಸ್ಥಲವುಳ್ಳವರೇ ಜಗದೇವ ಮಲ್ಲಿಬೊಮ್ಮಣ್ಣ ಗಳು. ತ್ರಿವಿಧಪದಾರ್ಥವ ತ್ರಿವಿಧಲಿಂಗಕ್ಕರ್ಪಿಸಿ ತ್ರಿವಿಧಪದಾರ್ಥವ ಸ್ವೀಕರಿಸುವ ಪ್ರಸಾದಿ ಸ್ಥಲವುಳ್ಳವನೇ ಬಸವೇಶ್ವರನ ಸೋದರಳಿಯನಾದ ಚೆನ್ನಬಸವಣ್ಣನು. ಅಂಗ-ಪ್ರಾಣಂಗಳಲ್ಲಿ ಇಷ್ಟ-ಪ್ರಾಣಲಿಂಗಸಂಬಂಧವ ಮಾಡಿಕೊಂಡು ಜ್ಞಾನ-ಕ್ರಿಯಾಯುಕ್ತವಾಗಿ ಆಚರಿಸುವ ಪ್ರಾಣ ಲಿಂಗಿ ಸ್ಥಳವುಳ್ಳವರೇ ಸಿದ್ಧರಾಮಯ್ಯ, ನಿಜಗುಣದೇವರು, ಘಟ್ಟಿವಾಳಯ್ಯಗಳು. ಶರಣ-ಸತಿ ಲಿಂಗ-ಪತಿತ್ವಪಿಡಿದಾಚರಿಸುವ ಶರಣಸ್ಥಲವುಳ್ಳವರೇ ಪ್ರಭುದೇವರು, ಅಕ್ಕಗಳು, ಗಜೇಶ ಮಸಣ ಯ್ಯಗಳು, ಉರಿಲಿಂಗಯ್ಯಗಳು. ಉರಿ ಕರ್ಪುರದ ಸಂಯೋಗದ ಹಾಗೆ ಮಹಾಲಿಂಗದಲ್ಲಿ ಕೂಡುವ ಐಕ್ಯಸ್ಥಳವುಳ್ಳವರೇ ಅಜಗಣ್ಣಗಳು."

ಅಂಗನು ಪ್ರಪಂಚದಲ್ಲಿದ್ದುಕೊಂಡೇ ಪಾರಮಾರ್ಥವನ್ನು ಸಾಧಿಸಬೇಕಾಗಿರುವುದರಿಂದ ಅವನು ಪ್ರಾಪಂಚಿಕ ವ್ಯವಹಾರಗಳನ್ನು ಸರ್ವಥಾ ಬಿಡಲಾಗದು. ಅದರಂತೆ ಪಾರಮಾರ್ಥಿಕ ಕುರುಹಾದ ಲಿಂಗವನ್ನೂ ಬಿಡುವಂತಿಲ್ಲ. ಆದ್ದರಿಂದ ನಾವು ಮಾಡುವ ಲಿಂಗಪೂಜೆಯಾದರೂ



CC-0. Jangamwadi Math Collection, Varanasi. An eGangotri Initiative

ಪ್ರಾಪಂಚಿಕ ಹಿತದ ಕ್ರಿಯೆಗಳಲ್ಲಿ ಕೂಡಿ ಹೋಗಬೇಕು. ಇದೇ ಷಟ್‌ಸ್ಥಲಜ್ಞಾನದ ಗುಟ್ಟು. ಇನ್ನು ಆಯಾಯ ಸ್ಥಲಗಳ ಸಾಮಾನ್ಯ ತತ್ತ್ವಗಳನ್ನಷ್ಟು ವಿವೇಚಿಸೋಣ.

## ೧. ಭಕ್ತ ಸ್ಥಲ

ಶ್ರದ್ಧಾಭಕ್ತಿಯಿಂದ ಆಚಾರಲಿಂಗವಾಗುವವನೇ ಭಕ್ತನು. ಈತನು ಗುರುಲಿಂಗ ಜಂಗಮರು ಪರಶಿವನ ರೂಪಿಗಳೆಂದು ಶ್ರದ್ಧೆಯನ್ನಿಟ್ಟು ಕಾಯಕಮಾಡಿ ಅವರಿಗೆ ತ್ರಿವಿಧದಾಸೋಹಮಂ ಗೆಯ್ಯಬೇಕು. 'ಲಿಂಗ ಮುಟ್ಟಿದ ಕೈ ಮಾಸಲು, ಲಿಂಗ ಧರಿಸಿದ ದೇಹ ದೇಗುಲ' ಎಂಬ ವಿಚಾರವನ್ನು ಮನಸ್ಸಿನಲ್ಲಿ ತಂದು ಭಕ್ತನು ದುರಾಚಾರಗಳಿಗೆಷ್ಟೂ ಇಂಬುಗೊಡದೆ ಸತ್ಕ್ರಿಯೆಗಳನ್ನೇ ಆಚರಿಸುತ್ತ ಹೋಗಬೇಕು. ಸತ್ಕ್ರಿಯೆ ಮಾಡದ ಮನುಷ್ಯನ ಆತ್ಮವು ಮೂಗಿಲ್ಲದ ಮುಖದಂತೆ ಅಂದಗೇಡಿಯಾಗಿ ಕಾಣುವುದು. ಭಕ್ತನು ಭಿನ್ನ ಭಿನ್ನ ಕಾಯಕ ಮಾಡುವ ಬೇರೆ ಬೇರೆ ಭಕ್ತರಲ್ಲಿ ಜಾತಿ ಕುಲವನ್ನೆಣಿಸಬಾರದು. ಭಕ್ತರೊಳಗೆ ಪರಸ್ಪರ ಅನ್ನೋದಕ ಕನ್ಯಾವ್ಯವಹಾರಗಳನ್ನು ನಿಸ್ಸಂದೇಹವಾಗಿ ಮಾಡಬೇಕು. ಒಳಪಂಗಡಗಳಿಗೆ ಆಸ್ಪದವೀಯಕೂಡದು. ಈ ಪ್ರಕಾರ ನಡೆಯುವ ಸತ್ಕ್ರಿಯೆಯೇ ಆಚಾರಲಿಂಗವು. ಇದೇ ಭಕ್ತನ ಲಕ್ಷಣ.

## ೨. ಮಹೇಶ ಸ್ಥಲ

ನಿಷ್ಠಾಭಕ್ತಿಯಿಂದ ಗುರುಲಿಂಗವಾಗುವವನೇ ಮಹೇಶನು. ಗುರುಲಿಂಗಜಂಗಮದಲ್ಲಿಟ್ಟ ಅಚಲವಾದ ಭಕ್ತಿಯೇ ನಿಷ್ಠೆಯು. ಮಹೇಶನು ಲಿಂಗಪೂಜೆಯ ನೇಮವಿಧಾನಗಳನ್ನು ತಪ್ಪದೇ ಆಚರಿಸುತ್ತ ಹೋಗುವನು. ಲಿಂಗ ಹೋದರೆ ಪ್ರಾಣವನ್ನಾದರೂ ತೊಲಗುವನು. ಪರನಾರಿಯರನ್ನು ಕಣ್ಣೆತ್ತಿ ನೋಡನು. ಪರದ್ರವ್ಯವನ್ನು ಕೈಯಿಂದ ಮುಟ್ಟನು. ಅನ್ಯ ದೈವಕ್ಕೆಂದಿಗೂ ಎರಗನು. ತೀರ್ಥಯಾತ್ರೆಗಳಿಗೆಂದಿಗೂ ಹೋಗನು. ಪ್ರಾಯಶ್ಚಿತ್ತಗಳನೆಂದಿಗೂ ತೆಗೆದುಕೊಳ್ಳನು. ಗುರುಲಿಂಗಜಂಗಮನಿಂದೆಯನ್ನೆಂದಿಗೂ ಸೈರಿಸನು. ಜ್ಯೋತಿಷ್ಯ, ಶಕುನ, ಸೂತಕಗಳನ್ನು ನಂಬನು. ವೇಶ್ಯಾವೃತ್ತಿಯನ್ನು ಜರೆಯುವನು. ಯಜ್ಞ-ಯಾಗ-ಬಲಿದಾನ ಮೊದಲಾದ ಹಿಂಸೆಗಳಿಗೆಷ್ಟುಮಾತ್ರವೂ ಸೈರಿಸನು. ಶಿಕ್ಷಣ-ಪ್ರವಚನ-ಕೀರ್ತನ-ಲೇಖನ-ಮುದ್ರಣಾದಿಗಳಿಂದ ಸಮಾಜಸೇವೆ ಮಾಡುವನು. ಹೀಗೆ ಆಚರಿಸುವುದೇ ಗುರುಲಿಂಗವು. ಇದೇ ಮಹೇಶ್ವರನ ಲಕ್ಷಣವು.

## ೩. ಪ್ರಸಾದಿ ಸ್ಥಲ

ಅವಧಾನಭಕ್ತಿಯಿಂದ ಶಿವಲಿಂಗವಾಗುವವನೇ ಪ್ರಸಾದಿಯು. ಪ್ರಸಾದಿಯು ಶಿವಲಿಂಗದ ತೇಜಸ್ಸನ್ನು ತನ್ನೊಳಗೆ ಅಳವಡಿಸಿಕೊಂಡಿರುತ್ತಾನೆ. ಈತನು ಯಾವಾಗಲೂ ಪ್ರಸನ್ನಚಿತ್ತನೂ ಲಿಂಗಭೋಗೋಪಭೋಗಿಯೂ ಶಿವಾರ್ಪಣ ಬುದ್ಧಿಯುಳ್ಳವನೂ ಆಗಿರುತ್ತಾನೆ. ಬಾಹ್ಯಾಂತರ ಶುದ್ಧಿಯನ್ನು ಹೊಂದಿ ಶೋಭಿಸುತ್ತಾನೆ. ಅವನು ಮಾಡುವುದು, ಉಣ್ಣುವುದು, ಕೊಡಕೊಂಬುವುದು, ನಡೆಯುವುದು — ಎಲ್ಲವೂ ಶಿವಾರ್ಪಣ ಬುದ್ಧಿಯಿಂದಲೇ ಜರಗುತ್ತವೆ. ಪ್ರಸಾದಿಯು ಯಾವಾಗಲೂ ಹಸನ್ಮುಖಿಯೂ ಸವಿ ಮಾತಿನವನೂ ದಯಾದಾಕ್ಷಿಣ್ಯಪರನೂ ಆಗಿರುತ್ತಾನೆ. ಆತನ ಇಂದ್ರಿಯಗಳೆಲ್ಲವೂ ಪ್ರಸಾದಮಯವಾಗಿರುತ್ತವೆ. ಆತನು ನೋಡುವದೂ, ಕೇಳುವದೂ, ಘ್ರಾಣಿಸುವದೂ, ಮುಟ್ಟುವದೂ, ರುಚಿನೋಡುವದೂ ಎಲ್ಲವೂ ಪ್ರಸಾದವೇ. ಹೀಗೆ ಆಚರಿಸುವವನೇ ಶಿವಲಿಂಗವು. ಇದೇ ಪ್ರಸಾದಿಯ ಲಕ್ಷಣವು.



CC-0. Jangamwadi Math Collection, Varanasi. An eGangotri Initiative

## ೪. ಪ್ರಾಣಲಿಂಗಿ ಸ್ಥಲ

ಅನುಭಾವಭಕ್ತಿಯಿಂದ ಜಂಗಮಲಿಂಗವಾಗುವವನೇ ಪ್ರಾಣಲಿಂಗಿಯು. ಜಗತ್ತಿನ ಪ್ರಾಣಿಗಳನ್ನೆಲ್ಲ ಆತನು ಲಿಂಗರೂಪವಾಗಿ ಕಾಣುವನು. ಇಷ್ಟಲಿಂಗದ ತೆರಹಿಲ್ಲದ ಅನುಸಂಧಾನದಿಂದ ಪ್ರಾಣಲಿಂಗದಲ್ಲಿ ಸದಾ ತಲ್ಲೀನನಾಗಿರುವನು. ಶಿವಪಂಚಾಕ್ಷರಿ ಮಂತ್ರದ ಪಠನದಿಂದಲೂ ಲಿಂಗೈಕಾಗ್ರತಾದೃಷ್ಟಿಯಿಂದಲೂ ಆತನು ಶಿವಯೋಗಿಯಾಗುವನು. ಈ ಶಿವಯೋಗವೆಂದರೆ ರಸಹೀನವಾದ ಮತ್ತು ಕಷ್ಟಕರವಾದ ಹಠಯೋಗವಲ್ಲ. ಅದು ಸುರುಚಿರಭಕ್ತಿಸಂಪನ್ನತೆಯಿಂದ ಕೂಡಿದೆ. ಪ್ರಾಣಲಿಂಗಿಯ ಜೀವನವು ಪವಿತ್ರವೂ ನಿಷ್ಕಲಂಕವೂ ಆಗಿದ್ದು ಅನ್ಯರಿಗೆ ಮಾರ್ಗದರ್ಶಿಯಾಗಿರುತ್ತದೆ. ಇವೆಲ್ಲ ಲಕ್ಷಣಗಳುಳ್ಳದ್ದೇ ಪ್ರಾಣಲಿಂಗಿ ಸ್ಥಳವು. ಅದೇ ಜಂಗಮಲಿಂಗವು.

## ೫. ಶರಣ ಸ್ಥಲ

ಆನಂದಭಕ್ತಿಯಿಂದ ಪ್ರಸಾದಲಿಂಗವಾಗುವವನೇ ಶರಣನು. ಶರಣನು ತಾನು ಸತಿ ಲಿಂಗವು ಪತಿಯೆಂಬ ಭಾವದಿಂದ ಲಿಂಗಯ್ಯನಲ್ಲಿ ಆನಂದ ಭಕ್ತಿಯನ್ನು ತಾಳುವನು. ಶರಣನು ಜಗತ್ತಿನ ದ್ವಂದ್ವಾದಿಗಳಿಂದ ನಿರ್ಲಿಪ್ತನಾಗಿರುತ್ತಾನೆ. ಪತಿತೋದ್ಧರಣವೇ ಶರಣನ ಜೀವನದ ಮುಖ್ಯ ಗುರಿಯು. ಪ್ರಾಣಲಿಂಗದಿಂದ ಭಾವಲಿಂಗದ ಕಡೆಗೆ ಈತನ ಒಲವು ಇರುತ್ತದೆ. ಶರಣನು ಚರಿಸಿದ್ದೇ ಧರ್ಮ, ತ್ಯಜಿಸಿದ್ದೇ ಅಧರ್ಮ. ಶರಣನೊಡನೆ ಸರಸವಾಡಿದವರಿಗೆ ಕೇಡು ತಪ್ಪದು. ಇವೆಲ್ಲ ಲಕ್ಷಣಗಳುಳ್ಳದ್ದೇ ಶರಣಸ್ಥಲವು. ಇದೇ ಪ್ರಸಾದಲಿಂಗವು.

## ೬. ಐಕ್ಯ ಸ್ಥಲ

ಸಮರಸಭಕ್ತಿಯಿಂದ ಮಹಾಲಿಂಗವಾದವನೇ ಐಕ್ಯನು. ಅಂದರೆ ಭಾವಲಿಂಗದಲ್ಲಿ ನಿರ್ವಿಕಲ್ಪಸಮಾಧಿಯನ್ನು ಪಡೆದಂಥವನು. ಲಿಂಗದಲ್ಲಿ ಬೆರೆದು ತಾನೇ ಲಿಂಗ, ಲಿಂಗವೇ ತಾನು ಎಂಬಂತೆ ಅವನ ಸ್ಥಿತಿಯಾಗಿರುತ್ತದೆ. ನೀರಿನಲ್ಲಿ ನೀರೂ ಹಾಲಿನಲ್ಲಿ ಹಾಲೂ ಕೂಡಿದಂತೆ ಅವನಾತ್ಮವು ಲಿಂಗದಲ್ಲಿ ಸಮರಸವಾಗಿರುತ್ತದೆ. ಈ ಸ್ಥಿತಿಯನ್ನು ಮೀರಿ ಬೇರೊಂದು ಅವಸ್ಥೆ ಇಲ್ಲವು. ಸ್ಥಿತಾಪ್ರಜ್ಞನ ಲಕ್ಷಣಗಳೆಲ್ಲವೂ ಈತನಿಗುಂಟು. ಐಕ್ಯನು ಸರ್ವಾಂಗ ಲಿಂಗಮಯನಾದ ಸುಜ್ಞಾನಿಯು. ಈತನೇ ಷಟ್‌ಸ್ಥಲ ಬ್ರಹ್ಮಿಯು, ನಿರಂಜನ ಪ್ರಣವಸ್ವರೂಪನು. ಈ ಲಕ್ಷಣಗಳುಳ್ಳದ್ದೇ ಐಕ್ಯಸ್ಥಲವು. ಇದೇ ಮಹಾಲಿಂಗವು.



CC-0. Jangamwadi Math Collection, Varanasi. An eGangotri Initiative



# ವೀರಶೈವರ ನೈತಿಕ ವಿಚಾರಗಳು

ಮನುಷ್ಯನ ಶಾರೀರಕ ಬೆಳವಣಿಗೆಗೆ ನೀರು-ಗಾಳಿ-ಆಹಾರಗಳು ಹೇಗೆ ಅವಶ್ಯಕವೋ ಹಾಗೆ ಮನುಷ್ಯನ ಆಧ್ಯಾತ್ಮಿಕ ಬೆಳವಣಿಗೆಗೆ — ತನ್ಮೂಲಕ ಇಡೀ ಮಾನವ ವರ್ಗದ ಸುಖ-ಶಾಂತಿಗೆ — ನೀತಿಯು ಅವಶ್ಯಕ. ನೀತಿಯು "ಮಾನವ ಶಾಸ್ತ್ರ"ವೆಂದೂ, ಮಾನವನು ಸರ್ವ ಸಾಮಾನ್ಯವಾಗಿ ನಡಿಸಬೇಕಾದ ದಿನಚರಿಯ ಕಾರ್ಯವೆಂದೂ ಲಾಕ್ (Locke) ಎಂಬ ಶಾಸ್ತ್ರಜ್ಞನು ಹೇಳುತ್ತಾನೆ. ಇದನ್ನೇ ಅರಿಸ್ಟಾಟಲನು (Aristotle) ಸಮರ್ಥಿಸಿ "The task of ethics is the investigation of the peculiar and characteristic functions of man" ಅಂದರೆ "ಮನುಷ್ಯನ ವಿಶೇಷಿತ ಮತ್ತು ಗುಣದ್ಯೋತಕ ಕೆಲಸಗಳ ಅನ್ವೇಷಣವೇ ನೀತಿಶಾಸ್ತ್ರದ ಗುರಿ" ಎಂದು ಹೇಳಿದ್ದಾನೆ. ಮತ್ತೆ ಅರಿಸ್ಟಾಟಲನು ಹೀಗೆ ಪ್ರಶ್ನೆ ಮಾಡುತ್ತಾನೆ: "Can we suppose that, while a carpenter and a cobbler each has a function and a business of his own, man has no business assigned to him by nature?" ಅಂದರೆ "ಒಬ್ಬ ಬಡಿಗ, ಒಬ್ಬ ಮೋಚಿ, ಇವರಿಗೆ ಒಬ್ಬೊಬ್ಬರಿಗೆ ತಮ್ಮದೇ ಆದ ಒಂದೊಂದು ಕೆಲಸವೂ ಕಸಬೂ ಇದ್ದ ಮೇಲೆ ಮನುಷ್ಯನಿಗೆ ಪ್ರಕೃತಿಯಿಂದ ನಿರೂಪಿಸಲ್ಪಟ್ಟ ಕೆಲಸವಾವುದೂ ಇಲ್ಲವೆಂದು ಹೇಳೋಣವೇ?" ಹೀಗೆ ಪ್ರಶ್ನೆ ಮಾಡಿ ಅರಿಸ್ಟಾಟಲನು ನೀತಿಯ ಅವಶ್ಯಕತೆ ಮನುಷ್ಯನಿಗೆ ಎಷ್ಟೆಂಬುದನ್ನು ವ್ಯಕ್ತಪಡಿಸಿದ್ದಾನೆ. ಯಾವ ಕಾಯಕವೇ ಆಗಲಿ, ಯಾವ ಕೆಲಸವೇ ಆಗಲಿ, ಯಾವ ಧರ್ಮವೇ ಆಗಲಿ, ಯಾವ ಕರ್ಮವೇ ಆಗಲಿ, ಯಾವ ದೇಶವೇ ಆಗಲಿ, ಯಾವ ಕೋಶವೇ ಆಗಲಿ, ನೀತಿಯನ್ನು ಬಿಟ್ಟು ಮನುಷ್ಯನು ಸುಖ-ಶಾಂತಿಗಳನ್ನು ಪಡೆಯಲಿಕ್ಕೆ ಸಾಧ್ಯವಿಲ್ಲ. ಮನುಷ್ಯನ ಮನುಷ್ಯತ್ವವು ಎಲ್ಲಿಯೂ ಒಂದೇ ಆಗಿರುತ್ತದೆ. ದೇಶಾನುಗುಣ್ಯವಾಗಿಯೂ ಕಾಲಾನುಗುಣ್ಯವಾಗಿಯೂ ವೇಷ-ಭಾಷೆಗಳು ಬಗೆಬಗೆಯಾಗಿ ಕಂಡರೂ ಮನುಷ್ಯನ ಅಂತರಂಗಿಕ ಭಾವನೆಗಳು ಎಲ್ಲ ಒಂದೇ ಆಗಿವೆ. "ಹೊಲೆಗಂಡಲ್ಲದೆ ಪಿಂಡದ ನೆಲೆಗಾಶ್ರಯವಿಲ್ಲ. ಜಲಬಿಂದುವಿನ ವ್ಯವಹಾರ ಒಂದೇ. ಆಸೆಯಾಮಿಷ ಹರುಷ ವಿಷಯಾದಿಗಳೆಲ್ಲ ಒಂದೇ"ಎಂದು ಶಿವಶರಣರು ಮಾನವನ ಮಾನವೀಯತೆಯು ಎಲ್ಲ ಕಾಲಗಳಲ್ಲೂ ಎಲ್ಲದೇಶಗಳಲ್ಲೂ ಒಂದೇ ಆಗಿದೆ ಎಂದು ಹೇಳಿದ್ದಾರೆ. ಪ್ರತಿಯೊಬ್ಬ ಮಾನವನಲ್ಲೂ ಅಂತರ್ಜನಿತವಾಗಿರುವ ಈ ಆಸೆ, ಆಮಿಷ, ಹರುಷ, ವಿಷಯ ಮೊದಲಾದ ಗುಣಗಳಿಂದ ಕೂಡಿದ ಮಾನವನ ಯಾವತ್ತು ನಡವಳಿಕೆಗಳನ್ನು ನಿರ್ಧರಿಸಿ, ಇದು ನೀತಿ, ಇದು ಅನೀತಿ, ಇದು ಸರಿ, ಇದು ಸರಿಯಲ್ಲ, ಇದು ಒಳ್ಳೆ



CC-0. Jangamwadi Math Collection, Varanasi. An eGangotri Initiative

ಯದು, ಇದು ಕೆಟ್ಟದ್ದು ಎಂದು ನಿರ್ಧರಿಸುವುದೇ ನೀತಿಶಾಸ್ತ್ರದ ಗುರಿ. ಮನುಷ್ಯನು ಹುಟ್ಟಿದಂದಿನಿಂದ ಇಂದಿನವರೆಗೆ ಹಲವು ನೀತಿಜ್ಞರು ಹಲವು ರೀತಿಗಳಲ್ಲಿ ಮನುಷ್ಯನ ನೀತಿಯ ನೆಲೆಗಟ್ಟನ್ನು ನಿರ್ಧರಿಸಲಿಕ್ಕೆ ಪ್ರಯತ್ನಪಟ್ಟಿದ್ದಾರೆ. ಇದರಲ್ಲಿ ಪ್ಲೇಟೋ ( Plato ), ಎಪಿಕ್ಯೂರಸ್ ( Epicurus ), ಅರಿಸ್ಟಾಟಲ್ ( Aristotle ), ಬೆನ್‌ಥ್ಯಾಮ್ ( Bentham ), ಕಾಮ್ಟೆ (Comte), ಹೀಗಲ್ ( Hegel ), ಹಕ್ಸ್ಲಿ ( Huxley ) ಮುಂತಾದವರು ಮುಖ್ಯರು. ಹಲವು ಮತಗಳ ಮತಾಚಾರ್ಯರೂ ಮನುಷ್ಯನ ನೀತಿಯ ನೆಲೆಗಟ್ಟನ್ನು ನಿರ್ಧರಿಸಲಿಕ್ಕೆ ಪ್ರಯತ್ನಪಟ್ಟಿದ್ದಾರೆ. ಇವರಲ್ಲಿ ವೇದಮತದ ಋಷಿಗಳು, ಬೌದ್ಧಮತದ ಗೌತಮ, ಜೈನಮತದ ಮಹಾವೀರ, ಕ್ರೈಸ್ತಮತದ ಏಸೂಕ್ರಿಸ್ತ, ಮುಸಲ್ಮಾನಮತದ ಪೈಗಂಬರ, ಅದ್ವೈತಮತದ ಶಂಕರಾಚಾರ್ಯ, ವಿಶಿಷ್ಟಾದ್ವೈತಮತದ ರಾಮಾನುಜಾಚಾರ್ಯ, ದ್ವೈತಮತದ ಮಾಧ್ವಾಚಾರ್ಯ, ಶಕ್ತಿವಿಶಿಷ್ಟಾದ್ವೈತ ಅಥವಾ ವೀರಶೈವಮತದ ಬಸವಾದಿ ಪ್ರಮಥರು, ಹೀಗೆ ಅನೇಕ ಮತಾಚಾರ್ಯರು ಮಾನವನ ನೀತಿನಿರ್ದೇಶಕ್ಕಾಗಿ ಕೆಲಸ ಮಾಡಿದ್ದಾರೆ. ನೀತಿನಿರ್ಧಾರದಲ್ಲಿ ಇವರು ಎಷ್ಟರಮಟ್ಟಿಗೆ ಜಯಶೀಲರಾಗಿದ್ದಾರೆ ಎಂದು ಹೇಳುವುದು ಸಾಹಸದ ಕೆಲಸವಾದರೂ, ಇವರೆಲ್ಲರೂ ಮಾನವನ ಕಷ್ಟವನ್ನು ನೋಡಿ ಮರುಕಗೊಂಡು ಅವನಿಗೆ ಸುಖವುಂಟಾಗಲೆಂದು ಹೀಗಿರಬೇಕು, ಹಾಗಿರಬೇಕು ಎಂದು ಒಂದೊಂದು ರೀತಿಯಲ್ಲಿ ನೀತಿಯ ನೆಲೆಗಟ್ಟನ್ನು ನಿರ್ಧರಿಸಲಿಕ್ಕೆ ಪ್ರಯತ್ನಪಟ್ಟಿದ್ದಾರೆ ಎಂಬುದರಲ್ಲಿ ಯಾವ ಸಂದೇಹವೂ ಇಲ್ಲ.

ಪ್ರಕೃತ ಈ ಲೇಖನದಲ್ಲ ಶಕ್ತಿವಿಶಿಷ್ಟಾದ್ವೈತ ಅಥವಾ ವೀರಶೈವ ಮತದ ಆಚಾರ್ಯ ಪುರುಷರು ಮಾನವನ ನೀತಿನಿರ್ಧಾರದಲ್ಲಿ ಎಷ್ಟು ಹೆಜ್ಜೆಗಳನ್ನಿಟ್ಟಿದ್ದಾರೆ ಎಂದು ವಿವೇಚಿಸುವದೇ ಈ ಲೇಖನಕರ್ತೃವಿನ ಪ್ರಯತ್ನವಾಗಿದೆ.

ವೀರಶೈವರ ನೀತಿಯ ನೆಲೆಗಟ್ಟು ಷಟ್‌ಸ್ಥಲದ ಮೇಲೆ ನಿಂತಿದೆ ಎಂಬುದು ನಿರ್ವಿವಾದ ವಿಷಯ. ಭಕ್ತ, ಮಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಎಂಬುವೇ ಷಟ್‌ಸ್ಥಲಗಳು. ಈ ಆರು ಸ್ಥಲಗಳಿಗೆ ಅಂಗವಾಗಿ ಅಷ್ಟಾವರಣವೆಂಬ ಎಂಟು ಉಪಕರಣಗಳೂ, ಪಂಚಾಚಾರವೆಂಬ ಐದು ಆಚಾರಗಳೂ ಇವೆ. ಗುರು, ಲಿಂಗ, ಜಂಗಮ, ವಿಭೂತಿ, ರುದ್ರಾಕ್ಷಿ, ಪಾದೋದಕ, ಪ್ರಸಾದ, ಮಂತ್ರ ಇವುಗಳೇ ಅಷ್ಟಾವರಣಗಳು. ಸದಾಚಾರ, ಗಣಾಚಾರ, ನಿಯತಾಚಾರ, ಶಿವಾಚಾರ, ಲಿಂಗಾಚಾರ ಇವುಗಳೇ ಪಂಚಾಚಾರಗಳು. ಹೀಗೆ ಷಟ್‌ಸ್ಥಲ, ಅಷ್ಟಾವರಣ, ಪಂಚಾಚಾರ ಇವುಗಳ ಆಧಾರದ ಮೇಲೆ ಶಿವಶರಣರು ನೀತಿ ಸಾಮ್ರಾಜ್ಯವನ್ನು ಹೇಗೆ ಕಟ್ಟಿದ್ದಾರೆ ಎಂಬುದನ್ನು ನೋಡೋಣ.

ಮೊದಲೇ ಹೇಳಿದಂತೆ ನೈತಿಕ ಜೀವನಕ್ಕೆ ಮೊಟ್ಟಮೊದಲು ಅವಶ್ಯವಾಗಿ ಬೇಕಾದದ್ದು ತಪ್ಪು, ನೆಪ್ಪುಗಳ ವಿವೇಚನಾಶಕ್ತಿ. ಇದು ಸರಿ, ಇದು ಸರಿಯಲ್ಲ; ಇದು ಒಳ್ಳೆಯದು, ಇದು ಕೆಟ್ಟದ್ದು, ಎಂದು ತಿಳಿದುಕೊಳ್ಳುವ ಅರಿವು ನೈತಿಕ ಜೀವನಕ್ಕೆ ಬೀಜಮಂತ್ರ. ನೈತಿಕ ಜೀವನದಲ್ಲಿ ಅಡಿಯಿಟ್ಟು ಸುಖಶಾಂತಿಗಳನ್ನು ಪಡೆಯಬೇಕೆಂದು ಆಶಿಸುವ ಪ್ರತಿಯೊಬ್ಬ ಮನುಷ್ಯನೂ ಈ ಅರಿವು ಅಥವಾ ವಿವೇಚನಾಶಕ್ತಿಯನ್ನು ಸಂಪಾದಿಸಬೇಕು. ಈ ವಿವೇಚನಾಶಕ್ತಿ ಸಂಪಾದನೆಗೆ ಮನುಷ್ಯನು ಷಟ್‌ಸ್ಥಲ, ಅಷ್ಟಾವರಣ, ಪಂಚಾಚಾರರೀತ್ಯಾ ಹಲವು ಕಟ್ಟಳೆಗಳನ್ನು ಅನುಸರಿಸಬೇಕು. ಅವುಗಳ ವರ್ಣನೆ ಮುಂದೆ ವಿವರಿಸುವಂತೆ ಇದೆ.



CC-0. Jangamwadi Math Collection, Varanasi. An eGangotri Initiative

ನೈತಿಕ ಜೀವನಾಪೇಕ್ಷಿಯು ಮೊಟ್ಟಮೊದಲು ತ್ರಿವಿಧವಾದ ಸಂಪಾದನೆಗಳನ್ನು ಮಾಡಬೇಕು. ಆ ತ್ರಿವಿಧ ಸಂಪಾದನೆಗಳಾವುವೆಂದರೆ ತನು, ಮನ, ಧನ ಇವುಗಳ ಸಂಪಾದನೆ. ಶರೀರ, ಮನಸ್ಸು ಮತ್ತು ಹಣ ಇವುಗಳ ಸಂಪಾದನೆಯನ್ನು ಸಾತ್ವಿಕರೀತಿಯಲ್ಲಿ ಮಾಡಬೇಕು. ಶುದ್ಧವಾದ ತನು, ಶುದ್ಧವಾದ ಮನ ಮತ್ತು ಶುದ್ಧವಾದ ಕಾಯಕದಿಂದ ಆರ್ಜಿಸಿದ ಧನ ಇವು ನೈತಿಕ ಜೀವನಕ್ಕೆ ಮೊದಲನೆಯ ಹೆಜ್ಜೆಗಳಾಗಿವೆ.

### ತನು

ಮನಸ್ಸು ಶುದ್ಧವಾಗಿರಬೇಕಾದರೂ, ಕಾಯಕಮಾಡಿ ಧನವನ್ನು ಸಂಪಾದಿಸಬೇಕಾದರೂ ತನು (ಶರೀರವು) ಪುಷ್ಟಿಯುಳ್ಳದ್ದಾಗಿಯೂ ಆರೋಗ್ಯವುಳ್ಳದ್ದಾಗಿಯೂ ಇರಬೇಕು. ಶರೀರವು ಆತ್ಮದಷ್ಟೇ ಪೂಜನೀಯವೂ ಮುಖ್ಯವೂ ಆಗಿದೆ. ದೇಹವನ್ನು ದೇಗುಲವೆಂದು ಶರಣರು ಪರಿಗಣಿಸಿದ್ದಾರೆ. ಆದ್ದರಿಂದ ದೇಹವನ್ನು ಬಹು ಎಚ್ಚರಿಕೆಯಿಂದ ಕಾಪಾಡಿಕೊಂಡು ಬರಬೇಕು. ಕುಡಿತ, ವ್ಯಭಿಚಾರ, ಅತ್ಯಾಚಾರ, ಅನಾಚಾರಗಳಿಂದ ದೇಹವನ್ನು ಕೆಡಿಸಿಕೊಳ್ಳಬಾರದು. ವ್ಯಾಯಾಮ, ಸಾತ್ವಿಕ ಆಹಾರ, ಸಾತ್ವಿಕ ವ್ಯವಹಾರ, ಸ್ನಾನ, ಲಿಂಗಾರ್ಚನ, ವಿಭೂತಿಲೇಪನ, ರುದ್ರಾಕ್ಷಧಾರಣ, ಪ್ರಾಣಾಯಾಮ ಇವುಗಳಿಂದ ದೇಹವನ್ನು ಶುದ್ಧವಾದದ್ದನ್ನಾಗಿಯೂ ಆರೋಗ್ಯವುಳ್ಳದ್ದನ್ನಾಗಿಯೂ ಮಾಡಿಕೊಳ್ಳಬೇಕು. ನಶ್ವರವಾದ ಸ್ಥಾವರ ಗುಡಿಗಿಂತಲೂ ಅಮರವಾದ ಜಂಗಮ ಗುಡಿಯೇ ಲೇಸೆಂದು ಪಂಚಭೌತಿಕ ದೇಹದ ಮಹತ್ವವನ್ನು ಶರಣರು ಈ ರೀತಿಯಲ್ಲಿ ವರ್ಣಿಸಿದ್ದಾರೆ:—
"ದೇಹವೆಂಬ ದೇಗುಲದೊಳಗೆ ಭಾವಸಿಂಹಾಸನವನ್ನು ಮಾಡಿ ಜೀವದೊಡೆಯನ ಪೂಜಿಸಬಲ್ಲ ದೇವರಿಗೆ ದೇವನೆಂಬೆನಯ್ಯಾ ಅಖಂಡೇಶ್ವರಾ" ಮತ್ತೂ "ಉಳ್ಳವರು ಶಿವಾಲಯವ ಮಾಡಿಸಿಯಾರು. ನಾನೇನ ಮಾಡುವೆನಯ್ಯ? ಬಡವನಯ್ಯ! ಎನ್ನ ಕಾಲೇ ಕಂಭ, ದೇಹವೇ ದೇಗುಲ, ಶಿರವೇ ಹೊನ್ನ ಕಳಸವಯ್ಯ ನೋಡಯ್ಯ, ಕೂಡಲ ಸಂಗಮದೇವಯ್ಯ. ಕೇಳಯ್ಯ, ಸ್ಥಾವರಕ್ಕಳಿವುಂಟು ಜಂಗಮಕ್ಕಳಿವಿಲ್ಲ." ಮತ್ತೂ "ಎನ್ನ ಪಾದವೇ ಪಾದಶಿಲೆಯಾಗಿ, ಎನ್ನ ಕಾಲೇ ಕಡಹದ ಕಂಭಗಳಾಗಿ, ಎನ್ನ ತೋಳೇ ನಾಗವೇದಿಯಾಗಿ, ಎನ್ನ ಅಸ್ಥಿಯೇ ಸುತ್ತಳ ಜಂತೆಯಾಗಿ, ಎನ್ನ ಅಧರವೇ ಒಳ್ಳಿಹ ಬಾಗಿಲಾಗಿ, ಎನ್ನ ಗುರುಕರಣವೇ ಲಿಂಗವಾಗಿ, ಎನ್ನಂಗವೇ ರಂಗಮಧ್ಯವಾಗಿ, ಎನ್ನ ಹೃದಯಕಮಲವೇ ಪೂಜೆಯಾಗಿ, ಎನ್ನ ಕಿವಿಗಳೇ ಕೀರ್ತಿಮುಖವಾಗಿ, ಎನ್ನ ನೆನೆವ ನಾಲಿಗೆಯೇ ಗಂಟೆಯಾಗಿ, ಎನ್ನ ಶಿರವೇ ಸುವರ್ಣಕಳಸವಾಗಿ, ಎನ್ನ ನಯನವೇ ಕುಂದದ ಜ್ಯೋತಿಯಾಗಿ, ಎನ್ನ ಚರ್ಮವೇ ನಿರ್ಮಲ ಹೊದಿಕೆಯಾಗಿ, ಎನ್ನ ನೆನಹೇ ನಿನಗೆ ಉಪಹಾರವಾಗಿ, ಗುರುಪುರದ ಮಲ್ಲಯ್ಯನಿಂದನಾಗಿ" ಈ ರೀತಿ ಶರಣರು ದೇಹದ ಶ್ರೇಷ್ಠತೆಯನ್ನು ಹೇಳಿ ಶುದ್ಧವಾದ ದೇಹವನ್ನು ಸಂಪಾದನೆ ಮಾಡುವುದು ನೈತಿಕ ಜೀವನಕ್ಕೆ ಮುಖ್ಯವೆಂದು ಹೇಳಿದ್ದಾರೆ.

### ಮನ

ತನುವಿನಂತೆಯೇ ಮನಸ್ಸು ಶುದ್ಧವಾಗಿರಬೇಕು. ಸುರೆ, ಭಂಗಿ ಮೊದಲಾದ ಮಾದಕ ದ್ರವ್ಯಗಳನ್ನು ಸೇವಿಸುವುದರಿಂದ ಮನಸ್ಸು ಕೆಡುವುದು. ಆದ್ದರಿಂದ ಅದನ್ನು ತ್ಯಜಿಸಬೇಕು. ಅಲ್ಲದೆ ಮನಸ್ಸು ಸ್ವಾಭಾವಿಕವಾಗಿ ಬಹಳ ಚಂಚಲವಾದದ್ದು. ಮರವನ್ನು ಏರಿದ ಕೋತಿಯಂತೆ ಒಂದು ಕಡೆಯಿಂದ ಮತ್ತೊಂದು ಕಡೆಗೆ ಹಾರುವುದು. ಚಂಚಲವಾದ ಈ ಮನಸ್ಸನ್ನು ಬಿಗಿ ಹಿಡಿದು



CC-0. Jangamwadi Math Collection, Varanasi. An eGangotri Initiative

ಅದನ್ನು ಪರಿಶುದ್ಧವಾದದ್ದನ್ನಾಗಿ ಮಾಡಿಕೊಳ್ಳಬೇಕು. ಈ ಬಗ್ಗೆ ಶರಣರು ಪ್ರಬೋಧಕ ವಚನಗಳನ್ನು ಹಾಡಿದ್ದಾರೆ: "ಕೊಂಬೆಯ ಮೇಲಣ ಮರ್ಕಟನಂತೆ ಲಂಘಿಸುವುದೆನ್ನ ಮನವು, ನಿಂದಲ್ಲಿ ನಿಲ್ಲಲೀಯದೆನ್ನ ಮನವು, ಹೊಂದಿದಲ್ಲಿ ಹೊಂದಲೀಯದೆನ್ನ ಮನವು, ಕೂಡಲ ಸಂಗಮದೇವಾ, ನಿಮ್ಮ ಚರಣ ಕಮಲದಲ್ಲಿ ಭ್ರಮರನಾಗಿರಿಸು ನಿಮ್ಮ ಧರ್ಮ." ಮತ್ತೂ "ಅಂದಣವನೇರಿದ ಸೊಣಗನಂತೆ ಕಂಡಡೆ ಬಿಡದು ಮುನ್ನಿನ ಸ್ವಭಾವವನು, ಸುಡುಸುಡು ಮನವಿದು ವಿಷಯಕ್ಕೆ ಹರಿವುದು. ಮೃಡ, ನಿಮ್ಮನನುದಿನ ನೆನೆಯಲೀಯದು ಎನ್ನೊಡೆಯ ಕೂಡಲ ಸಂಗಮದೇವಾ ನಿಮ್ಮ ಚರಣವನೆ ನೆನೆವಂತೆ ಕರುಣಿಸು ಸೆರಗೊಡ್ಡಿ ಬೇಡುವೆ ನಿಮ್ಮ ಧರ್ಮ." ಮತ್ತೂ "ತುಪ್ಪದ ಸವಿಗೆ ಅಲಗನೆಕ್ಕುವ ಸೊಣಗನಂತೆ ಎನ್ನ ಬಾಳುವೆ; ಸಂಸಾರ ಸಂಗವ ಬಿಡದು ನೋಡೆನ್ನ ಮನವು. ಈ ನಾಯಿತನವ ಮಾಣಿಸು ಕೂಡಲ ಸಂಗಮದೇವಾ ನಿಮ್ಮ ಧರ್ಮ." ಈ ರೀತಿ ಚಂಚಲವಾದ ಮನಸ್ಸನ್ನು ಹತೋಟಿಯಲ್ಲಿಡತಕ್ಕದ್ದು ನೈತಿಕ ಜೀವನದಲ್ಲಿ ಬಹು ಅವಶ್ಯಕವೆಂದು ಶರಣರು ಹೇಳಿದ್ದಾರೆ.

## ಧನ

ಧನವನ್ನು ಕಾಯಕದಿಂದ ಸಂಪಾದನೆ ಮಾಡಬೇಕು. ನೈತಿಕ ಜೀವನಕ್ಕೆ ದೇಹ ಮತ್ತು ಮನಸ್ಸು ಇವು ಎಷ್ಟು ಮುಖ್ಯವೋ ಸತ್ಯಕಾಯಕದಿಂದ ಧನವನ್ನು ಸಂಪಾದಿಸುವುದು ಅಷ್ಟೇ ಮುಖ್ಯವಾಗಿದೆ. ಯಾವ ಉದ್ಯೋಗವನ್ನೂ ಮಾಡದೆ ಸೋಮಾರಿತನದಿಂದ ಜೀವಿಸುವುದನ್ನು ಶರಣರು ಒಪ್ಪುವುದಿಲ್ಲ. "Idleness is the devil's work-shop" ಅಂದರೆ "ಸೋಮಾರಿತನವು ಪಿಶಾಚಿಯ ಕಾರಖಾನೆ" ಎಂಬ ಆಂಗ್ಲ ಅನುಭವೋಕ್ತಿಯಂತೆ ಸೋಮಾರಿತನವು ಮನುಷ್ಯನಿಗೆ ಬೇರೆ ಬೇರೆ ಕೆಟ್ಟ ಬಯಕೆಗಳನ್ನು ಹುಟ್ಟಿಸುತ್ತದೆ. ಉದ್ಯೋಗ ಅಥವಾ ಕಾಯಕವನ್ನು ಮಾಡದವನ ಮನಸ್ಸು ಕೆಟ್ಟ ವಿಷಯಗಳ ಕಡೆಗೆ ಹರಿಯುತ್ತದೆ. ಕಳವು, ಹಾದರ, ಜೂಜು, ಸುರಾಪಾನ ಇವುಗಳ ಕಡೆಗೆ ಮನಸ್ಸು ಬಾಗುತ್ತದೆ. ಆದ್ದರಿಂದ ಪ್ರತಿಯೊಬ್ಬನೂ ಯಾವುದಾದರೂ ಒಂದು ಸಾತ್ವಿಕ ಕಾಯಕವನ್ನು ಮಾಡಿ ಧನ ಸಂಪಾದನೆಯನ್ನು ಮಾಡಬೇಕೆಂದು ಶರಣರು ಹೇಳಿದ್ದಾರೆ. "ಗುರುವಾದಡೂ ಕಾಯಕದಿಂದವೇ ಜೀವನ್ಮುಕ್ತಿ, ಲಿಂಗವಾದಡೂ ಕಾಯಕದಿಂದವೇ ಶಿಲೆಯ ಕುಲ ಹರಿವುದು. ಜಂಗಮವಾದಡೂ ಕಾಯಕದಿಂದವೇ ವೇಷದ ಪಾಶಹರಿವುದು. ಇದು ಚೆನ್ನಬಸವಣ್ಣ ಪ್ರಿಯ ಚಂಡೇಶ್ವರ ಲಿಂಗದ ಅರಿವು" ಮತ್ತೂ "ಕಾರೆಯ ಸೊಪ್ಪಾದರೂ ಕಾಯಕದಿಂದ ಬಂದುದು, ಲಿಂಗಕ್ಕರ್ಪಿತವಲ್ಲದೆ ದುರಾಸೆಯಿಂದ ಬಂದುದು ಅನರ್ಪಿತ" ಮತ್ತೂ "ಸತ್ಯಶುದ್ಧಾ ಕಾಯಕದಲ್ಲಿ ಚಿತ್ತವಿಚ್ಛಂದವಾಗದಿರಬೇಕು. ನೇಮದ ಕೂಲಿ ಅಂದಿನ ನಿತ್ಯಕಾಯಕದಲ್ಲಿ ಸಂದಿರಬೇಕು." ಮತ್ತೂ "ಮನಶುದ್ಧವಿಲ್ಲದವಂಗೆ ದ್ರವ್ಯದ ಬಡತನವಲ್ಲದೆ, ಚಿತ್ತಶುದ್ಧನಾಗಿ ಕಾಯಕವ ಮಾಡುವಲ್ಲಿ ಸದ್ಭಕ್ತಂಗೆ ಎತ್ತನೋಡಿದಡತ್ತ ಲಕ್ಷ್ಮಿತಾನಾಗಿಪ್ಪಳು, ಮಾರಯ್ಯಾ ಪ್ರಿಯ ಅಮಳೇಶ್ವರ ಲಿಂಗದ ಸೇವೆಯುಳ್ಳನ್ನಕ್ಕರ." ಆದ್ದರಿಂದ ಸತ್ಯಶುದ್ಧ ಕಾಯಕದಿಂದ ದ್ರವ್ಯಾರ್ಜನೆ ಮಾಡಬೇಕು.

ಈ ರೀತಿಯಲ್ಲಿ ಸಾಧಕನು ತನುಮನಧನಗಳನ್ನು ಸಂಪಾದನೆ ಮಾಡಿದಮೇಲೆ ಅಷ್ಟಕ್ಕೆ ಸುಮ್ಮನಾದರೆ ಅವನ ನೈತಿಕ ಜೀವನವು ಪರಿಪೂರ್ಣವಾಗುವುದಿಲ್ಲ. ಯಾಕಂದರೆ ಅವನಿಗೆ ಇದು ಒಳ್ಳೆಯದು, ಇದು ಕೆಟ್ಟದ್ದು ಎಂಬ ವಿವೇಚನಾಶಕ್ತಿಯು ಇನ್ನೂ ಬಂದಿರುವುದಿಲ್ಲ. ನೈತಿಕ ಜೀವನವು



CC-0. Jangamwadi Math Collection, Varanasi. An eGangotri Initiative

ವಿಕಾಸವಾಗಿ ವಿವೇಚನಾಶಕ್ತಿಯು ಬರಬೇಕಾದರೆ ಸಾಧಕನು ಮುಂದೆ ಇನ್ನೂ ಹಲವು ಹೆಜ್ಜೆಗಳನ್ನು ಇಡಬೇಕಾಗುತ್ತದೆ. ಆ ಹೆಜ್ಜೆಗಳು ಆರು ತೆರನಾಗಿವೆ. ಭಕ್ತ, ಮಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಎಂಬಿವೇ ಆರು ಹೆಜ್ಜೆಗಳು. ಸಾಧಕನು ಈ ಆರು ಹೆಜ್ಜೆಗಳಲ್ಲಿ ಅಡಿಯಿಟ್ಟು ತಾನು ಸಂಪಾದನೆ ಮಾಡಿದ ತನುಮನಧನ ಇವುಗಳನ್ನು ಕ್ರಮವಾಗಿ ಗುರುಲಿಂಗ ಜಂಗಮ ಇವುಗಳಿಗೆ ಅರ್ಪಿಸಬೇಕು. ಗುರುಲಿಂಗಜಂಗಮ ಎಂದರೆ ಯಾವುವು? ಅವಕ್ಕೆ ತನುಮನ ಧನಗಳನ್ನು ಏಕೆ ಅರ್ಪಿಸಬೇಕು ? ಈ ಅರ್ಪಣೆಗಳಿಂದ ಮನುಷ್ಯನ ನೈತಿಕ ಜೀವನಕ್ಕೆ ಆಗುವ ಲಾಭವೇನು– ಎಂಬ ಬಗ್ಗೆ ಶರಣರು ತಮ್ಮ ಅನಂತ ವಚನಗಳಲ್ಲಿ ವಿವೇಚನೆ ನಡೆಸಿದ್ದಾರೆ.

## ಗುರು

ಸಾಧಕನು ತನುವನ್ನು ಗುರುವಿಗೆ ಅರ್ಪಿಸಬೇಕು. ಲೋಕದಲ್ಲಿ ಗುರು ಎಂಬುದು ಬಹಳ ಶ್ರೇಷ್ಠವಾದದ್ದು. ಗುರುವು ಸಕಲಜ್ಞಾನಪ್ರಸಾರಣೆಗೂ ಮೂಲವಾಗಿದ್ದಾನೆ. ಸೂಕ್ಷ್ಮವಾಗಿ ನೋಡಿದರೆ ಎಲ್ಲ ಪ್ರಾಣಿಗಳಿಗೂ ಗುರುವಿನ ಅವಶ್ಯಕತೆ ಇದ್ದೇ ಇರುತ್ತದೆ. ಯಾವ ಜೀವಿಯೇ ಆಗಲಿ ಪ್ರಪಂಚದಲ್ಲಿ ಉದ್ಭವವಾದ ಕೂಡಲೇ ತಾಯಿಯು ಗುರುವಾಗಿ ಪರಿಣಮಿಸಿ ಮಗುವಿಗೆ ವ್ಯವಹಾರ ಬೋಧೆ ಮಾಡುತ್ತಾಳೆ. ಸ್ವಲ್ಪ ಬೆಳೆದು ವ್ಯವಹಾರಜ್ಞಾನ ಬಂದಮೇಲೆ ತಂದೆಯು ಗುರುವಾಗುತ್ತಾನೆ. ಮಾನವಪ್ರಾಣಿಗಳಲ್ಲೂ ಹೀಗೆ ತಂದೆತಾಯಿಗಳು ಗುರುಗಳಾಗುತ್ತಾರೆ. ಮಾನವನು ಇತರ ಪ್ರಾಣಿಗಳಿಗಿಂತ ಹೆಚ್ಚು ಬುದ್ಧಿಶಾಲಿಯಾದ್ದರಿಂದಲೂ ಕಲಿಯಬೇಕಾದ ಪಾಠಗಳು ಬಹಳವಿರುವದರಿಂದಲೂ ಗುರು ಪರಂಪರೆ ಬೆಳೆಯುತ್ತ ಹೋಗುತ್ತದೆ. ಸ್ವಲ್ಪ ಬುದ್ಧಿ ಬಂದು ಪಾಠಶಾಲೆಗೆ ಹೋದಾಗ ಅಲ್ಲಿ ಉಪಾಧ್ಯಾಯನು ಮಗುವಿಗೆ ಗುರುವಾಗುತ್ತಾನೆ. ಲೌಕಿಕ ಅಥವಾ ವ್ಯವಹಾರಿಕ ಅಭಿವೃದ್ಧಿಗೆ ಹೇಗೋ ಹಾಗೆ ಧಾರ್ಮಿಕ ಅಥವಾ ನೈತಿಕ ಅಭಿವೃದ್ಧಿಗೂ ಗುರುವು ಬೇಕು. ಹೀಗೆ ಒಬ್ಬೊಬ್ಬರು ಒಂದೊಂದು ರೀತಿಯಲ್ಲಿ ಗುರುವಾಗುತ್ತಾರೆ. ಕಡೆಗೆ ಸ್ವಾನುಭಾವವೇ ಗುರುವಾಗುತ್ತದೆ. ಆದ್ದರಿಂದ ಗುರುಸ್ಥಾನವು ಶ್ರೇಷ್ಠವಾದದ್ದು. "ಮಡಕೆಯ ಮಾಡುವರೆ ಮಣ್ಣೇ ಮೊದಲು, ತೊಡಿಗೆಯ ಮಾಡುವರೆ ಹೊನ್ನೇ ಮೊದಲು, ಶಿವಪಥವನರಿಪಡೆ ಗುರುಪಥವೇ ಮೊದಲು" ಇಂಥ ಗುರುವಿನ ವಿಚಾರದಲ್ಲಿ ಸಾಧಕನು ಭಕ್ತಿಯನ್ನು ತೋರಿಸಬೇಕು. ತನ್ನ ಶರೀರವನ್ನು ದಂಡಿಸಿ ಗುರುವಿನ ಸೇವೆಯನ್ನು ಮಾಡಬೇಕು. ಇದೀಗ ತನುವನ್ನು ಗುರುವಿಗೆ ಅರ್ಪಿಸಬೇಕೆಂಬುದಕ್ಕರ್ಥ.

## ಲಿಂಗ

ಸಾಧಕನು ಮನವನ್ನು ಲಿಂಗಕ್ಕೆ ಅರ್ಪಿಸಬೇಕು. ಲಿಂಗವೆಂದರೆ ಪರಬ್ರಹ್ಮವೆಂದರ್ಥ. ಲೀ=ಯಾವ ವಸ್ತುವಿನಲ್ಲಿ ಸಕಲ ಚರಾಚರಾತ್ಮಕವಾದ ಜಗತ್ತು ಲೀನವಾಗುತ್ತದೋ ಗ=ಯಾವ ವಸ್ತುವಿನಲ್ಲಿ ಸಕಲ ಚರಾಚರಾತ್ಮಕವಾದ ಜಗತ್ತು ಗತವಾಗುತ್ತದೋ ಅಂತಹ ಪರಬ್ರಹ್ಮವೇ ಲಿಂಗವು. ಈ ಪರಬ್ರಹ್ಮವು ಜಗತ್ಕಾರಣವಾದದ್ದೂ ಅವಯವರಹಿತವಾದದ್ದೂ ಅಗಮ್ಯವಾದದ್ದೂ ಅಪ್ರಮೇಯವಾದದ್ದೂ, ವಾಙ್ಮನಕ್ಕಗೋಚರವಾದದ್ದೂ ಆಗಿದೆ. ಇಂತಹ ನಿರಾಕಾರವಾದ ನಿರಂಜನವಾದ ಪರಬ್ರಹ್ಮವನ್ನು ಇದ್ದಕ್ಕಿದ್ದ ಹಾಗೆಯೇ ನೋಡಲಿಕ್ಕೆ ಸಾಧ್ಯವಿಲ್ಲ. ನಿರಾಕಾರವಾದ ಆ ಪರವಸ್ತುವನ್ನು ಸಾಕಾರ ರೂಪಿನಲ್ಲಿ ನೋಡಬೇಕಾಗಿದೆ. ಆ ಸಾಕಾರ ರೂಪವೇ ಲಿಂಗವು. ತನ್ನ ಮುಖವನ್ನು ನೋಡಿಕೊಳ್ಳಲಿಕ್ಕೆ ಹೇಗೆ ಕನ್ನಡಿಯು ಅವಶ್ಯಕವೋ ಹಾಗೆ ತನ್ನೊಳಗಿರುವ



CC-0. Jangamwadi Math Collection, Varanasi. An eGangotri Initiative

ಪರವಸ್ತುವಿನ ಒಂದು ಅಂಶವೇ ಆದ ಅಂತರಾತ್ಮನನ್ನು ನೋಡಲಿಕ್ಕೆ ಲಿಂಗವು ಆವಶ್ಯಕವಾಗಿದೆ. ಬ್ರಹ್ಮಾಂಡದಲ್ಲಿ ತಾನು ಯಾರು ಎಂಬುದನ್ನು ತಿಳಿದುಕೊಳ್ಳಲಿಕ್ಕೆ ಲಿಂಗವು ಸಾಧನವಾಗಿದೆ. ಲಿಂಗ ಮುಖದಿಂದ ಸಾಧಕನು ತಾನು ಜಗತ್ಕಾರಣನಾದ ಪರವಸ್ತುವಿನ ಒಂದು ಅಂಶವೇ ಆಗಿದ್ದೇನೆ ಎಂದು ತಿಳಿಯುತ್ತಾನೆ. ಈ ಅರಿವು ನೈತಿಕ ಜೀವನಕ್ಕೆ ಬಹಳ ಸಹಕಾರಿಯಾಗಿದೆ. ಇದೀಗ ಮನಸ್ಸನ್ನು ಲಿಂಗರ್ಪಿಸಬೇಕೆಂಬುದಕ್ಕರ್ಥ.

## ಜಂಗಮ

ಸಾಧಕನು ಧನವನ್ನು ಜಂಗಮಕ್ಕೆ ಅರ್ಪಿಸಬೇಕು. ಎಲ್ಲ ಜೀವಿಗಳಲ್ಲೂ ಆತ್ಮನಿದ್ದಾನೆ; ಅದರಲ್ಲೂ ಮಾನವನಲ್ಲಿ ಆತ್ಮನು ಹೆಚ್ಚು ಪ್ರಕಾಶವುಳ್ಳವನಾಗಿದ್ದಾನೆ. ಅದರಲ್ಲೂ ಲಿಂಗದೇಹಿ ಯಾದ ವೀರಶೈವನಲ್ಲಿ ಆತ್ಮನು ಇನ್ನೂ ಹೆಚ್ಚು ಪ್ರಕಾಶವುಳ್ಳವನಾಗಿದ್ದಾನೆ. ಹೀಗೆಂದು ಶರಣರು ಲಿಂಗದೇಹಿಯನ್ನು "ಜಂಗಮ" ಎಂದು ಕೆಲವು ಸಂದರ್ಭಗಳಲ್ಲಿ ಕರೆದಿರುವರಾದರೂ ವಿಶಾಲ ವಾದ ನೈತಿಕ ದೃಷ್ಟಿಯಿಂದ ಶರಣರು ಪ್ರಪಂಚದ ಎಲ್ಲ ಜೀವರಾಶಿಗಳಿಗೂ "ಜಂಗಮ" ಎಂದು ಪ್ರಯೋಗಮಾಡಿ "ಸಕಲ ಜೀವಾತ್ಮರಿಗೆ ಲೇಸನೇ ಬಯಸುವ ನಮ್ಮ ಕೂಡಲ ಸಂಗನ ಶರಣರೇ ಕುಲಜರು" ಎಂದು ಹೇಳಿ – ಸಕಲ ಪ್ರಾಣಿಗಳಿಗೂ ಸೇವೆಯನ್ನು ಸಲ್ಲಿಸಬೇಕೆಂದು ಹೇಳಿದ್ದಾರೆ. ಕಾಯಕವನ್ನು ಮಾಡಿ ಬಂದ ಆರ್ಜನೆಯಿಂದ ಸಕಲ ಜೀವರಾಶಿಗಳಿಗೂ ಸಹಾಯವನ್ನು ಮಾಡ ಬೇಕೆಂದು ಹೇಳಿದ್ದಾರೆ. ಇದೀಗ ಜಂಗಮಕ್ಕೆ ಧನವನ್ನು ಅರ್ಪಿಸಬೇಕೆಂಬುದಕ್ಕರ್ಥ.

ಈ ರೀತಿ ಸಾಧಕನು ಆರ್ಜಿಸಿದ ತನುಮನಧನಗಳನ್ನು ಗುರುಲಿಂಗಜಂಗಮಕ್ಕೆ ಅರ್ಪಿಸ ಬೇಕೆಂದು ಹೇಳಿದ್ದಾಯಿತು. ಇನ್ನು ಅರ್ಪಣದ ವಿಧಾನ ಹೇಗೆಂಬುದನ್ನು ವಿವರಿಸೋಣ. ತನುಮನಧನಗಳ ತ್ರಿವಿಧ ಅರ್ಪಣೆಯನ್ನು ಸಾಧಕನು ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಎಂಬ ಆರು ಸ್ಥಲಗಳಲ್ಲಿ ಶ್ರದ್ಧಾ, ನಿಷ್ಠಾ, ಸಾವಧಾನ, ಅನುಭವ, ಆನಂದ, ಸಮರಸ, ಎಂಬ ಆರು ವಿಧ ಭಕ್ತಿಗಳಿಂದ ಮಾಡಬೇಕು. ಹೇಗೆಂದರೆ:—

## ಭಕ್ತಸ್ಥಲ

ಭಕ್ತಸ್ಥಲವು ಷಟಸ್ಥಲಗಳಲ್ಲಿ ಮೊದಲನೆಯದು ಮತ್ತು ಮುಖ್ಯವಾದದ್ದು. ಈ ಸ್ಥಲದಲ್ಲಿ ತೇರ್ಗಡೆಯನ್ನು ಹೊಂದಿದ ಸಾಧಕನು ಉಳಿದ ಐದು ಸ್ಥಲಗಳನ್ನೂ ಸುಲಭವಾಗಿ ಹತ್ತಬಲ್ಲನು. ಭಕ್ತಸ್ಥಲವನ್ನು ಆಚರಿಸುವುದು ಬಹುಕಷ್ಟವೆಂದು ಶರಣರು ಹೇಳಿದ್ದಾರೆ. ಈ ಭಕ್ತಸ್ಥಲಕ್ಕೆ ಶ್ರದ್ಧಾಭಕ್ತಿಯು ಅವಶ್ಯಕ. ಶ್ರದ್ಧೆಯಿಂದ ಯಾವುದಾದರೂ ಸತ್ಯ ಶುದ್ಧಕಾಯಿಕವನ್ನು ಮಾಡಿ ಆರ್ಜಿಸಿದ ಆರ್ಜನೆಯನ್ನು ಗುರುಲಿಂಗಜಂಗಮಕ್ಕೆ ಅರ್ಪಿಸುವದೇ ಭಕ್ತಿಸ್ಥಲದ ಮುಖ್ಯ ಆಚರಣೆ. ಈ ಸ್ಥಲದಲ್ಲಿ ಸಾಧಕನ ಮನಸ್ಸು ಪರಿಪಕ್ವವಾಗುವದು. ಅನುಭವವು ಹೆಚ್ಚುವದು. ಮನುಷ್ಯನ ಕಷ್ಟಸುಖಗಳು ಮನವರಿಕೆಯಾಗುವವು. ಪ್ರೇಮ, ಸಹನ, ಕ್ಷಮಾ, ಇತ್ಯಾದಿ ಸದ್ಗುಣಗಳು ಸಾಧಕ ನಲ್ಲಿ ಮಾಡುವವು. ಸಾಧಕನ ಭಕ್ತಸ್ಥಲದ ಆಚರಣೆಯನ್ನು ಶರಣರು ಅನಂತ ವಚನಗಳಲ್ಲಿ ವಿವರಿ ಸಿದ್ದಾರೆ. ಮುಖ್ಯವಾದವುಗಳನ್ನು ಇಲ್ಲಿ ಉಲ್ಲೇಖಿಸುತ್ತೇನೆ:-"ಗೀತವ ಬಲ್ಲಾತ ಜಾಣನಲ್ಲ. ಮಾತ ಬಲ್ಲಾತ ಜಾಣನಲ್ಲ. ಜಾಣನು ಜಾಣ ಆತ ಜಾಣನು ಲಿಂಗವ ನೆರೆನಂಬಿದಾತ ಜಾಣ. ಜಂಗಮಕ್ಕೆ ಸವಿಸುವಾತ ಆತ ಜಾಣನು" ಇಲ್ಲಿ ಸಾಧಕನು ಲಿಂಗವನ್ನು ನಂಬಿ ಜಂಗಮಕ್ಕೆ ( ಅಂದರೆ ಸಕಲ



CC-0. Jangamwadi Math Collection, Varanasi. An eGangotri Initiative

ಜೀವರೋಗಿಗಳಿಗೂ) ಸೇವೆಯನ್ನು ಮಾಡಬೇಕೆಂದು ಶರಣರು ಹೇಳಿದ್ದಾರೆ. ಮತ್ತೂ "ಲೇಸೆನಿಸಿಕೊಂಡು ಐದು ದಿನ ಬದುಕಿದರೇನು? ಲೇಸೆನಿಸಿಕೊಂಡು ನಾಲ್ಕು ದಿನ ಬದುಕಿದರೇನು? ಲೇಸೆನಿಸಿಕೊಂಡು ಮೂರು ದಿನ ಬದುಕಿದರೇನು? ಲೇಸೆನಿಸಿಕೊಂಡು ಎರಡು ದಿನ ಬದುಕಿದರೇನು?........ಕೂಡಲಸಂಗನ ವಚನವಲ್ಲಿ ಲೇಸೆನಿಸಿಕೊಂಡು ಒಂದು ದಿನ ಬದುಕಿದರೇನೋ?" ಉತ್ತಮ ಜೀವನವನ್ನು ಐದು ದಿನ ನಡಿಸಿದರೂ ಒಂದೇ, ಒಂದು ದಿನ ನಡಿಸಿದರೂ ಒಂದೇ. ಉಪಕಾರವಿಲ್ಲದ ಕನಿಷ್ಠ ಜೀವನವು ವರುಷಗಟ್ಟಲೆ ನಡೆದರೂ ವ್ಯರ್ಥ ಎಂದು ಶರಣರು ನೈತಿಕ ಜೀವನದ ಬೆಲೆಯನ್ನು ಕಟ್ಟಿದ್ದಾರೆ.

"Service to man is service to God" ಅಂದರೆ "ದೀನ ಸೇವೆಯೇ ದೇವರ ಸೇವೆ" ಎಂಬ ತತ್ತ್ವವನ್ನು ಶರಣರು ಈ ವಚನದಲ್ಲಿ ಹೃದಯಂಗಮವಾಗಿ ಚಿತ್ರಿಸಿದ್ದಾರೆ. "ಕನ್ನಡಿಯ ನೋಡುವ ಅಣ್ಣಗಳಿರಾ ಜಂಗಮವ ನೋಡಿರೆ. ಜಂಗಮದೊಳಗೆ ಲಿಂಗಯ್ಯ ಸನ್ನಿಹಿತನಾಗಿಪ್ಪ. ಸ್ಥಾವರ-ಜಂಗಮ ಒಂದೇ ಎಂದುದು ಕೂಡಲಸಂಗನ ವಚನ." ದೇವರು ಎಲ್ಲೆಲ್ಲಿಯೂ ಇದ್ದಾನೆ. ಅದನ್ನು ಬರಿಮಾತಿನಲ್ಲಿ ಹೇಳಿದರೆ ಪ್ರಯೋಜನವಿಲ್ಲ. ಸರ್ವಾಂತರ್ಯಾಮಿ ಎಂಬ ತತ್ತ್ವವನ್ನು ಕಾರ್ಯರೂಪಕ್ಕಿಳಿಸಿ ಲೋಕಸೇವೆಯನ್ನು ಮಾಡಬೇಕೆಂದು ಶರಣರು ಈ ರೀತಿ ಹೇಳುತ್ತಾರೆ:— "ಸರ್ವಭೂತಾತ್ಮನೆಂಬ ಮಾತುಮಾತಿನಲ್ಲಿ ಹೋಗದು. ತನುಮನವ ಸವಿಸಲೇಬೇಕು. ನಮ್ಮ ಕೂಡಲಸಂಗನ ಶರಣರಿಗೆ ಅಂಜಲೇಬೇಕು" ಸಾಧಕನು ಡಂಭಕ್ಕೆ ಭಕ್ತಿಯನ್ನು ಮಾಡಕೂಡದು. ತನುಕರಗಿ, ಮನಕರಗಿ ಭಕ್ತಿಯನ್ನು ಮಾಡಬೇಕು: "ಹರಿಸಿ ಮಾಡುವುದು ಹರಿಕೆಯ ದಂಡ, ನೆರೆಹಿ ಮಾಡುವುದು ಡಂಭಿನ ಭಕ್ತಿ; ಹರಿಸಬೇಡ ನೆರೆಹಬೇಡ. ಬಂದ ಬರವನರಿದರೆ ಕೂಡಿಕೊಂಡಿಪ್ಪ ನಮ್ಮ ಕೂಡಲ ಸಂಗಮದೇವಾ." ಸಾಧಕನು "ನಾನು ಉಪಕಾರವನ್ನು ಮಾಡಿದೆ, ನಾನು ಸೇವೆಯನು ಸಲ್ಲಿಸಿದೆ" ಎಂದು ಅಹಂಕಾರ ಪಡಬಾರದು. ನಿರಹಂಕಾರವು ನೈತಿಕ ಜೀವನಕ್ಕೆ ಕೇವಲ ಅವಶ್ಯಕ: "ಮಾಡಿದೆನೆಂಬುದು ಮನದಲ್ಲಿ ಹೊಳೆದರೆ ಸೀಡಿಸಿ ಕಾಡಿತ್ತು ಶಿವನ ಡಂಗುರ. ಮಾಡಿದೆನೆನ್ನದಿರಾ ಲಿಂಗಕ್ಕೆ. ಮಾಡಿದೆನೆನ್ನದಿರಾ ಜಂಗಮಕ್ಕೆ ಮಾಡಿದೆನೆಂಬುದು ಮನದಲ್ಲಿಲ್ಲದಿದ್ದರೆ ಬೇಡಿತ್ತನೀವನು ಕೂಡಲಸಂಗಮದೇವಾ." ಈ ರೀತಿಯಲ್ಲಿ ನಿಷ್ಕಾಮದಿಂದ ಸಾಧಕನು ಭಕ್ತಿಸ್ಥಲದಲ್ಲಿ ಶ್ರದ್ಧಾ ಭಕ್ತಿಯನ್ನು ಆಚರಿಸಬೇಕು.

## ಮಹೇಶ್ವರ ಸ್ಥಲ

ಮಾಹೇಶ್ವರ ಸ್ಥಲವು ಷಟ್‌ಸ್ಥಲದಲ್ಲಿ ಎರಡನೇ ಹೆಜ್ಜೆ. ಭಕ್ತ-ಸ್ಥಲದಲ್ಲಿ ಶ್ರದ್ಧಾ-ಭಕ್ತಿಯನ್ನಾಚರಿಸಿದ ಮೇಲೆ ಸಾಧಕನು ಮಾಹೇಶ್ವರ ಸ್ಥಲಕ್ಕೆ ಕಾಲಿಟ್ಟು ನಿಷ್ಠಾ ಭಕ್ತಿಯನ್ನಾಚರಿಸುತ್ತಾನೆ. ಮಾಹೇಶ್ವರ ಸ್ಥಲಕ್ಕೆ ನಿಷ್ಠೆ ಅಥವಾ ಛಲ ಅವಶ್ಯಕ. ಒಂದು ನಿಷ್ಠೆಯಿಂದ, ಒಂದು ಛಲದಿಂದ ಗುರುಲಿಂಗಜಂಗಮಕ್ಕೆ ತನುಮನಧನಗಳನ್ನು ಅರ್ಪಿಸಬೇಕು. ಮಾಹೇಶ್ವರ ಸ್ಥಲದಲ್ಲಿ ವಿಶ್ವಾಸವೂ ನಂಬಿಕೆಯೂ ಶ್ರದ್ಧೆಯೂ ಬಲಗೊಳ್ಳುವುವು. ಮಾಹೇಶ್ವರನು ಅಚಲವಾದ ನಿಷ್ಠೆಯಿಂದ ಲೋಕದ ಸೇವೆಯನ್ನು ಮಾಡುವನು. ಮಾಹೇಶ್ವರನು ತನ್ನ ಪೂರ್ವದ ಜಾತಿ-ಕುಲ ಸಂಬಂಧವಾದ ಆಚರಣೆಗಳನ್ನು ಬಿಟ್ಟು ಪೂರ್ವಾಶ್ರಮ ನಿರಸನವನ್ನು ಮಾಡುವನು. ಲಿಂಗದ ನಿಜಸ್ವರೂಪವು ಅವನಿಗೆ ಪೂರ್ಣವಾಗಿ ಕಾಣುವುದು. ಪರಬ್ರಹ್ಮದ ನಿಲವು ಹೇಗೇ ಇದೆ ಎಂದು



CC-0. Jangamwadi Math Collection, Varanasi. An eGangotri Initiative

ಕೈಯೆತ್ತಿ ಹೇಳುವ ಅಧಿಕಾರವು ಮಾಹೇಶ್ವರನಿಗೆ ಬರುವುದು : “ ಇಬ್ಬರು ಮೂವರು ದೇವರೆಂದು ಉಬ್ಬಿ ಮಾತನಾಡಬೇಡ; ಒಬ್ಬನೆ ಕಾಣಿರೊ. ಇಬ್ಬರೆಂಬುದು ಹುಸಿನೋಡಾ ಕೂಡಲಸಂಗಮ ದೇವನಲ್ಲದಿಲ್ಲೆಂದಿತ್ತು ವೇದ” ಎಂದು ಏಕದೇವವಾದವನ್ನು ಸಿದ್ಧಾಂತ ಮಾಡುವನು. ಮತ್ತೂ “ ಒಬ್ಬ ಕೆಂಚ, ಒಬ್ಬ ಕರಿಕ, ಒಬ್ಬ ಶುದ್ಧ ಧವಳಿತನೆಂತಯ್ಯ ಲಿಂಗವೇ? ಒಬ್ಬರಿಗೊಬ್ಬರು ಘನ ವೆಂಬರು ಅದೆಂತಯ್ಯ ? ಒಬ್ಬರಿಗೊಬ್ಬರು ಕಿರಿಯರೆಂಬರು ಎಂತಯ್ಯ ?” ಎಂದು ಪ್ರಶ್ನೆ ಮಾಡಿ “ ಬ್ರಹ್ಮೆ ಪ್ರಳಯ ವಿಷ್ಣು ಮರಣ ಉಂಟು ನಮ್ಮ ಕೂಡಲ ಸಂಗಂಗಿಲ್ಲ” ಎಂದು ತಾನು ಹಾಕಿದ ಪ್ರಶ್ನೆಗೆ ತಾನೇ ಖಂಡಿತವಾದ ಉತ್ತರವನ್ನು ಕೊಡಬಲ್ಲನು. ಪರಮಾತ್ಮನು ಸರ್ವಾಂತ ರ್ಯಾಮಿಯು, ಅಗೋಚರನು, ಅಗಮ್ಯನು, ನಿರುಪಮನು, ನಿರಾಮಯನು ವಿಶ್ವತೋಚಕ್ಷುವು, ವಿಶ್ವತೋಬಾಹುವು, ವಿಶ್ವತೋಮುಖನು ಎಂಬುದನ್ನು ಸಂಪೂರ್ಣವಾಗಿ ಅರಿತವನಾಗಿ, ವಿಚಾರ ವಿಲ್ಲದ ಅಜ್ಞಾನಿಗಳು ಕಲ್ಲು, ಮರ, ಮುಂಡಿಗೆಗಳಿಂದ ಮಾಡಿದ ಕೃತಕ ದೇವರುಗಳನ್ನು ಪೂಜಿಸುವು ದನ್ನು ಮಹೇಶ್ವರನು ಮನಕ್ಕೆ ತಾಕುವಂತೆ ಖಂಡಿಸುತ್ತಾನೆ : “ ಅರಗು ತಿಂದು ಕರಗುವ ದೈವವ ಉರಿಯ ಕಂಡರೆ ಮುರುಟುವ ದೈವವನೆಂತು ಸರಿ ಎಂಬೆನಯ್ಯ ? ಅವಸರ ಬಂದರೆ ಮಾರುವ ದೈವವನೆಂತು ಸರಿ ಎಂಬೆನಯ್ಯ ? ಸಹಜಭಾವ ನಿಜೈಕ್ಯ ಕೂಡಲಸಂಗಮದೇವನೊಬ್ಬನೇ ದೈವ” ಮತ್ತೂ “ ಮಡಕೆ ದೈವ, ಮೊರದೈವ, ಬೀದಿಯ ಕಲ್ಲು ದೈವ, ಹಣಿಗೆ ದೈವ, ಬಿಲ್ಲ ನಾರಿ ದೈವ, ಕಾಣಿರೋ. ಕೊಳಗ ದೈವ, ದೈವದೈವವೆಂದು ಕಾಲಿಡಲಿಂಬಿಲ್ಲ. ದೇವನೊಬ್ಬನೇ ನಮ್ಮ ಕೂಡಲ ಸಂಗಮದೇವಾ.” ಮತ್ತೂ “ ನೀರ ಕಂಡಲ್ಲಿ ಮುಳುಗುವರಯ್ಯ, ಮರನ ಕಂಡಲ್ಲಿ ಸುತ್ತುವರಯ್ಯ. ಬತ್ತುವ ಜಲವ, ಒಣಗುವ ಮರನ ಮಚ್ಚಿದವರು ನಿಮ್ಮನೆತ್ತಬಲ್ಲರು ಕೂಡಲ ಸಂಗಮದೇವ ?” ಈ ರೀತಿ ಮಾಹೇಶ್ವರನು ಹಲವು ದೇವರುಗಳ ಹಂಬಲವನ್ನು ಬಿಟ್ಟು ಪರಮಾತ್ಮನೊಬ್ಬನೇ ಎಂದು ನಂಬುತ್ತಾನೆ. ಕೊಲ್ಲುವುದು, ಅಭಕ್ಷ್ಯಗಳನ್ನು ಭಕ್ಷಿಸುವುದು ಇವುಗಳನ್ನು ಮಾಹೇಶ್ವರನು ಸೈರಿಸನು: “ ಕೊಲ್ಲುವನೇ ಮಾದಿಗ, ಹೊಲಸು ತಿಂಬುವನೇ ಹೊಲೆಯ” ಎಂದು ಖಂಡಿಸುತ್ತಾನೆ. ಯಜ್ಞಗಳಲ್ಲಿ ಹೋತನನ್ನು ಕೊಲ್ಲುವುದನ್ನು ನೋಡಿ: “ಮಾತು ಮಾತಿಗೆ ನಿನ್ನ ಕೊಂದಾರೆಂದು, ಎಲೇ ಹೋತೇ, ಅಳು ಕಂಡೆಯಾ, ಹೋತೆ ಶಾಸ್ತ್ರವ ಕೇಳಿದವರ ಮುಂದೆ ಅಳು ಕಂಡೆಯಾ” ಎಂದು ಕಣ್ಣೀರು ಸುರಿಸುತ್ತಾನೆ. ಶುಷ್ಕವಾದ ಬಾಹ್ಯ ಆಚಾರಗಳನ್ನು ಕುರಿತು “ ಹಿಂಡಲೇಕೋ ತೊಳೆಯಲೇಕೋ ? ಮುಳುಗಿ ಮುಳುಗಿ ಮೂಗ ಹಿಡಿಯಲೇಕೋ ? ” ಎಂದು ಹಾಸ್ಯ ಮಾಡಿ “ ಕೂಡಲ ಸಂಗನ ಶರಣರಲ್ಲಿ ಡೋಹರ ಕಕ್ಕಯ್ಯನಾನ ತೊರೆಯಲ್ಲಿ ಮಿಂದ ? ” ಎಂದು ದಿಟ್ಟ ತನದಿಂದ ಪ್ರಶ್ನೆ ಮಾಡುತ್ತಾನೆ. ಭಕ್ತ ಸ್ಥಲದಲ್ಲಿ ಶ್ರದ್ಧಾಭಕ್ತಿಯಿಂದ ಕಾಯಕವನ್ನು ಮಾಡಿದಂತೆ ಸಾಧಕನು ಮಾಹೇಶ್ವರ ಸ್ಥಲದಲ್ಲಿ ಕಾಯಕವನ್ನು ನಿಷ್ಠಾಭಕ್ತಿಯಿಂದ ಮಾಡಬೇಕು. ಯಾವ ಸ್ಥಲವಾದರೂ ಕಾಯಕವು ತಪ್ಪುವುದಿಲ್ಲ. ಕಾಯಕವನ್ನು ಮಾಡುವ ವಿಧಾನ ಬೇರೆ ಬೇರೆಯಾಗು ತ್ತದೆ. ಅಷ್ಟೆ. ಮಾಹೇಶ್ವರನ ಕಾಯಕದ ವರ್ಣನೆಯನ್ನು ನೋಡಿ: “ ನಾನು ಆರಂಭ ಮಾಡುವೆನಯ್ಯ ಗುರುಪೂಜೆಗೆಂದು. ನಾನು ಬೆವಹಾರ ಮಾಡುವೆನಯ್ಯ ಲಿಂಗಾರ್ಚನೆಗೆಂದು. ನಾನು ಪರಸೇವೆಯ ಮಾಡುವೆನಯ್ಯ ಜಂಗಮ ದಾಸೋಹಕ್ಕೆಂದು ” ಹೀಗೆ ಸಾಧಕನು ಮಾಹೇಶ್ವರ ಸ್ಥಲದಲ್ಲಿ ಆರ್ಜಿಸಿದ ತನುಮನಧನಗಳನ್ನು ನಿಷ್ಠಾಭಕ್ತಿಯಿಂದ ಗುರುಲಿಂಗ ಜಂಗಮಕ್ಕೆ ಅರ್ಪಿಸಿ ಲೋಕಸೇವೆ ಮಾಡಬೇಕು.



CC-0. Jangamwadi Math Collection, Varanasi. An eGangotri Initiative

## ಪ್ರಸಾದಿಸ್ಥಲ

ಪ್ರಸಾದಿ ಸ್ಥಲವು ಷಟ್‌ಸ್ಥಲದಲ್ಲಿ ಮೂರನೆಯ ಹೆಜ್ಜೆ. ಈ ಹೆಜ್ಜೆಯಲ್ಲಿ ಸಾವಧಾನ ಭಕ್ತಿಯನ್ನು ಆಚರಿಸಬೇಕು. ಸಾವಧಾನ ಭಕ್ತಿಯ ಆಚರಣೆಯಿಂದ ಮನಸ್ಸು ಬಹು ನಿರ್ಮಲ ವಾಗುವದು. ಪ್ರಸಾದ ಸ್ವೀಕಾರವೇ ಸಾವಧಾನ ಭಕ್ತಿ. ಗುರುಲಿಂಗಜಂಗಮಕ್ಕೆ ಅರ್ಪಿಸಿದ ಮೇಲೆ ಉಳಿಯತಕ್ಕದೇ ಪ್ರಸಾದವು. ಪಂಚೇಂದ್ರಿಯಗಳ ಮುಖದಿಂದ ಅನುಭವಿಸಬಹುದಾದ ಶಬ್ದ, ಸ್ಪರ್ಶ, ರೂಪ, ರಸ, ಗಂಧ ಮತ್ತು ಇವುಗಳಿಂದ ಹೃದಯಕ್ಕೆ ಉಂಟಾಗುವ ತೃಪ್ತಿ ಇವು ಆರೂ ಪ್ರಸಾದವಾಗುವವು ಶಬ್ದ, ಸ್ಪರ್ಶ, ರೂಪ, ರಸ,ಗಂಧ,ತೃಪ್ತಿ ಇವುಗಳಿಗೂ ನಮ್ಮ ಮನಸ್ಸಿಗೂ ನಿಕಟ ಸಂಬಂಧವಿದೆ. ಶಬ್ದಸ್ಪರ್ಶಾದಿಗಳು ಪರಿಶುದ್ಧವುಗಳಾದರೆ ಮನಸ್ಸೂ ಪರಿಶುದ್ಧವಾಗಿರುವುದು. ಅಪರಿಶುದ್ಧವಾದವುಗಳಾದರೆ ಮನಸ್ಸೂ ಅಪರಿಶುದ್ಧವಾಗುವುದು. ಗುರುಲಿಂಗಜಂಗಮಕ್ಕೆ ಅರ್ಪಿಸ ಬೇಕಾದರೆ ಪರಿಶುದ್ಧವಾದ ಶಬ್ದಸ್ಪರ್ಶಾದಿಗಳನ್ನೇ ಅರ್ಪಿಸಬೇಕಾಗುತ್ತದೆ. ಅರ್ಪಿಸಿದ ಇಂಥಾ ಪರಿಶುದ್ಧ ಶಬ್ದಸ್ಪರ್ಶಾದಿಗಳ ಪ್ರಸಾದ ಸ್ವೀಕಾರದಿಂದ ಸಾಧಕನ ಮನಸ್ಸೂ ಪರಿಶುದ್ಧವಾಗುತ್ತವೆ. ಪ್ರಸಾದವು ಮೂರು ತೆರನಾಗಿರುವುದು. ಗುರುವಿಗೆ ಅರ್ಪಿಸಿ ಉಳಿವ ಪ್ರಸಾದಕ್ಕೆ ಶುದ್ಧಪ್ರಸಾದ ವೆಂದೂ, ಲಿಂಗಕ್ಕೆ ಅರ್ಪಿಸಿ ಉಳಿವ ಪ್ರಸಾದಕ್ಕೆ ಸಿದ್ಧ ಪ್ರಸಾದವೆಂದೂ, ಜಂಗಮಕ್ಕೆ ಅರ್ಪಿಸಿ ಉಳಿವ ಪ್ರಸಾದಕ್ಕೆ ಪ್ರಸಿದ್ಧಪ್ರಸಾದವೆಂದೂ ಶರಣರು ಹೇಳಿದ್ದಾರೆ. ಈ ಶುದ್ಧ, ಸಿದ್ಧ, ಪ್ರಸಿದ್ಧ ಪ್ರಸಾದ ಸೇವನೆಯಿಂದ ಸಾಧಕನು ದಿವ್ಯ ಜ್ಞಾನವನ್ನು ಪಡೆಯುವನು. ನೈತಿಕ ಜೀವನದಲ್ಲಿ ಉತ್ತೀರ್ಣನಾಗುವನು. ಅಪರಿಶುದ್ಧ ಇಂದ್ರಿಯ ಭೋಗವನ್ನು ಶರಣರು: "ಸೂಳೆಗೆ ಮೆಚ್ಚಿ ಸೂಳೆಯ ಬಂಟರೆಂಜಲ ತಿಂಬುದೀ ಲೋಕ. ಅಡಗ ಮೆಚ್ಚಿ ಸೊಣಗನೆಂಜಲ ತಿಂಬುದೀ ಲೋಕ" ಎಂದು ಖಂಡಿಸಿದ್ದಾರೆ. ಪ್ರಸಾದ ಸ್ವೀಕಾರದಿಂದ ಪಂಚೇಂದ್ರಿಯಗಳ ಅಶುಚಿಯು ಹೋಗುವು ದೆಂದು ಶರಣರು ಪ್ರಸಾದಿಯ ಜೀವನವನ್ನು ಈ ರೀತಿ ಚಿತ್ರಿಸಿದ್ದಾರೆ: "ಕಿವಿಯ ಸೂತಕ ಹೋಯಿತ್ತು ಸದ್ಗುರುವಿನ ವಚನದಿಂದ. ಕಂಗಳಕೆ ಸೂತಕ ಹೋಯಿತ್ತು ಸದ್ವಕ್ತ್ರರ ಕಂಡೆನಾಗಿ. ಕಾಯದ ಸೂತಕ ಹೋಯಿತ್ತು ನಿಮ್ಮ ಚರಣವ ಮುಟ್ಟಿದೆನಾಗಿ. ಬಾಯ ಸೂತಕ ಹೋಯಿತ್ತು ನಿಮ್ಮ ಒಕ್ಕುದ ಕೊಂಡೆನಾಗಿ. ನಾನಾ ಸೂತಕ ಹೋಯಿತ್ತು ನಿಮ್ಮ ಶರಣರನುಭಾವಿಯಾಗಿ. ಕೂಡಲಸಂಗಮದೇವಾ ಕೇಳಯ್ಯ ಎನ್ನ ಮನದ ಸೂತಕ ಹೋಯಿತ್ತು ನೀವಲ್ಲದಲ್ಲೆಂದರಿದೆ ನಾಗಿ." ಈ ರೀತಿ ಸಾಧಕನು ಪ್ರಸಾದಿಸ್ಥಲದಲ್ಲಿ ಕಾಯಾ-ವಾಚಾ-ಮನಸಾ ಶುದ್ಧನಾಗುತ್ತಾನೆ.

## ಪ್ರಾಣಲಿಂಗಿಸ್ಥಲ

ಪ್ರಾಣಲಿಂಗಿಸ್ಥಲವು ಷಟ್‌ಸ್ಥಲದಲ್ಲಿ ನಾಲ್ಕನೆಯ ಹೆಜ್ಜೆ. ಈ ಹೆಜ್ಜೆಯಲ್ಲಿ ಸಾಧಕನು ಅನುಭವ ಭಕ್ತಿಯನ್ನು ಆಚರಿಸಬೇಕು. ಹಿಂದೆ ಹೇಳಿದ ಭಕ್ತ ಮಹೇಶ್ವರ ಪ್ರಸಾದಿ — ಈ ಮೂರು ಸ್ಥಲಗಳಲ್ಲಿ ಸಾಧಕನು ಕ್ರಿಯೆಗಳನ್ನು ಮಾಡುವಲ್ಲಿ ಅವನ ದೃಷ್ಟಿಯು ಹೆಚ್ಚಾಗಿ ಬಹಿ ರ್ಮುಖವಾಗಿಯೇ ಇರುತ್ತದೆ. ಅನಂತರ ಅಂದರೆ ಪ್ರಾಣಲಿಂಗಿಸ್ಥಲದಿಂದ ಮುಂದಕ್ಕೆ ಅವನ ದೃಷ್ಟಿಯು ಅಂತರ್ಮುಖವಾಗುತ್ತದೆ. ಸಾಧಕನು ಜ್ಞಾನಾಧಿಕವಾಗಿ ಕ್ರಿಯೆಗಳನ್ನು ಆಚರಿಸಲಿಕ್ಕೆ ಪ್ರಾರಂಭಿಸುತ್ತಾನೆ. ಪ್ರಾಣಲಿಂಗಿಸ್ಥಲದಲ್ಲಿ ಸಾಧಕನು ಅಂತರ್ಮುಖದಿಂದ ತನ್ನ ಹೃದಯದಲ್ಲಿ ನೆಲೆಸಿರುವ ಪ್ರಾಣಲಿಂಗವನ್ನು ಕಾಣುವನು. ಬಹಿರ್ಮುಖನಾಗಿ ಇಷ್ಟಲಿಂಗಾನುಸಂಧಾನವನ್ನು



CC-0. Jangamwadi Math Collection, Varanasi. An eGangotri Initiative

ಮಾಡಿದಂತೆ ಅಂತರ್ಮುಖನಾಗಿ ಪ್ರಾಣಲಿಂಗಾನುಸಂಧಾನವನ್ನು ಮಾಡುವನು. ಪ್ರಾಣಲಿಂಗ ಪೂಜೆಯಿಂದ ಸಾಧಕನು ಬಹಳ ಪರಿಶುದ್ಧನಾಗುತ್ತಾನೆ. ಶಾಂತಿ, ವಿವೇಕ, ಸತ್ಯ, ಅಹಿಂಸೆ, ವೈರಾಗ್ಯ, ಚಿತ್ತೈಕಾಗ್ರತೆ, ಅಹಂಕಾರನಿರಸನ, ವಿಶ್ವಪ್ರೇಮ ಈ ಗುಣಗಳನ್ನು ಪ್ರಾಣ ಲಿಂಗಿಯು ಪರಿಪೂರ್ಣವಾಗಿ ಸಂಪಾದಿಸುತ್ತಾನೆ. "ಆತ್ಮಲಿಂಗ ಪರಮಾತ್ಮ ಜಂಗಮ, ತನು ಮಧ್ಯ ಪ್ರಸಾದವಾಯಿತ್ತು. ಕೂಡಲಸಂಗನ ಶರಣರ ಸಂಗದಿಂದ ನಿಶ್ಚಿಂತ ನಿವಾಸವಾಯಿತ್ತು." ಮತ್ತೂ "ಜಂಗಮವೇ ಲಿಂಗವೆನಗೆ, ಜಂಗಮವೇ ಪ್ರಾಣವೆನಗೆ, ಕೂಡಲಸಂಗಮ ದೇವಯ್ಯ, ಎನಗೆಯೂ ನಿನಗೆಯೂ ಜಂಗಮದ ಪ್ರಸಾದವೇ ಪ್ರಾಣ." ಸಾಧಕನಿಗೆ ಪ್ರಾಣಲಿಂಗಾನುಸಂಧಾನ ದಿಂದ ಆಗುವ ಆನಂದ ಅತುಳವಾದದ್ದು: "ಕಂಗಳು ತುಂಬಿದ ಬಳಿಕ ನೋಡಲಿಲ್ಲ, ಕಿವಿ ತುಂಬಿದ ಬಳಿಕ ಕೇಳಲಿಲ್ಲ, ಕೈಗಳು ತುಂಬಿದ ಬಳಿಕ ಪೂಜಿಸಲಿಲ್ಲ, ಮನ ತುಂಬಿದ ಬಳಿಕ ನೆನೆಯ ಲಿಲ್ಲ ಮಹಾಂತ ಕೂಡಲಸಂಗಮದೇವನ." ಈ ರೀತಿ ಸಾಧಕನು ಪ್ರಾಣಲಿಂಗಿಸ್ಥಲದಲ್ಲಿ ಪ್ರಾಣ ಲಿಂಗಾನುಸಂಧಾನವನ್ನು ಮಾಡಿ, ಸಕಲಪ್ರಾಣಿಗಳ ಪ್ರಾಣದಲ್ಲೂ ಪರಮಾತ್ಮನಿರುವನು ಎಂಬ ತತ್ತ್ವವನ್ನು ತಿಳಿದು ನೈತಿಕ ಜೀವನದಲ್ಲಿ ಉನ್ನತಸ್ಥಿತಿಗೆ ಏರುತ್ತಾನೆ.

### ಶರಣಸ್ಥಲ

ಶರಣಸ್ಥಲವು ಷಟ್‌ಸ್ಥಲದಲ್ಲಿ ಐದನೆಯ ಹೆಜ್ಜೆ. ಈ ಹೆಜ್ಜೆಯಲ್ಲಿ ಸಾಧಕನು ಆನಂದ ಭಕ್ತಿಯನ್ನು ಆಚರಿಸಬೇಕು. ಸಾಧಕನು ತನ್ನನ್ನೇ ಸತಿಯೆಂದೂ ಪರಬ್ರಹ್ಮದ್ಯೋತಕವಾದ ಲಿಂಗವನ್ನೇ ಪತಿಯೆಂದು ಭಾವಿಸಿ, ಸತಿಯು ತನ್ನ ಪತಿಯಲ್ಲಿ ಹೇಗೆ ಸಂಸಾರಸುಖವನ್ನು ಅನು ಭವಿಸುತ್ತಾಳೋ ಹಾಗೆ ಲಿಂಗಮೂರ್ತಿಯ ಪೂಜಾಧ್ಯಾನಗಳಿಂದ ಲಿಂಗಾನಂದವನ್ನು ಅನುಭವಿ ಸುತ್ತಾನೆ. ಶರಣಸ್ಥಲದಲ್ಲಿ ಸಾಧಕನು ಪರಮಾತ್ಮನನ್ನು ಬಹು ಹತ್ತಿರದಲ್ಲಿ ಕಾಣುವನು. ಪರ ಮಾತ್ಮನ ಬಗ್ಗೆ ಅಪಾರವಾದ ಅನುಭವವನ್ನು ಪಡೆದುಕೊಳ್ಳುವನು: "ಉಂಬ ಬಟ್ಟಲು ಬೇರೆ ಕಂಚಲ್ಲ, ನೋಡುವ ದರ್ಪಣ ಬೇರೆ ಕಂಚಲ್ಲ, ಭಾಂಡ ಭಾಜನ ಒಂದೇ, ಬೆಳಗೆ ಕನ್ನಡಿ ಎನಿಸಿ ತ್ತಯ್ಯ, ಅರಿದರೆ ಶರಣ, ಮರೆದರೆ ಮಾನವ." ಮತ್ತೂ "ಕೆರೆ, ಹಳ್ಳ, ಭಾವಿಗಳು ಮೈದೆಗೆದರೆ ಗುಳ್ಳೆ, ಗೊರಜೆ, ಚಿಪ್ಪು ಕಾಣಬಹುದು, ವಾರುಧಿ ಮೈದೆಗೆದರೆ ರತ್ನಂಗಳ ಕಾಣಬಹುದು, ಕೂಡಲ ಸಂಗನ ಶರಣರು ಮನದೆರೆದು ಮಾತನಾಡಿದರೆ ಲಿಂಗವ ಕಾಣಬಹುದು." ಈ ರೀತಿಯಲ್ಲಿ ಶರ ಣರು ಪರಮಾತ್ಮನ ಮತ್ತು ಸೃಷ್ಟಿಯ ಬಗ್ಗೆ ಮಹತ್ತರವಾದ ಅನುಭವವನ್ನು ಪಡೆದು, ಸಕಲ ಜೀವಕೋಟಿಗೂ ಶರಣೆಂದು ಅವುಗಳ ಸೇವೆಯನ್ನು ಮಾಡುವುದೇ ಶ್ರೇಷ್ಠವೆಂದು ಅರಿತು ನೈತಿಕ ಜೀವನದಲ್ಲಿ ಬಹು ಶ್ರೇಷ್ಠವಾದ ಅಡಿಯನ್ನು ಇಡುವರು.

### ಐಕ್ಯಸ್ಥಲ

ಐಕ್ಯಸ್ಥಲವು ಷಟ್‌ಸ್ಥಲದಲ್ಲಿ ಕೊನೆಯ ಸ್ಥಲ. ಈ ಸ್ಥಲದಲ್ಲಿ ಸಾಧಕನು ಸಮರಸ ಭಕ್ತಿಯನ್ನು ಆಚರಿಸುತ್ತಾನೆ. ವಿಶ್ವೈಕ್ಯದ ಅನುಭವವನ್ನು ಪಡೆಯುತ್ತಾನೆ. "ತತ್ತ್ವಮಸಿ" ಅಂದರೆ "ಅದು ನೀನು ಆಗಿದ್ದಿ" "That thou art" ಎಂಬ ವಾಕ್ಯಾರ್ಥವನ್ನು ಕಾರ್ಯ ರೂಪದಲ್ಲಿ ಮನಗಾಣುತ್ತಾನೆ. ಎಲ್ಲೆಲ್ಲಿಯೂ ಅವನಿಗೆ ಅನ್ಯವಸ್ತುಗಳೇ ಕಾಣುವುದಿಲ್ಲ. ಎಲ್ಲವೂ ಲಿಂಗಮಯವಾಗಿ ಕಾಣುತ್ತವೆ. "ವನವೆಲ್ಲ ನೀವೇ ದೇವಾ, ವನದೊಳಗಣ ತರುವೆಲ್ಲ ನೀವೇ



CC-0. Jangamwadi Math Collection, Varanasi. An eGangotri Initiative

ದೇವಾ, ತರುವಿನೊಳಗಾಡುವ ಖಗಮೃಗಗಳೆಲ್ಲ ನೀವೇ ದೇವಾ" ಎಂದು ಹೇಳಲಿಕ್ಕೆ ಪ್ರಾರಂಭಿಸುತ್ತಾನೆ ಮತ್ತು ತಾನು ಪರಮಾತ್ಮನ ಒಂದು ಅಂಶವೇ ಆಗಿದ್ದೇನೆಂದು ತಿಳಿಯುತ್ತಾನೆ. ಯಾವ ಫಲಾಪೇಕ್ಷೆಯಿಂದಲೂ ಕರ್ಮಗಳನ್ನು ಮಾಡುವುದಿಲ್ಲ; ಎಲ್ಲವನ್ನೂ ನಿಷ್ಕಾಮವಾಗಿ ಮಾಡುತ್ತಾನೆ. ಹಿಂದೆ ಹೇಳಿದ ಭಕ್ತ, ಮಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ ಈ ಸ್ಥಲಗಳ ಆಚರಣೆಗಳನ್ನೂ ಸಾಧಕನು ಐಕ್ಯ ಸ್ಥಲದಲ್ಲಿ ಶಿವಜೀವೈಕ್ಯ ಭಾವದಲ್ಲಿ ಆಚರಿಸುತ್ತಾನೆ. "ಸಮಸ್ತಕತ್ತಲೆಯು ಮಸಕವ ಕಳೆದಿಪ್ಪ ಇರವ ನೋಡಾ! ಬೆಳಗಿನ ಬೆಳಗು ಸಿಂಹಾಸನವಾಗಿ, ಬೆಳಗುವ ಬೆಳಗ ಕೂಡಿದ ಕೂಟವ ಕೂಡಲಸಂಗಯ್ಯ ತಾನೇ ಬಲ್ಲ." ಮತ್ತೂ "ಹುತ್ತಕ್ಕೆ ಏಸು ಬಾಯಾದಡೇನು? ಸರ್ಪನಿಪ್ಪುದು ಒಂದೇ ಸ್ಥಾನ, ಭಾವ ಭಾವಿಸಿ ಭ್ರಮೆಯಳಿದು ನೋಡಾ! ಆ ಭಾವ ಭಾವಿಸಲು ನಿರ್ಭಾವ ಕೂಡಲಸಂಗಮದೇವಾ!" ಈ ರೀತಿಯಲ್ಲಿ ಐಕ್ಯನು ಅಂಗಲಿಂಗಗಳ ದ್ವೈತಭಾವವನ್ನು ನೀಗಿ ಅಂಗವೇ ಲಿಂಗವೆಂಬ ಅದ್ವೈತಭಾವವನ್ನು ನೆಲೆಗೊಳಿಸಿಕೊಳ್ಳುವನು. ಜ್ಞಾನದ ಪರಮಾವಧಿಯನ್ನು ಮುಟ್ಟುವನು. ಈ ಐಕ್ಯನೇ ಮಹಾತ್ಮನೆನಿಸಿಕೊಳ್ಳುವನು. ಸರ್ವಜೀವ ದಯಾಪರನೆಂಬ ಬಿರುದನ್ನು ಹೊಂದುವನು. ನೈತಿಕ ಪ್ರಪಂಚದಲ್ಲಿ ಐಕ್ಯನಿಗೆ ಯಾರೂ ಸಮನಿಲ್ಲದೆ ಹೋಗುವರು.

## ಉಪಸಂಹಾರ

ಈ ರೀತಿಯಲ್ಲಿ ಮಾನವನು ಭಕ್ತಾದಿ ಐಕ್ಯಾಂತವಾದ ಆರು ಸ್ಥಲಗಳಲ್ಲಿ ಶ್ರದ್ಧಾದಿ ಸಮರಸಾಂತವಾದ ಆರು ವಿಧ ಭಕ್ತಿಗಳನ್ನು ಆಚರಿಸಿ ವ್ಯಾಯಾಮ, ವಿಚಾರ, ಉದ್ಯೋಗ ಇವುಗಳಿಂದ ತನುಮನಧನಗಳನ್ನು ಸಂಪಾದಿಸಿ ಅವುಗಳನ್ನು ಗುರುಲಿಂಗಜಂಗಮಕ್ಕೆ ಅರ್ಪಿಸಿ ತನ್ನ ಯಾವತ್ತು ಜೀವನವನ್ನು ನಡೆಸಿದ್ದಾದರೆ ಅವನು ಉತ್ಕೃಷ್ಟ ನೈತಿಕ ಜೀವನವನ್ನು ನಡಿಸಿದಂತಾಗುತ್ತದೆಂದು ವೀರಶೈವ ಮತಾಚಾರ್ಯರು ನಿರ್ಣಯಿಸಿದ್ದಾರೆ. ಇಂಥ ನೈತಿಕ ಜೀವನವನ್ನು ನಡೆಸಿದ ಮಾನವನಿಗೆ ಇದು ತಪ್ಪು, ಇದು ಒಪ್ಪು, ಇದು ಒಳ್ಳೆಯದು, ಇದು ಕೆಟ್ಟದ್ದು ಎಂಬ ವಿವೇಚನಾಶಕ್ತಿಯು ಬರುವುದೆಂದು ಹೇಳಿದ್ದಾರೆ. ಆ ವಿವೇಚನೆಯಾವುದೆಂದು ಕೇಳಿದರೆ ಶರಣರು ಈ ವಚನವನ್ನು ಎಲ್ಲರ ಕಿವಿಗೂ ಬೀಳಿಸುತ್ತಾರೆ.

"ದಯವಿಲ್ಲದ ಧರ್ಮವದಾವುದಯ್ಯಾ? ದಯವೇ ಬೇಕು ಸಕಲ ಪ್ರಾಣಿಗಳೆಲ್ಲರಲ್ಲಿ. ದಯವೇ ಧರ್ಮದ ಮೂಲವಯ್ಯಾ! ಕೂಡಲಸಂಗಯ್ಯನಂತಲ್ಲದೊಲ್ಲನಯ್ಯ."

ಯಾವ ಕೆಲಸವೇ ಆಗಲಿ ಒಳ್ಳೆಯದೇ? ಕೆಟ್ಟದ್ದೇ? ಎಂದು ತಿಳಿಯಬೇಕಾದರೆ ಆ ಕೆಲಸವನ್ನು "ದಯೆ" ಎಂಬ ಒರೆಗಲ್ಲಿನಲ್ಲಿ ತಿಕ್ಕಿ ನೋಡಿ ಯಾವ ಕೆಲಸದಲ್ಲಿ ದಯೆ ಇಲ್ಲವೊ ಆ ಕೆಲಸ ನಿಷಿದ್ಧವಾದದ್ದು—ಅದನ್ನು ತ್ಯಜಿಸಬೇಕು, ಯಾವ ಕೆಲಸದಲ್ಲಿ ದಯೆ ಇರುವುದೋ ಆ ಕೆಲಸ ಪೂಜ್ಯವಾದದು—ಅದನ್ನು ಮಾಡಬಹುದು, ಎಂದು ಶರಣರು ನೀತಿಶಾಸ್ತ್ರದ ಸೂತ್ರವನ್ನು ನಿರ್ಣಯಿಸಿದ್ದಾರೆ. ಯಜ್ಞ, ಯಾಗ, ಮಾರಿಪೂಜೆ, ನರಬಲಿ, ಸತಿ, ಸಹಗಮನ, ಇವುಗಳಲ್ಲಿ ದಯೆ ಇಲ್ಲ. ಆದ್ದರಿಂದ ಅವುಗಳನ್ನು ವೀರಶೈವರು ಸಂಪೂರ್ಣವಾಗಿ ತ್ಯಜಿಸಿದ್ದಾರೆ ಮತ್ತು ಖಂಡಿಸಿದ್ದಾರೆ. ಸುರೆ, ಭಂಗಿ ಮೊದಲಾದ ಮಾದಕ ದ್ರವ್ಯಗಳ ಸೇವನೆಯಿಂದ ಮನಸ್ಸು ಪಲ್ಲಟವಾಗಿ ಹೊಡೆದಾಡುವುದು, ಬಡಿದಾಡುವುದು, ಕೊಲೆ ಮಾಡುವುದು ಇವೇ ಮೊದಲಾದ ಕೆಲಸಗಳಲ್ಲಿ



CC-0. Jangamwadi Math Collection, Varanasi. An eGangotri Initiative

" ದಯೆ " ಇಲ್ಲ. ಆದ್ದರಿಂದ ಸುರೆ, ಭಂಗಿ ಮೊದಲಾದ ಮಾದಕ ದ್ರವ್ಯಗಳ ಸೇವನೆಯನ್ನು ವೀರಶೈವರು ತ್ಯಾಜ್ಯ ಮಾಡಿದ್ದಾರೆ. ಮಾಂಸಾಹಾರವನ್ನೂ ವೀರಶೈವರು ತ್ಯಜಿಸಿದ್ದಾರೆ. ಯಾಕೆಂದರೆ ಮಾಂಸಾಹಾರಕ್ಕೆ ಪ್ರಾಣಿವಧೆಯನ್ನು ಮಾಡಿ ಮಾಂಸವನ್ನು ಒದಗಿಸಬೇಕಾಗುತ್ತದೆ. ಈ ಕೆಲಸದಲ್ಲಿ " ದಯೆ " ಇಲ್ಲ. ಆದ್ದರಿಂದ ಮಾಂಸಾಹಾರವನ್ನು ವೀರಶೈವರು ತ್ಯಜಿಸಿದ್ದಾರೆ. ಒಂದೇ ಮಾತಿನಲ್ಲಿ ಹೇಳಬೇಕೆಂದರೆ ವೀರಶೈವರು ಅಹಿಂಸಾವಾದಿಗಳಾಗಿದ್ದಾರೆ. ಇಲ್ಲಿ ಒಂದು ಮಾತು, ಅಹಿಂಸಾವಾದಿಗಳೆಂದು ಹೇಳಿದರೆ ವೀರಶೈವರು ಪ್ರಾಣಿವಧೆ ಮುಂತಾದ ದಯಾರಹಿತವಾದ ಹಿಂಸಾ ಕಾರ್ಯಗಳು ಕಣ್ಣಮುಂದೆ ನಡೆಯುತ್ತಿದ್ದರೂ ನೋಡಿಕೊಂಡು ಸುಮ್ಮನಿರತಕ್ಕ ಹೇಡಿಗಳು ಎಂದಲ್ಲ. ವೀರಶೈವರು ದಯಾಶೂನ್ಯವಾದ ಕೆಲಸಗಳನ್ನು ಸಹಿಸಿಕೊಂಡು ಮೌನದಿಂದಿರತಕ್ಕವರಲ್ಲ. ಹಿಂಸಾಕಾರ್ಯವನ್ನು ತಡೆಯಲು ತಮ್ಮ ಪ್ರಾಣಾಂತ್ಯದವರೆಗೂ ಪ್ರಯತ್ನಪಡತಕ್ಕವರಿದ್ದಾರೆ. ವೀರಶೈವರ ಈ ಆಚರಣೆಗೆ ಗಣಾಚಾರವೆಂದು ಹೆಸರು. ಗಣಾಚಾರವು ವೀರಶೈವರ ಪಂಚಾಚಾರಗಳಲ್ಲಿ ಒಂದಾಗಿದೆ. ( ಮಿಕ್ಕ ನಾಲ್ಕು ಆಚಾರಗಳು ಷಟ್‌ಸ್ಥಲದ ಒಂದಲ್ಲ ಒಂದು ಸ್ಥಲದಲ್ಲಿ ವರ್ಣಿತವಾಗಿರುವುದರಿಂದ ಅವನ್ನು ಇಲ್ಲಿ ಪ್ರತ್ಯೇಕವಾಗಿ ವಿವರಿಸಿಲ್ಲ. )

ಈ ರೀತಿ ಶಕ್ತಿವಿಶಿಷ್ಟಾದ್ವೈತ ಅಥವಾ ವೀರಶೈವಮತದ ಆಚಾರ್ಯ ಪುರುಷರಾದ ಶರಣರು ಮಾನವನ ನೀತಿಯ ನೆಲೆಗಟ್ಟನ್ನು ನಿರ್ದೇಶಿಸಿದ್ದಾರೆ. ಆದರೆ ಲೇಖಕನು ಮೊದಲೇ ಅರಿಕೆ ಮಾಡಿಕೊಂಡಂತೆ ಈ ರೀತಿಯ ನಿರ್ಧಾರದಲ್ಲಿ ಶರಣರು ಎಷ್ಟರಮಟ್ಟಿಗೆ ಕೃತಾರ್ಥರಾಗಿದ್ದಾರೆ ಎಂದು ಹೇಳುವ ಸಾಹಸಕ್ಕೆ ಹೋಗುವುದಿಲ್ಲ. ಆ ವಿಮರ್ಶೆಯ ಭಾರವನ್ನು ಲೇಖಕನು ವಾಚಕರ ಮೇಲೇ ಹೊರಿಸುತ್ತಾನೆ.



CC-0. Jangamwadi Math Collection, Varanasi. An eGangotri Initiative



# ಷಟ್‌ಸ್ಥಲಗಳ ಸಿದ್ಧಾಂತ

ಚೇತನಾಚೇತನಾತ್ಮಕವಾದ ಈ ಪ್ರಪಂಚದಲ್ಲಿ ಸಕಲ ಪ್ರಾಣಿಗಳ ಜೀವನದ ಗುರಿಯು ಸುಖವು. ಅದು ನಿತ್ಯಾನಿತ್ಯವೆಂದು ಎರಡು ವಿಧವು. ಕನಕಕಾಂತಾದಿ ಮೂಲಕವಾದ ಪ್ರಾಪಂಚಿಕ ಸುಖವೇ ಅನಿತ್ಯವು. ತದ್ಭಿನ್ನವಾದ ಮುಕ್ತಿಸುಖವೇ ನಿತ್ಯವು. ಕನಕಕಾಂತಾದಿ ಮೂಲಕವಾದ ಪ್ರಾಪಂಚಿಕಸುಖವು ಅವಿಚಾರರಮಣೀಯವಾಗಿರುವುದರಿಂದ ವಿಚಾರಕೋವಿದರು (ಜ್ಞಾನಿಗಳು) ಅದಕ್ಕಾಗಿ ಧಾವಿಸದೆ ನಿತ್ಯವಾದ ಮುಕ್ತಿಸುಖಕ್ಕಾಗಿ ಧಾವಿಸಿದರು, ಧಾವಿಸುತ್ತಿರುವರು, ಧಾವಿಸುವರು. ತದರ್ಥವಾಗಿಯೇ ನಿಗಮಾಗಮಾದಿ ಸಕಲ ಶಾಸ್ತ್ರಗಳ ಉದಯವು; ಹಾಗೂ ಉಪದೇಶವು. ಇಂತಹ ಉಚ್ಚತಮವಾದ ಮುಕ್ತಿಸಾಧನೋಪಾಯಗಳಾದರೂ ಮತಭೇದದಿಂದ ವಿವಿಧವಾಗಿರುವುವು. ವೀರಶೈವಮತವು ಜ್ಞಾನ-ಕ್ರಿಯೆಗಳೆರಡನ್ನೂ ಸಮಸಮುಚ್ಚಯಭಾವದಿಂದ ಮುಕ್ತಿಸಾಧನಗಳೆಂದು ಪ್ರತಿಪಾದಿಸುತ್ತಿಹುದು. ಶಿವಜ್ಞಾನವಿಲ್ಲದಿದ್ದರೆ ಶಿವನ ಧ್ಯಾನ, ಸಮರ್ಚನಾದಿ ಕ್ರಿಯೆಗಳನ್ನು ಆಚರಿಸಲಿಕ್ಕಾಗುವುದಿಲ್ಲ. ಜ್ಞಾನಶೂನ್ಯವಾದ ಕ್ರಿಯೆಯು ವ್ಯರ್ಥವು. ಹಾಗೆಯೇ ಕ್ರಿಯೆಯಿಲ್ಲದ ಜ್ಞಾನವಾದರೂ ಅಕಿಂಚಿತ್ಕರವು. ಪರಶಿವನೇ ನಾನೆಂಬ ಜ್ಞಾನವು ಅನೇಕ ಜನರಿಗಿರಬಹುದು. ಆದರೆ ಅಜ್ಞಾನವೊಂದರಿಂದಲೇ ಅವರೆಲ್ಲರಿಗೆ ಮುಕ್ತಿಯಾಗಲಾರದು. ಅವುದಾದರೊಂದು ವಸ್ತುವಿನ ಜ್ಞಾನಮಾತ್ರದಿಂದ ಆ ವಸ್ತುವಿನ ಪ್ರಾಪ್ತಿಯಾಗುತ್ತಿದ್ದರೆ, ಕ್ರಿಯೆಯು ಲುಪ್ತವ್ಯವಹಾರವುಳ್ಳದ್ದಾಗುತ್ತಿತ್ತೆಂಬುದನ್ನು ಬೇರೆಯೇ ಹೇಳಬೇಕಾಗಿಲ್ಲ. ಮೃತ್ತಿಕೆಯ (ಮಣ್ಣಿನ) ಜ್ಞಾನಮಾತ್ರದಿಂದ ಕುಲಾಲ (ಕುಂಬಾರ)ನು ಕೊಡವನ್ನು ಮಾಡಲಾರನು. ಅನ್ನದ ಜ್ಞಾನಮಾತ್ರದಿಂದ ಹಸಿದ ಪ್ರಾಣಿಯು ತೃಪ್ತಿಯನ್ನು ಕಾಣಲಾರದು. ಆದುದರಿಂದ ಪ್ರತಿಯೊಂದು ವಸ್ತುಸಿದ್ಧಿಯಲ್ಲಿ ವಸ್ತುವಿನ ಜ್ಞಾನವು ಕಾರಣವಾಗಿರುವಂತೆ ಕ್ರಿಯೆಯಾದರೂ ಸಬಲ ಕಾರಣವಾಗಿರುತ್ತದೆಂಬುದು ನಂಬುತಕ್ಕದ್ದಾಗಿದೆ. ಹೆಳವನೂ ಕುರುಡನೂ ಒಬ್ಬೊಬ್ಬರೇ ಸ್ವತಂತ್ರವಾಗಿ ಪಟ್ಟಣಕ್ಕೆ ಹೋಗಲಾರರು. ಇಬ್ಬರೂ ಮಿಲಿತರಾದರೆ ಮಾತ್ರ ಅನ್ಯೋನ್ಯ ಸಹಾಯಸಂಪತ್ತಿಯಿಂದ ಹೋಗಲು ಸಮರ್ಥರಾಗುವರು. ಜ್ಞಾನವು ಪಂಗುವಿ (ಹೆಳವ)ನಂತೆಯೂ, ಕ್ರಿಯೆಯು ಅಂಧ (ಕುರುಡ)ನಂತೆಯೂ ಇರುವುವು ಪ್ರಯುಕ್ತ ಜ್ಞಾನವರ್ಜಿತ ಕರ್ಮವುಳ್ಳವನೂ, ಕರ್ಮವರ್ಜಿತ ಜ್ಞಾನವುಳ್ಳವನೂ ಮುಕ್ತಿಪಟ್ಟಣಕ್ಕೆ ಹೋಗಲು ಸಮರ್ಥರಾಗಲಾರರು. ಅವೆರಡನ್ನು ಕೂಡಿಕೊಂಡೇ ಹೋಗಲು ಸಮರ್ಥರಾಗುವರು. ಇದರಂತೆ ಪಕ್ಷಿಯ ಉದಾಹರಣೆಯನ್ನು ತೆಗೆದುಕೊಳ್ಳಬಹುದು. ಒಂದು ಪಕ್ಷಿಯು ತನ್ನ ಎರಡೂ ರೆಕ್ಕೆಗಳ ಸಹಾಯದಿಂದ ಆಕಾಶಕ್ಕೆ



CC-0. Jangamwadi Math Collection, Varanasi. An eGangotri Initiative

ಹಾರಿ ತನ್ನ ಉದ್ದಿಷ್ಟ ಸ್ಥಾನವನ್ನು ಹೊಂದುವುದಲ್ಲದೇ ಒಂದೇ ರೆಕ್ಕೆಯಿಂದ ಹೋದಲಾರದು. ಪ್ರಕೃತದಲ್ಲಿ ಜೀವರೂಪವಾದ ಪಕ್ಷಿಯು ಜ್ಞಾನ, ಕ್ರಿಯೆಗಳೆಂಬ ಎರಡೂ ರೆಕ್ಕೆಗಳ ಸಹಾಯದಿಂದ ಸಂಸಾರವೆಂಬ ಭೂಮಿಯಿಂದ ಹಾರಿ, ಆಕಾಶರೂಪವಾದ ಮುಕ್ತಿಸ್ಥಾನವನ್ನು ಹೊಂದುವುದು. ಈ ಮಾತನ್ನು—

ಅಂಧಪಂಗುವದನ್ಯೋನ್ಯ ಸಾಪೇಕ್ಷೇ ಜ್ಞಾನಕರ್ಮಣಃ
ಫಲೋತ್ಪತ್ತೌ ವಿರಕ್ತಸ್ಯ ತಸ್ಮಾತ್ತದ್ ದ್ವಯಮಾಚರೇತ್ ॥
ಜ್ಞಾನಂ ಪ್ರಧಾನಂ ನ ತು ಕರ್ಮಹೀನಂ ಕರ್ಮಪ್ರಧಾನಂ ನ ತು ಬುದ್ಧಿಹೀನಂ।
ತಸ್ಮಾದ್ದ್ವಯೋರೇವ ಭವೇತ್ಪ್ರಸಿದ್ಧಿರ್ನಹ್ಯೇಕಪಕ್ಷೋ ವಿಹಗಃ ಪ್ರಯಾತಿ ॥
ಜ್ಞಾನಮಾಚಾರಹೀನಂ ಚೇತ್ತಜ್ಞಾನಂತು ವೃಥಾ ವೃಥಾ ।
ಕೇವಲಂ ಕರ್ಮಮಾತ್ರೇಣ ಜನ್ಮಕೋಟಿಶತೈರಪಿ।
ನಾತ್ಮನಾಂ ಜಾಯತೇ ಮುಕ್ತಿರ್ಜ್ಞಾನಂ ಮುಕ್ತೇಸ್ತು ಕಾರಣಂ।
ಅಂಧೋ ಯಥಾ ಪುರಾಸ್ಥಾನಿ ವಸ್ತೂನಿ ಚ ನ ಪಶ್ಯತಿ।
ಜ್ಞಾನಹೀನಸ್ತಥಾ ದೇಹೀ ನಾತ್ಮಸ್ಥಂ ವೀಕ್ಷತೇ ಶಿವಂ ॥

ಇತ್ಯಾದಿ ಶಿವಾಗಮವಾಕ್ಯಗಳು ಬಲಪಡಿಸುತ್ತವೆ. "ನಕರ್ಮಣಿ, ನಕರ್ಮಣಾ ನಾಸ್ತ್ಯಕೃತಃ ಕೃತೇನ" ಇತ್ಯಾದಿ ಶ್ರುತಿವಾಕ್ಯಗಳು, ಕೇವಲ ಕಾಮ್ಯಕರ್ಮವನ್ನು ಮುಕ್ತಿಜನಕವಲ್ಲೆಂದು ನಿಷೇಧಿಸುವುವಲ್ಲದೇ ಶಿವಸಮರ್ಚನಾದಿ ನಿಷ್ಕಾಮ್ಯವಾದ ಶಿವಕ್ರಿಯೆಯನ್ನು ನಿಷೇಧಿಸುವುದಿಲ್ಲ; ಶಿವಾರ್ಪಣ ಬುದ್ಧಿಯಿಂದ ಆಚರಿಸುವ ಶಿವಕರ್ಮಗಳಿಗೆ ಮುಕ್ತಿಯನ್ನುಳಿದು ಬೇರೊಂದು ಫಲವನ್ನು ಹೇಳಲಿಕ್ಕಾಗುವುದಿಲ್ಲ. ಸಾಧಕನು ಅಂತಹ ಕರ್ಮಗಳನ್ನು ತನ್ನ ದೇಹಪಾತಾವಧಿಯಾಚರಿಸಲೇ ಬೇಕೆಂಬುದು ಶಾಸ್ತ್ರವಿಹಿತವಾಗಿದೆ. ಈ ವಿಷಯದಲ್ಲಿ :—

"ಬ್ರಹ್ಮಣ್ಯಾಧಾಯ ಕರ್ಮಾಣಿ ಸಂಗಂ ತ್ಯಕ್ತ್ವಾ ಕರೋತಿ ಯಃ। ಲಿಪ್ಯತೇ ಸ ಪಾಪೇನ ಪದ್ಮ ಪತ್ರಮಿವಾಂಭಸಾ" ಎಂಬ ಗೀತಾವಾಕ್ಯವೂ, "ಯಾನ್ಯನವದ್ಯಾನಿ ಕರ್ಮಾಣಿ ತಾನಿ ಸೇವಿತವ್ಯಾನಿ ನೋ ಇತರಾಣಿ" ಎಂಬ ಶ್ರುತಿವಾಕ್ಯವೂ, "ಜ್ಞಾನೇನಾಚಾರಯುಕ್ತೇನ ಪ್ರಸೀದತಿ ಮಹೇಶ್ವರಃ। ತಸ್ಮಾದಾಚಾರವಾನ್ ಜ್ಞಾನೀ ಭವೇದಾದೇಹಪಾತನಂ। ಎಂಬ ಆಗಮವಾಕ್ಯವೂ ಪ್ರಮಾಣ ವಾಗಿವೆ. ಈ ರೀತಿಯಾಗಿ ಸುವಿಚಾರ ಸರಣಿಯಿಂದ ಜ್ಞಾನಕ್ರಿಯೆಗಳೆರಡೂ ಕೂಡಿ ಪರಾಪರ ಮುಕ್ತಿಗೆ ಕಾರಣಸಾಮಗ್ರಿಗಳೆಂದು ಹೇಳುವ ವೀರಶೈವ ಸಿದ್ಧಾಂತವು ಸುಸಮಂಜಸವಾಗಿದೆ.

ವೀರಶೈವಗ್ರುಹೀತವಾದ ಷಟ್‌ಸ್ಥಲಾಚರಣೆಯಾದರೂ ಉಕ್ತಜ್ಞಾನಕ್ರಿಯೋಭಯಾತ್ಮಕ ವಾಗಿರುವುದರಿಂದ ವೀರಶೈವ ಶಾಸ್ತ್ರದಲ್ಲಿ ಅಗ್ರಸ್ಥಾನವನ್ನು ಪಡೆದಿದೆ.

"ನ ವೀರಶೈವ ಸದೃಶಂ। ಮತಮಸ್ತಿ ಜಗತ್ತ್ರಯೇ"
"ಏಕೇನ ಜನ್ಮನಾ ಮುಕ್ತಿರ್ವೀರಾಣಾಂ ತು ಮಹೇಶ್ವರೀ"

ಎಂಬ ಪ್ರಶಸ್ತಿಯು ಈ ಷಟ್‌ಸ್ಥಲಾಚರಣೆಯಿಂದಲೇ ವೀರಶೈವಮತಕ್ಕೆ ಬಂದಿದೆ. ಇತರ ಮತಗಳಿಗಿಂತಲೂ ವೀರಶೈವ ಮತಕ್ಕಿರುವ ವೈಶಿಷ್ಟ್ಯಕ್ಕೆ ಈ ಷಟ್‌ಸ್ಥಲಾಚರಣೆಯೇ ಮುಖ್ಯ ಕಾರಣವಾಗಿರುವುದು. ಈ ಆಚರಣೆಯ ವಿಶಿಷ್ಟತ್ವದ ಸತ್ಯಾಂಶವು ನಡೆಯಲ್ಲಿ ವ್ಯಕ್ತವಾಗುವುದಲ್ಲದೇ ನುಡಿಯಲ್ಲಿ ವ್ಯಕ್ತವಾಗಲಾರದು. ಆದುದರಿಂದ ಷಟ್‌ಸ್ಥಲಗಳ ಸ್ವರೂಪವನ್ನು ಅರಿತುಕೊಳ್ಳುವುದು ಪ್ರತಿಯೊಬ್ಬ ವೀರಶೈವನ ಆದ್ಯ ಸಮುದ್ಯಮವಾಗಿರುವುದು.



CC-0. Jangamwadi Math Collection, Varanasi. An eGangotri Initiative

## ಸ್ಥಲ ನಿರ್ವಚನ

" ಏಕಮೇವಾದ್ವಿತೀಯಂ ಬ್ರಹ್ಮ " ಎಂಬುದೇ ಮೊದಲಾದ ಶ್ರುತಿವಾಕ್ಯ ಪ್ರಮಾಣದಿಂದ ಸ್ವಸಜಾತೀಯ ದ್ವಿತೀಯವಿಲ್ಲದೇ (ತನ್ನಂತೆ ಅನ್ಯವಸ್ತುವಿಲ್ಲದೇ) ತಾನೊಂದೇ ಒಂದಾಗಿರುವುದೂ ಪರಬ್ರಹ್ಮವೆಂದು ಹೇಳಿಸಿಕೊಳ್ಳುವುದೂ ಸಚ್ಚಿದಾನಂದ ಲಕ್ಷಣದಿಂದ ಲಕ್ಷಿತವಾದುದೂ, ಚರಾಚರ ರೂಪವಾದ ಅಖಿಲ ಜಗತ್ತಿನ ಸೃಷ್ಟಿ-ಸ್ಥಿತಿ-ಲಯಂಗಳಿಗೆ ಕಾರಣೀಭೂತವಾದುದೂ ಆದ ಯಾವ ಪರಶಿವತತ್ತ್ವವಿದೆಯೋ ಅದೇ ಸ್ಥಲವೆಂದು ಹೇಳಲ್ಪಡುವುದು. ಶಿವನೇ ಸ್ಥಲ, ಸ್ಥಲವೇ ಶಿವನೆಂಬು ಶಾಸ್ತ್ರಗಳಲ್ಲಿ ಹೇಳಲ್ಪಟ್ಟಿರುವುದಲ್ಲದೇ ವ್ಯುತ್ಪತ್ತಿಯಿಂದಲೂ ಹೇಳಲ್ಪಟ್ಟಿದೆ. " ಸ್ಥೀಯತೇ ಲೀಯತೇ ಯತ್ರ ವಿಶ್ವಮಿತಿ ಸ್ಥಲಂ " ಎಂಬ ವ್ಯುತ್ಪತ್ತಿಯಿಂದ ಯಾವ ಅರ್ಥವು ಪ್ರತೀತವಾಗುತ್ತಿದೆಯೋ ಅದೇ ಅರ್ಥವು " ಶೇತೇ ಜಗದಸ್ಮಿನ್ನಿತಿ ಶಿವಃ " ಎಂಬ ವ್ಯುತ್ಪತ್ತಿಯಿಂದ ಪ್ರತೀತವಾಗುವುದು. ಪರಶಿವನು ಜಗಜ್ಜನ್ಮಾದಿ ಕಾರಣನೆಂಬುದಕ್ಕೆ " ಯತೋ ವಾ ಇಮಾನಿ ಭೂತಾನಿ ಜಾಯಂತೇ ಯೇನ ಜಾತಾನಿ ಜೀವಂತಿ ಯತ್ಪ್ರಯಂತ್ಯಭಿಸಂವಿಶಂತಿ ತದ್ವಿಜಿಜ್ಞಾಸಸ್ವತದ್ಬ್ರಹ್ಮೇತಿ " ಎಂಬ ತೈತ್ತಿರೀಯೋಪನಿಷದ್ವಾಕ್ಯವೂ, "ಜನ್ಮಾದ್ಯಸ್ಯಯತಃ" ಎಂಬ ಬ್ರಹ್ಮಸೂತ್ರವೂ "ಏಕಮೇವ ಪರಂ ಬ್ರಹ್ಮ | ಸಚ್ಚಿದಾನಂದ ಲಕ್ಷಣಂ ಶಿವತತ್ತ್ವಂ ಶಿವಾಚಾರ್ಯಾಃ ಸ್ಥಲಮಿತ್ಯಾಹುರಾದರಾತ್ | ಸ್ಥಕಾರಃ ಸ್ಥಾನವಾಚೀಶ್ಯಾತ್ | ಲಕಾರೋ ಲಯವಾಚಕಃ | ತಯೋಃ ಕಾರಣಭೂತಂ ಯತ್ತತ್ತದೇವ ಸ್ಥಲಮುಚ್ಯತೇ| ಅಯಂ ಭಾವಃ ಪ್ರಪಂಚಸ್ಯ ಸಕಲಸ್ಯಾಪಿ ಯದ್ಭವೇತ್| ಸೃಷ್ಟಿ-ಸ್ಥಿತಿ-ಲಯಾದೀನಾಮಾಧಾರಾದ್ಭಿತ್ತಿ ಸಂಜ್ಞಿತಂ " ಎಂಬ ಶಿವಾಗಮವಾಕ್ಯಗಳೂ ಪ್ರಮಾಣವಾಗಿರುವುವು.

ಈ ರೀತಿಯಾಗಿ ಸ್ಥಲವಾಚ್ಯನಾದ ಶಿವನೇ ಸಚ್ಚಿದಾನಂದ ಸ್ವರೂಪನಾಗಿರುವನು. ಶಿವನು ಸಕಲ ಪ್ರಪಂಚಕ್ಕೆ ಕಾರಣನಾಗಿ ತನಗೆ ಬೇರೊಂದು ಕಾರಣವಿಲ್ಲದವನಾದುದರಿಂದ ಸದ್ರೂಪನಾಗಿರುವನು. ತಾನು ಸರ್ವ ಜಗದ್ವಿಕಾಸಕ್ಕೆ ಜನಕನಾಗಿ ತನ್ನ ವಿಕಾಸಕ್ಕೆ ಪ್ರಮಾಣಾಂತರ ಸಾಧನವನ್ನು ಅಪೇಕ್ಷಿಸದಿರುವುದರಿಂದ ಚಿದ್ರೂಪನಾಗಿರುವನು. ಪ್ರಪಂಚವು ಅನುಭವಿಸುವ ಆನಂದಕ್ಕೆಲ್ಲ ಹೇತುಭೂತನಾಗಿರುವುದರಿಂದ ಆನಂದ ಸ್ವರೂಪನಹನು. ಈ ವಿಷಯದಲ್ಲಿ " ಸತ್ಯಂ ಜ್ಞಾನಮಾನಂದಂ ಬ್ರಹ್ಮ " ಎಂಬ ಶ್ರುತಿಯು ಬಲವಾದ ಪ್ರಮಾಣವಾಗಿರುವುದು. ಶಿವನಿಗೆ ಈ ಸಚ್ಚಿದಾನಂದ ಸ್ವರೂಪದ ಸಾಕ್ಷಾತ್ಕಾರವು ಸಾಂಸಿದ್ಧಿಕವಾಗಿರುವುದು. ಆ ಸಾಕ್ಷಾತ್ಕಾರವೇ ಶಿವಾಗಮ ಗ್ರಂಥಗಳಲ್ಲಿ ವಿಮರ್ಶವೆಂದು ಉಕ್ತವಾಗಿರುತ್ತದೆ. ಈ ವಿಮರ್ಶಶಕ್ತಿಯಿಂದಲೇ ಸತ್-ಚಿತ್-ಆನಂದಗಳ ಅನುಭವವು ಶಿವನಿಗುತ್ಪನ್ನವಾಗುವುದು. ಈ ವಿಮರ್ಶಶಕ್ತಿಯು ಇಲ್ಲದಿದ್ದರೆ ಶಿವನು ಘಟಾದಿಗಳಂತೆ ಅಚೇತನನೆನಿಸುವನು. ಜಗದೊಳಗೆ ಮುತ್ತು, ರತ್ನಾದಿಗಳು ಸ್ವಚ್ಛವಾಗಿ ಹೊಳೆಯುತ್ತಿದ್ದರೂ ಅವುಗಳಿಗೆ ಸ್ವಪ್ರಕಾಶದ ವಿಮರ್ಶವುಂಟಾಗುವುದಿಲ್ಲ. ಪ್ರಯುಕ್ತ ಅವೆಲ್ಲವೂ ಅಚೇತನವೆನಿಸುವುವು. ಅರುವಿಲ್ಲದೇ ಪ್ರಕಾಶಿಸುವ ವಸ್ತುಜಾತವೆಲ್ಲ ಚೇತನವೆನಿಸಲಾರದು. ಈ ಪ್ರಕಾರ ಚೇತನ ಶಬ್ದವಾಚ್ಯನಾದ ಪರಮಾತ್ಮನು ತನ್ನ ಈ ವಿಮರ್ಶಶಕ್ತಿಯ ಸ್ಫುರಣದಿಂದ ಸೃಷ್ಟಿಯನ್ನು ಮಾಡುತ್ತಾನೆ. ಈ ವಿಚಾರವನ್ನು " ಸಸ್ಹೃದಯ ಪ್ರಕಾಶೋ ಭವನಸ್ಯ ಕ್ರಿಯಾ | ಯಾ ಭವತಿ ಕರ್ತಾ ಸ್ಯೈವ ಕ್ರಿಯಾ ವಿಮರ್ಶಃ ಸ್ವಸ್ಥಾ ಕ್ಷುಭಿತಾ ಚ ವಿಶ್ವವಿಸ್ತಾರಾ " ಎಂಬ ವಾಕ್ಯದಿಂದ ಶಿವಾದ್ವೈತ ಮಂಜರಿಯು ಬಲಪಡಿಸುತ್ತದೆ. ವೀರಶೈವ ಶಾಸ್ತ್ರದಲ್ಲಿ ಶಿವನು ಜಗತ್ತಿಗೆ ಅಭಿನ್ನನಿಮಿತ್ತೋಪಾದಾನ ಕಾರಣನೆಂದು ಹೇಳಲ್ಪಡುತ್ತಾನೆ. ಒಂದು ವಸ್ತುವಿಗೆ



CC-0. Jangamwadi Math Collection, Varanasi. An eGangotri Initiative

ಉಭಯ ಕಾರಣತ್ವವು ವಿರುದ್ಧವಾದುದೆಂಬುದು ಈಶ್ವರಾತಿರಿಕ್ತವಸ್ತು ತಾತ್ಪರ್ಯಕವಾದುದಲ್ಲದೇ ಈಶ್ವರತಾತ್ಪರ್ಯಕವಾದುದಲ್ಲ. ಅಘಟಿತಘಟನಾಪಟೀಯನಾದ ಶಿವನಿಗೆ ಉಭಯ ಕಾರಣತ್ವವು ವಿರುದ್ಧವಾದುದಲ್ಲ. ಅಂತೆಯೇ "ಯತೋ ವಾ ಇಮಾನಿ ಭೂತಾನಿ ಜಾಯಂತೇ ಯೇನ ಜಾತಾನಿ ಜೀವಂತಿ ಯತ್ಪ್ರಯಂತ್ಯಭಿಸಂವಿಶಂತಿ" ಎಂಬ ತೈತ್ತರೀಯ ಶ್ರುತಿಯು ಬ್ರಹ್ಮನಿಗೆ (ಶಿವನಿಗೆ) ಉಪಾದಾನನಿಮಿತ್ತೋಭಯ ಕಾರಣತ್ವವನ್ನು ಅಂಶತಃ ಪ್ರತಿಪಾದಿಸುತ್ತದೆ.

## ಲಿಂಗಾಂಗ ಸ್ಥಲಗಳು

"ಸದೇವ ಸೌಮ್ಯೇದಮಗ್ರ ಆಸೀತ್, ಏಕಮೇವಾದ್ವಿತೀಯಂ ಬ್ರಹ್ಮ" ಎಂಬ ಶ್ರುತಿ ವಾಕ್ಯಾನುಸಾರವಾಗಿ, ಸ್ಥಲಶಬ್ದವಾಚ್ಯವಾದ ಒಂದೇ ಒಂದಾದ ಆ ಶಿವತತ್ತ್ವವು ಲಿಂಗಸ್ಥಲವೆಂದೂ ಅಂಗಸ್ಥಲವೆಂದೂ ಎರಡು ವಿಧವಾಗಿರುವುದು. ಇದಕ್ಕೆ ಶಿವಸಮವೇತವಾದ ವಿಮರ್ಶ ಶಕ್ತಿಯ ಕ್ಷೋಭೆಯೇ (ಚಲನೆಯೇ) ಮೂಲಕಾರಣವಾಗಿಹುದು. ಆ ವಿಮರ್ಶಶಕ್ತಿವಿಶಿಷ್ಟತೆಯಿಂದಲೇ ಶಿವನು ಸ್ವತಃಸಿದ್ಧನೆನಿಸುವನು. ಹಾಗೂ ಸ್ವತಂತ್ರ ಕಾರಣವಾಗಿಹನು. ಆತನ ವಿಮರ್ಶಶಕ್ತಿಯಾದರೂ, ಆತನಂತೆ ಸಚ್ಚಿದಾನಂದಮಯವಾಗಿಹುದು. "ಅಸ್ತಿ ಕಶ್ಚಿತ್ ಸ್ವತಃ ಸಿದ್ಧಃ | ಸಚ್ಚಿದಾನಂದಲಕ್ಷಣಃ" ಎಂಬ ಸೂಕ್ಷ್ಮಾಗಮ ವಾಕ್ಯವೂ ಈ ವಿಷಯದಲ್ಲಿ ಪ್ರಮಾಣವಾಗಿರುವುದು. ಇಂತು ಶಕ್ತಿವಿಶಿಷ್ಟನಾದ ಶಿವನಿಗೆ ಪೂಜ್ಯ-ಪೂಜಕತ್ವಲೀಲೆಯುಂಟಾಗಲಾಗಿ ಯಾವದೊಂದೂ ತರಂಗವಿಲ್ಲದ ಸಾಗರದಲ್ಲಿ, ತರಂಗೋದಯಕ್ಕೆ ಮೊದಲು ಪ್ರವಾಹವುಂಟಾಗುವಂತೆ,ಶಕ್ತಿವಿಶಿಷ್ಟನಾದ ಶಿವನಲ್ಲಿ ಈ ಸಚ್ಚಲನವು ಅಂದರೆ ಶಕ್ತಿಯ ಕ್ಷೋಭೆಯುಂಟಾಗುವುದು. ಅದರಿಂದ ಶಿವನು ಲಿಂಗಾಂಗಸ್ಥಲವಿಭೇದವನ್ನು ಹೊಂದುವನು. ಶಿವಸಮೇತವಾದ ವಿಮರ್ಶಶಕ್ತಿಯು ನ್ಯೂನಾಧಿಕತ್ವವನ್ನು ಹೊಂದುವ ವಿಲಕ್ಷಣಸಾಮರ್ಥ್ಯವುಳ್ಳದ್ದಾಗಿರುವುದರಿಂದ ಅಧಿಕ ಭಾವಾಪನ್ನವಾದ ಆ ಶಕ್ತಿಯ ಸಂಬಂಧದಿಂದ ಶಿವಚೈತನ್ಯವೇ ಲಿಂಗಸ್ಥಲವಾಗಿಹುದು. ನ್ಯೂನ ಭಾವಾಪನ್ನವಾದ ಆ ಶಕ್ತಿಯ ಸಂಬಂಧದಿಂದ ಶಿವಚೈತನ್ಯವೇ ಅಂಗಸ್ಥಲವಾಗಿಹುದು. ಇವುಗಳಲ್ಲಿ ಲಿಂಗಸ್ಥಲವೇ ಉಪಾಸ್ಯವು ಅಂದರೆ ಪೂಜೆಗೊಳ್ಳುವುದು. ಅಂಗಸ್ಥಲವೇ ಉಪಾಸಕವು, ಅಂದರೆ ಪೂಜೆ ಮಾಡುವದು. ಉಪಾಸ್ಯವಾದ ಲಿಂಗತತ್ತ್ವಕ್ಕೂ, ಉಪಾಸಕವಾದ ಅಂಗತತ್ತ್ವಕ್ಕೂ ಭೇದವಿಲ್ಲ. ಅವೆರಡೂ ಸಾಕ್ಷಾತ್ ಶಿವಸ್ವರೂಪಗಳೇ ಆಗಿರುವುವು. ಶಿವನು ತನ್ನ ವಿಮರ್ಶಶಕ್ತಿಯಿಂದ ಒಂದೇ ಕಾಲದಲ್ಲಿ ತಾನೇ ಪೂಜ್ಯನೂ ಪೂಜಕನೂ ಆಗಿರುವನು. ಏಕೆಂದರೆ ಶಿವನಲ್ಲದವನಿಗೆ ಶಿವಪೂಜೆಯು ಕೋಟಿ ಜನ್ಮ ತಾಳಿ ಬಂದರೂ ಲಭಿಸದು. ಈ ವಿಷಯದಲ್ಲಿ "ಸ್ವಶಕ್ತಿಕ್ಷೋಭಮಾತ್ರೇಣ ಸ್ಥಲಂ ತದ್ ದ್ವಿವಿಧಂ ಭವೇತ್। ಏಕಂ ಲಿಂಗಸ್ಥಲಂ ಪ್ರೋಕ್ತಮನ್ಯದಂಗಸ್ಥಲಂ ಸ್ಮೃತಂ" "ಉಪಾಸ್ಯೋಪಾಸಕತ್ವೇನ ಸ್ವಯಮೇವ ದ್ವಿಧಾ ಭವೇತ್ | ಲಿಂಗಸ್ಥಲಮುಪಾಸ್ಯಂ ಸ್ಯಾದಂಗಸ್ಥಲಮುಪಾಸಕಂ | ಉಪಾಸ್ಯತ್ವಂ ತಥೋಪಾಸಕತ್ವಂ ಚ ಪರಮಃ ಶಿವಃ | ಸ್ವಶಕ್ತ್ಯಾ ಯುಗಪತ್ ಸಾಕ್ಷಾತ್ ಪ್ರಾಪ್ತ ಏವ ಸ್ವಯಂ ಕ್ರಮಾತ್ | ನಾಶಿವಸ್ಯ ಶಿವೋಪಾಸ್ತಿರ್ಘಟತೇ ಜನ್ಮಕೋಟಿಭಿಃ" ಇತ್ಯಾದಿ ಶಿವಾಗಮ ವಚನಗಳು ಆಧಾರವಾಗಿರುತ್ತವೆ. ಹೀಗೆ ಸ್ಥಲವು ಲಿಂಗಾಂಗಸ್ಥಲವಿಭೇದದಿಂದ ಎರಡಾದಂತೆ ಸ್ಥಲಗತವಾದ ಶಕ್ತಿಯೂ ಎರಡು ವಿಧವಾಗಿಹುದು. ಆ ಶಕ್ತಿಯು ಅಘಟಿತಘಟನಾಸಾಮರ್ಥ್ಯವುಳ್ಳದ್ದಾದುದರಿಂದ ನಿರುಪಮವಾದುದೆಂದೂ ಶಿವನೊಡನೆ ಅಭೇದಸಂಬಂಧದಿಂದಿರುವುದರಿಂದ ಶಿವನ ಸಹಧರ್ಮಿಣಿಯೆಂದೂ ಹೇಳಲ್ಪಡುವುದು. ಮತ್ತು ಆ ಶಕ್ತಿಯು "ಸರ್ವಸಾಕ್ಷಿಣಿಯೂ ಸತ್ಯಸಂಪೂರ್ಣೆಯೂ



CC-0. Jangamwadi Math Collection, Varanasi. An eGangotri Initiative

(ಅದ್ವೈತಿಗಳು ಹೇಳುವಂತೆ ಮಿಥ್ಯೆಯಲ್ಲ) ನಿರ್ವಿಕಲ್ಪೆಯೂ ಮಹೇಶ್ವರಿಯೂ" ಎಂಬ ನಾಮವುಳ್ಳದ್ದಾಗಿರುವುದು. ಆ ಶಕ್ತಿಯು ತನ್ನ ಸ್ವಾತಂತ್ರ್ಯಬಲದಿಂದ ಭಕ್ತಹಿತಾರ್ಥವಾಗಿ ಸಮಾನಧರ್ಮದಿಂದ ಎರಡು ಪ್ರಕಾರವಾಗಿ, ಲಿಂಗಸ್ಥಲವನ್ನಾಶ್ರಯಿಸಿ ಕಲಹವನ್ನು ನಿರಸನಮಾಡುವ ಕಲೆಯೆಂದೂ, ಅಂಗಸ್ಥಲವನ್ನಾಶ್ರಯಿಸಿ ಭವವನ್ನು ನಿರಸನ ಮಾಡುವ ಭಕ್ತಿಯೆಂದೂ ಕರೆಯಲ್ಪಡುವುದು. ಅಧಿಕವಾದ ಅಗ್ನಿಯ ಶಿಖೆ (ಜ್ವಾಲೆ) ಯಲ್ಲಿ ದೀಪದ ಆಕೃತಿಯು ವಿಭಾಗಿಸಲ್ಪಡುವಂತೆ ಆ ಶಿವಶಕ್ತಿಯಲ್ಲಿ ಭಕ್ತಿರೂಪವು ವಿಭಾಗಿಸಲ್ಪಟ್ಟಿರುವುದು. ಅಧಿಕವಾದ ಅಗ್ನಿಯ ಜ್ವಾಲೆಯಲ್ಲಿ ಹೊಗೆಯ ಸಮ್ಮಿಶ್ರಣದಿಂದ ಮಂದಪ್ರಕಾಶವೂ ಹೊಗೆಯ ಮಿಶ್ರಣರಹಿತವಾದ ದೀಪದಲ್ಲಿ ಒಳ್ಳೆಯ ಪ್ರಕಾಶವೂ ಕಂಡು ಬರುತ್ತದೆ. ಅದರಂತೆ ಮಹಾಜ್ವಾಲೆಯಂತಿರುವ ಲಿಂಗನಿಷ್ಠ ಶಕ್ತಿಯಲ್ಲಿ ಹೊಗೆಗೆ ಸಮಾನವಾದ ವಾಸನೆಯು ಅಂದರೆ ಸೃಷ್ಟಿಸುವ ಸಾಮರ್ಥ್ಯವು ಇರುವುದು. ದೀಪದಂತೆ ಸುಪ್ರಕಾಶವುಳ್ಳ ಭಕ್ತಿಯಲ್ಲಿ ವಾಸನೆಯು ಇರುವುದಿಲ್ಲವು. ಇಂತು ನಿರ್ವಾಸನಭಕ್ತಿಯು ಮಹತ್ತರವೂ ಶುದ್ಧವೂ ಸೂಕ್ಷ್ಮವೂ ಶುಭವೂ ಶ್ರೇಷ್ಠವೂ ಸಚ್ಚಿದಾನಂದಸ್ವರೂಪವೂ ಎಂದೆನಿಸಿಕೊಂಡು ಅಂಗನಿಗೆ ಭುಕ್ತಿ-ಮುಕ್ತಿಗಳನ್ನು ಕೊಡುವದಾಗಿರುವುದು. ಆದರೆ ಯತಾರ್ಥತಃ ವಿಚಾರಮಾಡಿ ನೋಡಿದಲ್ಲಿ ಶಕ್ತಿ-ಭಕ್ತಿಗಳಿಗೆ ಭೇದವಿಲ್ಲ. ಶಕ್ತಿಯೇ ಭಕ್ತಿಯು, ಭಕ್ತಿಯೇ ಶಕ್ತಿಯಾಗಿರುವುದು. ಶಕ್ತಿಯು ಪ್ರಪಂಚದ ಸೃಷ್ಟಿಗೆ ಕಾರಣವಾಗಿದ್ದು ಭಕ್ತಿಯು ಪ್ರಪಂಚದ ಲಯಕ್ಕೆ ಕಾರಣವಾಗಿರುವುದು. ಇವೆರಡೂ ಶಕ್ತಿ-ಭಕ್ತಿಗಳ ಸಹಜಸ್ವಭಾವವಿರುವುವು. ಇವೆರಡರಲ್ಲಿ ವಿಚಾರಿಸಲಾಗಿ ಶಕ್ತಿಗಿಂತಲೂ ಭಕ್ತಿಯ ಸ್ವಭಾವವೇ ಅಧಿಕವಾಗಿ ಕಂಡುಬರುವುದು. ಇಂತಹ ಶಕ್ತಿ ಭಕ್ತಿಗಳಿಂದ ಲಿಂಗಾಂಗಸ್ಥಲಗಳು ಕ್ರಮವಾಗಿ ಉಪಾಸ್ಯವೂ ಉಪಾಸಕವೂ ಆಗಿರುವುವು.

## ಲಿಂಗಸ್ಥಲ ನಿರೂಪಣ

ವೀರಶೈವಾಗಮಗಳಲ್ಲಿ ಲಿಂಗನೆಂದರೆ ಶಿವನೆಂದು ಉಕ್ತವಾಗಿದೆ. ಶಿವನೇ ಭಕ್ತಜನರ ಉದ್ಧಾರಕ್ಕಾಗಿ ಲಿಂಗಾಕಾರವನ್ನು ತಳೆದಿರುವನು. ಆದುದರಿಂದ ಲಿಂಗವು ಚಿಹ್ನೆ ಮುಂತಾದ ಶಬ್ದ ವಾಚ್ಯವಲ್ಲ. ಏಕೆಂದರೆ ಅವೆಲ್ಲವೂ ಕೃತಕ (ಕಲ್ಪಿತ)ವಾಗಿರುವುದು. ಈ ವಿಚಾರವನ್ನು "ಅಥಾತೋ ಬ್ರಹ್ಮಜಿಜ್ಞಾಸೇತ್ಯಸ್ಮಿನ್ ಸೂತ್ರೇಯದೀರಿತಂ | ತದ್ಬ್ರಹ್ಮ ಕೇವಲಂ ಲಿಂಗಂ ಜ್ಞಾತವ್ಯಂ ಚ ಮುಮುಕ್ಷುಭಿಃ || ಜ್ಯೋತಿರ್ಮಯಪರಂ ಲಿಂಗಂ ಶ್ರುತಿರಾಹ ಶಿವಾತ್ಮಕಂ | ನಾನ್ಯತ್ ಚಿಹ್ನಾದಿಕಂ ಲಿಂಗಂ | ತತ್ಸರ್ವಂ ಕೃತಕಂ ಚ ಯತ್||" ಎಂಬ ನಿಗಮಾಗಮವಾಕ್ಯಗಳು ಬಲಪಡಿಸುತ್ತವೆ. ಇಂತು ಶಿವಾಭಿನ್ನವಾದ ಲಿಂಗತತ್ತ್ವವು ಮೂರು ವಿಧವಾಗಿಹುದು. ಒಂದನೆಯದು ಭಾವಲಿಂಗವು, ಎರಡನೆಯದು ಪ್ರಾಣಲಿಂಗವು, ಮೂರನೆಯದು ಇಷ್ಟಲಿಂಗವು. ಇವುಗಳಲ್ಲಿ ಭಾವಲಿಂಗವು ನಿಷ್ಕಲವಾಗಿದ್ದು ಭಾವಗ್ರಾಹ್ಯವು; ಅಂದರೆ ಭಾವಮಾತ್ರದಿಂದ ತಿಳಿಯತಕ್ಕುದಾಗಿರುವುದು. ಪ್ರಾಣಲಿಂಗವು ಸಕಲ-ನಿಷ್ಕಲವಾಗಿದ್ದು, ಮನೋಮಾತ್ರಗೋಚರವಾಗಿರುವುದು. ಇಷ್ಟಲಿಂಗವು ಸಕಲವಾಗಿದ್ದು ಚಕ್ಷುರ್ಗೋಚರವಾಗಿರುವುದು. ಈ ಮೂರು ಲಿಂಗಗಳು ಶಿವನ ಸದ್ರೂಪ, ಚಿದ್ರೂಪ, ಆನಂದರೂಪಗಳಾಗಿರುವುವು. ಏಕತ್ವ ಬೋಧಕವಾದ "ತತ್ತ್ವಮಸಿ" ಎಂಬ ಉಪನಿಷದ್ವಾಕ್ಯಾರ್ಥದಲ್ಲಿ ಸಮನ್ವಯವಾಗುವುವು. ಅಂದರೆ ತತ್, ತ್ವಂ, ಅಸಿ ಎಂಬ ಪದತ್ರಯದ ಅರ್ಥಗಳೇ ಆಗಿರುವುವು. ಇವುಗಳಲ್ಲಿ ತತ್ಪದಾರ್ಥವು ಇಷ್ಟಲಿಂಗವೂ, ತ್ವಂ ಪದಾರ್ಥವು ಪ್ರಾಣಲಿಂಗವೂ, ಅಸಿ ಪದಾರ್ಥವು ಭಾವ ಲಿಂಗವೂ ಆಗಿರುವುವು. ವೀರಶೈವ ಶಾಸ್ತ್ರವು ಶಿವ, ಜೀವ, ಲಿಂಗ, ಅಂಗ, ಇವುಗಳಿಗೆ ಅಭೇದವನ್ನೇ



CC-0. Jangamwadi Math Collection, Varanasi. An eGangotri Initiative

ಒಪ್ಪುವುದರಿಂದ "ತತ್ತ್ವಮಸಿ" ಎಂಬ ಮಹಾವಾಕ್ಯ ಘಟಕವಾದ ತತ್, ತ್ವಂ, ಅಸಿ, ಎಂಬ ಪದತ್ರಯದ ಅರ್ಥವು ಇಷ್ಟ ಪ್ರಾಣ ಭಾವಲಿಂಗಗಳೆಂದು ಹೇಳಿದುದು ಸುಸಂಗತವಾಗಿರುವುದು. ಈ ವಿಷಯದಲ್ಲಿ "ಲಿಂಗಸ್ಥಲಂ ತ್ರಿಧಾ ಜ್ಞೇಯಂ ತದ್ಭೇದೋವರ್ಣ್ಯತೇಽಧುನಾ| ಪ್ರಥಮಂ ಭಾವಲಿಂಗಂ ಸ್ಯಾತ್| ದ್ವಿತೀಯಂ ಪ್ರಾಣಲಿಂಗಕಂ| ತೃತೀಯಮಿಷ್ಟಲಿಂಗಂ ಸ್ಯಾದಿತ್ಯೇತತ್ತ್ರಿವಿಧಂ ಸ್ಮೃತಂ|| ನಿಷ್ಕಲಂ ಭಾವಲಿಂಗಂ ಸ್ಯಾದ್ಭಾವಗ್ರಾಹ್ಯಂ ಪರಾತ್ಪರಂ| ಪ್ರಾಣಲಿಂಗಂ ಮನೋಗ್ರಾಹ್ಯಂ ಭವೇತ್ಸಕಲನಿಷ್ಕಲಂ| ಸಕಲಂ ದೃಕ್ಕಲಾಗ್ರಾಹ್ಯಮಿಷ್ಟಲಿಂಗಸ್ಥಲಂ ಮಹತ್| ಸದ್ರೂಪಂ ಭಾವಲಿಂಗಂ ಸ್ಯಾತ್ ಚಿದ್ರೂಪಂ ಪ್ರಾಣಲಿಂಗಕಂ| ಆನಂದರೂಪಮಾಚಾರ್ಯೈರಿಷ್ಟಲಿಂಗಮುದಾಹೃತಂ| ಅಸ್ಯರ್ಥೋ ಭಾವಲಿಂಗಂ ಸ್ಯಾತ್ ತ್ವಮರ್ಥಃ ಪ್ರಾಣಲಿಂಗಕಂ| ತದರ್ಥಸ್ತ್ವಿಷ್ಟಲಿಂಗಂ ಸ್ಯಾತ್ ಪದತ್ರಯನಿರೂಪಣೇ| ಶಿವ ಏವ ಸ್ವಯಂ ಲಿಂಗಮಾತ್ಮೈವಾಂಗಸ್ಥಲಂ ಭವೇತ್" ಎಂಬ ಆಗಮವಾಕ್ಯಗಳು ಸಬಲಪ್ರಮಾಣವಾಗಿರುವುವು. ಇಷ್ಟಾದಿ ಈ ಲಿಂಗತ್ರಯವೇ ಪುನಃ ಒಂದೊಂದು ಎರಡು ಪ್ರಕಾರವಾಗಿರುವುದು. ಅದರಲ್ಲಿ ಭಾವಲಿಂಗವು ಮಹಾಲಿಂಗ ಪ್ರಸಾದಲಿಂಗವೆಂದೂ, ಪ್ರಾಣಲಿಂಗವು ಜಂಗಮಲಿಂಗ, ಶಿವಲಿಂಗವೆಂದೂ, ಇಷ್ಟಲಿಂಗವು ಗುರುಲಿಂಗ, ಆಚಾರಲಿಂಗವೆಂದೂ, ದ್ವಿವಿಧವಾಗಿರುವುವು. ಇಂತು ಸ್ಥಲಶಬ್ದವಾಚ್ಯನಾದ ಪರಶಿವನು ತ್ರಿವಿಧಲಿಂಗಾತ್ಮಕನಾಗಿ ಪುನಃ ಒಂದೊಂದರಲ್ಲಿ ದ್ವಿವಿಧಲಿಂಗಾತ್ಮಕನಾಗಿರುವುದು ಭಕ್ತರ ಧ್ಯಾನ-ಪೂಜಾ ನಿಮಿತ್ತವಲ್ಲದೇ ಬೇರೊಂದಿಲ್ಲ. "ಮತೀನಾಂ ಮಂತ್ರಿಣಾಂ ಚೈವ ಜ್ಞಾನಿನಾಂ ಯೋಗಿನಾಂ ತಥಾ| ಧ್ಯಾನಪೂಜಾನಿಮಿತ್ತಂ ಹಿ ತನುಂ ಗೃಹ್ಣಾತಿ ಮಾಯಯಾ||" ಎಂಬ ಶಿವಾಗಮವಚನವು ಈ ವಿಷಯದಲ್ಲಿ ಪ್ರಮಾಣವಾಗಿರುವುದು. ಈ ರೀತಿಯಾಗಿ ಲಿಂಗಸ್ಥಲವು ಆರು ತೆರನಾಗಿರುವುದು.

## ಷಡ್ವಿಧ ಶಕ್ತಿಗಳು

ಚಿಚ್ಛಕ್ತಿ, ಪರಾಶಕ್ತಿ, ಆದಿಶಕ್ತಿ, ಇಚ್ಛಾಶಕ್ತಿ, ಜ್ಞಾನಶಕ್ತಿ, ಕ್ರಿಯಾಶಕ್ತಿ-ಎಂದು ಶಕ್ತಿಗಳು ಆರು ತೆರನಾಗಿರುವುವು. ಇವು ಷಡ್ವಿಧಲಿಂಗನಿಷ್ಠಗಳಾಗಿ ಕಲೆಯೆಂಬ ಸಂಜ್ಞೆಯನ್ನು ಹೊಂದುವುವು. ಇವುಗಳಲ್ಲಿ ಚಿಚ್ಛಕ್ತಿಯು ಮಹಾಲಿಂಗವನ್ನಾಶ್ರಯಿಸಿ ಶಾಂತ್ಯತೀತೋತ್ತರಕಲೆಯೆಂದೂ ಪರಾಶಕ್ತಿಯು ಪ್ರಸಾದಲಿಂಗವನ್ನು ಹೊಂದಿ ಶಾಂತ್ಯತೀತಕಲೆಯೆಂದೂ ಆದಿಶಕ್ತಿಯು ಜಂಗಮಲಿಂಗವನ್ನು ಹೊಂದಿ ಶಾಂತಿಕಲೆಯೆಂದೂ ಇಚ್ಛಾಶಕ್ತಿಯು ಶಿವಲಿಂಗವನ್ನಾಶ್ರಯಿಸಿ ವಿದ್ಯಾಕಲೆಯೆಂದೂ ಜ್ಞಾನಶಕ್ತಿಯು ಗುರುಲಿಂಗವನ್ನು ಕೂಡಿಕೊಂಡು ಪ್ರತಿಷ್ಠಾಕಲೆಯೆಂದೂ ಕ್ರಿಯಾಶಕ್ತಿಯು ಆಚಾರ ಲಿಂಗವನ್ನವಲಂಬಿಸಿ ನಿವೃತ್ತಿಕಲೆಯೆಂದೂ ಪರ್ಯಾಯನಾಮಗಳಿಂದ ಕರೆಯಲ್ಪಡುವುವು. ಇವು ಷಡ್ವಿಧಲಿಂಗಗಳನ್ನು ಹೊಂದಿ ಲಿಂಗಪೂಜಕನಾದ ಅಂಗನನ್ನು ಲಿಂಗಾಭಿಮುಖನನ್ನಾಗಿ ಮಾಡಿ ಕಡೆಗೆ ಲಿಂಗರೂಪಿಯನ್ನೇ ಮಾಡಲು ಕಾರಣಗಳಾಗಿರುವುವು.

## ಶಕ್ತಿಸಮೇತವಾದ ಷಡ್ವಿಧ ಲಿಂಗಲಕ್ಷಣವು

ಲಕ್ಷಣವೆಂದರೆ ಪದಾರ್ಥಗಳ ಪರಸ್ಪರಭೇದಪ್ರತೀತಿಜನಕವಾದ ಲಕ್ಷ್ಯಮಾತ್ರವೃತ್ತಿ ಧರ್ಮವು. ಅದು ವೀರಶೈವ ಶಾಸ್ತ್ರದಲ್ಲಿ ಮಹಾಲಿಂಗಾದಿ ಆರು ಲಿಂಗಗಳಿಗೆ ಈ ರೀತಿಯಾಗಿ ಹೇಳಲ್ಪಟ್ಟಿದೆ.



CC-0. Jangamwadi Math Collection, Varanasi. An eGangotri Initiative

**ಮಹಾಲಿಂಗ ಲಕ್ಷಣ:**— ಜನನಮರಣರಹಿತ, ನಿರ್ದೋಷ, ವ್ಯಾಪಕ, ಅದ್ವಿತೀಯ, (ತನ್ನಂತೆ ಬೇರೆ ವಸ್ತು ಇಲ್ಲದ್ದು) ಸೂಕ್ಷ್ಮ, ಪರಾತ್ಪರ, ಭವರೋಗಮುಕ್ತ, ಅಗಮ್ಯ, ಭಕ್ತಿಯಿಂದ ತಿಳಿಯಲಿಕ್ಕೆ ಯೋಗ್ಯವಾದ, ಚೈತನ್ಯಾತ್ಮಕವಾದ, ಶಿವತತ್ತ್ವವೇ ಚಿಚ್ಛಕ್ತಿಯುಕ್ತವಾದ ಮಹಾಲಿಂಗ ವೆಂದು ಹೇಳಲ್ಪಡುವುದು.

**ಪ್ರಸಾದಲಿಂಗ ಲಕ್ಷಣ:**—ಪರಂಜ್ಯೋತಿಸ್ವರೂಪ, ನಿತ್ಯ, ಅಖಂಡ, ಇಂದ್ರಿಯಗಳಿಗೆ ದೂರಾದ, ಜ್ಞಾನಗಮ್ಯವಾದ, ಮೋಕ್ಷಸ್ವರೂಪವಾದ, ಜಗತ್ತಿನ ಪರಿಣಾಮಕ್ಕೆ ಹೇತುವಾದ, ಸಾದಾಖ್ಯತತ್ತ್ವಗಳಿಗಾಶ್ರಯವಾದ, ಪರಾಶಕ್ತಿಯಿಂದ ಕೂಡಿದ, ನಿರುಪಾಧಿಕವಾದ ಲಿಂಗವನ್ನು ಪ್ರಸಾದಲಿಂಗವೆಂದೆನ್ನುವರು.

**ಜಂಗಮಲಿಂಗ ಲಕ್ಷಣ:**— ಜ್ಯೋತಿಸ್ವರೂಪವೂ ಬಹಿರಂತರಂಗಗಳಲ್ಲಿ ವ್ಯಾಪಕವೂ ಪುರುಷ ಸ್ವರೂಪವೂ ಅಮೂರ್ತತತ್ತ್ವಾಶ್ರಯವೂ ಆದಿಶಕ್ತಿಸಮೇತವೂ, ಮನೋಮಾತ್ರ ಗೋಚರವೂ ಆದ ಲಿಂಗವೇ ಜಂಗಮಲಿಂಗವು.

**ಶಿವಲಿಂಗ ಲಕ್ಷಣ:**— ಜ್ಞಾನಕಲಾಯುಕ್ತ, ಅತ್ಯಂತ ಶೋಭಾಯಮಾನ, ಪ್ರಕಾಶ ಮಯ, ಏಕಮುಖ, ಅತ್ಯಂತ ಶಾಂತ, ಇಚ್ಛಾಶಕ್ತಿಯಿಂದೊಡಗೂಡಿದ ಮೂರ್ತಸಾದಾಖ್ಯತತ್ತ್ವಕ್ಕೆ ಆಶ್ರಯವಾದ, ಅಹಂಕಾರಗಮ್ಯವಾದ ಲಿಂಗವೇ ಶಿವಲಿಂಗವೆನಿಸುವುದು.

**ಗುರುಲಿಂಗ ಲಕ್ಷಣ:**—ತೇಜೋನಿಧಿಯೂ ಪರಮಸುಖಸಾಗರವೂ ಸಕಲೋಪದೇಶ ವಿಧಿಕರ್ತೃವೂ ಜ್ಞಾನಶಕ್ತಿಯುಕ್ತವೂ ಕರ್ತೃಸಾಧಾಖ್ಯತತ್ತ್ವಕ್ಕೆ ಆಶ್ರಯವೂ ಜ್ಞಾನಗಮ್ಯವೂ ಆದುದೇ ಗುರುಲಿಂಗವು.

**ಆಚಾರಲಿಂಗ ಲಕ್ಷಣ:**— ಕರ್ಮಾತ್ಮಕವೂ ಸಕಲತತ್ತ್ವಗಳಿಗಾಧಾರವೂ ನಿವೃತ್ತಿ ಮಾರ್ಗೋನ್ಮುಖವೂ ಕ್ರಿಯಾಶಕ್ತಿಕಲಿತವೂ ಚಿತ್ತಗಮ್ಯವೂ ಆದುದೇ ಆಚಾರಲಿಂಗವಹುದು.

## ಆರು ಲಿಂಗಗಳ ಉತ್ಪತ್ತಿಕ್ರಮ

ಮೊದಲು ಶಿವನೇ ತನ್ನ ಚಿಚ್ಛಕ್ತಿಯ ಸಂಬಂಧದಿಂದ ಮಹಾಲಿಂಗವಾದನು. ಆ ಮಹಾ ಲಿಂಗದ ಉಪಾಸನೆಗೋಸುಗ ಐಕ್ಯಸ್ಥಲವೆಂಬ ಅಂಗಸ್ಥಲವುದಯವಾಯಿತು. ಮಹಾಲಿಂಗ ಸ್ಥಲಗತವಾದ ಪರಾಶಕ್ತಿಯ ಚಲನದಿಂದ ಪ್ರಸಾದಲಿಂಗವುಂಟಾಯಿತು. ಆ ಲಿಂಗದ ಉಪಾಸನೆ ಯನ್ನು ಮಾಡುವುದಕ್ಕಾಗಿ ಶರಣಸ್ಥಲವಾಯಿತು. ಪ್ರಸಾದಲಿಂಗನಿಷ್ಠವಾದ ಆದಿಶಕ್ತಿಯ ಸಾಮ ರ್ಥ್ಯದಿಂದ ಚರಲಿಂಗದ ಪ್ರಾದುರ್ಭಾವವಾಯಿತು. ಆ ಲಿಂಗವನ್ನು ಉಪಾಸಿಸುವುದಕ್ಕಾಗಿ, ಪ್ರಾಣಲಿಂಗಿಸ್ಥಲಾವತರಣವಾಯಿತು. ಜಂಗಮಲಿಂಗವರ್ತಿಯಾದ ಇಚ್ಛಾಶಕ್ತಿಯಿಂದ ಜ್ಯೋತಿ ರ್ಮಯವಾದ ಶಿವಲಿಂಗದ ಆವಿರ್ಭಾವವು ಆ ಶಿವಲಿಂಗೋಪಾಸನದ ಮೂಲಕ ಪ್ರಸಾದಿಸ್ಥಲ ವಾಯಿತು. ಶಿವಲಿಂಗದ ಜ್ಞಾನಶಕ್ತಿ ಸ್ಫುರಣದಿಂದ ಗುರುಲಿಂಗವು ಉದಯವಾಯಿತು. ಅದರ ಉಪಾಸಕರೂಪದಿಂದ ಮಹೇಶ್ವರಸ್ಥಲವು ಉದ್ಭವಿಸಿತು. ಗುರುಲಿಂಗದೊಳಿರ್ದ ಕ್ರಿಯಾಶಕ್ತಿ ಯಿಂದ ಆಚಾರಲಿಂಗವುಂಟಾಯಿತು. ತದುಪಾಸನೆಗಾಗಿ ಭಕ್ತಸ್ಥಲವು ಜನಿಸಿತು. ಈ ರೀತಿಯಾಗಿ ಮಹಾಲಿಂಗ, ಪ್ರಸಾದಲಿಂಗ, ಚರಲಿಂಗ, ಶಿವಲಿಂಗ, ಗುರುಲಿಂಗ, ಆಚಾರಲಿಂಗ ಈ ಆರು ಲಿಂಗಗಳ ಉತ್ಪತ್ತಿಯು ಸೃಷ್ಟಿ ( ಪ್ರವೃತ್ತಿ ) ಮಾರ್ಗದಿಂದುಕ್ತವಾಗಿರುವುದು.



CC-0. Jangamwadi Math Collection, Varanasi. An eGangotri Initiative

## ಅಂಗಸ್ಥಲ ಪ್ರತಿಪಾದನ

ಅಂಗನೆಂದರೆ, ಶಿವನ ಕ್ರಿಯಾ ಶಕ್ತಿಸ್ವರೂಪವಾದ ದೀಕ್ಷೆಯಿಂದ ಪರಿಶುದ್ಧ ( ಅನಾದಿ ಮಲಸಂಬಂಧರಹಿತ )ನಾದ ಜೀವನು. ತಾದೃಶಪರಿಶುದ್ಧನಾದ ಅಂಗನ ಸ್ವರೂಪವನ್ನು ವೀರಶೈವ ಶಾಸ್ತ್ರವು ಇಂತು ಪ್ರತಿಪಾದಿಸುತ್ತಿಹುದು. ಅನಾದ್ಯನಂತವೂ ಜನನಮರಣರಹಿತವೂ ಆದ ಯಾವ ಪರಕ್ಕಿಂತಲೂ ಪರವಾದ ವಸ್ತು (ಮಹಾಲಿಂಗ)ವಿದೆಯೋ ಆ ಪರಾತ್‌ಪರವಸ್ತುವನ್ನು ಮಹಾಭಕ್ತಿ ( ಅದ್ವೈತಭಕ್ತಿ ) ಯಿಂದ ಯಾವ ವಸ್ತುವು ಸೇರುತ್ತಿರುವುದೋ, ಅಂದರೆ ಅದರಲ್ಲಿ ಐಕ್ಯವಾಗು ವುದೋ, ಅದೇ ಅಂಗಸ್ಥಲವೆಂದು ನಿಶ್ಚಿತವಾಗಿದೆ. ಅಂಗವೆಂಬ ಶಬ್ದದಲ್ಲಿ 'ಅಂ' ಎಂಬುದು ಸದ್ರೂಪ ವಾದ ಬ್ರಹ್ಮಪರವೂ ' ಗಂ ' ಎಂಬುದು ಗಚ್ಛತಿ ( ಹೊಂದುತ್ತದೆ ) ಎಂಬ ಅರ್ಥಪ್ರತಿಪಾದಕವೂ ಆಗಿರುವುವು. ಈಎರಡರಿಂದಲೇ " ಅಂಗಂ " ಎಂಬುದು ರೂಪಿಸಲ್ಪಟ್ಟಿರುವುದು. ಅಂದರೆ ಸದ್ರೂಪ ವಾದ ಪರಬ್ರಹ್ಮವನ್ನು ಹೊಂದಿ, ಸಾಮರಸ್ಯರೂಪದಿಂದಿರುವುದೇ ಅಂಗವೆಂದು ಪ್ರಾಜ್ಞರಾದ ಅಂಗ ತತ್ತ್ವವೇತ್ತರ ಮತವಿರುವುದು. ಈ ವಿಷಯದಲ್ಲಿ " ಅನಾದ್ಯಂತಮಜಂ ಲಿಂಗಂ ತತ್ಪರಂ ಪರಮಂ ಪ್ರತಿ | ಯದ್ಗಚ್ಛತಿ ಮಹಾಭಕ್ತ್ಯಾ ತದಂಗಮಿತಿನಿಶ್ಚಿತಂ || ಅಮಿತಿ ಬ್ರಹ್ಮಸನ್ಮಾತ್ರಂ ಗಚ್ಛತೀತಿ ಗಮುಚ್ಯತೇ | ರೂಪ್ಯತೇಽಂಗಮಿತಿಪ್ರಾಜ್ಞೈರಂಗತತ್ತ್ವವಿಚಿಂತಕೈಃ " ಎಂಬ ಶಿವಾಗಮ ವಾಕ್ಯಗಳು ಆಧಾರವಾಗಿರುತ್ತವೆ. ಈ ರೀತಿಯಾದ, ಅಂಗ ಶಬ್ದದ ವ್ಯುತ್ಪತ್ತಿಯಿಂದ, ಅಂಗಲಿಂಗಗಳೆರಡೂ ಶಿವ ಸ್ವರೂಪಗಳಾಗಿರುವುದರಿಂದ ಎರಡಕ್ಕೂ ಭೇದವಿಲ್ಲ. ಬಂಗಾರದಿಂದಾದ ಕಡಗವು, ಕೆಲವು ಕಾಲ ಭೇದದಿಂದ ವ್ಯವಹೃತವಾಗಿದ್ದು, ತದನಂತರ ಬಂಗಾರದ ಸ್ವರೂಪವನ್ನು ಹೊಂದಿಬಿಡುವುದು. ಅಂಗನಾದರೂ ಈ ರೀತಿಯಾಗಿ ಕೆಲವು ಕಾಲ ಭೇದವ್ಯವಹಾರವುಳ್ಳವನಾಗಿದ್ದು, ಬಳಿಕ ಲಿಂಗವನ್ನು ಕೂಡಿ ಲಿಂಗವೇ ತಾನಾಗುವನೆಂಬುದು ಸಿದ್ಧಾಂತವು.

### ಅಂಗಸ್ಥಲ ವಿಭಾಗ

ಲಿಂಗವು ಅಂಗನನ್ನು ತನ್ನೊಳಗೆ ಸಮರಸ ಮಾಡಿಕೊಳ್ಳುವ ಹೇತುವಿನಿಂದ ತ್ರಿವಿಧಾದಿ ವಿಭೇದವನ್ನು ಹೊಂದಿರುವಂತೆ ಅಂಗವಾದರೂ ತಲ್ಲಿಂಗ ಸೇವನೆಯನ್ನು ಮಾಡಿ, ಲಿಂಗಸ್ವರೂಪ ವನ್ನು ಪಡೆಯುವುದಕ್ಕಾಗಿ ತ್ರಿವಿಧಾದಿ ವಿಭೇದವನ್ನು ಹೊಂದುತ್ತಿರುವುದು. ಒಂದನೆಯದು ಯೋಗಾಂಗವು, ಎರಡನೆಯದು ಭೋಗಾಂಗವು, ಮೂರನೆಯದು ತ್ಯಾಗಾಂಗವು. ಶಿವನಲ್ಲಿ ಸಾಮ ರಸ್ಯ ಸುಖವನ್ನು ಹೊಂದುವುದರಿಂದ ಒಂದನೆಯದು ಯೋಗಾಂಗವೆಂದು ಕರೆಯಲ್ಪಡುವುದು. ಶಿವನೊಡನೆ ಭೋಗಿಸುವುದರಿಂದ ಅಂದರೆ ಅಂಗನು "ಸ್ನಾನಮುದ್ವರ್ತನಂ ಚೈವ ವಸ್ತ್ರಂ ಭೂಷಾಶ್ಚ ಚಂದನಂ | ಭಕ್ಷ್ಯಭೋಜ್ಯಾದಿಕಂ ವಾಪಿ ಫಲಂ ಪುಷ್ಪಂ ಚ ಸೌರಭಂ | ಏವಮಾದೀನಿ ವಸ್ತೂನಿ ಶಿವಾಯಾದೌ ನಿವೇದ್ಯ ಚ | ಸ್ವಯಂ ತತೋಽನುಭುಂಜೀತ ಪ್ರಸಾದಗ್ರಾಹಕೋ ಯತಃ " ಎಂಬ ಸೂಕ್ಷ್ಮಾಗಮ ವಚನದಂತೆ ತನ್ನ ಭೋಗವೆಲ್ಲವನ್ನು ಮೊದಲು ಶಿವನಿಗೆ ಸಮರ್ಪಿಸಿ ಬಳಿಕ ಶಿವ ಪ್ರಸಾದರೂಪದಿಂದ ಎರಡನೆಯದು ಭೋಗಾಂಗವೆಂದು ಹೇಳಲ್ಪಡುವುದು. ಅಂಗನು ಗುರುಕೃತ ವಾದ ಶಿವದೀಕ್ಷಾಮೂಲಕ ಶಕ್ತಿಪಾತದಿಂದ ಸಂಸಾರಭ್ರಾಂತಿ (ಆಣವಾದಿ ಮಲತ್ರಯ ಭ್ರಾಂತಿ) ಯನ್ನು ತ್ಯಾಗಮಾಡೋಣದರಿಂದ ಮೂರನೆಯದು ತ್ಯಾಗಾಂಗವೆಂದು ವ್ಯವಹರಿಸಲ್ಪಡುವುದು. ಕಾರಣ, ಸೂಕ್ಷ್ಮ, ಸ್ಥೂಲ ಶರೀರಗಳೂ ನಿದ್ರಾ, ಸ್ವಪ್ನ, ಜಾಗ್ರದವಸ್ಥೆಗಳೂ ಪ್ರಾಜ್ಞ, ತೈಜಸ,



CC-0. Jangamwadi Math Collection, Varanasi. An eGangotri Initiative

ವಿಶ್ವರೆಂಬ ತ್ರಿವಿಧ ಜೀವರೂ ಕ್ರಮವಾಗಿ ಯೋಗಾಂಗ, ಭೋಗಾಂಗ, ತ್ಯಾಗಾಂಗಗಳೆಂದು ಹೇಳಲ್ಪಟ್ಟಿರುವುವು. ಕಾರಣ ಸೂಕ್ಷ್ಮಸ್ಥೂಲಶರೀರಾವಚ್ಛಿನ್ನರಾದ ಪ್ರಾಜ್ಞ, ತೈಜಸ, ವಿಶ್ವರೆಂಬ ಜೀವರಿಗೇ ವೀರಶೈವ ಶಿವಾನುಭಾವಿಗಳು ಕ್ರಮವಾಗಿ ಪರಮಾತ್ಮಾ, ಅಂತರಾತ್ಮಾ, ಜೀವಾತ್ಮಾ ಎಂದು ಹೇಳುವರು.

## ಷಡ್ವಿಧ ಅಂಗಸ್ಥಲಗಳು

ಲಿಂಗಸ್ಥಲದಂತೆ ಮೂರು ಪ್ರಕಾರವಾದ ಅಂಗಸ್ಥಲವಾದರೂ ಪ್ರತ್ಯೇಕವಾಗಿ ಎರಡೆರಡು ಪ್ರಕಾರವಾಗುವದು. ಯೋಗಾಂಗವು "ಐಕ್ಯ, ಶರಣ" ಎಂಬುದಾಗಿಯೂ, ಭೋಗಾಂಗವು "ಪ್ರಾಣಲಿಂಗಿ, ಪ್ರಸಾದಿ" ಎಂಬುದಾಗಿಯೂ, ತ್ಯಾಗಾಂಗವು "ಮಹೇಶ, ಭಕ್ತ" ಎಂಬುದಾಗಿಯೂ, ಒಂದೊಂದರಲ್ಲಿ ಎರಡು ತೆರನಾಗಿಹುದು. ಇವುಗಳಲ್ಲಿ "ಐಕ್ಯ, ಶರಣಸ್ಥಲ"ದ್ವಯವು 'ಕಾರಣ' ಶರೀರಸ್ವರೂಪವಾಗಿಯೂ, ಅಂದರೆ ಕಾರಣಶರೀರಗತನಾದ ಪ್ರಾಜ್ಞಜೀವನಿಗೆ ಆಶ್ರಯವಾಗಿಯೂ, "ಪ್ರಾಣಲಿಂಗಿ, ಪ್ರಸಾದಿ" ಎಂಬೆರಡು ಸ್ಥಲಗಳು, 'ಸೂಕ್ಷ್ಮ' ಶರೀರಸ್ವರೂಪವಾಗಿಯೂ, ಅಂದರೆ ಸೂಕ್ಷ್ಮಶರೀರಗತನಾದ ತೈಜಸಜೀವನಿಗಾಧಾರವಾಗಿಯೂ, "ಮಹೇಶ-ಭಕ್ತ" ಎಂಬ ಸ್ಥಲವೆರಡು 'ಸ್ಥೂಲ' ಶರೀರಸ್ವರೂಪವಾಗಿಯೂ, ಅಂದರೆ ಸ್ಥೂಲಶರೀರಗತನಾದ ವಿಶ್ವಜೀವನಿಗೆ ಆಶ್ರಯವಾಗಿಯೂ ಇರುವವು. ಈ ರೀತಿಯೊಗಿ, ಐಕ್ಯ, ಶರಣ, ಪ್ರಾಣಲಿಂಗಿ, ಪ್ರಸಾದಿ, ಮಹೇಶ, ಭಕ್ತ ಎಂಬುದಾಗಿ ಅಂಗಸ್ಥಲಗಳು, ಆರು ವಿಧವಾಗಿರುವವು.

## ಷಡ್ವಿಧ ಭಕ್ತಿಯು

ಶಿವನ ಸ್ವಪ್ರಕಾಶತಾರೂಪವಾದ ಶಕ್ತಿಯು ಆಚಾರಾದಿ ಷಡ್ವಿಧಲಿಂಗಗತವಾಗಿ ಷಡ್ವಿಧವಾಗಿರುವಂತೆ, ಆ ಸ್ವಪ್ರಕಾಶತಾರೂಪವಾದ ಶಕ್ತಿಯೇ ಅಂಗಗತವಾಗಿ ಭಕ್ತಿಯೆಂದೆನಿಸಿಕೊಂಡು ಆರು ಪ್ರಕಾರವಾಗುವದು. ಜಲವು ಮಧುರಾದಿ ಆರು ರಸಗಳನ್ನು ಸೇರಿ ಅವುಗಳ ಸ್ವರೂಪದಿಂದ ತೋರುವಂತೆ, ಸಾಕ್ಷಾಚ್ಛಿವ ಸ್ವರೂಪಿಣಿಯಾದ ಭಕ್ತಿಯು ಐಕ್ಯಾದಿ ಷಡಂಗಗಳನ್ನು ಹೊಂದಿಕೊಂಡು ತದುಪಾದಿಭೇದದಿಂದ ಷಡ್ವಿಧವಾದ ಆಕಾರದಿಂದ ಭಿನ್ನಭಿನ್ನವಾಗಿ ತೋರುತ್ತಿರುವದು; ಐಕ್ಯಾದಿ ಷಡಂಗಸ್ಥಲಗಳಲ್ಲಿ ಕ್ರಮವಾಗಿ "ಸಮರಸಭಕ್ತಿ, ಆನಂದಭಕ್ತಿ, ಅನುಭವಭಕ್ತಿ, ಅವಧಾನಭಕ್ತಿ, ನೈಷ್ಠಿಕೀಭಕ್ತಿ, ಶ್ರದ್ಧಾಭಕ್ತಿ, ಅಥವಾ ಸದ್ಭಕ್ತಿ" ಎಂಬ ಹೆಸರಿನಿಂದ ಕರೆಯಲ್ಪಡುವದು.

## ಭಕ್ತಿ ಲಕ್ಷಣವು

"ಪೂಜ್ಯೇಷ್ವನುರಾಗೋ ಭಕ್ತಿಃ" "ಮಹಾತ್ಮ್ಯಜ್ಞಾನಪೂರ್ವಸ್ತು ಸುದೃಢಸ್ಸರ್ವತೋಽಧಿಕಃ| ಸ್ನೇಹೋ ಭಕ್ತಿರಿತಿ ಪ್ರೋಕ್ತಸ್ತಯಾ ಮುಕ್ತಿರ್ನ ಚಾನ್ಯಥಾ||" ಎಂಬ ಉಕ್ತಿದ್ವಯದಂತೆ ಪೂಜ್ಯತಮನಾದ ಲಿಂಗಗತವಾದ ಅಂಗನ ಪ್ರೀತಿಯೇ ಭಕ್ತಿಯೆಂದೆನಿಸಿಕೊಳ್ಳುವದು. ಅದು ನಿವೃತ್ತ್ಯುನ್ಮುಖಿಯಾಗಿದ್ದು ಅಂಗನನ್ನು ಸಂಸಾರದಿಂದ ನಿವೃತ್ತನನ್ನು ಮಾಡಿ ಲಿಂಗದಲ್ಲಿ ಸಮರಸವಾಗುವಂತೆ ಮಾಡಿಬಿಡುವದು. ಇದೇ ಆ ಭಕ್ತಿಯ ನೈಜಸ್ವಭಾವವು. "ಶಕ್ತಿಃ ಪ್ರವೃತ್ತಿರಾಖ್ಯಾತಾ ನಿವೃತ್ತಿರ್ಭಕ್ತಿರೀರಿತಾ| ಶಕ್ತ್ಯಾ ಪ್ರಪಂಚಸೃಷ್ಟಿಃ ಸ್ಯಾದ್ಭಕ್ತ್ಯಾ ತದ್ವಿಲಯೋ ಮತಃ" ಎಂಬ ವಾಕ್ಯವು ಈವಿಷಯದಲ್ಲಿ ಪ್ರಮಾಣವಾಗಿರುವದು.



CC-0. Jangamwadi Math Collection, Varanasi. An eGangotri Initiative

## ಷಡ್ವಿಧ ಭಕ್ತಿಯುಕ್ತಗಳಾದ ಷಡಂಗಸ್ಥಲಗಳ ಲಕ್ಷಣವು

ಐಕ್ಯ :— ನಾನು, ನೀನು ಎಂಬ ಭೇದವು ಕೇವಲ ಭ್ರಾಂತಿಮೂಲಕವಾದುದಲ್ಲದೇ ಸತ್ಯವಾದುದಲ್ಲವೆಂದು ತಿಳಿದು ಈ ಭೇದವು ನನ್ನಲ್ಲಿಲ್ಲವೆಂಬ ಶಿವಾದ್ವೈತಭಾವದಿಂದ ಸಮರಸ ಭಕ್ತಿಯ ಸ್ವರೂಪವನ್ನು ಪಡೆಯುವದೇ ಐಕ್ಯಸ್ಥಲ ಲಕ್ಷಣವು.

ಶರಣ :— ಲಿಂಗ ಪತಿ, ನಾನು ಸತಿ, ಎಂಬ ಸತೀಪತಿಭಾವವುಳ್ಳವನಾಗಿ, ಪ್ರಾಪಂಚಿಕ ಸುಖವನ್ನು ತ್ಯಜಿಸಿ ನಿಶ್ಚಿಂತನಾಗಿ ಆನಂದವನ್ನು ಅನುಭವಿಸುತ್ತಿರುವದು ಶರಣಸ್ಥಲ ಲಕ್ಷಣವು.

ಪ್ರಾಣಲಿಂಗಿ :— ಪ್ರಾಣೇಂದ್ರಿಯಾದಿಗಳಲ್ಲಿ ನಾನು, ನನ್ನದೆಂಬ ಭ್ರಮಜನ್ಯವಾದ ಮೋಹವನ್ನು ಬಿಟ್ಟು, ಇದೆಲ್ಲವೂ ಕೇವಲ ಲಿಂಗರೂಪವಾದುದೆಂದು ತಿಳಿದು ತದೇಕಾಯತ್ತಚಿತ್ತ ನಾಗಿರುವದೇ ಪ್ರಾಣಲಿಂಗಿಯ ಲಕ್ಷಣವು.

ಪ್ರಸಾದಿ :— ತಾನು ಅನುಭವಿಸುವ ಪ್ರತಿಯೊಂದು ಪದಾರ್ಥವನ್ನು ಮೊದಲು ಲಿಂಗಕ್ಕರ್ಪಿಸಿ, ಬಳಿಕ ಅದೆಲ್ಲವನ್ನು ಅವಧಾನ ಭಕ್ತಿಯಿಂದ ಲಿಂಗಪ್ರಸಾದರೂಪವಾಗಿ ಸ್ವೀಕರಿಸು ವದೇ ಪ್ರಸಾದಿಸ್ಥಲ ಸ್ವರೂಪವು.

ಮಹೇಶ :— ಗುರು, ಲಿಂಗ, ಜಂಗಮತ್ರಯವು ಸಾಕ್ಷಾಚ್ಛಿವ ಸ್ವರೂಪವಲ್ಲದೇ ಬೇರೆ ಯಲ್ಲವೆಂದು ತಿಳಿದು ಅದರಲ್ಲಿ ನಿಷ್ಠಾ ಭಕ್ತಿಯಿಂದಿರುವದೇ ಮಹೇಶಸ್ಥಲ ಲಕ್ಷಣವು.

ಭಕ್ತ :— ಶರೀರಪ್ರಾಣಾದಿವಸ್ತುಜಾತವು ಸತ್ಯವೆಂಬಂತೆ ಭಾಸವಾಗುತ್ತಿದ್ದರೂ ಇದೆ ಲ್ಲವೂ ನಶ್ವರವೆಂದು ಭಾವಿಸಿ, ಅಲ್ಲಿಂದ ನಿವೃತ್ತಿಗೊಳಿಸಿದ ಚಿತ್ತವನ್ನು, ಸದ್ಭಕ್ತಿ ಕ್ರಿಯಾಚರಣದಲ್ಲಿ ನೆಲೆಗೊಳಿಸುವದೇ ಭಕ್ತಸ್ಥಲ ಲಕ್ಷಣವು.

ಈ ಪ್ರಕಾರವಾಗಿ ಶಿವತೇಜಸ್ಸಿನಿಂದ ಕೂಡಿದ ಷಡಾಶ್ರಮಿಗಳಾದ ಐಕ್ಯಾದಿ ಭಕ್ತಾಂತ ವಾದ ಶುದ್ಧಜೀವರ ಪೃಥಕ್ಕಾದ ಆಚಾರಸ್ವರೂಪವು, ಮಗ್ಗಿಮಾಯಿದೇವಕೃತ ಶಿವಾನುಭವ ಸೂತ್ರದ ಚತುರ್ಥಾಧಿಕರಣದಲ್ಲಿ ಉಕ್ತವಾಗಿರುವದು. ಜಿಜ್ಞಾಸುಗಳು ಅಲ್ಲಿ ಕಂಡುಕೊಳ್ಳಬಹುದು.

## ಆತ್ಮಾದಿ ಷಡಂಗಗಳ ಉತ್ಪತ್ತಿ

ಆತ್ಮನಿಂದ ಆಕಾಶವೂ ಆಕಾಶದಿಂದ ವಾಯುವೂ ವಾಯುವಿನಿಂದ ಅಗ್ನಿಯೂ ಅಗ್ನಿ ಯಿಂದ ಜಲವೂ ಜಲದಿಂದ ಭೂಮಿಯೂ ಜನಿಸಿದವು. “ಆತ್ಮನಾಕಾಶಸಂಭೂತಿರಾಕಾಶಾ ದ್ವಾಯುಸಂಭವಃ। ವಾಯೋರಗ್ನಿಸಮುತ್ಪತ್ತಿರಗ್ನೇರಾಪ ಉದಾಹೃತಾಃ॥ ಅದ್ಭ್ಯಸ್ತು ಪೃಥ್ವೀಸಂಭೂ ತಿರ್ಲಕ್ಷಣೈಕ್ಯಪ್ರಭಾವತಃ। ಐಕ್ಯಸ್ಥಲಾದಿಭಕ್ತಾಂತಸ್ಥಲಸಂಭೂತಿರೀರಿತಾ” ಇತ್ಯಾದಿ ಶಿವಾಗಮ ವಚನಗಳು ಈ ಮಾತಿನಲ್ಲಿ ಪ್ರಮಾಣವಾಗಿರುವವು. ಈ ಆತ್ಮಾದಿ ಭೂಮ್ಯಂತವಾದ ಆರುತತ್ತ್ವ ಗಳು ಐಕ್ಯಾದಿಭಕ್ತಾಂತವಾದ ಆರು ಸ್ಥಲಗಳಿಗೆ ಅಂಗವಾಗಿರುವವು. ಹೇಗಂದರೆ, ಐಕ್ಯಸ್ಥಲಕ್ಕೆ ಆತ್ಮಾಂಗವು, ಶರಣಸ್ಥಲಕ್ಕೆ ಆಕಾಶಾಂಗವು, ಪ್ರಾಣಲಿಂಗಿಸ್ಥಲಕ್ಕೆ ವಾಯ್ವಂಗವು, ಪ್ರಸಾದಿಸ್ಥಲಕ್ಕೆ ಅಗ್ನ್ಯಂಗವು. ಮಹೇಶ್ವರಸ್ಥಲಕ್ಕೆ ಜಲಾಂಗವು, ಭಕ್ತಸ್ಥಲಕ್ಕೆ ಭೂಮ್ಯಂಗವು— ಈ ರೀತಿಯಾಗಿಹವು.



CC-0. Jangamwadi Math Collection, Varanasi. An eGangotri Initiative

ಈ ಐಕ್ಯಾದಿ ಭಕ್ತಾಂತವಾದ ಆರು ಸ್ಥಲಗಳಲ್ಲಿ ಮೊದಲಿನ ಮೂರು ಸ್ಥಲಗಳು ಅಂದರೆ-ಭಕ್ತ, ಮಹೇಶ, ಪ್ರಸಾದಸ್ಥಲಗಳು ಕ್ರಿಯಾತ್ಮಕವಾಗಿಯೂ ಉಳಿದ ಮೂರು ಸ್ಥಲಗಳು ಅಂದರೆ-ಪ್ರಾಣಲಿಂಗಿ, ಶರಣ, ಐಕ್ಯಸ್ಥಲಗಳು ಜ್ಞಾನಾತ್ಮಕವಾಗಿಯೂ ಇರುವವು. ಭಕ್ತ, ಮಹೇಶ, ಪ್ರಸಾದಿ ಸ್ಥಲಗಳಲ್ಲಿ ಕ್ರಿಯೆಯು ಪ್ರಧಾನವಾಗಿದ್ದು ಜ್ಞಾನವು ಗೌಣ (ತದಂಗ) ವಾಗಿರುವದರಿಂದ ಭಕ್ತಾದಿ ಮೂರು ಸ್ಥಲಗಳು ಕ್ರಿಯಾತ್ಮಕವೆಂದು ಹೇಳಲ್ಪಡುವವು. ಪ್ರಾಣಲಿಂಗಿ, ಶರಣ, ಐಕ್ಯಸ್ಥಲಗಳಲ್ಲಿ ಜ್ಞಾನವು ಪ್ರಧಾನವಾಗಿದ್ದು, ಕ್ರಿಯೆಯು ಗೌಣ (ತದಂಗ)ವಾಗಿರುವದರಿಂದ, ಪ್ರಾಣಲಿಂಗಿ, ಶರಣ, ಐಕ್ಯಸ್ಥಲಗಳು ಜ್ಞಾನಾತ್ಮಕವೆಂದು ಹೇಳಲ್ಪಡುವವು. ಈ ರೀತಿಯಾಗಿ ಭಕ್ತಾದ್ಯೈಕ್ಯಾಂತವಾದ ಆರು ಸ್ಥಲಗಳಲ್ಲಿಯೂ ಜ್ಞಾನಕ್ರಿಯೆಗಳ ಸಮಾವೇಶಕ್ಕವಕಾಶವಿರುವದರಿಂದ ವೀರಶೈವಮತ ಸಮ್ಮತವಾದ ಸಮಸಮುಚ್ಚಯವಾದವು ನಿರ್ಬಾಧವಹುದು. ಈ ಪ್ರಕಾರವಾಗಿ ಲಿಂಗಾಂಗಸ್ಥಲ ಗಳ ಭೇದಾದಿಗಳು ಪ್ರವೃತ್ತಿಮಾರ್ಗದಿಂದ ವೀರಶೈವಶಾಸ್ತ್ರದಲ್ಲಿ ಪ್ರತಿಪಾದಿತವಾಗಿರುವದು.

## ಲಿಂಗಮುಖಗಳು

ಹೃದಯ, ಶ್ರೋತ್ರ, ತ್ವಕ್, ಚಕ್ಷು, ರಸನಾ, ಘ್ರಾಣ- ಇವು ಲಿಂಗಮುಖಗಳೆಂದು ಹೇಳಲ್ಪಟ್ಟಿರುವವು. ಇವುಗಳಲ್ಲಿ ಹೃದಯವು ಮಹಾಲಿಂಗ ಮುಖವಾಗಿಯೂ, ಶ್ರೋತ್ರವು ಪ್ರಸಾದ ಲಿಂಗಮುಖವಾಗಿಯೂ ತ್ವಕ್ಕು ಜಂಗಮಲಿಂಗಮುಖವಾಗಿಯೂ, ಚಕ್ಷುವು ಶಿವಲಿಂಗಮುಖವಾಗಿಯೂ ರಸನೆಯು ಗುರುಲಿಂಗಮುಖವಾಗಿಯೂ, ಘ್ರಾಣವು ಆಚಾರಲಿಂಗಮುಖವಾಗಿಯೂ ಇರುವವು. "ಘ್ರಾಣಸ್ಯ ಘ್ರಾಣಮಾಚಾರಲಿಂಗಸ್ಯ ಮುಖಮುಚ್ಯತೇ | ಜಿಹ್ವಾಯಾಶ್ಚ ತಥಾ ಜಿಹ್ವಾ ಗುರುಲಿಂಗಮುಖಂ ಭವೇತ್|| ಚಕ್ಷುಷಶ್ಚ ತಥಾ ಚಕ್ಷುಶ್ಶಿವಲಿಂಗಮುಖಂ ಭವೇತ್| ತ್ವಚಸ್ತ್ವಕ್ಚರ ರೂಪಸ್ಯ ಲಿಂಗಸ್ಯ ಮುಖಮುಚ್ಯತೇ|| ಮುಖಂ ಪ್ರಸಾದಲಿಂಗಸ್ಯ ಶ್ರೋತ್ರಂ ಶ್ರೋತ್ರಸ್ಯ ಕಥ್ಯತೇ| ಹೃದಯಂ ಹೃದಯಸ್ಯೈವ ಮಹಾಲಿಂಗಮುಖಂ ಭವೇತ್ || ಎಂಬ ವಾಕ್ಯಗಳು ಈ ವಿಚಾರವನ್ನು ಪುಷ್ಟೀಕರಿಸುತ್ತವೆ.

## ಷಡಂಗ ಹಸ್ತಗಳು

ಭಕ್ತಾದಿ ಐಕ್ಯಾಂತವಾದ ಷಡಂಗಸ್ಥಲಗಳಲ್ಲಿ, ಆಚಾರಾದಿಲಿಂಗಗಳ ಅರ್ಚನೆಗೆ ಸಾಧನ ಗಳಾದ ಷಡ್ವಿಧಹಸ್ತಗಳು ಈ ರೀತಿಯಾಗಿ ಸ್ಥಲಕ್ರಮದಿಂದ ಹೇಳಲ್ಪಟ್ಟಿರುವವು. ಸುಚಿತ್ತವು ಭಕ್ತನಿಗೂ, ಸುಬುದ್ಧಿಯು ಮಹೇಶ್ವರನಿಗೂ, ನಿರಹಂಕಾರವು ಪ್ರಸಾದಿಗೂ ಸುಮನಸ್ಸು ಪ್ರಾಣ ಲಿಂಗಿಗೂ, ಸುಜ್ಞಾನವು ಶರಣನಿಗೂ ಸದ್ಭಾವವು ಐಕ್ಯನಿಗೂ ಹಸ್ತಗಳಾಗಿರುವವು.

## ಅಂಗ ಅಥವಾ ಶುದ್ಧಜೀವ

ವೀರಶೈವ ಶಾಸ್ತ್ರದಲ್ಲಿ ಅಂಗವೆಂದರೆ ಶುದ್ಧಜೀವವೆಂದು ಹೆಸರು. ಗುರುಕೃಪಾಲಬ್ಧವಾದ ದೀಕ್ಷೆಯಿಂದ ಆಣವಾದಿಮಲತ್ರಯವಳಿದುಳಿದ ಜೀವನೇ ಶುದ್ಧಜೀವನೆನಿಸುವನು. ಇವನು "ಸೋಯಮಾತ್ಮಾ ಸ್ವಯಂ ಸಾಕ್ಷಾಚ್ಛಿವಸ್ಯಾಂಶೋಪಿ ತತ್ತ್ವತಃ" ಎಂಬುಕ್ತಿಯಂತೆ ಸಾಕ್ಷಾತ್ ಶಿವಸ್ವರೂಪನಾಗಿರುವನು. ಇವನೇ "ಶಿವಸ್ಯೈವ ಶಿವೋಪಾಸ್ತಿಃ" ಎಂಬಂತೆ ಶಿವೋಪಾಸನೆಗೆ ಅರ್ಹ ನಾಗಿರುವನಲ್ಲದೆ ಆಣಾವಾದಿಮಲತ್ರಯದೋಷದೂಷಿತನಾದ ಅಶುದ್ಧಜೀವನು ಅರ್ಹನಾಗಿ



CC-0. Jangamwadi Math Collection, Varanasi. An eGangotri Initiative

ರುವದಿಲ್ಲ; ಅಂದರೆ ಅದೀಕ್ಷಿತನಾದ ಜೀವನು ಶಿವೋಪಾಸನೆಯನ್ನು ಮಾಡಿ ಶಿವಸಾಯುಜ್ಯರೂಪವಾದ ಮುಕ್ತಿಯನ್ನು ಹೊಂದಲಾರನೆಂಬಭಿಪ್ರಾಯವು.

## ಮಲತ್ರಯ

ಆಣವಮಲ, ಮಾಯಾಮಲ, ಕಾರ್ಮಿಕಮಲವೆಂದು ಮಲಗಳು ಮೂರುತೆರನಾಗಿಹವು. ಶಿವನಲ್ಲಿರುವ ಇಚ್ಛಾ, ಜ್ಞಾನ, ಕ್ರಿಯಾಶಕ್ತಿಗಳು ಸಂಕುಚಿತಗಳಾಗಿ ತ್ರಿಮಲಗಳಾಗುವವೆಂದು ಶಿವಾಗಮಗಳ ಹೇಳಿಕೆಯಿದೆ. ಇವುಗಳಿಂದಾವೃತನಾದ ಶಿವನೇ ಜೀವನೆಂದು ಕರೆಯಲ್ಪಡುವನು.

## ಆಣವಮಲ

ನಾನು ಸರ್ವಾತ್ಮಕನು ಪರಿಪೂರ್ಣನು ಎಂಬ ವೃತ್ತಿಗೆ ಹೇತುವಾದ, ಶಿವನ ಸಂಕಲ್ಪಾತ್ಮಕವಾದ ಇಚ್ಛಾಶಕ್ತಿಯು ಸಂಕುಚಿತವಾಗಿ, ಆತ್ಮನ ಸಂಸಾರಕ್ಕೆ ಕಾರಣಭೂತವಾಗಿ ಅವಿದ್ಯೆ ಎಂದೆನಿಸಿಕೊಂಡು, ಜೀವನಿಗೆ ಕಾರಣಶರೀರರೂಪದಿಂದ ಒಂದನೆಯ ಆವರಣವಾಗಿಹುದು. ಇದು ಆತ್ಮನಿಗೆ ನಾನು ಶಿವನಲ್ಲವೆಂಬ ಬುದ್ಧಿಯನ್ನೂ, ಅನಾತ್ಮಗಳಾದ ದೇಹಾದಿಗಳಲ್ಲಿ ನಾನೆಂಬ ಬುದ್ಧಿಯನ್ನೂ ಉಂಟುಮಾಡಿ ಆತ್ಮನನ್ನು ಅಣುರೂಪನನ್ನಾಗಿ ಮಾಡಿಬಿಡುವದು. ತತ್ಪ್ರಯುಕ್ತ ಇದಕ್ಕೆ ಆಣವ ಮಲವೆಂದು ಕರೆಯುವರು.

## ಮಾಯಾಮಲ

ಶಿವನ ಜ್ಞಾನಶಕ್ತಿಯು ಸಂಕೋಚವನ್ನು ತಾಳಿ ಆತ್ಮನಲ್ಲಿ ಸರ್ವಜ್ಞತೆಗೆ ಪ್ರತಿಯಾಗಿ ಕಿಂಚಿಜ್ಞತೆಯನ್ನು ಹುಟ್ಟಿಸಿ ಮಾಯಾಮಲವೆನಿಸಿಕೊಂಡಿಹುದು. ಇದು ಸೂಕ್ಷ್ಮಶರೀರರೂಪದಿಂದ ಜೀವನಿಗೆ ಎರಡನೆಯ ಆವರಣವಾಗಿಹುದು.

## ಕಾರ್ಮಿಕಮಲ

ಶಿವಗತವಾದ ಕ್ರಿಯಾಶಕ್ತಿಯು ಸಂಕುಚಿತವಾಗಿ,ಸರ್ವಕರ್ತೃತ್ವಕ್ಕೆ ಅನ್ಯವಾದ ಕಿಂಚಿತ್ ಕರ್ತೃತ್ವವನ್ನು ಅವಲಂಬಿಸಿ, ಜೀವನಿಗೆ ಸ್ಥೂಲಶರೀರರೂಪದಿಂದ ಮೂರನೆಯ ಆವರಣವಾಗಿಹುದು. ಇದರಿಂದ ಜೀವನು ಪುಣ್ಯಪಾಪಗಳನ್ನು ಮಾಡುತ್ತಾ ಅಹಂ (ನಾನು) ಸುಖೀ, ಅಹಂ (ನಾನು) ದುಃಖೀ ಎಂದೆಂಬ ವ್ಯವಹಾರವುಳ್ಳವನಾಗುವನು. ಆದುದರಿಂದ ಇದಕ್ಕೆ ಕಾರ್ಮಿಕ ಮಲವೆಂದೆನ್ನುವರು. ಈ ಮೂರು ಮಲಗಳ ನಿವೃತ್ತಿಯು (ಬಿಡುಗಡೆಯು) ಗುರುಕೃತವಾದ ಶಿವದೀಕ್ಷೆಯಿಂದುಂಟಾಗುನದಲ್ಲದೆ ಬೇರೊಂದುಪಾಯದಿಂದಾಗಲಾರದು. "ತತ್ತ್ವೈರೇಭಿರ್ನಿಬದ್ಧಾತ್ಮಾ ಸರ್ವಧರ್ಮೈಶ್ಚ ಸಂಯುತಃ। ನಾನ್ಯೇನ ಶಕ್ಯತೇ ಮೋಕ್ತುಂ ಮುಕ್ತ್ವಾ ದೀಕ್ಷಾಂ ಶಿವಾತ್ಮಿಕಾಂ" ಎಂಬ ಸರ್ವಜ್ಞಾನೋತ್ತರ ವಾಕ್ಯವು ಈ ವಾದವನ್ನು ಸಮರ್ಥನಮಾಡುತ್ತದೆ.

## ದೀಕ್ಷಾ ಲಕ್ಷಣ

"ದೀಯತೇ ಜ್ಞಾನಸಂಬಂಧಃ ಕ್ಷೀಯತೇ ಚ ಮಲತ್ರಯಂ। ದೀಯತೇ ಕ್ಷೀಯತೇ ಯಸ್ಮಾತ್ಸಾ ದೀಕ್ಷೇತಿ ನಿಗದ್ಯತೇ" ಎಂಬ ಶಿವಾನುಭವ ಸೂತ್ರಾನುಸಾರವಾಗಿ ಜೀವಗತವಾದ



CC-0. Jangamwadi Math Collection, Varanasi. An eGangotri Initiative

ಮಲತ್ರಯವನ್ನು ಕಳೆದು ಲಿಂಗತ್ರಯವನ್ನು ಕೊಡುವ ಶಿವನ ಶಕ್ತಿವಿಶೇಷವೇ ದೀಕ್ಷೆಯೆನಿಸುವದು. "ಅನಯೋಃ ಶಾಸನೇ ಸಿದ್ಧಾ ದೀಕ್ಷಾ ಕ್ಷಪಣದಾನಯೋಃ" ಎಂದು ಮತಂಗಪಾರಮೇಶ್ವರ ವಾಕ್ಯವಾದರೂ ಆತ್ಮಗತವಾದ ಪಶುತ್ವವನ್ನು ಕೆಡಿಸುವ ಶಿವತ್ವವನ್ನು ಕೊಡುವ ಎರಡು ಕಾರ್ಯಗಳಲ್ಲಿ ಶಿವನಿಗೆ ಕರಣರೂಪದಿಂದ ಸಿದ್ಧವಾಗಿರುವ ಅನುಗ್ರಹಾತ್ಮಕ ವ್ಯಾಪಾರದಿಂದ ಕೂಡಿರುವ ಕ್ರಿಯಾಶಕ್ತಿಯೇ ದೀಕ್ಷೆ ಎಂದು ಪ್ರತಿಪಾದಿಸುತ್ತಿಹುದು. ಇಂತು ಶಿವನ ಕ್ರಿಯಾಶಕ್ತಿಸ್ವರೂಪವಾದ ದೀಕ್ಷೆಯು ವೇಧಾ, ಮನು (ಮಂತ್ರ), ಕ್ರಿಯಾಭೇದದಿಂದ ತ್ರಿವಿಧವಾಗಿರುವದು. ಗುರುವು ಈ ವೇಧಾದೀಕ್ಷಾತ್ರಯದಿಂದಲೇ ಆಣವಾದಿಮಲತ್ರಯವನ್ನು ನಿವಾರಣಮಾಡಿ ಕಾರಣಾದಿ ಶರೀರತ್ರಯದಲ್ಲಿ ಭಾವಾದಿಲಿಂಗತ್ರಯವನ್ನು ಸಂಬಂಧಗೊಳಿಸುವನು. ಆಗ ಮಲತ್ರಯಾತ್ಮಕಗಳಾದ ಶರೀರಗಳು ನಷ್ಟವಾಗಿ, ಲಿಂಗರೂಪ ಶರೀರಗಳಾಗುವವು. ಈಪ್ರಕಾರ ಲಿಂಗರೂಪ ಶರೀರಾವಚ್ಛಿನ್ನನಾದ ಜೀವನು ಅಂಗಪದವಾಚ್ಯನಾಗುವನು. ಆಗ ಅಂಗನು ಶಿಖಿಕರ್ಪುರದಂತೆ ಲಿಂಗದಲ್ಲಿ ಸಮರಸವಾಗುವನು. ಇದೇ ವೀರಶೈವ ಶಾಸ್ತ್ರಸಮ್ಮತವಾದ ಮೋಕ್ಷವು.

ಷಟ್‌ಸ್ಥಲಗಳ ಲಿಂಗಸಮರ್ಚನ ಮತ್ತು ಪ್ರಸಾದ ಸೇವನಕ್ರಮ ಭವತಾರಕನಾದ ಸದ್ಗುರುವಿನಿಂದ ಅನುಗ್ರಹಿತವಾದ ದೀಕ್ಷಾಪ್ರಭಾವದಿಂದ ಆಣವಾದಿಮಲತ್ರಯವನ್ನು ನೀಗಿ, ಅಂಗಪದ ವಾಚ್ಯನಾದ ವೀರಶೈವನು ಭಕ್ತಸ್ಥಲಾಪನ್ನನಾಗಿ ಪೃಥ್ವ್ಯಂಗದಲ್ಲಿ ನಿಂತು ಕ್ರಿಯಾಶಕ್ತಿಯುಕ್ತವಾದ ಆಚಾರಲಿಂಗವನ್ನು ಶ್ರದ್ಧಾಭಕ್ತಿಯಿಂದರ್ಚಿಸಿ, ಸುಚಿತ್ತಹಸ್ತದಿಂದ ಗಂಧಪದಾರ್ಥವನ್ನು ಗ್ರಹಿಸಿ ನ ಕಾರಮಂತ್ರವನ್ನು ಸ್ಮರಿಸುತ್ತಾ ಘ್ರಾಣೇಂದ್ರಿಯ ಮುಖದಲ್ಲಿ ಸಮರ್ಪಿಸಿ, ಬಳಿಕ ಆಚಾರಲಿಂಗದಾ ಗಂಧಪ್ರಸಾದವನ್ನು ಭೋಗಿಸಿ ಪರಿಣಾಮಿಯಾಗುವನು. ಮಹೇಶ್ವರಸ್ಥಲಾಪನ್ನನಾಗಿ ಜಲಾಂಗದಲ್ಲಿ ನಿಷ್ಠಾಭಕ್ತಿಯಿಂದ ಜ್ಞಾನಶಕ್ತಿಯಿಂದ ಕೂಡಿದ ಗುರುಲಿಂಗವನ್ನು ಪೂಜಿಸಿ ಸುಬುದ್ಧಿಹಸ್ತದಿಂದ ರಸಪದಾರ್ಥವನ್ನು ಧರಿಸಿ ಮ ಕಾರ ಪ್ರಣವವನ್ನು ಧ್ಯಾನಿಸುತ್ತಾ ರಸನೇಂದ್ರಿಯ ಮುಖದಲ್ಲಿ ಅರ್ಪಿಸಿ ತದನಂತರ ಆ ಗುರುಲಿಂಗದ ರಸಪ್ರಸಾದವನ್ನುಂಡು ಸುಖಿಸುವನು. ಪ್ರಸಾದಿಸ್ಥಲಾಪನ್ನನಾದ ವೀರಶೈವನು ಅಗ್ನ್ಯಂಗದಲ್ಲಿ ಇಚ್ಛಾಶಕ್ತಿಸಮೇತವಾದ ಶಿವಲಿಂಗವನ್ನು ಸಾವಧಾನ ಭಕ್ತಿಯಿಂದ ಯಜಿಸಿ ನಿರಹಂಕಾರಹಸ್ತದಿಂದ ರೂಪಪದಾರ್ಥವನ್ನು ಹಿಡಿದು ಶಿ ಕಾರಮನುವನ್ನು ಸ್ಮರಿಸುತ್ತಾ ನೇತ್ರೇಂದ್ರಿಯ ಮುಖದಲ್ಲಿ ನಿವೇದಿಸಿದನಂತರ ಶಿವಲಿಂಗದ ರೂಪಪ್ರಸಾದವನ್ನು ಸವಿದು ಸುಖಿಸುತ್ತಿಹನು. ಪ್ರಾಣಲಿಂಗಿಸ್ಥಲಗತನಾದ ವೀರಶೈವನು ವಾಯ್ವಂಗದಲ್ಲಿ ಆದಿಶಕ್ತಿಸಹಿತವಾದ ಜಂಗಮಲಿಂಗವನ್ನು ಅನುಭವಭಕ್ತಿಯಿಂದ ಆರಾಧಿಸಿ ಸುಮನೋಹಸ್ತದಿಂದ ಸ್ಪರ್ಶಪದಾರ್ಥವನ್ನು ಕೈಕೊಂಡು ವಾ ಕಾರಬ್ರಹ್ಮವನ್ನು ನೆನೆಯುತ್ತಾ ತ್ವಗೀಂದ್ರಿಯ ಮುಖದಲ್ಲಿ ಕೊಟ್ಟು ಬಳಿಕಾಜಂಗಮಲಿಂಗದ ಸ್ಪರ್ಶಪ್ರಸಾದವನ್ನು ಸೇವಿಸಿ ಸುಖಿಯಾಗುವನು. ಶರಣಸ್ಥಲದ ವೀರಶೈವನು ವ್ಯೋಮಾಂಗದಲ್ಲಿ ಪರಾಶಕ್ತಿಸಹಿತವಾದ ಪ್ರಸಾದಲಿಂಗವನ್ನು ಆನಂದಭಕ್ತಿಯಿಂದ ಸೇವಿಸಿ ಸುಜ್ಞಾನಹಸ್ತದಿಂದ ಶಬ್ದಪದಾರ್ಥವನ್ನವಲಂಬಿಸಿ ಯ ಕಾರಮಂತ್ರವನ್ನು ಧ್ಯಾನಿಸುತ್ತಾ ಶ್ರೋತ್ರೇಂದ್ರಿಯ ಮುಖದಲ್ಲಿ ಸಮರ್ಪಿಸಿ ಆ ಪ್ರಸಾದಲಿಂಗದ ಶಬ್ದಪ್ರಸಾದವನ್ನು ಸಭೋಗಿಸಿ ಪರಿಣಾಮಿಯಾಗುವನು. ಐಕ್ಯಸ್ಥಲದ ವೀರಶೈವನು ಆತ್ಮಾಂಗದಲ್ಲಿ ಚಿಚ್ಛಕ್ತಿಯುಕ್ತವಾದ ಮಹಾಲಿಂಗವನ್ನು ಸಮರಸಭಕ್ತಿಯಿಂದ ಪೂಜಿಸಿ ಸದ್ಭಾವಹಸ್ತದಿಂದ ತೃಪ್ತಿಪದಾರ್ಥವನ್ನು ಪರಿಗ್ರಹಿಸಿ ಪ್ರಣವಮಂತ್ರವನ್ನು ಸ್ಮರಿಸುತ್ತಾ ಮನೋಮುಖದಲ್ಲಿ ಅರ್ಪಿಸಿ, ಮಹಾಲಿಂಗದ ತೃಪ್ತಿಪ್ರಸಾದ



CC-0. Jangamwadi Math Collection, Varanasi. An eGangotri Initiative

ವನ್ನು ಸವಿದು ಶಿವಸುಖಸಾಗರದಲ್ಲಿ ಮಗ್ನನಾಗುವನು. ಈ ರೀತಿಯಾಗಿ ಷಟ್‌ಸ್ಥಲ ಶಿವಸಮರ್ಚನ, ಶಿವಪ್ರಸಾದ ಸೇವನಕ್ರಮವು ವೀರಶೈವ ಶಾಸ್ತ್ರದಲ್ಲಿ ಉಕ್ತವಾಗಿರುವದು.

## ಅಂಗಲಿಂಗ ಸಾಮರಸ್ಯ

ಭಕ್ತಾಂಗವಾದ ಪೃಥ್ವಿಯು ಭಕ್ತನಲ್ಲಿ ಲಯವಾಗುವದು. ಮಹೇಶ್ವರಸ್ಥಲಾಂಗವಾದ ಜಲವು ಮಹೇಶ್ವರನಲ್ಲಿ ಸಮರಸವಾಗುವದು. ಪ್ರಸಾದಿಸ್ಥಲಾಂಗವಾದ ಅಗ್ನಿಯು ಪ್ರಸಾದಿಯಲ್ಲಿ ಲೀನವಾಗುವದು. ಪ್ರಾಣಲಿಂಗಿಸ್ಥಲದ ಅಂಗವಾದ ವಾಯುವು ಪ್ರಾಣಲಿಂಗಿಯಲ್ಲಿ ಬಯಲಾಗುವದು. ಶರಣಸ್ಥಲದ ಅಂಗವಾದ ಆಕಾಶ ತತ್ತ್ವವು ಶರಣನಲ್ಲಿ ಬೆರೆಯುವದು. ಐಕ್ಯಸ್ಥಲದ ಅಂಗವಾದ ಆತ್ಮಾಂಗವು ಐಕ್ಯನಲ್ಲಿ ಐಕ್ಯವಾಗುವದು. ಇದರಂತೆ ಭಕ್ತಸ್ಥಲವು ಆಚಾರಲಿಂಗದಂಗವಾಗಿರುವದರಿಂದ ಆಚಾರಲಿಂಗದಲ್ಲಿಯೂ ಗುರುಲಿಂಗಕ್ಕಂಗವಾದ ಮಹೇಶ್ವರಸ್ಥಲವು ಗುರುಲಿಂಗದಲ್ಲಿಯೂ ಶಿವಲಿಂಗದಂಗವಾದ ಪ್ರಸಾದಿಯು ಶಿವಲಿಂಗದಲ್ಲಿಯೂ ಜಂಗಮಲಿಂಗಕ್ಕಂಗವಾದ ಪ್ರಾಣಲಿಂಗಿಸ್ಥಲವು ಜಂಗಮಲಿಂಗದಲ್ಲಿಯೂ ಶರಣಸ್ಥಲವು ಪ್ರಸಾದಲಿಂಗಕ್ಕಂಗವಾಗಿದ್ದು ಪ್ರಸಾದಲಿಂಗದಲ್ಲಿಯೂ ಐಕ್ಯಸ್ಥಲವು ಮಹಾಲಿಂಗಕ್ಕಂಗವಾಗಿರುವದರಿಂದ ಮಹಾಲಿಂಗದಲ್ಲಿ ಲೀನವಾಗುವವು. ತ್ಯಾಗಾಂಗ, ಭೋಗಾಂಗ, ಯೋಗಾಂಗಗಳು ಕ್ರಮವಾಗಿ ಇಷ್ಟ, ಪ್ರಾಣ, ಭಾವಲಿಂಗಗಳಲ್ಲಿ ಸಮರಸವಾಗುವವು. ಬಳಿಕ ಆಚಾರಲಿಂಗವು ಗುರುಲಿಂಗದಲ್ಲಿ, ಗುರುಲಿಂಗವು ಶಿವಲಿಂಗದಲ್ಲಿ, ಶಿವಲಿಂಗವು ಜಂಗಮಲಿಂಗದಲ್ಲಿ, ಜಂಗಮಲಿಂಗವು ಪ್ರಸಾದಲಿಂಗದಲ್ಲಿ, ಪ್ರಸಾದಲಿಂಗವು ಮಹಾಲಿಂಗದಲ್ಲಿ, ಮಹಾಲಿಂಗವು ಘನಲಿಂಗದಲ್ಲಿ ಲೀನವಾಗಿ ಸದಾ ವಿರಾಜಿಸುತ್ತಿಹುದು. ಈ ರೀತಿಯಾದ ಲಿಂಗಾಂಗಸಾಮರಸ್ಯವೇ ಷಟ್‌ಸ್ಥಲಸಿದ್ಧಾಂತವೆನಿಸುವದು. ಈ ಸಿದ್ಧಾಂತವು ಜೀವ, ಜಗದಾದಿಗಳು, ಶಿವ, ಶಿವನ ಪೂಜಾ, ಶಿವಪ್ರಸಾದವಾಗುವದರಿಂದ ಮಿಥ್ಯವೆಂದು ಹೇಳುವದಿಲ್ಲ; ಕಿಂತು ಎಲ್ಲವೂ ಶಿವಮಯವೆಂದು ಹೇಳುವದು.

ಈ ಕಾರಣದಿಂದ ಈ ಸಿದ್ಧಾಂತವು ವೀರಶೈವರಿಗೆ ಮುಕುಟಪ್ರಾಯವಾಗಿರುವದು. ಈ ಷಟ್‌ಸ್ಥಲಗಳಿಗೆ ವೀರಶೈವ ವಿದ್ವಾಂಸರು ಮುಕ್ತಿಸೋಪಾನಗಳೆಂದು ಹೇಳುವರು. ಮನೆಯ ಅಧೋದೇಶದಲ್ಲಿದ್ದ ಮನುಷ್ಯನು ಮನೆಯ ಮೇಲೆ ಹೋಗಲಿಕ್ಕೆ ಹೇಗೆ ಸೋಪಾನಗಳು ಬೇಕಾಗುವವೋ ಹಾಗೆ ಮುಕ್ತಿಯನ್ನು ಹೊಂದಲಿಕ್ಕೆ ಶುದ್ಧಜೀವನಿಗೆ ಷಟ್‌ಸ್ಥಲಗಳೆಂಬ ಸೋಪಾನಗಳ ಆವಶ್ಯಕತೆಯಿರುವದು. ಈ ಪ್ರಕಾರವಾಗಿ ಷಟ್‌ಸ್ಥಲಾಚರಣೆಯ ತತ್ತ್ವವು ಅತಿಮಹತ್ತರವಾಗಿದ್ದು ಇದನ್ನು ಶಿವಾನುಗ್ರಹಲಬ್ಧವಾದ ಸದ್ಗುರುವಿನಿಂದರಿತು ಆಚರಿಸುವ ಸಾಧಕನು ಮಾತ್ರ ಶಿವಸಾಯುಜ್ಯರೂಪವಾದ ವೀರಶೈವ ಮುಕ್ತಿಯನ್ನು ಹೊಂದುವನೆಂಬುವದು ಸಿದ್ಧಾಂತವು.



CC-0. Jangamwadi Math Collection, Varanasi. An eGangotri Initiative



# ವಚನಶಾಸ್ತ್ರವೂ ಉಪನಿಷತ್ತುಗಳೂ

೧೧ ನೆಯ ಶತಮಾನವು ವೀರಶೈವ ಧರ್ಮದ ಕ್ರಾಂತಿಯ ಕಾಲವು. ಆ ಕಾಲದ ಇತಿಹಾಸವನ್ನು ನೋಡಿದರೆ ಧಾರ್ಮಿಕ ಕ್ರಾಂತಿಗಳಲ್ಲಿ ಇದು ಬಹಳ ಮಿಗಿಲಾದದ್ದೆಂದು ಹೇಳಬಹುದು. ಇದೇ ಕಾಲದಲ್ಲಿಯೇ ವೀರಶೈವಧರ್ಮದ ಪ್ರಚಾರಕಾರ್ಯವು ಭರದಿಂದ ಸಾಗಿತು. ಬಸವ, ಚೆನ್ನಬಸವ, ಅಲ್ಲಮ, ಸಿದ್ಧರಾಮ, ಅಕ್ಕಮಹಾದೇವಿಯೇ ಮೊದಲಾದ ಪ್ರಮಥಪುಂಗವರು ಈ ಧರ್ಮೋದ್ಧಾರಕಾರ್ಯದಲ್ಲಿ ಪ್ರಧಾನಪಾತ್ರವನ್ನು ವಹಿಸಿದ್ದರು. ಇವರಿಗೆ ಸಹಾಯಕರಾದ ನೂರಾರು ಜನ ಶರಣರು ಈ ಕಾರ್ಯವನ್ನು ಆ ಕಾಲದಲ್ಲಿ ತೃಪ್ತಿಕರವಾಗಿ ಮಾಡಿದರು. ಇವರ ಧಾರ್ಮಿಕಚರ್ಚೆ ( ಶಿವಾನುಭವ ಗೋಷ್ಠಿ ) ಯ ಪ್ರಭಾವವು ಎಲ್ಲಾ ಕಡೆಗೂ ಪಸರಿಸಿತು. ಈಗಿನ ಕಾಲದಂತೆಯೇ ಆ ಕಾಲದಲ್ಲಿ ಗಾಡಿ, ತಾರು, ವಾಯರ್‌ಲೆಸ್, ರೇಡಿಯೋ ಮೊದಲಾದ ಸಾಧನ ಸಾಮಗ್ರಿಗಳು ಇದ್ದಿದ್ದರೆ ಇಂದು ಅಖಂಡ ಭೂಮಂಡಲದಲ್ಲಿ ಲಿಂಗವಂತ ಸಮಾಜವನ್ನು ನಾವು ಕಾಣಬಹುದಾಗಿತ್ತು. ಆ ಕಾಲದಲ್ಲಿ ಯಾವ ತರಹದ ಅನುಕೂಲತೆ ಇಲ್ಲದಿದ್ದರೂ, ಇವರ ಧಾರ್ಮಿಕ ಪ್ರಭಾವವು ಉತ್ತರದಿಕ್ಕಿನಲ್ಲಿ ಕಾಶ್ಮೀರದ ವರೆಗೂ ದಕ್ಷಿಣದಿಕ್ಕಿನಲ್ಲಿ ರಾಮೇಶ್ವರದ ವರೆಗೂ ಹಬ್ಬಿತ್ತು. ಆದ್ದರಿಂದಲೇ ಬೇರೆ ಬೇರೆ ದೇಶಗಳಲ್ಲಿದ್ದ ಅನೇಕರು ಧಾವಿಸಿ ಕಲ್ಯಾಣಕ್ಕೆ ಬಂದು ಬಸವಣ್ಣನವರ ನೇತೃತ್ವದ ಕೆಳಗೆ ಒಂದೊಂದು ಕಾಯಕವನ್ನು ಕೈಕೊಂಡರು. ಇವರಲ್ಲಿ ಕೆಲವರು ರಾಜರೂ ಇದ್ದರೆಂಬುದು ತಿಳಿದುಬರುತ್ತದೆ. ಅಂತೂ ಎತ್ತ ನೋಡಿದರೂ ವೀರಶೈವ ಧರ್ಮದ ಚರ್ಚೆಯೇ ನಡೆದಿತ್ತು.

ಧರ್ಮದ ಪ್ರಸಾರವನ್ನು ಮಾಡಲಿಕ್ಕೆ ಇನ್ನೊಂದು ಪ್ರಧಾನ ಸಾಧನವೆಂದರೆ ಮಾತೃಭಾಷೆ. ಕಲ್ಯಾಣಪಟ್ಟಣವು ಆ ಕಾಲಕ್ಕೆ ಕನ್ನಡನುಡಿಯ ಪ್ರಧಾನ ಕೇಂದ್ರವಾಗಿತ್ತು. ದೂರದರ್ಶಿಗಳಾದ ಬಸವಣ್ಣನವರೇ ಇವರಿಗೆ ಅಗ್ರೇಸರರಾದ್ದರಿಂದಲೂ ಕನ್ನಡನುಡಿಯಲ್ಲಿಯೇ ಹೊಸ ಮಾದರಿಯ ವಾಙ್ಮಯವನ್ನು ರಚಿಸಿದರು. ಆ ವಾಙ್ಮಯವು ಕೇವಲ ಸಾಹಿತ್ಯದೃಷ್ಟಿಯಿಂದಿರದೆ ವೇದಾಂತ, ಸಿದ್ಧಾಂತ, ಅಷ್ಟಾವರಣ, ಪಂಚಾಚಾರ, ಷಟ್‌ಸ್ಥಲ, ತತ್ತ್ವಗಳ ವಿವೇಚನೆ, ಸತ್ಯ, ಅಹಿಂಸಾ, ಬ್ರಹ್ಮಚರ್ಯ, ಶಿವಯೋಗ, ಭಕ್ತಿಯೋಗ ಮೊದಲಾದ ನೂರಾರು ವಿಷಯಗಳಿಂದ ಕೂಡಿದ್ದಾಗಿರುತ್ತದೆ. ಮಾತೃಭಾಷೆಯಾದ ಪಾಲೀ ಭಾಷೆಯಲ್ಲಿಯೇ ಶ್ರೀ ಬುದ್ಧದೇವನು ಹೇಗೆ ಧಾರ್ಮಿಕ ಗ್ರಂಥಗಳನ್ನು ಬರೆದು ಮೇಲ್ಪಂಕ್ತಿಯನ್ನು ಹಾಕಿಕೊಟ್ಟನೋ ಅದೇ ಪದ್ಧತಿಯನ್ನು ಅನುಸರಿಸಿಯೇ



CC-0. Jangamwadi Math Collection, Varanasi. An eGangotri Initiative

ಶರಣರು ವಚನವಾಙ್ಮಯವನ್ನು ಸಿದ್ಧಪಡಿಸಿದರು. ಭಗವದ್ಗೀತೆಯೆಂದರೆ ಭಗವಂತನ ವಚನ ಅಥವಾ ಹಾಡು ಅಥವಾ ಹೇಳುವಿಕೆ. ಹೀಗೆಯೇ ಶರಣರ ವಚನಗಳ ಅರ್ಥವೂ ಆಗುತ್ತದೆ.

ಹಿಂದೂ ಸಮಾಜದ ಅಥವಾ ಧರ್ಮದ ಮುಖ್ಯ ಗ್ರಂಥಗಳಾದ ವೇದೋಪನಿಷತ್ ಪುರಾಣಗಳೆಲ್ಲ ಸಂಸ್ಕೃತ ಭಾಷೆಯಲ್ಲಿರುತ್ತವೆ. ಅವು ಸಾಮಾನ್ಯ ಜನರಿಗೆ ತಿಳಿಯುವದಿಲ್ಲ. ಮತ್ತು ಸಂಸ್ಕೃತದಲ್ಲಿದ್ದರೇನೆ ದೊಡ್ಡ ಗೌರವವೆಂಬ ತಿಳುವಳಿಕೆಯೂ ಇದ್ದಿತು. ಆ ಮಾರ್ಗವನ್ನು ತಪ್ಪಿಸಿ ಧಾರ್ಮಿಕ ಗ್ರಂಥಗಳು ಮಾತೃಭಾಷೆಯಲ್ಲಿರುವುದೇ ಮೇಲಾದ ಮಾರ್ಗವೆಂದು ಬಸವಾದಿ ಪ್ರಮಥರು ಈ ಆಶ್ಚರ್ಯಕಾರಕ ಹೊಸ ವಾಙ್ಮಯವನ್ನು ಬೆಳಕಿಗೆ ತಂದರು. ಈ ವಚನಗಳನ್ನು ರಚಿಸಿದ ಶರಣರ ಸಂಖ್ಯೆಯು ೩೦೦ ಇರುತ್ತದೆ. ಇವರು ಬರೆವ ವಚನಗಳು ಎರಡೆಂಭತ್ತುಕೋಟಿಯೆಂದು ಅಲ್ಲಲ್ಲಿ ಪ್ರಮಾಣಗಳು ದೊರೆಯುತ್ತವೆ. ಈ ಸಂಖ್ಯೆಯು ನಿಜವಿರಲಿ, ಇಲ್ಲದಿರಲಿ ಮುನ್ನೂರುಜನ ಶರಣರು ಬೇರೆಬೇರೆ ಅಂಕಿತಗಳಿಂದ ವಚನಗಳನ್ನು ಬರೆದದ್ದನ್ನು ಇತಿಹಾಸಕಾರರು ಒಪ್ಪಿರುವರು. ಇವುಗಳು ವೀರಶೈವ ಸಮಾಜದ ಅಜ್ಞಾನತನದಿಂದ ಇನ್ನೂ ಅಚ್ಚಿನ ಮನೆಯನ್ನು ಕಂಡಿಲ್ಲವೆಂಬುವದು ವ್ಯಸನಕರವಾದ ಸಂಗತಿಯಾಗಿರುವದು.

ಈ ತರಹದ ಹೊಸಪದ್ಧತಿಯ ವಾಙ್ಮಯವು ಯಾವ ಭಾಷೆಯಲ್ಲಿಯೂ ಇಲ್ಲವೆಂದು ಆಂಗ್ಲ ವಿದ್ಯಾಭೂಷಿತರೂ ಕನ್ನಡ ವಾಙ್ಮಯದಲ್ಲಿ ಪಾರಂಗತರೂ ಆದ ಅನೇಕ ಪಂಡಿತರು ಮುಕ್ತಕಂಠದಿಂದ ಹೇಳುತ್ತಲಿದ್ದಾರೆ. ಆದ್ದರಿಂದ ಹಿಂದೂ ವೇದಾಂತಗಳಲ್ಲಿ ಜಗತ್ಪ್ರಸಿದ್ಧಗಳಾದ ಉಪನಿಷತ್ತುಗಳಿಗೂ ವಚನಗಳಿಗೂ ತುಲನೆಯನ್ನು ಮಾಡಿ ನೋಡುವದೇ ಈ ಲೇಖನದ ಮುಖ್ಯ ತಿರುಳಾಗಿರುತ್ತದೆ.

## ಉಪನಿಷತ್ತುಗಳು

ಹಿಂದುಗಳ ಧಾರ್ಮಿಕ ಕಾಲದಲ್ಲಿ ವೇದಗಳ ಕಾಲವೆಂತಲೂ ಉಪನಿಷತ್ತುಗಳ ಕಾಲವೆಂತಲೂ ಪುರಾಣಗಳ ಕಾಲವೆಂತಲೂ ಸ್ಥೂಲದೃಷ್ಟಿಯಿಂದ ಸಾಮಾನ್ಯವಾಗಿ ಮೂರು ಭಾಗಗಳನ್ನು ಮಾಡಬಹುದು. ಇವುಗಳಲ್ಲಿ ಉಪನಿಷತ್‌ಕಾಲವು ಬಹಳೇ ಮಹತ್ವದ್ದಾಗಿದೆಯಲ್ಲದೆ ಈ ಉಪನಿಷತ್ತುಗಳನ್ನು ನೋಡಿ ಜಗತ್ತಿನ ಪಂಡಿತರೆಲ್ಲ ಬೆರಗಾಗಿ ಹೋಗಿರುತ್ತಾರೆಂಬುವದಕ್ಕೆ ಜಗತ್ತಿನ ಬೇರೆಬೇರೆ ಪಂಡಿತರು ಉಪನಿಷತ್ತುಗಳ ಬಗ್ಗೆ ಬರೆದ ಗ್ರಂಥಗಳೇ ಆಧಾರವಾಗಿರುತ್ತವೆ. ಉಪನಿಷತ್ತುಗಳ ಸಂಖ್ಯೆಯು ಇಷ್ಟೇ ಇರುತ್ತದೆಂದು ಹೇಳಲಿಕ್ಕೆ ಬಾರವೆ ಇದ್ದರೂ ಅಚ್ಚಾಗಿರತಕ್ಕ ಉಪನಿಷತ್ತುಗಳು ಸದ್ಯಕ್ಕೆ ೧೧೮ ಸಿಗುತ್ತವೆ. ಇವುಗಳಲ್ಲಿ ಈಶ, ಕೇನ, ಕಠ ಮೊದಲಾದ ಹತ್ತು ಉಪನಿಷತ್ತುಗಳೇ ಪ್ರಮಾಣಬದ್ಧವಾದವುಗಳೂ ಮತ್ತು ಪ್ರಾಚೀನಕಾಲದವುಗಳೂ, ಎಂಬುವ ವಿಷಯದಲ್ಲಿ ಭಿನ್ನಾಭಿಪ್ರಾಯವೇ ಇರುವದಿಲ್ಲ. ಉಪನಿಷತ್ತುಗಳ ಉಗಮವು ಹೇಗೆ ಆಯಿತು? ಏಕೆ ಆಯಿತು? ಎಂಬುವ ವಿಷಯವು ಬಹಳೇ ಮಹತ್ತ್ವದ್ದಾಗಿರುತ್ತದೆ. ಉಪನಿಷತ್ತುಗಳಲ್ಲಿ ಸತ್ಯ, ಅಹಿಂಸೆ, ಶಾಂತಿ, ದಾಂತಿ ಮೊದಲಾದ ವಿಷಯಗಳು ಬೇರೆಬೇರೆ ಉಪನಿಷತ್ತುಗಳಲ್ಲಿ ಬೇರೆಬೇರೆ ತರಹದಿಂದ ವಿವೇಚನೆ ಮಾಡಿದ್ದರೂ, ಅವುಗಳ ಮುಖ್ಯ ವಿಷಯವು ಮೋಕ್ಷಮಾರ್ಗವನ್ನು ಕಂಡುಹಿಡಿಯುವದೇ ಆಗಿರುತ್ತದೆ. ಅರ್ಥಾತ್ ಮನುಷ್ಯನ ಕೊನೆಯ ಧ್ಯೇಯವನ್ನು ಕಂಡುಹಿಡಿದು, ಆಧ್ಯಾತ್ಮಿಕ ಮೊದಲಾದ ವಿಷಯಗಳಲ್ಲಿ ಆತನನ್ನು ಸಿದ್ಧಪಡಿಸುವದೇ ಪ್ರಥಮ ಮಾರ್ಗವು. ಈ ದಶೋಪ



CC-0. Jangamwadi Math Collection, Varanasi. An eGangotri Initiative

ನಿಷತ್ತುಗಳಿಗೆ ಬೇರೆಬೇರೆ ಮತದ ಆಚಾರ್ಯರು ಬೇರೆಬೇರೆ ತರಹದಿಂದ ತಮ್ಮ ತಮ್ಮ ಮತಗಳಿಗೆ ಅನ್ವಯಿಸುವಂತೆ ಭಾಷ್ಯಗಳನ್ನು ಬರೆದಿರುತ್ತಾರೆ. ಇವರಲ್ಲಿ ದ್ವೈತ, ಅದ್ವೈತ, ವಿಶಿಷ್ಟಾದ್ವೈತ, ಶಕ್ತಿವಿಶಿಷ್ಟಾದ್ವೈತ, ಮೊದಲಾದ ಮತಗಳ ಭಾಷ್ಯಗಳೇ ಪ್ರಸಿದ್ಧಿಯಾಗಿವೆ. ಯಾವ ಮತಕ್ಕೆ ಬೇಕಾದರೂ ಅರ್ಥವಾಗುವಂತೆ ಇರುವದರಿಂದಲೇ ಉಪನಿಷತ್ತುಗಳು ಗಂಭೀರವಾದ ಗೌರವವನ್ನು ಹೊಂದಿವೆ.

ನಾವು ಯಾವದಾದರೊಂದು ಉಪನಿಷತ್ತನ್ನು ತೆಗೆದು ನೋಡಿದರೂ ಆರಂಭಕ್ಕೆ ಮೋಕ್ಷೋಪಾಯದ ಸಲುವಾಗಿಯೇ ಇವುಗಳ ರಚನೆಯಾದದ್ದು ಕಂಡುಬರುತ್ತದೆ. ಒಂದೆರಡು ಉಪನಿಷತ್ತುಗಳ ಆರಂಭವನ್ನು ಇಲ್ಲಿ ನೋಡೋಣ. "ಜಾಬಾಲೋಪನಿಷತ್ತಿ"ನಲ್ಲಿ ಜಾಬಾಲಿ ಋಷಿಯನ್ನು ಪೈಪ್ಪಲಾದಿಯು ಪ್ರಶ್ನಿಸುತ್ತಾನೆ. "ಭಗವನ್ ಮೇ ಬ್ರೂಹಿ ಪರಮತತ್ತ್ವ ರಹಸ್ಯಂ, ಕಿಂ ತತ್ತ್ವಂ, ಕೋ ಜೀವಃ, ಕಃ ಪಶುಃ, ಕ ಈಶಃ, ಕೋ ಮೋಕ್ಷೋಪಾಯಃ" ಹೀಗೆಯೇ ಎಲ್ಲಾ ಉಪನಿಷತ್ತುಗಳ ಸಾರವಾಗಿರುತ್ತದೆ. ಮತ್ತು ವೇದಗಳ ಶಾಖೆಗಳೇ ಉಪನಿಷತ್ತುಗಳೆಂದು ಅಲ್ಲಲ್ಲಿ ಪ್ರಮಾಣಗಳು ಸಿಗುತ್ತವೆ. ಮುಕ್ತಿಕೋಪನಿಷತ್ತಿನಲ್ಲಿ ಈ ವಿಷಯವು ವಿಶದವಾಗಿ ಹೇಳಲಾಗಿರುತ್ತದೆ.

ಈ ತರದ ವೇದಾಂತವನ್ನು ಎಲ್ಲಾ ಮತಗಳಿಗೂ ಸಮನ್ವಯವಾಗುವಂತೆ ಉಪದೇಶಿಸಿ ಜಗತ್ತಿನಲ್ಲಿ ಗೌರವವನ್ನು ಪಡೆದ ಉಪನಿಷತ್ತುಗಳಿಗೂ ವಚನಗಳಿಗೂ ಹೇಗೆ ಸಾಮ್ಯವಿದೆ? ಎಂಬುವ ಪ್ರಶ್ನೆಯು ಸಹಜವಾಗಿ ಹುಟ್ಟುತ್ತದೆ. ವಚನಗಳು ಉಪನಿಷತ್ತುಗಳಿಗಿಂತ ಯಾವ ವಿಷಯದಲ್ಲಿಯೂ ಹಿಂದೆ ಬೀಳಲಾರವೆಂಬುದನ್ನು ಹೇಳಲಿಕ್ಕೆ ನನಗೆ ಪರಮಸಂತೋಷವಾಗುತ್ತದೆ. ಉಪನಿಷತ್ತುಗಳಲ್ಲಿದ್ದ ವಿಷಯಗಳೆಲ್ಲ ವಚನಗಳಲ್ಲಿ ಸಿಗುತ್ತವೆ. ವಚನಗಳಲ್ಲಿದ್ದ ವಿಷಯಗಳೆಲ್ಲ ಉಪನಿಷತ್ತುಗಳಲ್ಲಿ ಸಿಗುವದು ಸಾಧ್ಯವಿರುವದಿಲ್ಲ.

ಸತ್ಯಾನ್ವೇಷಿಗಳಾದ ಋಷಿಗಳ ಅಂತಃಸ್ಫೂರ್ತಿಯಿಂದ ಹೊರ ಹೊರಟವುಗಳೇ ಉಪನಿಷತ್ತುಗಳು. ಶರಣರ ಹೃದಯದಿಂದ ನಿರರ್ಗಳವಾಗಿ ಹೊರಟವುಗಳೇ ವಚನಗಳು. ಋಷಿಗಳು ಆಧ್ಯಾತ್ಮಿಕ ಮಾರ್ಗದಲ್ಲಿ ತೊಡಗಿದವರು. ಶರಣರಾದರೂ ಸತ್ಯಾನ್ವೇಷಿಗಳಾಗಿ ಧಾರ್ಮಿಕ ಕಾರ್ಯದಲ್ಲಿ ತೊಡಗಿದವರು. ಋಷಿಯೆಂಬುವ ಶಬ್ದವು ಹೇಗೆ ಸಂಸ್ಕೃತದಲ್ಲಿ ಗಂಭೀರವಾದ ಅರ್ಥವುಳ್ಳದ್ದಾಗಿದೆಯೋ ಹಾಗೆಯೇ ಶರಣ ಶಬ್ದದ ಅರ್ಥವೂ ಬಹಳ ಮಹತ್ತರವಾದುದಾಗಿದೆ. ಅಂತೂ ಹೆಸರು ಬೇರೆ ಬೇರೆ ಇದ್ದರೂ ಇಬ್ಬರ ಮಾರ್ಗವೂ ಒಂದೇ ಆಗಿರುತ್ತದೆ. ಸಂಸ್ಕೃತವಾಙ್ಮಯ ದೃಷ್ಟಿಯಿಂದ ಉಪನಿಷತ್ತುಗಳು ಹೇಗೆ ಶ್ರೇಷ್ಠ ತರಗತಿಯನ್ನು ಹೊಂದಿರುತ್ತವೆಯೋ ಹಾಗೆಯೇ ವಚನ ವಾಙ್ಮಯದಲ್ಲಿ ಕನ್ನಡ ಸಾಹಿತ್ಯವು ಹೊರಸೂಸುತ್ತಲಿದೆ. ಗೀತೆಯ ಗುಟ್ಟು ಉಪನಿಷತ್ತುಗಳಲ್ಲಿರುವಂತೆ ವಚನಗಳಲ್ಲಿಯೂ ಅಡಕವಾಗಿದೆ. ಯೋಗಮಾರ್ಗವು ಉಪನಿಷತ್ತುಗಳಲ್ಲಿ ಉಲ್ಲೇಖವಾಗಿರುವಂತೆಯೇ ವಚನಕಾರರಂತೂ ಎಲ್ಲಾ ಯೋಗಗಳಲ್ಲಿ ಬಲ್ಲಿದರಿದ್ದರೆಂಬ ಬಗ್ಗೆ ಬೇಕಾದಷ್ಟು ವಚನಗಳನ್ನು ಉದಾಹರಿಸಬಹುದಾಗಿದೆ.

ಸಂಸ್ಕೃತದಲ್ಲಿ ಉಪನಿಷತ್ತುಗಳಿದ್ದರೆ ಕನ್ನಡದಲ್ಲಿ ವಚನಗಳಿವೆ. ಸಂಸ್ಕೃತ ಭಾಷೆಯು ಜಗತ್ತಿನಲ್ಲಿ ತನ್ನ ಪ್ರತಾಪವನ್ನು ಬೀರಿದೆ. ಕನ್ನಡವು ಮಾತ್ರ ಕರ್ನಾಟಕ ಪ್ರಾಂತದ ಮಟ್ಟಿಗಿರು



CC-0. Jangamwadi Math Collection, Varanasi. An eGangotri Initiative

ತ್ತದೆ. ವಚನಗಳು ಕನ್ನಡ ಉಪನಿಷತ್ತುಗಳೆಂದು ಅನೇಕ ಪಂಡಿತರು ಹೇಳಿಯೂ ಹೇಳುತ್ತಲೂ ಇರುವರು. ಅವರಲ್ಲಿ ಒಬ್ಬರ ಹೇಳಿಕೆಯನ್ನು ಇಲ್ಲಿ ನೋಡೋಣ! ದಿವಂಗತ ಮಹಾಮಹೋಪಾಧ್ಯಾಯ, ಪ್ರಾಕ್ತನ ವಿಮರ್ಶ ವಿಚಕ್ಷಣ ರಾ. ಬ. ಆರ್. ನರಸಿಂಹಾಚಾರ್ಯರು, ಎಮ್. ಎ., ಎಮ್. ಆರ್. ಎ. ಎಸ್., ರಿಟಾಯರ್ಡ ಆರ್ಕಿಯಾಲಾಜಿಕಲ್ ಡಿಪಾರ್ಟಮೆಂಟ್ ಡಾಯರೆಕ್ಟರ್, ಮೈಸೂರ ಇವರು ತಮ್ಮ ಕವಿಚರಿತ್ರೆಯಲ್ಲಿ ಸ್ಪಷ್ಟವಾಗಿ ವಚನಗಳು ಕನ್ನಡ ಉಪನಿಷತ್ತುಗಳು, ಬಿಗಿಯಾದ ಶೈಲಿಯಲ್ಲಿ ಸುಲಭವಾಗಿ ವೇದಾಂತವನ್ನು ಉಪದೇಶಿಸುತ್ತವೆಂದು ಹೇಳಿದ್ದಾರೆ. ಉಪನಿಷತ್ತುಗಳಲ್ಲಿ ಕೆಲವು ಮಂತ್ರಗಳಿಗೆ ಅರ್ಥವನ್ನು ಹೇಳುವದು ಸುಲಭಸಾಧ್ಯವಿಲ್ಲದಿರುವಂತೆ ವಚನಗಳಲ್ಲಿಯೂ ಅನೇಕ ವಚನಗಳು ತಿಳಿಯುವುದೇ ಇಲ್ಲವು. ಅವುಗಳ ಅರ್ಥವನ್ನು ಅನುಭವಶಾಲಿಗಳಾದವರು ಮಾಡಬೇಕಲ್ಲದೆ ಉಳಿದವರಿಗೆ ಸಾಧ್ಯವಿರುವದಿಲ್ಲ.

ಬ್ರಹ್ಮಚಿಂತನವೇ ಉಪನಿಷತ್ತುಗಳ ಸಾರವಾದರೂ ಕೆಲವು ಉಪನಿಷತ್ತುಗಳು ಕರ್ಮದಿಂದ ಮೋಕ್ಷವೆಂತಲೂ ಕೆಲವು ಉಪನಿಷತ್ತುಗಳು ಜ್ಞಾನದಿಂದ ಮೋಕ್ಷವೆಂತಲೂ ಈಶಾವಾಸ್ಯ ಮೊದಲಾದ ಕೆಲವು ಉಪನಿಷತ್ತುಗಳು ಜ್ಞಾನ ಮತ್ತು ಕರ್ಮ ಈ ಎರಡರಿಂದಲೇ ಮೋಕ್ಷವೆಂದು ಘಂಟಾಘೋಷವಾಗಿ ಹೇಳಿರುತ್ತವೆ. ಅದೇ ಮಾರ್ಗವನ್ನೇ ಶರಣರು ತಮ್ಮ ವಚನಗಳಲ್ಲಿ ಹೃದಯಂಗಮವಾಗಿ ಈ ವಿಷಯವನ್ನು ಪ್ರತಿಪಾದಿಸಿರುತ್ತಾರೆ. ಕೇವಲ ಜ್ಞಾನದಿಂದಲೇ ಮೋಕ್ಷವೆಂದು ಹೇಳತಕ್ಕವರನ್ನು ವಚನಕಾರರು ಬಹಳ ಚೆನ್ನಾಗಿ ಖಂಡಿಸಿರುತ್ತಾರೆ.

"ವಿಶ್ವದಲ್ಲಿ ಜ್ಞಾನಪ್ರತಿಷ್ಠೆಯ ಮಾಡುತ್ತಿಪ್ಪರು. ಗೋವಿನ ದೇಹದಲ್ಲಿ ಘೃತವಿಪ್ಪುದಯ್ಯ. ಅದು ಆ ಗೋವಿಗೆ ಪುಷ್ಟಿಯಾಗಲಾರದು. ಆ ಗೋವ ಪೋಷಿಸಿ ಹಾಲ ಕರೆದು ಕಾಸಿ ಹೆಪ್ಪು ಹಾಕಿ ಆ ದಧಿಯ ಮಥನವ ಮಾಡಿ ಬೆಣ್ಣೆಯ ತೆಗೆದು ಆ ನವನೀತ ತುಪ್ಪವ ಕಾಸಿ ಆ ಗೋವಿಗೆ ಕುಡಿಸಲಾಗಿ ದಿನದಿನಕ್ಕೆ ಪುಷ್ಟಿಯಪ್ಪದು ತಪ್ಪದಯ್ಯ. ಈ ಪ್ರಕಾರ ಸತ್ಕ್ರಿಯೋಪಚಾರವ ಮಾಡಲಾಗಿ ಜ್ಞಾನವಹುದು. ಜ್ಞಾನವಾಗಿ ಸಮ್ಯಕ್‌ಜ್ಞಾನವಹುದು. ಸಮ್ಯಕ್‌ಜ್ಞಾನವಾಗಿ ಪ್ರಾಣವೇ ಲಿಂಗವಪ್ಪುದು ತಪ್ಪದು. ಸಂದೇಹವಿಲ್ಲವಯ್ಯ ಮಹಾಲಿಂಗ ಗುರುಸಿದ್ಧೇಶ್ವರ ಪ್ರಭುವೇ." ಮೇಲಿನ ವಚನದಿಂದ ಕೇವಲ ಜ್ಞಾನವೇ ಶ್ರೇಷ್ಠವೆಂದು ಹೇಳುವವರ ಮತದ ಖಂಡನೆಯಾಯಿತು. ಇನ್ನೂ ಕೆಲವು ಉಪನಿಷತ್ತುಗಳು ಕೇವಲ ಕರ್ಮಮಾರ್ಗವನ್ನು ಪ್ರತಿಪಾದಿಸುತ್ತವೆ. ಅವುಗಳ ಖಂಡನೆಯನ್ನು ವಚನಕಾರರು ಮಾಡಿರುವರು.

"ಕ್ರಿಯೆಯೇ ಅಧಿಕವೆಂಬ ದೊಡ್ಡ ಸಿದ್ಧಾಂತಿಗಳ ಮಾತು ಸೊಗಸದಯ್ಯ ಎನಗೆ. ಅದೇನು ಕಾರಣವೆಂದರೆ, ಆವುದಾನೊಂದು ಪಕ್ಷಿಯು ಉಭಯ ರೆಕ್ಕೆಗಳಿಂದ ಗಗನಕ್ಕೆ ಹಾರುವಂತೆ ಅಂತರಂಗದಲ್ಲಿ ಸಮ್ಯಕ್‌ಜ್ಞಾನ ಬಹಿರಂಗದಲ್ಲಿ ಶಿವಸತ್ಕ್ರಿಯಾಸಮ್ಯಕ್‌ಜ್ಞಾನ ಸಂಪನ್ನರಾದ ಶರಣರ ರೀತಿ ಬದುಕಿಸಯ್ಯ ಎನ್ನ ಅಖಂಡೇಶ್ವರಾ"

ಈ ವಚನವು ಕೇವಲ ಕರ್ಮವನ್ನು ಪ್ರತಿಪಾದಿಸುವ ಉಪನಿಷತ್ತುಗಳ ಖಂಡನೆಯನ್ನು ತೋರಿಸುತ್ತದೆ.

ಈಶಾವಾಸ್ಯ ಮೊದಲಾದ ಅನೇಕ ಉಪನಿಷತ್ತುಗಳು ಎರಡೂ ಮಾರ್ಗಗಳಿಂದಲೇ ಮೋಕ್ಷವೆಂದು ಹೇಳುವದನ್ನು ಕೆಳಗಿನ ವಚನವು ಬಲಪಡಿಸುತ್ತದೆ.



CC-0. Jangamwadi Math Collection, Varanasi. An eGangotri Initiative

"ಕ್ರಿಯೆ ಇಲ್ಲದ ಜ್ಞಾನವು ಪ್ರಯೋಜನವಿಲ್ಲವಯ್ಯ. ಅದು ಹೇಗೆಂದರೆ ದೇಹವಿಲ್ಲದ ಪ್ರಾಣಕ್ಕೆ ಆಶ್ರಯವುಂಟೆ? ಅಯ್ಯಾ! ಆ ಪ್ರಾಣವಿಲ್ಲದೆ ಕಾಯಕ್ಕೆ ಚೈತನ್ಯವುಂಟೆ? ಅಯ್ಯಾ! ಅದು ಕ್ರಿಯೆ ಇಲ್ಲದ ಜ್ಞಾನಕ್ಕೆ ಆಶ್ರಯವಿಲ್ಲ. ಜ್ಞಾನವಿಲ್ಲದೆ ಕ್ರಿಯೆಗೆ ಆಶ್ರಯವಿಲ್ಲ. ಇದು ಕಾರಣ ಜ್ಞಾನಕ್ರಿಯೋಪಚಾರಗಳಿರಬೇಕೆಂದೆನಯ್ಯಾ ಮಹಾಲಿಂಗ ಗುರುಸಿದ್ಧೇಶ್ವರ ಪ್ರಭುವೇ."

ಮತ್ತು ಕ್ರಿಯೆಯೇ ಜ್ಞಾನ, ಜ್ಞಾನವೇ ಕ್ರಿಯೆ, ಜ್ಞಾನವೆಂದರೆ ತಿಳಿಯುವದು; ಕ್ರಿಯೆಯೆಂದರೆ ಮಾಡುವದು. ಪರಸ್ತ್ರೀ ಭೋಗಿಸಬಾರದೆಂಬುವದೇ ಜ್ಞಾನ; ಅದರಂತೆ ಆಚರಿಸುವದೇ ಕ್ರಿಯೆ; ಅಂತು ಆಚರಿಸದಿದ್ದರೆ ಅಜ್ಞಾನ ನೋಡಾ ಕೂಡಲ ಚೆನ್ನ ಸಂಗಮದೇವಾ" ಹೀಗೆಯೇ ಉಪನಿಷತ್ತುಗಳಲ್ಲಿ ಜ್ಞಾನ ಕ್ರಿಯೆಗಳೆರಡನ್ನು ಸಮರ್ಥಿಸುವ ಅನೇಕ ಮಂತ್ರಗಳಿವೆ.

### ಈಶಾವಾಸ್ಯ

"ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇಚ್ಛತಂ ಸಮಾಃ ॥
ಯಸ್ಮಿನ್ ಸರ್ವಾಣಿ ಭೂತಾನಿ ಆತ್ಮೈವಾಭೂದ್ವಿಜಾನತಃ
ತತ್ರ ಕೋ ಮೋಹಃ ಕಃ ಶೋಕಃ ಏಕತ್ವಮನುಪಶ್ಯತಃ"

"कुर्वन्नेवेह कर्माणि जिजीविषेच्छतं समाः
यस्मिन् सर्वाणि भूतानि आत्मैवाभूद्विजानतः
तत्र को मोहः कः शोकः एकत्वमनुपश्यतः"

ಈ ತರದ ಶ್ಲೋಕಗಳು ಬೇರೆ ಬೇರೆ ಉಪನಿಷತ್ತುಗಳಲ್ಲಿ ಬೇಕಾದಷ್ಟು ಸಿಗುತ್ತವೆ. ಸ್ಥಲಸಂಕೋಚದ ಮೂಲಕ ಅವುಗಳನ್ನೆಲ್ಲ ಎತ್ತಿ ಬರೆಯುವದು ಸಾಧ್ಯವಿಲ್ಲ. ಪ್ರಸಂಗ ಬಂದರೆ, ಈ ಬಗ್ಗೆ ಒಂದು ಪುಸ್ತಕವನ್ನೇ ಬರೆಯಲಪೇಕ್ಷೆಯುಳ್ಳವನಾಗಿರುತ್ತೇನೆ.

ಇನ್ನು ಉಪನಿಷತ್ತುಗಳಲ್ಲಿ ಗಾರ್ಗೇಯಿ ಮೈತ್ರೇಯಿ ಮೊದಲಾದ ಸ್ತ್ರೀಯರು ಜ್ಞಾನಾಮೃತವನ್ನು ಪಾನ ಮಾಡಬೇಕೆಂಬುವ ಕುತೂಹಲವುಳ್ಳವರಾಗಿ ಋಷಿಗಳ ಸಂಘದಲ್ಲಿ ಸೇರಿ ಕಾರ್ಯವನ್ನು ಮಾಡಿದರು. ಅದರಂತೆಯೇ ಶರಣರ ಸಂಘದಲ್ಲಿ ಅಕ್ಕಮಹಾದೇವಿ, ಗಂಗಾಂಬಿಕಾ, ನೀಲಲೋಚನಾ, ಲಿಂಗಮ್ಮ ಮೊದಲಾದ ಶಿವಶರಣೆಯರು ಕೂಡಿಕೊಂಡು ಆಧ್ಯಾತ್ಮಿಕ ಚರ್ಚೆಯನ್ನು ಮಾಡಿಕೊಂಡು ದೇವರನ್ನು ಹುಡುಕುವ ಪ್ರಯತ್ನವನ್ನು ಮಾಡಿದರು. ಇವರಲ್ಲಿ ಅಕ್ಕಮಹಾದೇವಿಯವರ ವಚನಗಳು ಗೂಢವಾದ ವೇದಾಂತದ ಶೈಲಿಯಲ್ಲಿರುತ್ತವೆ. ಶಿವಶರಣರ ಶಿವಾನುಭವ ಗೋಷ್ಠಿ, ಅಂದರೆ (ದುಂಡುಮೇಜಿನ ಪರಿಷತ್ತಿನಲ್ಲಿ) ಚರ್ಚೆಯ ಫಲವಾಗಿ ಶೂನ್ಯಸಂಪಾದನೆಯೆಂಬುವ ಉದ್‌ಗ್ರಂಥವು ಸಿದ್ಧವಾಗಿರುತ್ತದೆ. ಈ ಗ್ರಂಥದ ಬರಹ, ವಿಷಯಗಳ ಗಾಂಭೀರ್ಯ, ಅದರ ಪದ್ಧತಿ ಮೊದಲಾದುವುಗಳನ್ನು ನೋಡಿದರೆ ಇದು ಕನ್ನಡದಲ್ಲಿಯ ಮಿಗಿಲಾದ ಉಪನಿಷತ್ತು ಎಂದು ನಾನು ಬಹಳ ಧೈರ್ಯದಿಂದ ಹೇಳಬಲ್ಲೆನು.

ಇನ್ನು ಅನೇಕ ವಿಷಯಗಳ ಹೋಲಿಕೆಯು ವಚನಗಳಲ್ಲಿಯೂ ಉಪನಿಷತ್ತುಗಳಲ್ಲಿಯೂ ಕೂಡುತ್ತದೆ. ಆದರೆ ಇಲ್ಲಿ ಕೆಲವು ಉಪನಿಷತ್ತಿನ ಮಂತ್ರಗಳಿಗೂ ವಚನಗಳಿಗೂ ಅಕ್ಷರಶಃ ಹೇಗೆ ಹೋಲಿಕೆ ಇರುತ್ತದೆಂಬುವುದನ್ನು ತೋರಿಸುತ್ತೇನೆ.



CC-0. Jangamwadi Math Collection, Varanasi. An eGangotri Initiative

ಶ್ರೀ ಭಗವಾನ್ ಬಸವೇಶ್ವರನು ಪ್ರಭುದೇವರನ್ನು ಸ್ತುತಿಸುವ ಕಾಲಕ್ಕೆ ಅವರ ಅಲೌಕಿಕ ಶಕ್ತಿಯನ್ನು ವ್ಯಕ್ತಗೊಳಿಸಿ ಪ್ರಭುವು ಜಗತ್ತಿನಲ್ಲಿ ಬಾಹ್ಯಕರಣ ನಿರಪೇಕ್ಷನಾಗಿ ವ್ಯವಹರಿಸುತ್ತಿರುವುದನ್ನು ಕೆಳಗಿನ ವಚನದಿಂದ ನಿರೂಪಿಸಿರುತ್ತಾನೆ.

ಶೂನ್ಯಸಂಪಾದನೆ ಪುಟ ೧೪

" ಕಾಲಿಲ್ಲದೆ ನಡೆಯುವನು, ಕೈಯಿಲ್ಲದೆ ಹಿಡಿವನು, ಕಣ್ಣಿಲ್ಲದೆ ನೋಡುವನು, ಸಹಜವಾಗಿ ಮೈಯಿಲ್ಲದ ಬಣ್ಣ, ಮಥನವಿಲ್ಲದ ಕೂಟ. ಅಲ್ಲಿ ಸ್ವೈರಗಾಗಿ ಶಿಲೆಯ ಮೇಲಹ ಒಡಲು ತನ್ನ ತಾನರಿಯದೆ, ಬಿಡದೆ ಎಲ್ಲಾ ಬೆಂಬತ್ತಿ ಬಂದ ಪರಿಯ ನೋಡಾ, ಜಡವಿಡಿದ ಎನ್ನ ಕಾಯದ ಕಳವಳವ ತಿಳುಹಲೆಂದು ಅಡಿಗಡಿಗೆ ಅನುಭಾವವ ತೋರುತ್ತಿದ್ದಾನೆ. ಕುಳ್ಳಿಡೆಯಲ್ಲಿ ಕುಂಟ, ನಿದ್ದೆಡೆಯಲ್ಲಿ ಏಳವ, ಎಲ್ಲಿ ನೋಡಿದಡಲ್ಲಿ ಪರಿಪೂರ್ಣನು ಮೆಲ್ಲಮೆಲ್ಲನೆ ಒಳಗೆ ನೊರೆದು ತೋರುತ್ತಿದ್ದಾನೆ. ಬಲ್ಲವರೆಲ್ಲ ಬದುಕಿ ಎಂದು ಝುಲ್ಲರಿಯ ಮೇಲೊಂದು ಬೆಳುಗೊಡೆಯ ಹಿಡಿಯನು. ಬಲ್ಲಿದನಾನೆಯ ತಡೆದು ನಿಲ್ಲಿಸಬಲ್ಲನು. ಕೂಡಲ ಸಂಗಮದೇವರ ಮಹಾಮನೆಯಲ್ಲಿ ಪ್ರಭುದೇವರ ಮರೆಹೊಕ್ಕು ಬದುಕಿದೆ ನಾನು. "

ಈ ವಚನಕ್ಕೆ ಸರಿಯಾಗಿ ಕೆಳಗೆ ಬರೆದ ಉಪನಿಷದ್ವಾಕ್ಯವು ಇರುತ್ತದೆ.

" ಅಪಾಣಿಪಾದೋ ಜವನೋ ಗೃಹೀತಾ ಪಶ್ಯತ್ಯಚಕ್ಷುಃ ಸಶೃಣೋತ್ಯಕರ್ಣಃ "

" अपाणिपादो जवनो ग्रहीता पश्यत्यचक्षुः सशृणोत्यकर्णः "

ಶ್ವೇತಾಶ್ವರೋಪನಿಷತ್ ೩ ನೆಯ ಅಧ್ಯಾಯ.

" ಅಪಾಣಿಪಾದೋಽಹಮಚಿಂತ್ಯಶಕ್ತಿ ಪಶ್ಯಾಮ್ಯಚಕ್ಷುಃ ಸಶೃಣೋಮ್ಯಕರ್ಣಃ "

" अपाणिपादोऽहमचिन्त्य शक्तिः पश्याम्यचक्षुः सशृणोम्यकर्णः "

ಕೈವಲ್ಯೋಪನಿಷತ್

ಹೀಗೆಯೇ ಈ ಮಂತ್ರವು ಇನ್ನೂ ಇರುತ್ತದೆ.

" ಲಿಂಗವ ಪೂಜಿಸಿ ಫಲವೇನಯ್ಯ ? ಸಮ್ಮರತಿ ಸಮಬಖವನರಿಯದನ್ನಕ್ಕ ? ಲಿಂಗವ ಪೂಜಿಸಿ ಫಲವೇನಯ್ಯ ? ಕೂಡಲಸಂಗಮದೇವರ ಪೂಜಿಸಿ ನದಿಯೊಳಗೆ ನದಿ ಬೆರಸಿದಂತಾಗದನ್ನಕ್ಕ "

ಬಸವಣ್ಣನವರ ವಚನ— ಎರಡನೆಯ ಮುದ್ರಣ ಪುಟ ೧೪೩ ವಚನ ೧೧.

ಇದಕ್ಕೆ ಸರಿಯಾದ ಉಪನಿಷದ್ವಾಕ್ಯವು ಕೆಳಗೆ ಬರೆದಂತೆ ಇರುತ್ತದೆ.

" ಯಥಾ ನದ್ಯಃ ಸ್ಯಂದಮಾನಾಃ ಸಮುದ್ರೇ ಅಸ್ತಮ್ ಗಚ್ಛಂತಿ ನಾಮರೂಪೇ ವಿಹಾಯ ತಥಾ ವಿದ್ವಾನ್ ನಾಮರೂಪಾದ್ವಿಮುಕ್ತಃ ಪರಾತ್ಪರಮ್ ಪುರುಷಮುಪೈತಿ ದಿವ್ಯಮ್ "

" यथा नद्यः स्यन्दमानाः समुद्रे अस्तम् गच्छन्ति नामरूपेविहाय
तथा विद्वान नामरूपाद्विमुक्तः परात्परं पुरुषमुपैति दिव्यम् "

ಮುಂಡಕೋಪನಿಷತ್ ತೃತೀಯಖಂಡ ಶ್ಲೋಕ ೮.

ಮೇಲೆ ಬರೆದ ಬಸವಣ್ಣನವರ ವಚನವನ್ನು ಈ ಉಪನಿಷದ್ವಾಕ್ಯದ ಕೊನೆಯ ಭಾಗಕ್ಕೆ ಸಾಮಾನ್ಯವಾಗಿ ಹೋಲಿಸಲು ಬರುತ್ತದೆ.



CC-0. Jangamwadi Math Collection, Varanasi. An eGangotri Initiative

ಶ್ರೀ ಬಸವೇಶ್ವರದೇವರು ದೇವರ ಸ್ವರೂಪವನ್ನು ಹೇಳುವಾಗ "ಹಿರಿದಕ್ಕೆ ಹಿರಿದು, ಕಿರಿದಕ್ಕೆ ಕಿರಿದು, ವಾಙ್ಮನಕ್ಕಗೋಚರ ಕೂಡಲಸಂಗಮದೇವಾ" ಎಂದಿರುವರು. ಇದಕ್ಕೆ ಸರಿಯಾಗಿ

ಕಠೋಪನಿಷತ್ತಿನ ಪ್ರಥಮಾಧ್ಯಾಯದಲ್ಲಿ—

"ಅಣೋರಣೀಯಾನ್ ಮಹತೋ ಮಹೀಯಾನ್"

"अणोरणीयान् महतो महीयान्"

ತೈತ್ತರೀಯೋಪನಿಷತ್ತಿನ ಎರಡನೆಯ ಅಧ್ಯಾಯದಲ್ಲಿ—

"ಯತೋ ವಾಚೋ ನಿವರ್ತಂತೆ ಅಪ್ರಾಪ್ಯ ಮನಸಾ ಸಹ"

"यतो वाचो निवर्तन्ते अप्राप्य मनसा सह"

ಎಂಬ ವಾಕ್ಯವು ಇರುತ್ತದೆ. ಬಸವಣ್ಣನವರು- "ಉಳ್ಳವರು ಶಿವಾಲಯ ಮಾಡುವರು ನಾನೇನು ಮಾಡುವೆನಯ್ಯ? ಬಡವನಯ್ಯ ಎನ್ನ ಕಾಲೇ ಕಂಭ, ದೇಹವೇ ದೇಗುಲ, ಶಿರಹೊನ್ನ ಕಳಸವಯ್ಯ. ನೋಡಯ್ಯ ಕೂಡಲ ಸಂಗಮದೇವಯ್ಯ, ಕೇಳಯ್ಯ, ಸ್ಥಾವರಕ್ಕಳಿವುಂಟು ಜಂಗಮಕ್ಕಳಿವಿಲ್ಲ."

ಅಖಂಡೇಶ್ವರ:— "ದೇಹವೆಂಬ ದೇಗುಲದೊಳಗೆ ಭಾವಸಿಂಹಾಸನವಮಾಡಿ ಜೀವದೊಡೆಯನ ಪೂಜಿಸಬಲ್ಲ. ದೇವರಿಗೆ ದೇವನಂಬೆನಯ್ಯ ಅಖಂಡೇಶ್ವರಾ"

ಮತ್ತೊಬ್ಬ ಶರಣ—

"ಎನ್ನ ಪಾದವೇ ಪಾದಶಿಲೆಯಾಗಿ, ಎನ್ನ ಕಾಲೆ ಕಡಹದ ಕಂಬಗಳಾಗಿ, ಎನ್ನ ತೋಳೇ ನಾಗವೇದಿಯಾಗಿ, ಎನ್ನ ಅಸ್ಥಿಯೇ ಸುತ್ತಳ ಜಂತಿಯಾಗಿ, ಎನ್ನ ಅಧರವೇ ಬಳ್ಳಿಯ ಬಾಗಿಲಾಗಿ, ಎನ್ನ ಗುರುಕರಣವೇ ಲಿಂಗವಾಗಿ, ಎನ್ನಂಗವೇ ರಂಗಮಧ್ಯವಾಗಿ, ಎನ್ನ ಹೃದಯದ ಕಮಲವೇ ಪೂಜೆಯಾಗಿ, ಎನ್ನ ಕಿವಿಗಳೇ ಕೀರ್ತಿಮುಖವಾಗಿ, ಎನ್ನ ನೆನೆವ ನಾಲಿಗೆಯೇ ಘಂಟೆಯಾಗಿ, ಎನ್ನ ಶಿರವೇ ನಿರ್ಮಲ ಹೊದಿಕೆಯಾಗಿ, ಎನ್ನ ನೆನಹೆ ನಿನಗೆ ಉಪಾಹಾರವಾಗಿ, ಗುರುಪುರದ ಮಲ್ಲಯ್ಯನಿಂದನಾಗಿ."

ಮೇಲೆ ಹೇಳಿದ ಮೂರು ವಚನಗಳಿಗೂ ಸರಿಯಾದ ಉಪನಿಷದ್ವಾಕ್ಯವು-ಕೆಳಗೆ ಬರೆದಂತೆ ಇರುತ್ತದೆ.

"ದೇಹೋ ದೇವಾಲಯಃ ಪ್ರೋಕ್ತೋ ಜೀವೋಽಯಮ್ ಶಂಕರಃ ಸ್ಮೃತಃ"

"देहो देवालयः प्रोक्तो जीवोऽयम् शङ्करःस्मृतः"

"ದೇವನೊಬ್ಬ ನಾಮ ಹಲವು, ಪರಮ ಪತಿವ್ರತೆಗೆ ಗಂಡನೊಬ್ಬ, ಮತ್ತೊಂದಕ್ಕೆರಗಿದರೆ, ಕಿವಿ ಮೂಗ ಕೊಯ್ವನು; ಹಲವು ದೈವದ ಎಂಜಲ ತಿಂಬುವರೇನೆಂಬೆ ಕೂಡಲ ಸಂಗಮದೇವಾ"

ಬಸವೇಶ್ವರನ ವಚನ ಪುಟ ೪೩.

ಇದಕ್ಕೆ ಸಮಾನವಾದ ಉಪನಿಷದ್ವಾಕ್ಯವು—

"ಏಕಮ್ ಸತ್ ವಿಪ್ರಾ ಬಹುಧಾ ವದಂತಿ"

"एकमं सत् विप्रा बहुधा वदन्ति"

ಬಸವಣ್ಣನವರ ವಚನ —ಪುಟ ೩೯ರಲ್ಲಿ.

"ರುದ್ರ ಮುಖದಲ್ಲಿ, ವಿಷ್ಣು ಭುಜದಲ್ಲಿ, ಜಂಘೆಯಲ್ಲಿ ಅಜನ ಜನನವು. ಇಂದ್ರ ಪಾದದಲ್ಲಿ, ಚಕ್ಷುವಿನಲ್ಲಿ ಸೂರ್ಯನ ಜನನವು. ಮುಖದಲ್ಲಿ ಅಗ್ನಿ, ಪ್ರಾಣದಲ್ಲಿ ವಾಯು, ನಾಭಿಯಲ್ಲಿ



CC-0. Jangamwadi Math Collection, Varanasi. An eGangotri Initiative

ಅಂತರಿಕ್ಷವು. ಶಿರದಲುದಯ ತೆತ್ತೀಸ ಕೋಟಿ ದೇವರ್ಕಳು, ಪಾದ ತಳದಲ್ಲಿ ಭೂಮಿಯ ಜನನವು. ಶ್ರೋತ್ರದಲ್ಲಿ ದಶದಿಕ್ಕುಗಳು. ಜಗವ ನಿಕ್ಷೇಪಿಸಿದ ಕುಕ್ಷಿಯಲ್ಲಿ ಅಕ್ಷಯ ಅಗಣಿತನು, ಸಾಸಿರ ತಲೆ, ಸಾಸಿರ ಕಣ್ಣು, ಸಾಸಿರ ಪಾದ, ಸಾಸಿರಕ್ಕೆ ಸಾಸಿರ ಸನ್ನಿಹಿತ ನಮ್ಮ ಕೂಡಲಸಂಗಯ್ಯ." ಇದಕ್ಕೆ ಸರಿಯಾಗಿ ಪುರುಷಸೂಕ್ತದಲ್ಲಿರುವ ಮಂತ್ರವು ಕೆಳಗಿನಂತೆ ಇರುತ್ತದೆ.

"ಸಹಸ್ರಶೀರ್ಷಾ ಪುರುಷಃ ಸಹಸ್ರಾಕ್ಷಃ ಸಹಸ್ರಪಾತ್"

"सहस्रशीर्षा पुरुषः सहस्राक्षः सहस्रपात्"

ಈ ಮಂತ್ರವು ಮೇಲಿನ ವಚನಕ್ಕೆ ಸರಿಯಾಗಿ ಇನ್ನೂ ದೊಡ್ಡದಿರುತ್ತದೆ. ಇದರಂತೆಯೇ ಎಲ್ಲಾ ಉಪನಿಷತ್ತುಗಳಲ್ಲಿಯೂ ವಚನಗಳಿಗೆ ಸರಿಯಾದ ಬೇಕಾದಷ್ಟು ಮಂತ್ರಗಳಿರುತ್ತವೆ. ಅವುಗಳನ್ನು ಬರೆಯುತ್ತ ಹೋದರೆ ಅದೊಂದು ಹೊತ್ತಿಗೆಯೇ ಆಗಬಹುದು. ಮುಖ್ಯವಾಗಿ ಉಪನಿಷತ್ತುಗಳಲ್ಲಿರತಕ್ಕ ವಿಷಯಗಳು ವಚನದಲ್ಲಿ ಬಂದಿರುತ್ತವೆಯೋ ಇಲ್ಲವೋ ಎಂಬುದನ್ನು ವಿಚಾರ ಮಾಡಿದ್ದಾಯಿತು.

ಮೇಲೆ ಬರೆದ ವಿವೇಚನೆಯಿಂದ ತಿಳಿದುಬರುವದೇನಂದರೆ ವಚನಗಳೆಂದರೆ ಕನ್ನಡ ಉಪನಿಷತ್ತುಗಳೆಂದು ಮುಚ್ಚುಮರೆಯಿಲ್ಲದೆ ಹೇಳಲು ಸಾಧ್ಯವಿದೆ. ಇಂತಹ ಶ್ರೇಷ್ಠ ತರಗತಿಯ ವಾಙ್ಮಯವಿರುವದು ಕನ್ನಡ ಸಾಹಿತ್ಯದ ಸುದೈವವೆಂದೇ ಹೇಳಬಹುದು. ಈ ತರಹದ ಧಾರ್ಮಿಕ ವಾಙ್ಮಯವು ವೀರಶೈವ ಸಮಾಜದಲ್ಲಿರುವದು ಅಭಿಮಾನದ ಸಂಗತಿಯಾಗಿರುತ್ತದೆ. ವಚನ ವಾಙ್ಮಯದ ಮಾಧುರ್ಯವು ಉಪಮಾತೀತವಾಗಿದೆ. ಸಕ್ಕರೆಯ ಕರಣಿಯನ್ನು ಯಾವ ಮೂಲೆಯಲ್ಲಿ ಸವಿದರೂ ರುಚಿಯೇ ಇರುವಂತೆ ವಚನವಾಙ್ಮಯದ ಯಾವದೊಂದು ವಚನವನ್ನು ನೋಡಿದರೂ ಅದರಲ್ಲಿ ಅತ್ಯಂತ ಮಹತ್ತರವಾದ ವಿಷಯವು ಅಡಗಿಕೊಂಡಿದೆ. ಅದನ್ನು ಓದಿದರೆ ಮನುಷ್ಯನ ಭಾಷೆಯಲ್ಲಿಯೂ ಪರಿವರ್ತನವಾಗುವದು. ಇಂತಹ ಶ್ರೇಷ್ಠವಾದ ವಾಙ್ಮಯವು ಬಂಗಾಲದಲ್ಲಿಯೋ ಮಹಾರಾಷ್ಟ್ರದಲ್ಲಿಯೋ ಇದ್ದರೆ ಜಗತ್ತಿಗೆ ಅದರ ಪ್ರತಾಪವನ್ನು ತೋರಿಸಿಬಿಡುತ್ತಿದ್ದರು. ಇಂತಹ ವಚನವಾಙ್ಮಯವು ವೀರಶೈವ ಸಮಾಜಕ್ಕೆ ಅತ್ಯಂತ ಭೂಷಣವಾಗಿದೆ. ದುರ್ದೈವದಿಂದ ವೀರಶೈವರಿಗೆ ಪ್ರಚಾರಕಾರ್ಯದ ಜ್ಞಾನವಿಲ್ಲವೆಂದೇ ಹೇಳಬೇಕಾಗಿದೆ. ಇಂತಹ ಶ್ರೇಷ್ಠತರವಾದ ವಾಙ್ಮಯವನ್ನು ಇಂಗ್ಲೀಷ, ಹಿಂದೀ ಮೊದಲಾದ ಎಲ್ಲಾ ಭಾಷೆಗಳಲ್ಲಿಯೂ ಪರಿವರ್ತಿಸಿ ಜಗತ್ತಿಗೆ ಇವರ ಘನತೆಯನ್ನು ತೋರಿಸಿಕೊಡುವುದು ವೀರಶೈವರ ಕರ್ತವ್ಯವಾಗಿರುತ್ತದೆ. ಅಂತಹ ಸದ್ಬುದ್ಧಿಯು ನಮ್ಮ ಸಮಾಜಕ್ಕೆಂದು ಹುಟ್ಟುವದೋ ನೋಡಬೇಕಾಗಿರುತ್ತದೆ.

ಈ ಲೇಖದ ವಿಷಯವು ಗಂಭೀರವಾದುದಾಗಿದೆ. ಈ ಚಿಕ್ಕ ಲೇಖದಲ್ಲಿ ಎಲ್ಲಾ ವಿಷಯಗಳು ಬಾರದೆ ಇದ್ದರೂ "ಸ್ಥಾಲೀ ಪುಲಾಕ ನ್ಯಾಯದಂತೆ" ಅಂದರೆ ಒಂದಗುಳನ್ನು ಹಿಚುಕಿದರೆ ಪಾತ್ರೆಯಲ್ಲಿಯ ಅನ್ನದ ಪರಿಚಯವು ಹೇಗೆ ಆಗುತ್ತದೆಯೋ ಅದರಂತೆಯೇ ಈ ಲೇಖದ ಸ್ಥಿತಿಯಾಗಿದೆ. ಒಂದೇ ಎಂಟು ಪುಟಗಳಲ್ಲಿ ಲೇಖವನ್ನು ಮುಗಿಸಬೇಕೆಂದು ಪ್ರಕಾಶಕರ ಆಜ್ಞೆಯಾದುದರಿಂದ ಅವರ ಅಪ್ಪಣೆಯನ್ನು ಮನ್ನಿಸಿ ಈ ಲೇಖವನ್ನು ಬರೆದಿದ್ದೇನೆ. ಪ್ರಸಂಗ ಬಂದರೆ ಈ ಬಗ್ಗೆ ಒಂದು ಪುಸ್ತಕವನ್ನೇ ಬರೆಯಬೇಕೆಂಬುವ ಹಂಬಲ ಉಳ್ಳವನಾಗಿದ್ದೇನೆ. ಅದೆಷ್ಟರಮಟ್ಟಿಗೆ ನೆರವೇರುತ್ತದೆಂದು ಈಗಲೇ ಹೇಳಲಾರೆನು. ಈ ಲೇಖವನ್ನು ಬರೆಯುವ ಸುಸಂಧಿಯನ್ನು ಒದಗಿಸಿಕೊಟ್ಟದ್ದಕ್ಕೆ ಲಿಂಗಾಯತ ವಾಙ್ಮಯ ಶಾಖೆಯ ಅಧ್ಯಕ್ಷರಿಗೆ ಧನ್ಯವಾದಗಳು.



CC-0. Jangamwadi Math Collection, Varanasi. An eGangotri Initiative



# ವಚನಶಾಸ್ತ್ರ ಹಾಗೂ ಉಪನಿಷತ್ತುಗಳು

'ವಚನಶಾಸ್ತ್ರ ರಹಸ್ಯ'ವನ್ನು ಬರೆಯುವಾಗ ವಚನಶಾಸ್ತ್ರದ ಬಗ್ಗೆ ಇನ್ನೂ ಅನೇಕ ವಿಧವಾಗಿ, ಅನೇಕ ದೃಷ್ಟಿಯಿಂದ ವಿಚಾರಮಾಡಿ ಬರೆಯಬಹುದು ಎಂದು ನಾನು ಉಲ್ಲೇಖಿಸಿದ್ದೇನೆ. ವಚನಶಾಸ್ತ್ರ ಹಾಗೂ ಉಪನಿಷತ್ತುಗಳು ಇವುಗಳನ್ನು ಹೋಲಿಸಿ ತುಲನಾತ್ಮಕ ದೃಷ್ಟಿಯಿಂದ ಅವುಗಳ ವಿಚಾರಮಾಡಿ ಬರೆಯುವದು ಆ ಅನೇಕ ವಿಧಗಳಲ್ಲಿ ಒಂದು. ಈ ವಿಷಯವು ಕೂಡ ಒಂದು ಸ್ವತಂತ್ರ ಗ್ರಂಥವನ್ನು ಬರೆಯುವಷ್ಟು ವಿಶಾಲವಾದುದು. ಆದರೆ ಇಲ್ಲಿ ಅಷ್ಟೊಂದು ಉದ್ದ ನೀರಿಗೆ ನಾನು ಸ್ಥಲಕಾಲಗಳ ಅಭಾವಗಳಮೂಲಕ ಹೋಗಲಾರೆನೆಂದು ಹೇಳಲು ವಿಷಾದಿಸುವೆನು. ಈ ವಿಶಿಷ್ಟ ವಿಷಯವನ್ನು ಯಾವ ರೀತಿ ಅಭ್ಯಸಿಸಬಹುದು ಹಾಗೂ ವಿಸ್ತರಿಸಬಹುದು ಎಂಬುದರ ದಿಗ್ದರ್ಶನವನ್ನು ಮಾಡಿ ನಾನು ಇಲ್ಲಿ ವಿರಮಿಸುವೆನು.

ವಚನಶಾಸ್ತ್ರ ಹಾಗೂ ಉಪನಿಷತ್ತುಗಳು ಈ ಶಬ್ದಗಳನ್ನು ಒಂದೇ ಉಸುರಿನಲ್ಲಿ ಉಚ್ಚರಿಸುವದು ಸಹ ಪಾಪವು, ಅಬ್ರಹ್ಮಾಣ್ಯವು (Sacrilegous) ಎಂದೆನ್ನುವವರು ಈ ಇಪ್ಪತ್ತನೆಯ ಶತಮಾನದಲ್ಲಿಯೂ ನಮಗೆ ಹಲವರು ದೊರೆಯಬಹುದು. ಉಪನಿಷತ್ತೆಂದರೆ ವೇದಭಾಗಗಳು ಅವೆಲ್ಲಿ? ಈ ಕನ್ನಡದಲ್ಲಿ ಬರೆದ ವಚನಶಾಸ್ತ್ರವೆಲ್ಲಿ? ಎಂದು ಹೇಳುವವರೂ ಇರುವರು. ಅದೇ ರೀತಿ ವಚನಶಾಸ್ತ್ರವೆಂಬುದು ಸ್ವತಂತ್ರ ಷಟ್‌ಸ್ಥಲ ಶಾಸ್ತ್ರ, ವೇದೋಪನಿಷತ್ತುಗಳಿಗೆ ಅದರ ಸಂಬಂಧ ವೇನು? ಎಂದು ಅನ್ನುವವರೂ ದೊರೆಯುವರು. ಈ ಎರಡೂ ವರ್ಗದವರು ಪೂರ್ವಗ್ರಹ ದೂಷಿತರು, ಇಲ್ಲವೆ ಅಂಧಭಾವನೆಯಿಂದ (Superstition) ಪೀಡಿತರು — ಈ ಎರಡೂ ವರ್ಗದವರನ್ನು ಬಿಟ್ಟು ನಾವು ಈ ವಿಷಯವನ್ನು ವಿಚಾರಿಸಲಿಕ್ಕೆ ಬೇಕು. ವಚನಗಳು ಹಾಗೂ ಉಪನಿಷತ್ತುಗಳು ಅತ್ಯುಚ್ಚ ತತ್ತ್ವಾನುಭವಗಳನ್ನು ಹೇಳುವ ಗ್ರಂಥಗಳು ಎಂಬ ಭಾವನೆಯಿಂದಲೆ ನಾವು ಇವುಗಳನ್ನು ಅಭ್ಯಸಿಸಲಿಕ್ಕೆ ಬೇಕು.

ಹಿಂದಕ್ಕೆ ಶ್ರೀ ಸ್ವಾಮಿ ವಿವೇಕಾನಂದರು 'ವೇದ' ಎಂಬುದಕ್ಕೆ ಯಾವ ವ್ಯಾಖ್ಯೆಯನ್ನು ಹೇಳಿದರೊ ಅದನ್ನು ನಾವು ಇಲ್ಲಿ ಲಕ್ಷದಲ್ಲಿಡಲಿಕ್ಕೆ ಬೇಕು. ಅವರು ಹೇಳಿದುದೇನಂದರೆ, ವೇದ ಎಂದರೊಂದು ಬರಿಯ ಹಳೇ ಕಿಗ್ಗಳ ಗ್ರಂಥರಾಶಿಯಲ್ಲ. ವೇದ ಅಂದರೆ ಜ್ಞಾನ, ಆಧ್ಯಾತ್ಮಜ್ಞಾನ, ಎಲ್ಲ ಜ್ಞಾನವೂ ವೇದವೆನಿಸುವದು-ಎಂದು ಹೇಳಿ ಅವರು ಪಾಶ್ಚಾತ್ಯರ ಬಾಯಿ ಕಟ್ಟಿದರು. 'ವೇದ' ಬರೆಯುವ ಕಾಲ, ಇಲ್ಲವೆ ಅವನ್ನು ನಿರ್ಮಾಣ ಮಾಡುವ ಕಾಲವು ಇನ್ನೂ ಹೋಗಿಲ್ಲ ಅದು



CC-0. Jangamwadi Math Collection, Varanasi. An eGangotri Initiative

ಎಂದೂ ಹೋಗುವದು ಸಾಧ್ಯವಿಲ್ಲ. ಮನುಷ್ಯನ ಆಧ್ಯಾತ್ಮಿಕ ಶಕ್ತಿಯು ಎಲ್ಲಿಯವರೆಗೆ ದಿವಾಳಿ ತೆಗೆಯುವದಿಲ್ಲವೊ ಅಲ್ಲಿಯವರೆಗೆ 'ವೇದನಿರ್ಮಿತಿ' ಆಗುತ್ತಲೆ ಇರುವದು, ದೃಷ್ಟಾರರು ಹುಟ್ಟುತ್ತಲೆ ಇರುವರು. ಇದೇ ದೃಷ್ಟಿಯಿಂದ ವಚನಶಾಸ್ತ್ರಕ್ಕಾಗಲಿ ದಾಸರು ಬರೆದ ಸುಳಾದಿ ಹಾಗೂ ಉಗಾ ಭೋಗಾದಿಗಳಿಗಾಗಲಿ 'ಕನ್ನಡ ವೇದ' ಎಂದರೆ ತಪ್ಪಾಗಲಿಕ್ಕಿಲ್ಲ.

ತಮಿಳಿನಲ್ಲಿ 'ದ್ರಾವಿಡವೇದ' ಎಂಬ ಗ್ರಂಥಗಳು ಈಗ್ಯೂ ಪ್ರಸಿದ್ಧವಿರುವವು. ಅವುಗಳನ್ನು ಜನರು ವೇದಗಳಂತೆ ಪೂಜಿಸುವರು—ಮನ್ನಿಸುವ ಮಾತನ್ನು ಬಿಟ್ಟುಬಿಡಿ! ಆ ದ್ರಾವಿಡ ವೇದಗಳಾದರೂ ತಮಿಳು ಸಾಧುಸಂತರು ಬರೆದ ಪ್ರಬಂಧಗಳೇ ಇರುವವು. ತಮಿಳು ಭಾಷೆಯಲ್ಲಿ ಬರೆದಾಕ್ಷಣಕ್ಕೆ ಅವುಗಳ ಬೆಲೆಯು ಕಡಿಮೆಯಾಗಲಿಲ್ಲ ಅಥವಾ ಆಗಬಾರದು, ಆಗಕೂಡದು. ಯಾವದೊಂದು ಮಾತು ಸಂಸ್ಕೃತದಲ್ಲಿದ್ದರೆ, ವಿಶೇಷವಾಗಿ ಆಧ್ಯಾತ್ಮಕ ಇಲ್ಲವೆ ಧಾರ್ಮಿಕ ವಿಷಯವು ಸಂಸ್ಕೃತದಲ್ಲಿದ್ದರೆ ಅದು ಶ್ರೇಷ್ಠ ಎಂಬ ಭಾವನೆಯು ನಮ್ಮಲ್ಲಿ ಬಹುಕಾಲದಿಂದ ನಡೆದು ಬಂದಂತೆ ಕಂಡುಬರುವದು. ಈ ಬಗ್ಗೆ ಕನ್ನಡ ಕವಿಗಳು ಕೂಡ ದೂರಿಡುತ್ತ ಬಂದಿರುವರು. ಹರಿಹರ ಮಹಾಲಿಂಗರಂಗ ಇತ್ಯಾದಿ ಕವಿಗಳಂತೂ ಕನ್ನಡದಲ್ಲಿ ಹೇಳಿದರೆ ಆಗಲಿಲ್ಲವೇ 'ಸಂಸ್ಕೃತದಲ್ಲಿನ್ನೇನು ಎಂದು ಆಹ್ವಾನಿಸಿದ್ದಾರೆ! ಈಗ ನಮ್ಮ ಹಣೇಬರಹಕ್ಕೆ ಸಂಸ್ಕೃತದ ಜೋಲಿಗೆ ಇಂಗ್ಲೀಷೊಂದು ಬಂದಿದೆ! ಇಂಗ್ಲೀಷದಲ್ಲಿ ಬರೆದುದು, ಸಾಹೇಬರು ಹೇಳಿದ್ದು, ಹೆಚ್ಚಿನದು ಎಂಬ ಭಾವನೆ ಒಮ್ಮೆ ಪರಮಾವಧಿಗೆ ಮುಟ್ಟಿತ್ತು. ಈಗೇನೋ ಅದು ಸ್ವಲ್ಪ ಕಡಿಮೆಯಾಗಿದೆ; ಇರಲಿ.

ನಾನು ಬರೆಯಲುಜ್ಜುಗಿಸಿದ ವಿಷಯವನ್ನು ಕುರಿತು ಇಲ್ಲಿ ಸಾಂಗೋಪಾಂಗವಾಗಿ ಬರೆಯುವದು ಅಶಕ್ಯವೆಂದು ಈ ಮೊದಲೇ ನಾನು ಹೇಳಿಕೊಂಡಿದ್ದೇನೆ. ಆದುದರಿಂದ ವಚನಶಾಸ್ತ್ರ ಹಾಗೂ ಉಪನಿಷತ್ತುಗಳು ಇವುಗಳಲ್ಲಿಯ ವಿಷಯ ಮತ್ತು ಬರೆಹದ ರೀತಿ ಇವುಗಳನ್ನು ಕುರಿತು ಒಂದೆರಡು ಮಾತುಗಳನ್ನು ಬರೆದು ಸಾಕುಮಾಡುವೆನು.

ಇವೆರಡನ್ನೂ ಹೋಲಿಸುವ ಅಥವಾ ಇವೆರಡನ್ನೂ ಒಂದೇ ವರ್ಗದಲ್ಲಿ ಸೇರಿಸುವ ಮುಖ್ಯ ಕಾರಣವೇನೆಂದರೆ ಇವೆರಡೂ ಅಧ್ಯಾತ್ಮ ಶಾಸ್ತ್ರಕ್ಕೆ ಸೇರಿದವುಗಳು. ಆತ್ಮಜ್ಞಾನವೆಂದರೇನು? ಆತ್ಮನ ಸ್ವರೂಪವೇನು? ಆತ್ಮಜ್ಞಾನದ ಸಾಧನವಾವುದು? ಈ ವಿಷಯವೇ ಈ ಎರಡೂ ಗ್ರಂಥಗಳಿಗೂ ಸಾಮಾನ್ಯವಾದುದು. ಈ ಎರಡರಲ್ಲಿಯೂ ಮುಖ್ಯವಾಗಿ ಪ್ರತಿಪಾದಿತ ವಿಷಯವೆಂದರೆ ಇದೇ ಇರುವದು. "ಆತ್ಮಾವಾ ಅರೇ ಶ್ರೋತವ್ಯಃ ಮಂತ್ರವ್ಯಃ ನಿದಿಧ್ಯಾಸಿತವ್ಯಃ" ಎಂಬ ಘೋಷವು ಉಪನಿಷತ್ತುಗಳೊಳಗಿನಿಂದ ಹೊರಟಂತೆ, "ತನ್ನ ತಾನರಿವುದೆ ಪರಮಜ್ಞಾನ, ತನ್ನರಿವೆ ಗುರು," ಎಂಬ ಧ್ವನಿಯು ವಚನಗಳಲ್ಲಿ ಒಡಮೂಡಿರುವದು. ಪರಮಾತ್ಮ ವ್ಯಾಪ್ತಿಯನ್ನು 'ಈಶಾವಾಸ್ಯಮಿದಂ ಸರ್ವಂ' ಎಂಬ ಮಂತ್ರದಿಂದ ಉಪನಿಷತ್ಕಾರರು ವರ್ಣಿಸಿದ್ದಾರೆ, 'ಎಲ್ಲೆಲ್ಲಿಯೂ ನೀನೇ ದೇವಾ,' ಎಂದು ವಚನಕಾರರು ನುಡಿದಿದ್ದು ನನಗೆ ಕಂಡುಬರುವದು. 'ತೇನ ತ್ಯಕ್ತೇನ ಭುಂಜೀಥಾಃ' ಎಂದು ಅರ್ಪಣಭಾವವನ್ನು ಉಪನಿಷತ್ಕಾರರು ಹೇಳಿದ್ದಾರೆ. ವಚನಕಾರರು ಅದೇ ಮಾತನ್ನು ಶರಣರು ಪ್ರಸಾದವೆಂದು ಎಲ್ಲವನ್ನು ಕೈಕೊಳ್ಳಬೇಕು ಎಂದು ಹೇಳಿದ್ದಾರೆ. ಹಲವೆಡೆಗೆ ವಚನಕಾರರು ಉಪನಿಷತ್ಕಾರರ ಶಬ್ದಗಳನ್ನೆ ಎತ್ತಿಕೊಂಡು ಬರೆದಿರುವರು—'ವಿಶ್ವತೋ ಮುಖ ನೀನೇ ದೇವಾ ವಿಶ್ವತೋ ಚಾಕ್ಷ ನೀನೇ ದೇವಾ, ವಿಶ್ವತೋ ಬಾಹು ನೀನೇ ದೇವಾ,' ಇತ್ಯಾದಿ. ಹೀಗೆ



CC-0. Jangamwadi Math Collection, Varanasi. An eGangotri Initiative

ಅವರು ಹಲವೆಡೆಗೆ ಮಾಡಿದಾಕ್ಷಣಕ್ಕೆ ಅವರ ಸ್ವಾತಂತ್ರ್ಯವಾಗಲಿ, ಸ್ವಯಂಸ್ಫೂರ್ತಿಯಾಗಲಿ ಇವುಗಳಿಗೆ ಯಾವ ಕುಂದೂ ಬರಲಾರದು. ಯಾಕೆಂದರೆ ಇಂಥ ಪ್ರಸಂಗಗಳು ಕಡಿಮೆ; ಹಾಗೂ ಕವಿಗಳು ತಮ್ಮ ಪೂರ್ವಿಕರ ಕೃತಿಗಳನ್ನು ಓದಿದಾಕ್ಷಣಕ್ಕೆ ಇಲ್ಲವೆ ಪ್ರಸಂಗವಶಾತ್ ಉದಾಹರಿಸಿ ದಾಕ್ಷಣಕ್ಕೆ ಅದು ಅವರ ಸ್ವತಂತ್ರಕಾವ್ಯನಿರ್ಮಿತಿಗೆ ಯಾವ ರೀತಿ ಅಡ್ಡಬರಲಾರದೊ ಅದೇ ರೀತಿ ಉಪನಿಷತ್ತುಗಳ ಅಭ್ಯಾಸವಾಗಲಿ, ಅವುಗಳ ಕ್ವಚಿತ್ ಅನುಕರಣವಾಗಲಿ ವಚನಕಾರರ ಸ್ವತಂತ್ರ ಲೇಖನಕ್ಕೆ ಅಡ್ಡ ಬಂದಿಲ್ಲವೆಂದು ಧಾರಾಳವಾಗಿ ಹೇಳಬಹುದು. ವಚನಕಾರರು ಕೇವಲ ಆಧ್ಯಾತ್ಮಿಕ ವಿಷಯವನ್ನು ಬರೆದು ಸಮಾಧಾನಪಡದೆ ಹಲವು ಸಾಮಾಜಿಕ ಪ್ರಶ್ನೆ ಪದ್ಧತಿಗಳ ನ್ನಾದರೂ ಕೆಣಕಿ ತಮ್ಮ ವೀರವತ್ತರವಾದ ವಾಣಿಯಿಂದ ತಮ್ಮ ಸ್ಪಷ್ಟವಾದ ಅಭಿಪ್ರಾಯಗಳನ್ನು ವ್ಯಕ್ತಗೊಳಿಸಿರುವರು.

ವಚನಕಾರರ ಹಾಗೂ ಉಪನಿಷತ್ಕಾರರ ಮುಖ್ಯ ವಿಷಯವು — ಅಧ್ಯಾತ್ಮಶಾಸ್ತ್ರ, ಆತ್ಮಾನುಭವ — ಒಂದೇ ಇದ್ದರೂ ಪ್ರಕ್ರಿಯೆ, ಪದ್ಧತಿ, ಸಾಧನ ಇವುಗಳಲ್ಲಿ ಸಾಕಷ್ಟು ಭಿನ್ನತೆ ಕಂಡುಬರುವದು. ಚಿತ್-ಸ್ಥಿತಿಯಲ್ಲಿ ಜಾಗ್ರತ್, ಸ್ವಪ್ನ, ಸುಷುಪ್ತಿ, ತುರೀಯ ಎಂಬ ಮಟ್ಟುಗಳನ್ನು ಮಾಡಿ, ಪ್ರಾಣಾದಿಕೋಶಗಳನ್ನು ಕಲ್ಪಿಸಿ ತದನುಸಾರವಾಗಿ ಸಾಧನವನ್ನು ಕೈಕೊಳ್ಳಲು ಉಪ ನಿಷತ್ಕಾರರು ಹೇಳಿರುವರು. ಆದರೆ ವಚನಕಾರರು ಷಟ್‌ಸ್ಥಲಗಳನ್ನು ಕಲ್ಪಿಸಿ ಮಾರ್ಗವನ್ನು ತೋರುವರು. ಇಬ್ಬರ ಧ್ಯೇಯವೂ ಒಂದೆ — 'ಶಾಂತಂ, ಶಿವಂ, ಅದ್ವೈತಂ, ಏಕಾತ್ಮ ಪ್ರತ್ಯಯ ಸಾರಂ' ಎಂಬುದೇ ಇಬ್ಬರ ಧ್ಯೇಯವು— ಇದೇ ತುರಿಯಾವಸ್ಥೆಯು, ಸಮರಸೈಕ್ಯವು, ಶಿವಸಾಮ ರಸ್ಯವು, ಕರ್ಪುರ ಉಂಡ ಶಿಖಿಯಂತೆ ಇರುವದು. ಆದರೆ ಪ್ರಕ್ರಿಯೆ ಬೇರೆ. ಉಪನಿಷತ್ಕಾರರು 'ಯೋಗವಿಧಿ' ಎಂಬ ಮುಖ್ಯ ಸಾಧನವನ್ನು, ಓಂಕಾರೋಪಾಸನೆಯನ್ನೂ ಹೇಳಿರುವರು. ವಚನ ಕಾರರು ವಿವಿಧ ಯೋಗಗಳ ಸಮನ್ವಯವಾದ ಶರಣಮಾರ್ಗವನ್ನು ಹೇಳಿರುವರು.

ಇನ್ನು ವಿಷಯವನ್ನು ಹೇಳುವ ಪದ್ಧತಿಯಲ್ಲಿ ಇಬ್ಬರೂ ಕೆಲಮಟ್ಟಿಗೆ ಒಂದೇ ಇದ್ದರೂ ಅಲ್ಲಿಯೂ ಭಿನ್ನತೆ ಇದೆ. ಇಬ್ಬರೂ ಅನುಭವವನ್ನು ಹೇಳುವ ವಿಚಾರದಿಂದ ಹೊರಟಿರುವರೇ ಹೊರತು ಕೇವಲ ತರ್ಕಶಾಸ್ತ್ರದಿಂದ 'ಇತಿ ಸಿದ್ಧಂ' ಎಂದು ಪ್ರಸ್ಥಾಪಿಸಲು ಹೊರಟಿಲ್ಲ. ಆದರೂ ಉಪನಿಷತ್ಕಾರರು ಎಷ್ಟೋ ಕಡೆಗೆ ಸಂವಾದ ಪದ್ಧತಿಯನ್ನು ಸ್ವೀಕರಿಸುತ್ತಿದ್ದದರಿಂದ ತರ್ಕವು ಅಪರಿ ಹಾರ್ಯವಾಗಿದೆ. ವಚನಕಾರರಿಗೆ ಆ ಅವಶ್ಯಕತೆ ಉಂಟಾಗಿಲ್ಲ. ಅವರು ಸರಳವಾಗಿ ತಮ್ಮ ಸ್ಫೂರ್ತಿಯಿಂದ ಅನುಭವವನ್ನು ಸಾರಿಬಿಟ್ಟಿರುವರು. ಆದುದರಿಂದ ವಚನಗಳಲ್ಲಿ ಒಂದು ಬಗೆಯ ಹೆಚ್ಚಿನ ಹುರಿಕಟ್ಟು ಕಂಡುಬರುವದು. ಇದೇ ಬಗೆಯನ್ನು ಉಪನಿಷತ್ಕಾರರು ಸ್ವೀಕರಿಸಿದಾಗ ಇದೇ ರೀತಿಯ ನಿರ್ಧಾರ ಹಾಗೂ ಕಟ್ಟು ಉಪನಿಷತ್-ವಾಕ್ಯಗಳಲ್ಲಿ ಕಂಡುಬರುವದು. 'ನಾನ್ಯಃ ಪಂಥಾ ವಿದ್ಯತೇ ಅಯನಾಯ', 'ಅಮೃತಸ್ಯ ತು ನಾಶಾಸ್ತಿ ವಿತ್ತೇನ', ಇತ್ಯಾದಿ ವಾಕ್ಯಗಳು ಶಾಶ್ವತವಾಗಿ ನಮ್ಮ ಅಂತಃಕರಣದಲ್ಲಿ ಕೊರೆದಿಟ್ಟಂತೆ ಆಗುತ್ತಿವೆ. ಅದೇ ರೀತಿ 'ಸತ್ಯಂ ವದ', 'ಧರ್ಮಂ ಚರ', 'ಸ್ವಾಧ್ಯಾಯಾನ್ಮಾ ಪ್ರಮದಃ' ಎಂಬ ವಾಕ್ಯಗಳು ಎಷ್ಟೊಂದು ವಿಧಿಯಂತೆ ನಮ್ಮ ಮನಸಿನ ಮೇಲೆ ಪರಿಣಾಮ ಮಾಡುವುವೋ — ಅದೇ ರೀತಿ 'ಕಳಬೇಡ, ಕೊಲಬೇಡ, ಹುಸಿಯ ನುಡಿಯಲು ಬೇಡ' ಎಂಬ ಮುಂತಾದ ವಚನಗಳು ನಿಸರ್ಗಸಿದ್ಧ ಸಿದ್ಧಾಂತಗಳಂತೆ ನಮ್ಮ ಮನಸ್ಸನ್ನು ಹಿಡಿದುಕೊಳ್ಳುವವು.



CC-0. Jangamwadi Math Collection, Varanasi. An eGangotri Initiative

ಈ ಬಗೆಯಾಗಿ ವಚನಕಾರರು ಹಾಗೂ ಉಪನಿಷತ್ಕಾರರು ಬರೆದ ವಿಷಯ, ರೀತಿ, ಪದ್ಧತಿ ಮುಂತಾದವುಗಳಲ್ಲಿಯ ಸಾಮ್ಯವೈಷಮ್ಯಗಳನ್ನು, ವಿವಿಧತೆಯನ್ನು ಅಭ್ಯಸಿಸಲು ಬೇಕಾದಷ್ಟು ಅವಕಾಶವಿದೆ. ಆದರೆ ಹಲವು ಮುಖ್ಯವಾದ ಸಂಗತಿಗಳನ್ನು ನಾವು ಲಕ್ಷ್ಯದಲ್ಲಿಟ್ಟೇ ತೀರಬೇಕು. ಇಬ್ಬರೂ ಅನುಭಾವಿಗಳು, ಅನುಭವಶಾಸ್ತ್ರವನ್ನು ಕುರಿತು ಬರೆದವರು, ಸ್ವಯಂ ಸ್ಫೂರ್ತಿಯಿಂದ ಬರೆದವರು, ಅತ್ಯುಚ್ಚ ಆಧ್ಯಾತ್ಮಿಕ ಮಟ್ಟನ್ನು ಮುಟ್ಟಿ ಬರೆದವರು; ಇಲ್ಲವೆ ಆ ಮಟ್ಟನ್ನು ಮುಟ್ಟಲು ಯತ್ನಿಸುತ್ತಿರುವಾಗ ಬರೆದವರು. ಭಾಷೆ ಸಂಸ್ಕೃತವೇ ಇರಲಿ ಕನ್ನಡವೇ ಇರಲಿ; ಅದು ಮಹತ್ತ್ವದ್ದಲ್ಲ. ಈ ವಚನಕಾರರೇ ಉಪನಿಷತ್ಕಾಲದಲ್ಲಿದ್ದಿದ್ದರೆ ಅವರು ಸಂಸ್ಕೃತದಲ್ಲಿ ಬರೆಯಬಹುದಾಗಿತ್ತು. ಆ ಉಪನಿಷತ್ಕಾರರು ಈ ಕಾಲದಲ್ಲಿದ್ದಿದ್ದರೆ ಕನ್ನಡದಲ್ಲಿ ಬರೆಯಬಹುದಾಗಿತ್ತು. ಈ ಒಂದೆರಡು ಸಂಗತಿಗಳನ್ನು ಮನಸ್ಸಿನಲ್ಲಿಟ್ಟು ಈ ವಿಷಯವನ್ನು ಅಭ್ಯಸಿಸಬೇಕೆಂದು ನನ್ನ ಬಿನ್ನಹ.

---



CC-0. Jangamwadi Math Collection, Varanasi. An eGangotri Initiative



# ಅನುಭವಮಂಟಪ

ಭಕ್ತಿಗೆ ಅನುಭಾವವೇ ಬೀಜ ಕಾಣಿರೋ, ಭಕ್ತಿಗೆ ಅನುಭಾವವೇ ಆಚರಣೆ ಕಾಣಿರೋ, ಭಕ್ತಿಗೆ ಅನುಭಾವವೇ ಸಕಲೈಶ್ವರ್ಯದ ಶೃಂಗಾರ ಕಾಣಿರೋ, ವೀರಶೈವಾಚಾರ ಸಂಪನ್ನರೆನಿಸುವ ಪರಮಸದ್ಭಕ್ತರಿಗೆ ಅನುಭಾವವೇ ಅರುವಿನ ಗೊತ್ತು ಕಾಣಿರೋ. ಅದು ಕಾರಣವಾಗಿ ಅನುಭಾವವಿಲ್ಲದವನ ಭಕ್ತಿ ಎಳತಟಗೊಳಿಸಿತ್ತು. ಅನುಭಾವವನರಿಯದವ ಕಾಮುಕ ಕಾಣಿರೋ. ಆ ಮಹಾನುಭಾವವ ಮಾಡುವಲ್ಲಿ ಸಕಲ ಸಂಚಲವಳಿದು ವಿನಯದಿಂದೆ ಕೇಳದಿರ್ದೊಡೆ ನಮ್ಮ ಕೂಡಲ ಚೆನ್ನಸಂಗಮದೇವರು ಅಘೋರನರಕದಲ್ಲಿಕ್ಕದೆ ಮಾಣ್ಬನೆ?

—ಚೆನ್ನಬಸವಣ್ಣನವರು

## ಪೀಠಿಕೆ

'ಶರಣರು ಮೆಟ್ಟಿದ ಧರೆ ಪಾವನ'ವೆಂದು ಪ್ರಸಿದ್ಧವಾದ ಕಲ್ಯಾಣಪಟ್ಟಣವು ಸೋಮೇಶ್ವರ ಆಹವಮಲ್ಲ (ಕ್ರಿ. ಶ. ೧೦೪೦–೧೦೬೯)ನಿಂದ ನಿರ್ಮಿತವಾಯಿತು. ಕ್ರಿ. ಶ. ೧೦೭೬-೧೧೨೬ ರ ವರೆಗೂ ಆಳಿದ, ಅತ್ಯಂತ ಪ್ರಸಿದ್ಧ ಚಾಲುಕ್ಯ ಚಕ್ರವರ್ತಿ ವಿಕ್ರಮಾಂಕನ ಆಸ್ಥಾನ ಪಂಡಿತನಾದ ವಿಜ್ಞಾನೇಶ್ವರನು ತನ್ನ 'ಮಿತಾಕ್ಷರಿ' ಎಂಬ ಧರ್ಮಗ್ರಂಥದಲ್ಲಿ 'ನಾಸೀದಸ್ತಿ ಭವಿಷ್ಯತಿ ಕ್ಷಿತಿತಲೇ ಕಲ್ಯಾಣಕಲ್ಪಂ ಪುರಂ' ಎಂದು ಹೊಗಳಿರುವನು. ಆದರೆ 'ಕಲಚೂರ್ಯ ಭುಜಬಲ ಚಕ್ರವರ್ತಿ' ಎಂದು ಪ್ರಸಿದ್ಧನಾದ ಬಿಜ್ಜಳನ ಕಾಲಕ್ಕೆ (ಕ್ರಿ. ಶ. ೧೧೫೬–೧೧೬೭) ಅದು ಪ್ರಸಿದ್ಧಿಗೆ ಬಂದಷ್ಟು ಮತ್ತಾರ ಕಾಲಕ್ಕೂ ಬರಲಿಲ್ಲ; ಇದಕ್ಕೆ ಕಾರಣವು ಕಲಚೂರ್ಯ ರಾಜನ 'ಭುಜಬಲ' ಪ್ರತಾಪವಲ್ಲ; ಅವನ ದಂಡನಾಯಕರಾಗಿದ್ದ ಮಹಾನುಭಾವಿ ಬಸವಣ್ಣನವರ ವ್ಯಕ್ತಿತ್ವ! ಅವರ ಧರ್ಮ ಪ್ರಸಾರಣೆಯ ಆಕಾಂಕ್ಷೆ, ಮತ್ತು ಪರಿಣಾಮಗಳು!

(ಅಂದಿನ 'ಭೂಕೈಲಾಸ'ವಾಗಿ ವಿರಾಜಿಸಿದ ಕಲ್ಯಾಣವು ಇಂದಿನ ನೈಜಾಮ ಪ್ರಾಂತಕ್ಕೆ ಸೇರಿದ್ದು—ಗುಲ್ಬರ್ಗೆಯ ಉತ್ತರಕ್ಕೆ ಅರವತ್ತು ಮೈಲು ದೂರದಲ್ಲಿರುವುದು.) ಬಸವಣ್ಣನವರು ವೀರಶೈವ ಮತಾಚಾರ್ಯರಾಗಿ ಧಾರ್ಮಿಕ, ಸಾಮಾಜಿಕ, ನೈತಿಕ ಇತ್ಯಾದಿ ಅನೇಕ ಸಮಸ್ಯೆಗಳನ್ನು ಬಿಡಿಸಿ ಮತಪ್ರಸಾರಣ ಕಾರ್ಯಕ್ಕೆ ಮೂಲ ಸ್ಥಂಭವಾಗಿ ನಿಂತರು. ಈ ಎಲ್ಲ ಅಂಗಾಂಗಗಳನ್ನೂ ಒಳಗೊಂಡು ಅಂದಿನ ದೇಶ, ಕಾಲ, ಪರಿಸ್ಥಿತಿಗನುಸಾರವಾಗಿ ಜನಜೀವನದಲ್ಲಿ ಧಾರ್ಮಿಕ ಸಂಸ್ಕೃತಿಯು ಮೂಡಿ ಬೆಳೆಯುವಂತೆ ಮಾಡಿದ ಮುಖ್ಯ ಸಾಧನ – 'ಅನುಭವಮಂಟಪ'. ಅದು ಶಿವನ ಸರ್ವೋತ್ತಮತೆಯನ್ನು ಸಾರುತ್ತಿದ್ದುದರಿಂದ ಇತಿಹಾಸದಲ್ಲಿ ಅದಕ್ಕೆ 'ಶಿವಾನುಭವ ಮಂಟಪ'ವೆಂಬ ಹೆಸರೂ ಉಂಟು.



CC-0. Jangamwadi Math Collection, Varanasi. An eGangotri Initiative

## ಅನುಭವಮಂಟಪ ಮತ್ತು ಅದರ ಅವಶ್ಯಕತೆ

ಪ್ರಾಚೀನ ವೇದೋಪನಿಷತ್ತುಗಳ ಕಾಲದ ಆರ್ಯಧರ್ಮವು, ಸ್ವಾಭಾವಿಕವಾದ ಏರಿಳಿತಗಳ ಹಿಡಿತಕ್ಕೆ ಸಿಲ್ಕಿ ಕ್ಷೀಣಗತಿಯನ್ನೈದಲಾರಂಭಿಸಿತು. ಪೌರಾಣಿಕ ಕಾಲಕ್ಕೆ ಜನಿಸಿದ ಚಾತುರ್ವರ್ಣಗಳು ಬಹುಕಾಲದ ವರೆಗೆ ತಮ್ಮ ಜನಾನುರಾಗವನ್ನು ಉಳಿಸಿಕೊಳ್ಳಲಾರದೆ ಹೋದವು. ಮತಧರ್ಮಗಳು ಹೆಚ್ಚು ಗ್ರಾಂಥಿಕವಾಗಿ ಉಳಿದುದರಿಂದ ಧರ್ಮದ ಪರಿಣಾಮವು ಜನಾಂಗಗಳ ಮೇಲೆ ಬೀಳದಂತಾಯಿತು; ಸಾಧಾರಣ ತತ್ತ್ವಗಳು ಸಹ ಜನಜೀವನವನ್ನು ಮುಟ್ಟದಾದವು. ಯಜ್ಞಯಾಗಾದಿಗಳ ಉಚ್ಛ್ರಾಯ ಸ್ಥಿತಿಯಲ್ಲಿ ಸತ್ತ್ವಗುಣಕ್ಕೆ ಬದಲಾಗಿ ತಮೋಗುಣವು ಆ ಸ್ಥಳವನ್ನು ಆಶ್ರಯಿಸಿತು; ದಯೆ, ಕರುಣೆ, ಮಮತೆಗಳಿಗೂ ಸಹ ಅಭಾವ ಬಂದಿತು. ಈ ಪರಿಸ್ಥಿತಿಯಲ್ಲಿ ಜನಾಂಗವು ದಾರಿಗಾಣದೆ ತೊಳಲುತ್ತಿರುವಾಗ, ಲೋಕಕಲ್ಯಾಣಕ್ಕಾಗಿ ಮನಮಿಡುಗಿದ ಮಹಾಪುರುಷರನೇಕರು ಧರ್ಮದ ಈ ಜಿಹಾಸೆಯನ್ನು ಹೋಗಲಾಡಿಸಲು ಪ್ರಯತ್ನಿಸಿದರು. ಈ ರೀತಿ ಹುಟ್ಟಿದ ಪಂಥಗಳಲ್ಲಿ ಜೈನ ಮತ್ತು ಬೌದ್ಧಮತಗಳೂ ಸಹ ಪರಿಗಣಿತವಾಗಿವೆ. ಆದರ್ಶವೆನಿಸಿದ ಹಿಂದೂ ಧರ್ಮದಲ್ಲಿದ್ದ ಅನೇಕ ಕುಂದುಕೊರತೆಗಳನ್ನು ಇವು ಹೋಗಲಾಡಿಸಿದರೂ ಸಹ ವಿಶೇಷ ಜನಾನುರಾಗದ ಪಂಥಗಳಾಗಿ ಉಳಿಯಲು ಇವುಗಳಿಗೆ ಸಾಧ್ಯವಾಗಲಿಲ್ಲ. ಧರ್ಮವು ಪ್ರಗತಿಯುಳ್ಳದ್ದು; ಅಂದಿನ ಜನಜೀವನದ ಹೃದಯದ ಮಿಡಿತ, ಹಂಬಲ ಮತ್ತು ಆಶೆಗಳಿಗೆ ತಕ್ಕ ಹಾಗೆ ಅದು ಹೊಸ ರೂಪವನ್ನು ಧಾರಣ ಮಾಡಲೇಬೇಕಾಯಿತು; ಏಕೆಂದರೆ ಅದೂ ಒಂದು ಪ್ರಕೃತಿನಿಯಮ. ದೇಶಕಾಲವರ್ತಮಾನಗಳಿಗನುಸಾರವಾಗಿ ಅದು ರೂಪುಗೊಳ್ಳುತ್ತಲೂ ಬಂದಿತು. ವರ್ಣಭೇದಗಳು ಅಳಿಯಬೇಕು; ಕೀಳು ಮೇಲೆಂಬ ಭಾವನೆ ಹೋಗಬೇಕು; ಮನುಷ್ಯನ ಯೋಗ್ಯತೆಯನ್ನು ಅವನ ಹುಟ್ಟಿನಿಂದ ಅಳೆಯದೆ ಗುಣದಿಂದ ಅಳೆಯಬೇಕು; ಧರ್ಮತತ್ತ್ವಗಳು ಸರಳವಾಗಿ ತಿಳಿಯದವರ ಮನಸ್ಸನ್ನೂ ಸಹ ಆಕರ್ಷಿಸುವಷ್ಟು ಹೃದಯಂಗಮವಾಗಿರಬೇಕು; ಧರ್ಮ, ಜ್ಞಾನಗಳು ಒಬ್ಬರ ಸೊತ್ತಾಗದೆ ಪ್ರಪಂಚದ ಎಲ್ಲ ಜನರ ಆಸ್ತಿಯಾಗಬೇಕು; ಯಜ್ಞಯಾಗಾದಿಗಳು ನಿಲ್ಲಬೇಕು; ಗ್ರಂಥ ಮತ್ತು ಭಾಷೆಯ ಮೋಹಗಳೂ, ಅರ್ಥವಿಲ್ಲದ ರೂಢಿಮೂಲ ಆಚಾರಗಳೂ, ಅಂಧ ಶ್ರದ್ಧೆಯೂ ಸಹ ನಿಂತು ಹೋಗಬೇಕು; ಎಂಬಿವೇ ಅಂದಿನ ಜೀವನದ ಹಾರೈಕೆ, ಹಂಬಲಗಳಾಗಿದ್ದವು. ಶ್ರೀವೈಷ್ಣವ ಪಂಥವು ಶ್ರೀರಾಮಾನುಜಾಚಾರ್ಯರ ನೇತೃತ್ವದಲ್ಲಿ ಈ ಅಭಾವಗಳನ್ನು ತಕ್ಕಮಟ್ಟಿಗೆ ಹೋಗಲಾಡಿಸಿದರೂ ಸಹ, ಇತರರಿಗೆ ತಾನು ಕೊಟ್ಟ ಸಾಮಾಜಿಕ ಸ್ವಾತಂತ್ರ್ಯದಲ್ಲಿ ಇನ್ನೂ ಕೆಲವು ಭಿನ್ನಭೇದಗಳಿಗೆ ಅವಕಾಶಕೊಟ್ಟದ್ದಿತು. ಆಗಮಗಳ ತಳಹದಿಯ ಮೇಲೆ ವಿಕಾಸಹೊಂದುತ್ತ ಬಂದ ಅತ್ಯಂತ ಪ್ರಾಚೀನವಾದ ಶೈವ ಪಂಥವೂ ಸಹ ಅಂದಿನ ಜೀವನಕ್ಕೆ ತಕ್ಕ ಬದಲಾವಣೆಗಳನ್ನು ಹೊಂದಿಯೇ ತೀರಬೇಕಾಯಿತು. ಆ ರೀತಿಯ ರೂಪಾಂತರಗಳನ್ನು ಹೊಂದಿರುವುದೂ ಸಹ ಇತಿಹಾಸದಿಂದ ನಿರ್ಧಾರವಾಗಿದೆ; ಆಗಮಗಳು ಘೋಷಿಸಿ ನುಡಿದಿವೆ. ಆದರೂ ಕ್ರಿಯಾ-ಜ್ಞಾನ ಸಮರಸಾತ್ಮಕವಾಗಿ ಜನರ ಮನಸ್ಸನ್ನು ಆಕರ್ಷಿಸಿ ಅವರಿಗೂ ಆ ಹಾಲಿನ ಸವಿಯನುಣಿಸಲು ಕೆಲಕಾಲ ತಡೆಯಬೇಕಾಯಿತು. ಅದು ನಡೆದದ್ದು ಹನ್ನೆರಡನೆಯ ಶತಮಾನದ ಮಧ್ಯಭಾಗದಲ್ಲಿ. ಈ ರೂಪಾಂತರದ ಸಂಧಿಗ್ಧ ಸಮಯದಲ್ಲಿ ಅರವತ್ತುಮೂರು ಜನ ಪುರಾತನರ ಉದಯವಾಗಿರಬಹುದೆಂದು ಊಹಿಸಲೂ ಸಹ ಅವಕಾಶವಿದೆ.



CC-0. Jangamwadi Math Collection, Varanasi. An eGangotri Initiative

ವೇದ, ಉಪನಿಷತ್ತುಗಳ ಕಾಲವನ್ನು ದಾಟಿ ಮುಂದಕ್ಕೆ ಬಂದರೆ ಧರ್ಮದ ಬೆಳವಣಿಗೆಗೆ ಬಂದೊದಗಿದ ಆಘಾತವೆಂದರೆ ಜ್ಞಾನದ ಪ್ರಾಧಾನ್ಯ; ಈ ಜ್ಞಾನದ ಪ್ರಾಧಾನ್ಯವಲ್ಲಿ ಕರ್ಮಕ್ಕೆ ಗೌಣಸ್ಥಾನವಿದ್ದಿತು; ಆದರೂ ಅವೆರಡರಲ್ಲೂ ಸಹ ಇದ್ದೇ ಇರಬೇಕಾದ ಸಮಾನ ಧರ್ಮ ಮಾತ್ರ ಇರಲಿಲ್ಲ. ಹೇಳುವ ನುಡಿಗೂ, ಆಚರಿಸುವ ನಡೆಗೂ ಬಹುಮಟ್ಟಿಗೆ ಸಂಬಂಧವಿರಲಿಲ್ಲ. ಬೋಧಕರು ಅನೇಕರಿದ್ದರು; ಗ್ರಂಥರಾಶಿ ವಿಪುಲವಾಗಿದ್ದಿತು; ಸಾಧಕನಾಗಿ ಕುಳಿತವನಿಗೆ ಸಂಶಯಗಳು ತಲೆದೋರಿದರೆ ( ತೋರುವುದು ಸ್ವಾಭಾವಿಕ ) ಅವುಗಳನ್ನು ನಿವಾರಿಸಿ ಕತ್ತಲಿನಿಂದ ಬೆಳಕಿಗೆ ಕರೆದೊಯ್ಯಬಲ್ಲ ಗುರುಗಳು ಮಾತ್ರ ವಿರಳರಾಗಿದ್ದರು. ಇದರಿಂದ ಸಂದೇಹಗಳು ಹೆಚ್ಚಿ, ಶಾಂತಿಯನ್ನು ಅರಸುವವನ ಹೃದಯಕ್ಕೆ ಹೆಚ್ಚು ಅಶಾಂತಿ ಸಿಕ್ಕುತ್ತಿತ್ತು. ದೇವರನ್ನು ಹುಡುಕಲು ಹೊರಟ ಜ್ಞಾನಿಗೂ ಸಹ ಸಂಶಯಸಾಗರದಲ್ಲಿ ದಾರಿ ಕಾಣದಂತಾಗುತ್ತಿತ್ತು. ಸಂಶಯನಿವಾರಣೆಗೆ ಗ್ರಂಥಗಳನ್ನು ನೋಡಬೇಕು. ಅವರಲ್ಲಿ ಎಲ್ಲರಿಗೂ ಅರ್ಥವಾಗುವಂತಿದ್ದ ಭಾಗವು ತೀರಾ ಕಡಿಮೆ. ಯಾವುದನ್ನು ಹೃದಯವು ಪರಿಶುದ್ಧವಾದ ಪ್ರೇಮದಿಂದ ಸ್ವೀಕರಿಸುತ್ತಿದ್ದಿತೋ ಅದನ್ನು ಗ್ರಂಥಸ್ಥ ಧರ್ಮವು ಅನೇಕ ಬಾರಿ ನಿಷೇಧಿಸಿದೆ. ಕೀಳು ಜಾತಿಯಲ್ಲಿ ಹುಟ್ಟಿದವನು ಮಹಾಪುರುಷನಾಗಲಾರನೆಂದು ಶಾಸ್ತ್ರವು ಹೇಳಿತು. ನಿಜವಾಗಿಯೂ ಜ್ಞಾನಿಗಳಾಗಿ ಬೆಳಕನ್ನು ಕಂಡ ಮಹಾಪುರುಷರು ಈ ಲೋಕದ ಕೋಟಲೆಗಳಿಯಡೆ ವಿರಕ್ತಿಭಾವದಿಂದ, ಯೋಗಾನಂದದಲ್ಲಿ ಲೀನರಾಗಿದ್ದು ಬಿಡುತ್ತಿದ್ದರು. ಈ ಎಲ್ಲ ಕಾರಣಗಳಿಂದ, ಗ್ರಾಂಥಿಕ ಧರ್ಮವನ್ನು ಮೀರಿಹೋಗಿ, ತನ್ನ ಆತ್ಮಾನುಭಾವದಿಂದಲೇ ಸಚ್ಚಿದಾನಂದಮಯನಾದ ಪರಮಾತ್ಮನ ಮಂಗಳಮೂರ್ತಿಯ ಸಾಕ್ಷಾತ್ಕಾರ ಮಾಡಿಕೊಂಡು, ತಾನು ಅನುಭವಿಸುವ ದಿವ್ಯಾನಂದದ ಅನುಭವವನ್ನು ವರ್ಣ, ಮತ, ಪಂಥಗಳ ಭೇದಭಾವವಿಲ್ಲದಂತೆ ಎಲ್ಲರಿಗೂ ಹಂಚಬಲ್ಲ ಮಹಾಪುರುಷನು ಅಂದಿನ ಜನಾಂಗಕ್ಕೆ ಬೇಕಾಗಿದ್ದನು. ಕತ್ತಲಲ್ಲಿ ತೊಳಲುವವರಿಗೆ ಬೆಳಕು ಬೇಕಿದ್ದಿತು. ಚಾತಕ ಪಕ್ಷಿಯಂತೆ ಬಾಯಿ ತೆರೆದು ಕಾರ್ಮುಗಿಲಿನ ಹನಿಗಾಗಿ ಹಾರೈಸಿದ ಮುಮುಕ್ಷುಗಳಿಗೆ ಅಮೃತದ ಸೇಚನೆಯಾಗಬೇಕಿದ್ದಿತು. ಜನಜೀವನದ ಈ ಹಾರೈಕೆ ಆಶೆಗಳು ಮೂಲೆ ಮೂಲೆಯಿಂದಲೂ ಮೇಲೆದ್ದುದರಿಂದಲೇ ಅದರ ಸಂಕಟಯಾತನೆಗಳನ್ನು ಅನುಭವಿಸಿದ ಪ್ರಕೃತಿಯು ಹಿಂದೆ ಹೇಳಿದಂತೆ ತನ್ನ ನಿಯಮಾನುಸಾರವಾಗಿ ಮಹಾಪುರುಷರಿಗೆ ಜನ್ಮಕೊಟ್ಟಳು. ಅವರಲ್ಲಿ ' ಬಸವಣ್ಣ ' ನವರೂ ಒಬ್ಬರು. ಅವರು ನೆರೆಯಿಸಿದ ಅನುಭವಮಂಟಪವೇ ಈ ಅಭಾವಗಳನ್ನು ದೂರು ಮಾಡಿದ ಸಂಸ್ಥೆ.

ಈ ಎಲ್ಲ ಅಭಾವಗಳನ್ನೂ ಬಸವಣ್ಣನವರು ತಮ್ಮ ತಾರುಣ್ಯದಲ್ಲೇ ಮನನ ಮಾಡಿಕೊಂಡು ಧರ್ಮದ ಬೆಳವಣಿಗೆಗೆ ಬೇಕಾಗುವ ಎಲ್ಲ ಸಹಾಯ ಸಂಪತ್ತಿಗಳನ್ನೂ ಕುರಿತು ಯೋಚಿಸತೊಡಗಿದರು. ಅದಕ್ಕೆ ತಕ್ಕ ಸಿದ್ಧತೆಗಳನ್ನೂ ಮನಸ್ಸಿನಲ್ಲಿ ಸಿದ್ಧ ಮಾಡಿಟ್ಟುಕೊಂಡರು; ಅನಂತರ ಕಾರ್ಯದಲ್ಲಿ ಪ್ರಯೋಗಿಸಿದರು. ಶಾಸ್ತ್ರ ಪುರಾಣಾದಿ ನಿರ್ಜೀವ ಗ್ರಂಥದ ತತ್ತ್ವಗಳಿಗಿಂತಲೂ ಹಿರಿದಾಗಿ ಪರಿಶುದ್ಧನಾದ ಸಜೀವ ವ್ಯಕ್ತಿಯ ಹೃದಯಾನುಭವವೇ ಮುಖ್ಯವೆಂದು ತಿಳಿದರು. ಅನುಭಾವಿಗಳಾದ ಮಹಾಪುರುಷರನ್ನು ಒಂದು ಕಡೆ ಸೇರಿಸಿದರು. ಹಾಗೆ ಸೇರಿದ ಪ್ರತಿಯೊಬ್ಬರೂ ತಮ್ಮ ತಮ್ಮ ಅನುಭವಗಳನ್ನು ಮುಚ್ಚುಮರೆಯಿಲ್ಲದಂತೆ ತೆರೆದಿಡುತ್ತಿದ್ದರು. ಪ್ರತಿಯೊಬ್ಬರಿಗೂ ಪರಿಶುದ್ಧವಾದ ಅವರವರ ಹೃದಯವೇ ಆಧಾರವಾಗಿದ್ದಿತು. ಅನುಭವದಿಂದ ಸಂಭವಿಸಿದ ಪ್ರಗತಿಯೇ ಪುರೋಭಿವೃದ್ಧಿಯ ಕುರುಹಾಯಿತು. ಈ ಪ್ರಗತಿಪರ ವಿಕಾಸವನ್ನನು



CC-0. Jangamwadi Math Collection, Varanasi. An eGangotri Initiative

ಸರಿಸಿ ಆಚಾರವಿಚಾರಗಳು ನಿರ್ಧರಿಸಲ್ಪಟ್ಟವು. ಯಾವ ರೀತಿಯ ಆಚರಣೆಯನ್ನು ಕೈಕೊಂಡರೆ ಮಾರ್ಗವು ಸುಲಭವಾಗುವವೋ ಅಂತಹ ಆಚರಣೆಗಳನ್ನೇ ಜನರಿಗೂ ತಿಳಿಯಹೇಳಲಾಯಿತು. 'ನಡೆವಂತೆ ನುಡಿ; ನುಡಿದಂತೆ ನಡೆ.' ಎನ್ನುವುದೇ ಅನುಭವಮಂಟಪದ ಕಟ್ಟಳೆ. ಕ್ರಿಯೆಯಂತೆ ಜ್ಞಾನವೂ, ಜ್ಞಾನದಂತೆ ಕ್ರಿಯೆಯೂ ಪರಸ್ಪರ ಸಮಾನಗುಣವುಳ್ಳವುಗಳೆಂದು ಅನುಭಾವಿಗಳು ನಿರ್ಣಯಿಸಿದ್ದುದರಿಂದ ಧರ್ಮವು ಕ್ರಿಯಾಜ್ಞಾನಸಮರಸಾತ್ಮಕವಾಯಿತು. ಜೀವನದ ಒಳಗಣ ಅನುಭವವು ಹೊರಕ್ಕೂ, ಹೊರಗಿನ ಅನುಭವವು ಒಳಕ್ಕೂ ವ್ಯಾಪಿಸುವುದರಿಂದ ಅದರಲ್ಲಿ ಒಂದು ಸ್ಥಾಯಿ ಭಾವವು ನೆಲೆಗೊಂಡಿತು. ಭಾವದಲ್ಲಿ ಉದಯವಾದುದು ಮನಸ್ಸಿಗೂ, ಮನಸ್ಸಿನಲ್ಲಿ ಮೂಡಿದುದು ಕ್ರಿಯೆಯಲ್ಲೂ ರೂಪುಗೊಳ್ಳುತ್ತದೆ. ಹಾಗೆಯೇ ಕ್ರಿಯೆಯ ತತ್ತ್ವಗಳು ಮನಸ್ಸಿಗೆ ಮುಟ್ಟುವಂತೆಯೂ, ಮನಸ್ಸಿನ ತತ್ತ್ವಗಳು ಭಾವನೆಗೆ ವ್ಯಾಪಿಸುವಂತೆಯೂ ಆಚಾರಗಳು ವಿಧಿಸಲ್ಪಟ್ಟವು; ಅದಕ್ಕೆ ತಕ್ಕಹಾಗೆ ಅಷ್ಟಾವರಣಗಳೂ ಷಟ್‌ಸ್ಥಲಗಳೂ ಪರಿಶೀಲಿಸಲ್ಪಟ್ಟವು. ಇವು ಹಿಂದಿದ್ದವುಗಳಾದರೂ, ಹನ್ನೆರಡನೆಯ ಶತಮಾನದನಂತರ ಇವುಗಳಿಗೊಂದು ವಿಶೇಷಾರ್ಥ ಉಂಟಾಯಿತು. ಈ ಕ್ರಿಯಾಜ್ಞಾನಗಳ ಸಂಬಂಧವನ್ನು ಚೆನ್ನಬಸವಣ್ಣನವರು ಹೀಗೆ ಹೇಳಿದ್ದಾರೆ.

"ಕ್ರಿಯೆಯೇ ಜ್ಞಾನವು. ಜ್ಞಾನವೇ ಕ್ರಿಯೆ. ಜ್ಞಾನವೆಂದರೆ ತಿಳಿಯುವುದು. ಕ್ರಿಯೆಯೆಂದರೆ ತಿಳಿದಂತೆ ಮಾಡುವುದು. ಪರಸ್ತ್ರೀ ಭೋಗಿಸಬಾರದೆಂಬುದೇ ಜ್ಞಾನ. ಅದರಂತೆ ಆಚರಿಸುವುದೇ ಕ್ರಿಯೆ. ಅಂತು ಆಚರಿಸದಿದ್ದರೆ ಆದೇ ಅಜ್ಞಾನ ನೋಡಾ ಕೂಡಲ ಚೆನ್ನಸಂಗಮದೇವಾ !"

ಈ ರೀತಿಯ ಅನುಭವಕ್ಕೆ ಪ್ರಾಮುಖ್ಯತೆ ಕೊಟ್ಟು, ಜೀವನದ ಮನೋಧರ್ಮಗನು ಸಾರವಾಗಿ ಹೊರಹೊಮ್ಮುವ ಜ್ಞಾನ, ಭಕ್ತಿ, ಕ್ರಿಯೆಗಳನ್ನು ಪರಿಶೀಲಿಸಿ ತಾವು ಅನುಭವಿಸಿದಂತೆಯೇ ಜನಾಂಗಕ್ಕೂ ಸಹ ಅದರ ಅನುಭವಮಾಡಿಕೊಡುವುದೇ ಅವರ ಧ್ಯೇಯವಾಗಿದ್ದಿತು. ಆತ್ಮಕಲ್ಯಾಣದ ಜೊತೆಗೆ ಮಾನವಕಲ್ಯಾಣವೂ, ಮಾನವ ಕಲ್ಯಾಣದ ಜೊತೆಗೆ ಆತ್ಮಕಲ್ಯಾಣವೂ ಆಗಬೇಕಿದ್ದಿತು. ಇಂತಹ ಭಾವನೆಗಳಲ್ಲಿ ಮತ್ತು ಅನುಭವದಲ್ಲಿ ತೀವ್ರಕಾಂಕ್ಷಿಗಳಾದ ಶರಣರೇ ಅಲ್ಲಿ ನೆರೆದು ಅನುಭವಿಸಿದ ತತ್ತ್ವಗಳನ್ನು ಕುರಿತು ಚರ್ಚಿಸುತ್ತಿದ್ದರು. ಚರ್ಚೆಗೆ ಬಂದ ವಿಷಯಗಳೆಲ್ಲವೂ ಅನುಭವದ ಒರೆಗಲ್ಲಿಗೆ ಬಿದ್ದು ಬದುಕಿ ಬಂದವುಗಳೇ ಆಗಿದ್ದವು. ಅಂತಹ ತತ್ತ್ವಗಳನ್ನು ಇತರರಿಗೆ ತಿಳಿಯಹೇಳುತ್ತಿದ್ದರು. ಹಾಗೆ ಶರಣರು ನೆರೆದು ಚರ್ಚಿಸುತ್ತಿದ್ದ ಸಂಸ್ಥೆಯೇ 'ಅನುಭವಮಂಟಪ'; ಅವರು ತಿಳಿಯಹೇಳಿದ ವಾಕ್ಯಗಳೇ ಅನುಭಾವಿಗಳ ವಚನಗಳು. ಅವರು ಈ ರೀತಿಯಾಗಿ ಸಂಗ್ರಹಿಸಿದ 'ಸಂಪಾದನೆ'ಯೇ ಶಿವಾನುಭವ!

ಈ ಸಂಸ್ಥೆಯನ್ನು ಗ್ರೀಕರ ಕಾಲದ ಅರಿಸ್ಟಾಟಲನ ಲಿಸಿಯಮ್ಮಿಗೂ, ತಮಿಳರ ಸಂಗಮಕ್ಕೂ, ಜನಕರಾಯನ ಕಾಲದ ಉಪನಿಷದಾರಾಮಗಳಿಗೂ, ಅಶೋಕನ ಧರ್ಮಜಿಜ್ಞಾಸೆಯ ಸಭೆಗೂ, ಹೋಲಿಸಬಹುದಾದರೂ ಅವುಗಳಂತೆ ಅದು ಜ್ಞಾನಪ್ರಧಾನವಾಗದೆ ಕ್ರಿಯಾಜ್ಞಾನ ಸಮರಸಾತ್ಮಕವಾಗಿದ್ದುದೇ ಅದರ ವೈಶಿಷ್ಟ್ಯ. ಈ ದೃಷ್ಟಿಯಿಂದಲೂ ಅಲ್ಲಿ ನೆರೆದಿದ್ದ ಶರಣಸಂದೋಹದ ಯೋಗ್ಯತೆಯ ದೃಷ್ಟಿಯಿಂದಲೂ ಈ ರೀತಿಯ ಕೀರ್ತಿಗೆ ಭಾಗಿಯಾಗಬಹುದಾದ ಪ್ರಪಂಚದ ಏಕಮಾತ್ರ ಸಂಸ್ಥೆಯೆಂದರೆ 'ಅನುಭವಮಂಟಪ'ವೊಂದೇ. ಆದುದರಿಂದ ಇದನ್ನು ಆಧ್ಯಾತ್ಮಿಕ ಸಂಶೋಧನಾಲಯವೆಂದೂ ಸಹ ಕರೆಯಬಹುದು.



CC-0. Jangamwadi Math Collection, Varanasi. An eGangotri Initiative

## ಅನುಭವಮಂಟಪದ ವ್ಯಕ್ತಿಗಳು ಮತ್ತು ಬಸವಣ್ಣನವರ ಆಕರ್ಷಣ ಶಕ್ತಿಯು

ವ್ಯಕ್ತಿಯ ಹೃದಯದಲ್ಲಿ ಮೂಡಿದ ಭಕ್ತಿಯ ಬೆಳಕಿಗೆ ತಲೆಬಾಗಿ, ಅನೇಕ ಜನ ಶಿವಶರಣರು ಕಲ್ಯಾಣಕ್ಕೆ ಬಂದರು. 'ಭಕ್ತಿಭಂಡಾರಿ' ಎಂದು ಪ್ರಸಿದ್ಧರಾದ ಬಸವಣ್ಣನವರಲ್ಲಿ ಭಕ್ತಿಯೊಂದೇ ಅಲ್ಲದೆ ಇರಬೇಕಾದ ಎಲ್ಲ ಸದ್ಗುಣಗಳೂ ತುಂಬಿಕೊಂಡಿದ್ದವು. ಅವರೊಡನೆ ಕೂಡಿ ನುಡಿದು, ಬೆರೆಯುವವರಿಗೆ ಅವರು ಪ್ರತ್ಯಕ್ಷ ಪರಮಾತ್ಮನಂತೆ ದಯಾಮಯರಾಗಿ ತೋರಬೇಕು. ಆದುದರಿಂದಲೇ ಎಲ್ಲ ಶರಣರೂ ಅವರನ್ನು ವಂದನೀಯರನ್ನಾಗಿ ತಿಳಿದಿದ್ದರು. 'ಎನಗಿಂತ ಕಿರಿಯರಿಲ್ಲ, ಶಿವಭಕ್ತರಿಗಿಂತ ಹಿರಿಯರಿಲ್ಲ' ಎನ್ನುವ ವಿನಯ. 'ಕಂಡ ಭಕ್ತರಿಗೆ ಕೈಮುಗಿವಾತನೇ ಭಕ್ತ. ಮೃದು ವಚನವೇ ಸಕಲ ಜಪಂಗಳಯ್ಯ. ಮೃದು ವಚನವೇ ಸಕಲ ತಪಂಗಳಯ್ಯ' ಎನ್ನುವಷ್ಟು ಬಾಗಿದ ಮನಸ್ಸು, 'ಎಲವೋ ಎಲವೋ ಪಾಪಕರ್ಮ ಮಾಡಿದವನೇ! ಎಲವೋ ಎಲವೋ ಬ್ರಹ್ಮಹತ್ಯ ಮಾಡಿದವನೇ! ಒಮ್ಮೆ ಶರಣೆನ್ನೆಲವೋ. ಒಮ್ಮೆ ಶರಣೆಂದಡೆ ಪಾಪಕರ್ಮ ಓಡುವವು' ಎಂದು ಪಾಪಗಳನ್ನು ಬಳಿಗೆ ಕರೆದು ಬೇಡಿಕೊಳ್ಳುತ್ತಿದ್ದ ವಿಶ್ವಪ್ರೇಮ ಮತ್ತು ಮಾನವ ಕಲ್ಯಾಣದ ಹಿತ; ಗುರುಲಿಂಗಜಂಗಮ ದಾಸೋಹದಲ್ಲಿ ತಮ್ಮ ದೇಹವನ್ನು ಸವೆಯಿಸಿದುದಲ್ಲದೆ 'ತನುವ ಬೇಡಿದಡೀವೆ, ಧನವ ಬೇಡಿದಡೀವೆ, ಮನವ ಬೇಡಿದಡೀವೆ' ಎಂದು ಸರ್ವಾರ್ಪಣ ಬುದ್ಧಿಯಿಂದ ಮಾಡಿದ ತ್ಯಾಗ; ಪವಿತ್ರವಾದ ಆಚರಣೆ— ಇವುಗಳನ್ನು ಕಂಡು ಆಕರ್ಷಿತರಾಗದ ಜನರಾರು? 'ಕಳಬೇಡ, ಕೊಲಬೇಡ. ಹುಸಿಯ ನುಡಿಯಲು ಬೇಡ' ಎಂದು ಸರಳವಾದ ಕನ್ನಡ ಪದಗಳಲ್ಲಿ ಧರ್ಮವನ್ನು ತಿಳಿಯಹೇಳಿದರೆ ಜನರು ಕುಣಿಯುತ್ತ ಬರದಿರುವರೇ? ಜನಾಂಗವು ಇಂತಹರಿಗಾಗಿ ಕಾದು ಕುಳಿತಿದ್ದಿತು. ಜೊತೆಗೆ 'ಅಕಟಕಟಾ ಶಿವ ನಿನಗಿನಿತು ಕರುಣೆಯಿಲ್ಲ' ಎಂದು ಸಾಧಕರಾಗಿ ಕುಳಿತು, 'ಜಗದಗಲ, ಮುಗಿಲಗಲ, ಮಿಗೆಯಗಲ' ದಂಥ ಪರಮಾತ್ಮನನ್ನು, 'ಎನ್ನ ಕರಸ್ಥಲಕ್ಕೆ ಬಂದು ಚುಳುಕಾದಿರಯ್ಯ' ಎಂದು ದರ್ಶಿಸಿದ ಮಹಾಪುರುಷನ ಬಳಿಗೆ, ಮುಮುಕ್ಷುಗಳು ತಂಡತಂಡವಾಗಿ ಬಂದುದರಲ್ಲಿ ಆಶ್ಚರ್ಯವೇನು? ಏಸುಕ್ರಿಸ್ತನ ಬಳಿ ಶಿಷ್ಯರು ನೆರೆದಹಾಗೆ, ಬುದ್ಧನ ಬಳಿ ಸಾರಿಪುತ್ರ, ಮೌದ್ಗಲ್ಯಾಯನಾದಿ ಸಹಸ್ರಾರು ಭಿಕ್ಷುಗಳು ಸೇರಿದಹಾಗೆ, ಸಾಕ್ರಟೀಸನ ಬಳಿ ತತ್ತ್ವಶಾಸ್ತ್ರಜ್ಞರು ಬಂದಹಾಗೆ, ಶ್ರೀರಾಮಕೃಷ್ಣ ಪರಮಹಂಸರ ಬಳಿಗೆ ಕೇಶವ ಚಂದ್ರಸೇನ, ಗೋಸ್ವಾಮಿ ತೋತಾಪುರಿ ಮುಂತಾದವರು ಬಂದಹಾಗೆ ಬಸವಣ್ಣನವರ ಬಳಿಗೂ ಅಸಂಖ್ಯ ಜನ ಶಿವಶರಣರು ಬಂದರು. ಈ ರೀತಿ ನೆರೆದವರಲ್ಲಿ ಕೆಲವರು ಅನುಭವದಲ್ಲಿ ಬಸವಣ್ಣನವರಿಗಿಂತ ಹಿರಿಯರೂ ಆಗಿದ್ದರು. ಬಂದವರು ಕೇವಲ ಕಲ್ಯಾಣಪಟ್ಟಣದ ಸುತ್ತುಮುತ್ತಲಿನವರಷ್ಟೇ ಆಗದೆ ಬಹು ದೂರದವರೂ ಸಹ ಆಗಿದ್ದರು. ಅನುಭವಮಂಟಪದ ಕೀರ್ತಿಯನ್ನು ಕೇಳಿ ಆ ರೀತಿಯ ಮನೋಧರ್ಮವುಳ್ಳವರೆಲ್ಲರೂ ಅತ್ತ ನಡೆದರು. ಪಾಂಡ್ಯ, ಚೇರ, ಚೋಳ, ಕೇರಳ, ಕುಂತಳ, ಘೂರ್ಜರ, ಉತ್ಕಲ (ಒರಿಸ್ಸಾ ಪ್ರಾಂತ), ವಂಗ, ಕಾಶ್ಮೀರ, ಮತ್ತು ನೇಪಾಳ ಮುಂತಾದ ಅನೇಕ ಪ್ರಾಂತಗಳಿಂದ ಶರಣರು, ಬಸವಣ್ಣನವರ ಆತ್ಮೀಯ ಆಕರ್ಷಣೆಗೆ ಮನಸೋತು ಬಂದರು.

ಹೀಗೆ ಬಂದವರಲ್ಲಿ ಕೆಲವರ ಜೀವನ ಚರಿತ್ರೆಗಳು ಬಹು ಹೃದಯಂಗಮವಾಗಿವೆ. ಅವು ಅವರವರ ಹೃದಯದ ಆಳ, ಭಕ್ತಿಯ ಗಾಢತೆ ಮೊದಲಾದುವುಗಳನ್ನು ಚೆನ್ನಾಗಿ ವ್ಯಕ್ತಪಡಿಸುತ್ತವೆ.



CC-0. Jangamwadi Math Collection, Varanasi. An eGangotri Initiative

(೧) ಮೋಳಿಗೆಯ ಮಾರಯ್ಯ:— ಈತನು ಕಾಶ್ಮೀರ ದೇಶದ ಅರಸನೆಂದು ತಿಳಿದುಬಂದಿದೆ. ರಾಜ್ಯ, ಐಶ್ವರ್ಯಾದಿ ಸಕಲಭೋಗಗಳನ್ನೂ ಬಿಟ್ಟುಕೊಟ್ಟು ತನ್ನ ಪತ್ನಿಯಾದ ಮಹಾದೇವಿಯೊಂದಿಗೆ ಕಲ್ಯಾಣಕ್ಕೆ ಬಂದು, ಅನುಭವಮಂಟಪದ ಸದಸ್ಯನಾದನು. ಭೋಗ ವಿಲಾಸಗಳಿಗೆ ಬದಲಾಗಿ ಕಷ್ಟ ಸಂಕಟಗಳನ್ನು ಸ್ವಾಗತಿಸಿ ಕಟ್ಟಿಗೆ ಹೊರೆ ಮಾರುವ ಕಾಯಕವನ್ನು ಸ್ವೀಕರಿಸಿದನು. ಸತಿಪತಿಯರಿಬ್ಬರೂ ಸಮಾನಯೋಗ್ಯತೆಯುಳ್ಳವರಾಗಿ ಅನುಭವ ಮಂಟಪದಲ್ಲಿ ಪ್ರಸಿದ್ಧರಾಗಿದ್ದರು. ಮಹಾದೇವಿಯು ತನ್ನ ಪತಿಗಿಂತಲೂ ಕೆಲವು ವಿಷಯಗಳಲ್ಲಿ, ಹೆಚ್ಚು ಮುಂದು ವರಿದಿದ್ದಳೆಂದು ಆಕೆಯ ವಚನಗಳಿಂದ ತಿಳಿದುಬಂದಿದೆ.

(೨) ಸಕಲೇಶ ಮಾದರಸ:— ದಕ್ಷಿಣಪ್ರಾಂತದ ಕಲ್ಲುಕುರಿಕೆ ಅರಸನಾದ ಮಲ್ಲ ರಸನು ವಿರಕ್ತಿಯನ್ನು ಹೊಂದಿ ಶ್ರೀಶೈಲಕ್ಕೆ ಹೋಗಲು, ಅವನ ಮಗನಾದ ಸಕಲೇಶ ಮಾದ ರಸನೂ ಸಹ ತಂದೆಯಂತೆಯೇ ವೈರಾಗ್ಯವನ್ನು ಸ್ವೀಕರಿಸಿದನು. ಅನಂತರ ತಂದೆಯ ಅಪ್ಪಣೆಯ ಮೇರೆಗೆ ಕಲ್ಯಾಣಕ್ಕೆ ಬಂದನು. ಈತನು ಬಸವಣ್ಣನವರ ಸಮಕಾಲೀನನಾಗಿದ್ದರೂ ಸಹ ವಯಸ್ಸಿನಲ್ಲಿ ಅವರಿಗಿಂತ ಹಿರಿಯನಾಗಿದ್ದನು.

(೩) ಆದಯ್ಯ:— ಈತನು ಗುಜರಾಥ ಪ್ರಾಂತದ ಶ್ರೀಮಂತ ವರ್ತಕನು. ಸೌರಾಷ್ಟ್ರ ದೇಶದ ದ್ವಾರಕಾ ಪಟ್ಟಣವೆಂಬ ಪುಣ್ಯ ಕ್ಷೇತ್ರವೇ ಅವನ ಜನ್ಮಸ್ಥಳ. ಈತನು ವ್ಯಾಪಾರಕ್ಕಾಗಿ ಕರ್ನಾಟಕ ಪ್ರಾಂತದ ಪುಲಿಗೆರೆ ಎಂಬಲ್ಲಿಗೆ ಬಂದಿದ್ದನು. ಈ ಪುಲಿಗೆರೆಯು ಇಂದಿನ ಧಾರವಾಡ ಪ್ರಾಂತಕ್ಕೆ ಸೇರಿದೆ; ಅದಕ್ಕೆ ಈಗ ಲಕ್ಷ್ಮೇಶ್ವರವೆಂದು ಹೆಸರು. ಈತನೂ ಸಹ ಭಕ್ತಿಪಂಥವನ್ನು ಸ್ವೀಕರಿಸಿ ವಚನಗಳನ್ನು ಬರೆದಿದ್ದಾನೆ.

(೪) ಏಕಾಂತ ರಾಮಯ್ಯ:— ಈತನು ಕುಂತಳ ದೇಶಕ್ಕೆ ಸೇರಿದ ಶಿವಶರಣ. ತನ್ನ ಜೀವಮಾನದ ಕಡೆಯಲ್ಲಿ ಧರ್ಮಪ್ರಸಾರಕ್ಕಾಗಿಯೇ ಈತನು ತನ್ನ ಶಿರವನ್ನು ಬಲಿಗೊಟ್ಟ ನೆಂದು ಅಬಲೂರು ಶಿಲಾಶಾಸನದಿಂದ ತಿಳಿದುಬಂದಿದೆ.

(೫) ಅಕ್ಕಮಹಾದೇವಿ:— ಈಕೆಯು ಮೈಸೂರು ಪ್ರಾಂತದವಳು. ಶಿವಮೊಗ್ಗೆಗೆ ಸೇರಿದ ಬಳ್ಳಿಗಾವೆ ಪ್ರಾಂತದ ಬಳಿ ಇದ್ದ ಉಡುತಡಿಯೇ ಅವಳು ಹುಟ್ಟಿದ ಸ್ಥಳ. ಅಲ್ಲಿಗೆ ಅರಸ ನಾದ ಕೌಶಿಕನು ಕಾಮುಕನಾಗಿ ಇವಳನ್ನು ಬಯಸಲು, ಈಕೆಯು ಅವನಿಗೆ ದಕ್ಕದಂತೆ ವಿರಕ್ತಿ ಭಾವದಿಂದ ಅನುಭವಮಂಟಪವನ್ನು ಸೇರಿದಳು. ಈಕೆಯ ಕೀರ್ತಿ ಮತ್ತು ಯೋಗ್ಯತೆಗಳನ್ನು ಪ್ರಾಯಶಃ ಎಲ್ಲ ಶರಣರೂ ಹಾಡಿರುವರು.

(೬) ಪ್ರಭುದೇವರು:— ಇವರಿಗೆ 'ಅಲ್ಲಮ' ಎಂಬ ಹೆಸರೂ ಉಂಟು. ಇವರೇ ಅನುಭವಮಂಟಪದ ಅಧ್ಯಕ್ಷರು. ಶೂನ್ಯ ಸಿಂಹಾಸನದಲ್ಲಿ ಇವರ ಸ್ಥಾನವು ವಿರಾಜಮಾನವಾ ಗಿದ್ದಿತು. ವೀರಶೈವ ಕವಿಗಳು ಇವರನ್ನು "ಶ್ರೀಮದ್ದೇಶಿಕ ಷಟ್‌ಸ್ಥಲ ಚಕ್ರವರ್ತಿ ಬ್ರಹ್ಮಾನಂದ ಪರಶಿವಮೂರ್ತಿ ವಿರಕ್ತಶಿಖಾಮಣಿ ಮಾಯಾಕೋಳಾಹಳ" ಎಂದು ಹೊಗಳಿರುವರು. ಕಾರವಾರ ಜಿಲ್ಲೆಗೆ ಸೇರಿದ ಬನವಾಸಿಯಿಂದ ಹೊರಟು ಕಲ್ಯಾಣಕ್ಕೆ ಬಂದರು. ಇವರು ಅಂದಿನ ಭರತಖಂಡದ ಪ್ರಾಂತಗಳಲ್ಲೆಲ್ಲಾ ಸಂಚಾರ ಮಾಡಿದ್ದರು.



CC-0. Jangamwadi Math Collection, Varanasi. An eGangotri Initiative

(೭) ಮಡಿವಾಳ ಮಾಚಿದೇವ:— ಈತನು ಇಂದಿನ ವಿಜಾಪುರ ಜಿಲ್ಲೆಗೆ ಸೇರಿದ ಹಿಪ್ಪರಿಗೆ ಪ್ರಾಂತದವನು. ಶಿವಶರಣರ ಹೊರತು ಇತರರ ಬಟ್ಟೆಗಳನ್ನು ಈತನು ಒಗೆಯುತ್ತಿರಲಿಲ್ಲ. ಅನುಭವಮಂಟಪಕ್ಕೆ ಬಂದನಂತರ ಈತನು ಆಧ್ಯಾತ್ಮಿಕ ತರಗತಿಯಲ್ಲಿ ಬಹು ಮೇಲು ಮಟ್ಟದವನೆಂದು ಪರಿಗಣಿತವಾಗಿದ್ದನು.

(೮) ಸಿದ್ಧರಾಮೇಶ್ವರ:— ಈತನ ಸ್ಥಳ ಸೊಲ್ಲಾಪುರ ಅಥವಾ ಸೊನ್ನಲಾಪುರ. ಈತನು ಅಲ್ಲಿ ಕೆರೆ ದೇಗುಲಗಳನ್ನು ಕಟ್ಟಿಸುತ್ತಿರಲು, ಪ್ರಭುವು ಆತನಿಗೆ ವಿವೇಕ ಹೇಳಿ ಕಲ್ಯಾಣಕ್ಕೆ ಕರೆದು ತಂದರು. ಅನುಭವಮಂಟಪದಲ್ಲಿ ಚೆನ್ನಬಸವಣ್ಣನವರಿಂದ ಲಿಂಗದೀಕ್ಷೆಯನ್ನು ಪಡೆದು ಶಿವಯೋಗಿಯಾದನು.

ಇದರಂತೆಯೇ ಇನ್ನೂ ಅನೇಕ ಜನ ಪ್ರಖ್ಯಾತ ಶಿವಶರಣರು ಅನುಭವಮಂಟಪಕ್ಕೆ ಬಂದರು. ವಯೋವೃದ್ಧರಾದ ಮಾದಾರ ಚೆನ್ನಯ್ಯ, ಡೋಹರ ಕಕ್ಕಯ್ಯ, ಜೇಡರ ದಾಸಿಮಯ್ಯ[೧] ಇವರೂ ಸಹ ಅಂದಿನ ಶರಣರ ಸಂಗಡವೇ ಬೆರೆತಿದ್ದರು. ಬಿಜ್ಜಳಂಗೆ........ಉಪದೇಶ ಗುರುವಾದ ಮನುಮುನಿ ಗುಮ್ಮಟದೇವರೂ[೨] ಸಹ ವೀರಶೈವ ವಚನಕಾರರ ಗೋಷ್ಠಿಯಲ್ಲಿ ಸೇರಿದ್ದರೆಂದು ಕವಿಚರಿತ್ರೆಕಾರರು ಊಹಿಸಿದ್ದಾರೆ. ಅನುಭವಮಂಟಪದಲ್ಲಿದ್ದ ಸೊಡ್ಡಳ ಬಾಚರಸನಿಗೆ ಪರಮತದವರ ಸಂಗಡ ವಾದಮಾಡುವ ಕೆಲಸವೂ, ಕೋಲಶಾಂತಯ್ಯನೆಂಬ ಶರಣನಿಗೆ ವಚನಗಳನ್ನು ತಾಳೆವೋಲೆ ಗ್ರಂಥಗಳಲ್ಲಿ ಬರೆದುಕೊಳ್ಳುವ ಕೆಲಸಗಳೂ ಇದ್ದವೆಂದು ತಿಳಿದುಬರುತ್ತದೆ.

ಹಿಂದೆ ಹೇಳಿದಂತೆ, ಅನುಭವಮಂಟಪವು ವರ್ಣಭೇದವನ್ನು ದೂರಮಾಡಿತು. ಮತಪಂಥಗಳ ಭೇದವಿಲ್ಲದಂತೆ ಲಿಂಗದೀಕ್ಷೆ ಪಡೆದ ಎಲ್ಲರಿಗೂ ಅಲ್ಲಿ ಪ್ರವೇಶ ಸಿಗುತ್ತಿತ್ತು. ಗುರುಲಿಂಗ ಜಂಗಮ ದಾಸೋಹಕ್ಕಾಗಿ ಅವರು ಯಾವ ದಿನಚರಿಯ ಜೀವನವನ್ನು ಕೈಕೊಂಡರು ಸಹ, ಅವಕ್ಕೆ ಕೀಳು ಮೇಲೆಂಬ ಭಾವನೆಗಳನ್ನು ಹೊಂದಿಸದೆ ಒಂದೇ ವಿಧವಾದ ಧಾರ್ಮಿಕ ಭಾವನೆಯಿಂದ ಪುರಸ್ಕರಿಸುತ್ತಿದ್ದರು. ಆ ರೀತಿ ಅವರು ನಡೆಯಿಸುತ್ತಿದ್ದ ಕಾಯಕವು 'ಕೈಲಾಸ' ವೆಂದು ಪೂಜನೀಯವಾಗಿದ್ದಿತು. ಇದೇ ಅನುಭವಮಂಟಪದ ವೈಶಿಷ್ಟ್ಯ. ಬಡ ಕೂಲಿಯಿಂದ ಅರಸನವರೆಗೂ ಒಂದೇ ವಿಧವಾದ ಮನ್ನಣೆ! ಎಲ್ಲರನ್ನೂ ಆಳೆಯುವ ಅಳೆಗೋಲು ಅಲ್ಲಿ ಒಂದೇ ಒಂದು. ಅದೇ ಅನುಭವ. 'ವಿಪ್ರ ಮೊದಲು ಅಂತ್ಯಜ ಕಡೆಯಾಗಿ ಶಿವಭಕ್ತರಾದವರೆಲ್ಲರನೊಂದೆ ಎಂಬೆ' ಎಂದು ನುಡಿದ ಬಸವಣ್ಣನವರು, ನುಡಿದಂತೆಯೇ ನಡೆದು ಎಲ್ಲರಿಗೂ ಸ್ವಾತಂತ್ರ್ಯವನ್ನು ಕಲ್ಪಿಸಿಕೊಟ್ಟರು. ದೀಕ್ಷಾಸಂಸ್ಕಾರದಿಂದ ದೇಹದಮೇಲೆ ಇಷ್ಟಲಿಂಗವು ಪ್ರತಿಷ್ಠಿತವಾದ ಬಳಿಕ ಅವನು ಯಾರೇ ಆಗಲಿ ಶಿವಶರಣನೆಂದು ಪರಿಗಣಿಸಲ್ಪಡುತ್ತಿದ್ದನು. ಅವರಲ್ಲಿ ಯಾವ ವ್ಯತ್ಯಾಸವೂ ಇರುತ್ತಿರಲಿಲ್ಲ.

"ಎಂಥವನಾದೊಡೇನು ? ಲಿಂಗ ಮುಟ್ಟಿದವನೇ ಕೀಳು ಜಾತಿ, ಕುಲವಹುದು ತಪ್ಪದು, ಲಿಂಗವ ಮುಟ್ಟಲೊಡನೆ ಶಿವಕುಲವಹುದು ತಪ್ಪದು. ಪರುಷ ಮುಟ್ಟಲೊಡನೆ ಕಬ್ಬುನ ಹೊನ್ನಹುದು ತಪ್ಪದು. ಕೂಡಲ ಸಂಗಮದೇವನೊಲ್ಲ ಸರ್ವ ಸಂದೇಹಿಗಳಾ."

---

೧ ಎಂ. ಆರ್. ಶ್ರೀನಿವಾಸಮೂರ್ತಿಗಳ 'ಭಕ್ತಿಭಂಡಾರಿ ಬಸವಣ್ಣನವರು' ಪರಿಶಿಷ್ಟ ೨. ಪುಟ ೧೨೪ ರಿಂದ ೧೩೪.

೨ ಕವಿಚರಿತ್ರೆ ಮೊದಲನೆಯ ಭಾಗ ಪುಟ ೧೯೩.



CC-0. Jangamwadi Math Collection, Varanasi. An eGangotri Initiative

"ಉಂಬಲ್ಲಿ ಉಡುವಲ್ಲಿ ಕುಲವಳಿಯಿತೆಂಬರು. ಕೊಂಬಲ್ಲಿ ಕೊಡುವಲ್ಲಿ ಕುಲವನರಸುವ ಮಾದಿಗರ ನೇನೆಂಬೆನಯ್ಯ. ಇವರೆಂತು ಭಕ್ತರೆಂಬೆನಯ್ಯ! ಇವರೆಂತು ಯುಕ್ತರೆಂಬೆನಯ್ಯ ? ಇವರು ಒಚ್ಚೊಚ್ಚಿ ಭಕ್ತರು. ಇವರು ಒಚ್ಚೊಚ್ಚಿ ಭವಿಗಳು. ಅದೆಂತೆಂದೊಡೆ, ಲೈಂಗ್ಯೇ–'ಸ್ತ್ರೀ ವಾ ಪುರುಷಃ ಚಾಂಡಾಲ ದ್ವಿಜವಂಶಜಾಃ ನ ಜಾತಿಭೇದೋ ಲಿಂಗಾರ್ಚನೇ ಸರ್ವೇ ರುದ್ರಗಣಾಃ ಸ್ಮೃತಾಃ' ಎಂದುವಾಗಿ, ಇಂತೆಂಬ ಪುರಾಣ ವಾಕ್ಯವ ತಿಳಿದು ನೋಡಿರೇ. ಸರ್ವರೂ ರುದ್ರಗಣಗಳೆಂಬೆ, ಸರ್ವರೂ ಸದ್ಭಕ್ತರೆಂಬೆ. ಅವರಲ್ಲಿ ಕುಲವ ನೋಡದೆ, ಆಚಾರವ ನೋಡಿ, ಅವರಿಗೆ ಬೇಕಾದ ಹೆಣ್ಣುಕೊಟ್ಟು, ತನಗೆ ಬೇಕಾದುದ ತೆಗೆದು ಕೊಂಬುವುದು. ಈ ಕ್ರಮುವನರಿಯದವನ ಭಕ್ತಿ ಹೊಲತಿ ಶುದ್ಧ ನೀರ ಮಿಂದಂತಾಯಿತ್ತು ಕೂಡಲ ಸಂಗಮದೇವಾ."

ಎಂದು ಹೇಳಿದ ಬಸವಣ್ಣನವರು ಅದರಂತೆ ಆಚರಿಸಿದರೆಂದು ಮತ್ತೆ ಹೇಳಬೇಕಾಗಿಲ್ಲ. ಆದುದರಿಂದಲೇ ಅವರಲ್ಲಿ ಊಟ-ಉಡಿಗೆ ಮತ್ತು ಇತರ ದೇಹ ಸಂಬಂಧಗಳೂ ಸಹ ನಡೆಯಲು ಆತಂಕವಿರಲಿಲ್ಲ. ಅನುಭವಮಂಟಪದಲ್ಲಂತೂ ಪ್ರಾಯಶಃ ಎಲ್ಲ ರೀತಿಯ ಕಾಯಕಗಳ ಜನರೂ ಸೇರಿದ್ದರು. ಅವರು ಯಾವ ಕಾಯಕವನ್ನು ಸ್ವೀಕರಿಸಿದರೂ ಸಹ ಕಾಯಕದಲ್ಲೂ ಜ್ಞಾನದ ತಿರುಳೂ ಧರ್ಮದ ತತ್ತ್ವವೂ ಹೊರಹೊಮ್ಮಬೇಕಿದ್ದಿತೇ ಹೊರತು ವರ್ಣಭೇದಗಳಲ್ಲ. ಉದಾಹರಣೆಗಾಗಿ ಕೆಲವು ವಚನಕಾರರ ಹೆಸರುಗಳನ್ನೂ ಅವರು ನಡೆಯಿಸುತ್ತಿದ್ದ ಕಾಯಕದ ವಿವರಗಳನ್ನೂ ಇಲ್ಲಿ ಕೊಡಲಾಗಿದೆ:—

ಜೇಡರ ದಾಸಿಮಯ್ಯನು ನೇಯಿಗೆಯ ಕೆಲಸವನ್ನು, ಶಂಕರ ದಾಸಿಮಯ್ಯನು ಬಟ್ಟೆ ಹೊಲಿಯುವ ಕೆಲಸವನ್ನು, ಮಡಿವಾಳ ಮಾಚಯ್ಯನು ಅಗಸರ ಕೆಲಸವನ್ನು, ಮೇದಾರ ಕೇತಯ್ಯನು (ಮೇದರವನು) ಬುಟ್ಟಿ ಹೆಣೆಯುವುದನ್ನು, ಅಂಬಿಗರ ಚೌಡಯ್ಯನು (ನಾವಿಕ) ಹುಟ್ಟು ಹಾಕುವುದನ್ನು, ಹಡಪದ ಅಪ್ಪಣ್ಣನು ಕ್ಷೌರಿಕ ಕೆಲಸವನ್ನು, ಡಕ್ಕೆಯ ಬೊಮ್ಮಣ್ಣನು ಡೋಲು ಬಾರಿಸುವುದನ್ನು, ತುರುಗಾಹಿ ರಾಮಣ್ಣನು ದನಕಾಯುವುದನ್ನು, ಸುಂಕದ ಬಂಕಣ್ಣನು ಸುಂಕ ವಸೂಲ ಮಾಡುವುದನ್ನು, ಕಿನ್ನರಿ ಬೊಮ್ಮಣ್ಣನು ಅಕ್ಕಸಾಲಿಗತನವನ್ನು, ಒಕ್ಕಲು ಮುದ್ದಯ್ಯನು (ವ್ಯವಸಾಯ) ಜಮೀನು ಸಾಗುವಳಿ ಕೆಲಸವನ್ನು, ಜೋಧರ ಮಾದಣ್ಣನು ಸೈನಿಕ ಕೆಲಸವನ್ನು, ಡೋಹರ ಕಕ್ಕಯ್ಯನು ತೊಗಲು ಹದ ಮಾಡುವುದನ್ನು, ಹರಳಯ್ಯ, ಮಾದರ ಚನ್ನಯ್ಯ ಇವರು ಚಮ್ಮಾರ (ಎಕ್ಕಡ ಹೊಲಿಯುವವರು) ತನವನ್ನು, ತಳವಾರ ರಾಮಿದೇವನು ತಳವಾರಿಕೆಯನ್ನು, ಗಾಣದ ಕನ್ನಯ್ಯನು ಗಾಣಿಗತನವನ್ನು, ವೈದ್ಯ ಸಂಗಣ್ಣನು ವೈದ್ಯ ವೃತ್ತಿಯನ್ನು, ಕಿರಾತ ಸಂಗಯ್ಯನು ಬೇಡರ ವೃತ್ತಿಯನ್ನು, ನುಲಿಯ ಚಂದಯ್ಯನು ನೊದೆ ಹುಲ್ಲಿನಲ್ಲಿ ಹಗ್ಗ ಹೊಸೆಯುವುದನ್ನು, ಸೂಜಿ ಕಾಯಕದ ರಾಮಿತಂದೆಯು ಸೂಜಿಯ ಕೆಲಸವನ್ನು, ಮುಂಹರ ಕಾಯಕದ ಚಿಕ್ಕ ದೇವಯ್ಯನು ಹಿತ್ತಾಳೆ ಕಂಚುಗಳ ಹಳೆ ಪಾತ್ರೆ ವ್ಯಾಪಾರವನ್ನು, ಬಾಚಿಕಾಯಕದ ಬಸವಪ್ಪನು ಬಡಿಗಿಯ ಕೆಲಸವನ್ನು, ಸತ್ತಿಗೆಕಾಯಕದ ರಾಮಿತಂದೆಯು ಕೊಡೆ ಹಿಡಿಯುವುದನ್ನು, ಕನ್ನಡಿಕಾಯಕದ ಅಮ್ಮಿದೇವಯ್ಯನು ಕನ್ನಡಿ ಹಿಡಿಯುವುದನ್ನು, ಸೊಡ್ಡಳ ಬಾಚರಸನು ಕರ್ಣಿಕನಾಗಿಯೂ, ಮೋಳಿಗೆಯ ಮಾರಯ್ಯನು ಕಟ್ಟಿಗೆ ಮಾರುವುದನ್ನು, ಆಯ್ದಕ್ಕಿ ಮಾರಯ್ಯನು ಹೊಲದಲ್ಲಿ ಹಕ್ಕಲು ಆಯುವುದನ್ನು, ಏಲೇಶ್ವರದ ಕೇತಯ್ಯನು ವ್ಯವಸಾಯವನ್ನು, ಕದಿರೆಕಾಯಕದ ರೆಮ್ಮವ್ವೆಯು ನೂಲುವ ಕೆಲಸವನ್ನು, ಕೊಟ್ಟಣದ ರೆಮ್ಮವ್ವೆಯು ಕುಟ್ಟುವ ಕೆಲಸವನ್ನು ಮಾಡುತ್ತಿದ್ದರು.



CC-0. Jangamwadi Math Collection, Varanasi. An eGangotri Initiative

ಇದೇ ರೀತಿಯಾಗಿ ಇನ್ನೂ ಅನೇಕ ರೀತಿಯ ಕಾಯಕಗಳ ಶರಣರು ಅನುಭವಮಂಟಪ ದಲ್ಲಿದ್ದರು. ಇವರಲ್ಲಿ ಪರಸ್ಪರ ಯಾವ ಭಿನ್ನಭೇದವೂ ಇರಲಿಲ್ಲನೆಂಬುದನ್ನು ಮಾತ್ರ ಯಾರೂ ಮರೆಯಬಾರದು. ಭಕ್ತಿ, ಜ್ಞಾನ, ಕ್ರಿಯೆ, ವೈರಾಗ್ಯ ಇವುಗಳಲ್ಲಿ ಯಾರಿಗೆ ಯಾರೂ ಕಡಿಮೆ ಯಾಗಿರಲಿಲ್ಲ. ಆಧ್ಯಾತ್ಮಿಕ ಅನುಭವದಲ್ಲಿ ಸ್ತ್ರೀ ಪುರುಷರೆಂಬ ಭೇದವೂ ಸಹ ಇರಲಿಲ್ಲ. ವ್ಯಕ್ತಿಯ ಈ ರೀತಿಯ ಯೋಗ್ಯತೆಗೆ ಬೆಲೆಯು ದೊರೆಯುತ್ತಿದ್ದಿತಲ್ಲದೆ ಆತನ ಧನ, ದೌಲತ್ತುಗಳಿಗಾಗಲಿ, ಒಣ ಪಾಂಡಿತ್ಯಕ್ಕಾಗಲಿ ಯಾರೂ ಬೆಲೆ ಕೊಡಲಾರದಾದರು. ಸಹಪಂಕ್ತಿ ಭೋಜನ, ವೈವಾಹಿಕ ಸಂಬಂಧ, ಮತ್ತು ಶಿವಾನುಭವದ ಆಂತರಿಕ ವಿಷಯ ಮುಂತಾದವುಗಳಲ್ಲೂ ಸಹ ಸ್ವಲ್ಪವೂ ಭಿನ್ನ ಭಾವವಿಲ್ಲದಂತೆ ವರ್ತಿಸುತ್ತಿದ್ದರು. ಈ ವಿಶ್ವಕೌಟುಂಬಿಕ ಜೀವನದ ಪರಿಮಾಣವು ಚಿಕ್ಕದಾದರೂ ಆದರ್ಶವು ದೊಡ್ಡದು ಮತ್ತು ಉದಾತ್ತವಾದುದು.

ಈ ಅನುಭಾವಿಗಳಲ್ಲಿ ವಚನಗಳನ್ನು ಬರೆದವರ ಹೆಸರುಗಳೆಲ್ಲವೂ ನಮಗೆ ದೊರಕಿಲ್ಲ. ಉಪಲಬ್ಧವಿರುವ ವಚನಕಾರರ ಸಂಖ್ಯೆಯು ಸು. ೨೧೩ ಇದ್ದಿತೆಂದು ಶ್ರೀಮಾನ್ ಪಿ. ಜಿ. ಹಳಕಟ್ಟಿ ಯವರು ತಮ್ಮ ವಚನಶಾಸ್ತ್ರದ[೧] ಕಡೆಯಲ್ಲಿ ಹೇಳಿದ್ದಾರೆ. ಅವರಲ್ಲಿ ಸತ್ಯಕ್ಕ, ಮುಕ್ತಾಯಕ್ಕ, ಮಹಾದೇವಿಯಕ್ಕ ಮೊದಲಾದ ಶಿವಶರಣೆಯರ ಸಂಖ್ಯೆಯೇ ೨೮ ರ ವರೆಗಿದ್ದಿತು. ಇನ್ನೂ ಕೆಲವು ಇತಿಹಾಸಕಾರರು ಈ ವಚನಕಾರರ ಸಂಖ್ಯೆಯು ೩೦೦ ಕ್ಕಿಂತಲೂ ಹೆಚ್ಚಾಗಿದ್ದಿತೆಂದು ಅಭಿಪ್ರಾಯ ಪಡುತ್ತಾರೆ. ಪ್ರತಿಯೊಬ್ಬ ಶರಣನೂ ಬೇಕಾದಷ್ಟು ವಚನಗಳನ್ನು ಬರೆದಿದ್ದಾನೆ. ಒಟ್ಟಿನಲ್ಲಿ ಇವುಗಳ ಸಂಖ್ಯೆ ೧೮೦ ಕೋಟಿ[೨] ಎಂದೂ ತಿಳಿದುಬರುತ್ತದೆ. ಆದರೆ ನಮ್ಮ ದೌರ್ಭಾಗ್ಯದಿಂದ ಅಷ್ಟು ವಚನಗಳೂ ದೊರಕಿಲ್ಲ. ವಚನಗಳೆಲ್ಲವೂ ಹಿಂದೆ ಹೇಳಿರುವಂತೆ ಅನುಭಾವಿಗಳು ಅನು ಭವಿಸಿ ನುಡಿದ ನುಡಿಗಡಣ. ಇವುಗಳ ಸಹಾಯದಿಂದಲೇ ಇಂದಿನ ಇತಿಹಾಸವು ರಚಿತವಾಗ ಬೇಕಾಗಿದೆ. ಪ್ರತಿಯೊಂದು ವಚನವೂ ಅವರವರಿಗೆ ಪ್ರಿಯವಾದ ಆರಾಧ್ಯ ದೇವತೆಗಳ ಹೆಸರಿನಲ್ಲಿ ಕಡೆಯಾಗುತ್ತದೆ.

ಈ ಅನುಭವಮಂಟಪದ ಕಾರ್ಯಾಲಯವು ಬಸವಣ್ಣನವರ ಮನೆಯಲ್ಲಿಯೇ ಇದ್ದಿತೆಂದು ತಿಳಿದುಬರುತ್ತದೆ. 'ಗುಹೇಶ್ವರನ ಬರವು ಸಂಗನ ಬಸವಣ್ಣನ ಅಂಗಳವ ಕಂಡಲ್ಲಿ' 'ಬಸವರಾಜ ದೇವರ ಮಠದಲ್ಲಿ ಶಿವಗಣಂಗಳ ತಿಂಥಿಣಿಯಾದುದಂ ಕಂಡು' 'ಗುಹೇಶ್ವರ ಶರಣನ ಸಂಗನ ಬಸವಣ್ಣನ ಮಹಾಮನೆಯ ಕಂಡು ಧನ್ಯನಾದೆನು ಕಾಣಾ ಸಿದ್ಧರಾಮಯ್ಯ' ಮುಂತಾದ ವಾಕ್ಯಗಳು ಶೂನ್ಯಸಂಪಾದನೆಯಲ್ಲಿ ಬರುವುದರಿಂದಲೂ, ಅನುಭವಮಂಟಪವು ಬಸವಣ್ಣನವರ ಅರ ಮನೆಯ ಒಂದು ಭಾಗದಲ್ಲೇ ಸೇರುತ್ತಿದ್ದಿತೆಂದು ಹೇಳಬಹುದು. ಕಲ್ಯಾಣಕ್ಕೆ ಬಂದ ಶರಣರಿಗೆ ಅದು 'ಅವಿಮುಕ್ತ ಕ್ಷೇತ್ರ'ವಾಗಿದ್ದಿತು. ಎಲ್ಲರೂ ಅತಿ ಭಕ್ತಿ ವಿನಯಗಳಿಂದ ಅದಕ್ಕೆ ಸಿದ್ಧರಾಮೇಶ್ವರ ನಂತೆ 'ಶರಣ ಸಂಗನ ಬಸವಣ್ಣನ ಮಹಮನೆಗೆ ನಮೋ ನಮೋ ಎಂದು' ನಮಸ್ಕರಿಸಿರಬೇಕು.

---

೧ ಮೊದಲನೆಯ ಮುದ್ರಣ.

೨ ಶೂನ್ಯಸಂಪಾದನೆ. ಸಂಪಾದನೆ ಪುಟ ೧



CC-0. Jangamwadi Math Collection, Varanasi. An eGangotri Initiative

## 'ಶೂನ್ಯ ಸಿಂಹಾಸನ' ಮತ್ತು ಅನುಭವಮಂಟಪದ ಶಿಕ್ಷಣ

ಹಿಂದೆ ಹೇಳಿದಂತೆ ಈ ಅನುಭವಮಂಟಪಕ್ಕೆ ಅಲ್ಲಮಪ್ರಭುವೇ ಅಧ್ಯಕ್ಷರಾಗಿದ್ದರು. ಇತರ ಶಿವಶರಣರೂ ಸಹ ತಮ್ಮ ತಮ್ಮ ಮನೋ ಧರ್ಮಾನುಸಾರವಾಗಿ ಭಕ್ತಿ, ಜ್ಞಾನ, ಕ್ರಿಯೆ, ವೈರಾಗ್ಯ ಇವು ಒಂದೊಂದರಲ್ಲೇ ನಿಷ್ಣಾತರಾಗಿರುತ್ತಿದ್ದರು. ಅವರವರ ಈ ವಿಧವಾದ ಆಧ್ಯಾತ್ಮಿಕ ಪರಿಸ್ಥಿತಿಯೇ ಅವರನ್ನು ಸ್ಥಳಗಳ ಕಟ್ಟುಗಳಲ್ಲಿ ವಿಂಗಡಿಸಿ ಇಡುತ್ತಿದ್ದಿತು. ಇಲ್ಲಿ ಸ್ಥಳವೆಂದರೆ ಭೌತಿಕವಾದ ಸ್ಥೂಲ ಸಿಂಹಾಸನಾದಿ ಸ್ಥಳವಲ್ಲ. ಸ್ಥಲ* ವೀರಶೈವರ ಪಾರಿಭಾಷಿಕ ಶಬ್ದ. ಹಾಗೆಯೇ ಪ್ರಭುವಿನ ಶೂನ್ಯ ಸಿಂಹಾಸನಾರೋಹಣವೂ ಸಹ ಒಂದು ಆಧ್ಯಾತ್ಮಿಕ ಅವಸ್ಥಾ ವಿಶೇಷ. ಪ್ರಭುವು ಲಿಂಗಾಂಗ ಸಾಮರಸ್ಯದ ಪರಾಕಾಷ್ಠದೆಶೆಯಲ್ಲಿದ್ದುದರಿಂದಲೇ ಅವರು ಅಲ್ಲಿಯ ಅನುಭಾವಿಗಳಿಗೆ ಮುಖ್ಯರಾಗಿದ್ದರು. ಶೂನ್ಯ ಸಿಂಹಾಸನದಲ್ಲಿ ಕುಳಿತ ಪ್ರಭುವನ್ನು ಬಸವಣ್ಣನವರು ಹೀಗೆ ವರ್ಣಿಸಿರುವರು :

" ಇಂತು ಅಂತರಂಗವಿಲ್ಲದ ಒಳಗು ಅವಲಂಬನವಿಲ್ಲದ ಹೊರಗು ನೋಡಲಳವಲ್ಲದ ಕುಸುಮದ ಗದ್ದುಗೆಯಲ್ಲಿ ಒಡಲಿಲ್ಲದ ಘನವು ಮೂರ್ತಿಗೊಂಡಿರೆ ವಿಚಿತ್ರವಾಯಿತು ಜಗವೆಲ್ಲ.... "

ಶೂ. ಸಂ. ಪುಟ ೩೧೭–೩೧೮ ಸಂ. ೩.

" ನೆಲನ ಹೊದ್ದದು. ಆಕಾಶ ಮುಟ್ಟದು. ಎಡೆಲೊಂದು ರೂಪಿಲ್ಲ. ಭಾವವೆಂಬ ಜ್ಞಾನವೆ ನಿವಾಸ, ನಿಲವೆ ಭಕ್ತಿ, ನಿರಹಂಕಾರವೇ ಶಿಖರಿ, ಮಹದಹಂಕಾರವೆ ಶೃಂಗಾರ, ಕಳಸ ಪತ್ರದ ನವಕಮಲ, ಸಿಂಹಾಸನದ ನಿತ್ಯವೆ ಮುಲಗು. ನಿಜವೆಂಬ ವಿಸ್ತಾರದಲ್ಲಿ ನಿತ್ಯನಿರಾಳವೆಂಬ ಮಹಾಘನವು ಬಂದು ಮೂರ್ತಿಗೊಳ್ಳಲು ಕಾಯದ ಕಂಗೆ ಕಾಣಬಾರದು. ಮಗದ ಮುಂದೆ ಅಳವಡದು. ಭಾವದ ಬಗೆಗೆ ಮೈದೋರದು.... " ಎಂಬುದಾಗಿ ಶೂನ್ಯ ಸಿಂಹಾಸನವನ್ನು ಹಡಪದಪ್ಪಣ್ಣಗಳು ಚೆನ್ನಾಗಿ ವರ್ಣಿಸಿರುವರು.

ಶೂ. ಸಂ. ಪುಟ ೩೧೮. ಸಂ. ೪.

ಆತ್ಮಾನುಭವದಮೂಲಕ ಲಿಂಗಾಂಗ ಸಾಮರಸ್ಯದ ದಿವ್ಯಾನಂದವನ್ನು ಅವರು ಸಂಪಾದಿಸಿದ್ದುದರಿಂದಲೇ ಎಲ್ಲರ ಹೃದಯದ ಮೇಲೂ ಅವರು ಅಧಿಕಾರ ಮಾಡುತ್ತಿದ್ದರು.

ಶಕ್ತಿ ವಿಶಿಷ್ಟಾದ್ವೈತ ಧರ್ಮದ ಮುಖ್ಯಾಂಗಗಳು ಮೂರು : ಅಷ್ಟಾವರಣ, ಪಂಚಾಚಾರ ಮತ್ತು ಷಟ್‌ಸ್ಥಲಗಳು. ಜೀವನದ ಒಳಗು ಹೊರಗುಗಳೆರಡೂ ಪರಿಶುದ್ಧಿ ಹೊಂದಲು ಬಾಹ್ಯ ಮತ್ತು ಅಂತರಷ್ಟಾವರಣಗಳು, ಜೀವನದ ರೀತಿ ನೀತಿಗಳು ಸರಿಹೋಗಲು ಪಂಚ ಆಚಾರಗಳೂ ನಿಯಮಿಸಲ್ಪಟ್ಟಿವೆ. ಇವುಗಳ ನೆರವಿನಿಂದ ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಎಂಬ ಆರು ಮೆಟ್ಟಲುಗಳನ್ನೂ ಹತ್ತಬೇಕು. ಕರಸ್ಥಳಕ್ಕೆ ಬಂದ ಇಷ್ಟಲಿಂಗದಿಂದ ಪ್ರಾಣಲಿಂಗ

* ಸಂಸಾರದ ಉಪಶಮ ಅಂದರೆ ಪರಿನಿರ್ವಾಣದಲ್ಲಿ ನಿಷ್ಠೆಯುಳ್ಳವರಿಗೆ ಅಂತಿಮಸ್ಥಾನವು. ಯಾವದೇ ಅದ್ವೈತರಹಿತವಾದ ವಸ್ತುವನ್ನೇ ಶಿವಜ್ಞಾನಿಗಳು ಸ್ಥಲವೆಂದು ಹೇಳುವರು. ( ಸೂ. ೯. ಶಿವಾನುಭವ ಸೂತ್ರ ಪುಟ ೧೧. ಸೂ. ೧–೮ ರ ವರೆಗೂ ನೋಡಬಹುದು. )



CC-0. Jangamwadi Math Collection, Varanasi. An eGangotri Initiative

ವನ್ನು, ಪ್ರಾಣಲಿಂಗದಿಂದ ಭಾವಲಿಂಗವನ್ನೂ ಅನುಭವದಮೂಲಕ ಸಾಲೋಕ್ಯ, ಸಾರೂಪ್ಯ, ಸಾಮೀಪ್ಯ, ಸಾಯುಜ್ಯಾದಿ ಚತುರ್ವಿಧಗಳಿಂದಲೂ ಸಾಕ್ಷಾತ್ಕಾರ ಮಾಡಿಕೊಂಡು 'ಮಹಾ ಬೆಳಗಿನ ಬೆಳಗಿನಲ್ಲಿ ನಿರವಯಲಾಗು'ವುದೇ ಅವರ ಜೀವನದ ಆಕಾಂಕ್ಷೆ ಮತ್ತು ಸಾಧನೆಯ ಗುರಿ. ಬಾಹ್ಯದ ಕ್ರಿಯೆಯು ಆಂತರಿಕ ಜ್ಞಾನವಾಗಿಯೂ, ಆಂತರಿಕ ಜ್ಞಾನವು ಬಾಹ್ಯದ ಕ್ರಿಯೆಯಾಗಿಯೂ ರೂಪುಗೊಳ್ಳಬೇಕಿದ್ದಿತು. ಇವೇ ಅವರ ಸಾಧನೆಯ ತಿರುಳು. ಈ ಮೆಟ್ಟಿಗಳನ್ನೇರುವಾಗ ಭಕ್ತಿ, ಜ್ಞಾನ, ವೈರಾಗ್ಯ ಮೊದಲಾದುವುಗಳಲ್ಲಿ ಒಂದೊಂದರಲ್ಲೇ ಒಬ್ಬೊಬ್ಬ ಶರಣನು ಹೆಚ್ಚು ತೇಜಸ್ವಿಯಾಗಿ ಮೈದೋರುತ್ತಿದ್ದನು. ಅಕ್ಕಮಹಾದೇವಿಯ ಈ ವಚನವೇ ಇದಕ್ಕೆ ಉದಾಹರಣೆಯಾಗಿದೆ:

"ಬಸವಣ್ಣನ ಭಕ್ತಿ, ಚೆನ್ನಬಸವಣ್ಣನ ಜ್ಞಾನ, ಮಡಿವಾಳಯ್ಯನ ನಿಷ್ಠೆ, ಪ್ರಭುದೇವರ ಜಂಗಮಸ್ಥಲ, ಅಜಗಣ್ಣನ ಐಕ್ಯಸ್ಥಲ, ನಿಜಗುಣನ ಆರೂಢಸ್ಥಲ, ಸಿದ್ಧರಾಮಯ್ಯನ ಸಮಾಧಿಸ್ಥಲ ಇಂತಿವರ ಕರುಣಪ್ರಸಾದವೆನಗಾಯಿತ್ತು ಚೆನ್ನಮಲ್ಲಿಕಾರ್ಜುನಯ್ಯಾ."

ಮ. ವಚನಗಳ ಪುಟ ೨೭. ಸಂ. ೭

ಗ್ರಂಥಸ್ಥ ವಿಷಯಗಳಿಗಿಂತಲೂ ಅನುಭವದಿಂದ ಸಂಪಾದಿಸಲ್ಪಟ್ಟ ವಿಷಯಗಳಿಗೆ ಹೆಚ್ಚು ಪ್ರಾಧಾನ್ಯವನ್ನು ಕೊಟ್ಟು ಸಾಧನೆಯಲ್ಲಿ ಮುಂದುವರಿಯುತ್ತಿದ್ದರು. ಈ ರೀತಿ ಅವರು ಹೊಂದಿದ ತಮ್ಮ ಅನುಭವವನ್ನು ವೇದಕ್ಕಿಂತಲೂ ಮೀರಿದುದೆಂದು ಹಾಡಿರುತ್ತಾರೆ.

"ನಮ್ಮ ನಡಾವಳಿಗೆ ನಮ್ಮ ಪುರಾತನರ ನುಡಿಯೇ ಇಷ್ಟವಯ್ಯ. ಸ್ಮೃತಿಗಳು ಸಮುದ್ರಪಾಲಾಗಲಿ, ಶ್ರುತಿಗಳು ವೈಕುಂಠ ಸೇರಲಿ, ಪುರಾಣಗಳು ಅಗ್ನಿಯ ಸೇರಲಿ, ಆಗಮಗಳು ವಾಯುವ ಹೊಂದಲಿ, ಎಮ್ಮ ನುಡಿ ಕಪಿಲ ಸಿದ್ಧ ಮಲ್ಲಿಕಾರ್ಜುನನ ಮಹಾಲಿಂಗದ ಹೃದಯದಲ್ಲಿ ಗ್ರಂಥಿಯಾಗಿರಲಿ."

"ಅನಂತ ವೇದಶಾಸ್ತ್ರ, ಆಗಮ, ಪುರಾಣ, ತರ್ಕ, ತಂತ್ರಗಳನ್ನು ಆತ್ಮ ಮಾಡುವವನಲ್ಲದೆ ಆತ್ಮನ ಅವು ಮಾಡಿರುವುದಿಲ್ಲ. ಎನ್ನಂತರಂಗದರವಿನ ಮೂರ್ತಿಯಾಗಿ ಎನ್ನ ಉರಿಲಿಂಗದೇವರು ಸಂಕಲ್ಪಿಸಿ ಆಗೆಂದರಾದೆವು." ಎಂದು ವೇದಶಾಸ್ತ್ರಗಳ ಉಗಮವನ್ನು ಅಂದಿರುವರು. ಇದನ್ನು ವೇದಬಾಹಿರತೆ ಎಂದು ಯಾರೂ ಅರ್ಥ ಮಾಡಿಕೊಳ್ಳಬಾರದು, ಇಲ್ಲವೇ ಜ್ಞಾನವೇ ಅನವಶ್ಯಕವೆಂದೂ ತಿಳಿಯಬಾರದು; ಏಕೆಂದರೆ ಸಿದ್ಧರಾಮೇಶ್ವರನು "ವಚನ ಅನುಭಾವಿಯಾದವನು ಪಂಡಿತನಯ್ಯಾ. ವಿದ್ಯೆ ಎಂಬುದು ಅಭ್ಯಾಸಕನ ಕೈವಶ. ಅವಿದ್ಯೆ ಎಂಬುದು ಸರ್ವರಲ್ಲಿ ವಶ. ವಿದ್ಯಾವಿದ್ಯೆಯನ್ನರಿತು ಜಗವೇದ್ಯರಾಗಬಲ್ಲರೇ ಮಹಾಪಂಡಿತ ನೋಡಾ ಕಪಿಲ ಸಿದ್ಧ ಮಲ್ಲಿಕಾರ್ಜುನ" ಎಂದು ಹೇಳಿರುವರು. ಇದರಿಂದ ಅನುಭವದ ಹೆಚ್ಚಳವನ್ನೂ ಅದರ ಅವಶ್ಯಕತೆಯನ್ನೂ ಊಹಿಸಬಹುದು. ಜ್ಞಾನ ಮತ್ತು ಅದರ ಕ್ರಿಯೆಗಳ ಅಥವಾ ಅದರ ನಡೆನುಡಿಗಳ ಸಮರಸತೆಯ ವಿಷಯದಲ್ಲಿ ಅವರಿಗಿದ್ದ-ಶ್ರದ್ಧೆ ನಿಷ್ಠೆಗಳ ಅಥವಾ ಅವರ ನಡೆ-ನುಡಿಗಳ ಪರಾಕಾಷ್ಠ ದೆಸೆಯನ್ನೇ ಈ ವಚನಗಳು ಪ್ರತಿಬಿಂಬಿಸುತ್ತವೆ.



CC-0. Jangamwadi Math Collection, Varanasi. An eGangotri Initiative

'ಶರಣರ ಸಂಗದಿಂದ' ಶರಣರಲ್ಲಿ ಉಂಟಾಗುತ್ತಿದ್ದ ಪರಿಣಾಮವೂ ವಿಶೇಷವಾಗಿ ಅವರವರ ಸಾಧನೆಗೆ ನೆರವಾಗುತ್ತಿದ್ದಿತು. 'ಸಂಗದಿಂದಲ್ಲದೆ ಅಗ್ನಿ ಹುಟ್ಟದು' ಎಂದು ನುಡಿದವರ ಹಾಗೆಯೇ 'ಶರಣರ ಅನುಭಾವಸಂಗದಿಂದಾನು ಪರಮ ಸುಖಿಯಾದೆನು' ಎಂದು ಯೋಗಾನಂದದ ಸುಖವನ್ನು ಪಡೆಯುತ್ತಿದ್ದರು. ಒಬ್ಬರಲ್ಲಿ ಕಂಡುಬಂದ ಉತ್ತಮ ಗುಣಕ್ಕೆ ಬೆಲೆ ಕೊಡುತ್ತಿದ್ದಂತೆಯೇ ಅವರಲ್ಲಿ ಕಂಡುಬಂದ ದೋಷಗಳನ್ನು ಸಹ ಖಂಡಿಸುತ್ತಿದ್ದರು. ಆಧ್ಯಾತ್ಮಿಕ ಶಿಕ್ಷಣಕ್ಕೆ ಅಡ್ಡಿ ಬರುತ್ತಿದ್ದ ಯಾವ ಲವಲೇಶ ವಸ್ತುವಿಗೂ ವಿಷಯಕ್ಕೂ ಸಹ ಅವಕಾಶವಿರಲಿಲ್ಲ. ಮೋಳಿಗೆ ಮಾರಯ್ಯನಲ್ಲಿ ತೋರಿಬಂದ ಅಹಂಕಾರವನ್ನು ಅವನ ಪತ್ನಿ ಮಹದೇವಿಯೇ ಖಂಡಿಸಿರುವಳು. ಬಸವಣ್ಣನವರಲ್ಲಿ ಕಂಡುಬಂದ ಅಹಂಕಾರವನ್ನು ಪ್ರಭುದೇವರೇ ಸೂಕ್ಷ್ಮವಾಗಿ ಖಂಡಿಸಿದರು. ಈ ರೀತಿಯ ತಾತ್ಕಾಲಿಕ ಶಸ್ತ್ರಚಿಕಿತ್ಸೆಯಿಂದಲೇ ಶರಣರ ಅಭಿವೃದ್ಧಿಯಾಗುತ್ತಿದ್ದಿತು; ಅವರ ಅನುಭವವು ಮುಂದಾಗುತ್ತಿದ್ದಿತು. ತಪ್ಪು ಮಾಡಿದರೆ ತಿದ್ದುವವರಿದ್ದರು; ದಾರಿ ತಪ್ಪಿದರೆ ತೋರುವವರಿದ್ದರು. ಅನುಭವದಲ್ಲಿ ಮನವುಳ್ಳವರಿದ್ದರು; ಅವರಲ್ಲಿ ನಿಷ್ಠೆ-ಶ್ರದ್ಧೆಗಳಿದ್ದವು. ಹೀಗಿರುವಲ್ಲಿ ಪ್ರಗತಿಗೆ ತೊಂದರೆ ಏಕಿರಬೇಕು, ಆತ್ಮವನ್ನು ಪ್ರಶ್ನೆ ಮಾಡುವ ಮನೋಧರ್ಮವಿದ್ದವರಿಗೆ ಆತ್ಮವಿಕಾಸವು ಬೇಗ ಲಭಿಸುವುದು. ಆಗಾಗ ಅವರ ಸರಿತಪ್ಪುಗಳನ್ನು ಗಮನಿಸಿದರೆ ಸಾಕು; ಶರಣರ ಅಭಿವೃದ್ಧಿಗೆ ಯಾವ ತೊಂದರೆಯೂ ಇರುತ್ತಿರಲಿಲ್ಲ. ಅನುಭವಮಂಟಪದ ಶಿಕ್ಷಣದ ರೀತಿ ಅಷ್ಟು ಸೂಕ್ಷ್ಮವಾಗಿ ವಿಮರ್ಶಿಸಲ್ಪಡುತ್ತಿದ್ದಿತೆಂಬುದಕ್ಕೆ ಅಕ್ಕನವರ ಈ ವಚನವೇ ಸಾಕ್ಷಿ.

"ಅಯ್ಯಾ! ನಿಮ್ಮ ಅನುಭಾವಿಗಳ ಸಂಗದಿಂದ ಎನ್ನ ತನು ಶುದ್ಧವಾಗಿತ್ತು. ಅಯ್ಯಾ! ನಿಮ್ಮ ಅನುಭಾವಿಗಳು ಎನ್ನ ಒರೆದೊರೆದು, ಕಡಿಕಡಿದು, ಅರೆದರೆದು, ಅಗು ಮಾಡಿದಕಾರಣ ಎನ್ನ ಮನ ಶುದ್ಧವಾಗಿತ್ತು. ಎನ್ನ ಸರ್ವ ಭೋಗಾದಿ ಭೋಗಂಗಳೆಲ್ಲಾ ನಿಮ್ಮ ಶರಣರಿಗೆ ಅರ್ಪಿತವಾಗಿ ಎನ್ನ ಪ್ರಾಣ ಶುದ್ಧವಾಗಿತ್ತು. ಎನ್ನ ಸರ್ವೇಂದ್ರಿಯಂಗಳೆಲ್ಲವೂ ನಿಮ್ಮ ಶರಣರ ಪ್ರಸಾದವ ಕೊಂಡಕಾರಣ ಎನ್ನ ಸರ್ವಾಂಗ ಶುದ್ಧವಾಯಿತ್ತು. ಅಯ್ಯಾ! ನಿಮ್ಮ ಶರಣರಿಂತು ಎನ್ನನಾಗು ಮಾಡಿದಕಾರಣ ಚೆನ್ನಮಲ್ಲಿಕಾರ್ಜುನಯ್ಯಾ ನಿಮ್ಮ ಶರಣರಿಗೆ ತೊಡಿಗೆಯಾದೆನಯ್ಯಾ ಪ್ರಭುವೇ!"

ಬಸವಣ್ಣನವರೂ ಸಹ ಇದೇ ಅಭಿಪ್ರಾಯವನ್ನು ತಮ್ಮ ವಚನದಲ್ಲಿ ಅಂದಿರುವರು. ಚಿನ್ನದ ಅದರುಗಳನ್ನು ಬೆಂಕಿಗೆ ಹಾಕಿ ಪರಿಶುದ್ಧಿಗೊಳಿಸಿದಂತೆ ಅನುಭವಮಂಟಪಕ್ಕೆ ಬಂದ ಎಲ್ಲ ಶರಣರೂ ಶಿಕ್ಷಣದಿಂದ ಪರಿಶುದ್ಧಿ ಹೊಂದುತ್ತಿದ್ದರು. ನಿರ್ಮಲವಾದ ನೀಲಾಕಾಶದಂತೆ ಅವರ ಮನಸ್ಸು ನಿರ್ಮಲತೆಯನ್ನೂ, ವ್ಯಾಪ್ತಿಯನ್ನೂ ಹೊಂದುತ್ತಿದ್ದಿತು. ಮುಚ್ಚುಮರೆ ಮಾಡಲು ಅವರ ಹೃದಯದಲ್ಲಿ ಏನೂ ಇರಲಿಲ್ಲ. ಶರಣರ ಹೃದಯವು ಸದಾ ನಿಷ್ಕಲ್ಮಷವಾಗಿ ಪರಮಾತ್ಮನ ಮಂಗಳಮೂರ್ತಿಗೆ ಇಂಬುಗೊಡಲು ಸಿದ್ಧವಾಗಿದ್ದಿತು. ಆದುದರಿಂದ ಅವರ ಹೃದಯದಲ್ಲಿ ಬೆಳಕು ಸದಾ ಬೆಳಗುತ್ತಿದ್ದಿತು. ಬಳಿಗೆ ಬಂದ ಕತ್ತಲನ್ನು ಕಳೆದು ತೊಳಗುತ್ತಿದ್ದಿತು. ಅದನ್ನೇ ಬಸವಣ್ಣನವರು "ಸಮಸ್ತ ಕತ್ತಲೆಯ ಮುಸಕವ ಕಳೆದಿಪ್ಪ ಇರವ ನೋಡಾ! ಬೆಳಗಿನ ಬೆಳಗಿಗು ಸಿಂಹಾಸನವಾಗಿ, ಬೆಳಗುವ ಬೆಳಗ ಕೂಡಿದ ಕೂಡಲ ಸಂಗಯ್ಯ ತಾನೇ ಬಲ್ಲ." ಎಂದು ನುಡಿದು ವರ್ಣಿಸಿರುವರು.



CC-0. Jangamwadi Math Collection, Varanasi. An eGangotri Initiative

## ಶೂನ್ಯಸಂಪಾದನೆ

ಪ್ರಚಲಿತವಿರುವ ಶೂನ್ಯಸಂಪಾದನೆ[೧] ಗ್ರಂಥವು ಗೂಳೂರು ಸಿದ್ಧವೀರಣ್ಣಾಚಾರ್ಯರಿಂದ ರಚಿತವಾದುದು.[೨] ಈ ಗ್ರಂಥದಲ್ಲಿ ಅನುಭವಮಂಟಪದ ಕಾರ್ಯಕ್ರಮಗಳೆಲ್ಲವೂ ವಿಶದವಾಗಿ ವಿವರಿಸಲ್ಪಟ್ಟಿವೆ. ಇದು ಗ್ರೀಕರ ತತ್ತ್ವಶಾಸ್ತ್ರಜ್ಞನಾದ ಪ್ಲೇಟೋನ ಸಂಭಾಷಣಾ ಗ್ರಂಥವೊಂದನ್ನು (Dialogues of Plato) ಹೋಲುತ್ತದೆ. ಈ ಪುಸ್ತಕದಲ್ಲಿ ಶರಣರಲ್ಲಿ ನಡೆಯುತ್ತಿದ್ದ ಅತಿ ಗಹನ ವಿಷಯಗಳ ಪರಸ್ಪರ ಸಂಭಾಷಣೆಗಳು ಅತಿ ಹೃದಯಂಗಮವಾಗಿ ಚಿತ್ರಿಸಲ್ಪಟ್ಟಿವೆ. ಮೊಗ್ಗೆಯ ಮಾಯಿದೇವರಿಂದ ರಚಿತವಾದ 'ಏಕೋತ್ತರ ಶತಸ್ಥಲ'ದಲ್ಲಿ ಅರ್ಥವಾಗದ ಅನೇಕ ವಿಷಯಗಳು ಬಹು ಸರಸವಾಗಿಯೂ, ಸರಳವಾಗಿಯೂ ಇಲ್ಲಿ ವರ್ಣಿಸಲ್ಪಟ್ಟಿವೆ. ಗ್ರಂಥವು ಕಥಾ ರೂಪದಲ್ಲಿದ್ದರೂ ಸಹ, ಅದರಲ್ಲಿ ಆಧ್ಯಾತ್ಮಿಕ ತತ್ತ್ವಗಳೇ ತುಂಬಿಕೊಂಡಿವೆ; ಧರ್ಮದ ಪ್ರಾಯೋಗಿಕ ರೂಪವೇ ಅದರಲ್ಲಿ ಹೆಚ್ಚಾಗಿ ಬರೆಯಲ್ಪಟ್ಟಿದೆ. ಅದರಲ್ಲಿ ಜೀವನದ ಅನುಭವವೇ ತುಂಬಿದೆ. ಅನುಭಾವಿಗಳ ಮಧ್ಯದಲ್ಲಿ ಆಗಾಗ ನಡೆಯುತ್ತಿದ್ದ ಚರ್ಚೆ, ವಿಚಾರವಿನಿಮಯತೆ, ಮತ್ತು ಪರಸ್ಪರ ಯೋಗ್ಯತಾಯೋಗ್ಯತೆಗಳ ವಿಮರ್ಶೆ ಇವುಗಳೇ ಇದರಲ್ಲಿ ಹೆಚ್ಚಾಗಿವೆ.

ವಾಕ್, ಮನ, ಬುದ್ಧಿ ಇವುಗಳಿಗೆ ಯಾವುದು ಅತೀತವೋ, ಸತ್, ಚಿತ್, ಆನಂದಮಯವಾದುದು ಯಾವುದೋ ಅಂತಹ ಪರಬ್ರಹ್ಮ ವಸ್ತುವನ್ನು ಕೇವಲ ಅನುಭವದಿಂದ ತಿಳಿಯುವುದಕ್ಕೆ ಅಥವಾ ವಾಕ್, ಬುದ್ಧಿ, ಮನ ಇವುಗಳಿಗೆ ಯಾವುದು ತೋರಿಕೆಯಲ್ಲಿ 'ಶೂನ್ಯ'ವಾಗಿರುವುದೋ ಅಂತಹ ವಸ್ತುವಿನ ಸಂಪಾದನೆಗೆ 'ಶೂನ್ಯಸಂಪಾದನೆ' ಎಂದು ಅರ್ಥ ಮಾಡಲಾಗಿದೆ. ಇದು ಬುದ್ಧನು ಹೇಳಿರುವ ನಿರ್ವಾಣಸ್ಥಾನದ ಶೂನ್ಯದ ಪ್ರತಿಪಾದನೆಯಲ್ಲ; ಏಕೆಂದರೆ ವೀರಶೈವರು ಮಿಥ್ಯಾವಾದಿಗಳಲ್ಲ; ಜೀವ-ಜಗತ್ತುಗಳನ್ನು ಇವರು ಸತ್ಯವೆಂದು ತಿಳಿಯುತ್ತಾರೆ. ಶಿವನಂತೆ ಶಿವನ ಶಕ್ತಿಯೂ ಸತ್ಯವಾದುದರಿಂದಲೇ ಇದು 'ಶಕ್ತಿವಿಶಿಷ್ಟಾದ್ವೈತ.' ಅದ್ವೈತ ಧರ್ಮದಂತೆ ಇವರಲ್ಲಿ ಕರ್ಮಸನ್ಯಾಸವಿಲ್ಲ; ಭಗವದ್ಗೀತೆಯಂತೆ ಕರ್ಮದ ಪ್ರತಿಪಾದನೆ ಇದೆ. ಗೀತೆಯ ನಿಷ್ಕಾಮ

---

೧ "ಶೂನ್ಯಸಂಪಾದನೆ ಎನ್ನುವುದು ನಮಗೆ ತಿಳಿದಮಟ್ಟಿಗೆ ಐದು ಸಂಕಲನ ಗ್ರಂಥಗಳಿರುವಂತೆ ತೋರುತ್ತದೆ.ಇವುಗಳಲ್ಲಿ ಮೊದಲನೆಯದು ಶಿವಗಣ ಪ್ರಸಾದಿ ಮಹಾದೇವಯ್ಯಾ ಬರೆದದ್ದು, ಎರಡನೆಯದು ಕೆಂಚ ವೀರಣ್ಣೊಡೆಯ ಬರೆದದ್ದು, ಮೂರನೆಯದು ಕೆಂಚ ವೀರಣ್ಣೊಡೆಯ, ಕಲ್ಲೇಶ್ವರದೇವ ಮುಂತಾದ ಶರಣರು ಸೇರಿ ಬರೆದದ್ದು, ನಾಲ್ಕನೆಯದು ಗುಮ್ಮಳಾಪುರದ ಸಿದ್ಧಲಿಂಗಯತಿ ಬರೆದದ್ದು, ಐದನೆಯದು ಗೂಳೂರು ಸಿದ್ಧ ವೀರಣ್ಣಾರ್ಯ ಬರೆದದ್ದು." ಪ್ರಭುಲಿಂಗಲೀಲೆ, (ವಿಶ್ವವಿದ್ಯಾಲಯ, ಮೈಸೂರು ಇವರು ಪ್ರಕಟಿಸಿದ ಪ್ರತಿ) ಪೀಠಿಕೆ ಪುಟ xxxviii, xxxix.

೨ ವಿಜಯನಗರದ ಎರಡನೆಯ ದೇವರಾಯನ ಕಾಲಕ್ಕೆ (ಕ್ರಿ. ಶ. ೧೪೦೬–೧೪೪೬) ಇದು ರಚಿತವಾಗಿರಬಹುದೆಂದು ಶೂನ್ಯಸಂಪಾದನೆ ಗ್ರಂಥದ ಪ್ರಸ್ತಾವನೆ (ಪುಟ ೧, ೨) ಯಲ್ಲಿ ಶ್ರೀ. ಪಿ. ಜಿ. ಹಳಕಟ್ಟಿಯವರು ಅಭಿಪ್ರಾಯಪಟ್ಟಿದ್ದಾರೆ. ಕವಿಯು 'ವರ ಚೋಳ ಬಸವದೇಶಿಕಸುರುತರ ಕೃಪೆಯಾಂತು, ಅಲ್ಲಮಪ್ರಭುರಾಯನಾ। ಪರಮಾನುಭಾವ ಬೋಧೆಯನೊರೆದೆನು ಗೂಳೂರು ಸಿದ್ಧ ವೀರಾಚಾರ್ಯ' ಎಂದು ಶೂನ್ಯಸಂಪಾದನೆ ಗ್ರಂಥಾರಂಭದಲ್ಲಿ ಹೇಳಿಕೊಂಡಿದ್ದಾನೆ. "ಅಖಿಲ ಜಗದಾರಾಧ್ಯರಪ್ಪ ತೋಂಟದ ಸಿದ್ಧಲಿಂಗೇಶ್ವರರ ಕೃಪಾಪ್ರಸನ್ನ ಪುತ್ರರಾದ ಚೋಳ ಬಸವೇಶ್ವರ ದೇವರು" ಎಂದೂ ಸಹ ಹೇಳಿರುವುದರಿಂದ, ದೇವರಾಯನ ಕಾಲದ ತೋಂಟದ ಸಿದ್ಧಲಿಂಗೇಶ್ವರನ ಕಾಲದಿಂದ ಈತನ ಕಾಲವನ್ನು ನಿರ್ಣಯಿಸಬೇಕಾಗಿದೆ.



CC-0. Jangamwadi Math Collection, Varanasi. An eGangotri Initiative

ಕರ್ಮಕ್ಕೆ ವೀರಶೈವರಲ್ಲಿ ತುಂಬಾ ಮನ್ನಣೆಯುಂಟು. ಉಪನಿಷತ್ಕಾರರಂತೆ ವಚನಕಾರರೂ ಸಹ ವಿರಕ್ತಿಯನ್ನು ಬೋಧಿಸುವುದಿಲ್ಲ; ಸಂಸಾರದಲ್ಲಿದ್ದುಕೊಂಡು ಶಿವಾನುಭವವನ್ನು ಸ್ಥಾಪಿಸುವ ರೀತಿಯನ್ನೇ ಬೋಧಿಸಿದ್ದಾರೆ. ಆದುದರಿಂದಲೇ ವಚನಗಳಿಗೆ 'ಕನ್ನಡದ ಉಪನಿಷತ್ತುಗಳೆ'ಂದು ಸಹಾ ಹೆಸರಿದೆ. ಗ್ರಂಥದ ಚರ್ಚೆಗಳ ಮರೆಯಲ್ಲಿ ಷಟ್‌ಸ್ಥಲದ ತತ್ತ್ವಗಳೂ, ಗುರು, ಲಿಂಗ, ಜಂಗಮ ದಾಸೋಹದ ಔನ್ನತೆಯೂ ಇಷ್ಟಲಿಂಗಪೂಜೆಯ ಗುಟ್ಟೂ ಚೆನ್ನಾಗಿ ವಿವೇಚಿಸಲ್ಪಟ್ಟಿವೆ. ಭಕ್ತಿ, ಕ್ರಿಯೆ, ವೈರಾಗ್ಯ ಇವುಗಳ ವಿಚಾರವನ್ನು ಗ್ರಂಥವು ಕೂಲಂಕಷವಾಗಿ ತಿಳಿಸುತ್ತದೆ. ಅನುಭವಮಂಟಪದ ಆದರ್ಶ, ಧ್ಯೇಯ, ಅದರ ಒಳತತ್ತ್ವ, ಮತ್ತು ಉದಾತ್ತ ಭಾವನೆಗಳನ್ನು ತಿಳಿಯಬೇಕಾದರೆ 'ಶೂನ್ಯಸಂಪಾದನೆ' ಯನ್ನುಳಿದು ಬೇರೊಂದು ಗ್ರಂಥವಿಲ್ಲ. ಪ್ರತಿ ಅನುಭವಿಗೂ ಸಹ ಇದು ಮಾರ್ಗದರ್ಶಕವಾಗಿದೆ. ಅನುಭವಮಂಟಪದ ಎಲ್ಲ ವಿಷಯಗಳೂ ಅದರ ಧಾರ್ಮಿಕ, ಸಾಮಾಜಿಕ, ನೈತಿಕ ಸ್ವರೂಪವೆಲ್ಲವೂ ಇದರಲ್ಲಿ ಅಡಕವಾಗಿವೆ.

### ಅನುಭವಮಂಟಪದಿಂದ ಜನತೆಯಲ್ಲಿ ಉಂಟಾದ ಪರಿಣಾಮಗಳು

ಅನುಭವಮಂಟಪದ ಅವಶ್ಯಕತೆಯನ್ನು ಕುರಿತು ಹೇಳುವಾಗ ತಿಳಿಸಿದ ಹಿಂದೂ ಸಮಾಜದ ಅನೇಕ ಕುಂದುಕೊರತೆಗಳನ್ನು ಅನುಭವಮಂಟಪವು ಬಹುಮಟ್ಟಿಗೆ ನಿವಾರಿಸಿತೆಂದು ಮತ್ತೆ ಹೇಳಬೇಕಿಲ್ಲವಾದರೂ ಕೆಲವು ಸ್ಥೂಲ ಬದಲಾವಣೆಗಳನ್ನು ಇಲ್ಲಿ ತಿಳಿಸಲಾಗಿದೆ.

ಧರ್ಮ, ಸಮಾಜ, ಸಾಹಿತ್ಯಗಳು ಬದುಕಿನ ಅವಲಂಬನಗಳು. ಯಾವುದೊಂದನ್ನೇ ಹಿಡಿದು ಉಳಿದವುಗಳನ್ನು ಪೂರ್ತಿಯಾಗಿ ತೊರೆದುಬಿಟ್ಟು, ಜೀವನು ಅಭಿವೃದ್ಧಿ ಹೊಂದಲಾರನು. ಸಮಾಜ ಸುಧಾರಕರಾಗಿ ರಂಗಕ್ಕಿಳಿದವರಿಗೆ ಧರ್ಮ ಸಾಹಿತ್ಯಗಳೂ ಚೆನ್ನಾಗಿ ತಿಳಿದಿರಬೇಕು. ಏಕೆಂದರೆ ಇದು ಕೇವಲ ವ್ಯಕ್ತಿಗತವಾದ ಧರ್ಮವೂ ಅಲ್ಲ; ವ್ಯಕ್ತಿಗತವಾದ ಸಮಾಜವಂತೂ ಅಲ್ಲವೇ ಅಲ್ಲ. ಸಾಮೂಹಿಕ ರೂಪದಲ್ಲಿ ಕಾರ್ಯವನ್ನು ಕೈಕೊಳ್ಳುವ ಪ್ರತಿಯೊಬ್ಬ ಮಹಾ ಪುರುಷನಿಗೂ ಈ ರೀತಿಯ ಎಲ್ಲ ಅಂಗಾಂಗಗಳ ಅವಶ್ಯಕತೆಯೂ ಉಂಟು. ಧಾರ್ಮಿಕ ವಿಷಯಗಳ ಸುಧಾರಣೆಯೂ ಅತ್ಯಾವಶ್ಯಕ. ಒಂದನ್ನು ಬಿಟ್ಟು ಒಂದು ಬದುಕಲಾರದು. ಬಸವಣ್ಣನವರ ಅನುಭವಮಂಟಪದ ಸ್ಥಾಪನೆಯಿಂದ ಈ ಬಗೆಯ ಸುಧಾರಣೆಗಳೆಲ್ಲವೂ ಅಂದಿನ ಜನಜೀವನದಲ್ಲಿ ಪರಿಣಾಮಕಾರಿಯಾಗಿ ರೂಪುಗೊಂಡವು.

### ಧಾರ್ಮಿಕ ಪರಿಣಾಮಗಳು

(೧) **ಕರ್ಮವಾದ:—** ಭಕ್ತಿ, ಕ್ರಿಯೆ ಮತ್ತು ಜ್ಞಾನಗಳಿಗೆ ಸಮಾನ ಸ್ಥಾನವನ್ನು ಕಲ್ಪಿಸಿಕೊಟ್ಟ ಷಟ್‌ಸ್ಥಲ ಧರ್ಮವು ಜ್ಞಾನವಾದಿಗಳ ಕ್ರಿಯಾಶೂನ್ಯತೆಯನ್ನೂ ಕೇವಲ ಕರ್ಮಠರಾದವರ ಜ್ಞಾನಶೂನ್ಯತೆಯನ್ನೂ ಹೋಗಲಾಡಿಸಿತು. ಗ್ರಂಥಸ್ಥವಾದ ಅನೇಕ ವಿಷಯಗಳು ಅನುಭವಕ್ಕೆ ನಿಲುಕದಿರಬಹುದು. ಅನುಭವವು ಒಪ್ಪಿದ ವಿಷಯವನ್ನು ಗ್ರಂಥಗಳು ಒಪ್ಪದಿರಬಹುದು. ಕ್ರಿಯೆ-ಜ್ಞಾನಗಳಲ್ಲಿ ಸಮಾನ ತಿಳಿವಳಿಕೆಯುಳ್ಳ ಅನುಭಾವಿಯಲ್ಲಿ ಈ ಅನುಭಾವವಿರುವುದೇ ಇಲ್ಲ. ಕೆಲವು ವೇಳೆ ಗ್ರಂಥಗಳಿಂದ ವಿಷಯವನ್ನು ಸಂಗ್ರಹಿಸುವುದು ತುಂಬಾ ಕಷ್ಟ.



CC-0. Jangamwadi Math Collection, Varanasi. An eGangotri Initiative

ಈ ದೃಷ್ಟಿಯಿಂದ ಜ್ಞಾನ ಸುಲಭ; ಕರ್ಮ ಕಷ್ಟ; ಜ್ಞಾನದ ಪ್ರಾಧಾನ್ಯದಿಂದ ಮನುಷ್ಯನು ಯಂತ್ರದಂತೆ ಜಡಕ್ರಿಯೆಗೆ ಒಳಗಾಗುವುದಕ್ಕೆ ಬದಲಾಗಿ, ಜ್ಞಾನದೊಡನೆ ಕ್ರಿಯೆಯನ್ನೂ ಸೇರಿಸಿ ಕೊಳ್ಳುವುದು, ಅದರಂತೆ ಆಚರಿಸುವುದೂ ಸಹ ಹೆಚ್ಚು ಸಮಂಜಸವಾಗಿದೆ. ಒಂದೇ ಬಟ್ಟೆಯ ಹಾಸು-ಹೊಕ್ಕಿನಂತೆ ಕ್ರಿಯಾ-ಜ್ಞಾನಗಳ ಸಮರಸವೇ ಶ್ರೇಷ್ಠವೆಂದು ಈ ಧರ್ಮವು ತಿಳಿಸಿತು. ಕರ್ಮಯೋಗದ ಪ್ರತಿಪಾದನೆಯು ಭರತಖಂಡಕ್ಕೆ ಹೊಸದಲ್ಲ. ಉಪನಿಷತ್ತುಗಳು ಅದರ ಆಚರಣೆ ಯನ್ನು ವಿಧಿಸಿವೆ. ಗೀತೆಯು ಹಿಂದೆ ತಿಳಿಸಿದಂತೆ 'ಹತೋ ವಾ ಪ್ರಾಪ್ಸ್ಯಸಿ ಸ್ವರ್ಗಂ ಜಿತ್ವಾ ವಾ ಭೋಕ್ಷ್ಯಸೆ ಮಹೀಂ ತಸ್ಮಾದುತ್ತಿಷ್ಠ ಕೌಂತೇಯ' ಎಂದು ಕೂಗಿ ಹೇಳಿದೆ. ಈ ರೀತಿಯ ಜೀವನದಿಂದ ಬಾಳು ಹೇಗೆ ಬೇಗ ವಿಕಾಸಹೊಂದಲು ಸಾಧ್ಯವೆಂಬುದನ್ನು ಪ್ರತ್ಯೇಕವಾಗಿ ತಿಳಿಸಬೇಕಾಗಿಲ್ಲ.

(೨) **ಭಕ್ತಿಯ ಸೌಲಭ್ಯ:**—ಬಗೆಬಗೆಯ ಪುಷ್ಪಗಳನ್ನು ಮಾಲೆಯು ಒಂದೇ ದಾರದ ಅವಲಂಬನದಲ್ಲಿ ಹೇಗೆ ನಿಲ್ಲಿಸಿರುವುದೋ ಹಾಗೆಯೇ ವಿಶ್ವದಲ್ಲಿ ಪ್ರೇಮದ ಲೀಲೆ. ಪ್ರೀತಿಸುವುದು ಮನುಷ್ಯನ ಸ್ವಭಾವಧರ್ಮ. ಈ ಸ್ವಭಾವಧರ್ಮವು ಸತಿಪತಿಯರಲ್ಲಿ ಶೃಂಗಾರವಾಗಿಯೂ, (ಪ್ರೇಮ ಅಥವಾ ಅನುರಾಗ) ಪಿತಪುತ್ರರಲ್ಲಿ ವಾತ್ಸಲ್ಯವಾಗಿಯೂ ಬಂಧುಬಾಂಧವರಲ್ಲಿ ಮಮತೆಯಾಗಿಯೂ ಪರಸ್ಪರ ವ್ಯಕ್ತಿಗಳಲ್ಲಿ ಸ್ನೇಹವಾಗಿಯೂ ಇರುತ್ತದೆ. ಈ ಅನೇಕ ಪ್ರವಾಹ ಗಳ ಅನುಭವವನ್ನು ಒಮ್ಮುಖಮಾಡಿ, ಜೀವನಾದ್ಯಂತದ ಎಲ್ಲ ಆವೇಶದಿಂದಲೂ 'ಏಕಮೇವಾ ದ್ವಿತೀಯಂ' ಆದ ಪರಬ್ರಹ್ಮ ವಸ್ತುವನ್ನು ಎಲ್ಲ ರೀತಿಗಳಿಂದಲೂ ಪ್ರೀತಿಸುವುದೇ ಭಕ್ತಿ. ಜೀವನದ ಸ್ವಭಾವಧರ್ಮವು ಪ್ರೇಮವಾದುದರಿಂದ ಭಕ್ತಿಯ ಸೌಲಭ್ಯವೂ ಹೆಚ್ಚು. ಇಲ್ಲಿ ಎಲ್ಲ ಶಾಸ್ತ್ರ-ಪುರಾಣಗಳೂ ತತ್ತ್ವಜಿಜ್ಞಾಸೆಗಳೂ ಚರ್ಚೆ ವಿವಾದಗಳೂ ಮೂಕವಾಗಿ ನಿಲ್ಲುತ್ತವೆ. ಅದು ಕೇವಲ ಅನುಭವ. ಪರಸ್ಪರ ಹೃದಯಗಳ ಮಿಲನ ಮತ್ತು ಭಕ್ತಿ. ಆ ಹೃದಯಗಳ ಪ್ರೇಮದ ವಿನಿಮಯ. ಜ್ಞಾನದಿಂದ ಈ ಅನುಭವ ಪಡೆಯುವುದೆಂದರೆ ಅದು ಕಷ್ಟಸಾಧ್ಯ; ಅನುಭವ ದಿಂದಲೇ ಆ ಜ್ಞಾನವನ್ನು ಪಡೆದವರೂ ಪಡೆಯಬಹುದು. ಪ್ರಸಿದ್ಧರಾದ ಅನೇಕ ಮಹಾ ಪುರುಷರೂ ಯೋಗಿಗಳೂ ಈ ರೀತಿಯಾಗಿ ಪಡೆದ ಜ್ಞಾನವನ್ನೇ ಜಗತ್ತಿಗೆ ತಿಳಿಸಿರುವುದು. ಅನು ಭವ ಮಂಟಪವು ಇದರ ಅನುಭವವನ್ನೇ ಜಗತ್ತಿಗೆ ಕೊಟ್ಟಿದು.

(೩) **ಗ್ರಂಥ ವ್ಯಾಮೋಹದ ಅಳಿವು:**— ಈ ರೀತಿಯ ಅನುಭವದಿಂದ ಕಟ್ಟ ಕಡೆಗೆ ಶಾಸ್ತ್ರವು ಒರೆಗಲ್ಲೆ? ಅಥವಾ ಪರಿಶುದ್ಧವಾದ ಹೃದಯವೇ? ಎಂಬ ಚರ್ಚೆಯು ಪರ್ಯವಸಾನ ಹೊಂದಿತು. ವೇದೋಪನಿಷತ್ತುಗಳನ್ನೇ ಸರಿಯಾದ ಮಾರ್ಗವಲ್ಲಿ ನಡೆಯಿಸಿದರೆ ಅನೇಕ ವೇದೋಪ ನಿಷತ್ತುಗಳ ಸಾರಸರ್ವಸ್ವದ ನಿಘಂಟನ್ನಾಗಿ ಮಾಡಿಕೊಳ್ಳುವುದೆಂಬುದನ್ನು ಅನುಭವಮಂಟಪವು ತೋರಿಸಿತು. ಇದರಿಂದ ಗ್ರಂಥವ್ಯಾಮೋಹವು ಬಹುಮಟ್ಟಿಗೆ ಕಡಿಮೆಯಾಯಿತು.

(೪) **ಇಷ್ಟಲಿಂಗ ಪೂಜೆ:**— ಬಹು ಪ್ರಾಚೀನಕಾಲದಿಂದಲೂ ಭರತಖಂಡದಲ್ಲಿ ಪ್ರಚಾರದಲ್ಲಿರುವ ಲಿಂಗಪೂಜೆಗೆ ಅನುಭವಮಂಟಪವು ಒಂದು ಹೊಸ ಅರ್ಥವನ್ನು ಕೊಟ್ಟು ಅದಕ್ಕೆ ಜೀವಕಳೆ ತುಂಬಿತು. ಸ್ಥಾವರಲಿಂಗಪೂಜೆಯು ವಿಗ್ರಹಾರಾಧನೆಯೆಂಬ ಬರಿ ಕರ್ಮ ವಾದದ ದೋಷಕ್ಕೆ ಸಿಲುಕುತ್ತದೆ. ಆದುದರಿಂದ ಶರಣರು ಕ್ರಿಯಾ-ಜ್ಞಾನ-ಸಮರಸಾತ್ಮಕವಾದ



CC-0. Jangamwadi Math Collection, Varanasi. An eGangotri Initiative

ಧರ್ಮಾನುಸಾರವಾಗಿ ಸ್ಥಾವರಲಿಂಗಪೂಜೆಯನ್ನು ಇಷ್ಟಲಿಂಗ ಪೂಜೆಯ ಹಾದಿಗೆ ತಿರುಗಿಸಿದರು. ಭಕ್ತಿಯೋಗಿಗೆ ಪರಮಾತ್ಮನ ಸಾಕಾರ ರೂಪಿನಲ್ಲಿ ಹೆಚ್ಚು ಪ್ರೀತಿ; ಅದು ಅವನ ಸಾಧನೆಗೆ ಹೆಚ್ಚು ಅವಲಂಬನಕಾರಿಯಾಗಿರುತ್ತದೆ. ಸಾಕಾರ ಪೂಜೆಯಿಂದ ನಿರಾಕಾರ ಬ್ರಹ್ಮವನ್ನು ಸಾಧಿಸುವುದೇ ಅವರ ಧ್ಯೇಯ. ಆದುದರಿಂದ ಸಾಕಾರ, ನಿರಾಕಾರ ಇವೆರಡಕ್ಕೂ ಸಂಬಂಧಿಸಿದ ಇಷ್ಟಲಿಂಗ ಪೂಜೆಯು ಜೀವನದ ನಡೆನುಡಿಗಳನ್ನು ಒಂದು ಮಾಡಲು ಪ್ರಚಾರಕ್ಕೆ ಬಂದಿತು. ಇದರಿಂದ ಪರಮಾತ್ಮನು ಪ್ರಕೃತಿಯಲ್ಲೂ ಜೀವನದಲ್ಲೂ ವ್ಯಾಪ್ತವಾಗಿಯೂ ಅವ್ಯಕ್ತವಾಗಿಯೂ ಇರುವ ನೆಂಬುದನ್ನು ಕ್ರಿಯೆಯ ಮೂಲಕ ಸಾಧಿಸಿ ತೋರಿಸಬಹುದು. ಇಷ್ಟಲಿಂಗಪೂಜೆಯು ಕ್ರಿಯೆಯ ಸಂಗಡ ಬೆಳೆಯುವ ಜ್ಞಾನದ ಸಂಗಡ ತನ್ನ ರೂಪವನ್ನು ಬದಲಾಯಿಸಿಕೊಂಡು ವಿಕಾಸ ಹೊಂದು ತ್ತದೆ. ಸಾಕಾರ ಬ್ರಹ್ಮವನ್ನು ಆರಾಧಿಸುವ ಭಕ್ತನ ಲಿಂಗಪೂಜೆಗೂ ನಿರಾಕಾರಬ್ರಹ್ಮನ ಆರಾಧಕ ನಾದ ಭಕ್ತನ ಲಿಂಗಪೂಜೆಗೂ ಅಜಗಜಾಂತರ ವ್ಯತ್ಯಾಸವಿದೆ; ಅದರಂತೆಯೇ ಲಿಂಗದಲ್ಲೂ ಸ್ಥಾನಾಂತರಗಳಾಗುತ್ತವೆ. ಇಷ್ಟಲಿಂಗಪೂಜೆಯು ಇಷ್ಟದಿಂದ ಪ್ರಾಣಕ್ಕೂ ಪ್ರಾಣಲಿಂಗದಿಂದ ಭಾವಲಿಂಗಕ್ಕೂ ವಿಕಾಸ ಹೊಂದುವುದರಿಂದ ಇದು ಮೂರ್ತಿಪೂಜೆಯಲ್ಲ. ಇದು ಏಕದೇವೋ ಪಾಸನೆ. ಬಸವಣ್ಣನವರು ಇಷ್ಟಲಿಂಗದ ತತ್ತ್ವವನ್ನು ಹೀಗೆ ತಿಳಿಸಿರುವರು :—

"ಅಯ್ಯ, ಮರದೊಳಗೆ ಅಗ್ನಿ ಇದ್ದರೇನಯ್ಯ! ಮಥಿಸಿ ತೋರುವರಿಲ್ಲದನ್ನಕ್ಕರ ಕಾಣಬಹುದೆ? ಜಗದೊಳಗೆ ಕೂಡಿ ಪರಿಪೂರ್ಣ ಶಿವನೆಂದರೆ ಅಂತರಂಗದಲ್ಲಿ ಕಾಣಬಹುದೆ? ಆದಿಲಿಂಗ ಅನಾದಿಶರಣನ ಭೇದವ ತಿಳುಹಿ ನಿಜಪ್ರಾಣದೊಳಗಿಪ್ಪ ಸುಜ್ಞಾನ ಲಿಂಗವ ಕರಸ್ಥಲಕ್ಕೆ ತಂದು, ಆ ಕರಸ್ಥಲದ ಲಿಂಗವೆನ್ನ ಸರ್ವಾಂಗದೊಳಗೆ ಪ್ರತಿಷ್ಠಿಸಿ ತೋರಿ ನಿತ್ಯನಿತ್ಯ ನಿಜಲಿಂಗೈಕ್ಯವಹ ಹೊಲಬಿನ ಹರಿವ ತೋರಿಸಿ ಮರ್ತ್ಯಲೋಕ ದೊಳಗೆಲ್ಲ ಇಂದು ಮೊದಲಾಗಿ, ಪ್ರಾಣಲಿಂಗದ ಘನವ ಹರಹಿ ಶಿವಭಕ್ತಿಯನುದ್ಧರಿಸಿದನು.........."

(ಶೂ. ಸಂ. ಪುಟ ೮೦–೮೧)

(೫) ಧಾರ್ಮಿಕ ಸಂಸ್ಕೃತಿ:— ನೈತಿಕಧರ್ಮವನ್ನು ಬಹು ಸುಲಭವಾಗಿ ಜನರಿಗೆ ತಿಳಿಯ ಹೇಳಿದುದರಿಂದ, ಜನರು ಸಹ ಅದರಲ್ಲಿ ಹೆಚ್ಚು ಆದರ, ಉತ್ಸಾಹಗಳನ್ನು ತೋರಿಸಿದರು. ವಿಷಯವು ಬೇಗನೆ ತಿಳಿಯುತ್ತಿದ್ದುದರಿಂದಲೂ ಅದು ಅವರ ಅನುಭವಕ್ಕೆ ಬರುತ್ತಿದ್ದುದರಿಂದಲೂ ಅವರ ಉತ್ಸಾಹವು ಬೆಳೆಯುತ್ತ ಹೋಯಿತು. ದಿನದಿನಕ್ಕೆ ಧರ್ಮದ ತತ್ತ್ವಗಳು ಸೂಕ್ಷ್ಮವಾಗಿ ಬೆಳೆದಂತೆಲ್ಲಾ ಆಸೆ-ಆಶಯಗಳನ್ನು ಅದರ ಸಂಗಡ ಹೊಂದಿಸಿಕೊಳ್ಳುತ್ತ ಹೋದರು. ಹೀಗೆ ಅನುಭಾವಿಗಳ ಅನುಭವವು ತನ್ನೊಡನೆ ಒಂದು ಜನಾಂಗವನ್ನೇ ಎಳೆದುಕೊಳ್ಳುತ್ತ ಮುಂದಕ್ಕೆ ಸಾಗಿತು. ಅನೇಕ ಜನ ಶಿವಶರಣರು ಅನುಭವದಲ್ಲಿ ಕುಳಿತುದರಿಂದಲೂ ಅನುಭಾವಿಗಳ ಸಂಖ್ಯೆ ದಿನದಿನ ಹೆಚ್ಚುತ್ತಿದ್ದುದರಿಂದಲೂ ಬಹು ಉದಾತ್ತವಾದ ವಿಚಾರಗಳೂ ಸಹ ಜನಜೀವನದ ಮಾತುಕತೆಗಳಾಗಿರಬೇಕು. ಭಾಷೆಯ ಸರಳತೆ, ಅದರಲ್ಲಿ ತೋರಿಬರುವ ಜನಜೀವನಕ್ಕೆ ಸಂಬಂಧಿ ಸಿದ ಉದಾಹರಣೆಗಳೇ ಅದನ್ನು ವ್ಯಕ್ತಪಡಿಸುತ್ತವೆ. ಈ ರೀತಿಯಾಗಿ ರೂಪುಗೊಳ್ಳುವುದೇ ಸಂಸ್ಕೃತಿ. ಅದು ತಲೆಮಾರಿನಿಂದ ತಲೆಮಾರಿಗೆ ಬೆಳೆಯುತ್ತ ಹೋಗುವುದೇ ಅದರ ವಿಕಾಸ. ಸರ್ವ ಶ್ರೇಷ್ಠವಾದ ಧಾರ್ಮಿಕಸಂಸ್ಕೃತಿಯು ಈ ರೀತಿಯಾಗಿ ಜನಜೀವನದ ಮಟ್ಟಕ್ಕಿಳಿದು, ಅದರಲ್ಲಿ ಇಂಬುಗೊಂಡು, ಅವರನ್ನು ಮೇಲೆತ್ತುವುದೇ ಎಲ್ಲ! ಸಮಾಜ, ಧರ್ಮ, ಸಾಹಿತ್ಯಗಳ ಹೆಗ್ಗುರಿ ಧರ್ಮದ ಹೊನಲು ವರ್ಷಾಕಾಲದ ಪ್ರವಾಹದಂತೆ ಯಾವಾಗಲೂ ಹರಿಯುವುದಿಲ್ಲ. ಅದು ಮರು



CC-0. Jangamwadi Math Collection, Varanasi. An eGangotri Initiative

ಭೂಮಿಯಲ್ಲೇ ಸಂಚಿತವಾಗುವ ಜಲರಾಶಿ. ಹಾಗಿದ್ದರೂ ಸಹ ಆ ಪ್ರವಾಹವು ಹೀಗೆ ಒಮ್ಮೆಲೇ ಉಕ್ಕಿ ನಾಡು, ಬೀಡು, ಕಾಡುಗಳನ್ನೆಲ್ಲಾ ತೊಳೆದು ಪ್ರವಹಿಸುವದೆಂದರೆ, ಅದು ನಾಡಿನ ಪುಣ್ಯ ದೆಸೆಯ ಗುರುತೆಂದು ಹೇಳಬೇಕು. ಕನ್ನಡನಾಡು ಆ ಸೌಭಾಗ್ಯವನ್ನು ಅನುಭವಿಸಿತು.

## ಸಾಮಾಜಿಕ ಸುಧಾರಣೆಗಳು

(೧) ವರ್ಣಾಶ್ರಮ ನಿರಸನ:— ದೀಕ್ಷಾಸಂಸ್ಕಾರದಿಂದ ಪರಿಶುದ್ಧನಾದ ಪ್ರತಿಯೊಬ್ಬನೂ ಸಹ ವೀರಶೈವನಾಗುತ್ತಿದ್ದನು. ಅವನ ಮೇಲಿನ ಜಾತಿಯು ಯಾವುದೇ ಆಗಿರಲಿ, ವಿಪ್ರ ಮೊದಲು ಅಂತ್ಯಜ ಕಡೆಯಾಗಿ ಶಿವಭಕ್ತರಾದವರೆಲ್ಲರ ನೊಂದೆಯೆಂಬೆ ಎಂಬ ತತ್ತ್ವವು ಆಚರಣೆಗೆ ಬಂದನಂತರ ಅವರಲ್ಲಿ ಕೀಳು-ಮೇಲೆಂಬ ಭಾವನೆಗಳಿರುತ್ತಿರಲಿಲ್ಲ. ಎಲ್ಲರು ಸಮಾನರೆಂದೂ ಸಮಾಜದ ಆಚಾರವಿಚಾರಗಳಲ್ಲಿ, ಧರ್ಮದ ತಿಳುವಳಿಕೆಯಲ್ಲಿ, ಅನುಭವಗಳಲ್ಲಿ ಪರಸ್ಪರ ಏನೂ ವ್ಯತ್ಯಾಸವಿಲ್ಲವೆಂದು ನುಡಿದದ್ದನ್ನು ಪೂರ್ತಿಯಾಗಿ ಆಚರಣೆಗೆ ತಂದರು. ಜಾತಿಮತಗಳಿಂದಾಗಲಿ, ಹುಟ್ಟಿನಿಂದಾಗಲಿ ಮನುಷ್ಯನಿಗೆ ಪೂಜ್ಯತೆ ಸಿಗುವುದು ನಿಂತುಹೋಗಿ ಉತ್ತಮ ಗುಣವುಳ್ಳವನಿಗೆ ಪೂಜ್ಯತೆ ಸಿಗಲು ಸಾಧ್ಯವಾಯಿತು. ಈ ರೀತಿಯ ಧಾರ್ಮಿಕ ಮತ್ತು ಸಾಮಾಜಿಕ ಸ್ವಾತಂತ್ರ್ಯಗಳಿಗೆ ಯಾವ ಕಟ್ಟಳೆಗಳ ಪ್ರತಿರೋಧವೂ ಇರಲಿಲ್ಲ.

(೨) ಕಾಯಕಗಳು:— ಗುರುಲಿಂಗಜಂಗಮ ದಾಸೋಹಕ್ಕಾಗಿ ಪ್ರತಿಯೊಬ್ಬನೂ ಕಾಯಕ ಮಾಡಲೇಬೇಕಾಗಿದ್ದುದರಿಂದ ಕರ್ತವ್ಯದಲ್ಲಿ ಗೌರವಬುದ್ಧಿ ಹುಟ್ಟಿತು. ಅದು ಅಷ್ಟಕ್ಕೆ ನಿಲ್ಲದೆ 'ಕಾಯಕವೇ ಕೈಲಾಸ'ವೆಂಬ ಧಾರ್ಮಿಕಭಾವನೆಯನ್ನೂ ಸಹ ಉಂಟುಮಾಡಿತು. ತೊಗಲು ಹದಮಾಡುವವನ ಕೊಳಕು ಜೀವನದ ಹಿಂದೆಯೂ, ಎಕ್ಕಡ ಹೊಲಿಯುವ ಚಮ್ಮಾರನ ಚಕ್ಕಳದ ಹಿಂದೆಯೂ ಸಹ ಬೆಳಕು ಬೆಳಗುತ್ತಿರುವುದೆಂಬುದನ್ನು ಜಗತ್ತು ಮೊದಲು ಕಂಡಿತು. ಅಸಹ್ಯತೆ-ಸಹ್ಯತೆಗಳು ಮನೋಧರ್ಮವನ್ನು ಅವಲಂಬಿಸುತ್ತವೆ. ಕೆಲಸಕ್ಕಿಂತ ಹೆಚ್ಚಾಗಿ ಅದರ ಹಿಂದಿರುವ ಜೀವನದ ಪಾವಿತ್ರ್ಯಕ್ಕಾಗಿ ಎಲ್ಲರೂ ತಮ್ಮ ಭಕ್ತಿಪೂರ್ವಕ ಪ್ರಣಾಮಗಳನ್ನರ್ಪಿಸುತ್ತಿದ್ದರು. ಆರ್ಥಿಕಸಮಸ್ಯೆಯನ್ನು ಬಿಡಿಸಲಾರದೆ ಬೇಸತ್ತು ಕುಳಿತ ಅನೇಕ ರಾಷ್ಟ್ರಗಳ ಗೋಳನ್ನು ನಾವು ಇಂದೂ ಸಹ ನೋಡುತ್ತಿರುವೆವು. ಶರಣರು ಈ ಆರ್ಥಿಕಸಮಸ್ಯೆಯನ್ನು ಎಷ್ಟು ಸುಲಭವಾಗಿ ಬಿಡಿಸಿದ್ದರೆಂಬುದನ್ನೂ ನೋಡಿದರೆ ಯಾರಿಗೆ ತಾನೇ ಆಶ್ಚರ್ಯವಾಗದಿರದು? ಕಾಯಕವು ಈ ದೃಷ್ಟಿಯಿಂದ ಜಗತ್ತಿನಲ್ಲಿ ಒಂದು ನೂತನವಾದ ಅಧ್ಯಾಯವನ್ನೇ ಆರಂಭ ಮಾಡಿತೆಂದು ಹೇಳಬಹುದು. ಒಂದೇ ಮತದಲ್ಲಿ ಅನೇಕ ಕಾಯಕಗಳ ಜನರು ಸೇರಿದ್ದುದರಿಂದಲೂ ಅವರಲ್ಲಿ ಒಕ್ಕಟ್ಟು ನೆಲೆಸಿದ್ದುದರಿಂದಲೂ ಅವರ ಭಾವನೆಗಳು ಸಾಧಾರಣವಾಗಿ ವಿಚಾರಸ್ವಾತಂತ್ರ್ಯದ ಕಡೆಗೇ ಹೆಚ್ಚು ಓಡುತ್ತಿದ್ದುದರಿಂದಲೂ ಮತವು ಯಾವ ಬಿರುಗಾಳಿ ಮಳೆಗಳ ಹೊಡೆತಕ್ಕೆ ಸಿಲ್ಕಿದರೂ ಸಹ ಉರುಳಿ ಹೋಗದಂತೆ ತನ್ನ ಸ್ವಂತ ಶಕ್ತಿಯಿಂದ ಸ್ವತಂತ್ರವಾಗಿ ನಿಲ್ಲಲು ಸಾಧ್ಯವಾಯಿತು.

(೩) ಸ್ತ್ರೀ ಸ್ವಾತಂತ್ರ್ಯ:— ಹೊನ್ನು, ಹೆಣ್ಣು, ಮಣ್ಣುಗಳು ಮನುಷ್ಯನ ಆಧ್ಯಾತ್ಮಿಕ ತಿಳಿವಳಿಕೆಗೆ ಅಡ್ಡಿ ಬರತಕ್ಕವುಗಳೆಂದು ಅವುಗಳನ್ನು ಕೀಳುದೃಷ್ಟಿಯಿಂದ ಪರಿಗಣಿಸುವುದು



CC-0. Jangamwadi Math Collection, Varanasi. An eGangotri Initiative

ರೂಢಿ. ಶಿವಶರಣರ ಕಾಲಕ್ಕೆ ಆ ಭಾವನೆಯೂ ಸಹ ಪೂರ್ತಿಯಾಗಿ ಅಳಿದುಹೋಗಿ ಸ್ತ್ರೀಯೂ ಸಹ ಸೃಷ್ಟಿಕರ್ತನ ಕಲಾಶಾಲೆಯಲ್ಲಿ ದೊರಕಬಹುದಾದ ಒಂದು ಅಪರೂಪ ಜೀವರತ್ನವೆಂದು ಭಾವಿಸಲ್ಪಟ್ಟಿತು. 'ಹೆಣ್ಣು ಪ್ರತ್ಯಕ್ಷ ಕಪಿಲಸಿದ್ಧ ಮಲ್ಲಿಕಾರ್ಜುನ' ಎಂದು ಸಿದ್ಧರಾಮೇಶ್ವರನು ಹಾಡಿರುವನು.

'ನ ಸ್ತ್ರೀ ಸ್ವಾತಂತ್ರ್ಯಮರ್ಹತಿ' ಎನ್ನುವುದು ಅಳಿದುಹೋಗಿ, ಸ್ತ್ರೀಯೂ ಸಹ ಪುರುಷನ ಸಂಗಡ ಸಮಾನಳಾಗಿ ನಿಂತು ಆಧ್ಯಾತ್ಮಿಕ ಸಾಧನೆಯಲ್ಲಿ ಮುಂದುವರಿಯಲು ತೊಡಗಿದುದು ಇದೇ ಮೊದಲು. ಒಬ್ಬ ಗಾರ್ಗಿ, ಒಬ್ಬ ಮೈಥಿಲೆ, ಒಬ್ಬ ಮೀರಾ ಅಥವಾ ಒಬ್ಬ ರೆಬಿಯಾಳಂತೆ ಧರ್ಮವು ವ್ಯಕ್ತಿಗತವಾಗಿ ರೂಪುಗೊಳ್ಳದೆ ಸಾಮೂಹಿಕವಾಗಿ ರೂಪುಗೊಂಡಿತು. ಸ್ತ್ರೀಯರಿಗೆ ವೇದಾಧಿಕಾರವಿಲ್ಲವೆಂದು ಬ್ರಾಹ್ಮಣಧರ್ಮವು ನಿಷೇಧಿಸಿತು. ಜೈನಧರ್ಮವು ಸ್ತ್ರೀಯರಿಗೆ ಮೋಕ್ಷವೇ ಇಲ್ಲವೆಂದು ಸಾರಿತು. ಆದರೆ ವೀರಶೈವಧರ್ಮವು ಸ್ತ್ರೀಯರಲ್ಲೇ ಗುಪ್ತವಾಗಿ ಅಡಗಿ ಯುಗಯುಗಾಂತರದಿಂದಲೂ ನಶಿಸಿ ಹೋಗುತ್ತಿರುವ ಅತ್ಯದ್ಭುತವಾದ ಆಂತರಿಕ ಶಕ್ತಿಯನ್ನು ಪ್ರಪಂಚಕ್ಕೆ ತೋರಿಸಿತು. ಮೊದಲಿನಿಂದಲೂ ಇಂತಹ ಶಕ್ತಿಯನ್ನು ಲುಪ್ತಗೊಳಿಸುವುದಕ್ಕೆ ಬದಲಾಗಿ, ಮನುಷ್ಯನ ಭೋಗೇಚ್ಛೆ ಅಥವಾ ಸ್ವಾರ್ಥಾಭಿಲಾಷೆಗೆ ಅದನ್ನು ದುರುಪಯೋಗಪಡಿಸಿ ಕೊಳ್ಳುವುದಕ್ಕೆ ಬದಲಾಗಿ, ಪುರುಷನಂತೆ ಸ್ತ್ರೀಗೂ ಸ್ವಾತಂತ್ರ್ಯವನ್ನು ಕೊಟ್ಟು ಆ ಶಕ್ತಿಯನ್ನು ಬೆಳೆಸಲು ಅನುವು ಕೊಟ್ಟಿರದಿದ್ದರೆ ಪ್ರಪಂಚದ ರೀತಿಯೇ ಬೇರೆಯಾಗುತ್ತಿದ್ದಿತು. ವಸ್ತುಸಂಗ್ರಹ ಶಕ್ತಿ, ಹೃದಯದ ಮಾರ್ದವತೆ, ಜ್ಞಾನದ ಪ್ರಗಾಢತೆ ಇವುಗಳು ಪುರುಷರಗಿಂತಲೂ ಸ್ತ್ರೀಯರಲ್ಲಿ ಹೇಗೆ ಇಮ್ಮಡಿ, ಮುಮ್ಮಡಿಯಾಗಿ ರೂಪುಗೊಳ್ಳಬಹುದೆಂಬುದನ್ನು ಪ್ರಪಂಚಕ್ಕೆ ತೋರಿಸುವುದಕ್ಕೆ ಅಕ್ಕಮಹಾದೇವಿಯೋರ್ವಳ ನಿದರ್ಶನವೇ ಸಾಕು. ಕೇವಲ ೧೬–೧೭ ವರ್ಷಗಳ ತಾರುಣ್ಯ ದಲ್ಲಿಯೇ ಆಕೆಯಲ್ಲಿ ತೋರಿಬಂದ ವಿರಕ್ತಿಯನ್ನು ಕಂಡು ಶರಣಸಂದೋಹವು ಆಕೆಯನ್ನು ಪೂಜ್ಯನೀಯಳೆಂದು ಭಾವಿಸಿತು. 'ನಮ್ಮ ಗುಹೇಶ್ವರ ಲಿಂಗದಲ್ಲಿ ಸ್ವಯಲಿಂಗವಾದ ಮಹದೇವಿ ಯಕ್ಕಗಳ ನಿಲವಿಂಗೆ ಶರಣೆನುತಿರ್ದೆನು' ಎಂದು ಪ್ರಭುವು ನಮಸ್ಕರಿಸಿದನು. 'ಎನ್ನ ಹೆತ್ತತಾಯಿ ಮಹದೇವಿಯಕ್ಕನ ನಿಲವನೋಡಯ್ಯ' ಎಂದು ಬಸವಣ್ಣನವರು ಆಕೆಯನ್ನು ಪ್ರಶಂಸಿಸಿದರು. ಇಂತಹ ಶರಣೆಯರು ಅಂದು ಸುಮಾರು ಅರವತ್ತು ಜನದವರೆಗೂ ಇದ್ದರೆಂದ ಬಳಿಕ ಸಂಸ್ಕೃತಿಯ ಉದಾತ್ತತೆಯನ್ನು ಓದುಗರು ಊಹಿಸಕೊಳ್ಳಬೇಕು.

(೪) ಗೃಹಸ್ಥಧರ್ಮ :— ಮನುಷ್ಯನು ಮೋಕ್ಷಸಂಪಾದನೆಗಾಗಿ ಸರ್ವಸಂಗ ಪರಿತ್ಯಾಗಮಾಡಿ, ಕಾಡಿಗೆ ಹೋಗಿ ಗಡ್ಡೆಗೆಣಸುಗಳನ್ನು ತಿಂದು ತಪಸ್ಸು ಮಾಡಬೇಕಾಗಿಲ್ಲ; ಇದ್ದ ಲ್ಲಿಯೇ ಸರಿಯಾಗಿದ್ದುಕೊಂಡು ಯೋಗಿಯಾಗಬಹುದೆಂಬುದನ್ನು ಅನುಭವಮಂಟಪವು ತೋರಿಸಿ ಕೊಟ್ಟಿತು. ಗ್ರಹಸ್ಥಧರ್ಮವನ್ನೇ ನಿರೂಪಿಸಿದುದರಿಂದ ಉಪನಿಷತ್ಕಾರರ ಧರ್ಮದಂತೆ ಇದೂ ಸಹ ಹೆಚ್ಚು ಪ್ರಾಯೋಗಿಕವಾಗಿಯೂ ಜನಾದರಣೀಯವಾಗಿಯೂ ಪರಿಣಮಿಸಿತು. ಅನುಭವ ಮಂಟಪದ ಮೂಲಪುರುಷರಾದ ಬಸವಣ್ಣನವರೇ ಆದರ್ಶ ಗ್ರಹಸ್ಥರಾಗಿದ್ದರು.

(೫) ವಿಚಾರಪರತೆ ಮತ್ತು ಅಂಧಶ್ರದ್ಧೆ :— ಕ್ರಿಯೆಗೂ ಜ್ಞಾನಕ್ಕೂ ಪರಸ್ಪರ ಸಂಬಂಧವಿಲ್ಲದ ಅನೇಕ ಆಚಾರಗಳು ಎಂದೆಂದೂ ಸಮಾಜದಲ್ಲಿ ಬೇರು ಬಿಟ್ಟುಕೊಂಡೇ ಇರುತ್ತವೆ.



CC-0. Jangamwadi Math Collection, Varanasi. An eGangotri Initiative

ವಿಚಾರಶಕ್ತಿಯು ಮನಸ್ಸಿನಲ್ಲಿ ಬೆಳೆದಂತೆಲ್ಲಾ ಅರ್ಥವಿಲ್ಲದ ಈ ರೂಢಿಮೂಲ ಆಚಾರಗಳು ತಮಗೆ ತಾವೇ ಅಳಿದುಹೋಗುತ್ತವೆ. ಪರರ ಹಿಂಸೆಗೆ ಕಾರಣವಾಗಬಹುದಾದ ಅನೇಕ ಆಚಾರ ವಿಚಾರಗಳ ತೀವ್ರತೆಯನ್ನು ಅತ್ಯಾಚಾರವೆಂದೂ ಅವುಗಳನ್ನು ಸಂಪೂರ್ಣವಾಗಿ ಬಿಟ್ಟುಬಿಡುವು ದನ್ನು ಅನಾಚಾರವೆಂದೂ ಪರಿಗಣಿಸಬಹುದಾದರೆ, ಶರಣರು ಇವೆರಡಕ್ಕೂ ಮಧ್ಯವಾದ ಮಾರ್ಗದಲ್ಲಿ ಹೋಗುತ್ತಿದ್ದರು. ಅಂಧಶ್ರದ್ಧೆಯ ಅನೇಕ ವಿಷಯಗಳನ್ನು ಇವರು ಬಹು ಕಟುವಾಗಿ ಟೀಕಿಸಿದರು. ಸೂತಕ, ಜ್ಯೋತಿಷ್ಯ, ಅಸ್ಪೃಶ್ಯತೆ ಮೊದಲಾದುವುಗಳನ್ನು ನಿರಾಕರಿಸಿದರು. ವಿಚಾರದ ಒರೆಗಲ್ಲಿಗೆ ಬಿದ್ದಾಗ ಇವುಗಳು ತಮ್ಮ ಬಣ್ಣವನ್ನು ಉಳಿಸಿಕೊಳ್ಳಲಾರದೆ ಹೋದವು. ಅಂಧಶ್ರದ್ಧೆ ಅಳಿದಂತೆಲ್ಲಾ ವಿಚಾರಪರತೆ ಬೆಳೆಯುತ್ತ ಹೋಯಿತು. ಇದನ್ನು ಆಧುನಿಕ ವೈಜ್ಞಾನಿಕ ಯುಗಕ್ಕೆ ಹೋಲಿಸ ಬಹುದಾದರೂ ಗುರಿ ಕಾಣದೆ ಕತ್ತಲಲ್ಲಿ ತೊಳಲುವ ಈ ಯಾಂತ್ರಿಕಯುಗದಂತೆ ಅದು ಧ್ಯೇಯ ರಹಿತವಾಗಿರಲಿಲ್ಲ. ಅವರು ಹೋಗುವ ಮಾರ್ಗದಲ್ಲಿ ಆತ್ಮಶ್ರದ್ಧೆ ಇದ್ದಿತು. ಪರಮಾತ್ಮನ ಕೃಪಾ ಪ್ರಸಾದದ ಸಹಸ್ರಾರು ಕಿರಣಗಳಿಂದ ಅವರ ಮಾರ್ಗವು ದೀಪ್ತವಾಗಿದ್ದಿತು. ಅದರ ಬೆಳಕಿನಲ್ಲಿ ಉಳಿದ ಅಂಧಶ್ರದ್ಧೆಯ ಇರುಳ ತೆರೆಗಳು ಎಲ್ಲೋ ಅಡಗಿಹೋಗಿದ್ದವು. ಇದನ್ನು ಬಹು ದೊಡ್ಡ ಕ್ರಾಂತಿಯೆಂದೇ ಭಾವಿಸಬೇಕಾಗುತ್ತದೆ. ಈ ವಿಚಾರಸ್ವಾತಂತ್ರ್ಯ ( Spirit of Enquiry )ದ ತಳಹದಿಯಮೇಲೆ ಉಳಿದೆಲ್ಲಾ ಧಾರ್ಮಿಕ, ಸಾಮಾಜಿಕ ಸುಧಾರಣೆಗಳು ರೂಪುಗೊಂಡವು.

(೬) ಐಕಮತ್ಯ :— ಅನುಭವಮಂಟಪದ ಸ್ಥಾಪನೆಯಿಂದ ಮತದಲ್ಲಿ ಹೆಚ್ಚು ಒಕ್ಕಟ್ಟು ಉಂಟಾಯಿತು. ನಡೆದಂತೆ ನುಡಿಯುವ, ನುಡಿದಂತೆ ನಡೆಯುವ ಧರ್ಮವನ್ನು ಪ್ರತಿಯೊಬ್ಬನೂ ಪಾಲಿಸಬೇಕಾಗಿದ್ದುದರಿಂದ ಪರಸ್ಪರ ಮುಚ್ಚುಮರೆಗಳಿಗೂ ಒಳಸಂಚುಗಳಿಗೂ ಅವಕಾಶವಿರಲಿಲ್ಲ. ಭಕ್ತಿಯ ತಂತುವಿನಿಂದ ಎಲ್ಲರೂ ಕಟ್ಟಲ್ಪಟ್ಟವರಾಗಿದ್ದುದರಿಂದಲೂ ಸಾಮಾಜಿಕ ನೀತಿಗನುಸಾರವಾಗಿ ಇವರು ಸ್ವತಂತ್ರರಾಗಿರಬೇಕಾಗಿದ್ದುದರಿಂದಲೂ ಐಕಮತ್ಯವು ಹೆಚ್ಚಾಯಿತು.

## ಸಾಹಿತ್ಯ ಸುಧಾರಣೆಗಳು

ಸಂಸ್ಕೃತದ ಚಂಪೂಕಾವ್ಯಗಳ ಮೋಹಕ್ಕೆ ಸಿಲುಕಿ ಕನ್ನಡವು ತನ್ನ ಕನ್ನಡತನವನ್ನು ಕಳೆದುಕೊಂಡಿದ್ದಿತು. ವಚನಕಾರರ ವಚನಗಳ ಮೂಲಕ ಅದು ತನ್ನ ಶಕ್ತಿಯನ್ನು ಮತ್ತೆ ಸಂಪಾದಿಸಿತು. ದೊಡ್ಡ ದೊಡ್ಡ ಸಮಾಸ ಪದಗಳಿಂದಲೂ ಸುಧಾರಣ ಜನರಿಗೆ ತಿಳಿಯದ ಶ್ಲೇಷೋಪಮಾನಗಳಿಂದಲೂ ಕೂಡಿದ್ದ ಭಾಷೆಯ ಮೋಹವು ಅಳಿದುಹೋಗಿ, ನುಡಿಯು ಸರಳ ವಾಗಿಯೂ ಸರಸವಾಗಿಯೂ ಜನಜೀವನದ ಹೃದಯವನ್ನು ಮುಟ್ಟುವಂತೆಯೂ ಪರಿವರ್ತನೆ ಹೊಂದಿತು. ಆಂಗ್ಲ ಸಾಹಿತ್ಯದಲ್ಲೂ ಹದಿನೆಂಟನೆಯ ಶತಮಾನದಲ್ಲಿ ನಡೆದ ಸಾಹಿತ್ಯಕ್ರಾಂತಿ ಯಂತೆ ಆಗ ಕನ್ನಡದಲ್ಲೂ ಒಂದು ಬದಲಾವಣೆ ಆಯಿತು. ಅನುಭಾವಿಗಳ ಅನುಭವಗಳು ಕನ್ನಡದಲ್ಲಿ ಬೆಳೆದಂತೆಲ್ಲ ವಿಪುಲ ಜ್ಞಾನಭಂಡಾರವು ಹೆಚ್ಚಿತು. ಅದಕ್ಕೆ ತಕ್ಕ ಶಬ್ದಸಂಪತ್ತಿಯೂ ಸಹ ಕನ್ನಡಕ್ಕೊದಗಿತು. ಬರಿ ವಚನಶಾಸ್ತ್ರದ ಪಾರಿಭಾಷಿಕ ಶಬ್ದಗಳಿಗಾಗಿಯೇ ಒಂದು ಶಬ್ದ ಕೋಶವನ್ನು ರಚಿಸುವ ಅವಶ್ಯಕತೆ ಬೀಳಬಹುದು. ಅಂತೂ ಈ ಸಾಹಿತ್ಯಕ್ರಾಂತಿಯಿಂದ ಕನ್ನಡ ಭಾಷೆಗೊಂದು ಸ್ವತಂತ್ರ ಮನೋಧರ್ಮ ಉಂಟಾಯಿತು. ಈ ಸ್ವತಂತ್ರ ಮನೋಧರ್ಮವು



CC-0. Jangamwadi Math Collection, Varanasi. An eGangotri Initiative

ಕನ್ನಡಕ್ಕೆ ಮೊದಲಿರಲಿಲ್ಲವೆಂದು ಇತಿಹಾಸವು ತಿಳಿಸುತ್ತದೆ. ಪಂಡಿತರ ಭಾಷೆಯಾಗಿದ್ದ ಕನ್ನಡವು ಇಂದಿನಿಂದ ಪಂಡಿತರಿಂದ ಪಾಮರರವರೆಗೂ ಎಲ್ಲರಲ್ಲೂ ಪ್ರಚಾರವಾಯಿತು. ಅನೇಕ ಸ್ತ್ರೀಯರೇ ಗ್ರಂಥಗಳನ್ನು ಪಾಂಡಿತ್ಯವಿಲ್ಲದೆ, ಬರಿ ಭಕ್ತಿಯ ಉದ್ರೇಕದಿಂದಲೇ ರಚಿಸಿರುತ್ತಾರೆಂದಬಳಿಕ ಸಾಹಿತ್ಯದ ಪ್ರಗಾಢತೆಯನ್ನು ಬೇರೆ ವರ್ಣಿಸಬೇಕಾಗಿಲ್ಲ. ಶಿಶಿರಋತುವಿನನಂತರ ವನಕ್ಕೆ ವಸಂತವು ಬಂದರೆ ಹೇಗೆ ಅದು ನಳನಳಿಸುತ್ತ ಚಿಗಿರೊಡೆಯುವುದೋ ಹಾಗೆ ಕನ್ನಡವೂ ಸಹ ಸರ್ವತೋಮುಖವಾಗಿ ಪಲ್ಲವಿಸಿ, ಹೂಬಿಟ್ಟು, ಹಣ್ಣು ಕೊಡಲಾರಂಭಿಸಿತು. ಅದರ ಸವಿಯನ್ನು ಅಂದಿನವರೆಲ್ಲರೂ ಪಂಡಿತ-ಪಾಮರರೆನ್ನದೆ, ಸ್ತ್ರೀ-ಪುರುಷರೆನ್ನದೆ, ಬಡ-ಶ್ರೀಮಂತರೆನ್ನದೆ, ಎಲ್ಲರೂ ಸವಿದರು. ಕನ್ನಡಕ್ಕೆ ಬಂದ ಈ ವಿಪುಲ ಸಾಹಿತ್ಯಭಂಡಾರದ ಕೀರ್ತಿಯು ಅನುಭವಮಂಟಪಕ್ಕೆ ಸೇರತಕ್ಕುದಾಗಿದೆ.

## ಉಪಸಂಹಾರ

ಈ ಧರ್ಮವು ಭಕ್ತಿಯ ಸೌಲಭ್ಯದಿಂದಲೂ ಅನುಭವದ ಪ್ರಾಧಾನ್ಯದಿಂದಲೂ ಜನ ಜೀವನದಲ್ಲಿ ಹೆಚ್ಚು ಪ್ರೀತಿಯನ್ನು ಪಡೆಯಿತು. ಅನಾಗರಿಕರಾದವರೂ ಕೂಡ ಬಹು ಸುಲಭವಾಗಿ ಕೇವಲ ಸಾಧನೆಯ ಬಲದಿಂದಲೇ ಲಿಂಗಾಂಗ ಸಾಮರಸ್ಯದ ದಿವ್ಯಾನಂದವನ್ನು ಪಡೆಯಬಹು ದಾಗಿದ್ದುದರಿಂದ ಇದರ ವ್ಯಾಪ್ತಿಯು ವಿಶೇಷವಾಗಿ ಹೆಚ್ಚಿತು. ಪಂಡಿತರಿಂದ ಪಾಮರರವರೆಗೂ ಇದು ಪ್ರಿಯವಾದುದರಿಂದ ಉತ್ತಮರನ್ನು ಉತ್ತಮ ಸ್ಥಳದಲ್ಲೇ ಇರಿಸಿ, ಅಧಮರು, ನೀಚರು, ಪತಿತರು ಎಂದು ಸಮಾಜವು ದೂರೀಕರಿಸಿದವರನ್ನು ಕೈಹಿಡಿದು ಉತ್ತಮರ ಮಟ್ಟಕ್ಕೇರಿಸಿ, ಅವರಲ್ಲಿದ್ದ ಮೇಲುಕೀಳು ಭಾವನೆಗಳನ್ನು ಹೋಗಲಾಡಿಸಿತು. ಇದರಿಂದ ವಿಶ್ವಬಾಂಧವ್ಯದ ಮತ್ತು ವಿಶ್ವಕಲ್ಯಾಣದ ಭಾವನೆಗಳು ಹೇಗೆ ಈ ಅನುಭವಮಂಟಪದಿಂದ ಹೊರಹೊಮ್ಮುತ್ತಿದ್ದು ವೆಂಬುದನ್ನು ನಾವು ಇಲ್ಲಿ ನೋಡಬಹುದು. ಇದೇ ಶರಣರು ಮಾಡಿದ ಬಹು ಉದಾತ್ತವಾದ ಲೋಕಸೇವೆ ಮತ್ತು ಲೋಕಕಲ್ಯಾಣ. ಇಷ್ಟಕ್ಕೂ ಮೂಲ ಪುರುಷರಾದ ಬಸವಣ್ಣನವರೇ ಕಾರಣ ಕರ್ತರು. ಅವರದು ಒಂದು ಸಂಸ್ಕೃತಿಯ ಜೀವನ. ಅನುಭವಮಂಟಪದಂತಹ ಒಂದು ಸಣ್ಣ ವಿದ್ಯಾಲಯದ ಮೂಲಕ, ಒಂದು ಉದಾತ್ತ ಸಂಸ್ಕೃತಿಯನ್ನು ಕೇವಲ ನುಡಿಯಿಂದ ಮಾತ್ರವಲ್ಲ, ನಡೆ, ಆಚರಣೆ ಮತ್ತು ಪ್ರಯೋಗಗಳಿಂದ ಸಾಧಿಸಿ ತೋರಿಸಿದರು. ಅವರನಂತರ ಎಂಟು ಶತಮಾನಗಳು ಗತಿಸಿಹೋಗಿದ್ದರೂ ಸಹ ಅವರ ವಾಣಿ ಎಂದೆಂದಿಗೂ ಅಮರವಾಗಿದೆ; ಅವರ ಸಂಗಡ ಅಡಿಯಿಟ್ಟ ಸಂಸ್ಕೃತಿ ಉದಾತ್ತವಾಗಿದೆ; ಆ ತತ್ತ್ವಸಮುದಾಯದ ತಂತಿಗಳನ್ನು ಮಿಡಿದುದ ರಿಂದ, ಧರ್ಮದ ಬೃಹದ್ಗರ್ಭದಿಂದ ಹೊರಟ ಆ ಚಿರ ನೂತನವಾದ ಸಂಗೀತವು ಇನ್ನೂ ಮಧುರ ವಾಗಿ ಝೇಂಕರಿಸುತ್ತಲೇ ಇದೆ.

ಭದ್ರಂ ಶುಭಂ ಮಂಗಲಂ



CC-0. Jangamwadi Math Collection, Varanasi. An eGangotri Initiative



# ಲಿಂಗಪೂಜೆಯ ಬೆಳವಣಿಗೆಯ ಇತಿಹಾಸ

ವಾಙ್ಮಯ ಶಾಖೆಯವರು ತಿಳಿಸಿರುವ ಈ ಮೇಲಣ ವಿಷಯವು ಲಿಂಗಪೂಜೆಯು. ಎಂದು ? ಏಕೆ ? ಹೇಗೆ ? ಪ್ರಾರಂಭವಾಯಿತೆಂಬುದನ್ನು, ಅದರಲ್ಲಿ ದಿನೆ ದಿನೆ ಯಾವ ಯಾವ ಮಾರ್ಪಾಟುಗಳಾಗುತ್ತಾ ಬಂದವೆಂಬುದನ್ನು, ಐತಿಹಾಸಿಕ ದೃಷ್ಟಿಯಿಂದ ಪರಿಶೀಲಿಸಬೇಕೆಂದೇ ಸೂಚಿಸುತ್ತದಷ್ಟೆ. ಇದು ಧಾರ್ಮಿಕ ಪೂಜ್ಯಭಾವನೆಗೆ ಒಳಪಟ್ಟ ವಿಷಯವಾಗಿರುವುದರಿಂದ ಈ ಐತಿಹಾಸಿಕ ದೃಷ್ಟಿಯ ಪರಿಶೀಲನವು ಅನುಚಿತ ಮಾತ್ರವೇ ಅಲ್ಲ; ಪಾಪಕರವೆಂತಲೂ ಬಹು ಜನರು ತಿಳಿಯಬಹುದು. ಅಂತಹ ಭಾವನಾವಿಶಿಷ್ಟರಿಗಂತೂ ಈ ಲೇಖನವು ಯಾವ ಸಮಾಧಾನವನ್ನೂ ಉಂಟುಮಾಡಲಾರದು.

ಇನ್ನು ಐತಿಹಾಸಿಕ ದೃಷ್ಟಿಯಿಂದ ಈ ವಿಷಯವನ್ನು ನೋಡಿದವರಿಗಾದರೋ, ಈ ಲಿಂಗ ಪೂಜೆಯ ಇತಿಹಾಸವು ಬಹು ಪ್ರಾಚೀನವಾದುದೂ ವ್ಯಾಪಕವಾದುದೂ ವಿವಾದಾಸ್ಪದವಾದುದೂ ಇರುವುದರಿಂದ ಇಂತಹ ಸಂಕ್ಷಿಪ್ತವಾದ ಒಂದು ಲೇಖನದಿಂದಲೇ ಎಲ್ಲ ಸಂಶಯಗಳೂ ನಿವಾರಣೆ ಯಾಗಲಾರವು. ಎಂದಮೇಲೆ ಈ ಲೇಖನದ ಪ್ರಯೋಜನವೇನೆಂಬ ಪ್ರಶ್ನೆಯುಂಟಾಗಬಹುದಲ್ಲವೆ? ಇದರ ಉಪಯೋಗವಿಷ್ಟೆ. ಲಿಂಗಪೂಜೆಯ ವಿಚಾರವಾಗಿ ಐತಿಹಾಸಿಕ ದೃಷ್ಟಿಯ ವಿವೇಚನೆಯು ಕನ್ನಡದಲ್ಲಿಯೂ ಹೆಚ್ಚಲಿ. ಈಗ ಆ ಪ್ರಕಾರ ಪರಿಶೀಲಿಸುತ್ತಿರುವ ಮಹಾಶಯರಿಗೆ ಈ ನನ್ನ ವಿಚಾರಸರಣಿಯು ಗೊತ್ತಾಗಿ ಅವರ ಯೋಚನೆಗೆ ಒಂದು ದಾರಿಯು ತೋರಿದರೆ ತೋರಲಿ.

### ವಿಚಾರಸರಣಿಯು ಎರಡು ರೀತಿ

ಮನುಷ್ಯನ ಆಚಾರವಿಚಾರಗಳನ್ನು ಕುರಿತು ಪರ್ಯಾಲೋಚಿಸುವವರಲ್ಲಿ ಮುಖ್ಯವಾಗಿ ಎರಡು ಪಕ್ಷಗಳಿವೆ. ದೇವರು ಮನುಷ್ಯನನ್ನು ಜ್ಞಾನವಿಶಿಷ್ಟನನ್ನಾಗಿಯೇ ಮೊದಲು ಹುಟ್ಟಿಸಿ ಆತನನ್ನು ಉನ್ನತ ಸ್ಥಿತಿಯಲ್ಲಿಯೇ ಇಟ್ಟಿದ್ದನೆಂತಲೂ ಅನಂತರ ಅಜ್ಞಾನವು ಆತನನ್ನು ಆವರಿಸಿ ಕೊಂಡದ್ದರಿಂದ ದಿನೆ ದಿನೆ ಹೀನ ಸ್ಥಿತಿಗೆ ಬರಲಾರಂಭಿಸಿದನೆಂತಲೂ ಕೆಲವರು ತಿಳಿದಿದ್ದಾರೆ ಇನ್ನು ಕೆಲವರು, ಮನುಷ್ಯನು ಮೊದಲು ಕಾಡುಸ್ಥಿತಿಯಲ್ಲಿದ್ದನೆಂತಲೂ ಉತ್ಕ್ರಾಂತಿಯ ತತ್ತ್ವದಂತೆ ದಿನೆ ದಿನೆ ಹೆಚ್ಚು ಹೆಚ್ಚು ಜ್ಞಾನ ಸಂಪಾದಿಸಿ ಉನ್ನತ ಸ್ಥಿತಿಗೆ ಬರಲಾರಂಭಿಸಿದನೆಂತಲೂ ಹೇಳುತ್ತಿದ್ದಾರೆ. ಈ ಉಭಯ ಪಕ್ಷದವರಲ್ಲಿ ಮೊದಲನೆಯವರು ಮುಖ್ಯವಾಗಿ ಧಾರ್ಮಿಕದೃಷ್ಟಿಯುಳ್ಳವ



CC-0. Jangamwadi Math Collection, Varanasi. An eGangotri Initiative

ರೆಂತಲೂ ಎರಡನೆಯವರು ಐತಿಹಾಸಿಕದೃಷ್ಟಿಯವರೆಂತಲೂ ಸಾಮಾನ್ಯವಾಗಿ ಹೇಳಬಹುದು. ಈ ಲೇಖನವು ಎರಡನೆಯದಾದ ಉತ್ಕ್ರಾಂತಿ ತತ್ತ್ವವನ್ನು ಅನುಸರಿಸಿಯೇ ಬರೆಯಲ್ಪಟ್ಟದ್ದಾಗಿದೆ.

## ಜ್ಯೋತಿರ್ಲಿಂಗೋದ್ಭವ

ಧಾರ್ಮಿಕದೃಷ್ಟಿಯವರು ಐತಿಹಾಸಿಕ ಆಧಾರಗಳು ತಮಗೇನೂ ಬೇಡವೆಂದು ಹೇಳಬಹುದು. ಆದರೆ ಐತಿಹಾಸಿಕ ದೃಷ್ಟಿಯಿಂದ ಪರಿಶೋಧಿಸುವವರು ಜನರ ಧಾರ್ಮಿಕ ಆಚಾರ ವಿಚಾರಗಳಲ್ಲೇನೂ ಉಪೇಕ್ಷಿಸುವುದಿಲ್ಲ. ಅವುಗಳಲ್ಲಿ ಐತಿಹಾಸಿಕ ಅನೇಕ ಸಂಗತಿಗಳು ಅಡಕವಾಗಿರುತ್ತವೆಂಬುದು ಅವರಿಗೆ ಗೊತ್ತು. ಅಂತೆಯೇ ಅವುಗಳ ಮೇಲಿಂದ ತಮ್ಮ ವಿಚಾರಸರಣಿಯನ್ನು ಬಲಪಡಿಸುತ್ತಾರೆ. ಈ ನಿಯಮವು ಲಿಂಗಪೂಜೆಯು ಇತಿಹಾಸಕ್ಕೂ ಸಂಬಂಧಪಟ್ಟಿರುವುದರಿಂದ ಲಿಂಗದವಿಚಾರವಾಗಿ ಜನರ ಧಾರ್ಮಿಕ ಆಚಾರವಿಚಾರಗಳು ಹೇಗಿವೆಯೆಂಬುದನ್ನು ಮೊದಲು ಸ್ವಲ್ಪ ನೋಡೋಣ.

ಬ್ರಹ್ಮನು ತನ್ನ ಮಗನಾದ ನಾರದನಿಗೆ ಜ್ಯೋತಿರ್ಲಿಂಗದ ಉದ್ಭವವನ್ನು ಕುರಿತು ಹೇಳಿದ ಸಂಗತಿಯು ಶಿವಪುರಾಣ ಧರ್ಮಸಂಹಿತೆಯ ಎರಡನೆಯ ಅಧ್ಯಾಯದಲ್ಲಿ ಹೀಗಿದೆ—

“ಮಹಾ ಪ್ರಳಯದನಂತರ ಒಂದು ದಿವ್ಯ ತೇಜವು ಪ್ರಕಟವಾಯಿತು. ಆ ತೇಜದಿಂದ ಪ್ರಕೃತಿಯೆಂಬ ಇಚ್ಛಾಶಕ್ತಿಯುಂಟಾಯಿತು. ಆಮೇಲೆ ನನ್ನ (ಬ್ರಹ್ಮನ) ಮತ್ತು ವಿಷ್ಣುವಿನ ಮಧ್ಯದಲ್ಲಿ ಆಶ್ಚರ್ಯಕರವಾದ ಜ್ಯೋತಿರ್ಲಿಂಗವು ಉದ್ಭವಿಸಿತು. ಅದರ ಆದಿ-ಮಧ್ಯ-ಅಂತ್ಯಗಳೇ ಇರಲಿಲ್ಲ. ಅದನ್ನು ವರ್ಣಿಸುವುದು ಅಸಾಧ್ಯ.”

ಬ್ರಹ್ಮ ಮತ್ತು ವಿಷ್ಣು ಇವರಲ್ಲಿ ನಾ ಹೆಚ್ಚು ತಾ ಹೆಚ್ಚು ಎಂಬ ವಾದವುಂಟಾದಾಗ ಜ್ಯೋತಿರ್ಲಿಂಗವು ಉದ್ಭವಿಸಿತೆಂತಲೂ ಅದರ ಪಾದ-ಶಿರಗಳನ್ನು ಕಂಡುಹಿಡಿಯುವುದು ಹರಿಬ್ರಹ್ಮರಿಗೂ ಕೂಡಾ ಸಾಧ್ಯವಾಗಲಿಲ್ಲವೆಂತಲೂ ಕೆಲವುಕಡೆ ಹೇಳಿದೆ. ಈ ಜ್ಯೋತಿರ್ಲಿಂಗವು ಹುಟ್ಟಿದ ನಂತರವೇ ಎಂದರೆ ಜಗದಾದಿಯಿಂದಲೇ ಲಿಂಗಪೂಜೆಯು ಪ್ರಾರಂಭವಾಗಿದೆಯೆಂದೂ ಇದನ್ನು ದೇವ-ದಾನವ-ಮಾನವರು ಆಚರಿಸುತ್ತ ಬಂದಿದ್ದಾರೆಂದೂ ಅನೇಕರು ಹೇಳುತ್ತಿದ್ದಾರೆ.

## ಶಿವಲಿಂಗ ಪತನ

ಲಿಂಗದ ವಿಚಾರವಾಗಿ ಶಿವಪುರಾಣದ ಧರ್ಮಸಂಹಿತೆಯ ೧೦ ನೆಯ ಅಧ್ಯಾಯದಲ್ಲಿ ಮತ್ತೊಂದು ರೀತಿಯ ವಿವೇಚನೆಯಿದೆ. ಅದರ ಮುಖ್ಯಾಂಶ ಹೀಗೆ—

“ಶಿವನು ಒಂದು ದಿನ ಬತ್ತಲೆಯಾಗಿ ದಾರುಕ ವನದಲ್ಲಿ ಹೋದನು. ಆಗ ಅಲ್ಲಿಯ ಋಷಿಗಳು ಯೋಗಸಮಾಧಿಯಲ್ಲಿದ್ದರು. ಅವರ ಪತ್ನಿಯರು ಶಿವನು ಬತ್ತಲೆಯಾಗಿದ್ದುದನ್ನು ನೋಡಿ ಕಾಮವಿಕಾರಹೊಂದಿ ಅವನ ಹಿಂಬಾಲಿಸಿದರು. ಶಿವನು ಅವರ ಮೋಹಕ್ಕೆ ವಶನಾಗಲಿಲ್ಲ. ಋಷಿಗಳು ಬಂದು ನೋಡಿ ತಮ್ಮ ಸತಿಯರು ಶಿವನನ್ನು ಬಿಟ್ಟು ಬಾರದಿರಲು ಶಿವನಿಗೆ ಬಹಳ ವಾಗಿ ಹೊಡೆದರು. ಆತನು ಅವರ ಹೊಡೆತವನ್ನು ಸಹಿಸಿಕೊಂಡು ಮತ್ತೆ ಋಷಿಪತ್ನಿಯರ



CC-0. Jangamwadi Math Collection, Varanasi. An eGangotri Initiative

ಹತ್ತಿರ ಭಿಕ್ಷೆಬೇಡುತ್ತ ಹೋಗುತ್ತಿರುವಾಗ ಅರುಂಧತಿಯು ಮತ್ತೆ ಕಾಮವಿಕಾರಹೊಂದದೆ ಮಕ್ಕಳನ್ನು ಜೋಕೆ ಮಾಡುವಂತೆ ಶಿವನನ್ನು ಬಹು ಪರಿಯಿಂದ ಆರೈಕೆಮಾಡಿದಳು.

ಶಿವನು ಅವಳ ಗೃಹಸ್ಥಾಶ್ರಮಧರ್ಮವನ್ನು ನೋಡಿ ಬಹು ಸಂತೋಷಪಟ್ಟು ನಿನ್ನ ಸೌಭಾಗ್ಯವು ನಿರಂತರವಿರಲೆಂದು ಆಶೀರ್ವದಿಸಿ ಮುಂದೆ ಹೋದನು. ಆಗ ಮತ್ತೆ ಅನೇಕ ಸ್ತ್ರೀಯರು ಮೊದಲಿನಂತೆ ಮೋಹಿಸಿ ಈತನ ಹಿಂಬಾಲಿಸಿದರು. ಹನ್ನೆರಡು ವರ್ಷ ಹೀಗೆ ಸಂಚರಿಸಿದ ತರುವಾಯ ಭೃಗು ಎಂಬ ಋಷಿಯು ಸಿಟ್ಟಿನಿಂದ ಶಿವನಿಗೆ ನಿನ್ನ ಲಿಂಗವು ( ಶಿಶ್ನ ) ಭೂಮಿಗೆ ಕಳಚಿ ಬೀಳಲೆಂದು ಶಾಪ ಕೊಟ್ಟನು. ಆಗ ಆತನ ತೇಜೋಮಯ ಲಿಂಗವು ಅನೇಕ ಯೋಜನಗಳವರೆಗೆ ಬಿದ್ದಿತು. ಇದು ಅರುಂಧತಿಗೆ ತಿಳಿದು ಅವಳು ತನ್ನ ದಾಂಪತ್ಯ ಧರ್ಮದ ಪುಣ್ಯವನ್ನೆಲ್ಲಾ ಧಾರೆ ಎರೆದು ಶಿವನು ಮೊದಲಿನಂತೆಯೇ ಶುದ್ಧಿಯಾಗುವ ಹಾಗೆ ಮಾಡಿದಳು. ಆಗ ಆಕಾಶವಾಣಿಯು ಹೀಗಾಯಿತು—

“ಋಷಿಗಳೇ, ನೀವು ಶಾಪದಿಂದ ಕೆಡವಿದ ಲಿಂಗವು ಸರ್ವ ಸಿದ್ಧಿಗಳನ್ನು ಕೊಡುವು ಹಾಗಿದೆ. ಅದನ್ನು ಪೂಜಿಸಿ ಕೃತಾರ್ಥರಾಗಿರಿ.”

ಅಂದಿನಿಂದ ಲಿಂಗಪೂಜೆಯು ಪ್ರಾರಂಭವಾಯಿತೆಂದು ಕೆಲವರು ತಿಳಿದಿದ್ದಾರೆ. ಲಿಂಗವು ಶಿವನ ಶಿಶ್ನವೆಂತಲೂ ಅವರ ತಿಳುವಳಿಕೆ. ಆದುದರಿಂದ ಅನೇಕರು ಲಿಂಗವನ್ನು ಶಿಶ್ನದ ಆಕಾರದಲ್ಲಿಯೇ ಮಾಡಿಸಿ ಪೂಜಿಸಿದುದೂ ಉಂಟು. ಅಂಥ ಮೂರ್ತಿಗಳು ಈಗ ಕೆಲವು ಕಡೆ ದೊರೆತಿವೆ. ( ಗುಡಿಮಲ್ಲಂ ಎಂಬಲ್ಲಿ ಕ್ರಿಸ್ತಪೂರ್ವ ೧ ನೆಯ ಶತಮಾನದಲ್ಲಿಯೂ ಮಥುರಾದಲ್ಲಿ ಕ್ರಿ. ಶ. ೩ ನೆಯ ಶತಮಾನದಲ್ಲಿಯೂ ಇದ್ದ ಲಿಂಗಮೂರ್ತಿಗಳು ದೊರೆತಿವೆ. ಅವು ಶಿಶ್ನದಂತೆಯೇ ಇವೆ. )

## ಓಂಕಾರವೇ ಲಿಂಗ

ಶಿವಪುರಾಣದ ವಿದ್ವೇಶ್ವರ ಸಂಹಿತೆಯಲ್ಲಿ ಲಿಂಗದ ವಿಚಾರವಾಗಿ ಹೀಗೆ ಹೇಳಿದೆ—

“ಎಲ್ಲ ಸಿದ್ಧಿಗಳನ್ನೂ ಕೊಡುವ ಓಂಕಾರವೇ ಲಿಂಗವು. ಓಂಕಾರದಲ್ಲಿಯ ಅ. ಉ. ಮ. ಈ ಮೂರು ಅಕ್ಷರಗಳೇ ಅನುಕ್ರಮವಾಗಿ ಲಿಂಗದ ಪೀಠ, ಜಲಧಾರಿ, ಗೋಳುಕಗಳಾಗಿ ಗ್ರಹಿಸಲ್ಪಟ್ಟಿವೆ.”

ಆದಕಾರಣ ಜಗದಾದಿಯಿಂದಲೂ ಲಿಂಗಪೂಜೆಯು ಪ್ರಚಾರದಲ್ಲಿದೆಯೆಂದು ಕೆಲವರ ಪ್ರತಿಪಾದನೆಯು.

ಹೀಗೆ ಲಿಂಗಪೂಜೆಯ ವಿಚಾರವಾಗಿ ಧಾರ್ಮಿಕ ದೃಷ್ಟಿಯ ಮೂರು ಮುಖ್ಯ ರೀತಿಗಳಿವೆ. ಪಾಶ್ಚಾತ್ಯ ಶಿಕ್ಷಣವು ನಮ್ಮ ದೇಶದಲ್ಲಿ ಪ್ರಸಾರವಾದನಂತರ ಐತಿಹಾಸಿಕ ದೃಷ್ಟಿಯಿಂದ ಈ ವಿಷಯವನ್ನು ಕೆಲವರು ಪರಿಶೀಲಿಸಲುಪಕ್ರಮಿಸಿದ್ದಾರೆ. ಈ ವರೆಗಿನ ಅಂತಹ ಪ್ರತಿಪಾದನೆಗಳಲ್ಲಿ ಎರಡು ರೀತಿಗಳು ಮಾತ್ರ ಇವೆ. ಅವು ಹೀಗೆ—



CC-0. Jangamwadi Math Collection, Varanasi. An eGangotri Initiative

## ಯೂಪಸ್ತಂಭವೇ ಲಿಂಗ

ಶ್ರೀ ಸ್ವಾಮಿ ವಿವೇಕಾನಂದರು ಲಿಂಗದ ವಿಚಾರವಾಗಿ ಹೀಗೆ ಹೇಳಿದ್ದಾರೆ—

"ಯಜ್ಞಮಾಡುವಾಗ ಯಜ್ಞಪಶುವನ್ನು ಒಂದು ಕಂಬಕ್ಕೆ ಕಟ್ಟುತ್ತಾರೆ. ಅದಕ್ಕೆ "ಯೂಪಸ್ತಂಭ" ಎಂಬ ಹೆಸರು. ಆ ಕಂಬವು ಪರಬ್ರಹ್ಮವೆಂದೇ ತಿಳಿಯಲ್ಪಡುತ್ತಿತ್ತು. ಪಶು ಯಜ್ಞವು ನಿರಾಕರಿಸಲ್ಪಟ್ಟನಂತರ ಆ ಕಂಬವೇ ಲಿಂಗವಾಗಿಯೂ ಜೀವಾತ್ಮನೇ ಪಶುವಾಗಿಯೂ ಪರಿಗಣಿಸಲ್ಪಟ್ಟಿತು."

## ಜನನೇಂದ್ರಿಯ ಸಂಯೋಗವೇ ಲಿಂಗ

ಐತಿಹಾಸಿಕ ದೃಷ್ಟಿಯುಳ್ಳವರಲ್ಲಿ ಕೆಲವರು ಲಿಂಗದ ವಿಚಾರವಾಗಿ ಹೀಗೆ ಹೇಳುತ್ತಿದ್ದಾರೆ. "ಮನುಷ್ಯನು ಕಾಡುಸ್ಥಿತಿಯಲ್ಲಿದ್ದಾಗ ದೇವರ ಕಲ್ಪನೆಯೇ ಇರುವುದಿಲ್ಲ. ಸ್ತ್ರೀಪುರುಷರ ಗುಪ್ತೇಂದ್ರಿಯಗಳಿಂದಲೇ ಜನರು ಹುಟ್ಟುತ್ತಿದ್ದುದನ್ನು ನೋಡಿ ಅವುಗಳನ್ನೇ ದೇವರೆಂದು ತಿಳಿದು ಪೂಜಿಸಲಾರಂಭಿಸಿದರು."

ಲಿಂಗದ ವಿಚಾರವಾಗಿಯೇ ಹೀಗೆ ಕೆಲವರು ಹೇಳುತ್ತಿದ್ದಾರೆಂದಲ್ಲ. ಯಜ್ಞಕುಂಡದ ವಿಚಾರವಾಗಿಯೂ ಸ್ವಸ್ತಿಕಚಿಹ್ನದ ಸಂಬಂಧವಾಗಿಯೂ ಹೀಗೆಯೇ ಹೇಳುವುದುಂಟು. ಸ್ತ್ರೀಪುರುಷರ ಸಂಯೋಗದ ನಾಲ್ಕು ಕಾಲುಗಳೇ 卐 ಈ ಸ್ವಸ್ತಿಕ ಚಿಹ್ನವಾಗಿದೆಯೆಂದು ಅವರ ಹೇಳಿಕೆ. ಹೀಗೆ ಜನನೇಂದ್ರಿಯಗಳ ಸಂಯೋಗದ ಬೇರೆ ಬೇರೆ ಗುರುತುಗಳನ್ನೇ ಜನರು ಪೂಜ್ಯ ಭಾವದಿಂದ ಪೂಜಿಸುತ್ತಾ ಬಂದಿದ್ದಾರೆಂದು ಇವರ ಪ್ರತಿಪಾದನೆ. ಅಂತಹ ಚಿಹ್ನೆಗಳಲ್ಲಿ ಲಿಂಗವೂ ಒಂದಾಗಿದೆಯೆಂದು ಅವರು ಹೇಳುತ್ತಿದ್ದಾರೆ.

## ದೇವರ ಕಲ್ಪನೆಯ ಉಗಮ

ಈ ವರೆಗೆ ಹೇಳಲ್ಪಟ್ಟ ಯಾವ ವಿವೇಚನೆಯೂ ಲಿಂಗಪೂಜೆಯ ಮೂಲವನ್ನು ಕಂಡು ಹಿಡಿಯಬೇಕೆಂಬ ಐತಿಹಾಸಿಕ ದೃಷ್ಟಿಯವರಿಗೆ ಸಮಾಧಾನಕರವಾಗಿ ಪರಿಣಮಿಸುವಂತಿಲ್ಲ. ಏಕೆಂದರೆ, ಮನುಷ್ಯಪ್ರಾಣಿಗೆ ದೇವರಕಲ್ಪನೆಯು ಹೇಗುಂಟಾಯಿತೆಂಬುದೂ ಸರಿಯಾಗಿ ವಿವೇಚಿಸಲ್ಪಟ್ಟಿಲ್ಲ. ಉತ್ಕ್ರಾಂತಿತತ್ತ್ವದಂತೆ ದೇವರಕಲ್ಪನೆಯ ಉಗಮ ಮತ್ತು ಅದು ಹೆಚ್ಚುವ ರೀತಿಗಳು ನಮಗೆ ಎಲ್ಲಿಯವರೆಗೆ ಗೊತ್ತಾಗುವದಿಲ್ಲವೋ ಅಲ್ಲಿಯವರೆಗೆ ಲಿಂಗಪೂಜೆಯ ಬೆಳ ವಣಿಗೆಯ ಇತಿಹಾಸ ತಿಳಿಯುವದು ಶಕ್ಯವೇ ಇಲ್ಲ. ಆದುದರಿಂದ ಮೊದಲು ಆ ವಿಷಯವನ್ನು ಸ್ವಲ್ಪ ತಿಳಿದುಕೊಳ್ಳೋಣ.

ಈ ವರೆಗೆ ಜಗತ್ತಿನಲ್ಲಿ ಆಗಿಹೋಗಿರುವ ಮಹಾ ಪಂಡಿತರಲ್ಲಿ ಪಂಡಿತ ಮ್ಯಾಕ್ಸ ಮುಲ್ಲರ ರವರೂ ಒಬ್ಬರೆಂಬುದು ನಿರ್ವಿವಾದವಷ್ಟೆ. ಅವರು ಐತಿಹಾಸಿಕ ದೃಷ್ಟಿಯಿಂದಲೇ ಧರ್ಮದ ರೀತಿ ನೀತಿಗಳನ್ನು ಕಂಡುಹಿಡಿಯಲು ತಮ್ಮ ಆಯುಷ್ಯವನ್ನೇ ಕಳೆದರು. ಧರ್ಮದ ವಿಚಾರವಾಗಿ ಐತಿಹಾಸಿಕ ದೃಷ್ಟಿಯಿಂದ ಪರಿಶೋಧಿಸುವವರಿಗೆ ಸಹಾಯ ಮಾಡಲು ಸ್ಕಾಟಲಂಡ ದೇಶದ



CC-0. Jangamwadi Math Collection, Varanasi. An eGangotri Initiative

ಉರ್ಡ ನಿಫರ್ಡ ಎಂಬುವವರು ಹನ್ನೆರಡು ಲಕ್ಷ ರೂಪಾಯಿಗಳ ನಿಧಿಯನ್ನು ಇಟ್ಟಿದ್ದರು. ಪಂಡಿತ ಮ್ಯಾಕ್ಸ ಮುಲ್ಲರರವರು ಕ್ರಿ. ಶ. ೧೮೮೮ ರಲ್ಲಿ ನೈಸರ್ಗಿಕ ಧರ್ಮ (Natural Religion) ಎಂಬ ವಿಷಯವಾಗಿ ೨೦ ವ್ಯಾಖ್ಯಾನಗಳನ್ನು ಕೊಟ್ಟರು. ಇವರು ಮನುಷ್ಯಪ್ರಾಣಿಗೆ ದೇವರ ಕಲ್ಪನೆಯು ಹೇಗುಂಟಾಗುತ್ತದೆಂಬುದನ್ನು ಬಹು ವಿಸ್ತಾರವಾಗಿ ತಮ್ಮ ವ್ಯಾಖ್ಯಾನಗಳಲ್ಲಿ ತಿಳಿಸಿದ್ದಾರೆ. ಅವರ ಅಭಿಪ್ರಾಯಗಳನ್ನು ಮುಖ್ಯಾಂಶವಾಗಿ ಈ ಕೆಳಗೆ ಕೊಟ್ಟಿದೆ—

(೧) ಮೊದಲು ಮನುಷ್ಯನ ಇಂದ್ರಿಯ ಗೋಚರವಾಗದೆ ಇರತಕ್ಕ ಯಾವ ಸಂಗತಿಯೂ ಆತನ ಶ್ರದ್ಧೆಯ ವಿಷಯವಾಗಿ ಪರಿಣಮಿಸುವುದಿಲ್ಲ

(೨) ಮನುಷ್ಯನಿಗೆ ಮೊದಲು ದೃಶ್ಯಪದಾರ್ಥಗಳ ಜ್ಞಾನವಾಗಿ ಅನಂತರವೇ ಅದೃಶ್ಯ ಪದಾರ್ಥಗಳ ಜ್ಞಾನವಾಗುತ್ತದೆಂಬುದು ಈ ವರೆಗಿನ ಇತಿಹಾಸದಿಂದ ಸಿದ್ಧವಾದ ಸಂಗತಿಯಾಗಿದೆ.

(೩) ಮನುಷ್ಯಪ್ರಾಣಿಯು ಬಾಲ್ಯಾವಸ್ಥೆಯಲ್ಲಿದ್ದಾಗ ಅವರ ಇಂದ್ರಿಯಗಳಮೇಲೆ ಮತ್ತು ಮನಸ್ಸಿನಮೇಲೆ ಯಾವ ಯಾವ ಸಂಸ್ಕಾರಗಳು ಆಗುತ್ತಾ ಬಂದವೋ ಅವೇ ಕಾಲಕ್ರಮದಿಂದ ವಿಕಾಸಹೊಂದಿದುವು. ಮೊದಲು ಇಂದ್ರಿಯ ಗೋಚರವಾದ ಜ್ಞಾನವೇ ಕೊನೆಗೆ ಇಂದ್ರಿಯಾತೀತಜ್ಞಾನಕ್ಕೆ ಕಾರಣವಾಗಿ ಪರಿಣಮಿಸಿತು.

(೪) ಕಣ್ಣಿಗೆ ಕಾಣುವ ಆದರೆ ಕೈಗೆ ನಿಲುಕದ ಸೂರ್ಯ, ಚಂದ್ರ, ನಕ್ಷತ್ರ, ಮೋಡ ಮೊದಲಾದ ಸೃಷ್ಟ ಪದಾರ್ಥಗಳ ಅದ್ಭುತ ಕಾರ್ಯಗಳನ್ನು ಮನುಷ್ಯಪ್ರಾಣಿಯು ಬಾಲ್ಯಾವಸ್ಥೆಯಲ್ಲಿದ್ದಾಗ ನೋಡಿ ಆಶ್ಚರ್ಯಪಟ್ಟುದು ಸ್ವಾಭಾವಿಕ. ತಾವು ಕಾರ್ಯ ಮಾಡುವಂತೆಯೇ ಅವೂ ಮಾಡುತ್ತವೆಂದೂ ತಮಗೆ ಒಬ್ಬ ಒಡೆಯನಿರುವಂತೆ ಅವುಗಳಿಗೂ ಒಬ್ಬ ಒಡೆಯನಿದ್ದಾನೆಂದೂ ಅವರು ತಿಳಿದುದು ಸ್ವಾಭಾವಿಕ.

ಹೀಗೆ ಅಗೋಚರವಾಗಿರತಕ್ಕ ಶಕ್ತಿಯ ಅದ್ಭುತ ಕಾರ್ಯಗಳಿಂದ ಮನುಷ್ಯನಲ್ಲಿ ಉಂಟಾದ ಆಶ್ಚರ್ಯ ಅಥವಾ ಭಯವೇ ದೇವರಕಲ್ಪನೆಯ ಉಗಮಸ್ಥಾನ.

(೫) ಸೂರ್ಯ, ಚಂದ್ರರು ಆಕಾಶದಲ್ಲಿ ತಿರುಗುತ್ತಿದ್ದಾರೆ ಮೇಲೆ ಕಾಣುವ ನೀಲವರ್ಣದ ಆಕಾಶವು ಅದೇನಿರಬಹುದು? ಅದರ ಆಚೆ ಯಾರಿರಬಹುದು? ಅವುಗಳನ್ನು ನಡೆಸುತ್ತಿರುವವರು ಯಾರು? ಎಂದು ಬಾಲ್ಯಾವಸ್ಥೆಯ ಮನುಷ್ಯರು ಪ್ರಶ್ನೆಮಾಡಿ ತಮ್ಮ ತಮ್ಮ ತಿಳಿವಳಿಕೆಯಪ್ರಕಾರ ಅವುಗಳ ಉತ್ತರಗಳನ್ನು ಕೊಟ್ಟರು.

ಪಂಡಿತ ಮ್ಯಾಕ್ಸ ಮುಲ್ಲರವರು ಈ ಮೇಲಿನ ತಮ್ಮ ಸಿದ್ಧಾಂತಗಳ ಪ್ರಕಾರ ಅಗ್ನಿ ಎಂಬ ಸೃಷ್ಟ ಪದಾರ್ಥವು ಉತ್ಕ್ರಾಂತಿ ತತ್ತ್ವದಂತೆ ಕೊನೆಗೆ ದೇವತ್ವವನ್ನು ಹೊಂದಿದ ವಿಚಾರವಾಗಿ ಅನೇಕ ಜನಾಂಗಗಳ ಆಚಾರ-ವಿಚಾರಗಳ ಮೇಲಿಂದಲೂ ವೇದದ ಆಧಾರದಿಂದಲೂ ಬಹು ಸಮಂಜಸವಾದ ಪ್ರತಿಪಾದನೆಯನ್ನು ಮಾಡಿದ್ದಾರೆ.



CC-0. Jangamwadi Math Collection, Varanasi. An eGangotri Initiative

## ಆಕಾಶದ ಪ್ರತೀಕವೇ ಲಿಂಗ

ಪಂಡಿತ ಮ್ಯಾಕ್ಸ ಮುಲ್ಲರರವರ ಸರ್ವ ಮಾನ್ಯವಾದ ಮೇಲಣ ಸಿದ್ಧಾಂತಗಳನ್ನು ಅನುಸರಿಸಿಯೇ ಲಿಂಗಪೂಜೆಯ ಇತಿಹಾಸವನ್ನು ಕಂಡುಹಿಡಿಯುವುದು ಯುಕ್ತವಾಗಿದೆ. ಮನುಷ್ಯ ಪ್ರಾಣಿಯು ಬಾಲ್ಯಾವಸ್ಥೆಯಲ್ಲಿದ್ದಾಗ ಆಕಾಶಕ್ಕೆ ಪ್ರತಿಯಾಗಿ ಮಾಡಿಕೊಂಡ ಚಿಹ್ನೆವೇ ಲಿಂಗವಾಗಿ ಪರಿಣಮಿಸಿದೆಯೆಂದು ಮೇಲಣ ಸಿದ್ಧಾಂತಗಳ ಪ್ರಕಾರ ತಿಳಿಯಬೇಕಾದುದು ವಿಹಿತ. ಈ ನನ್ನ ವಿಚಾರಸರಣಿಯನ್ನು ಸಮರ್ಥಿಸುವ ಕೆಲವು ಪ್ರಮಾಣಗಳನ್ನು ಮಾತ್ರ ಇಲ್ಲಿ ಕೊಟ್ಟಿದ್ದೇನೆ.

(೧) ಲಿಂಗವನ್ನು ಆರಂಭದಲ್ಲಿ ಈಗಿನಂತೆ ಪೀಠ, ಜಲಧಾರಿ, ಗೋಳುಕಗಳೆಂಬ ಮೂರು ಭಾಗ ವಿಶಿಷ್ಟವಾಗಿ ಮಾಡುತ್ತಿರಲಿಲ್ಲ. ಕೇವಲ ಗೋಳುಕವೊಂದೇ ಇರುತ್ತಿದ್ದಿತು. ಸಮುದ್ರದ ಅಥವಾ ನದಿಯ ದಂಡೆಯಲ್ಲಿ ಮಳಲ ಲಿಂಗವನ್ನು ಮಾಡಿ ಪೂಜಿಸುತ್ತಿದ್ದುದೇ ಲಿಂಗಪೂಜೆಯ ಇತಿಹಾಸದಲ್ಲಿ ಮೊದಲನೆಯದು. ಆ ಲಿಂಗವು ಕೇವಲ ಗೋಳಾಕಾರವಾಗಿಯೇ ಇರುತ್ತಿದ್ದಿತು. ಅದೇ ಸರ್ವ ಶ್ರೇಷ್ಠವಾದ ಲಿಂಗವೆಂತಲೂ ಬಹುಜನರು ಈಗಲೂ ತಿಳಿಯುತ್ತಿದ್ದಾರೆ.

(೨) ಮನುಷ್ಯನು ಮೊದಲು ಆಕಾಶವನ್ನು ನೋಡಿದಾಗ ಅದು ಎಲ್ಲಿಂದ ಬಂದಿತು? ಹೇಗೆ ನಿಂತಿದೆ? ಎಲ್ಲಿಯವರೆಗಿದೆ? ಎಂದು ಆಶ್ಚರ್ಯಪಟ್ಟು ಪ್ರಶ್ನೆ ಮಾಡಿ ತನ್ನ ತಿಳುವಳಿಕೆಯಂತೆ ಉತ್ತರಕೊಟ್ಟು ಸಮಾಧಾನ ಹೊಂದಿರುವುದು ಸ್ವಾಭಾವಿಕವಷ್ಟೆ. ಆಕಾಶದಿಂದಲೇ ನೀರು ಬರುವುದನ್ನು ಕಂಡನು. ತನಗೆ ಬೇಕಾದ ನೀರು, ಬೆಳಕುಗಳನ್ನು ನೋಡಿ ಮತ್ತು ಕೇಳಿ ಭಯಗೊಂಡುದು ಸ್ವಾಭಾವಿಕವಷ್ಟೆ. ಆಗ ಆಕಾಶವು ತಮ್ಮ ಮೇಲೆ ಸಿಟ್ಟಾಯಿತೆಂದು ಬಾಲ್ಯಾವಸ್ಥೆಯ ಜನರು ತಿಳಿದುದೂ ಸ್ವಾಭಾವಿಕ. ಹೀಗೆ ತಮ್ಮ ಸುಖ, ದುಃಖಗಳಿಗೆಲ್ಲಾ ಆಕಾಶವೇ ಕಾರಣವಾಗಿದೆಯೆಂದು ತಿಳಿದು ಅದನ್ನು ಬೇಡಿಕೊಳ್ಳುವ ಕಲ್ಪನೆಯುಂಟಾಯಿತು.

(೩) ಮನುಷ್ಯನು ಈಗಲೂ ಕೂಡಾ ದೇವರು ಮೇಲಿದ್ದಾನೆಂದೇ ತಿಳಿದು ಆಕಾಶದ ಕಡೆಗೆ ಕೈಮಾಡಿ ಬೇಡಿಕೊಳ್ಳುವ ರೂಢಿಯದೆ. ದೇವರು ಮೇಲಿದ್ದಾನೆಂದು ತಿಳಿದೇ ಗುಡ್ಡ ಪರ್ವತ ಮೊದಲಾದ ಉನ್ನತ ಪ್ರದೇಶಗಳಲ್ಲಿ ದೇವಾಲಯಗಳನ್ನು ಕಟ್ಟುವ ರೂಢಿ ಬಂದಿತು.

(೪) ಕೈಗೆ ಸಿಲುಕದ ಆಕಾಶದಂತೆಯೇ ಗೋಲಾಕಾರವಾಗಿ ಒಂದು ಗುರುತನ್ನು ಮಾಡಿಕೊಂಡು ಅದನ್ನು ಪೂಜಿಸಲು ಮೊದಲು ಪ್ರಾರಂಭಿಸಿದರು. ಆಕಾಶವು ಜಲವಿಶಿಷ್ಟವಾಗಿರುತ್ತದೆಂಬ ತಿಳುವಳಿಕೆಯಿಂದಲೇ ಜಲಾಶಯಗಳ ದಂಡೆಯಲ್ಲಿ ಲಿಂಗವನ್ನು ಮಾಡಿ ಪೂಜಿಸಲಾರಂಭಿಸಿದರು.

(೫) ಮೊಹೆಂ ಜೋದಾರೊ ಶೋಧದಲ್ಲಿ ದೊರಕಿದ ಒಂದು ಲಿಂಗವು ಕೇವಲ ಗೋಳಾಕಾರವಾಗಿದೆಯೇ ವಿನಾ ಅದಕ್ಕೆ ಪೀಠ, ಜಲಾಧಾರಿಗಳಿಲ್ಲ.

(೬) ಮಳಲ ಮತ್ತು ಮಣ್ಣಿನ ಲಿಂಗಪೂಜೆಯು ಬಹುಕಾಲ ನಡೆದನಂತರವೇ ಅವು ಯಾವಾಗಲೂ ಪೂಜೆಗೆ ಬರುವುದಿಲ್ಲವೆಂದು ಕಲ್ಲಿನ ಲಿಂಗಗಳನ್ನು ಮಾಡಿ ಪೂಜಿಸುವ



CC-0. Jangamwadi Math Collection, Varanasi. An eGangotri Initiative

ಪದ್ಧತಿಯುಂಟಾಗಿರಬೇಕು. ಆಗ ಅಭಿಷೇಕದ ನೀರು ಹೋಗಲಿಕ್ಕಾಗಿಯೇ ಜಲಾಧಾರಿಯು ಮಾಡಲ್ಪಟ್ಟಿತೆಂದು ತಿಳಿಯುವುದು ಸಮಂಜಸವಾದುದು. ಹೀಗೆ ಲಿಂಗಪೂಜೆಯು ಚಿಹ್ನದಂತೆ ಅದರ ರೂಪದಲ್ಲಿಯೂ ಸುಧಾರಣೆಯಾಗುತ್ತಾ ಬಂದಿತು.

(೭) ಲಿಂಗದ ಮೇಲೆ ನಿರಂತರ ನೀರು ಬೀಳುತ್ತಿರುವಂತೆ ಅದರ ಮೇಲೆ ಜಲಕುಂಭ ವನ್ನು ಕಟ್ಟುವ ರೂಢಿಯು ಈಗಲೂ ಇದೆಯಷ್ಟೆ. ಆಕಾಶದಲ್ಲಿ ನೀರು ನಿರಂತರ ಇದ್ದೇ ಇರುವುದ ರಿಂದ ತಾವು ಮಾಡಿದ ಆಕಾಶವೆಂಬ ಲಿಂಗದ ಮೇಲೂ ನೀರು ನಿರಂತರ ಇರಲೆಂದೇ ಈ ಜಲ ಕುಂಭವನ್ನು ಕಟ್ಟಿದರು.

(೮) ಮಳೆ ಬಾರದಿದ್ದಾಗ ಲಿಂಗವನ್ನು ಯಾವಾಗಲೂ ನೀರಲ್ಲಿ ಮುಳುಗಿಸಿಟ್ಟರೆ ಮಳೆ ಬರುತ್ತದೆಂಬ ಜನರ ಈಗಿನ ಕಲ್ಪನೆಯು ಕೂಡಾ ಆಕಾಶವನ್ನೇ ಲಿಂಗವನ್ನಾಗಿ ಮಾಡಿ ಕೊಂಡಿದ್ದಾರೆಂಬುದಕ್ಕೆ ಒಂದು ದೃಷ್ಟಾಂತ.

(೯) ಅಭಿಷೇಕವು ಹೆಚ್ಚಿದಷ್ಟು ಲಿಂಗಕ್ಕೆ ತೃಪ್ತಿಯೆಂಬ ಜನರ ಈಗಿನ ಭಾವನೆಯು ಕೂಡಾ ಆಕಾಶದ ಪ್ರತೀಕವೇ ಲಿಂಗವೆಂಬುದನ್ನು ಸೂಚಿಸುತ್ತದೆ.

(೧೦) ವೈಶೇಷಿಕ ದರ್ಶನದಲ್ಲಿ ಆಕಾಶಕ್ಕೆ ಲಿಂಗ ಎಂದು ಹೇಳಿದೆ. (ನಿಷ್ಕ್ರಮಣಂ ಪ್ರವೇಶ ನ ಮಿತ್ಯಾ ಕಾಶಸ್ಯ ಲಿಂಗಂ। ೨-೧-೧೦)

(೧೧) ಶ್ರೀರಾಮ, ಕೃಷ್ಣ, ಇವರು ಆರ್ಯ ಜಾತಿಯ ಕೆಂಪು ವರ್ಣದವರಿದ್ದರೂ ಅವರನ್ನು ನೀಲವರ್ಣದವರನ್ನಾಗಿ ವರ್ಣಿಸಿರುವುದೇಕೆ? ದೇವರು ಆಕಾಶ ಬಣ್ಣದವನಿದ್ದಾನೆಂದೂ ಇವರು ದೇವರೆಂದೂ ತಿಳಿದುದೇ ಮುಖ್ಯ ಕಾರಣ.

(೧೨) ಜಗತ್ತಿನ ಎಲ್ಲಾ ಭಾಗಗಳಲ್ಲಿಯೂ ಲಿಂಗಪೂಜೆಯು ಇದ್ದೇ ಇದ್ದಿತೆಂಬುದಕ್ಕೆ ಈ ಕೆಳಗಿನ ಕೆಲವು ಆಧಾರಗಳೇ ಸಾಕ್ಷಿ. ಆಕಾಶವಿಲ್ಲದ ಭೂಭಾಗದ ಮೇಲೆಯೇ ಮನುಷ್ಯನ ವಾಸವಲ್ಲವೆ? ಎಂದು ಮೇಲೆ ಎಲ್ಲ ಕಡೆಗೂ ಮನುಷ್ಯನ ಬಾಲ್ಯಾವಸ್ಥೆಯಲ್ಲಿ ಲಿಂಗಪೂಜೆಯುಂಟಾ ದುದು ಸ್ವಾಭಾವಿಕ.

ಕಾಶಿಯ ಶ್ರೀ ಬಾಬು ಶಿವಪ್ರಸಾದರು "ಪೃಥ್ವೀ ಪ್ರದಕ್ಷಿಣೆ" ಎಂಬ ತಮ್ಮ ಗ್ರಂಥದಲ್ಲಿ ಲಿಂಗಪೂಜೆಯು ಯಾವ ಯಾವ ದೇಶಗಳಲ್ಲಿ ಯಾವ ಯಾವ ಪ್ರಕಾರ ನಡೆಯುತ್ತಲಿದೆಯೆಂಬು ದನ್ನು ಬಹು ವಿಸ್ತಾರವಾಗಿ ತಿಳಿಸಿದ್ದಾರೆ. ಕೆಲವು ಮುಖ್ಯ ಸಂಗತಿಗಳನ್ನು ಇಲ್ಲಿ ಕೊಡಲಾಗಿದೆ—

(೧) ಮಿಸರ ದೇಶದಲ್ಲಿ "ಆಸಿರಿಸ" ಮತ್ತು "ಆಯಿಸಿಸ" ಎಂಬ ಲಿಂಗ. (೨) ಗ್ರೀಸ ದೇಶದಲ್ಲಿ "ಬೆಸಕ್" ಮತ್ತು "ಪಿಯಸಸ್" ಎಂಬ ಲಿಂಗ. (೩) ಸ್ಕಾಟಲಂಡದ ಗ್ಲಾಸಗೋ ಪಟ್ಟಣದಲ್ಲಿ ಸುವರ್ಣ ವಿಶಿಷ್ಟ ಲಿಂಗ. (೪) ಆಸ್ಟ್ರಿಯಾ-ಹಂಗೇರಿಯಲ್ಲಿ "ತಂತ್ರಿಸ್ವಕ" ಎಂಬ ಲಿಂಗ. (೫) ಅಸೀರಿಯಾ ದೇಶದ ಬಿಲಸ ನಗರದಲ್ಲಿ ಮುನ್ನೂರು ಘನ ಹಸ್ತ ಪ್ರಮಾಣವುಳ್ಳ ಮಹಾಲಿಂಗ. (೬) ಅರಬಸ್ಥಾನದಲ್ಲಿ "ಸಗೆ ಅನಬದ್" (ಮಕ್ಕೇಶ್ವರ) ಎಂಬ ಲಿಂಗ ಇದಕ್ಕೆ ಮುಸಲ್ಮಾನರು ಶ್ರದ್ಧಾಪೂರ್ವಕ ಚುಂಬನ ಕೊಡುತ್ತಿದ್ದಾರೆ. (೭) ಇರಾಣದಲ್ಲಿ



CC-0. Jangamwadi Math Collection, Varanasi. An eGangotri Initiative

ಜ್ವಾಲಾಮಯ ಲಿಂಗ. (೮) ಪೇರು ದೇಶದಲ್ಲಿ ಪಾರ್ಥಿವೇಶ್ವರ ಲಿಂಗ. (೯) ಅಮೇರಿಕೆಯ "ಪೆಂಬ್ರುಕೊ" ಪಟ್ಟಣದಲ್ಲಿ ದ್ವಿಮುಖ ಲಿಂಗ. (೧೦) ಅಮೇರಿಕೆಯ ಟೆನ್ಸಿ ಪಟ್ಟಣದಲ್ಲಿ ಒಂದು ಘನಲಿಂಗ. ಹೀಗೆ ಪ್ರಪಂಚದ ಎಲ್ಲ ಭಾಗಗಳಲ್ಲಿಯೂ ಈಗಲು ಕೂಡಾ ಲಿಂಗಪೂಜೆಯು ಯಾವುದಾದರೊಂದು ರೀತಿಯಲ್ಲಿ ಅತ್ಯಲ್ಪ ಪ್ರಮಾಣದಿಂದಲಾದರೂ ಇದ್ದೇ ಇದೆ.

(೧೩) ಮೂರ್ತಿಭಂಜಕರೆಂದು ಬಿರುದು ತೊಟ್ಟಿರುವ ಮುಸಲ್ಮಾನರು ಕೂಡಾ ಆಕಾಶದ ಪ್ರತೀಕವನ್ನು ಈಗಲೂ ಇಟ್ಟುಕೊಂಡಿದ್ದಾರೆ. ಅವರ ಮಸೀದಿಯ ಮೇಲ್ಭಾಗವು ಆಕಾಶದಂತೆಯೇ ಗೋಲಾಕಾರವಾಗಿರುವದೇಕೆ? ಆ ಗುಮುಟವೇ ಅವರ ವೈಶಿಷ್ಟ್ಯವಾಗಿರುವುದೇಕೆ? ಅದರಮೇಲೆ ಚಂದ್ರ ಮತ್ತು ನಕ್ಷತ್ರಗಳ ಗುರುತು ಇರುವುದೇಕೆ? ಆಕಾಶವೇ ಆ ಗುಮುಟ. ಅಲ್ಲಿರುವ ಚಂದ್ರ-ನಕ್ಷತ್ರಗಳೇ ಗುಮುಟಗಳ ಮೇಲಿರುವ ಚಂದ್ರ-ನಕ್ಷತ್ರಗಳ ಚಿಹ್ನ. ಅವರು ಹಾಕಿಕೊಳ್ಳುವ ಟೊಪ್ಪಿಗೆ (ಶಿರೋಭೂಷಣ) ಕೂಡಾ ಗೋಲಾಕಾರವಾಗಿಯೇ ಇರುವುದು. ಅದರ ಮೇಲೆ ಚಂದ್ರ-ನಕ್ಷತ್ರಗಳ ಗುರುತು.

(೧೪) ಮಹಮ್ಮದೀಯರಲ್ಲಿಯೇ ಹೀಗಿದೆಯೆಂದಲ್ಲ; ವೇದಕಾಲದಲ್ಲಿ ಪುಲಸ್ತ್ಯರು (ಪ್ಯಾಲಿಸ್ಟಾಯಿನದ ಪೂರ್ವಭಾಗದವರು) ಲಿಂಗಪೂಜಕರಾಗಿದ್ದರು. ಅವರು ಕಪರ್ದ (ಶಿವಲಿಂಗದಂತಹ) ನೂಲಿನ ಶಿರೋಭೂಷಣವನ್ನು ಧರಿಸುತ್ತಿದ್ದರು. ಸ್ತ್ರೀಪುರುಷರು ತಲೆ ಕೂದಲುಗಳನ್ನು ಲಿಂಗಾಕಾರವಾಗಿ ಕಟ್ಟಿಕೊಳ್ಳುತ್ತಿದ್ದರು. ಶ್ರೀ. ಸುವಿಮಲಚಂದ್ರ ಸರಕಾರ ಎಂ. ಎ. ಡಿ. ಫಿಲ ಇವರು ವೇದಕಾಲದ ಶಿರೋಭೂಷಣವನ್ನು ಕುರಿತು ಒಂದು ಸಂಶೋಧನಾತ್ಮಕವಾದ ಲೇಖನವನ್ನು ಕ್ರಿ. ಶ. ೧೯೩೩ ನೆಯ ಇಸವಿ ಗಂಗಾಮಾಸಿಕದ ಪುರಾತತ್ವಾಂಕದಲ್ಲಿ ಬಹು ವಿವರವಾಗಿ ಬರೆದಿದ್ದಾರೆ.

ಇವೇ ಮೊದಲಾದ ಆಧಾರಗಳ ಮೇಲಿಂದ ಬಾಲ್ಯಾವಸ್ಥೆಯ ಮನುಷ್ಯರು ಆಕಾಶದ ಪ್ರತೀಕವನ್ನು ಪೂಜಿಸಿದುದೇ ಲಿಂಗಪೂಜೆಯ ಇತಿಹಾಸದಲ್ಲಿ ಪ್ರಥಮಾಧ್ಯಾಯವೆಂದು ಹೇಳಬಹುದು. ಪಂಡಿತ ಮ್ಯಾಕ್ಸ ಮುಲ್ಲರರವರು ಭೌತಿಕ ಧರ್ಮ (Physical Religion) ಎಂಬ ವ್ಯಾಖ್ಯಾನಮಾಲೆಯ ಮೊದಲನೆಯ ವ್ಯಾಖ್ಯಾನದಲ್ಲಿ ಹೀಗೆ ಹೇಳಿದ್ದಾರೆ—

"ಮನುಷ್ಯನು ಮಾಡುತ್ತಿರುವ ಪೂಜೆಗಳಲ್ಲಿ ಮುಖ್ಯವಾಗಿ ಮೂರು ಅಂತಸ್ತುಗಳಿವೆ. ಒಂದನೆಯದು ಸೂರ್ಯ, ಚಂದ್ರ, ಪರ್ವತ, ನದಿ, ವೃಕ್ಷ ಮೊದಲಾದ ಸೃಷ್ಟ ಪದಾರ್ಥಗಳ ಪೂಜೆ. ಎರಡನೆಯದು ಪಿತೃ ಪೂಜೆ ಅಥವಾ ವಿಭೂತಿಪೂಜೆ—ಎಂದರೆ ತಮ್ಮ ಹಿಂದಿನವರ ಅಥವಾ ಶೂರರ ಪೂಜೆ. ಮೂರನೆಯದು ಆಧ್ಯಾತ್ಮಿಕ ಪೂಜೆ—ಎಂದರೆ ಅವ್ಯಕ್ತನಾದ ಪರಮಾತ್ಮನ ಪೂಜೆ.

ಈ ಮೂರು ಪೂಜೆಗಳ ಅಂತಸ್ತುಗಳು ಮನುಷ್ಯಪ್ರಾಣಿಗೆ ಒಂದರಿಂದೊಂದು ಕ್ರಮವಾಗಿಯೇ ಉಂಟಾಗುತ್ತವೆ. ಆದರೆ ಒಂದರಲ್ಲಿ ಇನ್ನೊಂದರ ಕಲ್ಪನೆಯು ಇರುವುದೇ ಇಲ್ಲವೆಂದು ತಿಳಿಯಬಾರದು. ಒಂದು ಜನಾಂಗವು ಕೇವಲ ಸೃಷ್ಟ ಪದಾರ್ಥಗಳ (ಭೌತಿಕ) ಪೂಜೆಯನ್ನು, ಇನ್ನೊಂದು ಜನಾಂಗವು ಪಿತೃಪೂಜೆಯನ್ನು, ಮತ್ತೊಂದು ಜನಾಂಗವು ಆಧ್ಯಾತ್ಮಿಕ ಪೂಜೆಯನ್ನು



CC-0. Jangamwadi Math Collection, Varanasi. An eGangotri Initiative

ಮಾಡುತ್ತದೆಂದು ಹೇಳಲಿಕ್ಕಾಗದು. ಜಗತ್ತಿನ ಎಲ್ಲಾ ಜನಾಂಗಗಳಲ್ಲಿಯೂ ಈ ಮೂರೂ ಪೂಜೆಗಳ ಅಂಶಗಳು ಇದ್ದೇ ಇರುತ್ತವೆ. ಆದರೆ ಒಂದು ಜನಾಂಗವು ಇವುಗಳಲ್ಲಿ ಯಾವುದಾದ ರೊಂದನ್ನು ಮುಖ್ಯವಾಗಿಟ್ಟುಕೊಂಡಿರುತ್ತದೆ. ಆಧ್ಯಾತ್ಮಿಕ ಪೂಜೆಯು ಜಗತ್ತಿನ ಅನೇಕ ಜನಾಂಗ ಗಳಿಗೆ ಇನ್ನು ಮುಂದೆಯೇ ಬರತಕ್ಕದ್ದಾಗಿದೆ."

## ಲಿಂಗವು ಶಿವನಾಗಿ ಪರಿಣಮಿಸಿತು

ಆಕಾಶದ ಗುರುತೇ ಮೊದಲು ಲಿಂಗವಾಗಿ ಪೂಜೆಗೊಂಡಿತು. ಪಂಡಿತ ಮ್ಯಾಕ್ಸ ಮುಲ್ಲರ ರವರ ಸಿದ್ಧಾಂತದ ಪ್ರಕಾರ ಇದು ಲಿಂಗಪೂಜೆಯ ಮೊದಲನೆಯ ಅಂತಸ್ತು. ಎಂದರೆ ಭೌತಿಕ ಪೂಜೆ. ಇದೇ ಮುಂದೆ ಪಿತೃ ಅಥವಾ ವಿಭೂತಿ ಪೂಜೆಯ ಎರಡನೆಯ ಅಂತಸ್ತಿಗೆ ಬಂದಾಗ ಶಿವರೂಪವನ್ನು ತಾಳಿತು. ಶಿವನ ಸಂಬಂಧವಾದ ಈ ಕೆಳಗಿನ ಸಂಗತಿಗಳು ಲಿಂಗದ ಕಲ್ಪನೆಗೆ ಮೂಲವಾದ ಆಕಾಶವನ್ನೇ ಸೂಚಿಸತಕ್ಕವುಗಳಾಗಿವೆಯೆಂಬುದು ವಾಚಕರಿಗೆ ವೇದ್ಯವಾಗಬಹುದು.

(೧) ಶಿವನಿಗೆ ಸೂರ್ಯ, ಚಂದ್ರ ಮತ್ತು ಅಗ್ನಿ ಎಂಬ ಮೂರು ಕಣ್ಣುಗಳಿವೆಯೆಂದು ಹೇಳುತ್ತಿದ್ದಾರಷ್ಟೆ. ಇವು ಆಕಾಶದಲ್ಲಿಯೇ ಇರತಕ್ಕವುಗಳಷ್ಟೆ. ಸೂರ್ಯ, ಚಂದ್ರ ಮತ್ತು ಅಗ್ನಿ (ಎಂದರೆ ಮೇಘಗಳ ತಿಕ್ಕಾಟದಿಂದುಂಟಾಗುವ ವಿದ್ಯುತ್) ಇವು ಮೂರೂ ಪ್ರಕಾಶಗಳು ಆಕಾಶ ದಲ್ಲಿರುವುದರಿಂದ ಶಿವನಿಗೆ ಮೂರು ಕಣ್ಣುಗಳೆಂದು ಹೇಳಿದರು.

(೨) ಶಿವನು ದಿಗಂಬರನೆಂದು ಹೇಳುತ್ತಿದ್ದಾರಲ್ಲವೆ? ದಿಕ್ಕುಗಳೇ ಆತನಿಗೆ ಬಟ್ಟೆ ಗಳಂತೆ. ಆಕಾಶಕ್ಕೆ ಬಟ್ಟೆಯನ್ನು ಉಡಿಸುವದು ಹೇಗೆ? ದಶದಿಕ್ಕುಗಳೇ ಅದರ ಬಟ್ಟೆಗಳೆಂದು ಹೇಳಿದುದೇ ವಿಹಿತವಲ್ಲವೆ?

(೩) ಶಿವನಿಗೆ ವ್ಯೋಮಕೇಶನೆಂದು ಹೇಳುವುದೇಕೆ? ಆಕಾಶವೇ ಆತನ ತಲೆಗೂದಲು. ಆತನು ಗಂಗಾಧರನಲ್ಲವೆ? ನೀರನ್ನು ಧರಿಸಿರುವುದು ಆಕಾಶವಲ್ಲವೆ? ಅಂತೆಯೆ ಈ ಹೆಸರುಗಳು ಆಕಾಶಕ್ಕೇನೇ ಅನ್ವಯಿಸತಕ್ಕವುಗಳಾಗಿವೆ.

(೪) ಪಾರ್ವತಿಪತಿಯೆಂದು ಶಿವನಿಗೆ ಹೇಳುತ್ತಿದ್ದಾರಷ್ಟೆ. ಪಾರ್ವತಿ ಎಂದರೆ ಪೃಥ್ವಿ. ಪೃಥ್ವಿಗೆ ಪತಿಯು ಆಕಾಶವಲ್ಲವೆ? ಭೂಮಿಯನ್ನು ತಾಯಿಯೆಂದೂ ಆಕಾಶವನ್ನು ತಂದೆಯೆಂದೂ ಜನರು ಬಹು ಕಾಲದಿಂದಲೂ ತಿಳಿದುಕೊಳ್ಳುತ್ತಾ ಬಂದಿದ್ದಾರೆ.

(೫) ಶಿವನ ಮಗನು ವೀರಭದ್ರನಷ್ಟೆ. ಮೇಘಗರ್ಜನೆ (ಸಿಡಿಲು)ಯೇ ವೀರಭದ್ರ. ಈ ಗರ್ಜನೆಯು ಆಕಾಶದಲ್ಲಿಯೇ ಸಂಭವಿಸುತ್ತದಷ್ಟೆ. ಅಂತೆಯೇ ಶಿವನಿಂದ ಎಂದರೆ ಆಕಾಶದಿಂದ ಸಿಡಿಲು ಬರುವ ಕಾರಣ ವೀರಭದ್ರನು ಶಿವನ ಮಗನೆಂದು ವರ್ಣಿಸಿದರು. ಖಡೆ! ಖಡೆ! ರುದ್ರಾ ವೀರಭದ್ರಾ, ಎಂದು ಈಗಲೂ ವೀರಭದ್ರನ ಜಯಘೋಷಮಾಡುವಾಗ ಹೇಳುವುದನ್ನು ನೋಡಿದರೆ ಸಿಡಿಲಿನ ಶಬ್ದವನ್ನೇ ಅನುಕರಣ ಮಾಡಿ ವೀರಭದ್ರನಿಗೆ ಹೇಳುತ್ತಿದ್ದಾರೆಂದು ಸ್ಪಷ್ಟವಾಗುತ್ತದೆ.



CC-0. Jangamwadi Math Collection, Varanasi. An eGangotri Initiative

ಈ ಪ್ರಕಾರ ಅನೇಕ ದೃಷ್ಟಾಂತಗಳ ಮೇಲಿಂದ ಆಕಾಶವೇ ಶಿವನೆಂಬ ಹೆಸರು ಹೊಂದಿ ಎರಡನೆಯದಾದ ವಿಭೂತಿಪೂಜೆಯ ಅಂತಸ್ತಿಗೆ ಬಂದಿತು. ಲಿಂಗಕ್ಕೂ ಶಿವನಿಗೂ ಅಭೇದ ವೆಂಬುದು ನಿರ್ವಿವಾದವಾದ ವಿಷಯವಾಗಿರುವುದರಿಂದ ಆ ವಿಚಾರವಾಗಿ ಇಲ್ಲಿ ಪ್ರಸ್ತಾಪಿಸುವ ಕಾರಣವೇ ಇಲ್ಲವಷ್ಟೆ.

## ಲಿಂಗವು ಪರಮಾತ್ಮವಾದುದು

ಆಕಾಶವೇ ಲಿಂಗವಾಯಿತು. ಆ ಲಿಂಗವೇ ಶಿವನಾದನು. ಆಮೇಲೆ ಆ ಶಿವನೇ ಪರಬ್ರಹ್ಮ, ಪರಮಾತ್ಮ, ದೇವರು, ಎಂಬ ಅನೇಕ ಹೆಸರುಗಳನ್ನು ಹೊಂದಿದನು. ಲಿಂಗದ ಭೌತಿಕ ಪೂಜೆಯು ವಿಭೂತಿ ಪೂಜೆಯಲ್ಲಿ ಶಿವನಾಗಿ ಆಧ್ಯಾತ್ಮಿಕ ಪೂಜೆಯಲ್ಲಿ ಸರ್ವವ್ಯಾಪಿ ಪರಮಾತ್ಮನ ಪೂಜೆಯಾಯಿತು. ಆಕಾಶವು ಸರ್ವವ್ಯಾಪಿಯಷ್ಟೆ. ಈ ಕೆಳಗಿನ ಕೆಲವು ಉಕ್ತಿಗಳಿಂದ ಲಿಂಗವೇ ಪರಮಾತ್ಮನೆಂದು ತಿಳಿಯಲ್ಪಟ್ಟುದು ಸ್ಪಷ್ಟವಾಗುತ್ತದೆ.

"ತದೇವ ಲಿಂಗಂ ಪ್ರಣವಂ ಸಾರ್ವ ಕಾಯಿಕಮ್"

—ಶಿವಪುರಾಣ

"ಎಲ್ಲ ಇಚ್ಛೆಗಳನ್ನೂ ಪೂರ್ತಿಗೊಳಿಸುವ ಓಂಕಾರ ಪ್ರಣವವೇ ಲಿಂಗವು."

"ಓಂ ಇತ್ಯೇಕಾಕ್ಷರಂ ಬ್ರಹ್ಮ"

—ಭಗವದ್ಗೀತೆ

"ಓಂಕಾರವೇ ಬ್ರಹ್ಮ"

ಲಿಂಗವೆಂದರೆ ಪರಬ್ರಹ್ಮವೆಂಬುದಾಗಿ ಹೇಳಿದ ಅಸಂಖ್ಯ ಉಕ್ತಿಗಳೂ ಬಹುಜನರ ಈಗಿನ ದೃಢವಾದ ಆಚಾರ–ವಿಚಾರಗಳೂ ಸರ್ವಶ್ರುತವಿರುವುದರಿಂದ ಆ ಸಂಗತಿಗಳನ್ನು ಇಲ್ಲಿ ಪ್ರಸ್ತಾಪಿಸಬೇಕಾದುದಿಲ್ಲವಷ್ಟೆ.

ಈ ವರೆಗಿನ ಬಹು ಸಂಕ್ಷಿಪ್ತವಾದ ವಿವೇಚನೆಯಿಂದ ಮನುಷ್ಯಜಾತಿಗೆ ಲಿಂಗದ ಕಲ್ಪನೆಯು ಹೇಗೆ ಉಂಟಾಯಿತು, ಅದು ಉತ್ಕ್ರಾಂತಿ ತತ್ತ್ವದಂತೆಯೇ ಹೇಗೆ ವಿಕಾಸ ಹೊಂದಿತು ಎಂಬಾಶಗಳು ಕುಶಲ ವಾಚಕರಿಗೆ ವೇದ್ಯವಾಗಿರಬಹುದು. ಈ ವರೆಗೆ ಐತಿಹಾಸಿಕ ದೃಷ್ಟಿಯಿಂದ ಆಲೋಚಿಸಿದವರ ವಿಚಾರಸರಣಿಯು ಏಕೆ ತಪ್ಪಾದುದೆಂಬುದನ್ನು ಪುರಾಣಗಳಲ್ಲಿ ಉಕ್ತವಾದ ಕಥೆಯ ರಹಸ್ಯಾರ್ಥವೇನೆಂಬುದನ್ನು ಸ್ವಲ್ಪ ಯೋಚಿಸೋಣ.

(೧) ಯೂಪ ಸ್ತಂಭವೇ ಲಿಂಗವೆಂದು ತಿಳಿಯುವುದು ಸರಿಯಲ್ಲ. ಏಕೆಂದರೆ ಲಿಂಗ ಪೂಜೆಯು ಪಶುಯಜ್ಞವು ನಿಂತನಂತರ ಪ್ರಾರಂಭವಾಗಿಲ್ಲ. ಯಜ್ಞಸಂಸ್ಕೃತಿಯನ್ನು ಈ ದೇಶಕ್ಕೆ ತಂದ ಆರ್ಯರು ಈ ದೇಶಕ್ಕೆ ಬರುವ ಪೂರ್ವದಲ್ಲಿಯೇ ಇಲ್ಲಿ ಲಿಂಗಪೂಜೆಯಿದ್ದಿತೆಂಬುದಕ್ಕೆ ಮೊಹಾಜೊದಾರೋದಲ್ಲಿ ದೊರೆತ ಲಿಂಗಗಳೇ ಪ್ರಬಲ ದೃಷ್ಟಾಂತಗಳಾಗಿವೆ.

ಋಗ್ವೇದದ ಏಳನೆಯ ಮಂಡಲ ೨೧ ನೆಯ ಸೂಕ್ತ ೫ ನೆಯ ಋಕ್ಕಿನಲ್ಲಿ "ಶಿಶ್ನ ದೇವ ಪೂಜಕರಿಂದ ನಮ್ಮ ಯಜ್ಞಕ್ಕೆ ವಿಘ್ನ ಬಾರದಿರಲಿ." ಎಂದು ಪ್ರಾರ್ಥಿಸಲ್ಪಟ್ಟದ್ದನ್ನು ನೋಡಿದರೆ, ಆಗ ಲಿಂಗಪೂಜೆಯಿದ್ದಿತೆಂದು ಸ್ಪಷ್ಟವಾಗುತ್ತದೆ.



CC-0. Jangamwadi Math Collection, Varanasi. An eGangotri Initiative

(೨) ಹಿಮಾಲಯವನ್ನು ಲಿಂಗವನ್ನಾಗಿ ಮಾಡಿಕೊಂಡು ಪೂಜಿಸಿದರೆಂತಲೂ ಕೆಲವರು ಹೇಳುವುದುಂಟು. ಅದು ಲಿಂಗಪೂಜೆಯ ಪ್ರಥಮಾವಸ್ಥೆಗೆ ಸರಿಬರುವುದಿಲ್ಲ. ಅದು ಹಿಮಾಲಯದಲ್ಲಿರುವ ಭೂತಾನಕ್ಕೆ ಒಡೆಯನಾದ ಭೂತನಾಥ ಶಿವನ ಸಂಬಂಧವಾಗಿ ವಿಭೂತಿ ಪೂಜೆಯು ಪ್ರಾರಂಭವಾದನಂತರ ಹೊಳೆದ ವಿಚಾರ. ಲಿಂಗೋಪಾಸಕರಿಗೆಲ್ಲಾ ಶಿವನು ಒಡೆಯ ನಾಗಿದ್ದನೆಂತಲೂ ಆತನ ರಾಜ್ಯವು ಭೂತಾನವಲ್ಲಿದ್ದಿತೆಂತಲೂ ಕೈಲಾಸವು ಆತನ ವಿಶ್ರಾಂತಿ ಸ್ಥಳವಾಗಿದ್ದಿತೆಂತಲೂ ಪಂಡಿತ ಸಾತವಳೆಕರ ಮೊದಲಾದ ಕೆಲವು ಶೋಧಕರು ಹೇಳುತ್ತಿದ್ದಾರೆ. ಉತ್ಕ್ರಾಂತಿ ತತ್ತ್ವದಂತೆ ಮೊದಲು ಭೌತಿಕಪೂಜೆಯು ಪ್ರಾರಂಭವಾದನಂತರವೇ ಈ ವಿಭೂತಿ ಪೂಜೆಯು ಏರ್ಪಡುವುದರಿಂದ ಲಿಂಗಪೂಜೆಯು ಹಿಮಾಲಯ ಪರ್ವತದ ಪ್ರತೀಕವಾಗಿ ಏರ್ಪಟ್ಟಿ ತೆಂದು ಹೇಳುವುದು ಸರಿಯಲ್ಲ. ಹಿಂದುಸ್ಥಾನವನ್ನು ಬಿಟ್ಟು ಜಗತ್ತಿನ ಬೇರೆ ಭಾಗಗಳಲ್ಲಿಯೂ ಲಿಂಗಪೂಜೆಯ ಕುರುಹುಗಳಿರುವುದರಿಂದ ಆ ಎಲ್ಲಾ ಸ್ಥಳಗಳಲ್ಲಿಯೂ ಹಿಮಾಲಯ ಪರ್ವತ ವಿದ್ದಿತೆಂದು ಹೇಳಲಿಕ್ಕಾಗುವುದಿಲ್ಲ. ಆದರೆ ಆಕಾಶ ಮಾತ್ರ ಇದ್ದೇ ಇದ್ದಿತೆಂದು ಧಾರಳವಾಗಿ ಹೇಳಬಹುದು. ಆದಕಾರಣ ಲಿಂಗವು ಆಕಾಶದ ಪ್ರತೀಕವಾಗಿ ಏರ್ಪಟ್ಟಿತೇ ಅಲ್ಲದೆ ಹಿಮಾಲಯದ ಪ್ರತೀಕವಾಗಿ ಏರ್ಪಡಲಿಲ್ಲ.

(೩) ಲಿಂಗವು ಶಿವನ ಮೂತ್ರೇಂದ್ರಿಯವೆಂದು ಕೆಲವರು ಏಕೆ ಗ್ರಹಿಸಿರುವರೆಂಬ ದನ್ನು ಸ್ವಲ್ಪ ನೋಡೋಣ. ಪುರಾಣಗಳಲ್ಲಿ ಅನೇಕ ಸಂಗತಿಗಳನ್ನು ರೂಪಕವಾಗಿ ತಿಳಿಸಿರುವಂತೆ ಈ ವಿಷಯವನ್ನು ತಿಳಿಸಿದ್ದಾರೆ. ನಿಜಾರ್ಥದ ಜ್ಞಾನವಿಲ್ಲದೆ ಅನೇಕರು ಶಿವನ ಮೂತ್ರೇಂದ್ರಿಯವೇ ಲಿಂಗವೆಂದು ತಿಳಿದು ಲಿಂಗವನ್ನು ಶಿಶ್ನದಂತೆಯೇ ಆಕಾರ ಮಾಡಿ ಪೂಜಿಸಿರುವುದೂ ಉಂಟು. ಅದನ್ನು ನೋಡಿಯೇ ಶಿಶ್ನ ಪೂಜಕರೆಂದು ವೇದಕಾಲದ ಆರ್ಯರು ವೇದದಲ್ಲಿ ಹೇಳಿದ್ದಾರೆ.

ಶಿವಪುರಾಣದ ವಿದ್ಯೇಶ್ವರ ಸಂಹಿತೆಯಲ್ಲಿ ಹೀಗೆ ಹೇಳಿದೆ—

"ಶಿವಶಕ್ತ್ಯೋಶ್ಚ ಚಿಹ್ನಸ್ಯ ಮೇಲನಂ ಲಿಂಗಮುಚ್ಯತೆ"

"ಶಿವ ಮತ್ತು ಶಕ್ತಿ ಈ ಉಭಯತರ ಚಿಹ್ನಗಳ ಸಂಯೋಗಕ್ಕೆ ಲಿಂಗವೆಂದು ಹೇಳುತ್ತಾರೆ."

ಶಿವ ಎಂದರೆ ಪುರುಷ. ಶಕ್ತಿ ಎಂದರೆ ಪ್ರಕೃತಿ. ಇವುಗಳಿಂದ ಕೂಡಿರತಕ್ಕವನೇ ಪರಮಾತ್ಮ ಅಥವಾ ಲಿಂಗ ಎಂಬುದೇ ಮೇಲಣ ವಾಕ್ಯದ ನಿಜಾರ್ಥ. ಪ್ರಕೃತಿಗೆ ಯೋನಿ, ಭಗ, ಎಂಬ ಹೆಸರುಗಳೂ ಇವೆ. ಸ್ತ್ರೀ ಮೂತ್ರೇಂದ್ರಿಯಕ್ಕೂ ಈ ಹೆಸರುಗಳಿವೆ. ತತ್ವಜ್ಞಾನ ಪ್ರತಿಪಾದಿಸು ವಾಗ ಉಪಯೋಗಿಸಲ್ಪಟ್ಟ ಆ ಶಬ್ದಗಳನ್ನು ಪ್ರಾಪಂಚಿಕವಾಗಿ ಅರ್ಥ ಮಾಡಬಹುದೆ?

ಯಜುರ್ವೇದದಲ್ಲಿ ಹೀಗೆ ಹೇಳಿದೆ—

"ತಸ್ಯ ಯೋನಿಂ ಪರಿಪಶ್ಯಂತಿ ಧೀರಾಃ"

ಪರಮಾತ್ಮನ ಯೋನಿಯಾದ ಆ ಮೂಲ ಮಾಯಾ ಎಂದರೆ ಪ್ರಕೃತಿಯ ನಿಜ ಸ್ಥಿತಿ ಯನ್ನು ಧೀರನೇ ಬಲ್ಲನು–ಎಂಬುದು ಅದರ ನಿಜಾರ್ಥ. ಪ್ರಕೃತಿಗೆ ಯೋನಿ ಎಂದ ಮೇಲೆ ಅದೇ ಆಕಾರವನ್ನು ಮಾಡಿ ಪೂಜಿಸಬಹುದೆ?

"ಭಗಸ್ತು ಪ್ರಕೃತಿರ್ಭಗವಾನ್ಶಿವ ಉಚ್ಯತೆ" ಎಂದು ಶಿವಪುರಾಣದಲ್ಲಿ ಹೇಳಿದೆ.



CC-0. Jangamwadi Math Collection, Varanasi. An eGangotri Initiative

ಎಂದರೆ ಪ್ರಕೃತಿಗೆ ಭಗ ಎಂದೂ ಅಧಿಷ್ಠಾತನಾದ ಶಿವನಿಗೆ ಭಗವಾನ್ ಎಂದೂ ಹೇಳಿದ್ದಾರೆ. ಭಗ ಎಂದರೆ ಯೋನಿಯೆಂದೂ ಅದರ ಅಧಿಷ್ಠಾತ ಶಿಶ್ನವೆಂದೂ ಅರ್ಥ ಮಾಡಬಹುದೆ? ಶಿವಪುರಾಣದಲ್ಲಿಯೇ ಲಿಂಗ ಶಬ್ದದ ವಿವರವನ್ನು ಹೀಗೆ ಹೇಳಿದೆ—

" ಲೀನಾರ್ಥಗಮಕಂ ಚಿಹ್ನಂ ಲಿಂಗಮಿತ್ಯಭಿಧೀಯತೆ "

ಲೀನ–ಅವ್ಯಕ್ತವಾಗಿರುವುದರ ಗಮಕ–ಜ್ಞಾನವನ್ನುಂಟು ಮಾಡಿ ಕೊಡುವುದಕ್ಕೆ ಲಿಂಗ ಎಂದು ಹೇಳಬೇಕು. ಶಿವಲಿಂಗವೆಂದರೆ ಶಿವನ ಗುರುತು ಎಂದು ಅದರ ಅರ್ಥವೇ ವಿನಾ ಶಿವನ ಮೂತ್ರೇಂದ್ರಿಯವೆಂದಲ್ಲ.

ಪ್ರಕೃತಿ ಮತ್ತು ಪುರುಷ ಈ ಉಭಯ ತತ್ತ್ವಗಳನ್ನು ಕುರಿತು ರೂಪಕವಾಗಿ ಹೇಳಿರುವ ಅನೇಕ ಸಂಗತಿಗಳ ನಿಜ ಜ್ಞಾನವಿಲ್ಲದೆ ಜಲಧಾರಿಯನ್ನು ಯೋನಿಯೆಂದೂ ಗೋಳುಕವನ್ನು ಶಿಶ್ನವೆಂದೂ ಗ್ರಹಿಸಿ ಆ ಪ್ರಕಾರ ಆಕಾರಗಳನ್ನು ಮಾಡಿ ಪೂಜಿಸಿದ್ದನ್ನು ನೋಡಿ ಲಿಂಗಪೂಜೆಯ ವಿಷಯದಲ್ಲಿ ಅನೇಕರು ತಪ್ಪು ತಿಳಿದುಕೊಂಡುದು ಸ್ವಾಭಾವಿಕವು. ವಿಷ್ಣು ಯೋನಿಯೆಂದೂ ಶಿವನು ಶಿಶ್ನವೆಂದೂ ತಿಳಿದುಕೊಂಡಿರುವುದು ಕೂಡಾ ಹೀಗೆಯೇ ಸರಿ. ವಿಷ್ಣು ರಕ್ಷಣ ಶಕ್ತಿಯುಳ್ಳವನು–ಎಂದರೆ ಭೂಮಿ. ಶಿವನು ಆಕಾಶ. ಮಳೆ ಸುರಿಸುವವನು ಶಿವನು. ಭೂಮಿಯು ಬೆಳೆಯಲು ಆಕಾಶದ ಮಳೆಯೇ ಕಾರಣವಲ್ಲವೆ?

" ತನ್ಮಾತಾ ಪೃಥಿವೀ ತತ್ಪಿತಾ ದ್ಯಾಃ "

ತಾಯಿ ಪೃಥ್ವಿಯು. ತಂದೆ ಆಕಾಶ. ಇವರ ಸಂಪರ್ಕದಿಂದಲೇ ಪ್ರಾಣಿಕೋಟಿಗಳು ಜನ್ಮವೆತ್ತುತ್ತವೆ. ಎಂದಮೇಲೆ ಈ ರೂಪವಾಗಿ ಹೇಳಿದ ಸಂಗತಿಗಳನ್ನು ಪ್ರಾಪಂಚಿಕ ಅರ್ಥದಲ್ಲಿ ಗ್ರಹಿಸಬಹುದೆ?

ಇದೇ ಪ್ರಕಾರ ಮೊದಲು ಹೇಳಿದ ಶಿವಲಿಂಗ ಪತನದ ವಿಷಯವನ್ನು ತತ್ತ್ವಜ್ಞಾನ ದೃಷ್ಟಿಯಿಂದಲೇ ತಿಳಿದುಕೊಳ್ಳಬೇಕು. ದಾರುಕವನವೆಂದರೆ ಬ್ರಹ್ಮರಂಧ್ರ. ಋಷಿಗಣವೆಂದರೆ ಪಂಚಪ್ರಾಣಗಳು. ನಗ್ನರೂಪದ ಶಿವನೆಂದರೆ ವಿಕ್ಷೇಪರಹಿತನು. ಬಾಹ್ಯ ಪ್ರವೃತ್ತಿಗಳೇ ಋಷಿಪತ್ನಿಯರು. ಈ ಪ್ರಕಾರ ರೂಪಕವಾಗಿ ಹೇಳಿದ ಆ ತತ್ತ್ವಜ್ಞಾನದಲ್ಲಿಯ ಶಬ್ದಗಳ ಅಪಾರ್ಥ ಮಾಡಿಕೊಂಡೇ ಲಿಂಗಪೂಜೆಯ ವಿಚಾರದಲ್ಲಿ ತಪ್ಪು ತಿಳುವಳಿಕೆಯುಂಟಾಗುವಂತೆ ಅನೇಕರು ಆಚರಿಸಿದರು. ಈ ವಿಚಾರವಾಗಿ ಇನ್ನೂ ಸಂಶಯವುಳ್ಳವರು ಪಂಡಿತ ಮಾಧವಾಚಾರ್ಯ ಶಾಸ್ತ್ರೀ ಗೌಡ ಇವರು ಬರೆದಿರುವ " ಓಂಕಾರ ಔಕ ಶಿವಲಿಂಗ " ಎಂಬ ಪುಸ್ತಕವನ್ನು ಅಗತ್ಯವಾಗಿ ಓದಬೇಕು.

## ಲಿಂಗಪೂಜೆಯ ಪ್ರಸಾರ

ಆಕಾಶದ ಪ್ರತೀಕವೇ ಮೊದಲು ಲಿಂಗವಾಯಿತು. ಸಮುದ್ರ, ನದಿ ಮೊದಲಾದ ಜಲಾಶಯಗಳ ದಂಡೆಯಲ್ಲಿ ಮಳಲು ಅಥವಾ ಮಣ್ಣಿನ ಲಿಂಗಗಳು ಮಾಡಲ್ಪಟ್ಟವು. ಆ ಲಿಂಗವು ಕೇವಲ ಗೋಳಕ ರೂಪದಲ್ಲಿಯೇ ಇದ್ದಿತು. ಮನುಷ್ಯನ ಪ್ರಥಮಾವಸ್ಥೆಯಲ್ಲಿ ಬಹುಕಾಲ ಹೀಗೆ ಪೂಜಿಸಿದ ನಂತರ ಲಿಂಗವು ಶಿಲೆಗಳಿಂದ ಮಾಡಲ್ಪಟ್ಟಿತು.



CC-0. Jangamwadi Math Collection, Varanasi. An eGangotri Initiative

ಉತ್ಕ್ರಾಂತಿ ತತ್ತ್ವದಂತೆ ಈ ಲಿಂಗಪೂಜೆಯ ಬೆಳವಣಿಗೆಯ ಇತಿಹಾಸವು ಹಿಂದು ಸ್ಥಾನದಲ್ಲಿ ಆಮೂಲಾಗ್ರವಾಗಿ ತಿಳಿಯುವಂತೆ ಜಗತ್ತಿನ ಇನ್ನಾವ ದೇಶದಲ್ಲಿಯೂ ದೊರೆಯುವು ದಿಲ್ಲ; ಧಾರ್ಮಿಕ ಜೀವನವೇ ಈ ರಾಷ್ಟ್ರದ ವೈಶಿಷ್ಟ್ಯವಾಗಿರುವುದು ಇದಕ್ಕೆ ಮುಖ್ಯ ಕಾರಣ.

ಶಿಲೆಯಿಂದ ಮಾಡಲ್ಪಟ್ಟ ಲಿಂಗಗಳು ಕೂಡಾ ಈ ದೇಶದಲ್ಲಿ ಮೊದಲು ಬಹು ಕಡಿಮೆ ಯಾಗಿಯೇ ಇದ್ದವೆಂದು ಹೇಳಬಹುದು. ಅವುಗಳಲ್ಲಿ ಹನ್ನೆರಡೇ ಬಹು ಮುಖ್ಯವಾದುವುಗಳು. ಅವೇ ಜ್ಯೋತಿರ್ಲಿಂಗಗಳು. ಅವುಗಳ ದರ್ಶನ, ಪೂಜೆ ಎಲ್ಲರಿಗೂ ಶಕ್ಯವಿಲ್ಲವೆಂದು ಕೆಲವು ಕಾಲದ ನಂತರ ಕ್ಷೇತ್ರ ಲಿಂಗಗಳಾಗಿರಬೇಕು. ತೀರ್ಥಕ್ಷೇತ್ರಗಳಲ್ಲಿ ಲಿಂಗಸ್ಥಾಪನೆ ಮಾಡಿ ಬಹುಜನರ ಪೂಜೆಗೆ ಅನುಕೂಲ ಪಡಿಸುವ ಪದ್ಧತಿಯು ಬಹುಕಾಲದ ನಂತರ ಉಂಟಾಯಿತು. ಲಿಂಗಸ್ಥಾಪ ನೆಯು ಬಹು ಪುಣ್ಯಕರವಾದುದೆಂಬ ಭಾವನೆಯೂ ಜನರಲ್ಲಿ ಆಮೇಲೆಯೇ ಉಂಟಾಗಿರಬೇಕು. ಕ್ಷೇತ್ರ-ಯಾತ್ರೆಗಳಿಗೆ ಹೋಗಿ ಲಿಂಗದರ್ಶನ, ಪೂಜೆಗಳನ್ನು ಹೊಂದುವುದು ಎಲ್ಲರಿಗೂ ಶಕ್ಯವಿಲ್ಲ ವೆಂದು ಅನಂತರ ಗ್ರಾಮ ಲಿಂಗಗಳನ್ನು ಏರ್ಪಡಿಸಿರಬೇಕು. ಗ್ರಾಮಗಳಲ್ಲಿ ಶಿವಾಲಯಗಳು ಸ್ಥಾಪಿಸಲ್ಪಟ್ಟು ಲಿಂಗಪೂಜೆಯು ಪ್ರಸಾರ ಹೊಂದಿದಾಗ ಲಿಂಗಸಂಬಂಧವಾದ ಕಲ್ಪನೆಯೂ ಎಷ್ಟೋ ಬೇರೆಯಾಗಿದ್ದಿತು. ಅದಕ್ಕೆ ತತ್ತ್ವಜ್ಞಾನ ವಿಶಿಷ್ಟಸ್ವರೂಪವೂ ಕೊಡಲ್ಪಟ್ಟಿತು.

ಗ್ರಾಮಲಿಂಗಗಳ ನಂತರ ಗೃಹಲಿಂಗಗಳು ಏರ್ಪಟ್ಟವು. ಮನೆಯಲ್ಲಿಯೂ ಲಿಂಗವನ್ನಿಟ್ಟು ಪೂಜಿಸುವ ಪದ್ಧತಿಯುಂಟಾಯಿತು. ಆ ಬಳಿಕ ಕೆಲವರು ಅಂಗದ ಮೇಲೆಯೇ ಯಾವಾಗಲೂ ಲಿಂಗವನ್ನು ಧರಿಸಿ ಪೂಜಿಸಲಾರಂಭಿಸಿದರು. ಇವರೇ ಲಿಂಗಾಯತರು. ಹೀಗೆ ಅಂಗದ ಮೇಲೆ ಲಿಂಗ ಧರಿಸಿ ಪೂಜಿಸುವುದನ್ನು ಪ್ರಸಾರಗೊಳಿಸುವುದರಲ್ಲಿ ಮಹಾನುಭಾವಿಗಳಾದ ಬಸವಣ್ಣನವರೇ ಕೊನೆಯವರು. ಇವರು ಲಿಂಗದ ಸಂಬಂಧವಾಗಿ ಹೇಳಿರುವ ಈ ಕೆಳಗಿನ ವಚನವು ಲಿಂಗ ತತ್ತ್ವದ ವ್ಯಾಪಕತೆಯನ್ನು ಸ್ಪಷ್ಟಗೊಳಿಸುವುದಾಗಿದೆ.

> ಜಗದಗಲ ಮುಗಿಲಗಲ ಮಿಗೆಯಗಲ ನಿಮ್ಮಗಲ ಪಾತಾಳದಿಂದತ್ತತ್ತ ನಿಮ್ಮ ಶ್ರೀ ಚರಣ, ಬ್ರಹ್ಮಾಂಡದಿಂದತ್ತತ್ತ ನಿಮ್ಮ ಶ್ರೀ ಮುಕುಟ, ಅಗಮ್ಯ ಅಪ್ರಮಾಣ ಅಗೋಚರ ಅಪ್ರತಿಮ ಲಿಂಗವೆ. ಕೂಡಲ ಸಂಗಮದೇವಯ್ಯ ಎನ್ನ ಕರಸ್ಥಳಕ್ಕೆ ಬಂದು ಚುಳುಕಾದಿರಯ್ಯ.

## ಲಿಂಗವು ವಿಶ್ವದ ಪ್ರತೀಕ

ಲಿಂಗವು ಮೊದಲು ಆಕಾಶದ ಪ್ರತೀಕವಾಗಿ ಏರ್ಪಟ್ಟು ಮನುಷ್ಯನ ಆಧ್ಯಾತ್ಮಿಕ ಜ್ಞಾನ ವಿಕಾಸವಾದಂತೆ ಕೊನೆಗೆ ಅದು ವಿಶ್ವದ ಪ್ರತೀಕವಾಯಿತು. ಜ್ಞಾನ ವಿಕಾಸದಂತೆ ಲಿಂಗದ ಆಕಾರ ದಲ್ಲಿಯೂ ತತ್ತ್ವಾನುಗುಣ್ಯವಾದ ಮಾರ್ಪಾಟು ಮಾಡಲ್ಪಟ್ಟಿತು. ಮೊದಲು ಗೋಳಕವು ಒಂದೇ ಆಗಿದ್ದ ಲಿಂಗವು ಆಮೇಲೆ ಪೀಠವಿಶಿಷ್ಟವಾದುದಾಯಿತು. ಆ ಪೀಠವು ಕೂಡಾ ತತ್ತ್ವಾನು ಗುಣ್ಯವಾಗಿ ಏರ್ಪಟ್ಟಿತು. ಈ ವಿಶ್ವವು ಪ್ರಕೃತಿ, ಜೀವ ಮತ್ತು ಪರಮಾತ್ಮಗಳಿಂದ ಕೂಡಿದ್ದಾಗಿದೆ ಯೆಂದೇ ಲಿಂಗಪೂಜಕರ ಸಿದ್ಧಾಂತ. ಪ್ರಕೃತಿಯೆಂದರೆ ಪಾರ್ವತಿ. ಜೀವನವೆಂದರೆ ಪಶು. ಪರಮಾತ್ಮ ನೆಂದರೆ ಪಶುಪತಿ ಅಥವಾ ಶಿವ. ಇವೇ ಮೂರಕ್ಕೆ ಅನುಕ್ರಮವಾಗಿ ಶಕ್ತಿ, ಅಂಗ, ಲಿಂಗ ಎಂತಲೂ ಹೇಳುವುದುಂಟು. ಈ ಮೂರನ್ನೂ ರೇಖೆಗಳಿಂದ ಚಿತ್ರಿಸಲ್ಪಟ್ಟದ್ದೇ ಲಿಂಗವು.



CC-0. Jangamwadi Math Collection, Varanasi. An eGangotri Initiative

(೧) ಪ್ರಕೃತಿಯು ಸತ್ವ, ರಜ, ತಮ ಈ ಮೂರು ಗುಣಗಳಿಂದ ಕೂಡಿದ್ದಾಗಿದೆಯಷ್ಟೆ. ಈ ಮೂರು ಗುಣಗಳನ್ನು ತೋರಿಸಿದರೆ ವಿಶ್ವವ್ಯಾಪಕ ಪ್ರಕೃತಿಯನ್ನೇ ತೋರಿಸಿದಂತಾಯಿತು. ಆದಕಾರಣ ಈ △ ತ್ರಿಕೋಣಗಳ ಮೂಲಕ ಪ್ರಕೃತಿಯನ್ನು ಚಿತ್ರಿಸಿದರು.

(೨) ಜೀವನು ಸತ್, ಚಿತ್ತ, ಆನಂದ ವಿಶಿಷ್ಟನು. ಆದಕಾರಣ ಈ ಮೂರು ಗುಣಗಳನ್ನು ತೋರಿಸಿದರೆ ವಿಶ್ವವ್ಯಾಪಕ ಜೀವಕೋಟಿಯನ್ನೇ ತೋರಿಸಿದಂತಾಯಿತು. ಆದಕಾರಣ ಈ △ ತ್ರಿಕೋಣವು ಜೀವಕೋಟಿಯ ದ್ಯೋತಕವೆಂದು ತಿಳಿದರೂ. ಪ್ರಕೃತಿಯು ಜಡವಾದುದು. ಜೀವನಾದರೋ ಚೇತನರು. ಇವೆರಡೂ ಅಭೇದವಾಗಿಯೇ ಇರತಕ್ಕವು. ಆದಕಾರಣ ಜಡವಾದ ಪ್ರಕೃತಿಯು ಈ △ ತ್ರಿಕೋಣದ ಮೇಲೆ ಚೇತನವಾದ ಜೀವನ ತ್ರಿಕೋಣವನ್ನು ವಿರುದ್ಧವಾಗಿ ಚಿತ್ರಿಸಲು ⧖ ಪ್ರಕೃತಿ ಮತ್ತು ಜೀವಗಳ ಚಿತ್ರವಾಯಿತು.

(೩) ಇನ್ನು ಉಳಿದುದು ಪರಮಾತ್ಮ ಅಥವಾ ಶಿವ ಇಲ್ಲವೆ ಲಿಂಗ ಎಂಬುದಷ್ಟೆ. ಪರಮಾತ್ಮನು ಗುಣಾತೀತನು. ಅಂತೆಯೇ ಶೂನ್ಯ ○ ವಾಗಿ ಪರಮಾತ್ಮನನ್ನು ಚಿತ್ರಿಸಿದರು. ಆ ಶೂನ್ಯವೇ ಆದಿಲಿಂಗ. ಅಥವಾ ಆಕಾಶ. ಅದು ಜೀವ ಮತ್ತು ಪ್ರಕೃತಿಗಳಿಗೆ ಸಂಬಂಧಿಸಿಯೇ ಮೇಲ್ಭಾಗದಲ್ಲಿರತಕ್ಕದ್ದು. ಪ್ರಕೃತಿ ಮತ್ತು ಜೀವರುಗಳಿಂದ ಕೂಡಿರುವ ⧖ ಈ ಚಿತ್ರದ ಮೇಲೆ ಪರಮಾತ್ಮನ ಗುರುತಾದ ○ ಶೂನ್ಯವನ್ನು ಚಿತ್ರಿಸಲು ⧖ ಈ ಪ್ರಕಾರ ಚಿತ್ರವು ಏರ್ಪಟ್ಟಿತಷ್ಟೆ. ಇಕೋ ಇದೇ ತತ್ತ್ವಾನುಗುಣ್ಯವಾಗಿ ಏರ್ಪಟ್ಟ ಲಿಂಗವು. ಈ ಚಿತ್ರವನ್ನು ನೋಡಿದೊಡನೆ ವಿಶ್ವವ್ಯಾಪಕ ಪ್ರಕೃತಿ, ಜೀವ ಮತ್ತು ಪರಮಾತ್ಮರ ಸ್ಮರಣೆಯಾಗಬೇಕು. ಲಿಂಗದಲ್ಲಿ ವಿಶ್ವವೇ ಅಡಕವಾಗಿದೆಯೆಂಬುದರ ಅರ್ಥವು ಇದೇ. ಅಂತೆಯೇ ಲಿಂಗಪೂಜೆಯು ವಿಶ್ವಪೂಜೆ. ಸಣ್ಣ ನಕಾಶದಲ್ಲಿ ಪೃಥ್ವಿಯನ್ನು ತೋರಿಸುವಂತೆ ಈ ಲಿಂಗಾಕಾರದಲ್ಲಿ ವಿಶ್ವವನ್ನು ತೋರಿಸಿದ್ದಾರೆ.

ಲಿಂಗದಲ್ಲಿ ದೃಷ್ಟಿ ನಿಲ್ಲಲು ಅದರ ಮೇಲೆ ಕಪ್ಪುಬಣ್ಣದ ಕಂಥೆಯನ್ನು ಧರಿಸುವುದು ಶ್ರೀ ಬಸವಾದಿ ಶಿವಶರಣರ ಕಾಲದಲ್ಲಿ ಏರ್ಪಟ್ಟಿರಬೇಕು. ಕಪ್ಪುಬಣ್ಣವು ದೃಷ್ಟಿ ನಿಲ್ಲಲು ಸಾಧನವೆಂದು ಯೋಗಶಾಸ್ತ್ರಜ್ಞರೂ ಹೇಳುತ್ತಿದ್ದಾರಷ್ಟೆ. ಹೀಗೆ ಲಿಂಗಪೂಜೆಯು ರೂಪಾಂತರಗಳನ್ನು ಹೊಂದುತ್ತಾ ಬಂದಿತು.

## ಲಿಂಗಪೂಜೆಯ ಕಾಲಮಾನ

ಲಿಂಗಪೂಜೆಯು ಇಂತಹ ಶತಮಾನದಲ್ಲಿ ಇಂಥವರಿಂದ ಇಂಥ ಸ್ಥಳದಲ್ಲಿಯೇ ಪ್ರಾರಂಭವಾಯಿತೆಂದು ಹೇಳಬರುವಂತಿಲ್ಲ. ಏಕೆಂದರೆ ಈಗಿನ ಐತಿಹಾಸಿಕ ಪರಿಶೋಧನೆಗೆ ಅದು ಕಾಣದಷ್ಟು ದೂರಾದುದು. ಮನುಷ್ಯಜಾತಿಯ ಬಾಲ್ಯಾವಸ್ಥೆಯಲ್ಲಿ ಸ್ವಾಭಾವಿಕವಾಗಿಯೇ ಉಂಟಾದುದು. ಉತ್ಕ್ರಾಂತಿತತ್ತ್ವದಂತೆ ಮಾರ್ಪಾಟು ಹೊಂದುತ್ತ ಬಂದುದು.

ಆದರೆ ಇಷ್ಟು ಮಾತ್ರ ಹೇಳಬಹುದು. ಮನುಷ್ಯಜಾತಿಯ ದೈವೀ ಭಾವನೆಗೆ ಒಳಪಟ್ಟು ಈ ಪ್ರಚಾರದಲ್ಲಿರುವ ಎಲ್ಲ ಪೂಜೆಗಳಿಗಿಂತಲೂ ಪ್ರಾಚೀನವಾದುದು; ವ್ಯಾಪಕವಾದುದು; ಉತ್ಕ್ರಾಂತಿಯ ಅವಿಚ್ಛಿನ್ನವಾದ ಮಾರ್ಪಾಟುಗಳಿಂದ ಕೂಡಿದುದು.



CC-0. Jangamwadi Math Collection, Varanasi. An eGangotri Initiative



# ಶಕ್ತಿವಿಶಿಷ್ಟಾದ್ವೈತಮತ ನಿರೂಪಣ

ಆನಂದ ಪರಮವ್ಯೋಮ ಸಚ್ಚಿನ್ಮಾವಿನ್ನಾ ಶ್ರುತಿ ವ್ರಜೇ ।
ಯಸ್ಯ ಸ್ವಾಭಾವಿಕೀ ಶಕ್ತಿಸ್ತಂ ವಂದೇ ಪರಮಂ ಶಿವಂ ॥

ಲೋಕದಲ್ಲಿ ಮನುಷ್ಯನಾಗಿ ಹುಟ್ಟಿ, ಬಳೆದು, ಬಾಳುವ ಪ್ರತಿಯೊಬ್ಬನೂ ಹೆಚ್ಚು ಹೆಚ್ಚಿನ ಸುಖವನ್ನು-ಆನಂದವನ್ನು ಪಡೆಯಬೇಕೆಂಬ ಆಶೆಯಿಂದ ಹಗಲಿರುಳೂ ಪ್ರಯತ್ನಿಸುತ್ತ ಆ ಪ್ರಯತ್ನದ ಫಲವಾಗಿ ಪಡೆದ ಆನಂದದ ಪರಿಮಿತಿಯಿಂದ ತೃಪ್ತಿ ಪಡೆಯದೆ, ಸುಖದ ಪರಮಾವಧಿಯನ್ನು ತಲುಪಲು ತವಕಪಡುತ್ತಿರುವುದು ಎಲ್ಲರಿಗೂ ಅನುಭವಸಿದ್ಧವಾಗಿದೆ. ಈ ಪರಮ ಸುಖದ ಹೆಗ್ಗುರಿಯನ್ನು ಪಡೆಯಲು ಅವನು ಕೈಕೊಳ್ಳುವ ಯಾವ ಕಾರ್ಯವೂ ಹೇಯವಾಗಿ, ತುಚ್ಛವಾಗಿ, ನಿತ್ಯವಾಗಿ, ಕ್ಲೇಶಕರವಾಗಿ ಅವನಿಗೆ ತೋರುವುದಿಲ್ಲ. ಎಷ್ಟು ಎಡರುಗಳು ತಡೆದರೂ ಎಷ್ಟು ದುಃಖವ್ಯಾಧಿಗಳು ಆವರಿಸಿಕೊಂಡು ಬಂದರೂ ಅವನು ತನ್ನ ಸುಖಧ್ಯೇಯ ಸಾಧನೆಯಲ್ಲಿ ಎಳ್ಳಷ್ಟಾದರೂ ಹಿಂಜರಿಯುವವನಲ್ಲ. ಇದರಿಂದ ವ್ಯಕ್ತವಾಗುವ ಸಂಗತಿಯೇನೆಂದರೆ, ಈ ಎಲ್ಲ ದುಃಖಕ್ಲೇಶಪರಂಪರೆಗಳಲ್ಲಿ ಮನುಷ್ಯನನ್ನು ತೊಳಲಿ ಬಳಲಿಸುವ ಅವನ ಆತ್ಮವು ಆನಂದ ಸ್ವರೂಪವಾಗಿರಬೇಕು. ಇದರಿಂದಲೇ ಕಾರಣಾಂತರಗಳಿಂದ ಈ ಆನಂದಸ್ವರೂಪವನ್ನು ಆವರಿಸಿರುವ ಬಂಧನಗಳನ್ನು ಭೇದಿಸಿಕೊಂಡು ತನಗೆ ಸಹಜವೂ ಸ್ವರೂಪವೂ ಆದ ನಿತ್ಯಾನಂದವನ್ನು ಪಡೆಯಲು ಪ್ರತಿ ಕ್ಷಣವೂ ಮನುಷ್ಯನ ಆತ್ಮವು ಪ್ರಯತ್ನಪಡುತ್ತಿರುವುದು. ಆದರೆ ಅಖಿಳ ಭೂಮಂಡಳದ ಸಾರ್ವಭೌಮಾಧಿಪತ್ಯವನ್ನು ಪಡೆದರೂ ಸಹ ಮನುಷ್ಯನಿಗೆ ನಿತ್ಯವೂ ನಿರತಿಶಯವೂ ಆದ ಆನಂದವು ದೊರೆಯದೇ ಇರುವುದನ್ನು ನಾವು ನೋಡುತ್ತಿದ್ದೇವೆ. ಇದಕ್ಕೆ ಕಾರಣವೇನೆಂದರೆ ಮನುಷ್ಯನು ಮೋಹಾಹಂಕಾರಗಳಿಗೆ ವಶನಾಗಿ, ಲೋಕದಲ್ಲಿ ಕಾಣುವ ಸಮಸ್ತ ಸಾಮಗ್ರಿಗಳನ್ನೂ ತನಗೋಸ್ಕರವಾಗಿಯೇ ಬಯಸುತ್ತ, ತನ್ನ ಮತ್ತು ಪರಮಾತ್ಮನ ಸ್ವರೂಪವನ್ನೂ ಅವರ ಸಂಬಂಧವನ್ನೂ ಮರೆತಿರುವುದೇ. ಪರಮಸುಖವು ಅವನಿಗೆ ದೊರೆಯಬೇಕಾದರೆ, ಅವನು ಆಧ್ಯಾತ್ಮ ಶಾಸ್ತ್ರಗಳನ್ನು ಮರೆಹೊಕ್ಕು ಪರಮಾತ್ಮನನ್ನು ಕಾಣಬೇಕು. ಪರಮಾತ್ಮನನ್ನು ಕಾಣಬೇಕಾದರೆ ಅವನಿಗೆ ಅಹಂಕಾರವು ತೊಲಗಬೇಕು. ಅಹಂಕಾರವು ತೊಲಗಬೇಕಾದರೆ, "ನಿನ್ನೊಳಗೆ ಅಂತರ್ಯಾಮಿಯಾದೊಬ್ಬ ಆತ್ಮನಿದ್ದಾನೆ. ಅವನ ಆಜ್ಞೆಗೆ ನೀನು ಒಳಪಡಬೇಕು." ಎಂದು ಬುದ್ಧಿ ಹೇಳಿ, ಅವನು ತನ್ನ ಮನಸ್ಸನ್ನು ಬಂಧಿಸಬೇಕು. ಹೀಗೆ ಬಂಧಿಸಿ ಆ ಮನಸ್ಸನ್ನು



CC-0. Jangamwadi Math Collection, Varanasi. An eGangotri Initiative

ಒಳಗಣ ಒಂದು ತತ್ವಕ್ಕೆ, ಒಂದು ಘನವಾದ ಉದ್ದೇಶಕ್ಕೆ ವಿಧೇಯವಾಗಿರುವಂತೆ ಮಾಡಬೇಕು. ಹೀಗೆ ಮನಸ್ಸು ಅಂತರ್ಮುಖವಾದಾಗ, ಮನುಷ್ಯನಿಗೆ ತನ್ನ ಆತ್ಮನಿಗಿಂತಲೂ ಬೇರೆಯಾಗಿದ್ದರೂ ಅಂತರ್ಯಾಮಿಯಾಗಿ ಪ್ರೇರಕನಾಗಿರುವ ಪರಮಾತ್ಮನೊಬ್ಬನಿರುವನೆಂದು ತೋರಿಬರುವುದು. ಆಗ ಜೀವಾತ್ಮ-ಪರಮಾತ್ಮರಿಗೆ ಸಂಬಂಧವೊಂದು ಏರ್ಪಡುವುದು. ಈ ಸಂಬಂಧವನ್ನೇ ಮತವೆಂದು ನಾವು ಕರೆಯಬಹುದು. ಈ ಸಂಬಂಧವು ಬಳೆದು ಫಲಕಾರಿಯಾಗಬೇಕಾದರೆ, ಜೀವಾತ್ಮನು ವೇದ-ಶಾಸ್ತ್ರ ವಿಹಿತವಾದ ಕೆಲವು ಕರ್ಮಗಳನ್ನಾಚರಿಸಬೇಕು. ಆ ಕರ್ಮಗಳಿಂದ ಇಂದ್ರಿಯ ವ್ಯಾಪಾರಗಳು ಪರಿಶುದ್ಧವಾಗುತ್ತವೆ. ಹೀಗೆ ಶುದ್ಧವಾದ ಇಂದ್ರಿಯಗಳ ಮೂಲಕ ಉಂಟಾಗುವ ಜ್ಞಾನವೂ ಶುದ್ಧವಾಗುತ್ತದೆ. ಈ ಜ್ಞಾನದಿಂದ ಜೀವಾತ್ಮನಿಗೂ ಪರಮಾತ್ಮನಿಗೂ ಇರುವ ಸಂಬಂಧವು ಸ್ಪಷ್ಟಕರವೂ ದೃಢಕರವೂ ಆಗುತ್ತದೆ. ಆದರೆ ಶರೀರವಿರುವ ಪರ್ಯಂತರವೂ ಪ್ರಾಪಂಚಿಕ ವ್ಯವಹಾರಗಳಲ್ಲಿ ಜೀವನು ಅನೇಕ ವೇಳೆ ತೊಡಗಬೇಕಾಗುವುದರಿಂದ ಈ ಸಂಬಂಧಕ್ಕೆ ವಿಚ್ಛಿತ್ತಿಯುಂಟಾಗಿ, ಕೊನೆಗೆ ಜೀವಾತ್ಮ ಪರಮಾತ್ಮರು ನಿತ್ಯ ವಿಯೋಗವನ್ನು ಹೊಂದುವ ಸಂಬಂಧವು ಒದಗಿದರೂ ಒದಗಬಹುದು. ಜ್ಞಾನಮಾರ್ಗದಲ್ಲಿ ಈ ವಿಧವಾದ ಅಪಾಯವು ಯಾವಾಗಲೂ ಇದ್ದೇ ಇರುವುದು. ಈ ಅಪಾಯದಿಂದ ಬಿಡುಗಡೆ ಹೊಂದಬೇಕಾದರೆ ಆ ಜ್ಞಾನಕ್ಕೆ ವಿಷಯವಾದ ವಸ್ತುವಿನಲ್ಲಿ ನಾವು ಆಂತರಂಗಿಕವಾದ, ಆತ್ಮೀಯವಾದ ಪ್ರೀತಿಯನ್ನಿಡಬೇಕು. ಪರಮಾತ್ಮ ವಿಷಯಕವಾದ ಈ ಪ್ರೀತಿಯೇ ಭಕ್ತಿಯಾಗಿ ಪರಿಣಮಿಸುವುದು. ಜ್ಞಾನ ಮಾರ್ಗಕ್ಕಿಂತಲೂ ಭಕ್ತಿ ಮಾರ್ಗದಲ್ಲಿ ಪರಮಾತ್ಮನನ್ನು ಒಲಿಸುವುದು ಸುಲಭ. ಏಕೆಂದರೆ ಭಕ್ತಿಯೆಂದರೆ ಪರಮಾತ್ಮನಿಗೆ ಸರ್ವಾರ್ಪಣ ಮಾಡಿ, ತನ್ನನ್ನು ತಾನು ಮರೆಯುವುದೆಂದರ್ಥ. ಹೀಗೆ ಮರೆತಾಗಲೇ—

> ಅನನ್ಯಾಶ್ಚಿಂತಯಂತೋ ಮಾಂ ಯೆ ಜನಾಃ ಪರ್ಯುಪಾಸತೆ ।
> ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಂ ॥

ಎಂಬ ಗೀತೋಕ್ತಿಯಂತೆ ಪರಮಾತ್ಮನು ತನ್ನ ಭಕ್ತರ ರಕ್ಷಣೆಗಾಗಿ ನಡುಕಟ್ಟಿ ನಿಂತುಕೊಳ್ಳುವನು. ಈ ದೃಷ್ಟಿಯಿಂದ

> ಸರ್ವ ಧರ್ಮಾ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ !
> ಅಹಂ ತ್ವಾಂ ಸರ್ವ ಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾ ಶುಚಃ ॥

ಎಂಬ ಗೀತಾಚಾರ್ಯನ ಉಕ್ತಿಯು ಸಕಲ ಮತತತ್ವಗಳ ಸಾರವೆಂದು ಹೇಳಬಹುದು.

ಮೇಲೆ ಹೇಳಿದ ಸಂಗತಿಗಳಿಂದ ಯಾವ ಮತದಲ್ಲಾದರೂ ಸರಿಯೆ ಪರಮಾತ್ಮನ ಸಾಕ್ಷಾತ್ಕಾರವಾಗಬೇಕಾದರೆ ಕರ್ಮ, ಜ್ಞಾನ, ಭಕ್ತಿ ಈ ಮೂರೂ ಅತಿ ಮುಖ್ಯ ಸಾಧನಗಳೆಂದು ಸ್ಪಷ್ಟವಾಗುತ್ತದೆ. ಆದರೆ ಈ ಸಾಧನಗಳ ಸ್ವರೂಪವು ಒಂದೊಂದು ಮತದಲ್ಲಿ ಒಂದೊಂದು ವಿಧವಾಗಿರುತ್ತದೆ. ಈ ಸಾಧನಗಳಿಂದ ಆತ್ಮವಿಕಾಸವುಂಟಾಗಿ ಅವನಲ್ಲಿ ಪರಿಪೂರ್ಣತೆಯು ಅಳವಟ್ಟರೆ ಅದನ್ನೇ ಮುಕ್ತಿಯೆಂದು ಶಾಸ್ತ್ರಗಳು ಸಾರುತ್ತವೆ. ಇದು ಮುಕ್ತಿಯ ಸಾಮಾನ್ಯ ಸ್ವರೂಪವಾದರೂ ಭಿನ್ನ ಭಿನ್ನ ಮತೀಯರು ತಮ್ಮ ತಮ್ಮ ರುಚಿ ವೈಚಿತ್ರ್ಯಗಳಿಗನುಸಾರವಾಗಿ ಮೋಕ್ಷದ ಸ್ವರೂಪವನ್ನು ಭಿನ್ನ ಭಿನ್ನವಾಗಿ ಚಿತ್ರಿಸಿಕೊಂಡಿರುತ್ತಾರೆ. ಹಿಂದುಗಳಲ್ಲಿ ವೈದಿಕ



CC-0. Jangamwadi Math Collection, Varanasi. An eGangotri Initiative

ಮತಗಳಾದ ಶೈವ, ವೈಷ್ಣವ, ಶಾಕ್ತ, ಸೌರ, ಗಾಣಪತ್ಯ, ಕಾಪಾಲಿಕ ಎಂಬ ಆರು ಮತಗಳೂ ಸಾಂಖ್ಯ, ಯೋಗ, ನ್ಯಾಯ, ವೈಶೇಷಿಕ, ಪೂರ್ವಮೀಮಾಂಸಾ, ಉತ್ತರಮೀಮಾಂಸಾ ಎಂಬ ಆರು ದರ್ಶನಗಳೂ ವೈದಿಕವೆಂದು ಪರಿಗಣಿಸಲ್ಪಟ್ಟಿವೆ. ಇವುಗಳಲ್ಲಿ ಉತ್ತರಮೀಮಾಂಸಕರು ಅಂದರೆ ವೇದಾಂತಿಗಳ ವೇದದ ಜ್ಞಾನಕಾಂಡಕ್ಕೆ ಹೆಚ್ಚು ಪ್ರಾಶಸ್ತ್ಯವನ್ನು ಕೊಟ್ಟು, ಬ್ರಹ್ಮಜ್ಞಾನ ದಿಂದಲೇ ಮುಕ್ತಿಯು ಲಭಿಸುವುದೆಂದು ನಂಬುತ್ತಾರೆ. ಇಂತಹ ವೇದಾಂತಿಗಳ ಮತಗಳೊಳಗೆ ದ್ವೈತ, ಅದ್ವೈತ, ದ್ವೈತಾದ್ವೈತ ಎಂಬ ಮೂರೇ ಮುಖ್ಯವಾದ ಮತಗಳು. ಈ ಮತಗಳೆಲ್ಲವೂ ವ್ಯಾಸಕೃತ ಉತ್ತರಮೀಮಾಂಸೆಯೆಂಬ ಬ್ರಹ್ಮಸೂತ್ರದ ಆಧಾರದಮೇಲೆ ಹುಟ್ಟಿದವುಗಳಾಗಿವೆ. ದ್ವೈತವು ಜೀವಾತ್ಮ-ಪರಮಾತ್ಮರಿಗೆ ಭೇದವು ಸತ್ಯವೆಂದು ಬೋಧಿಸುತ್ತದೆ. ಅದ್ವೈತವು ಜೀವಾತ್ಮ ಪರಮಾತ್ಮರಿಗೆ ಭೇದವು ಸತ್ಯವೆಂದು ಬೋಧಿಸುತ್ತದೆ. ಅದ್ವೈತವು ಜೀವಾತ್ಮ-ಪರಮಾತ್ಮರಿಗೆ ಸಹಜವಾದ ಅಭೇದವನ್ನು ಬೋಧಿಸುತ್ತದೆ. ದ್ವೈತಾದ್ವೈತವು ಭೇದಾಭೇದಗಳೆರಡನ್ನೂ ಬೋಧಿ ಸುತ್ತದೆ. ಈ ಮೂರು ಸಿದ್ಧಾಂತಗಳೂ ಶ್ರುತಿವಾಕ್ಯಗಳನ್ನೇ ಪ್ರಮಾಣವನ್ನಾಗಿ ಅವಲಂಬಿಸಿವೆ.

"ದ್ವಾ ಸುಪರ್ಣಾ ಸಯುಜಾ ಸಖಾಯಾ"
"ಜ್ಞಾಜ್ಞಾವಜಾವೀಶಾನೀಶಾ"
"ದ್ವೇವಾ ಬ್ರಹ್ಮಣೋ ರೂಪಂ"
"ದ್ವೇ ಬ್ರಹ್ಮಣೇ ವೇದಿತವ್ಯ ರೂಪಚಾಪರಮೇವ ಚ"

ಎಂಬ ಮೊದಲಾದ ಶ್ರುತಿವಾಕ್ಯಗಳ ಜೀವ-ಬ್ರಹ್ಮರಿಗೆ ಭೇದವನ್ನು ಪ್ರತಿಪಾದಿಸುತ್ತವೆ.

"ಏಕಮೇವಾದ್ವಿತೀಯಂ ಬ್ರಹ್ಮ"
"ನೇಹ ನಾನಾಸ್ತಿ ಕಿಂಚನ"
"ನಾನ್ಯೋಽತೋಽಸ್ತಿ ದ್ರಷ್ಟಾ ನಾನ್ಯೋಽತೋಽಸ್ತಿ ಶ್ರೋತಾ"
"ಏಕ ಏವ ರುದ್ರೋ ನ ದ್ವಿತೀಯಾಯ ತಸ್ಥೆ"

ಮುಂತಾದ ಶ್ರುತಿವಾಕ್ಯಗಳು ಜೀವ-ಬ್ರಹ್ಮರಿಗೆ ಅಭೇದವನ್ನು ಬೋಧಿಸುತ್ತವೆ. ಹೀಗೆ ಶ್ರುತಿ ವಾಕ್ಯಗಳಲ್ಲಿ ಪರಸ್ಪರ ವಿರೋಧವು ಕಂಡುಬರುವುದರಿಂದ ಕೇವಲ ಭೇದವನ್ನಾಗಲಿ, ಕೇವಲ ಅಭೇದ ವನ್ನಾಗಲಿ ಅಂಗೀಕರಿಸಿದರೆ ಶ್ರುತ್ಯೈಕದೇಶಕ್ಕೆ ಪ್ರಾಮಾಣ್ಯವನ್ನು ಕೊಟ್ಟಂತಾಗುವುದು. ಆದ್ದರಿಂದ ಶ್ರುತಿವಾಕ್ಯಗಳಿಗೆ ಐಕ್ಯತೆಯು ಬರಬೇಕಾದರೆ ಭೇದಾಭೇದಗಳೆರಡನ್ನೂ ಬೋಧಿಸುವ ಮತವು ಹುಟ್ಟಬೇಕಾಗಿಬಂದಿತು. ಪ್ರಪಂಚಸೃಷ್ಟಿಗೆ ಪೂರ್ವಭಾವಿಯಾಗಿ ಅದ್ವೈತವನ್ನೂ ಸೃಷ್ಟ್ಯನಂತರ ದ್ವೈತವನ್ನೂ ಬಂಧದಶೆಯಲ್ಲಿ ಜೀವ-ಬ್ರಹ್ಮರ ಭೇದವನ್ನೂ ಮುಕ್ತದಶೆಯಲ್ಲಿ ಅಭೇದವನ್ನೂ ಅಂಗೀಕರಿಸುವ ಮೂರನೆಯದಾದ ಭೇದಾಭೇದ ಅಥವಾ ವಿಶೇಷ್ಟಾದ್ವೈತ ಮತವು ಹುಟ್ಟಿ, ಸಕಲ ಶ್ರುತಿಸಮನ್ವಯವನ್ನು ಮಾಡುವ ಸಿದ್ಧಾಂತವನ್ನು ಹೂಡಿತು. ವೇದಾಂತ ಸೂತ್ರಗಳಿಗೆ ದ್ವೈತ ಪರವಾದ ಅರ್ಥವನ್ನು ಮಧ್ವಾಚಾರ್ಯರೂ ಅದ್ವೈತಾರ್ಥವನ್ನು ಶಂಕರಾಚಾರ್ಯರೂ ದ್ವೈತಾ ದ್ವೈತಾರ್ಥವನ್ನು ರೇಣುಕಾಚಾರ್ಯ, ನೀಲಕಂಠ ಶಿವಾಚಾರ್ಯ, ಶ್ರೀಪತಿಪಂಡಿತಾಚಾರ್ಯರುಗಳೂ ಭಾಷ್ಯಗಳನ್ನು ರಚಿಸಿ ಸ್ಥಾಪಿಸಿದರು. ಈ ಸಿದ್ಧಾಂತಗಳನ್ನವಲಂಬಿಸಿದ ಮತಗಳಿಗೆ ಕ್ರಮವಾಗಿ ಮಧ್ವಮತ, ಅದ್ವೈತಮತ, ವೀರಶೈವಮತಗಳೆಂಬ ಬಳಕೆಯು ಬಂದಿತು. ವೀರಶೈವಮತದ



CC-0. Jangamwadi Math Collection, Varanasi. An eGangotri Initiative

ಸಿದ್ಧಾಂತಕ್ಕೆ ದ್ವೈತಾದ್ವೈತವಲ್ಲದೆ ಶಿವಾದ್ವೈತ, ಶಿಷ್ಟಾದ್ವೈತ, ಶಕ್ತಿವಿಶಿಷ್ಟಾದ್ವೈತಗಳೆಂಬ ಪರ್ಯಾಯನಾಮಗಳೂ ರೂಢಿಯಲ್ಲಿವೆ.

ದ್ವೈತಾದ್ವೈತ ಮತೇ ಶುದ್ಧೇ ವಿಶೇಷಾದ್ವೈತಸಂಜ್ಞಕೇ ।
ವೀರಶೈವೈಕ ಸಿದ್ಧಾಂತೇ ಸರ್ವಶ್ರುತಿ ಸಮನ್ವಯಃ ( ಶ್ರೀಕರ ಭಾಷ್ಯ )

ಲಿಂಗಧಾರಿಗಳಾದ ಶೈವರು ಅಂದರೆ ವೀರಶೈವರಲ್ಲಿರುವಂತೆ ಅಲಿಂಗಿಗಳಾದ ಶೈವರಲ್ಲಿಯೂ ಶಕ್ತಿ ವಿಶಿಷ್ಟಾದ್ವೈತ ಭಾಷ್ಯಗಳಿರುತ್ತವೆ. ಶ್ರೀಕಂಠ ಶಿವಾಚಾರ್ಯ ಭಾಷ್ಯವೇ ಅಲಿಂಗಿಶೈವರ ಶಕ್ತಿವಿಶಿಷ್ಟಾದ್ವೈತ ಭಾಷ್ಯ. ನೀಲಕಂಠಶಿವಾಚಾರ್ಯಾದಿಗಳ ಭಾಷ್ಯಗಳೇ ಲಿಂಗಿಶೈವರ ಶಕ್ತಿವಿಶಿಷ್ಟಾದ್ವೈತ ಭಾಷ್ಯಗಳು.

ಚಿತ್, ಅಚಿತ್, ಈಶ್ವರ ಎಂಬ ಪದಾರ್ಥತ್ರಯಗಳನ್ನು ಮುಖ್ಯವಾಗಿಟ್ಟುಕೊಂಡು ರಾಮಾನುಜಾಚಾರ್ಯರು ವಿಶಿಷ್ಟಾದ್ವೈತ ಬೋಧಕವಾದ ಶ್ರೀ ವೈಷ್ಣವಮತವನ್ನು ಶ್ರೀ ಭಾಷ್ಯದ ಮೂಲಕವಾಗಿ ಸ್ಥಾಪಿಸಿದರು. ಈ ಮತಕ್ಕೆ ಶಕ್ತಿವಿಶಿಷ್ಟಾದ್ವೈತಪರವಾದ ಅಲಿಂಗಿಶೈವರ ಶ್ರೀಕಂಠ ಭಾಷ್ಯವೇ ಮೂಲವೆಂಬ ಪ್ರತೀತಿಯಿದೆ.

ಪ್ರಕೃತದಲ್ಲಿ ವೀರಶೈವಸಿದ್ಧಾಂತವೆನಿಸಿದ ಶಕ್ತಿವಿಶಿಷ್ಟಾದ್ವೈತದಲ್ಲಿ ಜೀವ, ಈಶ್ವರ, ಜಗತ್ತು, ಮಾಯಾ, ಬಂಧ, ಮೋಕ್ಷ, ಭಕ್ತಿ, ಜ್ಞಾನ, ಕ್ರಿಯೆ ಇವುಗಳ ಸ್ವರೂಪ ಮತ್ತು ವೈಲಕ್ಷಣ್ಯಗಳನ್ನು ಸಿದ್ಧಾಂತಕಾರರು ಹೇಗೆ ನಿರ್ಣೈಸಿರುವರೆಂಬುದನ್ನು ಸಂಗ್ರಹಿಸಿ ಮುಂದೆ ಕೊಡಲಾಗಿದೆ.

ಶಕ್ತಿವಿಶಿಷ್ಟಾದ್ವೈತವೆಂದರೆ- "ಶಕ್ತಿಶ್ಚ ಶಕ್ತಿಶ್ಚ ಶಕ್ತೀ ತಾಭ್ಯಾಂ ವಿಶಿಷ್ಟೌ (ಶಿವಜೀವೌ) ತಯೋರದ್ವೈತಂ ಶಕ್ತಿವಿಶಿಷ್ಟಾದ್ವೈತಂ" ಎಂಬ ವ್ಯುತ್ಪತ್ತಿಯಂತೆ ಶಕ್ತಿವಿಶಿಷ್ಟನಾದ ಶಿವನಿಗೂ ಶಕ್ತಿವಿಶಿಷ್ಟನಾದ ಜೀವನಿಗೂ ಸಾಮರಸ್ಯವೆಂದರ್ಥ. ಶಕ್ತಿಯು "ಸೂಕ್ಷ್ಮ ಚಿದಚಿದ್ರೂಪಶಕ್ತಿ" ಮತ್ತು "ಸ್ಥೂಲ ಚಿದಚಿದ್ರೂಪಶಕ್ತಿ" ಎಂದು ಎರಡು ವಿಧ. ಚಿತ್ ಎಂದರೆ ಚೇತನ, ಅಚಿತ್ ಎಂದರೆ ಅಚೇತನ ಅಥವಾ ಜಡ. ಶಕ್ತಿಶ್ಚ ಶಕ್ತಿಶ್ಚ ಶಕ್ತೀ, ಎನ್ನುವ ಕಡೆ, ಮೊದಲನೆಯ ಶಕ್ತಿ ಪದವು ಸೂಕ್ಷ್ಮ ಚಿದಚಿದ್ರೂಪ ಶಕ್ತಿಯನ್ನೂ ಆ ಶಕ್ತಿಯಿಂದ ಕೂಡಿದ ಶಿವನನ್ನೂ ಎರಡನೆಯ ಶಕ್ತಿಪದವು ಸ್ಥೂಲ ಚಿದಚಿದ್ರೂಪ ಶಕ್ತಿಯನ್ನೂ ಆ ಶಕ್ತಿಯಿಂದ ಕೂಡಿದ ಜೀವನನ್ನೂ ಬೋಧಿಸುತ್ತವೆ; ಅದ್ವೈತಪದವು ಈ ಶಿವಜೀವರಿಗೆ ಭೇದವಿಲ್ಲ; ಇದ್ದರೂ ಒಂದೇ ಎಂಬುದನ್ನು ಬೋಧಿಸುತ್ತದೆ.

"ಕಾರ್ಯೋಪಯೋಗೇಽಪೃಥಕ್ಸಿದ್ಧವಿಶೇಷಣಂ ಹಿ ಶಕ್ತಿಃ" ಎಂಬ ಲಕ್ಷಣದಂತೆ ಜಡಾಜಡಾತ್ಮಕವಾದ ಈ ಪ್ರಪಂಚ ರೂಪಕಾರ್ಯದ ಉತ್ಪತ್ತಿಗೆ ಸಹಾಯಕವಾಗಿ ಪರಶಿವನಲ್ಲಿ ಅಭೇದ ರೂಪದಿಂದ ನೆಲಸಿರುವ ವಿಶೇಷಣಕ್ಕೆ ಶಕ್ತಿಯೆಂದು ಹೆಸರು. ಸೃಷ್ಟಿಗಿಂತ ಪೂರ್ವ ಜಡಾಜಡಾತ್ಮಕವಾದೀ ಪ್ರಪಂಚವು ನಾಮರೂಪಕ್ರಿಯೆಗಳನ್ನು ತಾಳದೆ ಅವ್ಯಕ್ತರೂಪದಿಂದ ಪರಶಿವನಲ್ಲಿ ಇರುವುದಾದಕಾರಣ ಪರಶಿವನು ಸೂಕ್ಷ್ಮ ಚಿದಚಿದ್ವಿಶಿಷ್ಟ ಶಕ್ತಿಯುಕ್ತನೆಂದು ವ್ಯವಹರಿಸಲ್ಪಡುತ್ತಾನೆ.



CC-0. Jangamwadi Math Collection, Varanasi. An eGangotri Initiative

ಜಡಾಜಡಾತ್ಮಕವಾದೀ ಪ್ರಪಂಚವು ನಾಮರೂಪಕ್ರಿಯೆಗಳನ್ನು ಕಳೆದು ಸ್ಥೂಲರೂಪದಿಂದ ಜೀವನಲ್ಲಿ ಇರುವುದಾದಕಾರಣ ಜೀವನು ಸ್ಥೂಲ ಚಿದಚಿದ್ರೂಪ ಶಕ್ತಿಯುಕ್ತನೆಂದು ವ್ಯವಹರಿಸಲ್ಪಡುತ್ತಾನೆ.

" ತದ್ವೇದಂ ತರ್ಹ್ಯವ್ಯಾಕೃತಮಾಸೀತ್ ತನ್ನಾಮರೂಪಾಭ್ಯಾಂ ವ್ಯಾಕ್ರಿಯತ "

ಎಂಬ ಬೃಹದಾರಣ್ಯಕವು ಈ ಪ್ರಪಂಚವು ಸೃಷ್ಟಿಗೆ ಪೂರ್ವನಾಮರೂಪಾದಿಗಳಿಲ್ಲದೆ ಪರಶಿವನಲ್ಲಿ ಸಮವಾಯ ಸಂಬಂಧದಿಂದ ನೆಲಸಿರುವ ಶಕ್ತಿಯಲ್ಲಿ ಸೂಕ್ಷ್ಮ ರೂಪದಿಂದ ಅಡಗಿದ್ದಿತೆಂದು ಹೇಳುತ್ತದೆ.

" ಶಕ್ತಯೋಽಸ್ಯ ಜಗತ್ಕೃತ್ಸ್ನಂ ಶಕ್ತಿಮಾಂಶ್ಚ ಮಹೇಶ್ವರಃ ।<br>
ಶಕ್ತಿಸ್ತು ಶಕ್ತಿಮದ್ರೂಪಾತ್ ವ್ಯತಿರೇಕಂ ನ ಗಚ್ಛತಿ ॥<br>
ತಾದಾತ್ಮ್ಯಮನಯೋರ್ನಿತ್ಯಂ ವಹ್ನಿದಾಹಕಯೋರಿವ ।<br>
ಶಕ್ತಿಶಕ್ತಿಮತೋರ್ಯಸ್ಮಾದಭೇದಸ್ಸರ್ವದಾ ಸ್ಥಿತಃ ॥ "

ಇಂತಹ ಶಕ್ತಿವಿಶಿಷ್ಟನಾದ ಶಿವನನ್ನೇ ಬ್ರಹ್ಮ ಎಂಬ ಶಬ್ದವು ಬೋಧಿಸುವುದು.

" ಕ್ಷರಂ ಪ್ರಧಾನಮಮೃತಾಕ್ಷರಂ ಹರಃ, ತಸ್ಮಾತ್ಸರ್ವಗತಃ ಶಿವಃ, ವಿಶ್ವಾಧಿಕೋ ರುದ್ರೋ ಮಹರ್ಷಿಃ, ಮಾಯಿನಂತು ಮಹೇಶ್ವರಂ, ತಮೀಶ್ವರಾಣಾಂ ಪರಮಂ ಮಹೇಶ್ವರಂ । ತಂ ದೇವತಾನಾಂ ಪರಮಂ ಚ ದೈವತಂ ॥ ಪತಿಂ ಪತೀನಾಂ ಪರಮಂ ಪರಸ್ತಾದ್ವಿದಾಮ ದೇವಂ ಭುವನೇಶಮೀಡ್ಯಂ "

( ಶ್ವೇತಾಶ್ವತರೋಪನಿಷತ್ )

" ಸರ್ವಮಿದಂ ಬ್ರಹ್ಮವಿಷ್ಣುರುದ್ರೇಂದ್ರಾಸ್ತೇ ಸಂಪ್ರಸೂಯಂತೆ "

( ಅಥರ್ವಶಿಖಾ )

ಮುಂತಾದ ಉಪನಿಷದ್ವಾಕ್ಯಗಳಿಂದ, ಶಿವನಿಗೆ ಸರ್ವಕಾರಣತ್ವವನ್ನು ಪ್ರತಿಪಾದಿಸಿ, ಅವನೇ ಬ್ರಹ್ಮನೆಂದು ಹೇಳಿಸಿಕೊಳ್ಳಲ್ಪಡುವನೆಂದು ವೀರಶೈವಮತಸ್ಥಾಪಕರು ತಮ್ಮ ಸಿದ್ಧಾಂತ ಗ್ರಂಥಗಳಲ್ಲಿ ಸ್ಪಷ್ಟಪಡಿಸಿರುತ್ತಾರೆ.

ಸಂಸಾರತಾಪಸಂತಪ್ತರಾದ ಜನರನ್ನುದ್ಧರಿಸಲು—

" ಜ್ಞಾತ್ವಾ ಶಿವಂ ಶಾಂತಿಮತ್ಯಂತಮೇತಿ " ( ಶ್ವೇ. ಉಪ ) " ಬ್ರಹ್ಮವಿದಾಪ್ನೋತಿ ಪರಂ, ಸತ್ಯಂ ಜ್ಞಾನಮನಂತಂ ಬ್ರಹ್ಮ " ( ತೈತ್ತಿ. ಉಪ ) " ಜ್ಞಾತ್ವಾ ತಂ ಮೃತ್ಯುಮತ್ಯೇತಿ " " ನಾನ್ಯಃ ಪಂಥಾ ವಿಮುಕ್ತಯೆ (ಕೈವಲ್ಯೋಪನಿಷತ್) ' ತಮೇವ ವಿದಿತ್ವಾತಿಮೃತ್ಯು ಮತ್ಯೇತಿ, ನಾನ್ಯಃ ಪಂಥಾ ವಿದ್ಯತೇಽಯನಾಯ "

ಎಂದು ಮುಂತಾದ ಶ್ರುತಿವಾಕ್ಯಗಳಿಂದ ಸಿದ್ಧವಾಗುವಂತೆ ಬ್ರಹ್ಮಜ್ಞಾನವೇ ಮೋಕ್ಷಕ್ಕೆ ಮುಖ್ಯಸಾಧನವೆಂದರಿತು, ವ್ಯಾಸಮಹರ್ಷಿಗಳು ತಮ್ಮ ಬ್ರಹ್ಮಮೀಮಾಂಸೆಯ ಪ್ರಾರಂಭದಲ್ಲಿ—"ಅಥಾತೋ ಬ್ರಹ್ಮ ಜಿಜ್ಞಾಸಾ" ಎಂಬ ಸೂತ್ರದಿಂದ ಶಿವ ಶಬ್ದ ವಾಚ್ಯನಾದ ಬ್ರಹ್ಮನ ವಿಚಾರವು ಅವಶ್ಯ ಕರ್ತವ್ಯನೆಂದು ತೋರಿಸಿರುತ್ತಾರೆ.



CC-0. Jangamwadi Math Collection, Varanasi. An eGangotri Initiative

ಈ ಸೂತ್ರದಲ್ಲಿರುವ 'ಅಥ' ಶಬ್ದಕ್ಕೆ ಶ್ರೀಪತಿ ಪಂಡಿತರು ತಮ್ಮ ಭಾಷ್ಯದಲ್ಲಿ ಸ್ಥೂಲ ಸೂಕ್ಷ್ಮ ಚಿದಚಿತ್ಪ್ರಪಂಚ ಪ್ರಕಾಶಕ ಷಟ್‌ಸ್ಥಲ ಪರಶಿವ ಸಾಕ್ಷಾತ್ಕಾರಕ್ಕೆ ಕಾರಣವೂ ಶರೀರ ತ್ರಯಗತ ಮಲತ್ರಯ ಧ್ವಂಸಕವೂ ಅಷ್ಟಾವರಣ ಪಂಚಾಚಾರ ಸದ್ಗುರು ಕಟಾಕ್ಷಲಬ್ಧ ಶಕ್ತಿ ಪಾತಾದ್ಯವಚ್ಛಿನ್ನ ಪರಶಿವೇಷ್ಟಲಿಂಗಧಾರಣಾತ್ಮಕವೂ ಆದ ಶೈವದೀಕ್ಷೆಯ ಅನಂತರವೆಂದು ಅರ್ಥಮಾಡಿರುತ್ತಾರೆ.

"ಅಥ" ಶಬ್ದದ ಮುಂದೆ ಸೂತ್ರಕಾರರು ಉಪಯೋಗಿಸಿರುವ "ಅತಃ" ಎಂಬ ಶಬ್ದದಿಂದ "ಅಸಾವಾದಿತ್ಯೋ ಬ್ರಹ್ಮ" "ಅನ್ನಂ ಬ್ರಹ್ಮ" "ನಾರಾಯಣಪರಂ ಬ್ರಹ್ಮ" "ಓಮಿತ್ಯೇಕಾಕ್ಷರಂ ಬ್ರಹ್ಮ" ಮೊದಲಾದ ಶ್ರುತಿಗಳಿಂದ ವಿವಿಧವಾದ ಉಪಾಸನೆಗಳು ತೋರಿ ಬರುತ್ತಿರುವಲ್ಲಿ ವೀರಶೈವದೀಕ್ಷಾಪೂರ್ವಕವಾದ ಇಷ್ಟಲಿಂಗ ಧಾರಣೆಯಿಂದಲೇ ಬ್ರಹ್ಮಜ್ಞಾನೇಚ್ಛೆಯು ಹೇಗೆ ಉಂಟಾಗುವುದೆಂಬ ಸಂಶಯವುಂಟಾದರೆ ಅದರ ನಿವೃತ್ತಿಗಾಗಿ ವೇದಗಳ ಕರ್ಮ ಕಾಂಡದಲ್ಲಿ ಹೇಳಿದ 'ಅಸಾವಾದಿತ್ಯೋ ಬ್ರಹ್ಮ' ಮುಂತಾದ ಶ್ರುತಿವಾಕ್ಯಗಳಿಗಿಂತಲೂ ಜ್ಞಾನ ಕಾಂಡದಲ್ಲಿ ಹೇಳಿದ "ಅಮೃತಸ್ಯ ದೇವಧಾರಣೋ ಭೂಯಾಸಂ" ಎಂಬ ವಾಕ್ಯಗಳು ಪ್ರಬಲಕರ ವಾದುದರಿಂದಲೂ,

"ಉಮಾ ಸಹಾಯಂ ಪರಮೇಶ್ವರಂ ಪ್ರಭುಂ ತ್ರಿಲೋಚನಂ ನೀಲಕಂಠಂ ಪ್ರಶಾಂತಂ। ಧ್ಯಾತ್ವಾ ಮುನಿರ್ಗಚ್ಛತಿ ಭೂತಯೋನಿಂ ಸಮಸ್ತಸಾಕ್ಷಿಂ ತಮಸಃ ಪರಸ್ತಾತ್॥ ಸ ಬ್ರಹ್ಮಾ ಸ ಶಿವಸ್ಸೇಂದ್ರಸ್ಸೋಽಕ್ಷರಃ ಪರಮಸ್ಸ್ವರಾಟ್। ಸ ಏವ ವಿಷ್ಣುಃ ಸಕಾಲೋಽಗ್ನಿಸ್ಸ ಚಂದ್ರಮಾಃ। ಸ ಏವ ಸರ್ವಂ ಯದ್ಭೂತಂ ಯಚ್ಚ ಭವ್ಯಂ ಸನಾತನಂ॥" "ಜ್ಞಾತ್ವಾ ತಂ ಮೃತ್ಯುಮುತ್ಯೇತಿ ನಾನ್ಯಃ ಪಂಥಾ ವಿಮುಕ್ತಯೇ" (ಕೈವಲ್ಯ ಶ್ರುತಿ)

ಎಂದು ಮುಂತಾದ ಶ್ರುತಿಗಳಿಂದ ಪರಮಕಾರಣನಾದ ಶಿವನೇ ಬ್ರಹ್ಮಶಬ್ದವಾಚ್ಯನಾಗಿರುವುದ ರಿಂದಲೂ ಇಂಥ ಉಮಾ (ಶಕ್ತಿ) ಸಹಿತನಾದ ಶಿವನನ್ನು ತಿಳಿಯಬೇಕೆಂಬುವ ಇಚ್ಛೆಯು ಅಷ್ಟಾವರಣ ವಿಶಿಷ್ಟ ಪಂಚಾಚಾರರೂಪ ಪತಿಧರ್ಮವನ್ನು ಪಡೆದನಂತರವೇ ಉಂಟಾಗುವುದೆಂಬು ದನ್ನು ತೋರಿಸಿರುತ್ತಾರೆ.

ಈ ಬ್ರಹ್ಮದ ಲಕ್ಷಣವೇನು ? ಅದರ ಸ್ವರೂಪವೇನು ? ಎಂಬುದನ್ನು ಎರಡನೆಯದಾದ "ಜನ್ಮಾದ್ಯಸ್ಯ ಯತಃ" ಎಂಬ ಸೂತ್ರವು ತಿಳಿಸುತ್ತದೆ.

ಈ ಸೂತ್ರದಿಂದ ಚೇತನಾಚೇತನಾತ್ಮಕವಾದ ಪ್ರಪಂಚದ ಸೃಷ್ಟಿ, ಸ್ಥಿತಿ, ಲಯ, ತಿರೋ ಧಾನ, ಅನುಗ್ರಹಗಳೆಂಬ ಪಂಚಕೃತ್ಯ ನಿರ್ವಹಣ ಸಾಮರ್ಥ್ಯವೆಂಬ ಬ್ರಹ್ಮದ ತಟಸ್ಥ ಲಕ್ಷಣವೂ ಸಚ್ಚಿದಾನಂದತ್ವವೆಂಬ ಸ್ವರೂಪ ಲಕ್ಷಣವೂ ಬೋಧಿತವಾಗುತ್ತದೆಂದು ವೀರಶೈವಸಿದ್ಧಾಂತ ಕಾರರು ಸಮರ್ಥಿಸಿರುತ್ತಾರೆ.

ಇದರಿಂದ ಈ ಮತದಲ್ಲಿ ಬ್ರಹ್ಮವು ನಿರ್ವಿಶೇಷ, ನಿರ್ಗುಣ ಅಥವಾ ನಿಷ್ಪ್ರಪಂಚವಲ್ಲ. ಬ್ರಹ್ಮವು ಜ್ಞಾನಕ್ರಿಯಾಶಕ್ತಿವಿಶಿಷ್ಟವಾದುದು. ಶಕ್ತಿವಿಶಿಷ್ಟವಾದೀ ಬ್ರಹ್ಮವು ತಾನೇ ಚೇತನಾ ಚೇತನಾತ್ಮಕ ಪ್ರಪಂಚರೂಪವಾಗಿ ಪರಿಣಮಿಸಿರುವುದು. ಸಾಗರದ ಅಲೆಗಳಲ್ಲಿ ಫೇನ ಬುದ್ಬುದಾದಿ



CC-0. Jangamwadi Math Collection, Varanasi. An eGangotri Initiative

ಗಳು ಹುಟ್ಟಿ, ಇದ್ದು, ಅಳಿದರೂ ಕೊನೆಗೆ ಹೇಗೆ ಆ ಸಾಗರದ ರೂಪವೇ ಆಗಿ ತೋರುವುದೋ ಹಾಗೆ ಶಕ್ತಿವಿಶಿಷ್ಟವಾದ ಬ್ರಹ್ಮದಲ್ಲಿ ಈ ಜಗತ್ತೆಲ್ಲವೂ ತನ್ನ ಜನ್ಮವನ್ನು ತಾಳಿ, ಬಳೆದು ಅಳಿದರೂ ಕೊನೆಗೆ ಆ ಬ್ರಹ್ಮದ ರೂಪವೇ ಆಗಿ ತೋರಬೇಕಲ್ಲದೆ ಬೇರೆ ವಿಧವಾಗಿ ತೋರಲಾರದು.

ಶಿವತತ್ತ್ವಾತ್ಸಮುತ್ಪನ್ನಂ ಜಗದಸ್ಮಾನ್ನ ಭಿದ್ಯತೇ ।
ಫೇನೋರ್ಮಿ ಬುದ್ಬುದಾಕಾರೋ ಯಥಾ ಸಿಂಧೋರ್ನ ಭಿದ್ಯತೇ ॥
(ಸಿದ್ಧಾಂತ ಶಿಖಾಮಣಿ)

ಅಥರ್ವ ಶಿರಸ್ಸಿನಲ್ಲಿ—

"ಅಹಮೇಕಃ ಪ್ರಥಮಮಾಸಂವರ್ತಾಮಿ ಚ ಭವಿಷ್ಯಾಮಿ ಚ ।
ನಾನ್ಯಃ ಕಶ್ಚಿನ್ಮತ್ತೋ ವ್ಯತಿರಿಕ್ತಃ ॥"

ಎಂದು ಈಶ್ವರನೇ ಸಾರಿರುತ್ತಾನೆ.

ಬ್ರಹ್ಮನು ಶಕ್ತಿವಿಶಿಷ್ಟವೇನೆಂಬುದಕ್ಕೆ ಪ್ರಮಾಣವೇನೆಂದರೆ—

"ಪರಾಸ್ಯ ಶಕ್ತಿರ್ವಿವಿಧೈವ ಶ್ರೂಯತೇ ಸ್ವಾಭಾವಿಕೀ ಜ್ಞಾನ ಬಲ ಕ್ರಿಯಾ ಚ ।"
"ಏಕ ಏವ ರುದ್ರೋ ನ ದ್ವಿತೀಯಾಯತಸ್ಥೇ । ಯ ಇಮಾಂ ಲೋಕಾನೀಶತ ಈಶನೀಭಿಃ ಪರಮಶಕ್ತಿಭಿಃ ॥"
(ಶ್ವೇತಾಶ್ವತರೋಪನಿಷತ್) ಇತ್ಯಾದಿ.

ಶ್ರುತಿವಾಕ್ಯಗಳು ಷಟ್‌ಸ್ಥಲಾತ್ಮಕ ಪರಶಿವನಾದ ಪರಬ್ರಹ್ಮನಿಗೆ ಸ್ವಾಭಾವಿಕವೂ ಅನಂದವೂ ನಾನಾರೂಪವುಳ್ಳುದೂ ಆದ ಶಕ್ತಿಯಿಂದ ಕೂಡಿರುವಿಕೆಯನ್ನು ಹೇಳುತ್ತವೆ. ಈ ಶಕ್ತಿವಿಶಿಷ್ಟತ್ವವನ್ನು ಅಂಗೀಕರಿಸಿದ ಹೊರತು ಸರ್ವಜ್ಞತ್ವ, ಸರ್ವಶಕ್ತಿಮತ್ವ, ಸರ್ವಕಾರಣತ್ವ, ಸರ್ವನಿಯಂತೃತ್ವ, ಸರ್ವಾನುಗ್ರಾಹಕತ್ವ ಮುಂತಾದುವುಗಳು ಆ ಬ್ರಹ್ಮದಲ್ಲಿ ತೋರಲಾರದೇ ಹೋಗುವುವು.

ಶಕ್ತ್ಯಾದಿ ಚ ಪೃಥಿವ್ಯಂತಂ ಜಗದೇತಚ್ಚರಾಚರಂ ।
ಶಿವಶಕ್ತಿಸಮುತ್ಪನ್ನಂ ತಂತೂರ್ಣಾತೋಽಪ್ಯವೋ ಯಥಾ ॥
ಶಕ್ತಿಮಾನುಚ್ಯತೇ ದೇವಃ ಸಚ್ಚಿದಾನಂದಲಕ್ಷಣಃ ।
ಧರ್ಮರೂಪಾ ಪರಾಶಕ್ತಿಃ ಧರ್ಮಿರೂಪಃ ಪರಶ್ಶಿವಃ ॥
ತಸ್ಮಾನಾವೃತರೂಪತ್ವಾತ್ ಪರಾಶಕ್ತಿಃ ಪರಾತ್ಮನಃ ।
ಸರ್ವದಾ ತತ್ಸ್ವರೂಪೇಣ ಭಾತಿ ಭಾನೋರಿವ ಪ್ರಭಾ ॥
ತಾದಾತ್ಮ್ಯಮನಯೋರ್ನಿತ್ಯಂ ಧರ್ಮಧರ್ಮಿ ಸ್ವಭಾವತಃ ।
ತತ್ರಸ್ವತಂತ್ರರೂಪೇಣ ಶಿವಸ್ಸಚ್ಚಿತ್ಸುಖಾತ್ಮಕಃ ॥
ಶಕ್ತಿಸ್ತು ಪಾರತಂತ್ರ್ಯೇಣ ವಿಶ್ವೋತ್ಪಾದನಮಿಷ್ಯತೇ ॥
(ಶಿವಾದಿತ್ಯ ಚರಣಕೃತ ಶಕ್ತಿಸಂದೋಹ)

ಎಂಬಂತೆ ಶಕ್ತಿವಿಶಿಷ್ಟ ಶಿವನೇ ಜಗತ್ಸ್ವರೂಪನಾಗಿ, ಅದರ ಉತ್ಪತ್ತಿಗೆ ಉಪಾದಾನ ಕಾರಣನಾಗಿರುತ್ತಾನೆ. ಶಿವನಿಷ್ಠವಾದ ಶಕ್ತ್ಯಂಶವು ಮಾತ್ರ ಜಗದ್ರೂಪವಾಗಿ ಪರಿಣಮಿಸುವುದರಿಂದ ಶಿವನು ನಿರ್ವಿಕಾರನಾಗಿಯೇ ಇರುತ್ತಾನೆ. ಅಲ್ಲದೆ ಪ್ರಪಂಚೋತ್ಪತ್ತಿಗೆ ಶಿವಮಾಯೆಯರಿಬ್ಬರೂ (ಶಿವನು ಸ್ವಾತಂತ್ರ್ಯದಿಂದ ಮಾಯೆಯು ಪಾರತಂತ್ರದಿಂದ) ಉಪಾದಾನ ಕಾರಣವಾದರೂ ಶಿವನಿಷ್ಠವಾದ



CC-0. Jangamwadi Math Collection, Varanasi. An eGangotri Initiative

ಚಿದಾನಂದ ರೂಪತ್ವವು ಪ್ರಪಂಚಕ್ಕೆ ಬರಲಾರದು. ಹೇಗೆಂದರೆ, ಧೂಮರೂಪ ಕಾರ್ಯಕ್ಕೆ ಆದ್ರೇಂಧನ ವಹ್ನಿಗಳೆರಡೂ ಕಾರಣವಾದರೂ ಧೂಮದಲ್ಲಿ ಕಾಷ್ಠ ಧರ್ಮವಾದ ಕೃಷ್ಣರೂಪ ವಿರುವುದೇ ವಿನಾ ವಹ್ನಿಧರ್ಮವಾದ ಭಾಸ್ವರರೂಪವು ಕಾಣಬರುವುದಿಲ್ಲ.

"ಪಟವಚ್ಚ" ಎಂಬ ಸೂತ್ರದ ಪ್ರಕಾರ ಸಂಕುಚಿತವಾದ ಪಟವು ವಿಸ್ತೃತರೂಪದಿಂದ ಕುಟೀರವಾಗಿ ಪರಿಣಮಿಸುವಂತೆ ಶಕ್ತಿಯ ಸಂಕೋಚ ಮತ್ತು ವಿಕಾಸಾವಸ್ಥೆಗಳ ಭೇದದಿಂದ ಪರಿಣಮಿಸುತ್ತಾನೆ. ಇಲ್ಲಿ ಪರಿಣಾಮವೆಂದರೆ— "ಪೂರ್ವ ರೂಪತ್ಯಾಗ ಪೂರ್ವಕಂ ಅನ್ಯರೂಪ ಗ್ರಹಣಂ ಪರಿಣಾಮಃ" ಎಂಬ ಲಕ್ಷಣವನ್ನು ವೀರಶೈವಮತೀಯರು ಅಂಗೀಕರಿಸುವುದಿಲ್ಲ. ಕ್ಷೀರ ದಧಿ ನ್ಯಾಯದಂತೆ ಸಂಪೂರ್ಣ ಬ್ರಹ್ಮವೇ ಜಗದ್ರೂಪವಾಗಿ ಪರಿಣಮಿಸುವುದಿಲ್ಲ. ಮತ್ತೇನಂದರೆ– "ಸ್ಥಿತ ಏವೋಪಾದಾನೇ ತದ್ಭಿನ್ನವ್ಯವಹಾರಯೋಗ್ಯಕಾರ್ಯೋತ್ಪತ್ತಿರೇವ ಪರಿಣಾಮಃ" ಎಂಬ ಲಕ್ಷಣದಂತೆ ತಂತುಪಟದಂತೆಯೂ ಸ್ವರ್ಣ ಕುಂಡಲದಂತೆಯೂ ಮೃತ್ತಿಕಾಘಟದಂತೆಯೂ ಪರಶಿವನು ತಾನಿದ್ದುಕೊಂಡೇ ತನ್ನ ಶಕ್ತ್ಯಂಶದಿಂದ ಜಗದ್ರೂಪವಾಗಿ ಪರಿಣಮಿಸುವನೆಂದು ಇವರ ಸಿದ್ಧಾಂತ.

ಈ ಶಕ್ತಿಯು ಪರಶಿವನಿಂದ ಅಪೃಥಕ್ ಸಿದ್ಧವಾಗಿ (ಬೇರೆಯಾಗಿರದೆ) ಅವನ ಸರ್ವ ಕಾರ್ಯ ನಿರ್ವಾಹಕವಾಗಿ, ಅವನ ಗುಣವೂ ಸ್ವರೂಪವೂ ಎನಿಸಿಕೊಂಡು, ಸಚ್ಚಿದಾನಂದ ಶಿವಾಭಿನ್ನ ಬ್ರಹ್ಮರೂಪಿಣಿಯಾದ ಚಿಚ್ಛಕ್ತಿಯೆನಿಸಿಕೊಳ್ಳುವುದು. ಈ ಶಕ್ತಿಗೇನೇ ಶಿವತತ್ತ್ವ, ಪರಬಿಂದು, ಪರಮಾಯಾ, ಪ್ರಕೃತಿ, ಶುದ್ಧಮಾಯಾ, ಮಹಾಮಾಯಾ, ಕುಟಿಲಾ, ಕುಂಡಲಿನೀ ಮುಂತಾದ ಪರ್ಯಾಯ ಶಬ್ದಗಳಿರುತ್ತವೆ.

ಕೂರ್ಮಪುರಾಣದ ವಿಶ್ವರೂಪ ಪ್ರದರ್ಶನಾಧ್ಯಾಯದಲ್ಲಿ ಗಿರಿರಾಜನನ್ನು ಕುರಿತು—

"ಮಾಂ ವಿದ್ಧಿ ಪರಮಾಂ ಶಕ್ತಿಂ ಮಹೇಶ್ವರಸಮಾಶ್ರಯಾಂ।
ಅನನ್ಯಾಮವ್ಯಯಾಮೇಕಾಂ ಮಾಂ ಪಶ್ಯಂತಿ ಮುಮುಕ್ಷವಃ॥
ಅಹಂ ವೈ ಸರ್ವಭೂತಾನಾಮಾತ್ಮಾ ಸರ್ವಾಂತರಾ ಶಿವಾ।
ಶಾಶ್ವತೈಶ್ವರ್ಯವಿಜ್ಞಾನಮೂರ್ತಿಸ್ಸರ್ವ ಪ್ರವರ್ತಿಕಾ॥
ಅನಂತಾನಂತಮಹಿಮಾ ಸಂಸಾರಾರ್ಣವತಾರಿಣೀ।
ದಿವ್ಯಂ ದದಾಮಿ ತೇ ಚಕ್ಷುಃ ಪಶ್ಯ ಮೇ ರೂಪಮೈಶ್ವರಂ॥"

ಎಂದು ದೇವಿಯು ಹೇಳಿರುವ ವಾಕ್ಯಗಳಿಂದ ವೀರಶೈವಮತದ ರೀತ್ಯಾ ಈ ಶಕ್ತಿಯ ಸ್ವರೂಪವನ್ನು ಸ್ಪಷ್ಟವಾಗಿ ತಿಳಿದುಕೊಳ್ಳಬಹುದು.

ಇಂತಹ ಶಕ್ತಿಯ ಬಲದಿಂದ ಪರಶಿವನು ಶಿವಾದಿ ಭೂಮ್ಯಂತವಾದ ಸಕಲ ತತ್ತ್ವಗಳನ್ನೂ ಸೃಷ್ಟಿಸಿ "ತತ್ಸೃಷ್ಟ್ವಾ ತದೇವಾನುಪ್ರಾವಿಶತ್ ತದನುಪ್ರವಿಶ್ಯ ಸಚ್ಚತ್ಯಚ್ಚಾಭವತ್" ಎಂಬ ತೈತ್ತಿರೀಯ ವಾಕ್ಯದಂತೆ ಅಂತರ್ಯಾಮಿ ರೂಪದಿಂದ ಆ ತತ್ತ್ವಗಳಲ್ಲಿ ಪ್ರವೇಶಿಸಿ, ಸೃಷ್ಟಿ, ಸ್ಥಿತಿ, ಸಂಹಾರಾದಿಗಳೆಂಬ ಮಹಾನಾಟ್ಯದಲ್ಲಿ ರಸಿಕನಾಗಿ "ಲೋಕವತ್ತು ಲೀಲಾ ಕೈವಲ್ಯಂ" ಎಂಬ ಸೂತ್ರಾರ್ಥದಂತೆ ಕ್ರೀಡಿಸುತ್ತಿರುವನು.



CC-0. Jangamwadi Math Collection, Varanasi. An eGangotri Initiative

ಇನ್ನು ಜೀವನ ಲಕ್ಷಣವನ್ನು ಗಮನಿಸೋಣ. ಹಿಂದೆಯೇ ಹೇಳಿದಂತೆ ಸ್ಥೂಲಚಿದ ಚಿದ್ರೂಪ ಶಕ್ತಿವಿಶಿಷ್ಟನೇ ಜೀವನು. ಈ ಶಕ್ತಿಯು ಅನೇಕವಾಗಿರುವುದರಿಂದ ತದ್ವಿಶಿಷ್ಟ ಜೀವರೂ ಅನೇಕವಾಗಿದ್ದಾರೆ. ಕಾರಣರೂಪವಾದ ಮೃತ್ತಿಕೆಯು ಒಂದೇ ಆಗಿದ್ದರೂ ಅದರ ಕಾರ್ಯರೂಪ ವಾದ ಘಟಶರಾವಾದಿಗಳೂ ಆ ಘಟವಿಶಿಷ್ಟವಾದ ಆಕಾಶವೂ ಅನೇಕವಾಗಿ ತೋರುವಂತೆ ಕಾರಣೋಪಾಧಿಯು ಒಂದೇ ಆದರೂ ಕಾರ್ಯೋಪಾಧಿಯೆನಿಸುವ ಸ್ಥೂಲ ಚಿದಚಿದ್ರೂಪ ಶಕ್ತಿಯು ಪರಿಚ್ಛಿನ್ನವಾಗಿ ಅನಂತವಾಗಿರುವುದರಿಂದಲೂ ಅಂತಹ ಶಕ್ತಿವಿಶಿಷ್ಟನಾದ ಜೀವನೂ ಪರಿಚ್ಛಿನ್ನ ನಾಗಿಯೂ ಅನಂತನಾಗಿಯೂ ತೋರುತ್ತಾನೆ. ಇದಕ್ಕೆ ಪ್ರಮಾಣ:—

ವಾಲಾಗ್ರಶತಭಾಗಸ್ಯ ಶತಧಾ ಕಲ್ಪಿತಸ್ಯ ಚ ।
ಭಾಗೋ ಜೀವಸ್ಸವಿಜ್ಞೇಯಃ ಸ ಚಾನಂತಾಯ ಕಲ್ಪತೇ ॥

(ಶ್ವೇತಾಶ್ವತರೋಪನಿಷತ್)

ಜೀವನಿಗೆ ಉಪಾಧಿಯಾದ ಈ ಸ್ಥೂಲ ಅಂದರೆ ಮಲತ್ರಯ ವಿಶಿಷ್ಟ ಚಿದಚಿದ್ರೂಪ ಶಕ್ತಿಯು 'ಆವರಣ ಶಕ್ತಿ, ಔನ್ಮುಖ್ಯ ಶಕ್ತಿ' ಎಂದು ಎರಡು ವಿಧವಾಗಿದೆ. ಸೂಕ್ಷ್ಮ ಚಿಚ್ಛಕ್ತಿಯ ಪರಿಣಾಮವೇ 'ಆವರಣ ಶಕ್ತಿ'ಯೆನಿಸಿಕೊಳ್ಳುತ್ತದೆ. ಈ ಶಕ್ತಿಯು ಕಲಾ, ವಿದ್ಯಾ, ರಾಗ, ಕಾಲ, ನಿಯತಿ ಎಂಬ ಐದು ಭೇದಗಳಿಂದ ಜೀವನದಲ್ಲಿ ಕಿಂಚಿತ್ಕರ್ತೃತ್ವ, ಕಿಂಚಿಜ್ಞತ್ವ, ಅಪೂರ್ಣತ್ವ, ಅನಿತ್ಯತ್ವ, ಅವ್ಯಾಪಕತ್ವಗಳೆಂಬ ಪಂಚ ಕಂಚುಕಗಳನ್ನು ಕಲ್ಪಿಸಿ ಜೀವನ ಸ್ವಸ್ವರೂಪವನ್ನು ಆವರಿ ಸುತ್ತದೆ. ಸೂಕ್ಷ್ಮ ಅಚಿಚ್ಛಕ್ತಿಯ ಪರಿಣಾಮವೇ 'ಔನ್ಮುಖ್ಯ ಶಕ್ತಿ'ಯೆನಿಸಿಕೊಂಡು ಆಯಾಯ ಜೀವರ ಸುಖದುಃಖಾದಿಗತ ಭೋಗಕ್ಕೆ ಅನುಕೂಲವಾಗುತ್ತದೆ. ಅಲ್ಲದೆ ಈ ಶಕ್ತಿಯೇ ಪರಶಿವ ನಿಂದ ಪ್ರೇರಿತವಾಗಿ ಪ್ರಕೃತ್ಯಾದಿ ಪೃಥಿವ್ಯಂತವಾದ ೨೪ ತತ್ತ್ವಗಳಾಗಿ ಪರಿಣಮಿಸುತ್ತವೆ.

ಇಲ್ಲಿ ಸ್ಥೂಲ ಪ್ರಪಂಚವೂ ಅದಕ್ಕೆ ಕಾರಣವಾದ ಸೂಕ್ಷ್ಮ ಭೂತಗಳೂ ಸ್ಥೂಲ ಅಚೇತನ ಶಕ್ತಿಸ್ವರೂಪವೆಂದೂ ಇವುಗಳೆಲ್ಲಕ್ಕೂ ಕಾರಣವು ಬಿಂಬಸ್ಥಾನೀಯವೂ ಆದ ಕಲಾದಿಪಂಚಕವೇ ಸ್ಥೂಲ ಚೇತನ ಶಕ್ತಿಸ್ವರೂಪವೆಂದೂ ಗ್ರಹಿಸಬೇಕಾಗಿದೆ.

'ನಿಲೋತ್ಪಲಂ' ಎಂಬ ಪದವು ನೀಲಗುಣವಿಶಿಷ್ಟ ದ್ರವ್ಯವನ್ನು ಬೋಧಿಸುವಂತೆ 'ಸರ್ವಂ ಖಲ್ವಿದಂ ಬ್ರಹ್ಮ' ಎಂಬ ಶ್ರುತಿವಾಕ್ಯದಲ್ಲಿರುವ 'ಸರ್ವಂ' ಎಂಬ ಪದವು ಚರಾಚರ ಪ್ರಪಂಚ ವಿಶಿಷ್ಟವಾದ ಶಿವತತ್ತ್ವವನ್ನು ಬೋಧಿಸುತ್ತದೆ.

"ವಿಗ್ರಹಂ ದೇವದೇವಸ್ಯ ಜಗದೇತಚ್ಚರಾಚರಂ ।
ಏಕಮರ್ಥಂ ನ ಜಾನಂತಿ ಪಶವಃ ಪಾಶಗೌರವಾತ್ ॥
ವಿದ್ಯೇತಿ ಚೇತನಾಂ ಪ್ರಾಹುಸ್ತಾಥಾಽವಿದ್ಯಾಮಚೇತನಾಂ ।
ವಿದ್ಯಾ ವಿದ್ಯಾತ್ಮಕಂ ಸರ್ವಂ ವಿಶ್ವಂ ವಿಶ್ವಗುರೋರ್ವಿಭೋಃ ॥"

(ವಾಯು ಸಂಹಿತಾ)

ಹೀಗೆ ಚೇತನಾಚೇತನಾತ್ಮಕ ಪ್ರಪಂಚವೆಲ್ಲವೂ ವ್ಯಾಪಕನಾದ ಪರಶಿವನಿಗೆ ನಿಯಮ್ಯ ವಾಗಿರುವುದರಿಂದ ಅವನಿಗೆ ಶರೀರರೂಪವಾಗಿರುತ್ತದೆ. ಇಂತಹ ಜಗದ್ರೂಪಿಯಾದ ಶಿವನಿಗೂ



CC-0. Jangamwadi Math Collection, Varanasi. An eGangotri Initiative

ತನಗೂ ಇರುವ ಸಂಬಂಧವನ್ನು ಮರೆತು ಜೀವನು ಸಂಸಾರದಲ್ಲಿ ತೊಳಲಿ ಬಳಲುತ್ತಿರುವನು. ಜೀವನು ಸ್ಥೂಲ ಚಿದಚಿದಾತ್ಮಕ ಶಕ್ತಿವಿಶಿಷ್ಟನಾದುದರಿಂದ ಇವನ ಸರ್ವಜ್ಞತ್ವ, ಸರ್ವಕರ್ತೃತ್ವ, ಪೂರ್ಣತ್ವ, ನಿತ್ಯತ್ವ, ವ್ಯಾಪಕತ್ವಗಳೆಂಬ ಸೂಕ್ಷ್ಮ ಶಕ್ತಿಗಳು ಸಂಕೋಚವಾಗುತ್ತವೆ. ಇದರಿಂದ ಇವನ ಅಪ್ರತಿಹತ ಸ್ವಾತಂತ್ರ್ಯರೂಪ ಇಚ್ಛಾಶಕ್ತಿಯು ಸಂಕುಚಿತವಾಗಿ ಇವನಲ್ಲಿ 'ನಾನು ಅಪೂರ್ಣನು' ಎಂಬ ಆಣವಮಲವನ್ನು, ಜ್ಞಾನಶಕ್ತಿಯು ಸಂಕುಚಿತವಾಗಿ 'ನಾನು ಕಿಂಚಿಜ್ಞನು' ಎಂಬ ಮಾಯಾಮಲವನ್ನೂ, ಕ್ರಿಯಾಶಕ್ತಿಯು ಸಂಕುಚಿತವಾಗಿ ನಾನು 'ಕಿಂಚಿತ್ಕರ್ತೃ' ಎಂಬ ಕಾರ್ಮಮಲವನ್ನೂ ಉಂಟುಮಾಡುವುದು.

ಹೀಗೆ ಪರಶಿವನು ತಾನೇ ತನ್ನ ಶಕ್ತಿಯ ಪರಿಣಾಮದಿಂದ ಮಲತ್ರಯಬದ್ಧ ಶರೀರ ತ್ರಯದಿಂದ ಕೂಡಿದವನಾಗಿ ಸ್ವಸ್ವರೂಪವನ್ನು ಮರೆತ ಜೀವತ್ವವನ್ನು ತಾಳಿದವನಾಗಿಯೂ ತನ್ನ ಶಕ್ತಿಯ ವಿಕಾಸದಿಂದ ಮಲತ್ರಯ ದೂರ ಶರೀರತ್ರಯ ರಹಿತನಾಗಿ ಸ್ವಸ್ವರೂಪಾನಂದ ನಿರ್ಭರನಾಗಿಯೂ ಆಗುವುದರಿಂದ ಶಿವಜೀವರ ಸಂಬಂಧವು ಅಭೇದದಲ್ಲಿಯೇ ಪರ್ಯವಸಾನ ವಾಗುವುದು.

ಹೀಗೆ ಶಿವಜೀವರಿಗೆ ಅಭೇದವನ್ನಂಗೀಕರಿಸಿದರೆ "ದ್ವಾಸುಪರ್ಣಾ ಸಯುಜಾ ಸಖಾಯಾ" ಎಂದು ಮುಂತಾದ ಭೇದ ಪ್ರತಿಪಾದಕ ವಾಕ್ಯವಿರೋಧವೂ, ಭೇದವನ್ನಂಗೀಕರಿಸಿದರೆ "ಏಕ ಮೇವಾದ್ವಿತೀಯಂ ಬ್ರಹ್ಮ" ಎಂದು ಮೊದಲಾದ ಅಭೇದ ವಿಧಾಯಕ ವಾಕ್ಯಗಳ ವಿರೋಧವೂ ಉಂಟಾಗುವುದರಿಂದ, ಈ ಎರಡು ವಿಧವಾದ ಪರಸ್ಪರ ವಿರುದ್ಧ ಶ್ರುತಿವಾಕ್ಯಗಳಿಗೆ ಪ್ರಾಮಾಣ್ಯ ವನ್ನು ಸಂಪಾದಿಸಲು, ದ್ವೈತಾದ್ವೈತ ಬೋಧಕವಾದ ಶಕ್ತಿವಿಶಿಷ್ಟಾದ್ವೈತ ಮತವನ್ನೇ ಅಂಗೀ ಕರಿಸಬೇಕಾಗುವುದು. ಈ ಮತದಲ್ಲಿ ಸ್ಥೂಲ ಸೂಕ್ಷ್ಮ ಚಿದಚಿತ್ಪ್ರಪಂಚಾಕಾರ ಶಕ್ತಿವಿಶಿಷ್ಟರಾದ ಶಿವಜೀವರಿಗೆ ಅಭೇದವನ್ನು ಹೇಳಿರುವುದರಿಂದ ಅದ್ವೈತ ವಾಕ್ಯಗಳಿಗೂ, ವಿಶೇಷಣ ವಿಶೇಷ್ಯಗಳಿಗೆ ಭೇದವನ್ನು ಹೇಳುವುದರಿಂದ ದ್ವೈತವಾಕ್ಯಗಳಿಗೂ ಪ್ರಾಮಾಣ್ಯವು ಸಿದ್ಧಿಸಿರುತ್ತದೆ. ಘಟಮಠಾದ್ಯು ಪಾಧಿ ಭೇದದಿಂದ ಭಿನ್ನವಾಗಿ ತೋರುವ ಆಕಾಶವು ಘಟಮಠಾದ್ಯನವಚ್ಛಿನ್ನವಾದ ಮಹಾಕಾಶ ದೊಡನೆ ಅಭಿನ್ನವಾಗಿರುವಂತೆ ಶರೀರೇಂದ್ರಿಯಾದ್ಯುಪಾಧಿ ಭೇದದಿಂದ ಭಿನ್ನವಾಗಿ ತೋರುವ ಜೀವಚೈತನ್ಯವು ಶರೀರೇಂದ್ರಿಯಾದ್ಯನವಚ್ಛಿನ್ನವಾದ ಶಿವಚೈತನ್ಯದೊಡನೆ ಅಭಿನ್ನವಾಗಿಯೇ ಇರುವುದು. ಇದೇ ವಿಷಯವು—

"ಮಹದ್ಘಟ ಪ್ರಭೇದೇನ ಯಥಾಕಾಶಃ ಪ್ರತೀಯತೇ ।
ಪ್ರತೀಯತೇ ತಥಾ ಚೈಕಂ ಸ್ಥಲಂ ಲಿಂಗಾಂಗಭೇದತಃ ॥"

ಎಂದು ವಾತುಲೋತ್ತರದಲ್ಲಿ ಹೇಳಲ್ಪಟ್ಟಿದೆ.

ಇದುವರೆಗೂ ಹೇಳಿದಂತೆ ಸಚ್ಚಿದಾನಂದ ಸ್ವರೂಪವೂ ನಾಮರೂಪ ವಿಭಾಗಾನರ್ಹ ಸೂಕ್ಷ್ಮ ಚಿದಚಿದ್ರೂಪ ಶಕ್ತಿವಿಶಿಷ್ಟ ಸ್ವರೂಪಲಕ್ಷಣವೂ ಸರ್ವಾತ್ಮಕವೂ ಆದ ಯಾವ ಶಿವಚೈತನ್ಯ ವುಂಟೊ ಅದನ್ನು ವೀರಶೈವಸಿದ್ಧಾಂತದಲ್ಲಿ ಸ್ಥಲವೆಂದು ವ್ಯವಹರಿಸುತ್ತಾರೆ.



CC-0. Jangamwadi Math Collection, Varanasi. An eGangotri Initiative

" ಸ್ಥೀಯತೇ ಲೀಯತೇ ಯತ್ರ ತತ್‌ಸ್ಥಲಂ ಬ್ರಹ್ಮಶಾಶ್ವತಂ ॥ "

ಮೇಲೆ ಕಂಡ ಶಿವಚೈತನ್ಯವು ಯಾವಾಗ ನಾಮರೂಪ ವಿಭಾಗಕ್ಕೆ ಅರ್ಹವಾದ ಸೂಕ್ಷ್ಮ ಚಿದಚಿದ್ರೂಪ ಶಕ್ತಿಯೊಡನೆ ಬೆರೆಯುವುವೋ ಆಗ ವಿರೂಪಾಕ್ಷತ್ವ, ನೀಲಕಂಠತ್ವ, ಕೃಷ್ಣಪಿಂಗಳ ತ್ವಾದಿಗಳಿಂದ ಕೂಡಿದ ಪಂಚವಿಂಶತಿಲೀಲಾಮಂಗಲ ಸ್ವರೂಪವುಳ್ಳುದೂ, ಸರ್ವಜ್ಞತ್ವ ನಿತ್ಯ ತೃಪ್ತತ್ವಾದ್ಯ ಸಾಧಾರಣ ಧರ್ಮವಿಶಿಷ್ಟವೂ ಆದ ಮಹೇಶ್ವರ ತತ್ತ್ವವೆನಿಸಿಕೊಳ್ಳುವುದು. ಯಾವಾಗ ಈ ಮಹೇಶ್ವರನ ಸರ್ವತ್ವಾದಿ ಶಕ್ತಿಗಳು ಕಲಾದಿರೂಪದಿಂದ ಪರಿಣಮಿಸುವುವೋ ಆಗ ಆ ಮಹೇಶ್ವರ ನಿಗೆ ಲಿಂಗವೆಂಬ ಹೆಸರು ಬರುವುದು. ಹೀಗೆಯೇ ಸ್ಥೂಲ ಚಿದಚಿದ್ವಿಶಿಷ್ಟನಾದ ಜೀವನು ಬಹು ಜನ್ಮಾರ್ಜಿತ ಪುಣ್ಯದಿಂದ ಮಲತ್ರಯ ದೂರನಾಗಿ, ನಿತ್ಯವೂ ತಾನು ಅನುಷ್ಠಾನ ಮಾಡುವ ಶಿವಾರ್ಚನ, ಶಿವಾಚಾರಾದಿಗಳಿಂದ ಶಿವಪ್ರಸಾದಕ್ಕೆ ಪಾತ್ರನಾಗಿ ಯಾವಾಗ ಶುದ್ಧಾಂತಃಕರಣ ನಾಗುವನೋ ಆಗ ಆ ಜೀವನ ಕಿಂಚಿಜ್ಞತ್ವಾದಿ ಶಕ್ತಿಗಳು ಭಕ್ತಿರೂಪದಿಂದ ಪರಿಣಮಿಸಿ, ಅವನಿಗೆ ಅಂಗವೆಂಬ ಸಂಜ್ಞೆಯು ಬರುವುದು. ಅಂಗಪದವಾಚ್ಯನಾದೀ ಜೀವನು ಕರ್ಮಪಾಶದಿಂದ ಬದ್ಧನಾಗಿ ಆ ಕರ್ಮಜನ್ಯವಾದ ಸುಖದುಃಖಗಳನ್ನನುಭವಿಸಲು, ಜನನ ಮರಣರೂಪ ಸಂಸಾರ ಚಕ್ರದಲ್ಲಿ ಬಿಡುವಿಲ್ಲದೆ ಸುತ್ತುತ್ತ, ಈ ಸಂಸಾರದಲ್ಲಿ ಅಸಾರತೆಯನ್ನು ಮನಗಂಡು. ಸ್ರಕ್ಚಂದನ ವನಿತಾದಿ ವಿಷಯಸುಖವೂ, ಜ್ಯೋತಿಷ್ಟೋಮಾದಿ ಜನ್ಯಸ್ವರ್ಗಸುಖವೂ ನಶ್ವರವೆಂದರಿತು, ಈ ಸಮಸ್ತ ಸಂಸಾರ ದೋಷಗಳನ್ನು ನಾಶಮಾಡುವ ತತ್ತ್ವವನ್ನು ತಿಳಿದುಕೊಳ್ಳಲು ತವಕಪಡುವನು. ಈ ಸಂಸಾರವಾದರೋ ಪ್ರಕೃತಿಜನ್ಯವಾದುದು. ಆ ಪ್ರಕೃತಿಯು ಶಿವನಿಂದ ಜನಿಸಿ, ಅವನ ಅಧೀನ ವಲ್ಲಿರತಕ್ಕುದು. ಆದುದರಿಂದ ಈ ಚಕ್ರದಿಂದ ತಪ್ಪಿಸಿಕೊಳ್ಳಲು ಜೀವನು ಪರಶಿವನನ್ನು ಮರೆ ಹೋಗಬೇಕು. ಏಕೆಂದರೆ ನಮ್ಮ ಲಾಲಾ ಜಲವನ್ನು ನಾವು ಪಾನಮಾಡಲೂ ಹೊರಗೆ ಉಗುಳಲೂ ಹೇಗೆ ಸಮರ್ಥರೋ ಹಾಗೆ ಪರಶಿವನು ಪ್ರಕೃತಿಯನ್ನು ಸೃಜಿಸಿ ಸಂಪೂರ್ಣವಾಗಿ ಅದನ್ನು ತನ್ನ ವಶದಲ್ಲಿಟ್ಟುಕೊಂಡಿರುವುದರಿಂದ, ಅಂತಹ ಪರಶಿವನ ಅನುಗ್ರಹವನ್ನು ಸಂಪಾದಿಸಿದರೆ, ಆಗ ಪ್ರಕೃತಿಯೂ ನಮ್ಮ ವಶವಾಗುವುದು. ಈ ವಿಷಯವನ್ನೇ—

" ಶಿವಮಾಯಾರ್ಪಿತಂ ದ್ವಂದ್ವಂ ಶಿವಸ್ತು ಪರಿಮಾರ್ಜತಿ।
ಶಿವೇನ ಕಲ್ಪಿತಂ ದ್ವಂದ್ವಂ ತಸ್ಮಿನ್ನೇವ ಸಮರ್ಪಯೇತ್ ॥ "

ಎಂದು ಕ್ರಿಯಾಸಾರದಲ್ಲಿ ಹೇಳಿದೆ.

ಜೀವನು ಪರಶಿವನ ಅನುಗ್ರಹವನ್ನು ಪಡೆಯಲು—

ಗುರುಮೇವ ಶಿವಂ ಪಶ್ಯೇತ್ ಶಿವಮೇವ ಗುರುಂ ತಥಾ।
ನೈತಯೋರಂತರಂ ಕಿಂಚಿದ್ವಿಜಾನೀಯಾದ್ವಿಚಕ್ಷಣಃ ॥

(ಸಿದ್ಧಾಂತ ಶಿಖಾಮಣಿ)

ಎಂಬಂತೆ ಶಿವಾಭಿನ್ನನೂ ಲಿಂಗಾಂಗಸಾಮರಸ್ಯ ರಹಸ್ಯ ಬೋಧಕನೂ ಶ್ರೋತ್ರಿಯನೂ ಆದ ಶ್ರೀ ಗುರುವಿನ ಬಳಿ ಸಾರಬೇಕು.



CC-0. Jangamwadi Math Collection, Varanasi. An eGangotri Initiative

ಜೀವತ್ವಂ ದುಃಖಸರ್ವಸ್ವಂ ತದಿದಂ ಮಲಕಲ್ಪಿತಂ ।
ನಿರಸ್ಯತೇ ಗುರುಬೋರ್ಧಾತ್ ಜ್ಞಾನಶಕ್ತಿಃ ಪ್ರಕಾಶತೇ ॥ ( ಸಿ. ಶಿ. )

ಎಂಬ ಉಕ್ತಿಯಂತೆ ಆಣವಾದಿ ಮಲಬದ್ಧವೂ ದುಃಖಮಯವೂ ಆದ ಜೀವತ್ವವು ಶ್ರೀಗುರುವಿನ ಬೋಧೆಯಿಂದಲೇ ತೊಲಗಬೇಕಾಗಿದೆ. ಆ ಗುರುವು ತನ್ನ ಬಳಿಗೆ ಬಂದ ಶಿಷ್ಯನಲ್ಲಿ ಈಶ್ವರ ಶಕ್ತಿಪಾತಾದಿ ಲಕ್ಷಣಗಳನ್ನು ಪರಾಮರ್ಶಿಸಿ, ಅವನಿಗೆ ಶಿವದೀಕ್ಷೆಯನ್ನು ಕೊಡಲು ಮೊದಲು ಹಸ್ತಮಸ್ತಕ ಸಂಯೋಗರೂಪ ವೇಧಾದೀಕ್ಷೆಯಿಂದ ಶಿಷ್ಯನ ಕಾರಣಶರೀರದಲ್ಲಿ ಭಾವಲಿಂಗವನ್ನೂ ಪಂಚಾಕ್ಷರೀ ಮಂತ್ರೋಪದೇಶರೂಪ ಮನುದೀಕ್ಷೆಯಿಂದ ಅವನ ಸೂಕ್ಷ್ಮ ಶರೀರದಲ್ಲಿ ಪ್ರಾಣ ಲಿಂಗನನ್ನೂ ಹೋಮಾದಿ ದೀಕ್ಷಾಂಗಭೂತ ಕ್ರಿಯಾಪೂರ್ವಕ ಶಿವಕಲಾವಿನ್ಯಾಸರೂಪ ಕ್ರಿಯಾ ದೀಕ್ಷೆಯಿಂದ ಅವನ ಸ್ಥೂಲ ಶರೀರದಲ್ಲಿ ಇಷ್ಟಲಿಂಗವನ್ನೂ ಯೋಜಿಸಿ ಶಿಷ್ಯನ ಪ್ರಾಣವು ಲಿಂಗ ದಲ್ಲಿಯೂ ಲಿಂಗವು ಶಿಷ್ಯನ ಪ್ರಾಣಕಲೆಯಲ್ಲಿಯೂ ಸಾಮರಸ್ಯದಿಂದಿರುವಂತೆ ಮಾಡಿ ಅಷ್ಟಾವರಣ ಪಂಚಾಚಾರ ವಿಶಿಷ್ಟತೆಯಿಂದ ಘನಲಿಂಗೈಕ್ಯರೂಪ ಮೋಕ್ಷಕ್ಕೆ ಸಾಧನವಾಗಿ ಷಟ್‌ಸ್ಥಲ ಸಿದ್ಧಾಂತ ಪ್ರತಿಪಾದ್ಯವೂ ಜ್ಞಾನಕ್ರಿಯಾ ಸಮ್ಮಿಳಿತವೂ ಆದ ಲಿಂಗಾಂಗಸಾಮರಸ್ಯವೆಂಬ ಶಿವಾದ್ವೈತ ವಿದ್ಯೆಯನ್ನು ಉಪದೇಶಿಸುವನು.

ಈ ಲಿಂಗಾಂಗ ಸಾಮರಸ್ಯದ ಪ್ರಕಾರವೆಂತೆಂದರೆ— ಈ ಲೇಖನದ ಪ್ರಾರಂಭದಲ್ಲಿಯೇ ತಿಳಿಸಿರುವಂತೆ ಪರಮಾತ್ಮನ ಸಾಕ್ಷಾತ್ಕಾರಕ್ಕೆ ಭಕ್ತಿ, ಕ್ರಿಯಾ, ಜ್ಞಾನಗಳೇ ಮುಖ್ಯ ಸಾಧನ. ವೀರಶೈವ ಸಿದ್ಧಾಂತದಲ್ಲಿ ಮುಕ್ತಿಸ್ವರೂಪವನ್ನು ನಿರೂಪಿಸುವ 'ಲಿಂಗಾಂಗ ಸಾಮರಸ್ಯ'ವೆಂಬ ಮಾತೂ ಕೂಡ ಇದೇ ಸಾಧನಗಳನ್ನು ವಿವರಿಸುತ್ತದೆ. 'ಲಿಂಗ' ಶಬ್ದದಿಂದ ಕ್ರಿಯೆಯೂ 'ಅಂಗ' ಶಬ್ದದಿಂದ ಭಕ್ತಿಯೂ ಮತ್ತು 'ಸಾಮರಸ್ಯ' ಶಬ್ದದಿಂದ ಜ್ಞಾನವೂ ಬೋಧಿತವಾಗುತ್ತವೆ. ಭಕ್ತಿಯು ಕ್ರಿಯೆಗಳ ಮೂಲಕವೇ ವ್ಯಕ್ತವಾಗುವಕಾರಣ, ಭಕ್ತಿಯು ಕ್ರಿಯೆಯಲ್ಲಿಯೇ ಅಡಗಿ-ಅಂದರೆ ಅಂಗವು ಲಿಂಗದಲ್ಲಿ ಅಂತರ್ಗತವಾಗಿ ಕ್ರಿಯಾಚರಣೆಯಿಂದಲೇ ಭಕ್ತಿಯು ಚರಿತಾರ್ಥ ವಾಗುತ್ತದೆ. ಹೀಗೆ ಕೊನೆಗೆ ಉಳಿಯುವುದು ಕರ್ಮ ಮತ್ತು ಜ್ಞಾನ.

ಉಭಾಭ್ಯಾಮೇವ ಪಕ್ಷಾಭ್ಯಾಂ ಯಥಾ ಖೇ ಪಕ್ಷಿಣಾಂ ಗತಿಃ ।
ತಥೈವ ಕರ್ಮಜ್ಞಾನಾಭ್ಯಾಂ ವೀರಾಣಾಂ ಮುಕ್ತಿರಿಷ್ಯತೇ ॥

ಎಂದು ಹೇಳಿರುವಂತೆ ವೀರಶೈವ ಸಿದ್ಧಾಂತದಲ್ಲಿ ಕರ್ಮ-ಜ್ಞಾನಗಳೆರಡೂ ಆವಶ್ಯಕವಾಗಿವೆ. ಆದರೂ ಕರ್ಮಗಳ ಫಲವೆಲ್ಲವೂ ಕೊನೆಗೆ ಜ್ಞಾನದಲ್ಲಿ ಪರ್ಯವಸಾನವಾಗುತ್ತದೆ.

ಈ ಕರ್ಮ – ಜ್ಞಾನಗಳ ಪರಿಪೂರ್ಣತೆಯನ್ನು ಸಾಧಿಸಿ, ಲಿಂಗಾಂಗ ಸಾಮರಸ್ಯವನ್ನು ಪಡೆಯಲು ಅಂದರೆ ಜೀವನು ಶಿವತ್ವವನ್ನು ಪಡೆಯಲು ಆರು ಹಂತಗಳುಳ್ಳ 'ಷಟ್‌ಸ್ಥಲ'ವೆಂಬ ಮಾರ್ಗವನ್ನು ವೀರಶೈವಮತೀಯರು ಅನುಸರಿಸಬೇಕಾಗಿದೆ.

ಸಕಲ ಚರಾಚರ ಪ್ರಾಣಿಗಳೂ ಮಹದಾದಿ ತತ್ತ್ವಗಳೂ ಯಾವನಲ್ಲಿ ಇದ್ದು ಅಡಗುವವೋ ಆ ಸಚ್ಚಿದಾನಂದ ಬ್ರಹ್ಮನಿಗೆ ಸ್ಥಲವೆಂದು ಹೆಸರು. ಆ ಸ್ಥಲವು ಸ್ವಶಕ್ತಿಕ್ಷೋಭೆಯಿಂದ ಮಹಾ ಕಾಶವು ಘನಭೇದದಿಂದ ಬೇರೆ ಬೇರೆಯಾಗಿ ತೋರಿದಂತೆ ಲಿಂಗ, ಅಂಗ ಎಂದು ಎರಡಾಯಿತು.



CC-0. Jangamwadi Math Collection, Varanasi. An eGangotri Initiative

ಲಿಂಗಸ್ಥಲವೆಂದರೆ ಉಪಾಸ್ಯನಾದ ಶಿವ; ಅಂಗಸ್ಥಲವೆಂದರೆ ಉಪಾಸಕನಾದ ಜೀವ; ಇವುಗಳಲ್ಲಿ ಲಿಂಗತತ್ತ್ವವು ಶಿವನ ಸಚ್ಚಿದಾನಂದ ಲಕ್ಷಣಗಳ ಪ್ರತಿಫಲನರೂಪವೆನಿಸಿ ಭಾವಲಿಂಗ, ಪ್ರಾಣಲಿಂಗ, ಇಷ್ಟಲಿಂಗವೆಂದು ಮೂರು ವಿಧವಾಗಿ ಪುನಃ ಭಕ್ತರ ಧ್ಯಾನ ಪೂಜಾನಿಮಿತ್ತವಾಗಿ ಒಂದೊಂದೂ ಮಹಾಲಿಂಗ, ಪ್ರಸಾದಲಿಂಗ, ಜಂಗಮಲಿಂಗ, ಶಿವಲಿಂಗ, ಗುರುಲಿಂಗ, ಆಚಾರಲಿಂಗಗಳೆಂದು ಎರಡಾಗಿ ಒಟ್ಟಿಗೆ ಷಡ್ವಿಧ ಲಿಂಗಗಳಾಗಿ ಪರಿಣಮಿಸಿತು.

( ಜೀವನು ಅವಿದ್ಯೆಯಿಂದ ಮೋಹಿತನಾಗಿ ತಾನು ಶಿವಾಂಶಸಂಭೂತನೆಂಬುದನ್ನು ಮರೆತು ' ನಾನು ಸಂಸಾರಿ, ದುಃಖಿ ' ಎಂಬ ಅವನ ಸಂಕೋಚತ್ವ ( ಜೀವತ್ವ )ವನ್ನು ತೊಲಗಿಸಿ, ' ನಾನು ನಿತ್ಯಮುಕ್ತ, ನಾನು ನಿತ್ಯಸುಖಿ ' ಎಂಬ ವಿಕಾಸತ್ವ ( ಶಿವತ್ವ ) ವನ್ನು ಅವನಲ್ಲಿ ಉಂಟು ಮಾಡಲು ಶಿವನೇ ಮೇಲೆ ಹೇಳಿದಂತೆ ಭಾವಲಿಂಗಾದಿ ಭೇದಗಳನ್ನು ತಾಳಬೇಕಾಯಿತು. )

ಕರುಣಾಳುವಾದ ಪರಶಿವನು ತನ್ನ ಸಮೀಪಕ್ಕೆ ಬರಲು ಭಕ್ತಿಯಿಂದ ತವಕಪಡುತ್ತಿರುವ ಅಂಗಶಬ್ದವಾಚ್ಯನಾದ ಶುದ್ಧ ಜೀವನನ್ನು ತನ್ನಲ್ಲಿ ಐಕ್ಯ ಮಾಡಿಕೊಳ್ಳಲು ತ್ರಿವಿಧಲಿಂಗರೂಪ ವನ್ನು ತಾಳಿದಂತೆ ಜೀವನೂ ಸಹ ಲಿಂಗೋಪಾಸನೆಯಿಂದ ಶಿವಸ್ವರೂಪವನ್ನು ಪಡೆಯಲು ಯೋಗಾಂಗ, ಭೋಗಾಂಗ, ತ್ಯಾಗಾಂಗ ಎಂಬ ಮೂರು ಭೇದಗಳನ್ನು ಹೊಂದುವನು. ಮೇಲೆ ಹೇಳಿದ ಮಹಾಲಿಂಗಾದಿ ಆರು ಲಿಂಗಗಳನ್ನು ಉಪಾಸಿಸಲು ಜೀವನ ಯೋಗಾಂಗಾದಿ ಮೂರು ಭೇದವೂ ಶರಣ, ಐಕ್ಯ, ಪ್ರಾಣಲಿಂಗಿ, ಪ್ರಸಾದಿ, ಮಹೇಶ, ಭಕ್ತ ಎಂದು ಆರು ವಿಧವಾಗಿ ವಿಭಾಗವಾಯಿತು.

ಮಹಾನಲಜ್ವಾಲೆಯು ದೀಪಿಕಾಕೃತಿಯಾದಂತೆ ಶಿವನಿಷ್ಠಶಕ್ತಿಯೂ ಸಹ ಲಿಂಗಸ್ಥಲ ವನ್ನಾಶ್ರಯಿಸಿ ಕಲೆಯಂತಲೂ, ಅಂಗಸ್ಥಲವನ್ನಾಶ್ರಯಿಸಿ ಭಕ್ತಿಯೆಂತಲೂ ಎರಡು ವಿಧವಾಯಿತು. ಶಕ್ತಿಯು ಪ್ರವೃತ್ತಿರೂಪವಾದುದು; ಅಂದರೆ ನಿರೂಪವನ್ನೂ ಸಹ ರೂಪವನ್ನಾಗಿ ಮಾಡಬಲ್ಲುದು. ಪ್ರಪಂಚದ ವೃದ್ಧ್ಯಪೇಕ್ಷೆಯೇ ಇದರ ಗುಣ. ಅಧೋಮುಖಿಯೆಂದೂ, ಸಮಾಯೆಯೆಂದೂ ಇದು ಕರೆಯಲ್ಪಡುತ್ತದೆ. ಭಕ್ತಿಯು ನಿವೃತ್ತಿರೂಪವಾದುದು; ಅಂದರೆ ರೂಪವನ್ನು ನಿರೂಪವನ್ನಾಗಿ ಮಾಡಬಲ್ಲುದು. ಪ್ರಪಂಚಕ್ಷಯಾಪೇಕ್ಷೆಯೇ ಇದರ ಸ್ವಾಭಾವಿಕ ಗುಣ. ಇದು ಊರ್ಧ್ವಮುಖಿ ಯೆಂದೂ ನಿರ್ಮಾಯೆಯೆಂದೂ ಕರೆಯಲ್ಪಡುತ್ತದೆ. ಶಕ್ತಿಯಿಂದ ಉಪಾಸ್ಯತ್ವವೂ ಭಕ್ತಿಯಿಂದ ಉಪಾಸಕತ್ವವೂ ಉಂಟಾಗುವುದರಿಂದ ಶಿವನು ಶಕ್ತಿಯುಕ್ತನಾಗಿ ತನ್ನ ಭಕ್ತರ ಉದ್ಧಾರಕ್ಕೋಸ್ಕರ ಉಪಾಸ್ಯನಾಗಿ ಯಾವ ಯಾವ ರೂಪಗಳನ್ನು ಹೊಂದುವನೋ ಜೀವನೂ ಸಹ ಭಕ್ತಿಯುಕ್ತ ನಾಗಿ ತನ್ನಲ್ಲಿ ಉಪಾಸಕತ್ವವು ನೆಲೆಗೊಳ್ಳುವಂತೆ ಆಯಾಯ ಉಪಾಸ್ಯರೂಪಗಳಿಗನುಗುಣವಾದ ರೂಪಗಳನ್ನೇ ತಾಳುವನು. ಹೀಗೆ ಲಿಂಗಾಂಗ ಸ್ಥಲಗಳು ಪೂಜ್ಯಪೂಜಕ, ಉಪಾಸ್ಯೋಪಾಸಕ, ಗುರುಶಿಷ್ಯ, ಶಿವಜೀವ ರೂಪಗಳಿಂದ ಎಡಬಿಡದೆ ಕೂಡಿಕೊಂಡಿವೆ.

ಶಿವನು ತನ್ನ ಶಕ್ತಿಯ ಸಂಕೋಚರೂಪವಾದ ಆಣವಾದಿ ಮಲತ್ರಯ ಸಂಬಂಧದಿಂದ ಶರೀರತ್ರಯಗಳನ್ನು ಪಡೆದು, ತನ್ನ ಸ್ವರೂಪದ ಅರಿವಿಲ್ಲದೆ ಜೀವತ್ವವನ್ನು ಹೊಂದುವನು. ಪುನಃ ಜೀವನಲ್ಲಿರುವ ಶಕ್ತಿಯು ಭಕ್ತಿಯಾಗಿ ಪರಿಣಮಿಸಲು ಸ್ವಶಕ್ತಿಯ ವಿಲಾಸದಿಂದ ಮಲತ್ರಯುವು



CC-0. Jangamwadi Math Collection, Varanasi. An eGangotri Initiative

ದಗ್ಧವಾಗಿ ಆ ಮೂಲಕ ಶರೀರತ್ರಯವು ನಷ್ಟವಾಗಲು ಸ್ವಸ್ವರೂಪಾನಂದ ನಿರ್ಭರನಾದ ಶಿವನೇ ಆಗುವನು. ಕೀಟವು ಭ್ರಮರವನ್ನೇ ನಿರಂತರವೂ ಧ್ಯಾನಿಸುತ್ತ ಕೊನೆಗೆ ತಾನೇ ಭ್ರಮರವಾಗುವಂತೆ ಜೀವನು ಶಿವನನ್ನೇ ಸದಾ ಧ್ಯಾನಿಸುತ್ತ ಕೊನೆಗೆ ತಾನೇ ಶಿವನಾಗುವನು.

" ಯಥಾ ಭ್ರಮರಯೋಗೇನ ಕೀಟೋಽಪಿ ಭ್ರಮರಾಯತೇ ।
ಮಾನವಶ್ಶಿವಯೋಗೇನ ಶಿವಸ್ಸಂಜಾಯತೇ ತಥಾ ॥ "

ಜೀವನು ತನ್ನ ಸಕಲ ವ್ಯವಹಾರಗಳಲ್ಲಿಯೂ ಪರಶಿವಾಭಿನ್ನವಾದ ಲಿಂಗನನ್ನೇ ಧ್ಯಾನಿಸುತ್ತ ಸರ್ವಾಂಗ ಲಿಂಗಮಯನಾಗುವನು. ಅಂದರೆ ತನಗೆ ಗುರುದತ್ತವಾದ ಇಷ್ಟಲಿಂಗವು ಸಾಕ್ಷಾಚ್ಛಿವ ಸ್ವರೂಪವಾಗಿರುವುದರಿಂದ, ಆ ಲಿಂಗರೂಪ ಶಿವನೇ ತನ್ನ ಸರ್ವಾಂಗಗಳಲ್ಲಿಯೂ ಸರ್ವದಾ ಸರ್ವತೋಮುಖವಾಗಿ ಪ್ರಕಾಶಿಸುತ್ತಿರುವನೆಂಬ ಭಾವನೆಯನ್ನು ಜೀವನು ತನ್ನಲ್ಲಿ ಅಳವಡಿಸಿಕೊಂಡು ತನ್ನ ಅಂಗದಲ್ಲಿ ಪ್ರತಿಷ್ಠಿತವಾದ ಲಿಂಗವೇ ತನುತ್ರಯದಲ್ಲಿ ಇಷ್ಟಲಿಂಗಾದಿರೂಪದಿಂದಲೂ ಜ್ಞಾನೇಂದ್ರಿಯ ಕರ್ಮೇಂದ್ರಿಯಗಳಲ್ಲಿ ಆಚಾರಲಿಂಗಾದಿರೂಪದಿಂದಲೂ ಬೆಳಗುತ್ತಿವೆಯೆಂದು ಭಾವಿಸಬೇಕು.

" ರುದ್ರೇಣಾತ್ತಮಶ್ನಂತಿ ರುದ್ರೇಣ ಪೀತಂ ಪಿಬಂತಿ ರುದ್ರೇಣಾಘ್ರಾತಂ ಜಿಘ್ರಂತಿ ತಸ್ಮಾತ್ಪ್ರಶಾಂತಮನಸಾ ಬ್ರಾಹ್ಮಣಾಃ " ಎಂಬ ಶ್ರುತಿವಾಕ್ಯದಂತೆ ಸರ್ವಾಂಗಲಿಂಗಮಯನಾದೀ ಜೀವನು ಭಕ್ತನೆನಿಸಿಕೊಂಡು ಕ್ರಿಯಾಶಕ್ತಿಯುಕ್ತವಾದ ಆಚಾರಲಿಂಗಕ್ಕೆ ಶ್ರದ್ಧಾ ಭಕ್ತಿಯಿಂದ ಕೂಡಿ ಸುಚಿತ್ತಹಸ್ತದಿಂದ ಗಂಧಪದಾರ್ಥವನ್ನು ಧರಿಸಿ ನಕಾರ ಮಂತ್ರೋಚ್ಚಾರಣೆಯಿಂದ ಘ್ರಾಣೇಂದ್ರಿಯ ಮುಖದಲ್ಲಿ ಸಮರ್ಪಿಸಿ, ಆ ಪ್ರಸಾದಭೋಗಿಯಾಗಿ ಆನಂದಿಸುವನು. ಈ ಲಿಂಗಾರ್ಪಣಭಾವವು ವೀರಶೈವ ಮತೋದ್ಧಾರಕರೂ, ಮಹಾನುಭಾವರೂ ಆದ ಬಸವಣ್ಣನವರಲ್ಲಿ ಎಷ್ಟುಮಟ್ಟಿಗೆ ಬಲ್ಮೆಯನ್ನು ಪಡೆದಿದ್ದಿತೆಂಬುದು—

ಲಿಂಗಮುಖದಿಂದ ಬಂದ ಪ್ರಸಾದವನಲ್ಲದೆ ಕೊಂಡೆನಾದರೆ ನಿಮ್ಮಾಣೆ, ನಿಮ್ಮ ಪ್ರಮಥರಾಣೆ; ಲಿಂಗಾರ್ಪಿತವಲ್ಲದೆ ಉದಕವ ಮುಕ್ಕಳಿಸಿದರೆ ಸಲ್ಲೆನು ನಿಮ್ಮ ಗಣಾಚಾರಕ್ಕಯ್ಯಾ; ಲಿಂಗಾರ್ಪಿತವಲ್ಲದೆ ಹುಲ್ಲು ಕಡ್ಡಿಯ ಕೊಂಡೆನಾದರೆ, ನಾ ಬಲ್ಲೆ ಮುಂದೆ ಭವಘೋರ ನರಕವೆಂಬುದ; ನಿಮಗೆತ್ತಿದ ಕರವ ಮತ್ತೊಂದಕ್ಕೆ ಕೈಯೆತ್ತೆನಯ್ಯಾ. ಅಳವರಿಯದೆ ನುಡಿದೆನು. ಕಡೆಮುಟ್ಟಸದಿದ್ದರೆ ತಲೆದಂಡ, ತಲೆದಂಡ, ಕೂಡಲ ಸಂಗಮದೇವ. "

ಎಂಬ ಅವರ ಈ ವಚನದಿಂದ ವ್ಯಕ್ತವಾಗುತ್ತದೆ.

ಹೀಗೆ ಭಾವಿಸಿ, ಜೀವನು ಲಿಂಗಭೋಗೋಪಭೋಗಿಯಾಗುವ ವಿಧಾನವನ್ನೇ ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಎಂಬ ಆರು ಸ್ಥಲಗಳಲ್ಲಿ ವೀರಶೈವ ಸಿದ್ಧಾಂತಕಾರರು ವಿವರಿಸಿರುತ್ತಾರೆ.

ಕೊನೆಯದಾದ ಐಕ್ಯಸ್ಥಲಕ್ಕೆ ಬಂದ ಜೀವನು :—

ಕೇವಲಂ ಸಚ್ಚಿದಾನಂದಪ್ರಕಾಶಾದ್ವಯ ಲಕ್ಷಣಂ ।
ನಿರ್ವಿಕಲ್ಪಂ ಪರಾಕಾಶಂ ಪರಬ್ರಹ್ಮ ಪ್ರಕಾಶತೇ ॥



CC-0. Jangamwadi Math Collection, Varanasi. An eGangotri Initiative

ಜ್ಯೋತಿರ್ಲಿಂಗೇ ಚಿದಾಕಾರೇ ಸ್ವಪ್ರಕಾಶೇ ನಿರಂತರೇ ।
ಏಕೀಭಾವಮುಪೇತಸ್ಯ ಕಥಂ ಜ್ಞಾನಸ್ಯ ಸಂಭವಃ ॥
ಜಲೇ ಜಲಮಿವನ್ಯಸ್ತಂ ವಹ್ನೌವಹ್ನಿರಿವಾರ್ಪಿತಃ ।
ಪರಬ್ರಹ್ಮಣಿ ಲೀನಾತ್ಮಾ ವಿಭಾಗೇನ ನ ದೃಶ್ಯತೇ ॥" (ಸಿ. ಶಿ.)

ಎಂಬಂತೆ ಅದ್ವಿತೀಯವೂ ನಿರ್ವಿಕಲ್ಪವೂ ಆದ ಪರಬ್ರಹ್ಮವೇ ಕಾರಣನಾಗಿ ಶಿವಜೀವರೆಂಬ ಭೇದ ಜ್ಞಾನವಿಲ್ಲದೆ ನೀರಿನಲ್ಲಿ ನೀರೂ, ಬೆಂಕಿಯಲ್ಲಿ ಬೆಂಕಿಯೂ ಬೆರತಂತೆ ಪರಬ್ರಹ್ಮಸ್ವರೂಪ ಮಹಾ ಲಿಂಗದಲ್ಲಿ ಸಾಮರಸ್ಯವನ್ನು ಪಡೆಯುವನು.

"ಧರೆಗಗನ ದಶದಿಕ್ಕು ಎಂಬುದ ನಾನರಿಯೆನಯ್ಯ
'ಲಿಂಗಮಧ್ಯೇ ಜಗತ್ಸರ್ವಂ' ಎಂಬುದ ನಾನರಿಯೆನಯ್ಯ
ಲಿಂಗಸೋಂಕಿನ ಸುಖದೊಳಗೆ ಕೂಡಲ ಸಂಗಮದೇವಯ್ಯ
ಅಂಬುಧಿಯೊಳಗೆ ಬಿದ್ದ ಆಲಿ ಕಲ್ಲಿನಂತೆ ಭಿನ್ನಭಾವನರಿಯದೆ
'ಶಿವ' ಎನುತಿರ್ದೆ ನಾನು."

ಎಂಬ ಬಸವಣ್ಣನವರ ವಚನದಲ್ಲಿ ಈ ಲಿಂಗಾಂಗಸಾಮರಸ್ಯದ ಪರಮಾವಧಿಯನ್ನು ಕಾಣಬಹುದು.

ವೀರಶೈವ ಮತದಲ್ಲಿ ಗುರೂಪದಿಷ್ಟವಾದ ಮಂತ್ರವೂ ಕೂಡ ಈ ಲಿಂಗಾಂಗ ಸಾಮರಸ್ಯ ರೂಪವಾದ, ಅಥವಾ ಶಿವಜೀವೈಕ್ಯರೂಪವಾದ ಶಕ್ತಿವಿಶಿಷ್ಟಾದ್ವೈತವನ್ನೇ ಬೋಧಿಸುತ್ತದೆ. ಹೇಗೆಂದರೆ—

"ಅಂಗಂ ನಮಃ ಪದಮಸೌ ಶಿವ ಏವ ಲಿಂಗಂ ಸಂಬಂಧ ಏಷ ಯದಯೇತಿ ಪದಂ ತದುಕ್ತಂ। ಲಿಂಗಾಂಗಸಂಗಮುಪದತ್ರಯಬೋಧನಾರ್ಥಂ ಮಂತ್ರೋಯಮೇವಮಭಿಧಾಸ್ಯತಿ ಮಂತ್ರರಾಜಃ ॥ ನಮಃ ಪದಂ ತತ್ವಲು ಜೀವವಾಚಿ ಶಿವಃ ಪದಂ ತತ್ಪರಮಾತ್ಮ ವಾಚಿ ॥ ಆಯೇತಿ ತಾದಾತ್ಮ್ಯ ಪದಂ ತದೇತನ್ನ ಮಶ್ಶಿವಾಯೇತಿ ಜಗಾದ ಮಂತ್ರಃ ॥"

ಈ ವಿಧವಾದ ಮಂತ್ರೋಚ್ಚಾರಣೆಯಿಂದ

"ಓಂಕಾರೋ ವದನಂ ದೇವಿ ನಮಃ ಕಾಕಾ ಭುಜದ್ವಯಂ ।
ಶಿಕಾರೋ ದೇಹಮಧ್ಯಸ್ತು ವಾಯಕಾಕಾ ಪದದ್ವಯಂ ॥
ಪೀಠಂ ಪಾದಾದಿ ಜಾನ್ವಂತಮಾನಾಭೇರ್ಮಧ್ಯಮೀರಿತಂ।
ಹೃದಯಾಂತಂ ವರ್ತುಲಂ ಸ್ಯಾತ್ ಕಂಠಾಂತಂ ಗೋಮುಖಂ ಸ್ಮೃತಂ ॥
ಭ್ರೂಮಧ್ಯಾಂತಂ ಲಿಂಗಕಂಠೋ ಮಸ್ತಕೋ ಲಿಂಗಮಸ್ತಕಃ ॥"

ಎಂಬಂತೆ ಲಿಂಗಾಂಗಸಾಮರಸ್ಯಾಚರಣೆಯುಳ್ಳ ಜೀವನ ಶರೀರವೆಲ್ಲವೂ ಮಂತ್ರಮಯವೂ ಲಿಂಗಮಯವೂ ಆಗಿ,

ತಸ್ಮಾದದ್ವೈತ ವಿಜ್ಞಾನಮಪವರ್ಗಸ್ಯ ಕಾರಣಂ ।
ಭಾವಯನ್ ಸತತಂ ಯೋಗೀ ಸಂಸಾರೇಣ ನ ಲಿಪ್ಯತೇ ॥ (ಸಿ. ಶಿ.)

ಎಂಬಂತೆ ಮೋಕ್ಷಕ್ಕೆ ಕಾರಣವಾದ ಶಿವಾದ್ವೈತ ಜ್ಞಾನವನ್ನು ಅನುಭವಿಸುವ ಶಿವಯೋಗಿಯು ಜನನ-ಮರಣರೂಪ ಸಂಸಾರದಿಂದ ಎಂದಿಗೂ ಲಿಪ್ತನಾಗಲಾರನು.



CC-0. Jangamwadi Math Collection, Varanasi. An eGangotri Initiative

ಇಂತಹ ಮುಕ್ತ ಜೀವನು ನಿತ್ಯನೂ ನಿರ್ಮಲನೂ ಚರಾಚರ ಪ್ರಪಂಚ ಸ್ವರೂಪನೂ ಚಿದಾಕಾಶ ಸ್ವರೂಪನೂ ಆದ ಪರಶಿವನಲ್ಲಿ ಶಿವೇತರ ಜ್ಞಾನಶೂನ್ಯತೆಯಿಂದ ಮನಸ್ಸನ್ನು ಲಯಗೊಳಿಸಿ ಪರಮಾನಂದರೂಪನಾಗಿ ವರ್ತಿಸುತ್ತಿರುವನು. ಇಂತಹ ಮುಕ್ತಾತ್ಮನ ಇರವನ್ನು ಅರಿಯಬಲ್ಲವರಾರೆಂದರೆ,

"ಸಮಸ್ತ ಕತ್ತಲೆಯ ಮುಸಕವ ಕಳೆದಿಪ್ಪ ಇರವ ನೋಡಾ ! ಬೆಳಗಿನ ಬೆಳಗಿಗು ಸಿಂಹಾಸನವಾಗಿ ಬೆಳಗುವ ಬೆಳಗ ಕೂಡಿದ ಕೂಟವ ಕೂಡಲ ಸಂಗಯ್ಯ ತಾನೇ ಬಲ್ಲ." ( ಬಸವೇಶ್ವರ ವಚನ )

ಓಂ ತತ್ಸತ್



CC-0. Jangamwadi Math Collection, Varanasi. An eGangotri Initiative



# ಲಿಂಗಾಂಗ ಸಾಮರಸ್ಯ

ಮಾನವ ಸೃಷ್ಟಿಯಾದನಂತರ ಮನುಷ್ಯನ ಆಹಾರ ವ್ಯವಹಾರಗಳು ಕಾಡ ಮೃಗಗಳಂತೆ ಅನಾಗರೀಕಾವಸ್ಥೆಯಲ್ಲಿದ್ದವು. ಮುಂದೆ ಬರಬರುತ್ತಾ, ಜೀವನ ಸುಖದ ಆಶೆಗಳು ಬೆಳೆದ ಹಾಗೆ ವಾಸಕ್ಕೆ ಅಂದಚಂದವಾದ ಮನೆ-ಮಠಗಳ ಏರ್ಪಾಟವಾಗುವದು. ಶಾರೀರಕ ಮತ್ತು ಮಾನಸಿಕ ಬಲವು ಹೆಚ್ಚು ಪ್ರಮಾಣದಲ್ಲಿ ಬೆಳೆಯುವ ರೀತಿಯಲ್ಲಿ ಆಹಾರಗಳ ಮಾರ್ಪಾಟಾಗುವದು. ಬುದ್ಧಿ ಶಕ್ತಿಯು ದಿನೇ ದಿನೇ ಬೆಳೆಯಲಾರಂಭವಾಗಿ ಜೀವನದ ನಿಜವಾದ ಸುಖ-ಶಾಂತಿಗಳೆಲ್ಲಿರುವವೆಂದು ಹುಡುಕಲಿಕ್ಕೆ ಆರಂಭವಾಯಿತು. ಆ ಕಾಲದಲ್ಲಿಯೇ ಸತ್ಯ ಜ್ಞಾನಾನಂದ ರೂಪವಾದ ಪರಾತ್ಪರ ವಸ್ತುವೆ ಚರಾಚರಾತ್ಮಕವಾದ ಪ್ರಪಂಚಕ್ಕೆ ಆಧಾರಭೂತವಾಗಿರುವದೆಂದು ಸೂಕ್ಷ್ಮದರ್ಶಿಗಳಾದ ತತ್ತ್ವಜ್ಞಾನಿಗಳು ಮೊದಲು ಕಂಡುಹಿಡಿದರು. ಅವರನ್ನೆ ಋಷಿಗಳೆಂದು ಕರೆಯಲಾರಂಭಿಸಿದರು. ಅಂಥವರು ತಮ್ಮ ಉತ್ತರ ಸಂತತಿಗೆ ಹಲಕೆಲವು ಸತ್ಯ ಶುದ್ಧವಾದ ಮಾತುಗಳನ್ನು ಬೋಧಿಸುತ್ತ ಬರಲು ಅವು ವೇದ-ಆಗಮ-ಉಪನಿಷತ್ತುಗಳೆಂಬ ಹೆಸರಿನಿಂದ ಕರೆಯಲ್ಪಡಹತ್ತಿದವು. ಅವೆಲ್ಲವು ಬಹು ಪ್ರಾಚೀನವಾಗಿರುವದರಿಂದ ನಿರ್ಮಾತೃಗಳ ಕಾಲವು ಸರಿಯಾಗಿ ತಿಳಿಯದೆ, ಯಾವುದೋ ಒಂದು ನಂಬಿಗೆಯಿಂದ ಈಶ ನಿರ್ಮಿತವಾದವುಗಳೆಂದು ಪ್ರಚಾರಕ್ಕೆ ಬಂದವು. ಮುಂದಿನವರು ಹಿಂದಿನ ಆಸ್ತಿಯ ತಳಹದಿಯ ಮೇಲೆ ತಮ್ಮ ತಮ್ಮ ಬುದ್ಧಿ ಶಕ್ತಿಯಿಂದ ಪರಮಾತ್ಮ ಸ್ವರೂಪವನ್ನಿರಿಸಲು ಸೂತ್ರ-ಭಾಷ್ಯರೂಪ ಶಾಸ್ತ್ರಗಳನ್ನು ರಚಿಸಿದರು. ನಮ್ಮಾ ಭಾರತ ದೇಶದಲ್ಲಿ ಗಂಗೆ-ಯಮುನೆ-ಕೃಷ್ಣೆ-ಕಾವೇರಿ ಮೊದಲಾದ ನದಿಗಳು ನಾನಾಮುಖವಾಗಿ ಹರಿದು ತರತರದ ಆಹಾರ ಸಾಮಗ್ರಿಗಳನ್ನು ಬೆಳೆಯಿಸಿ ಜನಸಾಮಾನ್ಯರ ಜೀವನವನ್ನು ಪೋಷಿಸಿ ಪಾವನಗೊಳಿಸಿರುವಂತೆ, ಬಗೆಬಗೆಯ ಶಾಸ್ತ್ರದ ಹೊನಲುಗಳು ದಶದಿಕ್ಕುಗಳಲ್ಲಿ ಹರಡಿ ದೇವ, ಜೀವ, ಜಗತ್ತುಗಳ ಯಥಾರ್ಥವಾದ ಪರಿಚಯವನ್ನು ಮಾಡಿಸಿ, ಜೀವನ ಅಂತರಾಳದ ತೊಡಕನ್ನು ಕತ್ತರಿಸಿ ದೇವ-ಜೀವರಲ್ಲಿರುವ ಸಮರಸಭಾವವನ್ನು ಹೊರಹಾಕಿದವು. ಎಲ್ಲ ಶಾಸ್ತ್ರಗಳು ಮತ್ತು ಮತಸಂಘಗಳು ಮನುಷ್ಯಮಾತ್ರರ ಜೀವನದಲ್ಲಿ ಒಂದು ಬಗೆಯ ಪರಾತ್ಪರ ಚೈತನ್ಯದ ಬೆಳಗನ್ನು ಹೊರಹೊಮ್ಮಿಸಿ ಅರಿವಿನ ತುಟ್ಟತುದಿಗೆ ಮುಟ್ಟಿಸುವದಕ್ಕಾಗಿಯೇ ಹೊರಟಿರುವವು. ಈ ಸಂಸಾರವೆಂಬ ರಣರಂಗದಲ್ಲಿ ಬಗೆಬಗೆಯಿಂದ ಹೋರಾಡಿ ಜಯವನ್ನು ಸಂಪಾದಿಸಿದ ಜೀವನಗಳು ಅಲ್ಲಲ್ಲಿ ಬೆಳೆಯುತ್ತಿರುವವು. ದೇವ-ಜೀವ-ಜಗತ್ತು ಭಿನ್ನಭಿನ್ನವೆಂತಲೂ ಹೀಗೆ ನಾನಾಪ್ರಕಾರದ ಅಭಿಪ್ರಾಯಗಳು ಮುಂದಿನವರಲ್ಲಿ ಬೇರೂರುತ್ತ ಬಂದವು. ಅವೇ ವಿಸ್ತಾರ



CC-0. Jangamwadi Math Collection, Varanasi. An eGangotri Initiative

ವಾಗಿ ಮತ್ತೆ ಮತ್ತೆ ಬೆಳೆಯಲಾರಂಭಿಸಿದವು. ಆ ತತ್ತ್ವಗಳಲ್ಲಿ "ಲಿಂಗಾಂಗ ಸಾಮರಸ್ಯವು" ಒಂದು ರಹಸ್ಯಪೂರ್ಣವಾದ, ಸರ್ವಾನುಭವಸಿದ್ಧವಾದ, ಅತಿ ಮಹತ್ತರವಾದ ತತ್ತ್ವವೆನಿಸಿಕೊಂಡಿರುವುದು. ಈ ತತ್ವವು ಪ್ರಾಚೀನತಮವಾದ ಶಿವಸಂಸ್ಕೃತಿಯಿಂದ ಬದಲಾವಣೆಯನ್ನು ಹೊಂದುತ್ತ ಈ ಹೆಸರನ್ನು ತಾಳಿರುವುದು.

ಈ ಲಿಂಗಾಂಗ ಸಾಮರಸ್ಯದ ವಿಚಾರವನ್ನು ಅನೇಕ ಜನ ವೀರಶೈವ ಪಂಡಿತರು ಮತ್ತು ತತ್ತ್ವಾನುಭಾವಿಗಳು ನಮ್ಮ ಭಾರತದ ಪ್ರಾಚೀನ ಭಾಷೆಗಳಾದ ಕನ್ನಡ, ದ್ರಾವಿಡ, ಆಂಧ್ರ ಸಂಸ್ಕೃತ ಮೊದಲಾದ ಭಾಷೆಗಳಲ್ಲಿ ಗ್ರಂಥರೂಪದಿಂದ ಸವಿಸ್ತಾರವಾಗಿ ಪ್ರತಿಪಾದಿಸಿರುವರು. ಆ ಮಹತ್ವಪೂರ್ಣವಾದ ವಿಷಯವನ್ನು ಒಂದು ಚಿಕ್ಕ ಬರಹದಲ್ಲಿ ಪೂರ್ತಿಗೊಳಿಸುವುದು ಎಷ್ಟು ಕಷ್ಟಸಾಧ್ಯವೆಂಬುದನ್ನು ವಾಚಕರೇ ವಿಚಾರಿಸಬೇಕು.

ಪ್ರಸ್ತುತ ವಿಷಯವನ್ನು ಪ್ರತಿಪಾದಿಸುವುದಕ್ಕೆ ಮೊದಲು ಓದುಗರಿಗೆ ಅದರಲ್ಲಿ ಬರತಕ್ಕ ಕೆಲವು ಶಬ್ದಗಳ ಪರಿಚಯವನ್ನು ಮಾಡಿಕೊಡುವುದು ಯೋಗ್ಯ. ಕೆಲ ಭಾಷ್ಯಕಾರರು ಬ್ರಹ್ಮ ಶಬ್ದ ವ್ಯುತ್ಪತ್ತಿಯನ್ನು ಹೇಗೆ ನಿರ್ವಚನ ಮಾಡಿರುವರೋ ಹಾಗೆ ಸ್ಥಲ ಮತ್ತು ಲಿಂಗ ಇವುಗಳ ಅವಯವಾರ್ಥವನ್ನು ಪ್ರತಿಪಾದಿಸುವರು. "ಯತೋವಾ ಇಮಾನಿ ಭೂತಾನಿ ಜಾತಾನಿ........" ಎನ್ನುವ ಶ್ರುತಿಯು ಜಗತ್ತಿಗೆ ಆಧಾರರೂಪ ಬ್ರಹ್ಮವನ್ನು ಹೇಳುವಂತೆ ಆಚಾರ್ಯ ಮಾಯಿದೇವರು ತಮ್ಮ ಶಿವಾನುಭವ ಸೂತ್ರ ಗ್ರಂಥದಲ್ಲಿ "ಏಕಮೇವ ಪರಂ ಬ್ರಹ್ಮ ಸಚ್ಚಿದಾನಂದಲಕ್ಷಣಂ| ಶಿವತತ್ತ್ವಂ ಶಿವಾಚಾರ್ಯಾಃ ಸ್ಥಲಮಿತ್ಯಾಹುರಾದರಾತ್ ||" ಸರ್ವೇಷಾಂ ಸ್ಥಾನಭೂತತ್ವಾಲ್ಲಯ ಭೂತತ್ವತಸ್ತತಃ| ತತ್ತ್ವಾನಾಂ ಮಹದಾದೀನಾಂ ಸ್ಥಲಮಿತ್ಯಭಿಧೀಯತೇ || ಎಂದು ಆರಂಭ ಮಾಡಿ "ಸ್ಥಲಮದ್ವೈತಂ ಶಿವಜ್ಞಾನೈಕತತ್ಪರಾಃ" ಎಂಬ ಪರ್ಯಂತರ ೭—ಲ ಸೂತ್ರಗಳಿಂದ ಸ್ಥಲ ಶಬ್ದಾರ್ಥವನ್ನು ನಿರೂಪಿಸಿದ್ದಾರೆ. ಆ ಸ್ಥಲದಲ್ಲಿ 'ಶಕ್ತಿ ಶಕ್ತಿಮತೋರಭೇದಃ' 'ಶಕ್ತಿಶ್ಚ ಶಕ್ತಿಮಾಂಸ್ತು ಮಹೇಶ್ವರಃ|' "ಇಂಗಡಲೊಳಿಂಪು ಬೆಳದಿಂಗಳೊಳು ತಂಪು| ಕುಸುಮಂಗಳೊಳು ಕಂಪು ಬೆರೆದಂತೆ ಪರಮನೊಳು ಪಿಂಗದಗಸುತೆಗೆ ನತನಪ್ಪೆ||" ಎಂದು ಶ್ರೀ ನಿಜಗುಣ ಶಿವಯೋಗಿಗಳು ಆ ಪರಶಿವನಲ್ಲಿ ಅವಿನಾಭಾವ ಸಂಬಂಧದಿಂದ ಶಕ್ತಿಯು ಬೆರೆತಿರುವುದನ್ನು ವರ್ಣಿಸಿರುವರು. ಆ ಸಚ್ಚಿದಾನಂದ ಸ್ವರೂಪವಾದ ಸ್ಥಲವೇ ಸ್ವಶಕ್ತಿಕ್ಷೋಭದಿಂದ ಎರಡಾಯಿತು. ಒಂದೇ ಮಹಾಕಾಶವು ಘಟ - ಮಠ ಉಪಾಧಿಯಿಂದ ಘಟಾಕಾಶವೆಂತಲೂ ಮಠಾಕಾಶವೆಂತಲೂ ಭಿನ್ನವಾದಂತೆ, ಲಿಂಗಾಂಗೋಪಾಧಿಯಿಂದ ಲಿಂಗಸ್ಥಲ – ಅಂಗಸ್ಥಲವೆಂದು ಎರಡು ತೆರನಾಯಿತು. ಇದರಂತೆ ಲಿಂಗಶಬ್ದವಾದರೂ "ಲೀಯತೇ ಗಮ್ಯತೇ ಯತ್ರ ಯೇನ ಸರ್ವಂ ಚರಾಚರಂ| ತದೇ ತಲ್ಲಿಂಗಮಿತ್ಯುಕ್ತಂ ಲಿಂಗತತ್ವಪರಾಯಣೈಃ||" ಚರಾಚರಾತ್ಮಕವಾದ ಪ್ರಪಂಚದ ಸ್ಥಿತಿಲಯಗಳನ್ನು ಒಳಗೊಂಡಿದೆಯೆಂದು ಮಾಯಿದೇವಾಚಾರ್ಯರಿಂದ ಪ್ರತಿಪಾದಿಸಲ್ಪಟ್ಟಿರುವುದು. ಇನ್ನು ಅಂಗವೆಂದರೆ ಶರೀರ ಮತ್ತು ಅವಯವ ಎಂದು ಪ್ರಸಿದ್ಧಿಸಿರುವುದು. ಆದರೆ ಇಲ್ಲಿ ಅಂಗ ಶಬ್ದಕ್ಕೆ ಜೀವನೆಂದು ಹೇಳುತ್ತಾರೆ. 'ಅಂಗಂ ಅಸ್ಯ ಅಸ್ತೀತಿ ಅಂಗೀ' ಎಂದರೆ ಜೀವನೆಂದು ಅರ್ಥವಾಗುತ್ತಿದ್ದರೂ 'ಅಂಗ' ಎಂಬ ಅಕಾರಾಂತ ಶಬ್ದದಿಂದ ದೇವಸಾನ್ನಿಧ್ಯವನ್ನು ಯಾವಾಗಲೂ ಹೊಂದಿಕೊಂಡಿರುವುದರಿಂದ, 'ಅಂಗ' ಶಬ್ದವೂ ಶುದ್ಧ ಜೀವವಾಚಕವಾಗುವುದು. ಶುದ್ಧ ಜೀವನೆಂದರೆ



CC-0. Jangamwadi Math Collection, Varanasi. An eGangotri Initiative

ವೇಧಾ - ಮಂತ್ರ - ಕ್ರಿಯಾ ಈ ಮೂರು ದೀಕ್ಷೆಗಳಿಂದ ಕಾರಣ - ಸೂಕ್ಷ್ಮ - ಸ್ಥೂಲ ಶರೀರಗಳಲ್ಲಿರ ತಕ್ಕ ಆಣವ - ಮಾಯಾ - ಕಾರ್ಮಿಕ ಮಲತ್ರಯಗಳಿಂದ ಬಿಡುಗಡೆಯನ್ನು ಹೊಂದಿದ ಅಂಗನೇ ಶುದ್ಧ ಜೀವನೆನಿಸಿಕೊಳ್ಳುತ್ತಾನೆ. ಇಲ್ಲಿಯವರೆಗೆ ಸ್ಥಲ - ಲಿಂಗ - ಅಂಗ ಈ ಶಬ್ದಗಳ ಸ್ವರೂಪವನ್ನು ನಿರೂಪಿಸಿದ್ದಾಯಿತು.

ಇನ್ನು ಸಾಮರಸ್ಯದ ವಿಚಾರ. ಸಾಮರಸ್ಯವೆಂದರೆ ' ಸಮಾನಃ ರಸಃ ಯತ್ರ ತಸ್ಯ ಭಾವಃ ಸಾಮರಸ್ಯಂ ' ಎಂದು ಸಾಮರಸ್ಯದ ಅವಯವವಾರ್ಥವನ್ನು ಲಿಂಗಾಂಗಿಗಳು ಹೇಳುತ್ತಾರೆ. ಒಂದು ಸ್ವಭಾವಗಳುಳ್ಳವುಗಳಾಗಿರಬೇಕೆಂದು ಇದರಿಂದ ಸ್ಪಷ್ಟವಾಗುತ್ತದೆ. ಜೀವ-ಬ್ರಹ್ಮರ ಏಕತ್ವವು ಅದ್ವೈತಿಗಳ ಗುರಿಯಾಗಿರುವಂತೆ, ಲಿಂಗಾಂಗಸಂಗವು ವೀರಶೈವರ ಗುರಿಯಾಗಿದೆ. ಲಿಂಗಾಂಗ ಸಾಮರಸ್ಯವೆಂಬ ಶಬ್ದವು-ಆರು ಲಿಂಗಸ್ಥಲ, ಆರು ಅಂಗಸ್ಥಲ-ಆರು ಶಕ್ತಿ, ಆರು ಭಕ್ತಿ-ನೂರೊಂದು ಸ್ಥಲ, ೨೧೬ ಸಕೀಲಗಳಿಂದೊಳಗೊಂಡಿರುವುದು. ಆದರೆ ಅವೆಲ್ಲವುಗಳನ್ನು ಇಲ್ಲಿ ಬರೆದು ವಿಸ್ತರಿಸಲು ನಮಗೆ ಇಷ್ಟವಿಲ್ಲ. ಏಕೆಂದರೆ ಅವೆಲ್ಲವು ಪ್ರತ್ಯೇಕ ವಿಷಯಗಳಾಗಿರುವುದರಿಂದ ಇಲ್ಲಿ ಅವನ್ನು ಉಲ್ಲೇಖಿಸುವುದು ಅಪ್ರಕೃತವೆಂದು ತಿಳಿಯುತ್ತೇವೆ. ಲಿಂಗ - ಅಂಗ - ಸಾಮರಸ್ಯ ಈ ಮೂರು ಶಬ್ದಗಳ ಮರ್ಮವನ್ನು ಪ್ರತಿಪಾದಿಸುವುದೇ ಪ್ರಕೃತ ಲೇಖನದ ಗುರಿಯಾಗಿದೆ.

ಲಿಂಗಪೂಜೆಯು ಆರ್ಯರು ಈ ದೇಶಕ್ಕೆ ಬರುವುದಕ್ಕೆ ಮುಂಚಿತವಾಗಿ ಇಲ್ಲಿಯ ಮೂಲ ನಿವಾಸಿಗಳಾದ ದ್ರಾವಿಡರ ಕಾಲದಲ್ಲಿಯೆ ಅಸ್ತಿತ್ವದಲ್ಲಿ ಇದ್ದಿತೆಂದು ಇತಿಹಾಸ ಸಂಶೋಧಕರ ಅಭಿಪ್ರಾಯವಿರುವುದು. ಪಂಜಾಬದ ಮಹಂಜೋದಾರೊದ ಹೊಸ ಸಂಶೋಧನೆಯಲ್ಲಿ ಲಿಂಗ ಮೂರ್ತಿಗಳು ಅನೇಕ ಮಣ್ಣಿನ ಪಾತ್ರೆಗಳು ದೊರೆತಿರುವುದರಿಂದ ಆಗಿನ ಕಾಲದಲ್ಲಿಯೂ ದ್ರಾವಿಡರು ಎಂಥ ನಾಗರೀಕರಿದ್ದರೆಂಬುದು ವ್ಯಕ್ತವಾಗುತ್ತದೆ. ವೇದ ಕಾಲಕ್ಕಿಂತಲೂ ಲಿಂಗಪೂಜೆಯು ಪುರಾತನವಾದದ್ದು ಇರಬಹುದೆಂದು ತರ್ಕಿಸಲು ಅವಕಾಶವಿದೆ. ಏಕೆಂದರೆ ಆರ್ಯರು ಈ ದೇಶಕ್ಕೆ ಬಂದನಂತರ ದ್ರಾವಿಡರಿಗೂ ಆರ್ಯರಿಗೂ ಸಂಸ್ಕೃತಿಯ ದೆಸೆಯಿಂದ ಎಷ್ಟೋ ಹೋರಾಟಗಳಾಗಿ ದ್ರಾವಿಡರ ಮೇಲೆ ತಮ್ಮ ಪ್ರಭಾವವನ್ನು ನೆಲೆಗೊಳಿಸಿದರು. ಅನಂತರ ಇಲ್ಲಿರತಕ್ಕ ಅನೇಕ ಪ್ರಸಿದ್ಧ ಶಿವಾಲಯಗಳಲ್ಲಿರುವ ಲಿಂಗಮೂರ್ತಿಗಳನ್ನು ತಮ್ಮ ವಶಮಾಡಿಕೊಂಡು, ವೇದಮಂತ್ರಗಳಿಂದ ಪೂಜೆಯನ್ನು ಮಾಡಲಿಕ್ಕೆ ಪ್ರಾರಂಭಿಸಿರಬಹುದು. ಸ್ಥಾವರ ( ಸ್ಥಾಪಿತ ) ಲಿಂಗಪೂಜೆಯು ಶೈವರಲ್ಲಿ ಬೆಳೆಯುತ್ತ ಸಾಮಾನ್ಯ ಜನರ ಸೌಕರ್ಯಕ್ಕಾಗಿ ಅನೇಕ ಕಡೆಗೆ ಶಿವಾಲಯಗಳು ಏರ್ಪಟ್ಟಿರುವುದೇ ಸಾಕ್ಷಿ. ಈ ಸಾಮೂಹಿಕ ಉಪಾಸನೆಯಲ್ಲಿ ಅನೇಕ ಲೋಪಗಳು ತಲೆದೋರಲು ವೈಯುಕ್ತಿಕವಾಗಿ ಬಂಗಾರ, ಬೆಳ್ಳಿ, ತಾಮ್ರ, ಕಂಚು, ಸ್ಫಟಿಕ ಮೊದಲಾದ ಲಿಂಗಗಳನ್ನು ಪೂಜೆ ಮಾಡಲು ಆರಂಭವಾಯಿತು. ಇದಲ್ಲದೆ ಗ್ರಾಮಾಂತರ ಪ್ರಯಾಣ ಮಾಡಿದರೆ ಸಣ್ಣ ಬೆಳ್ಳಿಯ ಪೆಟ್ಟಿಗೆಯಲ್ಲಿಟ್ಟುಕೊಂಡು ಹೊರಡುತ್ತಿದ್ದರು. ಆ ಮೇಲೆ ಕೆಲವು ಶೈವರು ಲಿಂಗಗಳನ್ನು ಮಸ್ತಕ ದಲ್ಲಿ ಧರಿಸಲು ಆರಂಭಿಸಿದರೆಂದು ತಿಳಿಯುತ್ತದೆ. ಶೈವರಲ್ಲಿ ನಕುಲೀಶ, ಪಾಶುಪತ ಮೊದಲಾದ ಪಂಥದವರು ಲಿಂಗಮುದ್ರೆಯನ್ನು ಕೂಡಾ ಹಾಕಿಕೊಳ್ಳುತ್ತಿದ್ದರೆಂದು ಕೆಲವು ಗ್ರಂಥಗಳಿಂದ ಗೊತ್ತಾಗುತ್ತದೆ.

" ಎಲ್ಲರೂ ಲಿಂಗವ ಪೂಜಿಸಿ ಮಹಾಪದಸ್ಥರಾದ ಪರಿಯನೊರೆವೆ ಕೇಳಾ ! ಸ್ಫಟಿಕಶಿಲಾಮಯ ಲಿಂಗವಪೂಜಿಸಿ ಪಡೆದ ಸತ್ಯ ಲೋಕವ ನೋಡಾ ವಿಧಾತ್ರನು; ಇಂದ್ರನೀಲಮಯಲಿಂಗವ ಪೂಜಿಸಿ ವೈಕುಂಠವ



CC-0. Jangamwadi Math Collection, Varanasi. An eGangotri Initiative

ಪಡೆದ ನೋಡಾ ನಾರಾಯಣನು।.......................................ಇಂತಪ್ಪ ನಾನಾಕೃತಿಲಿಂಗವಪೂಜಿಸಿ, ಹಲಕೆಲವು ಪದಸ್ಥರಾದರು ನೋಡಾ ಕಪಿಲಸಿದ್ಧ ಮಲ್ಲಿಕಾರ್ಜುನ ಲಿಂಗದಲ್ಲಿ! ”

ಎಂಬ ಸಿದ್ಧರಾಮೇಶ್ವರನ ವಚನದಿಂದ ತಿಳಿದುಬರುತ್ತದೆ. ಇದೇ ರೀತಿಯಲ್ಲಿ ಲಿಂಗಪೂಜೆಯು ವಿಕಾಸವನ್ನು ಹೊಂದುತ್ತ ಅಗಲದೆ ಅಂಗದಲ್ಲಿ ಯಾವಾಗಲೂ ಧರಿಸಿಕೊಂಡಿರಬೇಕೆಂಬ ಸಿದ್ಧಾಂತಕ್ಕೆ ಬಂದಿರಬೇಕು. ಆ ಕಾಲವು ಇದೇ ಎಂದು ನಿರ್ಧರಿಸಿ ಹೇಳುವದನ್ನು ಇತಿಹಾಸ ಸಂಶೋಧಕರ ಕಡೆಗೆ ಬಿಟ್ಟಿರುವೆವು. ಅಂತು ಒಂದು ಕಾಲದಲ್ಲಿ ಶರೀರದಲ್ಲಿಯೇ ಧರಿಸುತ್ತಿದ್ದ ರೆನ್ನುವುದು ಸಹಜ ಸಿದ್ಧ. ಈ ವಿಷಯದಲ್ಲಿ ೧೧ ನೆಯ ಶತಮಾನದಿಂದ ಶಿವಶರಣರ ವಚನಗಳು ಹೇರಳವಾಗಿ ದೊರೆಯುವವು.

“ ಲಿಂಗವೆಂಬುದು ಪರಶಕ್ತಿಯುತ ಪರಶಿವ ನಿಜದೇಹ. ಲಿಂಗವೆಂಬುದು ಪರಶಿವನ ಘನತೇಜ. ಲಿಂಗವೆಂಬುದು ಪರಶಿವನ ನಿರತಿಶಯಾನಂದ. ಲಿಂಗವೆಂಬುದು ಪರಶಿವನ ಪರಮಜ್ಞಾನ. ಲಿಂಗವೆಂಬುದು ಸರ್ವಕಾರಣ. ಲಿಂಗವೆಂಬುದು ಸಚ್ಚಿದಾನಂದ ನಿತ್ಯ ಪರಿಪೂರ್ಣ. ಲಿಂಗವೆಂಬುದು ಶರಣರ ಹೃದಯದಲ್ಲಿ ಬೆಳಗುವ ಜ್ಯೋತಿರ್ಮಯಲಿಂಗವು.............. ”

ಎಂದು ಮೊದಲಾಗಿ ಲಿಂಗದ ಮಹತ್ವಾತಿಶಯವನ್ನು ವಚನಕಾರರ ಅನುಭವದಿಂದ ಅರಿಯ ಬೇಕು. ಮತ್ತು “ ಜಗವನೊಳಕೊಂಡ ಲಿಂಗವು ಸೊಗಸಿದ್ದೆನ್ನ ಕರಸ್ಥಲಕ್ಕೆ ಬಂದಿರವ ಕಂಡು ಹಗರಣವಾಯಿತ್ತೆನಗೆ. ”

“ ಜಗದಗಲ, ಮುಗಿಲಗಲ, ಮಿಗಿಯಗಲ, ನಿಮ್ಮಗಲ ಪಾತಾಳದಿಂದತ್ತತ್ತ, ನಿಮ್ಮ ಶ್ರೀಚರಣ. ಬ್ರಹ್ಮಾಂಡದಿಂದತ್ತತ್ತ ನಿಮ್ಮ ಶ್ರೀಮುಕುಟ. ಅಗಮ್ಯ ಅಪ್ರಮಾಣ ಅಗೋಚರ ಅಪ್ರತಿಮ ಲಿಂಗವೆ! ಕೂಡಲ ಸಂಗಮದೇವಯ್ಯ; ಎನ್ನ ಕರಸ್ಥಲಕ್ಕೆ ಬಂದು ಚುಳುಕಾದಿರಯ್ಯ. ”

ಎಂದು ಬಸವಣ್ಣನವರೇ ಮೊದಲಾದ ಶಿವಶರಣರು ಲಿಂಗಧಾರಣ ವಿಷಯವನ್ನು ಸ್ಪಷ್ಟವಾಗಿ ವಚನಗಳಲ್ಲಿ ನಿರೂಪಿಸಿರುತ್ತಾರೆ. ಧಾರಣದಿಂದ ಒಂದು ಮಹತ್ತರವಾದ ಶಿವಯೋಗವನ್ನು ಕಂಡು ಅದರ ಅನುಭವವನ್ನು ಸಾಮಾನ್ಯ ಜನರಿಗೂ ಮನವರಿಕೆಯಾಗುವಂತೆ ಮಾಡಿರುವರು.

ಶಿವಶರಣರ ಹೃದಯದಲ್ಲಿ ಬೆಳಗುವ ಜ್ಯೋತಿರ್ಮಯ ಲಿಂಗವೆ ಆಯತ, ಸ್ವಾಯತ, ಸನ್ನಿಹಿತವೆಂದೂ ಇಷ್ಟ, ಪ್ರಾಣ, ಭಾವವೆಂದೂ ಪ್ರಸಿದ್ಧವಾಗಿರುವದು. ಇಂತಹ ಇಷ್ಟಲಿಂಗ ಪೂಜೆ ಯನ್ನು ಮೂರ್ತಿ ಪೂಜೆಯೆಂದು ಹೇಳಲಿಕ್ಕಾಗುವದಿಲ್ಲ. ಏಕೆಂದರೆ “ ಬ್ರಹ್ಮಣಸ್ತ್ರೀಣಿ ರೂಪಾಣಿ ಸಕಲಂ ಸಕಲನಿಷ್ಕಲಂ ನಿಷ್ಕಲಂ ಚೇತಿ ” ಎನ್ನುವ ಶ್ರುತಿವಾಕ್ಯಾನುಸಾರವಾಗಿ ಇಷ್ಟಲಿಂಗವು ಸಕಲರೂಪ, ಪ್ರಾಣಲಿಂಗವು ಸಕಲನಿಷ್ಕಲಸ್ವರೂಪ, ಭಾವಲಿಂಗವು ನಿಷ್ಕಲ ಸ್ವರೂಪವೆಂದು ಹೇಳುವದಲ್ಲದೆ ನಿಷ್ಕಲ ಸ್ವರೂಪವಾದ ಭಾವಲಿಂಗವು ಸನ್ನಿಹಿತವೆಂದೂ ಸಕಲನಿಷ್ಕಲಸ್ವರೂಪ ವಾದ ಪ್ರಾಣಲಿಂಗವು ಸ್ವಾಯತವೆಂದೂ ಸಕಲರೂಪ ಇಷ್ಟಲಿಂಗವು ಆಯತವೆಂದೂ ವಚನಗಳಲ್ಲಿ ಹೇಳಲ್ಪಟ್ಟಿರುವುದು.

“ ಆಯತದಲ್ಲಿ ಪೂರ್ವಾಚಾರಿಯ ಕಂಡೆ. ಸ್ವಾಯತದಲ್ಲಿ ಪೂರ್ವಾಚಾರಿಯ ಕಂಡೆ. ಸನ್ನಿಹಿತದಲ್ಲಿ ಪೂರ್ವಾಚಾರಿಯ ಕಂಡೆ. ಗುಹೇಶ್ವರ ಲಿಂಗದಲ್ಲಿ ಪರಮ ಪೂರ್ವಾಚಾರಿ ಸಂಗನ ಬಸವಣ್ಣಂಗೆ ನಮೋನಮೋ ಎಂಬೆನಯ್ಯ. ”



CC-0. Jangamwadi Math Collection, Varanasi. An eGangotri Initiative

ಎಂದು ಪ್ರಭುದೇವರು ಹೇಳಿರುವುದರಿಂದ ಬಸವಣ್ಣನವರು ಆ ಲಿಂಗಗಳನ್ನು ತಮ್ಮ ಅಂಗಾಂಗ ಗಳಲ್ಲಿ ಅಳವಡಿಸಿಕೊಂಡಿದ್ದರೆಂಬುದು ವ್ಯಕ್ತವಾಗುತ್ತದೆ. ಆದುದರಿಂದ ಇಷ್ಟಲಿಂಗಪೂಜೆಯು ಮೂರ್ತಿ ಪೂಜೆಯಲ್ಲ. ಇನ್ನು ಅಖಂಡ ನಿರಾಕಾರವಾದ ಪರವಸ್ತುವು ಖಂಡಿತ ಮತ್ತು ಸಾಕಾರ ವಾಗಿ ಅರ್ಚನೆಗೆ ಅರ್ಹವಾಗಿರುವುದನ್ನು ಶರಣರ ವಚನಗಳಿಂದ ಅನುಭವಕ್ಕೆ ತಂದುಕೊಳ್ಳ ಬೇಕಾಗಿದೆ. ಕಲಾವಿದನ ಭಾವದಲ್ಲಿ ಬಯಲರೂಪಾಗಿದ್ದ ಕಲೆಯು ಮನಸ್ಸಿಗೆ ಬಂದು ಅನಂತರ ಕೃತಿಯಿಂದ ಸಾಕಾರ ರೂಪವನ್ನು ಹೊಂದುವುದು. ಅದನ್ನು ನೋಡಿ ಅತ್ಯಂತ ಆನಂದವಾಗುವಂತೆ ನಿಷ್ಕಲ ಸ್ವರೂಪವಾದ ಭಾವವನ್ನು ಮನಸ್ಸಿಗೆ ತರಲು ಸಕಲ ನಿಷ್ಕಲ ಸ್ವರೂಪವಾದ ಪ್ರಾಣಲಿಂಗ ವಾಯಿತು. ತನಗೆ ಪ್ರಾಣಪ್ರಿಯವಾದ ವಸ್ತುವೇ ಇಷ್ಟವಾಗಿ ಪರಿಣಮಿಸುವುದು ಸ್ವಾಭಾವಿಕ ವಾದುದು. ತನಗೆ ಅತ್ಯಂತ ಇಷ್ಟವಾದ ಆ ವಸ್ತುವೇ ಪ್ರಾಣವಾಗಿರುವುದು. ಪ್ರಾಣಸ್ವರೂಪ ವಾದದ್ದು ತನಗೆ ಯಾವಾಗಲೂ ಪರಮಾನಂದವನ್ನುಂಟುಮಾಡುತ್ತ ಭಾವದಲ್ಲಿ ಬೆಳಗುತ್ತಿರುವುದು. ಆದ್ದರಿಂದ ಇಷ್ಟ-ಪ್ರಾಣ-ಭಾವವೆಂದರೆ ತನ್ನ ಬಿಟ್ಟು ಬೇರೆಯಾಗಿರುವ ಪದಾರ್ಥವಲ್ಲ.

"ಬಯಲಮೂರ್ತಿಮಾಡಿ ಎನ್ನ ಕರಸ್ಥಲಕ್ಕೆ ಕೊಟ್ಟನಯ್ಯ ಶ್ರೀಗುರು. ಬಯಲಮೂರ್ತಿಯ ಅಮೂರ್ತಿಯ ಮಾಡಿ ಎನ್ನ ಪ್ರಾಣದೊಳಗಿರಿಸಿದನಯ್ಯ ಶ್ರೀಗುರು. ಬಯಲು ಬಯಲನೆ ಬಯಸಿ ಬಯಲೆಂದೆ ನಿಸಿ ಎನ್ನ ಭಾವದಲ್ಲಿರಿಸಿದನಯ್ಯ ಶ್ರೀಗುರು. ಇದು ಕಾರಣ ಎನ್ನ ಕರಸ್ಥಲ ಮನಸ್ಥಲ ಭಾವಸ್ಥಲದಲ್ಲಿ ಧರಿಸಿ ನಾನು ಅಂಗಲಿಂಗ ಸಂಬಂಧಿಯಾದೆನಯ್ಯ ಮಹಾಲಿಂಗ ಗುರುಶಿವ ಸಿದ್ಧೇಶ್ವರ ಪ್ರಭುವೇ"

"ಮಾಡಿದಲ್ಲದೆ ಮನೆಯೊಳಗಾಗದು ಬಯಲು. ಕಣ್ಣ ಕಂಡಲ್ಲದೆ ನಿಶ್ಚಯಿಸದು ಮನ. ಪರನೆಂದಲ್ಲದೆ ಪರವಾಗದು ಈ ಪರಿಯ ನರರೆತ್ತ ಬಲ್ಲರೈ ರಾಮನಾಥ"

ಈ ವಚನಗಳಿಂದ ನಿರಾಕಾರವೇ ಸಾಕಾರ ರೂಪಕ್ಕೆ ಹೇಗೆ ಅವತರಿಸಿತೆಂಬ ತಮ್ಮ ಅನುಭವವನ್ನು ಶರಣರು ಹೊರಹೊಮ್ಮಿಸಿರುವರು. ಮತ್ತು

"ಆಕಾರವಿಡಿದು ಅರ್ಚನೆಯ ಮಾಡುವದಲ್ಲದೆ ನಿರಾಕಾರವ ನಂಬಲಾಗದು. ಶ್ರೀಗುರುವು ಪ್ರಾಣಲಿಂಗವನು ಕಂಸ್ಥಲಕ್ಕೆ ಬಿಜಯಂಗೈಸಿ ಕೊಟ್ಟಬಳಿಕ ಬಯಲನರಸಲುಂಟೆ?"

"ಪಂಚತತ್ವದಲ್ಲಿದ್ದು ಪರತತ್ವವನರಿಯಬೇಕು"

"ಬಯಲ ಮೂರ್ತಿಯಗೊಳಿಸಿದನೊಬ್ಬ ಶರಣ. ಆ ಮೂರ್ತಿಯಲ್ಲಿ ಭಕ್ತಿಸ್ವಾಯತವ ಮಾಡಿದ ನೊಬ್ಬ ಶರಣ. ಆ ಭಕ್ತಿಯನೆ ಸುಜ್ಞಾನಮುಖವಮಾಡಿದನೊಬ್ಬ ಶರಣ. ಆ ಸುಜ್ಞಾನವನು ಲಿಂಗಮುಖ ವಾಗಿ ಧರಿಸಿದನೊಬ್ಬ ಶರಣ. ಆ ಲಿಂಗವನು ಸರ್ವಾಂಗದಲ್ಲಿ ವೇಧಿಸಿಕೊಂಡನೊಬ್ಬ ಶರಣ. ಆ ಸರ್ವಾಂಗವನೆ ನಿರ್ವಾಣ ಸಮಾಧಿಯಲ್ಲಿ ನಿಲಿಸಿದನೊಬ್ಬ ಶರಣ..............."

ಇಂಥ ಅನುಭವದಿಂದ ತುಂಬಿ ತುಳುಕಾಡುವ ಶಿವಶರಣರ ವಚನಗಳನ್ನು ಚೆನ್ನಾಗಿ ಪರಿಶೀಲಿಸಿದರೆ ಪರಮಾತ್ಮ ಸ್ವರೂಪವು ಎಲ್ಲಿರುವುದೆಂಬ ಭಾವವು ತನ್ನೊಳಗೆ ಬೆಳಗಿ ತೋರುವುದು. ಈ ವೀರಶೈವ ತತ್ತ್ವಜ್ಞಾನದಲ್ಲಿ ಲಿಂಗವೆಂದರೆ ಪರಮಾತ್ಮ - ಪರವಸ್ತುವೆಂದು ಅರ್ಥವಾಯಿತು. ಅಂಗವೆಂದರೆ ಮಲತ್ರಯವಿಲ್ಲದ ಶುದ್ಧ ಜೀವನು. ಈ ಜೀವನಿಗೆ ಅಂಗನೆಂದು ಕರೆಯಲು ಇನ್ನೊಂದು ಮಹತ್ತರ ವಾದ ಕಾರಣವಿದೆ.



CC-0. Jangamwadi Math Collection, Varanasi. An eGangotri Initiative

"ನನ್ನಿಂದರಿದೆನೆಂಬೆನೆ ನನ್ನಿಂದರಿದವನಲ್ಲ. ನಿನ್ನಿಂದರಿದೆನೆಂಬೆನೆ ನಿನ್ನಿಂದರಿಪವನಲ್ಲ. ಅದೇನು ಕಾರಣವೆಂದರೆ ಕಣ್ಣ ಬೆಳಗು ಸೂರ್ಯನ ಬೆಳಗು ಕೂಡಿ ಕಾಂಬಂತೆ, ನನ್ನನಿನ್ನರಿವಿನ ಸಂಬಂಧ ಬೆಂಬಳಿಯಲ್ಲಿ ಅರಿದೆನು ಕಾಣಾ ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರಾ"

ಜೀವನು ಲಿಂಗದ ಅಂಶವಾಗಿರುವುದರಿಂದ ಅಂಗಿಯಾದ ಲಿಂಗಶಕ್ತಿಯು ಅಂಗವಾದ ಶುದ್ಧ ಜೀವನಲ್ಲಿ ಇರಲೇಬೇಕಾದುದು ಸಹಜ. ಆದ್ದರಿಂದ ಅಂಗನೆಂದರೆ ಶುದ್ಧ ಜೀವನೆಂಬುದು ಸ್ಪಷ್ಟ. ಇದೇ ಅರ್ಥವನ್ನೇ ಆಚಾರ್ಯ ಮಾಯಿದೇವರು ಶಿವಾನುಭವ ಸೂತ್ರದ ಲಿಂಗಾಂಗ ಸಂಯೋಗಾಧಿ ಕರಣದಲ್ಲಿ—

"ಶಿವ ಏವ ಸ್ವಯಂ ಲಿಂಗಮಾತ್ಮೈವಾಂಗಸ್ಥಲಂ ಭವೇತ್ ।
ತಯೋಶ್ಶಿವಾತ್ಮಯೊಸ್ಸಮ್ಯಗ್ಯೋಗಸ್ಸಂಯೋಗ ಏವ ಹಿ ॥
ಸೋಽಯಮಾತ್ಮಾ ಶಿವಾಂಗಸ್ಯಾಚ್ಛಿವೇನಾಂಗೀಕೃತತ್ವತಃ ।
ಸರ್ವಜ್ಞತ್ವಾದಿ ಭೇದೈಶ್ಚ ಶಿವಾಂಗಮಿದಮಿಷ್ಯತೇ ॥"

ಶಿವನೇ ತಾನು ಲಿಂಗರೂಪಿಯಾಗಿರುವನು. ಶುದ್ಧನಾದ ಜೀವಾತ್ಮನೇ ಅಂಗನಾಗಿರುವನು. ಇಂಥ ಶಿವ-ಜೀವರ ಅಚ್ಚಳಿಯದ ಯೋಗಕ್ಕೆ ಲಿಂಗಾಂಗ ಸಂಗ ಅಥವಾ ಲಿಂಗಾಂಗ ಸಾಮರಸ್ಯವೆಂದು ಕರೆಯುತ್ತಾರೆ.

ನಾವು ಮೊದಲು ಸಾಮರಸ್ಯದ ವಿಗ್ರಹವನ್ನು ವಿಸ್ತರಿಸಿರುವಂತೆ ಈಗ ಲಿಂಗಾಂಗಗಳ ವಿಭಾಗವನ್ನು ಸ್ವಲ್ಪ ವಿಸ್ತರಿಸಿದರೆ ಅಸಂಗತವೇನೂ ಆಗಲಿಕ್ಕಿಲ್ಲ. ಮೊದಲು ನಿಷ್ಕಲ ಸ್ವರೂಪವಾದ ಮಹಾಲಿಂಗವೆ ಲಿಂಗವೆಂದು–ಅಂಗವೆಂದು ಎರಡು ತೆರನಾಯಿತು. ಆ ಲಿಂಗವೆ ಪುನಃ ಭಾವ–ಪ್ರಾಣ–ಇಷ್ಟವೆಂದು ಮೂರು ಪ್ರಕಾರವಾಯಿತು. ಅದು ಮರಳಿ ಭಾವಲಿಂಗದಲ್ಲಿ ಪ್ರಸಾದ ಲಿಂಗ, ಮಹಾಲಿಂಗನೆಂದೂ ಪ್ರಾಣಲಿಂಗದಲ್ಲಿ ಶಿವಲಿಂಗ, ಜಂಗಮಲಿಂಗವೆಂದೂ ಇಷ್ಟಲಿಂಗದಲ್ಲಿ ಆಚಾರಲಿಂಗ, ಗುರುಲಿಂಗವೆಂದೂ ಆರಾದವು. ಇವಕ್ಕೆ ಲಿಂಗಸ್ಥಲವೆನ್ನುತ್ತಾರೆ. ಅಂಗವೂ–ಯೋಗಾಂಗ – ಭೋಗಾಂಗ – ತ್ಯಾಗಾಂಗವೆಂದು ಮೂರು ವಿಧವಾಯಿತು. ಆ ಯೋಗಾಂಗದಲ್ಲಿ ಶರಣ–ಐಕ್ಯ, ಭೋಗಾಂಗದಲ್ಲಿ ಪ್ರಸಾದಿ – ಪ್ರಾಣಲಿಂಗಿ, ತ್ಯಾಗಾಂಗದಲ್ಲಿ ಭಕ್ತ–ಮಹೇಶನೆಂದು ಆರು ಅಂಗಸ್ಥಲಗಳಾದವು. ಮೇಲೆ ಹೇಳಿದ ಲಿಂಗಸ್ಥಲಗಳಲ್ಲಿ ಕ್ರಮವಾಗಿ ಚಿಚ್ಛಕ್ತಿ–ಆದಿಶಕ್ತಿ–ಪರಾಶಕ್ತಿ – ಇಚ್ಛಾಶಕ್ತಿ – ಜ್ಞಾನಶಕ್ತಿ – ಕ್ರಿಯಾಶಕ್ತಿಗಳು ಉದಯಿಸುವುವು. ಅಂಗಸ್ಥಲಗಳಲ್ಲಿ ಕ್ರಮವಾಗಿ–ಸಮರಸ–ಆನಂದ–ಅನುಭವ–ಅವಧಾನ–ನಿಷ್ಠಾ–ಶ್ರದ್ಧಾ ಭಕ್ತಿಗಳು ಹುಟ್ಟುವುವು. ಕೊನೆಯ ಐಕ್ಯ ಸ್ಥಲದಲ್ಲಿ ಲಿಂಗಾಂಗ ಸಾಮರಸ್ಯದ ರಹಸ್ಯವು ವಚನಗಳಲ್ಲಿ ಸ್ಪಷ್ಟವಾಗಿರುವುದು. ಶರಣರು ಇದರ ಅನುಭಾವವನ್ನು ಸತಿ-ಪತಿ ನ್ಯಾಯದಲ್ಲಿ ಜಗತ್ತಿಗೆ ತೋರಿಸಿಕೊಟ್ಟಿರುತ್ತಾರೆ. ಪ್ರಪಂಚದಲ್ಲಿ ಇತರ ತತ್ತ್ವಜ್ಞಾನಿಗಳು ಪರಮಾತ್ಮನನ್ನು ತಂದೆ–ತಾಯಿ-ಗುರುವೆಂದು ಭಾವಿಸುವದುಂಟು. ಆದರೆ ಶಿವಶರಣರ ಅನುಭವವು ಇವೆಲ್ಲಕ್ಕೂ ವಿಲಕ್ಷಣವಾದದ್ದಿದ್ದರೂ ಸಾಮಾನ್ಯ ಸ್ತ್ರೀ–ಪುರುಷರ ಅನುಭವಕ್ಕೆ ಬರುವಂತಿರುವುದು. ಅದಕ್ಕಾಗಿ ಶರಣಸತಿ ಲಿಂಗಪತಿ ಎಂದು ಭಾವಿಸಿ ಲಿಂಗಭೋಗೋಪಭೋಗಿಯಾಗಬೇಕೆಂದು ಸಿದ್ಧಾಂತವಿರುವುದು. ಸತಿಪತಿಭಾವದಲ್ಲಿ ಸಾಮರಸ್ಯವಿದ್ದಂತೆ ತಂದೆ–ತಾಯಿ–ಗುರುವೆಂಬ ಭಾವನೆಯಲ್ಲಿ ಸಾಮರಸ್ಯವಿರುವುದಿಲ್ಲ.



CC-0. Jangamwadi Math Collection, Varanasi. An eGangotri Initiative

" ಒಡಲಿಲ್ಲದ, ಸುಡಿಯಿಲ್ಲದ, ಕಡೆಯಿಲ್ಲದ ನಲ್ಲನ ಒಡಗೂಡಿ ಸುಖಿಯಾದೆ ಕೇಳಿರಯ್ಯಾ! ಓಸರಿಸೆನು ಅನ್ಯಕ್ಕೆ, ಆಶೆ ಮಾಡೆನು ಮತ್ತೆ ಭಿನ್ನ ಸುಖಕ್ಕೆ, ಆರಳಿದು ಮೂರಾಗಿ, ಮೂರಳಿದು ಎರಡಾಗಿ, ಎರಡಳಿದು ಒಂದಾಗಿ ನಿಂದೆನಯ್ಯ................"

ಎಂದು ಅಕ್ಕನವರು ಇಂತಹ ನಲ್ಲನೊಡಗೂಡಿ ಪರತರ ಸುಖವನ್ನು ಅನುಭವಿಸಿದನಂತರ ಬೇರೆ ಸುಖಕ್ಕೆ ಯಾವ ರೀತಿಯಿಂದಲೂ ಆಶೆ ಮಾಡಲಾರೆನೆಂದು ಹೇಳಿದ್ದಾರೆ. ಲಿಂಗಾಂಗವನ್ನು ಒಂದೇ ಸ್ವರೂಪದಲ್ಲಿ ಕಂಡು ಸಾಮರಸ್ಯ ಸುಖದ ತುಟ್ಟತುದಿಯನ್ನು ಮುಟ್ಟಿದ್ದಾರೆ. ಅಂಗಲಿಂಗಗಳಲ್ಲಿ ಸತಿಪತಿ ಭಾವವು ಬೆಳೆದ ಹಾಗೆಲ್ಲ ದಾಂಪತ್ಯ ಜೀವನವು ಹೀಗೆ ಬೆಳೆಯುತ್ತದೆ.

" ತನುಮನ ಲಿಂಗಕ್ಕಾಗಿ ಮೀಸಲಿರಿಸಿ ಸಂಸಾರವೆಂಬ ಶ್ವಾನನಟ್ಟಿ ಮೀಸಲ ಬೀಸರವ ಮಾಡದಿರಯ್ಯಾ. ಎನ್ನ ಚಿತ್ತವು ನಿಮ್ಮ ಧ್ಯಾನವಯ್ಯ. ನೀವಲ್ಲದೆ ಮತ್ತೇನು ಅರಿಯೆನಯ್ಯ. ಕನ್ನೆಯಲ್ಲಿ ಕೈವಿಡಿದೆನು. ನಿಮ್ಮಲ್ಲಿ ನೆರೆದೆನು. ಮನ್ನಿಸು ಕಂಡ್ಯಾ ಮಹಾಲಿಂಗವೆ! ಪತಿ ನೀನು, ಸತಿ ನಾನಯ್ಯ. ಮನೆ ಒಡೆಯ ಮನೆಯ ಕಾಯ್ದಿಪ್ಪಂತೆ ನೀನೆನ್ನ ಮನ ಕಾಯ್ದಿಪ್ಪ ಗಂಡನು. ನಿನಗಿತ್ತ ಮನವ ಅನ್ಯಕ್ಕೆ ಹರಿಸಿದರೆ ನಿನ್ನ ಅಭಿಮಾನಕ್ಕೆ ಹಾನಿ ಕೂಡಲ ಸಂಗಮದೇವಾ"

ಹೀಗೆ ಅಂಗನು ಸತಿಯಾಗಿ ಪತಿಯಾದ ಲಿಂಗಕ್ಕೆ ಸರ್ವಸ್ವವನ್ನು ಅರ್ಪಿಸಿದನಂತರ ಪತಿಯಾದ ಲಿಂಗದೇವನು ಪ್ರಸನ್ನನಾಗುವನು.

" ಯಥಾಂತರೋಪಚಾರೇಣ ನರಃ ಸ್ತ್ರೀಷು ಪ್ರಸೀದತಿ ।
ತಥಾಂತರೋಪಚಾರೇಣ ಪ್ರಸೀದತಿ ಮಹೇಶ್ವರಃ ॥"

ಸತಿಯ ಹಾರ್ದಿಕ ಉಪಚಾರಕ್ಕೆ ಪತಿ ಪ್ರಸನ್ನನಾಗುವಂತೆ, ಭಕ್ತನಾದ ಅಂಗನು ಮನಮುಟ್ಟಿ ಮಾಡುವ ಉಪಚಾರಗಳಿಂದ ಲಿಂಗದೇವನು ಪ್ರಸನ್ನನಾಗಿ ಒಬ್ಬರಿಗೊಬ್ಬರು ಒಲಿದು—

" ನಾ ನಿನಗೊಲಿದೆ. ನೀ ಎನಗೊಲಿದೆ. ನಾ ನಿನ್ನನಗಲದಿಪ್ಪೆ. ನೀ ಎನ್ನನಗಲದಿಪ್ಪೆ. ನಿನಗೆ ನನಗೆ ಬೇರೊಂದು ಠಾವುಂಟೆ?..............."

ಎಂದು ಅಕ್ಕನವರು ಅನ್ನುವಂತೆ ಸಮಾನಾನುರಾಗವು ಪರಸ್ಪರರನ್ನು ಒಂದರಕ್ಷಣವೂ ಅಗಲಗೊಡದೆ ಒಂದೇ ಸ್ಥಾನದಲ್ಲಿರಿಸುವುದು.

" ರುದ್ರೇಣಾತ್ತಮಶ್ನೀಯಾತ್ ಪೀತಂ ಪಿಬೇತ್ ತೇನ ಸಹ ಸಂವಿಶೇತ್ "

ಎನ್ನುವ ಶ್ರುತಿಗನುಸಾರವಾಗಿ ಉಣ್ಣುವ ತಿನ್ನುವ ನೀರು ಕುಡಿಯುವ ನಿಲ್ಲುವ ವಾಸಿಸುವ ಎಲ್ಲ ವ್ಯವಹಾರಗಳು ಕೂಡಿ ಕೂಡಿಯೇ ನಡೆಯುವದನ್ನು ಪ್ರಪಂಚದಲ್ಲಿ ಅನುಭವಿಸುವಂತೆ ಪರಮಾರ್ಥದಲ್ಲಾದರೂ ಲಿಂಗಾಂಗಗಳು ಅನುಭವಿಸಿ ಎಂದೂ ಅಗಲದಿರುವ ಮಹಾಶಕ್ತಿಯನ್ನು ಸಂಪಾದಿಸಿಕೊಂಡು ಒಳಹೊರಗೆ ಒಂದಾಗಿಬಿಡುವರು. ಹೀಗೆ ಒಂದಾಗಿರುವ ಸ್ಥಿತಿಯನ್ನು ವರ್ಣಿಸಲು ಸಾಧ್ಯವಿಲ್ಲ. ಅದನ್ನು, ಅಂಥ ಅನುಭವವನ್ನು ಪಡೆದವರ ವಚನಗಳಿಂದ ಶಕ್ಯವಿದ್ದಷ್ಟು ತೋರಿಸುವುದೇ ನಮ್ಮ ಅಭಿಪ್ರಾಯ. ಏಕೆಂದರೆ ಅಂಥ ಸಾಮರಸ್ಯವನ್ನು ಎಂದೂ ಅನುಭವಿಸದವರು ತಮ್ಮ ಮಾತಿನಿಂದ ಹೇಳುವದೆಂದರೆ—

" ಅನುಭೂತಿಂ ವಿನಾ ಮೂಢೋ ವೃಥಾ ಬ್ರಹ್ಮಣಿ ಮೋದತೇ ।
ಪ್ರತಿಬಿಂಬಿತಶಾಖಾಗ್ರಫಲಾಸ್ವಾದನಮೋದವತ್ ॥"



CC-0. Jangamwadi Math Collection, Varanasi. An eGangotri Initiative

ಎನ್ನುವಂತೆ ನಗೆಗೆ ಪಕ್ಕಾಗಬೇಕಾಗುವುದು. ಕಾರಣ ಆ ಸಾಹಸಕ್ಕೆ ನಾವು ಹೋಗಲಾರೆವು. ಸತಿಪತಿಗಳ ಸಾಮರಸ್ಯವು ಲೌಕಿಕವಾಗಿರುವಂತೆ ಅತ್ಯಲ್ಪವಾಗಿಯೂ ಅನಿತ್ಯವಾಗಿಯೂ ಇರುವುದು. ಶರಣಸತಿ ಲಿಂಗಪತಿಗಳ ಸಾಮರಸ್ಯವು ಒಂದು ಮಹತ್ತರವಾದ ಯೋಗಶಕ್ತಿಯುಳ್ಳದ್ದು ಎಂಬು ದನ್ನು ಕೆಳಗಿನ ವಚನಗಳಿಂದ ಅರಿಯಬೇಕು.

" ನಲ್ಲನ ಕೂಡುವ ಭರದಲ್ಲಿ ಎನ್ನ ಇದಿರು ಏನೆಂದರಿಯೆ. ನಲ್ಲನ ಕೂಡುವಾಗಲು ಎನ್ನ ನಲ್ಲನ ಏನೆಂದರಿಯೆ. ಉರುಲಿಂಗದೇವನ ಕೂಡಿದ ಬಳಿಕ ನಾನೊ ತಾನೊ ಏನೆಂದರಿಯೆ. "

" ಆತನ ಬೆರಸಿದ ಕೂಟವನೇನೆಂದು ಹೇಳುವೆನವ್ವಾ ! ಕೇಳಲುಬಾರದು, ಹೇಳಲುಬಾರದು. ಏನು ಹೇಳುವೆನವ್ವಾ! ಶಿಖಿಕರ್ಪೂರ ಬೆರಸಿದಂತೆ ಮಹಾಲಿಂಗ ಗಜೇಶ್ವರನ ಕೂಡಿದ ಕೂಟವ ಹೇಳಬಾರದು."

" ನೇಹದ ಸುಖವ ನೋಟ ನುಂಗಿತ್ತು. ನೋಟದ ಸುಖವ ಕೂಟ ನುಂಗಿತ್ತು.
ಕೂಟದ ಸುಖವ ಆಲಿಂಗ ನುಂಗಿತ್ತು. ಆಲಿಂಗ ಸುಖವ ಸಂಗ ನುಂಗಿತ್ತು.
ಸಂಗ ಸುಖವ ಸಮರಸ ನುಂಗಿತ್ತು. ಸಮರಸದ ಸುಖವ ಪರವಶ ನುಂಗಿತ್ತು.
ಪರವಶದ ಸುಖವ ಕೂಡಲ ಚೆನ್ನಸಂಗಯ್ಯ ತಾನೇ ಬಲ್ಲ. "

" ನಲ್ಲನ ರೂಪೆನ್ನ ನೇತ್ರವ ತುಂಬಿತ್ತು. ನಲ್ಲನ ನುಡಿ ಎನ್ನ ಶ್ರೋತ್ರವ ತುಂಬಿತ್ತು. ನಲ್ಲನಾಲಿಂಗ ವೆನ್ನ ಸರ್ವಾಂಗವ ತುಂಬಿತ್ತು. ನಲ್ಲನ ಚುಂಬನವೆನ್ನ ಜಿಹ್ವೆಯ ತುಂಬಿತ್ತು. ನಲ್ಲನಾಲಿಂಗವೆನ್ನ ಸರ್ವಾಂಗವ ತುಂಬಿತ್ತು. ನಲ್ಲನ ಅಂತರಂಗ ಬಹಿರಂಗದಲ್ಲಿ ಕೂಡಿ ಸುಖಿಯಾದೆ ಉರುಲಿಂಗದೇವ. "

" ಅಂಗನೆಯ ಚಿತ್ತ ರಮಣನ ಸುತ್ತಿಮುತ್ತಿ ಅಪ್ಪಿ ಅಗಲದೆ ಇಪ್ಪಂತೆ, ಜಾಗರ ಸ್ವಪ್ನ ಸುಷುಪ್ತಿ ಯಲ್ಲಿ ಶರಣನ ಚಿತ್ತರತಿ ಶಿವಲಿಂಗವ ಸುತ್ತಿ ಮುತ್ತಿ ಅಪ್ಪಿ ಅಗಲದಿಪ್ಪರೆ ಆ ಮಹಾತ್ಮನ ಎಂತು ಉಪಮಿ ಸುವೆನಯ್ಯಾ ? "

" ಶರಣನ ಅಂಗಲಿಂಗವನೆ ಅಪ್ಪಿತ್ತಾಗಿ ಶರಣನ ತನುವೆ ಲಿಂಗತನು ನೋಡಾ ! ಲಿಂಗದ ತನು ಶರಣನ ಅಪ್ಪಿತ್ತಾಗಿ ಶರಣನ ತನುವೆ ಲಿಂಗತನು ನೋಡಾ ! ಶರಣನ ಮನ ಲಿಂಗವನಪ್ಪಿ ಲಿಂಗದ ಮನ ಶರಣ ನಪ್ಪಿದ ಕಾರಣ ಶರಣನ ಮನವೇ ಲಿಂಗ. ಲಿಂಗದ ಮನವೇ ಶರಣ. ಶರಣನ ಹರಣ ಲಿಂಗವನಪ್ಪಿ ಲಿಂಗದ ಹರಣ ಶರಣನ ಅಪ್ಪಿದ ಕಾರಣ ಶರಣನ ಹರಣವೇ ಲಿಂಗ. ಲಿಂಗದ ಹರಣವೇ ಶರಣ. ಶರಣನ ಭಾವ ಲಿಂಗವ ನಪ್ಪಿ ಲಿಂಗದ ಭಾವ ಶರಣನಪ್ಪಿದ ಕಾರಣ ಶರಣನ ಭಾವವೇ ಲಿಂಗ. ಲಿಂಗದ ಭಾವವೇ ಶರಣ. "

" ಒಳಗಿಪ್ಪಾತನ ಹೊರಗೆ ನೋಡಿ ಕಂಡೆನಯ್ಯ. ಹೊರಗಿಪ್ಪಾತನನು ಒಳಗೆ ನೋಡಿ ಕಂಡೆನಯ್ಯ. ಒಳಹೊರಗಿಪ್ಪವರಿಬ್ಬರು ಒಂದಾಗಿ ನಿಂದ ನಿಲವು ಬಯಲ ಬಯಲ ಬೆರಸಿದಂತೆ ನಿರಾಳವಾಯಿತು ಕಾಣಾ "

ಮೇಲೆ ತೋರಿಸಿದ ವಚನಗಳು ಸತಿಪತಿಗಳ ಅದ್ವೈತಾವಸ್ಥೆಯನ್ನು ನಿರೂಪಿಸುತ್ತ ಲಿಂಗಾಂಗ ಗಳಲ್ಲಿ ತನು-ಮನ ಪ್ರಾಣ-ಭಾವ ಸಮರಸವು ಎಷ್ಟು ಸರಸವಾಗಿಯೂ ಸುಲಭವಾಗಿಯೂ ಎಲ್ಲರ ಮನವರಿಕೆಯಾಗುವಂತೆ ಬೋಧಿಸುತ್ತವೆ.

ಸಾಮರಸ್ಯದ ಕೊನೆಯ ಮೆಟ್ಟಲಕ್ಕೇರಿದ ಶರಣನ ಸಹಜ ಸ್ಥಿತಿಯನ್ನು ಒಂದೆರಡು ವಚನಗಳ ಮೂಲಕ ತಮ್ಮ ಅವಗಾಹನೆಗೆ ತಂದುಕೊಡುತ್ತೇನೆ.



CC-0. Jangamwadi Math Collection, Varanasi. An eGangotri Initiative

"ಕ್ಷುತ್-ಪಿಪಾಸೆ, ಶೋಕ-ಮೋಹ, ಜರಾ-ಮರಣವೆಂಬ ಷಡೂರ್ಮಿಗಳು ಇಲ್ಲದೆ ಇಪ್ಪನು. ಕಾಮ-ಕ್ರೋಧ, ಲೋಭ-ಮೋಹ, ಮದ-ಮತ್ಸರ ಎಂಬ ಷಡ್ವರ್ಗಗಳು ಇಲ್ಲದೆ ಇರುತಿಪ್ಪನು. ನಾಹಂ-ಕೋಹಂ-ಸೋಹಂ ಎಂಬ ಭಾವವಿರಹಿತನಾಗಿಪ್ಪನು. ಅಷ್ಟ ವಿಧಾರ್ಚನೆ ಷೋಡಶೋಪಚಾರ ರಹಿತನಾಗಿಪ್ಪನು. ಕರ್ಪೂರ ಅಗ್ನಿಸಂಯೋಗವಾಗಿ ಕರ್ಪೂರದ ಗುಣವಳಿದು ಅಗ್ನಿಯಾದಂತೆ ಲಿಂಗವ ನೆನೆನೆನೆದು ಲಿಂಗವೇ ತಾನಾಗಿಪ್ಪುದೀಗ ನಿಜೈಕ್ಯಸ್ಥಲವೆಂಬೆನಯ್ಯಾ ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೇ"

"ನೋಡಿಹೆನೆಂದರೆ ನೋಟ ಸಮರಸವಾಯಿತ್ತು. ಕೂಡಿಹೆನೆಂದರೆ ಕೂಟ ನಿಬ್ಬೆರಗಾಯಿತ್ತಯ್ಯ. ನೋಟ-ಕೂಟಗಳೆಂಬ ಉಭಯವಳಿದು ನಿಜದಲ್ಲಿ ನಿರ್ಣಯಲಾಯಿತ್ತಯ್ಯ. ನೋಡಲಿಲ್ಲ, ನುಡಿಯಲಿಲ್ಲ, ಕೂಡಲಿಲ್ಲ. ಅಪ್ರತಿಮ ತಾನು ತಾನಾದ ಪರಮಾನಂದ ಸುಖದೊಳಗೆ ಓಲಾಡುತ್ತಿದ್ದೆನಯ್ಯ."

"ಘೃತ ಘೃತ ಬೆರಸಿದಂತೆ, ಕ್ಷೀರ ಕ್ಷೀರ ಬೆರಸಿದಂತೆ, ತೈಲ ತೈಲ ಬೆರಸಿದಂತೆ, ನೀರ ನೀರ ಬೆರಸಿದಂತೆ, ಜ್ಯೋತಿ ಜ್ಯೋತಿ ಬೆರಸಿದಂತೆ, ಬಯಲು ಬಯಲು ಬೆರಸಿದಂತೆ, ಪ್ರಾಣ ಪ್ರಾಣ ಸಂಯೋಗವಾದ ಶರಣಲಿಂಗ ಸಮರಸವನೇನೆಂಬೆನಯ್ಯ ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೇ"

"ಗಾಳಿ ಗಂಧವನಪ್ಪಿದಂತೆ, ಬಯಲು ಬಯಲನಪ್ಪಿದಂತೆ, ಬೆಳಗು ಬೆಳಗನಪ್ಪಿ ಮಹಾ ಬೆಳಗಾದಂತೆ ಶರಣ ಲಿಂಗವನಪ್ಪಿ ಮಹಾಲಿಂಗವೇ ತಾನು ತಾನಾಗಿ ನಿರ್ಣಯಲಾದನು ನೋಡಾ ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೇ"

ಮಹಾಶಯರೇ! ಶಿವಶರಣರ ವಚನವಾಙ್ಮಯಸಾಗರವು, ಅಪರಿಮಿತ ರತ್ನರಾಶಿಗಳಿಂದ ತುಂಬಿರುವುದು. ಅದರ ಒಳಹೊಕ್ಕು ನೋಡುವವರಿಗೆ ಅದರ ಗಾಂಭೀರ್ಯವು ಗೊತ್ತಾಗುತ್ತದೆ. ಅದರಂತೆ ಲಿಂಗಾಂಗ ಸಾಮರಸ್ಯವಾದರೂ ಆ ವಚನಗಳಲ್ಲಿ ಸ್ಪಷ್ಟವಾಗಿ ಎಲ್ಲರಿಗೂ ತಿಳಿಯುವಂಥ ದೃಷ್ಟಾಂತಗಳಿಂದ ಪ್ರತಿಪಾದಿಸಲ್ಪಟ್ಟಿರುವುದು. ವೀರಶೈವರ ನಿಜವಾದ ಹೃದಯವನ್ನು ತಿಳಿಯಬೇಕೆಂಬುವರು ಶರಣರ ವಚನಗಳನ್ನು ಅವಶ್ಯವಾಗಿ ಅವಲೋಕಿಸಬೇಕು. ನಾವಾದರೂ ಲಿಂಗಾಂಗ ಸಾಮರಸ್ಯವೆಂಬ ಅತಿ ಗಹನವಾದ ವಿಷಯವನ್ನು ಶರಣರ ವಚನಗಳ ಮುಖದಿಂದಲೇ ವಿಶೇಷವಾಗಿ ತಮ್ಮ ಮುಂದಿರಿಸಿರುವೆವು.



CC-0. Jangamwadi Math Collection, Varanasi. An eGangotri Initiative



# ಶೈವ ಮತ್ತು ವೀರಶೈವ

ವೀರಶೈವ ಮತವು ಬಹು ಪುರಾತನವಾದುದು. ಋಗಾದಿ ವೇದಗಳೂ ಈಶಾದ್ಯುಪನಿಷತ್ತುಗಳೂ ಕಾಮಿಕಾದಿ ಶಿವಾಗಮಗಳೂ ಈ ಮತದ ಸ್ವರೂಪವನ್ನು ಸ್ಫುಟವಾಗಿ ಪ್ರತಿಪಾದಿಸುತ್ತಿರುವುವು. ಅಲ್ಲದೆ ವ್ಯಾಸಮಹರ್ಷಿಗಳು ತಮ್ಮಿಂದ ರಚಿಸಲ್ಪಟ್ಟಿರುವ ಸ್ಕಂದಪುರಾಣ, ಶಿವಪುರಾಣ, ಲಿಂಗಪುರಾಣಾದಿಗಳಲ್ಲಿ ಈ ಮತದ ಸಿದ್ಧಾಂತವನ್ನು ಬಹು ವಿಶದವಾಗಿ ಪ್ರತಿಪಾದಿಸಿರುವರು.

ಋಗಾದಿ ಚತುರ್ವೇದಗಳ ಆಧಾರದಿಂದ ಹುಟ್ಟಿದ ಮತಗಳೆಲ್ಲವೂ ವೈದಿಕ ಮತಗಳೆನಿಸಿಕೊಳ್ಳುತ್ತವೆ. ವೈದಿಕ ಮತಗಳು ಅನಂತವಾಗಿದ್ದರೂ ಪ್ರಕೃತದಲ್ಲಿ ಶೈವ, ವೈಷ್ಣವ ಎಂದು ಎರಡು ಭಾಗಗಳಾಗಿ ವಿಂಗಡಿಸಲ್ಪಟ್ಟಿವೆ. ಶೈವರಲ್ಲಿ ಅದ್ವೈತಿಗಳೆಂದೂ ಶಕ್ತಿ ವಿಶಿಷ್ಟಾದ್ವೈತಿಗಳೆಂದೂ ಎರಡು ಭೇದಗಳುಂಟು. ವೈಷ್ಣವರಲ್ಲಿ ದ್ವೈತಿಗಳೆಂದೂ ವಿಶಿಷ್ಟಾದ್ವೈತಿಗಳೆಂದೂ ಎರಡು ತೆರನಾಗಿದೆ. ಈ ನಾಲ್ಕು ಮತಗಳಿಗೆ ಒಬ್ಬೊಬ್ಬ ಮತಾಚಾರ್ಯರಿರುತ್ತಾರೆ ಅದ್ವೈತ ಮತಕ್ಕೆ ಶ್ರೀ ಶಂಕರಾಚಾರ್ಯರೂ, ಶಕ್ತಿವಿಶಿಷ್ಟಾದ್ವೈತ ಮತಕ್ಕೆ ಶ್ರೀ ರೇಣುಕಾದಿ ಪಂಚಾಚಾರ್ಯರೂ ದ್ವೈತಮತಕ್ಕೆ ಶ್ರೀ ಮಧ್ವಾಚಾರ್ಯರೂ, ವಿಶಿಷ್ಟಾದ್ವೈತಮತಕ್ಕೆ ಶ್ರೀ ರಾಮಾನುಜಾಚಾರ್ಯರೂ ಮೂಲ ಗುರುಗಳಾಗಿರುತ್ತಾರೆ. ಆಯಾಯ ಮತಗಳಲ್ಲಿ ಜೀವಾತ್ಮ-ಪರಮಾತ್ಮರ ಸಂಬಂಧವು ಬೇರೆ ಪ್ರಕಾರವಾಗಿ ವಿವೇಚಿಸಲ್ಪಟ್ಟಿದೆಯಾದರೂ ವೀರಶೈವ ಮತದಲ್ಲಿ ಇವೆಲ್ಲವೂ ಕ್ರಮೇಣ ಅಂತರ್ಗತವಾಗುತ್ತ ಬಂದಿರುತ್ತವೆ. ಇವೆಲ್ಲ ಮತಗಳ ಸ್ವರೂಪವು ವೇದಗಳಲ್ಲಿ ಉಕ್ತವಾಗಿದ್ದರೂ ಒಂದೆಡೆಯಲ್ಲಿ ಸ್ಪಷ್ಟವಾಗಿಲ್ಲ. ಒಬ್ಬೊಬ್ಬ ಮತಾಚಾರ್ಯರು ಅವತಾರಮಾಡಿ ಅತಿ ಗಹನವಾದ ವೇದಾರ್ಣವವನ್ನು ಪ್ರವೇಶಿಸಿ ತಮಗಭಿಮತಗಳಾದ ತತ್ತ್ವಗಳೆನ್ನೆತ್ತಿ ಮಾನವಕೋಟಿಗೆ ಸಮರ್ಪಿಸಿರುವುದರಿಂದ ಇವರನ್ನು ಆಯಾಯ ಮತಸ್ಥಾಪನಾಚಾರ್ಯರೆಂದು ಕರೆಯುತ್ತಾರೆ. ವೇದಾಗಮಗಳಲ್ಲಿ ಅಡಕನಾಗಿರುವ ನಿಗೂಢವಾದ "ಶಕ್ತಿವಿಶಿಷ್ಟಾದ್ವೈತ ಸಿದ್ಧಾಂತ (ವೀರಶೈವ ಸಿದ್ಧಾಂತ)" ಎಂಬ ಮಹಾ ರತ್ನವನ್ನು ಶೋಧಿಸಿ ಪಡೆದು ಮಾನವಕೋಟಿಗೆ ಉಪದೇಶಿಸಿದವರು ಶ್ರೀ ರೇಣುಕಾದಿ ಪಂಚಾಚಾರ್ಯರು.

ಈ ವೀರಶೈವ ಮತವು ಪಾಶುಪತ ಮತದ ಒಂದು ವೈಶಿಷ್ಟ್ಯವಾಗಿದೆ. ಪಶು, ಪತಿ, ಪಾಶ ಈ ಮೂರು ಪದಾರ್ಥಗಳ ವಿಚಾರವುಳ್ಳದ್ದೇ ಪಶುಪತ ಮತವು. ಪಶುವೆಂದರೆ ಮಲಾವೃತನಾದ ಜೀವನು. ಪತಿಯೆಂದರೆ ಸರ್ವಜ್ಞತ್ವಾದಿ ಕಲ್ಯಾಣಗುಣವಿಶಿಷ್ಟನಾದ ಶಿವನು. ಪಾಶಗಳೆಂದರೆ



CC-0. Jangamwadi Math Collection, Varanasi. An eGangotri Initiative

ಪಶುರೂಪ ಜೀವನನ್ನು ತನ್ನೆಡೆಗೆ ಆಕರ್ಷಿಸುವುದಕ್ಕೆ ಸಾಧನಗಳಾದ ಕರ್ಮಾದಿಗಳು. ಇವು ಮಲ, ಕರ್ಮ, ಮಾಯೆ, ಜಗತ್ತು, ತಿರೋಧಾನಕರ ಶಕ್ತಿ ಎಂದು ಐದು ಪ್ರಕಾರವಾಗಿವೆ. ಪತಿ ಶಬ್ದ ವಾಚ್ಯನಾದ ಶಿವನನ್ನು ಉಪಾಸಿಸುವುದರಿಂದ ಪಾಶಗಳು ಬಿಡುಗಡೆಯಾಗಿ ಜೀವನಿಗೆ ಶಿವತ್ವಾಭಿ ವ್ಯಕ್ತಿತ್ವವುಂಟಾಗುವುದೇ ಪಾಶುಪತವೆಂಬ ಶಬ್ದದ ಸಂಕ್ಷೇಪಾರ್ಥವು. ಈ ಪಾಶುಪತ ಮತವು ಸಾಂಖ್ಯಾದಿ ಮತಗಳಂತೆ ಇಪ್ಪತ್ತೈದು ತತ್ತ್ವಗಳಿಂದೊಡಗೂಡಿರುವುದಲ್ಲದೇ ರಾಗ, ವಿದ್ಯೆ, ಕಲೆ, ನಿಯತಿ, ಕಾಲ, ಮಾಯೆ, ಶುದ್ಧ ವಿದ್ಯೆ, ಈಶ್ವರ, ಸದಾಶಿವ, ಶಕ್ತಿ, ಶಿವ ಎಂಬ ಹನ್ನೊಂದು ತತ್ತ್ವಗಳು ಸೇರಿ ಮೂವತ್ತಾರು ತತ್ತ್ವಗಳುಳ್ಳದ್ದಾಗಿರುವುದು. ಈ ಪಾಶುಪತಮತದಲ್ಲಿ ಲಿಂಗಿ ಪಾಶುಪತವೆಂತಲೂ ಅಲಿಂಗಿಪಾಶುಪತವೆಂತಲೂ ಎರಡು ವಿಧವಾಗಿವೆ. ಬ್ರಹ್ಮಸೂತ್ರದ ಭಾಷ್ಯ ಕಾರರಾದ ಶ್ರೀಕಂಠ ಶಿವಾಚಾರ್ಯರೂ, ಅಪ್ಪಯ ದೀಕ್ಷಿತರೂ ಲಿಂಗಧಾರಣೆಯಿಲ್ಲದ ಪಾಶುಪತ ವ್ರತಾವಲಂಬಿಗಳಾಗಿದ್ದರು. ಶ್ರೀ ರೇಣುಕಾದಿ ಪಂಚಾಚಾರ್ಯರೂ, ನೀಲಕಂಠ ಶಿವಾಚಾರ್ಯರೂ ಲಿಂಗಧಾರಣಯುಕ್ತವಾದ ಪಾಶುಪತ ವ್ರತಾವಲಂಬಿಗಳಾಗಿದ್ದರು. ಲಿಂಗೀ ಪಾಶುಪತ ಮತದಲ್ಲಿ ತಪ್ತ ಲಿಂಗಧಾರಿಗಳೆಂತಲೂ, ಷಡಧ್ವಶುದ್ಧಿ ಲಿಂಗಧಾರಿಗಳೆಂತಲೂ ಎರಡು ಪ್ರಕಾರಗಳುಂಟು. ಪಂಚಸೂತ್ರಘಟಿತವಾದ ಶ್ರೀ ಶೈಲಜ ಶಿವಲಿಂಗವನ್ನು ಷಡಧ್ವ ಶೋಧನಪೂರ್ವಕ ಶಿವದೀಕ್ಷಾ ಸಂಸ್ಕಾರದಿಂದ ಪರಿಶೋಧಿತವಾದ ಶರೀರದ ಉತ್ತಮಾಂಗದಲ್ಲಿ ಧರಿಸುವುದೇ ಷಡಧ್ವಶುದ್ಧಿ ಲಿಂಗ ಧಾರಣವು. ಇದಕ್ಕೆ ವಿಪರೀತವಾಗಿ ಕಾಯಿಸಿದ ಲಿಂಗ ಮುದ್ರಾಧಾರಣವೇ ತಪ್ತ ಲಿಂಗಧಾರಣವು. ಈ ವಿಷಯವು—

> ಶ್ರೌತಾಶ್ರೌತವಿಭೇದೇನ ದ್ವಿಧಾಲಿಂಗಸ್ಯ ಧಾರಣಂ ।
> ಷಡಧ್ವಶುದ್ಧಿ ಲಿಂಗಂ ತು ಶ್ರೌತಮಿತ್ಯಭಿಧೀಯತೇ ॥
> ಅಶ್ರೌತಂ ತಪ್ತಲಿಂಗಾದಿ ಧಾರಣಂ ಪ್ರೋಚ್ಯತೇ ಶಿವೇ ।
> ಶ್ರೌತಾನಾಂ ವೀರಶೈವಾನಾಂ ವೇದಮಾರ್ಗೈಕವರ್ತಿನಾಂ ॥
> ತಪ್ತಲಿಂಗಪರಿಗ್ರಾಹಃ ಪ್ರತ್ಯವಾಯೋ ಮಹಾನ್ ಭವೇತ್ ॥
>
> ಸಿದ್ಧಾಂತಾಗಮ. ॥

ಲಿಂಗಧಾರಣವು ಶ್ರೌತಲಿಂಗಧಾರಣವೆಂತಲೂ ಅಶ್ರೌತಲಿಂಗಧಾರಣವೆಂತಲೂ ಎರಡು ವಿಧವು. ಅವುಗಳಲ್ಲಿ ಷಡಧ್ವ ಶೋಧನೆಯುಳ್ಳ ಲಿಂಗಧಾರಣವೇ ಶ್ರೌತ (ವೈದಿಕ) ಲಿಂಗಧಾರಣವು. ಲಿಂಗಮುದ್ರೆಯನ್ನು ಬೆಂಕಿಯಲ್ಲಿ ಕಾಯಿಸಿ ದೇಹದಲ್ಲಿ ಒತ್ತುವದೇ ಅಶ್ರೌತ (ಅವೈದಿಕ) ಲಿಂಗ ಧಾರಣವು. ಇವುಗಳಲ್ಲಿ ತಪ್ತ ಲಿಂಗಧಾರಿಗಳು ವೇದಬಾಹ್ಯರೆನಿಸಿಕೊಳ್ಳುವರು. ಷಡಧ್ವಶುದ್ಧಿ ಲಿಂಗಧಾರಿಗಳು ಕೇವಲ ವೈದಿಕ ಕರ್ಮಗಳಲ್ಲಿ ನಿರತರಾಗಿರುವುದರಿಂದ ಶ್ರೌತರೆನಿಸಿಕೊಳ್ಳುತ್ತಾರೆ. ಇಂತಹ ಶ್ರೌತರೆನಿಸಿಕೊಳ್ಳುವ ವೀರಶೈವರು ವೇದಬಾಹ್ಯವಾದ ಅಶ್ರೌತ ( ಬೆಂಕಿಯಿಂದ ಕಾಯಿಸಿದ ) ಲಿಂಗಧಾರಣೆಯನ್ನು ಎಂದೂ ಮಾಡಕೂಡದು. ಹಾಗೆ ಧರಿಸುವುದಾದರೆ ಮಹಾದೋಷವು ಪ್ರಾಪ್ತವಾಗುತ್ತದೆ.

ಶ್ರೌತವೆನಿಸಿದ ಅಲಿಂಗಿ, ಅಶ್ರೌತವೆನಿಸಿದ ತಪ್ತಲಿಂಗಿ ಈ ಉಭಯ ಪಾಶುಪತಗಳಲ್ಲಿ ಸಾಧಕಗಳಾದ ವಸ್ತುಗಳಿಗೆ ಅಷ್ಟಾವರಣವೆಂಬ ಸಂಕೇತವಾಗಲಿ, ಪಂಚಾಚಾರ್ಯವೆಂಬ ಸಂಕೇತ ವಾಗಲಿ, ಷಟ್‌ಸ್ಥಲವೆಂಬ ಸಂಕೇತವಾಗಲಿ ಇಲ್ಲ. ಇವುಗಳಲ್ಲಿ ಕೆಲಕೆಲವನ್ನು ಉಪಾಸಿಸುತ್ತಿದ್ದರೂ ನಿಯಮದಿಂದ ಇವೆಲ್ಲವನ್ನು ಉಪಾಸಿಸಬೇಕೆಂದು ವಿಧಿಸಲ್ಪಟ್ಟಿಲ್ಲ.



CC-0. Jangamwadi Math Collection, Varanasi. An eGangotri Initiative

ಬಾಹ್ಯಕ್ರಿಯಾಸಂಕುಲನಿಸ್ಪ್ರಹಾತ್ಮಾ ಯಃ ಪೂಜಯತ್ಯಂಗ ಸ ವೀರಶೈವಃ ।

ಸ್ಕಂದ ಪುರಾಣ.

ಎಂದು ಸ್ಕಂದಾದಿ ಪುರಾಣಗಳೂ ಸಹ ಸ್ವರ್ಗ ಸ್ವಾರಾಜ್ಯಾದಿ ಸಾಧನವಾದ ಜ್ಯೋತಿಷ್ಟೋಮಾದಿ ಕರ್ಮಗಳನ್ನು ನಿಷೇಧಿಸಿ ಮೋಕ್ಷವನ್ನೇ ಸಮರ್ಥನಗೊಳಿಸಿರುತ್ತನೆ. ಇಂತಹ ಮುಕ್ತಿ ಸುಖ ವಾದರೋ ವೇದದ ಜ್ಞಾನಕಾಂಡೋಕ್ತಗಳಾದ ಧರ್ಮಾನುಷ್ಠಾನಗಳಿಂದಲೇ ಸಿದ್ಧಿಸುತ್ತವಲ್ಲದೇ ಕರ್ಮಕಾಂಡೋಕ್ತವಾದ ಧರ್ಮಾನುಷ್ಠಾನಗಳಿಂದ ಸಿದ್ಧಿಸುವುದಿಲ್ಲ. ಇದಕ್ಕಾಗಿ ಭಾಷ್ಯಕಾರರು ಪಶು ಕರ್ಮವೆಂದೂ ಪತಿ ಕರ್ಮವೆಂದೂ ಎರಡು ಭಾಗಗಳನ್ನು ಮಾಡಿರುವರು. ಜೀವ-ಭಾವ ನಿವೃತ್ತಿಯನ್ನು ಮಾಡದಿರುವುದರಿಂದ ಪಶು ಕರ್ಮಗಳೆಂತಲೂ, ಜೀವ-ಭಾವ ನಿವೃತ್ತಿ ಮಾಡು ವುದರಿಂದ ಪತಿ ಕರ್ಮಗಳೆಂದೂ ಹೆಸರು ಬಂದಿದೆ. ಈ ಪತಿ ಕರ್ಮಗಳೆಲ್ಲವೂ ಜ್ಞಾನಕಾಂಡದಲ್ಲಿ ಹೇಳಲ್ಪಟ್ಟ ಧರ್ಮಗಳಾಗಿವೆ. ಪ್ರಪಂಚದಲ್ಲಿ ಯಾವನು ಯಾವ ಫಲವನ್ನಪೇಕ್ಷಿಸುತ್ತಾನೆಯೋ ಆ ಫಲಾನುಗುಣವಾದ ಕರ್ಮಗಳನ್ನೇ ಮಾಡಬೇಕು. ಕಿತ್ತಿಳೇ ಹಣ್ಣನ್ನು ಅಪೇಕ್ಷಿಸುವವನು ಕಿತ್ತಿಳೇ ಹಣ್ಣಿನ ಬೀಜವನ್ನೇ ಬಿತ್ತಿ ವ್ಯವಸಾಯ ಮಾಡಬೇಕು. ಅದಕ್ಕೆ ವಿರುದ್ಧವಾಗಿ ದಾಳಿಂಬರ ಬೀಜವನ್ನು ಬಿತ್ತಿ ಕಿತ್ತಿಳೆ ಹಣ್ಣನ್ನು ಪಡೆಯುವುದೆಂದರೆ–ಕಾರಣ ವಿರುದ್ಧ ಕಾರ್ಯೋ ತ್ಪತ್ತಿಯಾಗುವುದರಿಂದ ಅನುಭವ ವಿರೋಧವುಂಟಾಗುವುದು. ಆದುದರಿಂದ ಮೋಕ್ಷಾಪೇಕ್ಷಿ ಯಾದವನು ಪತಿ ಕರ್ಮವನ್ನೇ ಆಚರಿಸಬೇಕು. ಸ್ವರ್ಗಾದಿ ಫಲಗಳನ್ನು ಅಪೇಕ್ಷಿಸುವವನು ಅವುಗಳಿಗೆ ಸಾಧನವಾದ ಪಶು ಕರ್ಮವನ್ನು ಅನುಷ್ಠಿಸಬೇಕು. ಪರಮಾತ್ಮನು ಅವರವರ ಅಧಿಕಾರ ಕ್ಕನುಗುಣವಾಗಿ ಒಂದೇ ವೇದವನ್ನು ಎರಡೆರಡು ಭಾಗವಾಗಿ ಮಾಡಿದನು. ಆಮೇಲೆ ಜೈಮಿನ್ಯಾ ಚಾರ್ಯರು ಕೇವಲ ಕರ್ಮಕಾಂಡವನ್ನವಲಂಬಿಸಿ ಪೂರ್ವ ಮೀಮಾಂಸೆಯನ್ನು ಬರೆದರು. ಶ್ರೀ ವ್ಯಾಸರು ಜ್ಞಾನಕಾಂಡವನ್ನವಲಂಬಿಸಿ ಉತ್ತರ ಮೀಮಾಂಸೆಯನ್ನು ಬರೆದರು. ಸ್ವರ್ಗಾದ್ಯ ನಿತ್ಯ ಫಲಗಳನ್ನಪೇಕ್ಷಿಸದ ವೀರಶೈವ ಭಾಷ್ಯಕಾರರು ಪೂರ್ವ ಮೀಮಾಂಸೆಯನ್ನನುಸರಿಸದೇ ನಿತ್ಯ ಫಲಪ್ರದವಾದ ವೇದದ ಜ್ಞಾನಕಾಂಡದ ಮೇಲೆ ಹುಟ್ಟಿರುವ ಉತ್ತರ ಮೀಮಾಂಸೆಯನ್ನನುಸರಿಸಿ ದ್ದಾರೆ. "ಶಿವ ಏಕೋ ಧ್ಯೇಯಶ್ಶಿವಂ ಕರಃ, ಸರ್ವಮನ್ಯತ್ಪರಿತ್ಯಜ್ಯ" "ಅಮೃತಾಸ್ಯ ದೇವ ಧಾರಣೋ ಭೂಯಾಸಂ" "ಸರ್ವ ಲಿಂಗಂ ಸ್ಥಾಪಯತಿ ಪಾಣಿಮಂತ್ರಂ ಪವಿತ್ರಂ" "ಜ್ಞಾತ್ವಾ ದೇವ ಮುಚ್ಯತೆ ಸರ್ವ ಪಾಶೈಃ" "ಜ್ಞಾತ್ವಾ ಶಿವಂ ಶಾಂತಿಮತ್ಯಂತಮೇತಿ" ಇತ್ಯಾದ್ಯನಂತ ಶ್ರುತಿ ವಾಕ್ಯಗಳಿಂದ ಪರಶಿವ ಬ್ರಹ್ಮಜ್ಞಾನವೊಂದರಿಂದಲೇ ದುಃಖನಿವೃತ್ತಿಯಾಗಿ ಮಹಾ ಪುರುಷಾರ್ಥ ವೆನಿಸಿದ ಪರಶಿವ ಪ್ರಾಪ್ತಿಯೇ ವೀರಶೈವ ಮತದ ಮುಖ್ಯೋದ್ದೇಶವೆಂದು ಸ್ಪಷ್ಟಪಡಿಸಿ ಅವಕ್ಕೆ ಅಂಗಭೂತವಾದ ಪತಿ ಕರ್ಮಾಚರಣೆಯಲ್ಲಿ ಪ್ರವೃತ್ತಿಯನ್ನುಂಟು ಮಾಡಿರುತ್ತಾರೆ. ವೇದದಲ್ಲಿ ಹೇಳಿರುವ ಸಮಸ್ತ ಕರ್ಮೋಪಾಸನೆಗಳನ್ನಾಗಲಿ ಸಮಸ್ತ ಜ್ಞಾನೋಪಾಸನೆಗಳನ್ನಾಗಲಿ ಯಾವ ಮತೀಯರೂ ಅನುಷ್ಠಿಸಲಾರರು. ಆದುದರಿಂದ ವೀರಶೈವ ಮತಾಚಾರ್ಯರು ವೇದದ ಕರ್ಮ ಕಾಂಡದಲ್ಲಿ ಹೇಳಿರುವ ನಶ್ವರ ಫಲಪ್ರದವಾದ ಶ್ರುತಿಗಳಿಗಿಂತಲೂ ಬ್ರಹ್ಮಪ್ರಕರಣದಲ್ಲಿ ಹೇಳಿದ ನಿತ್ಯ ಫಲಪ್ರದವಾದ ಶ್ರುತಿಗಳಿಗೆ ಒಪ್ಪುವುದರಿಂದಲೂ, ಮತ್ತು ಅಹಿಂಸಾ ವ್ರತವನ್ನು ಪಾಲಿಸು ವುದರಲ್ಲಿ ಅಗ್ರಗಣ್ಯರೆಂಬ ಪ್ರಸಿದ್ಧಿಯನ್ನು ಪಡೆದಿರುವುದರಿಂದಲೂ ವೀರಶೈವ ಸಿದ್ಧಾಂತವು ಸ್ವರ್ಗಾದಿ ಸಾಧನವಾದ ವೇದದ ಕರ್ಮಕಾಂಡದಲ್ಲಿ ಹೇಳಿದ ಪಶುವಿಶಸನಾದಿ ಕರ್ಮಗಳನ್ನು ಅನುಷ್ಠಿಸ



CC-0. Jangamwadi Math Collection, Varanasi. An eGangotri Initiative

ಕೂಡದೆಂದೂ ಜ್ಞಾನಕಾಂಡೋಕ್ತವಾದ ಲಿಂಗಧಾರಣ ಲಿಂಗಪೂಜಾದಿ ಪತಿ ಕರ್ಮಗಳನ್ನೇ ಅನುಷ್ಠಿಸಬೇಕೆಂದೂ ನಿಯಮವನ್ನು ಮಾಡುತ್ತಿರುವದು. ಇದಲ್ಲದೆ—

ಅಷ್ಟಾವರಣಸಂಪನ್ನಃ ಪಂಚಾಚಾರಪರಾಯಣಃ ।
ವೈದಿಕಂ ಕರ್ಮ ಕುರ್ವೀತ ಜ್ಞಾನೈಕಫಲಸಾಧನಂ ॥

ಗುರು, ಲಿಂಗ, ಜಂಗಮ, ಪಾದೋದಕ, ಪ್ರಸಾದ, ವಿಭೂತಿ, ರುದ್ರಾಕ್ಷಿ, ಮಂತ್ರ ಎಂಬ ಅಷ್ಟಾವರಣಗಳೂ ಭೃತ್ಯಾಚಾರ, ಗಣಾಚಾರ, ಸದಾಚಾರ, ಲಿಂಗಾಚಾರ, ಶಿವಾಚಾರ ಎಂಬ ಪಂಚಾಚಾರಗಳೂ ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಎಂಬ ಷಟ್‌ಸ್ಥಲಗಳೂ ಜ್ಞಾನಸಾಧಕಗಳಾದ ವೇದೋಕ್ತ ಕರ್ಮಾಚರಣೆಗಳನ್ನು ಅನುಷ್ಠಿಸಿರಬೇಕೆಂದು ನಿಯಮದಿಂದ ವಿಧಿಸಲ್ಪಟ್ಟಿರುವವು. ವೀರಶೈವ ಸಿದ್ಧಾಂತದಲ್ಲಿ ಸ್ಥಲವೆಂದರೆ ಪರಬ್ರಹ್ಮವೆಂದರ್ಥವು. ಈ ಸ್ಥಲವು ಅಂಗಸ್ಥಲ, ಲಿಂಗಸ್ಥಲವೆಂದು ಎರಡು ಭೇದಗಳನ್ನು ಹೊಂದಿ ಅಂಗ ( ಜೀವ ) ಸ್ಥಲದಲ್ಲಿ ೪೪ ಭೇದಗಳನ್ನು, ಲಿಂಗಸ್ಥಲದಲ್ಲಿ ೫೭ ಭೇದಗಳಾಗಿ ಒಟ್ಟು ೧೦೧ ಭೇದಗಳನ್ನು ಹೊಂದಿರುತ್ತವೆ. ಇದಕ್ಕೇನೇ ಪಿಂಡಸ್ಥಲ ಮೊದಲಾಗಿ ಜ್ಞಾನಶೂನ್ಯಾಂತವಾಗಿ ಏಕೋತ್ತರಶತಸ್ಥಲವೆಂದು ಹೇಳುವರು. ಇವುಗಳ ಸ್ವರೂಪವನ್ನು ಸಿದ್ಧಾಂತ ಶಿಖಾಮಣಿಯಲ್ಲಿ ಶ್ರೀ ರೇಣುಕಾಚಾರ್ಯರು ಅಗಸ್ತ್ಯ ಮಹರ್ಷಿಗೆ ಹೃದಯಂಗಮವಾಗಿ ಉಪದೇಶಿಸಿರುವುದನ್ನು ಅನ್ಯತ್ರ ನೋಡಬಹುದು. ಈ ಸ್ಥಲಾನುಭವದಿಂದ ಲಿಂಗಾಂಗಸಾಮರಸ್ಯವೆಂಬ ಮಹಾ ಫಲವನ್ನು ಅನುಭವಿಸುವವನೇ ವೀರಶೈವನೆನಿಸುವನು.

ಇದೇ ವಿಷಯವನ್ನು ಪ್ರತಿಪಾದಿಸುತ್ತ ಶ್ರೀ ರೇಣುಕಾಚಾರ್ಯರು ಸಿದ್ಧಾಂತ ಶಿಖಾಮಣಿಯಲ್ಲಿ—

ವಿ ಶಬ್ದೇನೋಚ್ಯತೇ ವಿದ್ಯಾ ಶಿವಜೀವೈಕ ಬೋಧಿಕಾ ।
ತಸ್ಯಾಂ ರಮಂತೇ ಯೇ ಶೈವಾಃ ವೀರಶೈವಾಸ್ತು ತೇ ಮತಾಃ ॥
ವೇದಾಂತಜನ್ಯಂ ಯದ್ ಜ್ಞಾನಂ ವಿದ್ಯತೇ ಪರಿಕೀರ್ತ್ಯತೇ ।
ವಿದ್ಯಾಯಾಂ ರಮತೇ ಯಃ ಸ ವೀರ ಇತ್ಯಭಿಧೀಯತೇ ॥
ವಿದ್ಯಾಯಾಂ ಶಿವರೂಪಾಯಾಂ ರಮಂತೇ ಯೇ ವಿಶೇಷತಃ ।
ತಸ್ಮಾದೇತೇ ಮಹಾಭಾಗಾ ವೀರಶೈವಾ ಇತಿ ಸ್ಮೃತಾಃ ॥

“ ವೀರಶೈವ ” ಎಂಬ ಪದದ ಮೊದಲಿನ ‘ ವಿ ’ ಎಂಬ ಅಕ್ಷರವು ಲಿಂಗಾಂಗ ಸಾಮರಸ್ಯರೂಪವಾದ ವಿದ್ಯೆಯನ್ನು ಬೋಧಿಸುತ್ತದೆ. ಅಂತಹ ವಿದ್ಯೆಯಲ್ಲಿ ಯಾರು ಸತತವೂ ವಿಹರಿಸುತ್ತಾರೆಯೋ ಅವರೇ ವೀರಶೈವರೆನಿಸಿಕೊಳ್ಳುತ್ತಾರೆ. ಯಾವ ಜ್ಞಾನವು ವೇದಾಂತದಿಂದುತ್ಪನ್ನವಾದುದೋ ಅದು ವಿದ್ಯೆಯೆಂದು ಹೇಳಿಸಿಕೊಳ್ಳುತ್ತದೆ. ಅಂತಹ ವೇದಾಂತ ವಿದ್ಯೆಯಲ್ಲಿ ವಿಹರಿಸುವವರೆಲ್ಲ ವೀರಶೈವರು. ಮತ್ತು ಶಿವರೂಪ ವಿದ್ಯೆಯಲ್ಲಿ ವಿಶೇಷವಾಗಿ ರಮಿಸುವದರಿಂದ ವೀರಶೈವರೆನಿಸಿಕೊಳ್ಳುತ್ತಾರೆ. ಸಕಲೋಪನಿಷತ್ತುಗಳ ಸಾರವನ್ನು ವೀರಶೈವ ಎಂಬ ಪದದಿಂದ ನಿರ್ವಚನ ಮಾಡಿ ತೋರಿಸಿರುತ್ತಾರೆ. ಇನ್ನು ವೀರಶೈವ ಸಿದ್ಧಾಂತವನ್ನಷ್ಟು ವಿಮರ್ಶಿಸೋಣ. ಇದಕ್ಕೆ ಶಕ್ತಿವಿಶಿಷ್ಟಾದ್ವೈತವೆಂಬ ಹೆಸರು. ಪೂರ್ವಾಚಾರ್ಯರು ಇದಕ್ಕೆ “ ಶಕ್ತಿಶ್ಚ ಶಕ್ತಿಶ್ಚ ಶಕ್ತೀ,



CC-0. Jangamwadi Math Collection, Varanasi. An eGangotri Initiative

ತಾಭ್ಯಾಂ ವಿಶಿಷ್ಟೌ ಜೀವೇಶೌ, ತಯೋಃ ಅದ್ವೈತಂ ಶಕ್ತಿವಿಶಿಷ್ಟಾದ್ವೈತಂ." ಎಂದು ವ್ಯುತ್ಪತ್ತಿಯನ್ನು ಮಾಡಿರುವರು. ಶಕ್ತಿಯು ಸ್ಥೂಲಚಿದಚಿದಾತ್ಮಕ ಶಕ್ತಿ, ಸೂಕ್ಷ್ಮ ಚಿದಾಚಿದಾತ್ಮಕ ಶಕ್ತಿ ಎಂದು ಎರಡು ಪ್ರಕಾರವಾಗಿದೆ. ಜೀವನು ಸ್ಥೂಲಚಿದಚಿದಾತ್ಮಕಶಕ್ತಿಯುಕ್ತನಾಗಿರುವನು. ಶಿವನು ಸೂಕ್ಷ್ಮಚಿದಚಿದಾತ್ಮಕಶಕ್ತಿಯುಕ್ತನಾಗಿರುವನು. ಜೀವನ ಸ್ಥೂಲ ಚಿಚ್ಛಕ್ತಿಯು ಕಿಂಚಿಜ್ಞತಾ ರೂಪವಾಗಿಯೂ, ಸ್ಥೂಲಚಿಚ್ಛಕ್ತಿಯು ಕಿಂಚಿತ್ ಕರ್ತೃತಾರೂಪವಾಗಿಯೂ ಶಿವನ ಸೂಕ್ಷ್ಮಚಿಚ್ಛಕ್ತಿಯು ಸರ್ವಜ್ಞತಾರೂಪವಾಗಿಯೂ ಸೂಕ್ಷ್ಮಚಿಚ್ಛಕ್ತಿಯು ಸರ್ವ ಕರ್ತೃತಾ ರೂಪವಾಗಿಯೂ ಇರುತ್ತವೆ. ಈ ಉಭಯವಿಧ ಶಕ್ತಿಗಳಿಂದ ಯುಕ್ತರಾದ ಜೀವ ಮತ್ತು ಶಿವ ಇವರ ಅದ್ವೈತ( ಸಾಮರಸ್ಯ )ವೇ ಶಕ್ತಿವಿಶಿಷ್ಟಾದ್ವೈತವೆನಿಸುವದು.

ಶಕ್ತಿಯೆಂದರೆ ಪರಬ್ರಹ್ಮನಲ್ಲಿ ಅಪೃಥುಕ್ ಸಿದ್ಧವಾಗಿರುವ ವಿಶೇಷಣವು. ಜಗತ್ತೆಲ್ಲವೂ ಸಂಪೂರ್ಣವಾಗಿ ಅಳಿಸಿಹೋಗಿ ಭಾವಮುಖದಲ್ಲಿದ್ದಾಗ ಯಾವದು ಬ್ರಹ್ಮವೋ ಅದೇ ಶಕ್ತಿ. ಪರಬ್ರಹ್ಮವು ಸ್ವಾಭಾವಿಕವಾಗಿ ಇಂತಹ ಅಪೃಥುಕ್ ಸಿದ್ಧ ವಿಶೇಷಣ ವಿಶಿಷ್ಟವಾಗಿರುವುದು. ಶಕ್ತಿರೂಪಾ ಪೃಥುಕ್ ಸಿದ್ಧ ವಿಶೇಷಣ ವಿಶಿಷ್ಟ ಬ್ರಹ್ಮತತ್ತ್ವವನ್ನು ಪ್ರತಿಪಾದಿಸುವವೇ ಶಕ್ತಿವಿಶಿಷ್ಟಾದ್ವೈತ ಸಿದ್ಧಾಂತದ ರಹಸ್ಯವು. ಶಕ್ತಿಯು ಪರಬ್ರಹ್ಮದಲ್ಲಿ ಅವಿನಾಭಾವ ಸಂಬಂಧದಿಂದಿದ್ದು ನಿತ್ಯವೆನಿಸುವುದು.

ಪರಾಸ್ಯ ಶಕ್ತಿರ್ವಿವಿಧೈವ ಶ್ರೂಯತೇ
ಸ್ವಾಭಾವಿಕೀ ಜ್ಞಾನ ಬಲಕ್ರಿಯಾ ಚ ।

ಶ್ವೇತಾಶ್ವತರ ಶ್ರುತಿ ೬--೮.

ಎಂಬ ಮಂತ್ರವು ಮೇಲಿನ ಅರ್ಥವನ್ನೇ ಬೋಧಿಸುತ್ತದೆ.

ತೇ ಧ್ಯಾನಯೋಗಾನುಗತಾ ಅಪಶ್ಯನ್
ದೇವಾತ್ಮಶಕ್ತಿಂ ಸಗುಣೈರ್ನಿಗೂಢಾಂ ।

ಶ್ವೇತಾಶ್ವತರ ಶ್ರುತಿ ೧--೧.

ಎಂಬ ಮಂತ್ರವೂ ಕೂಡ ಶಕ್ತಿಯು ಪರಬ್ರಹ್ಮದಲ್ಲಿ ಬಹು ಗೋಪ್ಯವಾಗಿರುವದೆಂದು ಬೋಧಿಸುತ್ತ ಶಕ್ತಿಯ ನಿತ್ಯತ್ವವನ್ನು ಸಾರಿರುವದು.

Where the ideas of parent and produced,
Purified thoughts, and endless varied forms,
Merge in the Real One; where the existence ends
Of such conceptions as " within, without " —
The wind of modification being stilled —
That *Hara* I worship, the suppression
Of movements of the mind Shiva I hail !

—Swami Vivekanand

ಶಕ್ತಿವಿಶಿಷ್ಟ ಪರಶಿವನ ವಿಷಯಕವಾಗಿ ವಿವೇಕಾನಂದರ ಅಭಿಪ್ರಾಯವಿದು.



CC-0. Jangamwadi Math Collection, Varanasi. An eGangotri Initiative

ನಮಃ ಸೋಮಾಯ ಚ ರುದ್ರಾಯ ಚ. ( ೪—೫—೮ )
ಯಜುರ್ವೇದ ತೈತ್ತರೀಯ ಸಂಹಿತೆ

ಈ ಮಂತ್ರದಿಂದ ಪರಮೇಶ್ವರನು ಉಮಾರೂಪ ಶಕ್ತಿಯುಕ್ತನಾಗಿರುವನೆಂದು ತಿಳಿಯುತ್ತದೆ.

ಯಥಾ ಚಂದ್ರೇ ಸ್ಥಿರಾ ಜ್ಯೋತ್ಸ್ನಾ ವಿಶ್ವವಸ್ತುಪ್ರಕಾಶಿನೀ ।
ತಥಾ ಶಕ್ತಿರ್ವಿಮರ್ಶಾಖ್ಯಾ ಪ್ರಕಾಶೇ ಬ್ರಹ್ಮಣಿ ಸ್ಥಿರಾ ॥
ಸಿದ್ಧಾಂತ ಶಿಖಾಮಣಿ ಪ. ೨೦

ಸಮಸ್ತ ವಸ್ತುಗಳನ್ನು ಪ್ರಕಾಶಪಡಿಸುವ ಚಂದ್ರಿಕೆಯೂ ಚಂದ್ರನಲ್ಲಿ ಸ್ಥಿರವಾಗಿರುವಂತೆ ವಿಶ್ವ ವಸ್ತುವನ್ನು ಪ್ರಕಾಶಪಡಿಸುವ ವಿಮರ್ಶ ಶಕ್ತಿಯು ಪ್ರಕಾಶ ಸ್ವರೂಪವಾದ ಪರಬ್ರಹ್ಮದಲ್ಲಿ ಸ್ಥಿರವಾಗಿರುವದು. ಚಂದ್ರನಲ್ಲಿ ಚಂದ್ರಿಕೆಯೂ ಸೂರ್ಯನಲ್ಲಿ ಪ್ರಭೆಯೂ ಅಗ್ನಿಯಲ್ಲಿ ದಾಹವೂ ಸಮುದ್ರದಲ್ಲಿ ಸೌಭಾಗ್ಯವೂ ಕುಸುಮದಲ್ಲಿ ಗಂಧವೂ ಸಕ್ಕರೆಯಲ್ಲಿ ಸವಿಯೂ ಅವಿನಾಭಾವ ಸಂಬಂಧದಿಂದಿರುವಂತೆ ಶಿವನಲ್ಲಿ ಶಕ್ತಿಯು ಅವಿನಾಭಾವ ಸಂಬಂಧದಿಂದಿರುವದೆನ್ನುವದೇ ವೀರಶೈವ ಸಿದ್ಧಾಂತವು.

ಚರಾಚರಾತ್ಮಕವಾದ ಸಮಸ್ತ ಪ್ರಪಂಚವು ಶಕ್ತಿವಿಶಿಷ್ಟ ಪರಶಿವನ ಪರಿಣಾಮರೂಪವಾಗಿರುವದು. ಶಕ್ತಿವಿಶಿಷ್ಟ ಪರಶಿವನು ಸಮಸ್ತ ಪ್ರಪಂಚ ಸ್ವರೂಪನಾಗಿರುವನು.

ಆತ್ಮಶಕ್ತಿವಿಕಾಸೇನ ಶಿವೋ ವಿಶ್ವಾತ್ಮನಾ ಸ್ಥಿತಃ ।
ಕುಟೀಭಾವಾದ್ಯಥಾ ಭಾತಿ ಪಟಃ ಸ್ವಸ್ಯ ಪ್ರಸಾರಣಾತ್ ॥
ಪತ್ರಶಾಖಾದಿರೂಪೇಣ ಯಥಾ ತಿಷ್ಠತಿ ಪಾದಪಃ ।
ತಥಾ ಭೂಮ್ಯಾದಿರೂಪೇಣ ಶಿವ ಏಕೋ ವಿರಾಜತೇ ॥
ಸಿದ್ಧಾಂತ ಶಿಖಾಮಣಿ ಪ. ೧೦.

ವಸ್ತ್ರವು ತನ್ನ ಪ್ರಸಾರಣೆಯಿಂದ ವಸ್ತ್ರಮಂದಿರವಾಗಿ ಹೇಗೆ ತೋರುತ್ತಿರುವದೋ ಹಾಗೆಯೆ ಶಿವನು ತನ್ನಲ್ಲಿ ನಿತ್ಯ ಸಂಬಂಧದಿಂದಿರುವ ವಿಮರ್ಶಶಕ್ತಿಯ ವಿಕಾಸದಿಂದ ವಿಶ್ವರೂಪನಾಗಿ ತೋರುತ್ತಿರುವನು. ಹೇಗೆ ವೃಕ್ಷವು ಪತ್ರಶಾಖಾದಿರೂಪದಿಂದ ವಿರಾಜಿಸುತ್ತದೆಯೋ ಹಾಗೆಯೇ ಶಿವನು ಭೂಮಿಜಲಾದಿ ರೂಪದಿಂದ ವಿರಾಜಿಸುತ್ತಿರುವನು.

“ ಬಹುಸ್ಯಾಂ ಪ್ರಜಾಯೇಯ ” ಛಾಂದೋಗ್ಯ ಶ್ರುತಿ ೬—೨—೩

“ ಯಥೋರ್ಣನಾಭಿಃ ಸೃಜತೇ ಗೃಹ್ಣತೇ ಚ. ” ಮುಂಡಕ ಶ್ರುತಿ ೧—೧—೭

ಈ ಮಂತ್ರಗಳೂ ಕೂಡ ಮೇಲಿನ ಅರ್ಥವನ್ನೇ ಬೋಧಿಸುತ್ತಿವೆ.

ಸುಖ ದುಃಖಾಶ್ರಯಭೂತನೂ ಅವಿದ್ಯಾಮೋಹಿತನೂ ಬ್ರಹ್ಮೈಕ ಜ್ಞಾನವರ್ಜಿತನೂ ಆದ ಜೀವನು ಶಿವೋಪಾಸನೆಯ ಬಲದಿಂದ ಶಿವನ ಸರ್ವಜ್ಞತ್ವಾದಿಗುಣಗಳನ್ನು ಪಡೆದುಕೊಂಡು ಶಿವಸ್ವರೂಪನಾಗುತ್ತಾನೆ.



CC-0. Jangamwadi Math Collection, Varanasi. An eGangotri Initiative

ಇಲ್ಲಿಯವರೆಗೆ ಪ್ರತಿಪಾದಿಸಿದ ಶೈವ ಮತ್ತು ವೀರಶೈವರ ಸಿದ್ಧಾಂತವನ್ನು ವಿವರಿಸಿ ಕಡೆಗೆ ಸಿಂಹಾವಲೋಕರೀತಿಯಿಂದ ಹೇಳುವುದಾದರೆ—

ಆಧ್ಯಾತ್ಮಿಕ ಜೀವನದ ತುತ್ತತುದಿಯ ಗಂತವ್ಯಲಕ್ಷ್ಯವೆಂದರೆ ಮೋಕ್ಷ. ಏಕಮೇವಾದ್ವಿತೀಯವೂ ನಿತ್ಯ ಶುದ್ಧ ಬದ್ಧ ಮುಕ್ತವೂ ಸಚ್ಚಿದಾನಂದವೂ ವಿಶ್ವವ್ಯಾಪಿಯೂ ದೇಶಕಾಲ ನಿಮಿತ್ತಾತೀತವೂ ಆದ ಪರಬ್ರಹ್ಮ ಒಂದೇ ಏಕಮಾತ್ರ ಸತ್ಯ. ಅಘಟನಘಟನಾಕಾರಿಯಾದ ಮಾಯೆಯ ಅನಿರ್ವಚನೀಯ ನಿಮಿತ್ತದಿಂದ ನಾಮರೂಪ ಭೇದಗಳನ್ನು ಧರಿಸುವಂತೆ ತೋರಿದರೂ ಬ್ರಹ್ಮವು ತತ್ತ್ವತಃ ಏಕಾಖಂಡವಾದುದು.

ಪರಬ್ರಹ್ಮದ ವಿಷಯದಲ್ಲಿ ಸ್ವಾಮಿ ವಿವೇಕಾನಂದರು—

From whom all gloom and darkness have dispersed;
That radiant Light, white, beautiful
As bloom of lotus white is beautiful;
Whose laughter loud sheds knowledge luminous;
Who, by undivided meditation,
Is realised in the self-controlled heart;
May that Lordly Swan of the limpid lake
Of my mind, guard me prostrate before Him !

ಮಾಯಾ ಪ್ರಪಂಚದಲ್ಲೆಲ್ಲ ಇರುವುದು ಅಸತ್ಯ. ಅದನ್ನು ತ್ಯಜಿಸಬೇಕು. ಜ್ಞಾನವೆಂಬ ವಜ್ರ ಗದೆಯಿಂದ ಮಾಯೆಯ ಸೆರೆಮನೆಯ ನಾಮರೂಪಗಳೆಂಬ ಭಿತ್ತಿಗಳನ್ನು ಒಡೆದು ಪುಡಿಪುಡಿ ಮಾಡಿ ಸಿಂಹದಂತೆ ಹೊರನುಗ್ಗಿ ಆತ್ಮದುರ್ಗದಲ್ಲಿ ಪ್ರವೇಶಿಸಿ ಶಿವಯೋಗ ಸಮಾಧಿಯಲ್ಲಿ ಸ್ಥಿರಪ್ರಜ್ಞನಾಗಬೇಕು. ಆಗ ನಾಮರೂಪ ಜಗತ್ತು ಶೂನ್ಯವಾಗುತ್ತದೆ. ಸಚ್ಚಿದಾನಂದವಾದ ಕೇವಲ ಬ್ರಹ್ಮದಲ್ಲಿ ಅದ್ವಯನಾಗುತ್ತಾನೆ. ಅರಿವು ಇರವಾಗುತ್ತದೆ. ಕಟ್ಟಕಡೆಗೆ ಸ್ಥಿರವಾದುದು 'ಓಂ'. ಇದೇ ನಿಜವಾದ ಲಿಂಗಾಂಗ ಸಾಮರಸ್ಯವು. ಮೋಕ್ಷವು. ಇದೇ ಮಾನವನ ಚರಮಗಮ್ಯಸ್ಥಾನ.



CC-0. Jangamwadi Math Collection, Varanasi. An eGangotri Initiative



# ವೀರಶೈವ ಧರ್ಮವೂ ಬಸವಣ್ಣನವರೂ



## ಶೈವ ಧರ್ಮದ ಪ್ರಾಚೀನತೆ ಹಾಗೂ ವ್ಯಾಪಕತೆ

ಶೈವ ಧರ್ಮವು ಅತಿ ಪ್ರಾಚೀನವಾದುದು. ಈ ಧರ್ಮದ ಇತಿಹಾಸವು ಅನಂತವಾದ ಭೂತಕಾಲದ ಮಂಜಿನಲ್ಲಿ ಮುಳುಗಿ ಮುಸುಕಾಗಿ ಹೋಗಿದೆ. ಆದುದರಿಂದಲೇ ಪ್ರಾಚೀನ ಭಾರತದ ಇತಿಹಾಸವನ್ನು ಬರೆಯಬೇಕೆಂಬುವವರಿಗೆ ಇತರ ಧರ್ಮಗಳ ಮೂಲವನ್ನು ಐತಿಹಾಸಿಕ ದೃಷ್ಟಿ ಯಿಂದ ತಿಳಿಯುವದು ಸುಲಭವಾದಂತೆ ಶೈವ ಧರ್ಮದ ಮೂಲವನ್ನರಿಯುವದು ಸುಲಭವಾಗಿಲ್ಲ. ಇತ್ತೀಚಿಗೆ ಮೋಹೊಂಜೋ ದಾರೋ, ಹರಪ್ಪಾ ಈ ಸ್ಥಳಗಳ ಶೋಧದಿಂದ ಶೈವಧರ್ಮ ವೃಕ್ಷವ ಬೊಡ್ಡೆಯೇ ೧೦-೧೧ ಸಾವಿರ ವರುಷಗಳ ವರೆಗೆ ಕಂಡುಬರಹತ್ತಿದೆ. ಅಂದಮೇಲೆ ಅದರ ಮೂಲ ವನ್ನರಿಯುವದು ಸುಲಭವೆಂತು? ಇಲ್ಲಿಯತನಕ ಯಾವ ಇತಿಹಾಸಶೋಧಕನೂ ಶೈವಧರ್ಮದ ಮೂಲವನ್ನು ತಿಳಿಯುವಲ್ಲಿ ಸಫಲ ಮನೋರಥನಾಗಿಲ್ಲ. ಮುಂದಾಗುವ ಸಂಭವವಿಲ್ಲೆಂದೇ ಹಲವರ ಅಭಿಪ್ರಾಯ ಆದರೆ ಕಾಲಗರ್ಭದಲ್ಲಿ ಅಡಗಿಕೊಂಡುದನ್ನು ಈಗಾಗಲೇ ನಿರ್ಣಯಿಸಿ ಹೇಳಲಿಕ್ಕೆ ಬರುವುದಿಲ್ಲವೆಂದೇ ಲೇಖಕನ ಅಭಿಪ್ರಾಯ.

ಶೈವ ಧರ್ಮವು ಪುರಾತನ ಕಾಲದಿಂದ ಭರತಖಂಡದಲ್ಲಿ ಅಷ್ಟೇ ನಡೆದು ಬಂದಿರುವ ದೆಂದು ಬಹು ಜನರು ತಿಳಿದುಕೊಂಡಿರುವರು. ಇತ್ತೀಚಿನ ಶೋಧದಿಂದ ಕ್ರಿಸ್ತನಿಗಿಂತ ಪೂರ್ವದಲ್ಲಿ ಪಾಶ್ಚಾತ್ಯ ಎಲ್ಲ ರಾಷ್ಟ್ರಗಳಲ್ಲಿ ಒಂದಿಲ್ಲೊಂದು ರೀತಿಯಿಂದ ಶೈವ ಧರ್ಮವು ಪಸರಿಸಿದ್ದಿತೆಂದು ಕಂಡು ಬಂದಿದೆ. ಶ್ರೀರಾಮದಾಸ ಎಮ್. ಎ. ಇವರು ಒಂದು ಲೇಖದಲ್ಲಿ ಹೀಗೆ ಬರೆದಿರುವರು.

ರೋಮು, ಯುನಾನ ಈ ಉಭಯ ರಾಷ್ಟ್ರಗಳಲ್ಲಿ ಕ್ರಮದಿಂದ ಪ್ರಿಯೇಪಸ, ಫಲ್ಲುಸ ಎಂಬ ಹೆಸರಿನಿಂದ ಲಿಂಗಪೂಜೆಯು ನಡೆಯುತ್ತಿತ್ತು. ಲಿಂಗದೊಡನೆ ನಂದೀಮೂರ್ತಿಯೂ ಪೂಜಿಸ ಲ್ಪಡುತ್ತಿತ್ತು. ಇವೆರಡು ರಾಷ್ಟ್ರಗಳ ಪ್ರಾಚೀನ ಧರ್ಮಕ್ಕೆ ಲಿಂಗಪೂಜೆಯೇ ಅಂಗವಾಗಿತ್ತು. ಪೂಜೆಯ ಕಾಲದಲ್ಲಿ ಧೂಪ, ದೀಪ, ನೈವೇದ್ಯಾದಿಗಳು ಉಪಯೋಗಿಸಲ್ಪಡುತ್ತಿದ್ದವು. ಇದರಂತೆ ಮಿಶ್ರ ದೇಶದಲ್ಲಿ ಹರ ಈಶಿಯ ಉಪಾಸನೆಯು ಆ ಧರ್ಮದ ಪ್ರಧಾನ ಅಂಗವಾಗಿತ್ತು. ಈ ಮೂರು ರಾಷ್ಟ್ರಗಳಲ್ಲಿ ಫಾಲ್ಗುಣ ಮಾಸದಲ್ಲಿ ಲಿಂಗಪೂಜೆಯ ವಾರ್ಷಿಕ ಸಮಾರಂಭವು ವಸಂತೋತ್ಸವ



CC-0. Jangamwadi Math Collection, Varanasi. An eGangotri Initiative

ರೂಪದಿಂದ ನಡೆಯುತ್ತಿತ್ತು. ಪ್ರಾಚೀನ ಚೀನ ಮತ್ತು ಜಪಾನ ದೇಶಗಳಲ್ಲಿ ಲಿಂಗಪೂಜೆಯು ನಡೆಯುತ್ತಿದ್ದಿತೆಂದು ಆ ಜನಾಂಗದ ಪ್ರಾಚೀನ ಸಾಹಿತ್ಯಾಭ್ಯಾಸಿಗಳು ಹೇಳುತ್ತಾರೆ. ಅಮೇರಿಕೆಯ ಮಹಾದ್ವೀಪದ ಪೂರ್ವ ನಿವಾಸಿಗಳು ಲಿಂಗಪೂಜೆಯನ್ನು ಮಾಡುತ್ತಿದ್ದರು. ಸ್ವಲ್ಪ ದಿನಗಳ ಹಿಂದೆ ಅಲ್ಲಿಯ ಭೂಗರ್ಭದಿಂದ ಹೊರಟ ಶಿವಾಲಯದಿಂದ ಇದು ಸ್ಪಷ್ಟವಾಗುವದು. ಅರಬಸ್ಥಾನದಲ್ಲಿ ಮಹಮ್ಮದ ಪೈಗಂಬರನಿಗಿಂತ ಮೊದಲು ಲಾತ್ ಎಂಬ ದೇವರ ಪೂಜೆಯು ಲಿಂಗರೂಪದಲ್ಲಿ ನಡೆಯುತ್ತಿತ್ತು. ಸೋಮನಾಥ ಲಿಂಗಕ್ಕೂ ಪಶ್ಚಿಮ ಜನರು ಲಾತ್ ಎಂದು ಕರೆಯುತ್ತಿದ್ದರು. ಗಿಜನಿ ಮಹಮ್ಮದನು ದುಡ್ಡಿನ ಮೋಹದಿಂದ ಆ ಲಿಂಗವನ್ನು ಒಡೆದುಹಾಕಿದನು. ಮಕ್ಕೇಶ್ವರ ಲಿಂಗವು ಇಲ್ಲಿಯತನಕ ಲಿಂಗರೂಪದಲ್ಲಿಯೇ ನಿಂತುಕೊಂಡಿದೆ. ಫ್ರಾನ್ಸದ ಅನೇಕ ಮುಖ್ಯ ಸ್ಥಳಗಳಲ್ಲಿ ಈಗಲೂ ಶಿವಲಿಂಗಗಳು ಕಂಡುಬರುತ್ತವೆ. ಅಂತೂ ಒಂದು ಕಾಲದಲ್ಲಿ ಶೈವ ಧರ್ಮವು ವಿಶ್ವವ್ಯಾಪಕ ಧರ್ಮವಾಗಿತ್ತೆಂಬುವಲ್ಲಿ ಸಂದೇಹವೆನಿಸುವದಿಲ್ಲ.

## ಶೈವ ಧರ್ಮದ ವಿಕಾಸ

ಶಾಸ್ತ್ರೀ ಟೀಕಾಚಾರ್ಯ ಎಂಬ ಬಿರುದನ್ನು ಪಡೆದ ವಾಚಸ್ಪತಿ ಮಿಶ್ರರು ಬ್ರಹ್ಮಸೂತ್ರ ಶಾಂಕರ ಭಾಷ್ಯದ ಮೇಲೆ ಬರೆದ ಭಾಮತೀ ಟೀಕೆಯಲ್ಲಿ ಶೈವ ಧರ್ಮವು ಪಾಶುಪತ, ಕಾರುಣಿಕ, ಸಿದ್ಧಾಂತಿ, ಕಾಪಾಲಿಕ, ಹೀಗೆ ನಾಲ್ಕು ತರವಾಗಿರುವದೆಂದು ಹೇಳಿದ್ದಾರೆ. ಸೂಕ್ಷ್ಮಾಗಮದಲ್ಲಿ ಅನಾದಿ ಶೈವ, ಆದಿಶೈವ, ಮಹಾಶೈವ, ಅನುಶೈವ, ಅವಾಂತರ ಶೈವ, ಪ್ರವರ ಶೈವ, ಅಂತ್ಯ ಶೈವ ಹೀಗೆ ಏಳು ವಿಧ ಶೈವ ಭೇದವು ಹೇಳಲ್ಪಟ್ಟಿದೆ. ಅಂತು ಶೈವ ಧರ್ಮವು ತನ್ನ ವಿಕಾಸಕ್ರಮದಲ್ಲಿ ಅನಂತ ಶಾಖೋಪಶಾಖೆಗಳುಳ್ಳದ್ದಾಗಿ ಕೊನೆಗೆ ವೀರಶೈವ ಧರ್ಮದಲ್ಲಿ ಪರಿಪೂರ್ಣತೆಯನ್ನು ಪಡೆದಿರುವದು. ಇದನ್ನೇ ಮತ್ತೊಂದು ಮಾತಿನಲ್ಲಿ ಹೇಳಬೇಕೆಂದರೆ, ಶೈವಧರ್ಮ ವೃಕ್ಷದ ಕೊನೆಯ ಫಲವೇ ವೀರಶೈವ ಧರ್ಮವು. ಈ ಧರ್ಮದಲ್ಲಿ ಹೇಳಲ್ಪಟ್ಟ ಅಷ್ಟಾವರಣ ಪಂಚಾಚಾರ ಷಟ್‌ಸ್ಥಲಗಳು ಒಳ್ಳೇ ರಹಸ್ಯಮಯಗಳಾಗಿಯೂ ಆತ್ಮವಿಕಾಸಕ್ಕೆ ಪೂರ್ಣ ಅನುಕೂಲಗಳಾಗಿಯೂ ಇರುವವು. ಇಂಥ ವೀರಶೈವ ಧರ್ಮರೂಪ ಫಲವಾದರೋ ಎಲ್ಲ ಸುಖಾರ್ಥಿಗಳ ಮನದ ಬಯಕೆಯನ್ನು ಹಿಂಗಿಸುವಂತೆ ಪೂರ್ಣ ಪರಿಪಕ್ವವಾದದ್ದು ೧೨ನೆಯ ಶತಮಾನದ ಮಹಾವಿಭೂತಿಯಾದ ಬಸವಣ್ಣನವರ ಶಿವಾನುಭವ ಮಂಟಪವೆಂಬ ಅಡಿಗೆಮನೆಯಲ್ಲಿಯೇ !

## ಬಸವನು ಅದ್ವಿತೀಯ ಕ್ರಾಂತಿಕಾರಕನು

ಮಾನವರ ಮನೋವೃತ್ತಿ ಪ್ರವಾಹವು ಸ್ವಾಭಾವಿಕವಾಗಿ ಸತ್ಯಸಾಗರದ ಕಡೆಗೆ ಹೋಗುವಂತಹದಾಗಿರುವದು. ಒಂದು ವೇಳೆ ಆ ಮನೋವೃತ್ತಿಯು ಯಾವದಾದರೊಂದು ನಿಮಿತ್ತವಾಗಿ ತಡೆದು ನಿಂತಲ್ಲಿ ಮುಂದುವರಿಯದೆ ಒಂದೆ ಕಡೆ ನಿಂತ ಜಲಪ್ರವಾಹವು ಕಾಲಾಂತರದಲ್ಲಿ ಮಲೆತು ಕೆಟ್ಟುಹೋಗುವಂತೆ ಮಾನವರ ಜೀವನವು ಹಸಗೆಟ್ಟು ವೈಯಕ್ತಿಕ ಹಾಗೂ ಸಾಮಾಜಿಕ ಪತನಕ್ಕೆ ಕಾರಣವಾಗುವದು. ಆಗ ಒಬ್ಬ ಮಹಾ ಪುರುಷನು ಜನ್ಮವೆತ್ತಿ ಸ್ವಭಾವವನ್ನು ಉಪೇಕ್ಷಿಸಿ ನಿಂತ ಮಾನವರ ಮನೋವೃತ್ತಿ ಪ್ರವಾಹವು ಸರಿಯಾಗಿ ಮುಂದೆ ಸಾಗುವಂತೆ ಜನರ ಜೀವನದಲ್ಲಿ ವಿಲಕ್ಷಣ ಕ್ರಾಂತಿ ( ತೀವ್ರ ಬದಲಾವಣೆ) ಯನ್ನು ಮಾಡಬೇಕಾದದ್ದು ಅನಿವಾರ್ಯ. ಹೀಗೆ ತೀವ್ರ ಬದಲಾವಣೆಯನ್ನು ಮಾಡಲು ಸಮರ್ಥನಾದವನೇ ಕ್ರಾಂತಿಕಾರಕನೆನಿಸಿಕೊಳ್ಳುವನು.



CC-0. Jangamwadi Math Collection, Varanasi. An eGangotri Initiative

ಪವಿತ್ರವಾದ ನಮ್ಮೀ ಭರತಖಂಡದಲ್ಲಿ ಆಗಾಗ ಎಷ್ಟೋ ಜನ ಕ್ರಾಂತಿಕಾರಕ ಮಹಾ ಪುರುಷರು ಜನ್ಮ ತಾಳಿ ಆಯಾ ಕಾಲ-ದೇಶ-ಪರಿಸ್ಥಿತಿಯನ್ನನುಸರಿಸಿ ಜನತೆಯ ಜೀವನದ ಬೆಳವಣಿಗೆಗೆ ತಕ್ಕ ಕ್ರಾಂತಿಯನ್ನು ಮಾಡಿರುವದು ಇತಿಹಾಸಜ್ಞರಿಗೆ ಸುಪರಿಚಿತವಾದ ವಿಷಯ. ಬುದ್ಧ, ಶಂಕರ, ರೇಣುಕ ಮುಂತಾದವರು ಕ್ರಾಂತಿಕಾರಕ ಮಹಾ ಪುರುಷರ ಗುಂಪಿಗೆ ಸೇರಿದವರು. ಭಾರತ ಇತಿಹಾಸ ನಭೋಂಗಣದಲ್ಲಿ ಮಿಂಚುವ ಅಂಥ ಕ್ರಾಂತಿಕಾರಕ ಮಹಾಪುರುಷ ನಕ್ಷತ್ರಮಂಡಲ ದಲ್ಲಿ ೧೨ ನೆಯ ಶತಮಾನದ ಬಸವಣ್ಣನು ಉದಯಕಾಲದ ಬೆಳ್ಳಿಯ ಚಿಕ್ಕಿಯಂತೆ ಹೊಳೆಯು ತ್ತಿರುವನು.

## ಬಸವನ ಕಾಲದ ಹಿಂದೂ ಸಮಾಜದ ದುಸ್ಥಿತಿ ಹಾಗೂ ಸುಧಾರಣೆ

ಬಸವನ ಕಾಲದ ಹಿಂದೂ ಸಮಾಜವು ವಿಭಿನ್ನ ಧರ್ಮ-ಮತ-ಪಂಥಗಳ ಅಂತಃಕಲಹ ದಿಂದ ಭಿನ್ನ ಭಿನ್ನವಾಗಿ ಅತಿ ಶೋಚನೀಯ ಸ್ಥಿತಿಗಿಳಿದಾಗಿತ್ತು. ಆಗ ಜನತೆಯಲ್ಲಿ ಒಬ್ಬರು ಮತ್ತೊಬ್ಬರನ್ನು ಕಂಡು ಸಮಾಧಾನದಿಂದಿರುವಷ್ಟು ಮನೋಬಲವು ಕೂಡಾ ಇದ್ದಿಲ್ಲ. ಒಂದು ಕಾಲದಲ್ಲಿ ಮಾನವ ಸ್ವಭಾವವನ್ನು ಆಳವಾಗಿ ಅಭ್ಯಾಸ ಮಾಡಲು ಸಮರ್ಥರಾದವರೆಂದು ಗುಣ ಕರ್ಮಗಳನ್ನನುಸರಿಸಿ ಶ್ರಮವಿಭಾಗದ ತತ್ತ್ವದ ಮೇಲೆ ರಚಿಸಲ್ಪಟ್ಟ ವರ್ಣಾಶ್ರಮ ಧರ್ಮಗಳು ಆ ಕಾಲದ ಸ್ವಾರ್ಥಿಗಳ ಬುದ್ಧಿದೋಷದಿಂದ ವೈಪರೀತ್ಯವನ್ನು ಪಡೆದವು. ಅಂದರೆ ಯಾವ ವ್ಯವಸ್ಥೆಯು ಒಂದು ಕಾಲಕ್ಕೆ ಸಮಾಜೋನ್ನತಿಗೆ ಕಾರಣವಾಗಿತ್ತೋ ಅದೇ ಮತ್ತೊಂದು ಕಾಲದಲ್ಲಿ ಸಮಾಜದ ಬೀಜವಾಯಿತು. ಆಗ ಉಚ್ಚ ವರ್ಣದವರೆನಿಸಿಕೊಳ್ಳುವವರು ತಮ್ಮ ಪ್ರತಿಷ್ಠೆಯನ್ನು ಅಜರಾಮರವನ್ನಾಗಿ ಮಾಡಬೇಕೆಂದು ನಡೆಸಿದ ಪ್ರಯತ್ನವಂತೂ ಅಪೂರ್ವ ವಾಗಿದ್ದಿತು. ಅವರು ಮೋಕ್ಷ ರಾಜ್ಯಕ್ಕೆ ಹೋಗಲು ತಮಗೆ ಮಾತ್ರ ಜನ್ಮಸಿದ್ಧವಾದ ಬಾಧ್ಯತೆ ಯಿರುವದೆಂದೂ ಇತರರು ಮಾತ್ರ ಅಲ್ಲಿಗೆ ಹೋಗಬೇಕಾದಲ್ಲಿ ತಮ್ಮ ಸಹಿ ಪಡೆಯಬೇಕಾಗುತ್ತ ದೆಂದೂ ಹೇಳುತ್ತಿದ್ದರು. ಮತ್ತು ವೇದಕಾಲದ ಸ್ತ್ರೀಯರು ಪುರುಷರಷ್ಟೇ ಧಾರ್ಮಿಕ ಸಂಗತಿಗಳಲ್ಲಿ ಸ್ವಾತಂತ್ರ್ಯವುಳ್ಳವರಾಗಿ ಯೋಗ್ಯ ಸಂಸ್ಕಾರಹೊಂದಿ ಶಿಕ್ಷಣ ಪಡೆಯುತ್ತಿದ್ದರಷ್ಟೆ. ಅಷ್ಟೇಕೆ ಘೋಷಾ, ಸೂರ್ಯಾ, ವಿಶ್ವಾವರಾ, ಲೋಪಾಮುದ್ರಾ ಮುಂತಾದ ಮಂತ್ರದ್ರಷ್ಟ್ರಿಯರು ವೇದ ಸೂಕ್ತಗಳನ್ನು ಕೂಡಾ ರಚಿಸಿರುವರು. ಉಪನಿಷತ್ಕಾಲದಲ್ಲಿ ಮೈತ್ರೇಯಿ, ಗಾರ್ಗೇಯಿ ಮೊದಲಾದವರು ಬ್ರಹ್ಮವಾದಿಗಳಾಗಿದ್ದರು. ಹೀಗಿದ್ದರೂ ಸ್ವಾರ್ಥಾಂಧರಾದ ಅಂದಿನ ಪುರುಷರು ಸ್ತ್ರೀಯರನ್ನು ತಮ್ಮ ಸಚೇತನ ಭೋಗ್ಯವಸ್ತುವೆಂದು ತಿಳಿದು ಅವರ ಸ್ವಾತಂತ್ರ್ಯವನ್ನು ಪೂರ್ಣ ಸೆಳೆದುಕೊಂಡುಬಿಟ್ಟರು. ಶೂದ್ರರ ಪಾಡಂತೂ ಹೇಳಲಿಕ್ಕೆ ಬಾರದಷ್ಟು ಅಸಹ್ಯವಾಗಿದ್ದಿತು. ಅನೀತಿವಂತನಾದ ಒಬ್ಬ ಬ್ರಾಹ್ಮಣನು ನೀತಿವಂತರಾದ ಶೂದ್ರರಿಗಿಂತ ಎಷ್ಟೋ ಪಾಲು ದೊಡ್ಡವ ನೆಂದು ಜಾತಿವಾದಿಗಳಾದ ಉಚ್ಚ ವರ್ಣದವರ ಸ್ವಪ್ರಾಭಿಪ್ರಾಯವಿತ್ತು. ಮತ್ತು ಅವರು ತತ್ತ್ವ ಜ್ಞಾನದ ಮೇಲೆ ತಮಗೆ ಪೂರ್ಣ ಅಧಿಕಾರವಿರುವದೆಂದೂ ಅದನ್ನು ತಮ್ಮ ಕೃಪೆಗೆ ಪಾತ್ರರಾದ ಕೆಲ ಜನರಿಗೆ ಮಾತ್ರ ದಯಪಾಲಿಸಲಾಗುವುದೆಂದೂ ಹೇಳುತ್ತಿದ್ದರಲ್ಲದೆ, ತತ್ತ್ವಜ್ಞಾನವನ್ನು ಯಾವಾಗಲೂ ಸಂಸ್ಕೃತ ಭಾಷೆಯೆಂಬ ವ್ಯಥವಾದ ಪೊಕ್ಕಸದಲ್ಲಿ ಬಚ್ಚಿಡಲು ಪ್ರಯತ್ನಿಸುತ್ತಿದ್ದರು. ಅಲ್ಲದೆ ಶರೀರಪರಿಶ್ರಮಸಾಧ್ಯಗಳಾದ ಕೃಷಿ ಮುಂತಾದ ಉದ್ಯೋಗಗಳನ್ನು ಶೂದ್ರರೇ ಮಾಡ



CC-0. Jangamwadi Math Collection, Varanasi. An eGangotri Initiative

ಬೇಕೆಂದು ಹೇಳುತ್ತ ತಾವು ಮಾತ್ರ ಶ್ರಮಜೀವಿಗಳ ಮೇಲೆ ಉಣ್ಣೆಯಂತೆ ಬಾಳತೊಡಗಿದರು. ಬುದ್ಧ-ಶಂಕರಾಚಾರ್ಯರ ಕಾಲದಲ್ಲಿ ಮೋಕ್ಷ ಸಾಧನವೆಂದು ಗೌರವ ಪಡೆದ ಸನ್ಯಾಸಾಶ್ರಮವು ಆ ಕಾಲದ ಅಕರ್ಮಣ್ಯರ ಉದರಪೋಷಣೆಗೆ ಪರಮ ಸಹಾಯವಾಯಿತು. ಆದ್ದರಿಂದಲೇ ಜೀವ ಗಳ್ಳರು ತಮ್ಮ ಜೀವನದ ಗೊತ್ತುಗುರಿಯ ಪರಿವೆಯಿಲ್ಲದಿದ್ದರೂ ಮನೋಗತ ವಿಷಯವಾಸನೆ ಗಳನ್ನು ತೃಪ್ತಿಗೊಳಿಸುವದಕ್ಕಾಗಿಯೇ ಶುಷ್ಕ ವೇದಾಂತವನ್ನು ಬಾಯಿತುಂಬ ಮಾತಾಡಹತ್ತಿ ದರು. ಇವೆಲ್ಲ ದೋಷಗಳನ್ನು ಸೂಕ್ಷ್ಮವಾಗಿ ಪರ್ಯಾಲೋಚಿಸಿದ ಬಸವನು ತನ್ನ ಎಳೆ ವಯಸ್ಸಿ ನಲ್ಲಿಯೇ ಇಳಿಯ ವಯಸ್ಸಿನವರಿಗೂ ಸಹ ತಿಳಿಯದ ಸಾಮಾಜಿಕ ಹಾಗು ಧಾರ್ಮಿಕಾದಿ ಕಾರ್ಯ ಕ್ಷೇತ್ರದಲ್ಲಿ ಉರುತರ ಕಾರ್ಯಭಾರ ಹೊತ್ತು ನಿಂತದ್ದು ಎಂಥ ಬುದ್ಧಿವಂತ ಸಾಹಸಿಯ ತಲೆಯನ್ನು ನಡುಗಿಸದಿರದು. ಪವಿತ್ರಜೀವಿಯೂ ಸತ್ಯ ಶೋಧಕನೂ ಆದ ಬಸವನು ಅಂದು ಶೋಧಿಸಿ ತೆಗೆದ ತತ್ತ್ವಗಳನ್ನು ಕೂಲಂಕಷವಾಗಿ ವಿಚಾರಿಸಬಲ್ಲ ಇಂದಿನ ಜಾಣರೆಲ್ಲರೂ ಎಂದೆಂದಿಗೂ ಇವುಗಳ ಅವಶ್ಯಕತೆಯಿರುವುದೆಂದು ಹೇಳಲು ಹಿಂಜರಿಯರು. ಬಸವಣ್ಣನು ಒಳ್ಳೇ ಮೇಧಾವಿಯೂ ವಿಚಾರ ಸ್ವಾತಂತ್ರ್ಯ ಪ್ರಿಯನೂ ಆಗಿದ್ದನು. ಸತ್ಯ ಶೋಧವು ಆತನ ಜೀವನದ ಗೊತ್ತುಗುರಿಯಾಗಿದ್ದಿತು. ನಿತ್ಯವು ಯಾವನಾದರೊಬ್ಬ ವ್ಯಕ್ತಿಯ ಸ್ವತ್ತಾಗಿರದೆ ತತ್ತ್ವಬುಭುತ್ಸವಾದ ಪ್ರತಿಯೊಬ್ಬ ಮನುಷ್ಯ ನಿಗೆ ಪ್ರಯತ್ನ ಸಾಧ್ಯವೆಂಬುದನ್ನು ಬಸವನು ಚೆನ್ನಾಗಿ ಅರಿತುಕೊಂಡಿದ್ದನು. ಆಮುದರಿಂದ ತನ್ನ ಜೀವನದ ವಾಸ್ತವಿಕ ಧ್ಯೇಯವನ್ನು ಸಾಧಿಸಲು ಯತ್ನಿಸಿದ ಬಸವನಿಗೆ ಅಂಧ ಶ್ರದ್ಧೆಯಿಂದ ಯಾವುದಾದರೊಂದು ಸಾಂಪ್ರದಾಯಕ ಕಟ್ಟಿಗೆ ಒಳಗಾಗಿ ಮನ ಒಪ್ಪದ ಧರ್ಮಕ್ಕೆ ತಲೆಬಗ್ಗಿಸಿ ನಿಂತುಕೊಳ್ಳುವುದು ಎಷ್ಟೂ ಸೇರುತ್ತಿರಲಿಲ್ಲ. ಪರಂಪರಾಗತ ರೂಢಿಗಾಗಲಿ ಯಾವನಾದರೊಬ್ಬ ವ್ಯಕ್ತಿಯ ಗೌರವಕ್ಕಾಗಲಿ ಮನಸೋತು ತನ್ನ ಪವಿತ್ರ ಹೃದಯದಲ್ಲಿ ಮಿಂಚಿದ ಸದ್ವಿಚಾರಗಳನ್ನು ಮಾರಿಕೊಳ್ಳುವದು ಆತ್ಮಪತನದ ಹಾದಿಯಾಗಿರುವುದು. ಅಂಧಶ್ರದ್ಧೆಯು ಮಾನವರ ಜ್ಞಾನದ ಸೆಲೆಯನ್ನು ಪೂರ್ಣವಾಗಿ ತಡೆದು ನಿಲ್ಲಿಸಿಬಿಡುವುದು. ಅದರಿಂದ ಜನತೆಯಲ್ಲಿ ಅಕರ್ಮಣ್ಯತೆ, ಜಡತ್ವ ಮುಂತಾದ ದೋಷಗಳು ಸಂಭವಿಸಿ ವ್ಯಕ್ತಿ ಹಾಗೂ ಸಮಾಜಗಳ ಅಸ್ತಿತ್ವವೇ ಹಾಳಾಗಿ ಹೋಗುವುದು. ವಿಚಾರ ದಾರಿದ್ರ್ಯ, ವಿಚಾರ ಪಾರತಂತ್ರ್ಯ ಇವುಗಳಿಂದೊದಗುವಷ್ಟು ಹಾನಿಯು ಮತ್ತಾವುದರಿಂದಲಾಗಲು ಶಕ್ಯವಿಲ್ಲ. ಸತ್ಯಶೋಧವಾದರೂ ಸ್ವತಂತ್ರ ವಿಚಾರಿಗಳ ಅಧಿಕಾರಕ್ಕೊಳ ಪಟ್ಟಿರುವುದು. ಇಲ್ಲಿಯತನಕ ಜಗತ್ತಿನಲ್ಲಿ ಆಗಿಹೋದ ಮಹಾ ಪುರುಷರೆಲ್ಲರೂ ವಿಚಾರ ಸ್ವಾತಂತ್ರ್ಯವುಳ್ಳವರೇ! ಅವರೆಲ್ಲರ ಮೊದಲಿನ ಕಾರ್ಯವಾದರೂ ಜನತೆಯ ಬುದ್ಧಿಗೆ ಬಿದ್ದ ಅಂಧ ಶ್ರದ್ಧೆಯ ಬೀಗವನ್ನು ಮುರಿದುಹಾಕಿ ಅವರ ಬುದ್ಧಿಗೆ ಪೂರ್ಣ ಅವಕಾಶ ಕೊಡುವುದಾಗಿತ್ತು. ವಿಚಾರಸ್ವತಂತ್ರನಾದ ಶುದ್ಧಾಂತಃಕರಣಿಯು ಯಾವುದು ಎಷ್ಟೋ ದಿನಗಳಿಂದ ನಡೆದು ಬಂದಿ ದ್ದರೂ ಅದು ಕಾಲ, ದೇಶ, ಪರಿಸ್ಥಿತಿಗೆ ಯೋಗ್ಯವೆನಿಸದಿದ್ದಲ್ಲಿ ಅದನ್ನು ನಿರ್ದಯದಿಂದ ಒದೆದು ಹಾಕಿ ಉಚಿತವಾದ ಪದ್ಧತಿಯನ್ನು ಬಳಕೆಯಲ್ಲಿ ತರಲು ಹಿಂದುಮುಂದೆ ನೋಡನು. ಇದರಂತೆ ಬಸವಣ್ಣನು ಅಂದಿನ ಹಿಂದೂ ಸಮಾಜದ ಅವನತಿಗೆ ಕಾರಣವಾದ ಜಾತಿವಾದವನ್ನು ಹೊಡೆ ದೋಡಿಸಿ ಸಮತೆಯ ತಳಹದಿಯ ಮೇಲೆ ಸಮಾಜ-ಧರ್ಮಮಂದಿರವನ್ನು ಕಟ್ಟಬೇಕೆಂದು ಬಯಸಿ ಮೊದಲು ಜನತೆಯಲ್ಲಿ ಮಂದವಾದ ವಿಚಾರಶಕ್ತಿಯ ಜಾಗ್ರತೆಯ ಕಾರ್ಯ ಕೈಕೊಂಡನು. ಮತ್ತು ಬಹು ದಿನಗಳಿಂದ ವರ್ಣಾಶ್ರಮಗಳ ಬಂಧನಕ್ಕೊಳಗಾಗಿ ನೊಂದು, ಬೆಂದು, ಬೆಂಡಾಗಿ



CC-0. Jangamwadi Math Collection, Varanasi. An eGangotri Initiative

ಹೋದ ತತ್ತ್ವಬುಭುತ್ಸು ನರನಾರಿಯರ ಮನಸ್ಸಿನ ಬಯಕೆಯನ್ನು ಹಿಂಗಿಸಲು ವೀರಶೈವ ಧರ್ಮವೇ ಸಮರ್ಥವಾದುದೆಂದು ನಿಶ್ಚಯಿಸಿ ಈ ಧರ್ಮದಲ್ಲಿದ್ದ ವ್ಯವಹಾರಿಕ ಲೋಪ – ದೋಷ ಗಳನ್ನು ಮಾತ್ರ ತೆಗೆದುಹಾಕಲು ಪ್ರಯಾಸಪಟ್ಟನು. ಆಗ ವೀರಶೈವ ಧರ್ಮಾನುಯಾಯಿಗಳು ಸಾಮಾಜಿಕ ಕಲ್ಪನೆಯಿಲ್ಲದೆ ವೈಯಕ್ತಿಕವಾಗಿ ಹಾಗೂ ಹೀಗೂ ಜೀವನ ಯಾತ್ರೆಯನ್ನು ಸಾಗಿಸು ತ್ತಿದ್ದರೆಂದು ತಿಳಿದುಬರುತ್ತದೆ. ಕೇವಲ ಐಹಿಕ ಜೀವನ ಸಮಸ್ಯೆಗಳನ್ನು ಬಿಡಿಸಿಕೊಳ್ಳುವುದಕ್ಕಾ ಗಿಯೇ ವ್ಯಕ್ತಿಯು ಸಮಾಜದ ಘಟಕನಾಗಬೇಕಾಗುತ್ತದೆಂದು ಕೆಲವರು ತಿಳಿದುಕೊಂಡಿದ್ದಾರೆ. ಆದರೆ ಬಸವನು ಮುಮುಕ್ಷುಗಳೂ ಕೂಡ ತಮ್ಮ ಸಾಧನ ಪಥದಲ್ಲಿ ಬರುವ ತೊಡಕುಗಳನ್ನು ದೂರ ಮಾಡಿಕೊಂಡು ಪಾರಮಾರ್ಥಿಕ ಸಮಸ್ಯೆಗಳನ್ನು ಬಿಡಿಸಿಕೊಳ್ಳಲು ಸಹ ಸಮಾಜ ಘಟಕರಾಗ ಬೇಕಾಗುವುದೆಂದು ತಿಳಿದಿದ್ದನು. ಆದುದರಿಂದಲೇ ವೀರಶೈವ ಧರ್ಮವು ಸರ್ವಾಂಗ ಸುಂದರವಾಗು ವಂತೆ ಕ್ರಾಂತಿ ಮಾಡಬೇಕಾಯಿತು. ಕ್ರಾಂತಿಯು ಸತ್ತ್ವ–ರಜ–ತಮೋಗುಣಗಳೆಂದು ಮೂರು ವಿಧವಾಗಿದೆ. ಮನುಷ್ಯತ್ವ ಪ್ರಧಾನವಾದ ಕ್ರಾಂತಿಯು ಸಾತ್ವಿಕವಾಗಿಯೂ ಜಾತಿ ಅಥವಾ ರಾಷ್ಟ್ರ ಪ್ರಧಾನವಾದ ಕ್ರಾಂತಿಯು ರಾಜಸವಾಗಿಯೂ ವ್ಯಕ್ತಿಪ್ರಧಾನವಾದ ಕ್ರಾಂತಿಯು ತಾಮಸ ವಾಗಿಯೂ ಹೇಳಲ್ಪಡುವದು. ಬಸವನು ಮಾಡಿದ ಕ್ರಾಂತಿಯು ಮನುಷ್ಯತ್ವ ಪ್ರಧಾನ ವಾದುದು. ಆದರೆ ಯಾವ ಜಾತಿಯವರಾಗಲಿ, ಯಾವ ದೇಶದವರಾಗಲಿ, ಯಾವ ಭಾಷೆ ಯವರಾಗಲಿ ಎಲ್ಲರೂ ಒಂದೇ ಸಂಸ್ಕಾರ ಪಡೆದು ಒಂದೇ ಸಿದ್ಧಾಂತವನ್ನನುಸರಿಸಿ ಏಕೋದರರಂತೆ ಅನ್ಯೋನ್ಯವಾಗಿ ಪ್ರೇಮದಿಂದ ನಡೆದುಕೊಳ್ಳುತ್ತ ತಮ್ಮ ಜೀವನದ ಕೊನೆಯ ಉಚ್ಚ ಧ್ಯೇಯ ವನ್ನು ಸಾಧಿಸಬೇಕೆಂಬುದೇ ಬಸವಣ್ಣನ ಕ್ರಾಂತಿಯ ವೈಶಿಷ್ಟ್ಯವು. ಭಾರತದಲ್ಲಿ ಹೀಗೆ ಮನುಷ್ಯತ್ವ ಪ್ರಧಾನವಾದ ಕ್ರಾಂತಿಯನ್ನು ಮಾಡಿದ ಯಶಸ್ಸು ಕ್ರಿಸ್ತನಿಗಿಂತ ಐದು ನೂರು ವರುಷ ಪೂರ್ವ ದಲ್ಲಿದ್ದ ಬುದ್ಧನನ್ನು ಬಿಟ್ಟರೆ ಒಮ್ಮೆಲೇ ಆದು ೧೨ ನೆಯ ಶತಮಾನದ ಬಸವಣ್ಣನ ಪಾಲಿಗೆ ಸಲ್ಲುವುದು. ಆದರೆ ತತ್ತ್ವದಲ್ಲಿ ಬುದ್ಧನಿಗಿಂತ ಬಸವನು ಅತಿ ಮುಂದುವರಿದಿರುವನು. ಬುದ್ಧನ ದೃಷ್ಟಿಯಲ್ಲಿ ಲೌಕಿಕ ಪಾರಮಾರ್ಥ ಇವೆರಡು ಪರಸ್ಪರ ಭಿನ್ನವಾಗಿ ಮತ್ತು ವಿರುದ್ಧವಾಗಿ ತೋರಿದರೆ ಬಸವನ ದೃಷ್ಟಿಯಲ್ಲಿ ಒಂದು ನಾಣ್ಯದ ಎರಡು ಮಗ್ಗುಲ ಮುದ್ರೆಯಂತೆ ಅವೆರಡರಲ್ಲಿ ಸುಂದರ ಸಮನ್ವಯವು ತೋರಿಬಂದಿತು. ಆದುದರಿಂದಲೇ ಬಸವನು “ ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟವಯ್ಯ ಇಲ್ಲಿ ಸಲ್ಲುವರು ಅಲ್ಲಿ ಸಲ್ಲುವರಯ್ಯ ಇಲ್ಲಿ ಸಲ್ಲದವರು ಅಲ್ಲಿ ಸಲ್ಲರಯ್ಯ ಕೂಡಲ ಸಂಗಮದೇವಯ್ಯ” ಎಂದು ಹಾಡುತ್ತ ಮರ್ತ್ಯಲೋಕವನ್ನು ತಿರಸ್ಕರಿಸದೆ ಪುರಸ್ಕರಿಸುತ್ತ ಪರಲೋಕದಾಶೆಯಿಂದ ಪ್ರತ್ಯಕ್ಷ ಜೀವನದ ಕಡೆಗೆ ಉದಾಸೀನರಾದ ಮಾನವರ ಮನಸ್ಸನ್ನು ತಿದ್ದಲು ಬಹಳ ದಣಿದನು. ಬುದ್ಧನು ಇದ್ದ ರಾಜ್ಯವನ್ನು ಮತ್ತು ಗ್ರಹಸ್ಥಾಶ್ರಮವನ್ನು ತ್ಯಾಗ ಮಾಡಿ ನೈಷ್ಠಿಕ ಬ್ರಹ್ಮಚರ್ಯಪ್ರಧಾನವಾದ ಸನ್ಯಾಸಾಶ್ರಮವನ್ನು ಸ್ವೀಕರಿಸಿದರೆ, ಬಸವನು ಆಜನ್ಮಬ್ರಹ್ಮಚಾರಿಯಾಗಿರಲು ಯೋಗ್ಯತೆಯುಳ್ಳವನಾಗಿದ್ದರೂ ಸಾಮಾನ್ಯ ಜನರಿಗೆ ಮಾರ್ಗ ತೋರಿಸುವುದಕ್ಕಾಗಿ ಪವಿತ್ರವಾದ ಗೃಹಸ್ಥಾಶ್ರಮವನ್ನು ಮತ್ತು ರಾಜ್ಯದ ಪ್ರಧಾನ ಮಂತ್ರಿ ಪದವನ್ನು ಅಂಗೀಕರಿಸಿದನು. ಪ್ರಕೃತಿವಿಜಯಾಪೇಕ್ಷಿಗಳೆಲ್ಲರೂ ತಮ್ಮ ಹೃದಯದಲ್ಲಡಗಿದ ಪಾಶವೀ ಹಾಗೂ ದೈವೀ ಪ್ರವೃತ್ತಿಗಳ ವಿರೋಧವನ್ನು ಹೋಗಲಾಡಿಸಲು ಸಮರ್ಥವಾದ ಗೃಹಸ್ಥಾ ಶ್ರಮವನ್ನು ಹೊಂದಬೇಕಾದದ್ದು ಅನಿವಾರ್ಯವು. ಆ ಕಾರಣ ಬಸವನು “ ಇಂದ್ರಿಯ ನಿಗ್ರಹ



CC-0. Jangamwadi Math Collection, Varanasi. An eGangotri Initiative

ಮಾಡಿದರೆ ಹೊಂದುವವು ದೋಷಗಳು. ಮುಂದೆ ಬಂದು ಕಾಡುವವು ಪಂಚೇಂದ್ರಿಯಗಳು. ಸತಿ–ಪತಿ–ರತಿ ಸುಖವ ಬಿಟ್ಟರೇ ಸಿರಿಯಾಳ ಚಂಗಳೆಯರು? ಸತಿ–ಪತಿ ಭೋಗ ವಿಲಾಸ ಬಿಟ್ಟರೇ ಸಿಂಧು ಬಲ್ಲಾಳರು. ನಿಮ್ಮ ಮುಟ್ಟಿ ಪರ ಸತಿಯರಿಗೆ ಎಳಸಿದರೆ ನಿಮ್ಮ ಚರಣಕ್ಕೆ ದೂರ ಕೂಡಲ ಸಂಗಮದೇವ" ಎಂದು ನುಡಿದಿರುವನು. ಎಲ್ಲ ಪ್ರವೃತ್ತಿಗಳಲ್ಲಿ ಕಾಮ ಪ್ರವೃತ್ತಿಯು ಅತಿ ಬಲವುಳ್ಳದ್ದು. ಆ ಕಾಮ ಪ್ರವೃತ್ತಿ ಪ್ರವಾಹದ ಸೆಳವಿಗೆ ಸಿಕ್ಕವರು ದುಃಖಸಾಗರವನ್ನು ಹೊಂದಲೇ ಬೇಕಾಗುವುದು. ಆ ವೃತ್ತಿಯನ್ನು ಬಲಾತ್ಕಾರದಿಂದ ತಡೆಯುವದರಿಂದಲೂ ಕೂಡಾ ಶರೀರ ಮನಸ್ಸುಗಳ ಮೇಲೆ ದೊಡ್ಡ ಆಘಾತವಾಗುವುದೆಂದು ಮಾನಸಶಾಸ್ತ್ರಜ್ಞರ ಅಭಿಪ್ರಾಯವಿದೆ. ಆ ಕಾರಣ ಧರ್ಮಮಯವಾದ ಭೋಗವು ಮುಮುಕ್ಷುಗಳಿಗೆ ಸಾಧಕವಾಗಿರುವದಲ್ಲದೆ ಬಾಧಕ ವಾಗಿಲ್ಲ. ಅದರಂತೆ ಅಧಿಕಾರವು ಕೂಡಾ ಸಮಾಜದ ಕಲ್ಯಾಣಕ್ಕಾಗಿ ಬಹು ಉಪಯುಕ್ತವಾಗಿರು ವುದು. ಬುದ್ಧನು ತನ್ನ ಬುದ್ಧಿಯಲ್ಲಿ ಮಿಂಚಿದ ವಿಚಾರಗಳನ್ನು ತನ್ನ ಅನುಯಾಯಿಗಳಿಗೆ ಬೋಧಿಸಿ ದರೆ ಬಸವನು ಆಧುನಿಕ ನವನಾಗರಿಕತೆಯಲ್ಲಿರುವ ಕೌನ್ಸಿಲ್ ಪಾರ್ಲಿಮೆಂಟುಗಳಂತೆ ಶಿವಾನುಭವ ಮಂಟಪವೆಂಬ ಸಂಸ್ಥೆಯನ್ನು ಸ್ಥಾಪಿಸಿ ಅಲ್ಲಿದ್ದ ಶಿವಶರಣರು ಶಿವಶರಣೆಯರು ಕೂಡಿ ಚರ್ಚಿಸಿ, ನಿರ್ಣ ಯಿಸಿದ್ದನ್ನೇ ಎಲ್ಲ ಕಡೆಗೂ ಪಸರಿಸುತ್ತಿದ್ದನು. ಬಸವನು ಅನುಭವಮಂಟಪದಲ್ಲಿ ಯಾವ ಕುಲ ಜಾತಿವರ್ಣಲಿಂಗಗಳನ್ನೆಣಿಸದೆ ತತ್ತ್ವಾಪೇಕ್ಷಿಗಳಾದವರೆಲ್ಲರಿಗೂ ಅವಕಾಶ ಕೊಟ್ಟನು.ಆದ್ದರಿಂದ ಇತರ ಧರ್ಮಗಳಂತೆ ವೀರಶೈವ ಧರ್ಮದಲ್ಲಿ ವೈಯಕ್ತಿಕ ಬುದ್ಧಿದೋಷಕ್ಕಾಸ್ಪದವಿಲ್ಲದೆ ಎಲ್ಲ ಮುಮುಕ್ಷುಗಳನ್ನು ತನ್ನ ಒಡಲಲ್ಲಿ ಹಾಕಿಕೊಳ್ಳುವಷ್ಟು ಈ ಧರ್ಮವು ಉದಾರವಾಯಿತು. ಬಸವನು ಯಾವುದಾದರೊಂದು ಅವ್ಯವಹಾರ್ಯ ತತ್ತ್ವಜ್ಞಾನವನ್ನು ಅನ್ಯರ ಮೇಲೆ ಬಲಾ ತ್ಕಾರ್ಯದಿಂದ ಹೇರಲು ಬಯಸದೆ ಎಲ್ಲರಿಗೂ ಉಪಯುಕ್ತವಾದ, ಅನುಕೂಲವಾದ ಧರ್ಮವನ್ನೇ ಬೋಧಿಸುತ್ತಿದ್ದನು. ಮತ್ತು ನುಡಿಗಿಂತ ನಡೆಗೆ ಹೆಚ್ಚು ಮಹತ್ತ್ವ ಕೊಡುತ್ತಿದ್ದನು. ನಡೆಯಿಲ್ಲದ ನುಡಿಯು ಎಷ್ಟೋ ಬೆಲೆ ಬಾಳದೆಂಬುದು ಅಬಾಧಿತ ಸಿದ್ಧಾಂತವು. ನಿರುದ್ಯೋಗವು ಬಸವಣ್ಣನ ದೃಷ್ಟಿಯಲ್ಲಿ ನರಕಪ್ರಾಯವಾಗಿ ತೋರಿಬಂದಿತಲ್ಲದೆ ಕಾಯಕವು ಕೈಲಾಸ ಸದೃಶವಾಗಿತ್ತು. "ಕಾಯಕವೇ ಕೈಲಾಸವಯ್ಯ" ಎಂದು ಸಾರಿರುವನು. ಕಾಯಕದಲ್ಲಿ ಸಾಮ್ಯವಾದವು ಅಡಗಿ ಕೊಂಡಿರುವುದು. ಪ್ರತಿಯೊಬ್ಬ ಮನುಷ್ಯನು ತನ್ನ ಪರಿಶ್ರಮಕ್ಕೆ ತಕ್ಕ ಜೀವನೋಪಾಯವನ್ನು ಹೊಂದುವುದು ನ್ಯಾಯಸಮ್ಮತವು. ಹೀಗೆ ನಡೆದುಕೊಳ್ಳುವವನಿಗೆ ಅನವಶ್ಯಕ ಪದಾರ್ಥ ಸಂಗ್ರಹ ದಲ್ಲಿ ಮನಸ್ಸು ಹರಿಯುವುದಿಲ್ಲ. ಇದರಿಂದ ಜಗತ್ತಿನಲ್ಲಿ ಶಾಂತಿಯು ಹರಡಲವಕಾಶವಾಗುವುದು. ಒಂದು ವೇಳೆ ಶರೀರ ಪರಿಶ್ರಮವಿಲ್ಲದೆ ಅನ್ಯರು ಗಳಿಸಿದ ಧನಧಾನ್ಯಾದಿಗಳಿಂದ ಹೊಟ್ಟೆ ಹೊರಕೊಳ್ಳ ಲೆತ್ನಿಸಿದರೆ ಅಂಥ ಬುದ್ಧಿಜೀವಿಗಳಿಂದ ಜಗತ್ತಿನಲ್ಲಿ ಅಶಾಂತಿಯು ವಿಷದಂತೆ ಎಲ್ಲ ಕಡೆಗೂ ಹಬ್ಬುವುದು. ಅನ್ಯಾಯಾರ್ಜಿತ ದ್ರವ್ಯವು ಸತ್ಕಾರ್ಯಕ್ಕೂ ಸಹ ಸಲ್ಲಲಯೋಗ್ಯವಾಗಿರುವುದು. ಶ್ರಮವಹಿಸಿ ಸಂಗ್ರಹಿಸಿದ ಕಾಂಚಿಯ ತೊಪ್ಪಲವಾದರೂ ಸತ್ಕಾರ್ಯಕ್ಕೆ ಸಲ್ಲಲರ್ಹವಾಗಿರುವುದು. ಅನ್ಯಾಯದ ಧನಿಕತನಕ್ಕಿಂತ ನ್ಯಾಯದ ಬಡತನವು ಹೆಚ್ಚಿನದು. ಅಂತೇ ಎಷ್ಟೋ ಜನ ಶಿವಶರ ಣರು ಬಡತನವನ್ನೇ ಸ್ವಾಗತಿಸಿರುವರು. ಮತ್ತು ಬಸವನು ಕಾಯಕದಲ್ಲಿದ್ದ ಉಚ್ಚ-ನೀಚ ಭಾವವನ್ನು ದೂರಮಾಡಿಬಿಟ್ಟನು. ಆದುದರಿಂದ ಪ್ರತಿಯೊಬ್ಬನು ತನ್ನ ಪ್ರಕೃತಿಗೆ ತಕ್ಕ ಕಾಯಕ ದಿಂದ ಜೀವನಯಾತ್ರೆ ಸಾಗಿಸಲನುಕೂಲವಾಯಿತು. ಅಲ್ಲದೆ ದೇಶದಲ್ಲಿ ಸಂಪದಭಿವೃದ್ಧಿಯಾಗ ಲನುವಾಯಿತು.



CC-0. Jangamwadi Math Collection, Varanasi. An eGangotri Initiative

ಬುದ್ಧನು ತನ್ನ ಶಿಷ್ಯರಿಗೆ ಪಾಲಿ ಭಾಷೆಯಲ್ಲಿ ಬೋಧಿಸಿದಂತೆ ಬಸವನು ಬಳಕೆಯ ಭಾಷೆಯಲ್ಲಿಯೇ ತನ್ನ ಅನುಭವವನ್ನು ಅನ್ಯರ ಮುಂದಿಡುತ್ತಿದ್ದನು. ಶಾಸ್ತ್ರಕ್ಕಿಂತ ಅನುಭವವೇ ಹೆಚ್ಚಿನ ಪ್ರಮಾಣವಾಗಿ ಬಸವಣ್ಣನಿಗೆ ತೋರಿತು. ಇದು ಬಸವಣ್ಣನ ಯೋಗ್ಯತೆಯನ್ನು ತೋರಿಸುವದಾಗಿದೆ. ಹೀಗೆ ಬಸವನು ಎಲ್ಲ ರೀತಿಯಿಂದಲೂ ಜನತೆಯ ಕಲ್ಯಾಣದ ಧ್ಯೇಯವಿಟ್ಟುಕೊಂಡು ದುಡಿಯುವನಾದ್ದರಿಂದ ಆ ಕಾಲದ ಅನಂತ ಜ್ಞಾನಿಗಳಿಂದಲೂ ಕೂಡ ಹೊಗಳಿಸಿಕೊಳ್ಳಲ್ಪಟ್ಟನು. ಅವರೆಲ್ಲರೂ ಬಸವಣ್ಣನನ್ನು ಅವತಾರಿ ಎಂದು ತಿಳಿಯುತ್ತಿದ್ದರು. ಚೆನ್ನಬಸವಣ್ಣನು "ಭಕ್ತಿ ಜ್ಞಾನ ವೈರಾಗ್ಯ ಕುಳಸ್ಥಳವ ಹರಡಲೆಂದು ಮರ್ತ್ಯಲೋಕಕ್ಕೆ ಬಂದನಯ್ಯಾ ಬಸವಣ್ಣನು. ವ್ರತಾಚಾರದ ಮುಂದಣ ಕನ್ನಡಕವ ಕಳೆದು ಕರತನಾಮಳಕವ ಮಾಡಿ ತೋರ ಬಂದನಯ್ಯಾ ಬಸವಣ್ಣನು. ಪರವಾದಿ ಬಿಜ್ಜಳ ಒರೆಗಲ್ಲ ಹಿಡಿದು ಶಿವಭಕ್ತಿ ಸಂಪಾದನೆ ಮಾಡುವಲ್ಲಿ, ಮೂವತ್ತಾರು ಕೊಂಡೆಯರ ಪರಿಹರಿಸಿ, ಶಿವಾಚಾರದ ಧ್ವಜವನೆತ್ತರಿಸಿ ಮೆರೆಸಿದನಯ್ಯಾ ಬಸವಣ್ಣನು. ಇದು ಕಾರಣ ಕೂಡಲ ಚೆನ್ನಸಂಗಯ್ಯನಲ್ಲಿ ಬಸವಣ್ಣನ ನಿಲವ ಹೊಗಳುವದು ಎನ್ನಳವಲ್ಲ, ನಿನ್ನಳವಲ್ಲ" ಎಂದು ಬಣ್ಣಿಸಿರುವನು. ಅಭ್ಯುದಯ,ನಿಶ್ರೇಯಸ್ಸುಗಳ ಸುಂದರ ಸಮನ್ವಯದಿಂದ ಜಗತ್ತನ್ನೇ ಅಂದಗೊಳಿಸಬೇಕೆಂದು ಯತ್ನಿಸಿಸ ಅಂದಿನ ಬಸವನನ್ನು ಇಂದಿನ ವೀರಶೈವರು ನೆನೆದು ಆತನು ತೋರಿಸಿದ ಮಾರ್ಗದಲ್ಲಿ ನಡೆದು, "ವೀರಶೈವ ಧರ್ಮವು ವಿಶ್ವಧರ್ಮ" ಎಂಬುದನ್ನು ಇಂದಿನ ಮತ್ತು ಮುಂದಿನ ಜನತೆಗೆ ತೋರಿಸುವಂತಾಗಲೆಂದು ಹಾರೈಸಿ ಇಲ್ಲಿಗೆ ಮುಗಿಸುವೆನು.

ಶಾಂತಿಃ ಶಾಂತಿಃ ಶಾಂತಿಃ



CC-0. Jangamwadi Math Collection, Varanasi. An eGangotri Initiative



# ಅರುವತ್ತುಮೂವರು ಪುರಾತನರು

ವೃ॥ ಧರೆ ಬೆರಲೆತ್ತಿ ಬಣ್ಣಿಸುತಿರಲ್ ಪೊಗಳ್ಸಿಂ ಘನಭಕ್ತಿಯಿಂ ಕೃಪಾ।
ಕರ ಶಿವಲಿಂಗಮಂ ಬಿಡದೆ ಪೂಜಿಸಿ ಸಂದ ಮಹಾನುಭಾವರಂ॥
ದುರಿತ ಸಮೂಹಮಂ ನೆರೆಯೆ ಸೋವರನರ್ಥಿಗಳೊಳ್ಪನೀವರಂ।
ಶರಣೆನೆ ಕಾವರಂ ಸುಕೃತ ಜೀವರನೊಲ್ದರುವತ್ತುಮೂವರಂ॥

ಸುರಂಗ ಕವಿ.

ಹಿಂದೂ ಧರ್ಮದಲ್ಲಿ ಭಕ್ತಿ ಪಂಥವನ್ನು ಬೆಳೆಸಿದವರಲ್ಲಿ ತಮಿಳುನಾಡಿನ ಅರುವತ್ತು ಮೂರು ಮಂದಿ ಪುರಾತನರು ಅಗ್ರಗಣ್ಯರೆಂದು ಹೇಳಬಹುದು. ಮಧ್ಯಕಾಲೀನ ಹಿಂದೂ ಸಮಾಜದಲ್ಲಿ ಪ್ರಾಪ್ತವಾದ ಉಚ್ಚ-ನೀಚ, ಬ್ರಾಹ್ಮಣ-ಶೂದ್ರ, ಸ್ತ್ರೀ-ಪುರುಷ, ಉಚ್ಚ ಕುಲ-ನೀಚ ಕುಲ ಇತ್ಯಾದಿ ಸಾಮಾಜಿಕ ಸಂಕೋಲೆಗಳನ್ನು ಪ್ರತಿಭಟಿಸಿ ಮಾನವನ ಉನ್ನತಿಗೆ ಉತ್ತಮವಾದ ನಡತೆ ಮತ್ತು ಮೇಲಾದ ತಿಳಿವಳಿಕೆ ಇವುಗಳು ಮಾತ್ರ ಸಾಕೆಂದು ಪ್ರತಿಪಾದಿಸಿ ಸಮಾಜದ ಪ್ರಗತಿಗೆ ಸಾಧಕವಾದ ಮಾರ್ಗಗಳನ್ನು ಹಾಕಿಕೊಟ್ಟುದೇ ಈ ಪುರಾತನರ ಜೀವಿತದ ಧ್ಯೇಯವೆಂದು ಹೇಳಬಹುದು.

ತಮಿಳುನಾಡಿನಲ್ಲಿ ಮಹಾತ್ಮರಾದ ಈ ಪುರಾತನರ ಬಗ್ಗೆ ಜನರಿಗೆ ಅಪಾರವಾದ ಗೌರವವಿದೆ. ಇವರನ್ನು ಅವತಾರ ಪುರುಷರಂತೆ ಭಾವಿಸಿ, ಇವರ ದೇವಾಲಯಗಳನ್ನು ನಿರ್ಮಿಸಿ ಜಾತ್ರೆ, ಜಯಂತಿ ಮೊದಲಾದುವುಗಳ ಮೂಲಕ ಇವರನ್ನು ಆರಾಧಿಸುತ್ತಿದ್ದಾರೆ. ದಕ್ಷಿಣ ದೇಶದ ಸುಪ್ರಸಿದ್ಧವಾದ ಶಿವದೇವಾಲಯಗಳಲ್ಲಿ ಇವರ ವಿಗ್ರಹಗಳನ್ನು ಇಟ್ಟು ಪೂಜಿಸುವುದುಂಟು. ಈ ತಮಿಳುನಾಡಿನ ಶಿವಭಕ್ತರ ಪ್ರಭಾವವು ಕ್ರಮೇಣ ಆಂಧ್ರ ಮತ್ತು ಕರ್ಣಾಟಕ ಪ್ರಾಂತಗಳಲ್ಲಿಯೂ ಹಬ್ಬಿತೆಂದು ತೋರುತ್ತದೆ. ಅದರ ಕುರುಹುಗಳನ್ನು ಈ ಉಭಯ ಪ್ರಾಂತದ ಸಂಸ್ಕೃತಿ ಮತ್ತು ಸಾಹಿತ್ಯಗಳಲ್ಲಿ ಕಾಣಬಹುದು. ದಕ್ಷಿಣ ಕರ್ಣಾಟಕದಲ್ಲಿ ಪ್ರಸಿದ್ಧವೆನಿಸಿದ ನಂಜನಗೂಡಿನ ಶ್ರೀ ನಂಜುಂಡೇಶ್ವರ ದೇವಾಲಯದಲ್ಲಿಯೂ ಚಾಮರಾಜನಗರದ ಶ್ರೀ ಚಾಮರಾಜೇಶ್ವರ ದೇವಾಲಯದಲ್ಲಿಯೂ ಈ ಅರುವತ್ತುಮೂವರ ವಿಗ್ರಹಗಳು ವಿರಾಜಮಾನವಾಗಿವೆಯೆಂಬುದು ನಮ್ಮ ಈ ಮಾತಿಗೆ ನಿದರ್ಶನವೆನಿಸಿದೆ.



CC-0. Jangamwadi Math Collection, Varanasi. An eGangotri Initiative

ಭಕ್ತಿಯೋಗಿಗಳೆನಿಸಿದ ಈ ಅರುವತ್ತುಮೂವರ ಚರಿತ್ರೆಯು ಅತ್ಯಂತ ರಮಣೀಯವಾದುದು, ಹಾಗೂ ಬೋಧಪ್ರದವಾದುದು. ಅವನತಿಯ ಮಾರ್ಗವನ್ನು ಹಿಡಿದ ಇಂದಿನ ಹಿಂದೂ ಸಮಾಜವು ಈ ಮಹಾತ್ಮರ ಜೀವನ ರಹಸ್ಯವನ್ನೂ ಬೋಧೆಯನ್ನೂ ತಿಳಿದು ಆಚರಿಸುವುದು ಒಳ್ಳೆಯದು. ಈ ಪುರಾತನರಲ್ಲಿ ಹಿಂದೂ ಸಮಾಜದ ಎಲ್ಲ ಕುಲ, ಜಾತಿ, ಸಂಘಗಳ ಪ್ರತಿನಿಧಿಗಳೂ ಉಂಟೆಂಬುದು ಇಲ್ಲಿ ಸ್ಮರಣಾರ್ಹವಾದ ವಿಷಯ. ಇವರೆಲ್ಲರ ಬಾಳಿನ ತಿರುಳೂ ಸತ್ಯ, ದಯೆ, ಪರೋಪಕಾರ, ಭಕ್ತಿ, ಜ್ಞಾನ, ವೈರಾಗ್ಯ ಇವುಗಳಿಂದ ಕೂಡಿರುವುದು.

ಇವರಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ಚತುರ್ವರ್ಣದವರೂ ಉಂಟು. ಶೂದ್ರರಲ್ಲಿ ಕುಲಾಲ, ಶಬರ, ಚಂಡಾಲ, ಗೋಪಾಲ, ತೈಲಿಗ, ಸಿಂಹಳ, ತಂತುವಾಯ ಎಂಬ ಜಾತಿಯವರೂ ಉಂಟು. ಪುನೀತವತೀ, ಮಹಿಳೇಶ್ವರೀ, ಜ್ಞಾನವತೀ ಎಂಬ ವೈಶ್ಯ, ಬ್ರಾಹ್ಮಣ, ಕ್ಷತ್ರಿಯ ಸ್ತ್ರೀಯರೂ ಉಂಟು. ಇವರಲ್ಲಿ ೩೨ ಮಂದಿ ಶಿವಲಿಂಗದ ಆರಾಧನೆಯಿಂದ ಮುಕ್ತಿಯನ್ನು ಪಡೆದವರು. ೧೨ ಮಂದಿ ಜ್ಞಾನಿಗಳಾದ ಗುರುಗಳ ಅನುಗ್ರಹದಿಂದ ಮುಕ್ತಿಯನ್ನು ಪಡೆದವರು. ೧೯ ಮಂದಿ ಶಿವಭಕ್ತರ ಅನುಗ್ರಹದಿಂದ ಮುಕ್ತಿಯನ್ನು ಪಡೆದವರು. ಶಿವಧರ್ಮನಿಷ್ಠರಾದ ಈ ಸತ್ಪುರುಷರ ಪ್ರಭಾವವು ಕರ್ಣಾಟಕದ ವೀರಶೈವ ಸಮಾಜ ಮತ್ತು ಸಂಸ್ಕೃತಿಯ ಮೇಲೆ ವಿಪುಲವಾದ ಪರಿಣಾಮವನ್ನುಂಟು ಮಾಡಿತೆಂದು ತೋರುತ್ತದೆ. ವೀರಶೈವ ವಾಙ್ಮಯದಲ್ಲಿ ಇದಕ್ಕೆ ಬೇಕಾದಷ್ಟು ನಿದರ್ಶನಗಳಿವೆ. ಶಿವಶರಣರ ವಚನಗಳಲ್ಲಿ ಈ ಅರುವತ್ತುಮೂರು ಮಂದಿ ಪುರಾತನರ ಹೆಸರು ಮತ್ತು ಆದರ್ಶ ಅಡಿಗಡಿಗೆ ಉಲ್ಲೇಖಿಸಲ್ಪಟ್ಟಿವೆ. ವೀರಶೈವಧರ್ಮ ಪ್ರಚಾರಕ್ಕಾಗಿ ಕಂಕಣ ಕಟ್ಟಿದ ಶ್ರೀ ಬಸವೇಶ್ವರನೂ ಅವನ ಅನುಯಾಯಿಗಳಾದ ಅಸಂಖ್ಯಾತ ಶರಣರೂ ಕವಿಗಳೂ ಈ ತಮಿಳುನಾಡಿನ ಶರಣರನ್ನು ತಮ್ಮ ಆದರ್ಶ ಮೂರ್ತಿಗಳನ್ನಾಗಿ ಭಾವಿಸಿಕೊಂಡಿದ್ದರೆಂದು ತೋರುತ್ತದೆ.

ವೀರಶೈವ ವಚನಶಾಸ್ತ್ರದಲ್ಲಿ ಈ ಪುರಾತನರನ್ನು 'ಅಪ್ಪರು' 'ಪ್ರಮಥರು' ಎಂದು ಸಂಬೋಧಿಸಿದ್ದಾರೆ. "ಅಪ್ಪರ ವಚನ ಪರುಷ ಕಂಡಯ್ಯ" "ಅಪ್ಪರ ಅರುವತ್ತು ವಚನಕ್ಕೆ ಡಣ್ಣಾಯಕರ ಇಪ್ಪತ್ತು ವಚನ ಸಮ" "ಇಂತಪ್ಪ ಅಪ್ಪರ ವಚನವಿರಲು" "ಮುನ್ನಿನ ಅಪ್ಪರ ವಚನ ನೋಡಿರೋ" "ನಮ್ಮ ಪುರಾತನರ ವಚನಗಳನ್ನೆಲ್ಲ ಓದದೆ ಇದ್ದಾರೋ" "ಪ್ರಮಥರ ನುಡಿಯಲ್ಲಿ ಬೇಸರ ಬೀರದಿರು." ಶ್ರೀ ಬಸವೇಶ್ವರ, ಚೆನ್ನಬಸವೇಶ್ವರ, ದೇವರ ದಾಸಿಮಯ್ಯ, ಕಿನ್ನರಿ ಬ್ರಹ್ಮಯ್ಯ ಮೊದಲಾದವರ ವಚನಗಳಲ್ಲಿ ಈ ಬಗೆಯ ಪ್ರಯೋಗಗಳನ್ನು ನಾವು ಕಾಣಬಹುದು. ಇಲ್ಲಿ ಗಮನಾರ್ಹವಾದ ಸಂಗತಿಯೊಂದುಂಟು. ಅದೇನೆಂದರೆ ಕನ್ನಡನಾಡಿನ ದೇವರ ದಾಸಿಮಯ್ಯನೇ ಮೊದಲಾದ ವಚನಕಾರರಿಗೆ ತಮಿಳುನಾಡಿನ ಈ ಶಿವಭಕ್ತರ ನುಡಿಗಳು ಮಾರ್ಗದರ್ಶಕವೂ ಸ್ಫೂರ್ತಿದಾಯಕವೂ ಆಗಿದ್ದುವೆಂಬುದು.

ತಮಿಳು ಭಾಷೆಯಲ್ಲಿ ಜ್ಞಾನಸಂಬಂಧಿ, ವಾಗೀಶ, ಸುಂದರಮೂರ್ತಿ ಇತ್ಯಾದಿ ಶರಣರು 'ತೇವಾರ' ಎಂಬ ಪ್ರಬಂಧಗಳನ್ನು ಬರೆದು ಹಾಡಿದರೆಂಬುದು ಪ್ರಸಿದ್ಧವಾಗಿದೆ. ಭಕ್ತಿ ಪ್ರಧಾನ ಜೀವಿಗಳಾದ ಆ ಭಾವಿಕ ತಮಿಳರಿಗೆ ಈ 'ತೇವಾರ' ಎಂಬ ಸತ್ಪುರುಷರ ನುಡಿಗಳು ವೇದಕ್ಕೆ ಸಮಾನವಂತೆ! ಈ ಬಗ್ಗೆ ತಮಿಳರ ಪುರಾಣಗಳಲ್ಲಿ ಬೇಕಾದಷ್ಟು ಉಲ್ಲೇಖಗಳುಂಟು. ಆದುದರಿಂದ



CC-0. Jangamwadi Math Collection, Varanasi. An eGangotri Initiative

ಕನ್ನಡ ಸಾಹಿತ್ಯದಲ್ಲಿ ವಿಖ್ಯಾತವೆನಿಸಿದ ವಚನಶಾಸ್ತ್ರಕ್ಕೆ ತಮಿಳು ಸಾಹಿತ್ಯದ 'ತೇವಾರ'ಗಳು ಮಾರ್ಗದರ್ಶಕಗಳು ಎಂದು ಹಲವು ಮಂದಿ ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಈ ಅರುವತ್ತು ಮೂರು ಮಂದಿ ಪುರಾತನರು ಎಲ್ಲರೂ ತಮಿಳುನಾಡಿನಲ್ಲಿಯೇ ಹುಟ್ಟಿ ಬೆಳೆದವರು. ಆದರೆ ಒಂದೇ ಕಾಲ, ಒಂದೇ ಸ್ಥಳದಲ್ಲಿ ಹುಟ್ಟಿ ಬೆಳೆದವರಲ್ಲ. ಇವರ ಜೀವನ ಚರಿತ್ರೆಯನ್ನು ವಿಮರ್ಶಿಸಿದರೆ ಕೆಲವರು ಚಾರಿತ್ರಿಕ ವ್ಯಕ್ತಿಗಳಾಗಿಯೂ ಪರಿಣಮಿಸುತ್ತಾರೆ. ಕ್ರಿ. ಶ ಪ್ರಾರಂಭದಿಂದ ೯ನೆಯ ಶತಮಾನದವರೆಗೆ ಇವರುಗಳ ಜೀವನ ಕಾಲವಾಗಿರಬೇಕೆಂದು ವಿದ್ವಾಂಸರು ತರ್ಕಿಸುತ್ತಾರೆ. ತಮಿಳುನಾಡಿನ ಇವರು ಹುಟ್ಟಿದ ಸ್ಥಳಗಳಲ್ಲಿ ಇವರ ಜನ್ಮತಿಥಿಗಳಲ್ಲಿಯೇ ಈ ವಿಭೂತಿಗಳ ಜಯಂತಿಗಳನ್ನು ಆಚರಿಸುತ್ತಿದ್ದಾರೆ. ಆದುದರಿಂದ ನಾವು ಇವರ ಜನ್ಮಸ್ಥಳ, ಮತ್ತು ಕಾಲಗಳನ್ನು ತಕ್ಕಮಟ್ಟಿಗೆ ಊಹಿಸಬಹುದು.

ತಮಿಳು ಭಾಷೆಯಲ್ಲಿ ಸುಪ್ರಸಿದ್ಧವಾದ 'ಶೇಕ್ಕಿಲಾರ್' ಎಂಬ ಕವಿಯು 'ಪೆರಿಯ ಪುರಾಣ' ಎಂಬ ಹೆಸರಿನಿಂದ ಈ ಅರುವತ್ತುಮೂವರ ಚರಿತ್ರೆಯನ್ನು ವಿಸ್ತಾರವಾಗಿ ಬರೆದಿದ್ದಾನೆ. ಇವನು ತೊಂಡಮಂಡಲದ 'ಕುಂದ್ರತ್ತೂರು' ಎಂಬ ಗ್ರಾಮದವನೆಂದೂ ಅನಪಾಯ ಚೋಳ ರಾಜನ ಮಂತ್ರಿಯಾಗಿದ್ದನೆಂದೂ ಚಿದಂಬರ ಕ್ಷೇತ್ರದಲ್ಲಿ ಈ ಮಹಾ ಕಾವ್ಯವನ್ನು ಬರೆದನೆಂದೂ ತಿಳಿದುಬರುತ್ತದೆ. ಈ ಕವಿ ಸುಮಾರು ಕ್ರಿ. ಶ. ೯ ನೆಯ ಶತಮಾನದಲ್ಲಿ ಜೀವಿಸಿದ್ದನೆಂದು ಚರಿತ್ರೆಕಾರರು ಹೇಳುತ್ತಾರೆ. ಇವನ ಕಾಲದಿಂದೀಚೆಗೆ ತಮಿಳಿನಲ್ಲಿ ಈ ಅರುವತ್ತುಮೂವರ ಬಗ್ಗೆ ಹಲವು ಮಂದಿ ಕವಿಗಳು ಗ್ರಂಥಗಳನ್ನು ಬರೆದಿದ್ದಾರೆ. ಆದರೆ ಅವರೆಲ್ಲರೂ "ಪೆರಿಯ ಪುರಾಣ ಅಥವಾ ತಿರುತ್ತೊಂಡರ್ ಪುರಾಣ" ಎಂಬ ಗ್ರಂಥವನ್ನೇ ಆಧಾರವಾಗಿ ಸ್ವೀಕರಿಸಿದಂತೆ ಹೇಳಿದ್ದಾರೆ. ಸಂಸ್ಕೃತ ಭಾಷೆಯಲ್ಲಿ ಉಪಮನ್ಯು ಮುನಿಯು 'ಭಕ್ತ ವಿಲಾಸಂ' ಎಂಬ ಹೆಸರಿನಿಂದ ಈ ಅರುವತ್ತು ಮೂವರ ಚರಿತ್ರೆಯನ್ನು ಬರೆದಿದ್ದಾನೆ. ಅದು ಲೈಂಗ್ಯ ಪುರಾಣದಲ್ಲಿ ಅಂತರ್ಭೂತವಾಗಿದೆ.

ಕನ್ನಡ ಸಾಹಿತ್ಯದಲ್ಲಿ ಸುಪ್ರಸಿದ್ಧರಾದ ಹಲವು ಮಂದಿ ವೀರಶೈವ ಕವಿಗಳು ಈ ಪುರಾತನರ ಬಗ್ಗೆ ಸ್ವತಂತ್ರವಾದ ಗ್ರಂಥಗಳನ್ನು ಬರೆದಿದ್ದಾರೆ. ಅಲ್ಲದೆ ವೀರಶೈವ ಮಹಾಪುರಾಣ, ಬಸವ ಪುರಾಣ, ಪ್ರೌಢರಾಯನ ಕಾವ್ಯ, ಶಿವತತ್ತ್ವ ಚಿಂತಾಮಣಿ, ಪಾಲ್ಕುರಿಕೆ ಸೋಮನಾಥ ಪುರಾಣ ಮೊದಲಾದ ಗ್ರಂಥಗಳಲ್ಲಿ ಈ ಅರುವತ್ತುಮೂವರ ಮಹಿಮೆಯು ಬಹಳವಾಗಿ ಕೊಂಡಾಡಲ್ಪಟ್ಟಿದೆ.

ವೀರಶೈವರ ಆದಿಮ ಕವಿಯಾದ ಹಂಪೆಯ ಹರೀಶ್ವರನು ( ಸುಮಾರು ೧೧೬೫ ) ತನ್ನ ರಘಟಾ ಪ್ರಬಂಧವೆಂಬ ಮಹಾಕಾವ್ಯದಲ್ಲಿ ಈ ಅರುವತ್ತುಮೂವರ ಚರಿತ್ರೆಯನ್ನು ವಿಸ್ತಾರವಾಗಿ ಹೇಳಿದ್ದಾನೆ. ಅದನ್ನು ಪುಲಿಗೆರೆಯ ಕವಿಚಕ್ರವರ್ತಿ ಸುರಂಗ ಎಂಬ ಮತ್ತೊಬ್ಬ ವೀರಶೈವ ಮಹಾ ಕವಿಯು ( ಸು. ೧೫೦೦ ) "ತ್ರಿಷಷ್ಠಿ ಪುರಾತನ ವಿಲಾಸಂ" ಎಂಬ ಹೆಸರಿನಿಂದ ಚಂಪೂ ರೂಪದಲ್ಲಿ ಬರೆದಿದ್ದಾನೆ. ಈ ಸುರಂಗ ಕವಿಗೆ ತಮಿಳಿನ ಪೆರಿಯ ಪುರಾಣವಾಗಲಿ, ಹರೀಶ್ವರನ ರಗಳೆಯ ಪ್ರಬಂಧವಾಗಲಿ ಪರಿಚಯವಿದ್ದಂತೆ ತೋರುವುದಿಲ್ಲ.

ಕಂದ॥ ಪದೆದೊದವಿರೆ ಲೈಂಗ್ಯಪುರಾ
ಣದೊಳಿರ್ದನಂತಭವನಿತ್ತ ವರಮತಿಯಿಂ ಭೂ ।
ವಿದಿತ ಪುರಾತನ ಚರಿತೆಯ
ನುದಿತೋತ್ಸವದಿಂ ಸುರಂಗವರದಂ ಪೇಳ್ದಂ ॥

(ಅ. ೧. ಪ. ೪೪)



CC-0. Jangamwadi Math Collection, Varanasi. An eGangotri Initiative

ಈ ಮೇಲೆ ಹೇಳಿದ ಪದ್ಯದಿಂದ ಕವಿ ಸುರಂಗನು ಲೈಂಗ್ಯ ಪುರಾಣದ ಉಪಮನ್ಯು ಮುನಿ ಕೃತ ಭಕ್ತ ವಿಲಾಸವನ್ನು ಅವಲಂಬಿಸಿ ತನ್ನ ಕಾವ್ಯವನ್ನು ಬರೆದನೆಂದು ನಿರ್ಧರಿಸಬಹುದು. ಈ ಮಹಾಕಾವ್ಯವು ಅತ್ಯಂತ ಪ್ರೌಢವಾಗಿಯೂ ಮೃದುಮಧುರಪದವಿಲಾಸಾಸ್ಪದವಾಗಿಯೂ ಸರಸಾಲಂಕಾರಸಂಶೋಭಿತವಾಗಿಯೂ ಇದೆ. *

ಕನ್ನಡ ಭಾಷೆಯಲ್ಲಿ "ಅರುವತ್ತುಮೂವರ ಪುರಾಣ" ಎಂಬ ಹೆಸರಿನ ಷಟ್ಪದೀ ಕಾವ್ಯವೊಂದಿದೆ. ಇದು ವಾರ್ಧಿಕ ಷಟ್ಪದಿಯಲ್ಲಿ ಬರೆಯಲ್ಪಟ್ಟಿದೆ. ಇದನ್ನು ಜಾಲೇಂದ್ರಪುರದ ಪಠನ ಶಾಲಾ ಮಹಾಧ್ಯಕ್ಷ ಬಸವಯ್ಯ ಎಂಬ ಮಾಹೇಶ್ವರನ ಪುತ್ರ 'ವೀರಭದ್ರ ಕವಿ' ಎಂಬಾತನು ನಾಗಭೂಷಣ ಶಿವಯೋಗಿಯ ಅಪ್ಪಣೆಯಂತೆ ಬರೆದಿದ್ದಾನೆ. "ಹರಿಹರದೇವರೊರೆದ ರಘಟಾ ಕಾವ್ಯವಾಧಾರ" ಎಂದು ಮಾತ್ರ ಕವಿ ಹೇಳಿರುವುದರಿಂದ ಇವನಿಗೆ ಹರೀಶ್ವರನ ಶಿವಶರಣರ ರಗಳೆಗಳ ಹೊರತು ಮಿಕ್ಕ ಪುರಾತನರ ಸಂಬಂಧವಾದ ಗ್ರಂಥಗಳ ಪರಿಚಯವಿದ್ದಂತೆ ತೋರುವುದಿಲ್ಲ.‡ ಚತುರ್ಮುಖ ಬೊಮ್ಮರಸನೆಂಬ ಮತ್ತೊಬ್ಬ ವೀರಶೈವ ಕವಿಯು ( ಸು. ೧೪೫೦ ) ಅರುವತ್ತು ಮೂರು ಮಂದಿ ಪುರಾತನರಲ್ಲಿ ಒಬ್ಬನಾದ ನಂಬಿಯಣ್ಣನ ವಿಚಾರವಾಗಿ 'ಸೌಂದರ ಪುರಾಣಂ' ಎಂಬ ಮತ್ತೊಂದು ಷಟ್ಪದಿ ಕಾವ್ಯವನ್ನು ಬರೆದಿದ್ದಾನೆ. ಕನ್ನಡನಾಡಿನಲ್ಲಿ ಸುಪ್ರಸಿದ್ಧ ತತ್ತ್ವ ಜ್ಞಾನಿಯೂ ಕವಿಯೂ ಎನಿಸಿದ ಶ್ರೀ ನಿಜಗುಣ ಶಿವಯೋಗಿಯು ( ಸು. ೧೬೦೦ ) "ಅರುವತ್ತು ಮೂವರ ತ್ರಿವಿಧಿ" ಎಂಬ ಹೆಸರಿನಿಂದ ಈ ಶರಣರ ಬಗ್ಗೆ ಇನ್ನೊಂದು ಗ್ರಂಥವನ್ನು ಬರೆದಿದ್ದಾನೆ. ಅಣ್ಣಾಜಿ ಕವಿ ( ಸು ೧೬೦೦ ) "ಸೌಂದರ ವಿಳಾಸ" ಎಂಬ ಗ್ರಂಥವನ್ನು ಬರೆದಿದ್ದಾನೆ. ಕಳಲೆ ನಂಜರಾಜನೂ ಕವಿ ಬಸವಪ್ಪ ಶಾಸ್ತ್ರಿಯೂ ಅರುವತ್ತುಮೂವರ ಸ್ತೋತ್ರಗಳನ್ನು ಬರೆದಿದ್ದಾರೆ.

ಇದುವರೆಗೆ ನಾವು ಹೇಳಿದ ಗ್ರಂಥಗಳು ರಗಳೆ, ಚಂಪು, ಷಟ್ಪದಿ, ತ್ರಿಪದಿ ಎಂಬ ಛಂದಸ್ಸಿನ ಪದ್ಯ ಕಾವ್ಯಗಳು. ಇತ್ತೀಚೆಗೆ ಹೊಸಗನ್ನಡದಲ್ಲಿಯೂ ಈ ಮಹಾತ್ಮರ ಬಗ್ಗೆ ಎರಡು ಗ್ರಂಥಗಳು ಪ್ರಕಟವಾಗಿವೆ. ೧೯೧೬ ರಲ್ಲಿ ಮದರಾಸಿನ ಶ್ರೀ ಎಸ್. ಸಿ. ಚೆನ್ನವೀರಪ್ಪ ಎಂಬುವರು 'ಪುರಾತನ ಭಕ್ತ ವಿಲಾಸ' ಎಂಬ ಹೆಸರಿನಿಂದ ತಮಿಳಿನ ಪೆರಿಯ ಪುರಾಣವನ್ನು ಕನ್ನಡಕ್ಕೆ ಭಾಷಾಂತರಿಸಿದ್ದಾರೆ. ಈ ಗ್ರಂಥವು ತಮಿಳು ತಿಳಿಯದ ಕನ್ನಡಿಗರಿಗೆ ಅತ್ಯಂತ ಉಪಯುಕ್ತವಾಗಿದೆ. ೧೯೩೧ ರಲ್ಲಿ ಹುಬ್ಬಳ್ಳಿಯ ಸುಪ್ರಸಿದ್ಧ ವ್ಯಾಪಾರಿಗಳೂ ಶಿವಶರಣ ಮಾರ್ಗಾನುಯಾಯಿಗಳೂ ಆದ ಶ್ರೀಮಾನ್ ಮಿರ್ಜಿ ಮಹಾರುದ್ರಪ್ಪನವರು "ಅರುವತ್ತುಮೂವರು ಪುರಾತನರು" ಎಂಬ ಹೆಸರಿನಿಂದ ಮತ್ತೊಂದು ಗ್ರಂಥವನ್ನು ಪ್ರಕಟಿಸಿದ್ದಾರೆ. ಇದನ್ನು ಸುರಂಗ ಕವಿಯ ತ್ರಿಷಷ್ಟಿ ಪುರಾತನರ ವಿಲಾಸವನ್ನು ಅವಲಂಬಿಸಿ ಬರೆದಂತೆ ಹೇಳಿದ್ದಾರೆ. ನಾವು ಇದುವರೆಗೆ ಹೇಳಿದ ಗ್ರಂಥಗಳಿಂದ ಈ ಅರುವತ್ತುಮೂವರ ಚರಿತ್ರೆಯನ್ನು ಕನ್ನಡಿಗರು ವಿಸ್ತಾರವಾಗಿ ತಿಳಿಯಬಹುದು.

ತಮಿಳಿನ ಪೆರಿಯ ಪುರಾಣದಲ್ಲಿರುವ ಈ ಪುರಾತನರಕಥೆ ಮತ್ತು ಹೆಸರುಗಳಿಗೂ ನಾವು ಹಿಂದೆ ಹೇಳಿದ ಕನ್ನಡ ಗ್ರಂಥಗಳಲ್ಲಿರುವ ಕಥೆ ಮತ್ತು ಹೆಸರುಗಳಿಗೂ ಬಹಳ ವ್ಯತ್ಯಾಸವಿದೆ.

* 'ತ್ರಿಷಷ್ಟಿ ಪುರಾತನ ವಿಲಾಸಂ' ಎಂಬ ಈ ಮಹಾ ಕಾವ್ಯವನ್ನು ೧೯೦೩ ರಲ್ಲಿ ಕೈ. ದಾವಣಗೆರೆ ದಾನಪ್ಪಶಾಸ್ತ್ರಿಗಳು ಮುದ್ರಣ ಮಾಡಿಸಿರುತ್ತಾರೆ. ಈಗ ಇದರ ಪ್ರತಿಗಳು ಸಿಗುವುದು ದುರ್ಲಭವಾಗಿದೆ.

‡ ಈ ಕವಿಯ ಗ್ರಂಥ 'ಶರಣಸಾಹಿತ್ಯ' ಕಾರ್ಯಾಲಯದಲ್ಲಿದೆ. ಕವಿಚರಿತ್ರೆಯಲ್ಲಿ ಈ ಹೆಸರು ತೋರಿಬರುವುದಿಲ್ಲ.



CC-0. Jangamwadi Math Collection, Varanasi. An eGangotri Initiative

ಹೀಗಾಗಲು ಕನ್ನಡ ಕವಿಗಳಾದ ಹರೀಶ್ವರ, ಸುರಂಗ, ವೀರಭದ್ರ ಮತ್ತು ನಿಜಗುಣ ಎಂಬುವರು ತಮಿಳಿನ ಪೆರಿಯ ಪುರಾಣವನ್ನು ಅವಲಂಬಿಸಿ ಬರೆಯದೆ ಸಂಸ್ಕೃತ ಭಕ್ತ ವಿಲಾಸವನ್ನೇ ಆಧಾರವಾಗಿಟ್ಟುಕೊಂಡು ಬರೆದುದು ಕಾರಣವೆಂದು ತೋರುತ್ತದೆ. ದ್ರಾವಿಡದ ಪೆರಿಯ ಪುರಾಣ, ಸಂಸ್ಕೃತದ ಭಕ್ತ ವಿಲಾಸ, ಕನ್ನಡದ ತ್ರಿಷಷ್ಟಿ ಪುರಾತನ ವಿಲಾಸಗಳಲ್ಲಿ ಈ ಅರುವತ್ತುಮೂವರು ಪುರಾತನರ ಹೆಸರುಗಳು ಹೇಗೆ ರೂಪಾಂತರವಾಗಿವೆಯೆಂಬುದನ್ನು ಈ ಮುಂದಿನ ಪಟ್ಟಿಯಿಂದ ವಾಚಕರು ಸುಲಭವಾಗಿ ತಿಳಿಯಬಹುದು.

| | ತಮಿಳು | ಸಂಸ್ಕೃತ | ಕನ್ನಡ |
|---|---|---|---|
| ೧. | ಸುಂದರಮೂರ್ತಿ | ಸುಂದರಃ | ಸೌಂದರನಂಬಿ |
| ೨. | ತಿರುನೀಲಕಂಠ | ತಿರುನೀಲಕಂಠಃ | ತಿರುನೀಲಕಂಠ |
| ೩. | ಇಯಪಗೈ | ಭಕ್ತೇಂಗಿತ ಪ್ರದಃ | ಇಹಪ್ಪಗೆಯಾಂಡ |
| ೪. | ಇಳೈಯಾರ್ ಕುಡಿಮಾರ | ಮಾರಃ | ಎಳೆಯಾಂಡ ಗುಡಿಮಾರ |
| ೫. | ಮೆಯ್‌ಪ್ಪೊರುಳ್ | ಸತ್ಯಾರ್ಥಃ | ಸೇದಿರಾಜಯ್ಯ |
| ೬. | ವಿರ್ಱ ಮಿಂಡ | ವೀರ ಮಂಡಃ | ಮೆರೆ ಮಿಂಡದೇವ |
| ೭. | ಅಮರ್ ನೀತಿ | ಅಮರನೀತಿಃ | ಅಮರ ನೀತಿ |
| ೮. | ಎರಿ ಭಕ್ತ | ದಾಹಕಃ | ಇರಿ ಭಕ್ತರು |
| ೯. | ಏನಾದಿ | ಏನಾದಿನಾಥಃ | ಏಣಾದಿನಾಥ |
| ೧೦. | ಕಣ್ಣಪ್ಪ | ಧೀರಃ | ಕಣ್ಣಪ್ಪದೇವರು |
| ೧೧. | ಕುಂಗುಲಿಯಕ್ಕಲಯ | ಕಲಾನಾಥಃ | ಕುಂಗಲಿಕಲಿಯಾಂಡರು |
| ೧೨. | ಮಾನಕ್ಕಂಜಾರ್ | ಮಾನವಿಕ್ರಮಃ | ಮಾನಕಂಜರು |
| ೧೩. | ಅರಿವಾಟ್ಟಾಯ | ಶಾಕುಲಾದಯಃ | ಅರಿವಾಳ್ತಾಂಡರು |
| ೧೪. | ಆನಾಯ | ಗೋನಾಥಃ | ಆನ್ನೈನಾರರು |
| ೧೫. | ಮೂರ್ತಿನಾಯನಾರ್ | ಮೂರ್ತಿನಾಥಃ | ವಲಘಂಡಮೂರ್ತಿಗಳು |
| ೧೬. | ಮುರುಗರ್ | ಸ್ಕಂದನಾಥಃ | ಮುರುಘರು |
| ೧೭. | ರುದ್ರ ಪಶಪತಿ | ರುದ್ರ ಪಶುಪತಿಃ | ರುದ್ರ ಪಶುಪತಿಗಳು |
| ೧೮. | ತಿರುನಾಳೆಯ್‌ಪ್ಪೊವಾರ್ | ನಂದಃ | ತಿರುನಾಳ್ಪೋವರು |
| ೧೯. | ತಿರುಕ್ಕರಿಪ್ಪತ್ತೊಂಡ | ಭಕ್ತೇಂಗಿತ ಪ್ರಿಯಃ | ತಿರುಕುರುಪಿ ತೊಂಡರು |
| ೨೦. | ಚಂಡೇಶ್ವರ | ಚಂಡೇಶ್ವರಃ | ಚಂಡೇಶರು |
| ೨೧. | ತಿರುನಾವುಕ್ಕರಶು | ವಾಗೀಶಃ | ವಾಗೀಶ್ವರರು |
| ೨೨. | ಕುಲಚ್ಚಿರೆಯ್ | ಮೂಲ ಬಂಧಃ | ಕುಲಚ್ಚರಿಯರು |
| ೨೩. | ಪೆರುಮಿಳಿಲೆಯ್ ಕುರುಂಬ | ಕುರುಂಬಃ | ಪಿರುಮಳಲೆ ಕುರುಂಬರು |
| ೨೪. | ಕಾರೆಯ್ ಕಾಲಮ್ಮೈ | ಪುನೀತವತೀ | ಕಾರಿಕಾಲಮ್ಮೆ |
| ೨೫. | ಅಪ್ಪೂದಿಯಡಿಗಳ್ | ಅದ್ಭುತಃ | ಅಪ್ಪೂದಿಯಡಿಗಳು |



CC-0. Jangamwadi Math Collection, Varanasi. An eGangotri Initiative

| | ತೆಮಿಳು | ಸಂಸ್ಕೃತ | ಕನ್ನಡ |
|---|---|---|---|
| ೨೬. | ತಿರುನೀಲನಕ್ಕ | ನೀಲನಗ್ನಃ | ತಿರುನೀಲನಕ್ಕರು |
| ೨೭. | ನಮಿನಂದಿಯಡಿಗಳ್ | ನವನಂದಿಃ | ನಮಿನಂದಿ ಮಹೇಶ್ವರ |
| ೨೮. | ತಿರುಜ್ಞಾನಸಂಬಂಧಮೂರ್ತಿ | ಜ್ಞಾನ ಸಂಬಂಧಃ | ಪಿಳ್ಳೈನೈನಾರ್ ತಿರುಜ್ಞಾನ ಸಂಬಂಧಿ |
| ೨೯. | ಏಯರ್‌ಕೋ‌ನ್ ಕಲಿಕಾಮ | ಕಲಿಕಾಮಃ | ಕಲಿಕಾಮದೇವರು |
| ೩೦. | ತಿರುಮೂಲ | ಮೂಲನಾಥಃ | ತಿರುಮೂಲದೇವರು |
| ೩೧. | ದಂಡಿಯಡಿಗಳ್ | ದಂಡಿನಃ | ನಾಟ್ಯ ಮಹತ್ತಂಡಿ |
| ೩೨. | ಮೂರ್ಖ | ಮೂರ್ಖಃ | ಅಚ್ಚುತರು |
| ೩೩. | ಸೋಮಾಸೀಮಾರ | ಮಾರಸೋಮಯ್ಯಾಜಿಃ | ಸೋಮಾಸೀಮಾರರು |
| ೩೪. | ಶಾಕ್ಯನಾಯನಾರ್ | ಶಾಕ್ಯನಾಥಃ | ಸಾಂಖ್ಯತೊಂಡ |
| ೩೫. | ಶಿರುಪ್ಪಲಿ | ನರಶಾರ್ದೂಲಃ | ಚಿರುಪುಲಿಯಾಂಡರು |
| ೩೬. | ಶಿರುತ್ತೊಂಡ | ದಭ್ರ ಭಕ್ತಃ | ಚರುತೊಂಡ ಭಕ್ತರು |
| ೩೭. | ಚೇರಮಾನ್ ಪೆರುಮಾಳ್ | ಚೇರನಾಥಃ | ಚೇರಮರಾಜರು |
| ೩೮. | ಗಣನಾಥ | ಗಣನಾಥಃ | ಗಣನಾಥಮಾಹೇಶ್ವರ |
| ೩೯. | ಕೂತ್ತುವ | ನರ್ತಕಃ | ವೆಳ್ಕೂತರು |
| ೪೦. | ಪುಗಳ್ಚೋಳ | ಧರ್ಮಕೇತನಃ | ಪಗಲ್ಚೋಳ |
| ೪೧. | ನರಸಿಂಗಮುನಯ್ಯರಯ್ಯ | ನರಸಿಹ್ಮಃ | ನರಸಿಂಗಮೊನೆಯರು |
| ೪೨. | ಅತಿಭಕ್ತ | ಅತಿಭಕ್ತಃ | ಅತಿಭಕ್ತಮಾಹೇಶ್ವರ |
| ೪೩. | ಕಲಕ್ಕಂಬ | ಕಲಿಕಂಪಃ | ಕಲಿಕಂಬ ಮಹೇಶ್ವರ |
| ೪೪. | ಕಲಿಯನಾಯನಾರ್ | ಕಲಿನೀತಿಃ | ಕಲಿಯನಾಯನಾರರು |
| ೪೫. | ಶಕ್ತಿನಾಯನಾರ್ | ಶಕ್ತಿಃ | ಕಳಚಿತ್ತಿಯಾಂಡರು |
| ೪೬. | ಐಯ್ಯಡಿಗಳ್ | ಪಂಚಪಾದಃ | ಐಯ್ಯಡಿಗಳು |
| ೪೭. | ಕಣಂಪುಲ್ಲ | ಮಾಲಾತೃಣಕಃ | ಕಣಂಬುಲ್ಲ ನಂಬಿಗಳು |
| ೪೮. | ಕೇರಿ ನಾಯನಾರ್ | ಅವಿಕಾರಿಃ | ಕಡಪೂರಕಾರಿಗಳು |
| ೪೯. | ನೆಡುಮಾರ | ಕುಬ್ಜ ಪಾಂಡ್ಯಃ | ಸೌಂದರಪಾಂಡ್ಯ |
| ೫೦. | ವಾಯಿಲಾರ್ | ವಾಯುಲಃ | ವಾಹಿಲ್ಯರು |
| ೫೧. | ಮುನಯ್ಯಡುವಾರ್ | ಶೂರಭಿತ್ | ಮೊನೆಯಾಂಡರು |
| ೫೨. | ಕಳರ್‌ಸಿಗ | ಸಿಹ್ಮಾಂಗಃ | ಕುಲಚಂಗಮಾಹೇಶ್ವರ |
| ೫೩. | ಇಡಂಗರಿ ನಾಯನಾರ್ | ಐಡಂಕಃ | ಅಡವಳೆಯ ಪೆರುಮಾಳರು |
| ೫೪. | ಶರುತ್ತುಣೈ | ಯುದ್ಧ ಮಿತ್ರಃ | ಚಿರುತೊಣೆಯಾಂಡರು |
| ೫೫. | ಪುಗಳ್‌ತ್ತುಣೈ | ಕೀರ್ತಿ ಸಖ್ಯಃ | ಪಗಲ್‌ತೊಣೆಯಾಂಡರ್ |
| ೫೬. | ಕೋಟ್ಪುಲಿ | ಶೂರ ವ್ಯಾಘ್ರಃ | ಕೊಲ್ಪುಲಿಯಾಂಡರು |



CC-0. Jangamwadi Math Collection, Varanasi. An eGangotri Initiative

| | ತಮಿಳು | ಸಂಸ್ಕೃತ | ಕನ್ನಡ |
|---|---|---|---|
| ೫೭. | ಪೂಶಲಾರ್ | ಶಂಬುಧ್ಯಾಯನಃ | ಊರ್ಪಶಿಲೆಯಾಂಡರ್ |
| ೫೮. | ಮಂಗಯ್ಯಕ್ಕರಿಸಿ | ಮಹಿಳೇಶ್ವರೀ | ಮಾಂಗಾಯಕ್ಕಾ |
| ೫೯. | ನೇಶನಾಯನಾರ್ | ಭಕ್ತಪ್ರಿಯಃ | ನೈಷಭಕ್ತರು |
| ೬೦. | ಕೊಚ್ಚಂಗಣ್ ಚೋಳ | ಲೋಹಿತಾಕ್ಷಃ | ಕಳಚಂಗುಪೆರುಮಾಳೆ |
| ೬೧. | ಪೂಪ್ಪಾಣನಾಯನಾರ್ | ತಿರುನೀಲಕಂಠಯಾಪ್ಪಾರ್ | ತಿರುನೀಲಕಂಠಪಾಣರು |
| ೬೨. | ಶಡಯ್ಯನಾಯನಾರ್ | ಜಟಿಲಃ | ಜಡೆಯ ನೈನಾರರು |
| ೬೩. | ಇಶೈಜ್ಞಾನಿಯಮ್ಮೈ | ಜ್ಞಾನವತೀ | ಯಸ್ಯ ಜ್ಞಾನಿ |

ಈ ಅರುವತ್ತುಮೂವರಲ್ಲಿ ೨ ಮಂದಿ ಸ್ತ್ರೀಯರು, ೧೮ ಮಂದಿ ಬ್ರಾಹ್ಮಣರು, ೧೨ ಮಂದಿ ಕ್ಷತ್ರಿಯರು, ೫ ಮಂದಿ ವೈಶ್ಯರು, ಒಬ್ಬ ಪಂಚಮ, ( ಹೊಲೆಯರು ) ಉಳಿದವರು ೨೪ ಮಂದಿ ಶೂದ್ರರು ಎಂದು ಪುರಾತನರ ಚರಿತ್ರೆಗಳನ್ನು ವಿಮರ್ಶಿಸುವುದರಿಂದ ತಿಳಿದುಬರುತ್ತದೆ.

ವೀರಶೈವ ಸಂಸ್ಕೃತಿಯ ಮೇಲೆ ಈ ಅರುವತ್ತುಮೂವರು ಶಿವಭಕ್ತರ ಪ್ರಭಾವವು ಚೆನ್ನಾಗಿ ಬಿದ್ದಿದೆಯೆಂದು ಈ ಹಿಂದೆಯೇ ಹೇಳಿದೆಯಷ್ಟೆ? ಅದಕ್ಕೆ

೧. ವೀರಶೈವ ಸಾಹಿತ್ಯದಲ್ಲಿನ ಕುರುಹುಗಳು.

೨. ವೀರಶೈವ ಸಮಾಜದಲ್ಲಿನ ಆಚಾರಗಳು.

ಎಂಬ ಎರಡು ಬಗೆಯ ಪ್ರಮಾಣಗಳನ್ನು ಕೊಡಬಹುದು. ಈ ಹಿಂದೆ ಹೇಳಿದಪ್ರಕಾರ ಪ್ರಸಿದ್ಧರಾದ ೪ ಮಂದಿ ಪ್ರಾಚೀನ ವೀರಶೈವ ಕವಿಗಳೂ ಆಧುನಿಕರಾದ ಇಬ್ಬರು ಲೇಖಕರೂ ಈ ಮಹನೀಯರ ಬಗ್ಗೆ ಗ್ರಂಥಗಳನ್ನು ಬರೆದಿದ್ದಾರೆಂದು ವಿದಿತವಾಗಿದೆ. ಷಡಕ್ಷರದೇವ, ಪಂಡಿತಾರಾಧ್ಯ, ಗುಬ್ಬಿಯ ಮಲ್ಲಣಾರ್ಯ, ಮರಿ ತೋಂಟದಾರ್ಯ ಮೊದಲಾದ ಸುಪ್ರಸಿದ್ಧ ವೀರಶೈವ ಕವಿಗಳು ತಮ್ಮ ಕಾವ್ಯಗಳಲ್ಲಿ ಇವರನ್ನು ಭಕ್ತಿಯಿಂದ ಕೊಂಡಾಡಿದ್ದಾರೆ. ನಾವು ಹಿಂದೆಯೇ ಹೇಳಿದಂತೆ ಹಲವು ಮಂದಿ ವಚನಕಾರರು ಇವರ ಹೆಸರನ್ನು ಅತ್ಯಂತ ಗೌರವದಿಂದ ಎತ್ತಿ ಹಾಡಿದ್ದಾರೆ. ಮಹಾತ್ಮನಾದ ನಿಜಗುಣ ಶಿವಯೋಗಿಯು—

> ಉತ್ತಮ ಗಣೇಶ್ವರರ ಮೊತ್ತದೊಳು ನಿಜಕೀರ್ತಿ ।
> ವೆತ್ತ ಮಹಿಮೆಗಳನೊಳಗೊಂಡ ಶರಣರರು ।
> ವತ್ತುಮೂವರನು ಪೊಗಳುವೆಂ ॥

ಎಂದು ಅತ್ಯಂತ ಭಕ್ತಿಭಾವದಿಂದ ಇವರನ್ನು ಕೊಂಡಾಡಿದ್ದಾನೆ. ಅಲ್ಲದೆ “ ಮಿಸುನಿಯೆ ತೊಡವೆನಿಸಿ ಬಹು ಪೆಸರದಳೆದಂತೆ” ಈ ಮಹಾತ್ಮರಾದ ಶಿವಭಕ್ತರು “ ಅಭವನ ಅಖಿಲರು ” ಎಂದೂ “ ಶರಣರಂ ಪರ್ವತೀಶ್ವರನಿಗಿಂದಧಿಕ ” ವೆಂದು ಆಗಮವು ಒರೆವುದೆಂದೂ ನಿರೂಪಿಸಿದ್ದಾನೆ. ಇವರ ಚರಿತ್ರೆಯನ್ನು ಬರೆದೋದಿ ಕೇಳುವುದು ಪುಣ್ಯಪ್ರದವೆಂಬುವನ್ನು—

> ಶರಣರರುವತ್ತುಮೂವರ ಮಹಿಮೆಗಳನಿಂತು ।
> ಬರೆದೋದಿ ಕೇಳಿ ಪೇಳ್ದರ್ಗೆ ನಿಜಸುಖಂ ।
> ದೊರೆವುದಿಹಪರದೊಳಿದು ಸಿದ್ಧ ॥

ಎಂದೂ ಸಿದ್ಧಾಂತ ಮಾಡಿ ಹೇಳಿದ್ದಾನೆ.



CC-0. Jangamwadi Math Collection, Varanasi. An eGangotri Initiative

ವೀರಶೈವ ಸಮಾಜದಲ್ಲಿ ಅರುವತ್ತುಮೂವರ ಮಂಟಪದ ಪೂಜೆ, ಏಕಾದಶ ರುದ್ರರ ಪೂಜೆ, ಏಳುನೂರೆಪ್ಪತ್ತು ಅಮರಗಣಂಗಳ ಪೂಜೆ ಇತ್ಯಾದಿ ಕೆಲವು ಧಾರ್ಮಿಕ ಉತ್ಸವಗಳು ನಡೆಯುತ್ತವೆ. ಏಕಾದಶ ರುದ್ರರು ಕೈಲಾಸದ ಪ್ರಮಥರು. ಏಳುನೂರೆಪ್ಪತ್ತು ಅಮರಗಣಂಗಳು ವೀರಶೈವ ಧರ್ಮದ ಉನ್ನತಿಗಾಗಿ ಹೆಣಗಾಡಿದ ವೀರ ಮಾಹೇಶ್ವರರು. ಆದುದರಿಂದ ಆ ಪ್ರಮಥರೂ ಈ ಮಾಹೇಶ್ವರರೂ ಎಂದೆಂದಿಗೂ ವೀರಶೈವ ಸಮಾಜಕ್ಕೆ ಪೂಜ್ಯರೆಂಬ ಬಗ್ಗೆ ಯಾರಿಗೂ ಭಿನ್ನಾಭಿಪ್ರಾಯವಿಲ್ಲ.

ಆದರೆ ಅರುವತ್ತುಮೂವರು ಪುರಾತನರು ಶಿವಭಕ್ತಿಯಿಂದ ಪ್ರಸಿದ್ಧರಾದವರೇ ಹೊರತು ಅವರಲ್ಲಿ ಯಾವನೊಬ್ಬನೂ ವೀರಶೈವನಾಗಿದ್ದಂತೆ ತಿಳಿದುಬರುವುದಿಲ್ಲ. ಅವರೆಲ್ಲರೂ ಸ್ಥಾವರ ಲಿಂಗದ ಉಪಾಸಕರೆಂದು ಅವರ ಚರಿತ್ರೆಗಳಿಂದ ತಿಳಿದುಬರುತ್ತದೆ.* ಅಂದಮೇಲೆ ವೀರಶೈವ ಸಿದ್ಧಾಂತದ ಪ್ರಕಾರ ಸ್ಥಾವರಾದಿ ಲಿಂಗಪೂಜೆಯೂ ಲಿಂಗರಹಿತರಾದವರನ್ನು ಪೂಜಿಸುವುದೂ ಸಮ್ಮತವಾಗುವುದಿಲ್ಲ. ಆದುದರಿಂದ ಈ ಅರುವತ್ತುಮೂವರ ಪೂಜೆಯ ರಹಸ್ಯವೇನೆಂಬ ಪ್ರಶ್ನೆ ನಮ್ಮ ಮುಂದೆ ನಿಲ್ಲುತ್ತದೆಯಲ್ಲವೇ ?

ವಿರೋಧಾಭಾಸಾಲಂಕಾರದಂತೆ ತೋರುವ ಈ ಸಮಸ್ಯೆಯ ಪರಿಹಾರವನ್ನು ಈ ಮುಂದೆ ಸಂಗ್ರಹಿಸಲಾಗಿದೆ. ವೀರಶೈವಮತವು ಶೈವಧರ್ಮದ ಒಂದು ಶಾಖೆ. ಶೈವ ಧರ್ಮವು ಸನಾತನ ಅಥವಾ ಹಿಂದೂ ಧರ್ಮದ ಒಂದು ಭಾಗ ಆದುದರಿಂದ ಮೂಲ ಧರ್ಮದ ಸಂಸ್ಕಾರ ಪ್ರಭಾವವು ಅವರ ಶಾಖೋಪಶಾಖೆಗಳ ಮೇಲೆ ಬೀಳುವುದು ಸ್ವಾಭಾವಿಕ. ವೀರಶೈವ ಸಿದ್ಧಾಂತದ ಪ್ರಕಾರ ವರ್ಣಾಶ್ರಮ, ಉಚ್ಚ, ನೀಚ ಭೇದಗಳು ಇಲ್ಲದೆ ಶಿವದೀಕ್ಷಾ ಸಂಪನ್ನನಾದ ಪ್ರತಿಯೊಬ್ಬ ಭಕ್ತನೂ ಮೋಕ್ಷಾಧಿಕಾರಿಯೆಂಬ ಭಾವವು ಸ್ಪಷ್ಟವಾಗುತ್ತದೆ. ಆದುದರಿಂದ ವೀರಶೈವ ಸಿದ್ಧಾಂತವು ಕರ್ಮ, ಜ್ಞಾನಕ್ಕಿಂತಲೂ ಭಕ್ತಿಗೆ ಹೆಚ್ಚು ಪ್ರಾಮುಖ್ಯತೆಯನ್ನು ಕೊಡುತ್ತದೆ. ಭಕ್ತಿಯೋಗಿಯು ಮಾನವನ ಗುಣಶೀಲಗಳನ್ನೂ ಜೀವನದ ಪರಿಣಾಮವನ್ನೂ ಗಮನಿಸುವುದೇ ಹೊರತು-ಇತರ ಕೆಲವು ಹಿಂದೂ ಮತಗಳಂತೆ ಜನ್ಮ, ಲಿಂಗ ಮೊದಲಾದ ಕಿರುಕಳ ವಿಷಯಗಳನ್ನು ಗಮನಿಸುವುದಿಲ್ಲ. ಅದು ಕಾರಣ ಕುಲ, ಜಾತಿ, ಪಂಥಗಳ ಜಂಜಡದಲ್ಲಿ ಸಿಕ್ಕಿ ಸಂಕಟಪಡುತ್ತಿದ್ದ ಹಿಂದೂ ಜನರನ್ನು ಉದ್ಧರಿಸಲು ಕರುಣೆಯಿಂದ ಧರ್ಮಪ್ರಚಾರ ಕಾರ್ಯವನ್ನು ಕೈಕೊಂಡ ಬಸವೇಶ್ವರ, ಹರೀಶ್ವರ, ದಾಸಿಮಯ್ಯ ಮುಂತಾದ ವೀರಶೈವ ಮಹಾತ್ಮರಿಗೆ ವೀರಶೈವ ಸಿದ್ಧಾಂತಕ್ಕೆ ಬಲುಮಟ್ಟಿಗೆ ಸರಿಹೊಂದುವ ಈ ಅರುವತ್ತು ಮೂವರ ಚರಿತ್ರೆಯು ಸ್ಫೂರ್ತಿಯನ್ನುಂಟುಮಾಡಿದುದು ಸ್ವಾಭಾವಿಕವೇ ಆಗಿದೆ. ಬಸವೇಶ್ವರಾದಿ ಶರಣರಿಗೂ, ಹರೀಶ್ವರಾದಿ ಕವಿಗಳಿಗೂ, ನಿಜಗುಣಾದಿ ಶಿವಯೋಗಿಗಳಿಗೂ ಪೂಜ್ಯರೆನಿಸಿದ ಈ ಅರುವತ್ತು ಮೂವರು ಅಖಿಲ ವೀರಶೈವ ಸಮಾಜಕ್ಕೂ ಮಾನ್ಯರೆನಿಸಿದುದರಲ್ಲಿ ಆಶ್ಚರ್ಯವೇನು? ಮತ್ತೊಂದು ದೃಷ್ಟಿಯಿಂದ ವಿಚಾರಿಸಿದರೆ ವೀರಶೈವ ಮತಸ್ಥಾಪಕರ ಮನಸ್ಸಿನ ಮೇಲೆ ಈ ಪುರಾತನರ ಚರಿತ್ರೆ ಹಾಗೂ ಬೋಧೆಯು ಒಂದು

---

* ಈ ಅರುವತ್ತುಮೂವರು ಪುರಾತನರಲ್ಲಿ ಎಂಟು ಮಂದಿ ಮಾತ್ರ ವೀರಶೈವರಾಗಿದ್ದಾರೆಂದು ಮಿ॥ ಇ. ಪಿ. ರೈಸ್‌ರವರು ಹೇಳಿದ್ದಾರೆ.

"Of the former all are Saivas, only eight are Veerashaivas." Page 51. "History of Kanarese Literature"



CC-0. Jangamwadi Math Collection, Varanasi. An eGangotri Initiative

ಬಗೆಯ ಭಾಕ್ತಿಕ ಪರಿಣಾಮವನ್ನು ಉಂಟುಮಾಡಿದೆಯೆಂದು ತೋರುತ್ತದೆ. ಮಹಾರಾಷ್ಟ್ರದ ವಾಲ್ಕರೀಪಂಥ, ಬಂಗಾಲದ ಚೈತನ್ಯಪಂಥ, ಮಧ್ಯಹಿಂದುಸ್ಥಾನದ ಕಬೀರಪಂಥ ಮುಂತಾದ ಭಕ್ತಿಸಂಪ್ರದಾಯಗಳ ಸ್ಥಾಪಕರಿಗೂ ಈ ತಮಿಳು ನಾಡಿನ ಅರುವತ್ತು ಮೂವರ ಭಾಕ್ತಿಕ ಚಳವಳಿಯು ಮೂಲಭೂತವಾಗಿದೆಯೆಂದು ಕೆಲವು ವಿದ್ವಾಂಸರು ತರ್ಕಿಸುತ್ತಾರೆ. ಆದುದರಿಂದ ವೀರಶೈವ ಸಮಾಜದಲ್ಲಿನ ಮಂಟಪ ಪೂಜಾದಿಗಳು ಈ ಹಿಂದೆ ಹೇಳಿದ ಕಾರಣಗಳಿಂದಲೇ ಬಳಕೆಗೆ ಬಂದಿರಬೇಕೆಂದು ತೋರುತ್ತದೆ.

ಪರಿಶುದ್ಧ ಚರಿತ್ರರೂ ಪರೋಪಕಾರಿಗಳೂ ಭಕ್ತಿಜ್ಞಾನವೈರಾಗ್ಯಸಂಪನ್ನರೂ ಕುಲಜಾತಿ ಪಂಥಗಳ ಗಡಿಬಿಡಿಯನ್ನು ಮೀರಿ ತಮ್ಮ ಸರಳವೂ ಸುಲಭವೂ ಶುಭ್ರವೂ ಆದ ಮಾರ್ಗದಿಂದ ನಡೆದು ಮೋಕ್ಷವನ್ನು ಪಡೆದವರೂ ವೀರಶೈವ ಧರ್ಮೋದ್ಧಾರಕರಿಗೂ ಉತ್ತರ ಹಿಂದುಸ್ಥಾನದ ಭಕ್ತಿ ಪಂಥಸ್ಥಾಪಕರಿಗೂ ಮಾರ್ಗದರ್ಶಕರೂ ಪುಣ್ಯಶ್ಲೋಕರೂ ಆದ ಈ ಅರುವತ್ತು ಮೂರು ಮಂದಿ ಪುರಾತನರ ಚರಿತ್ರೆ, ಬೋಧೆ, ಮತ್ತು ಪೂಜಾದಿಗಳು ಹಿಂದುವೆನಿಸಿದ ಯಾವನಿಗೆ ತಾನೇ ಮಾನ್ಯವೆನಿಸುವುದಿಲ್ಲ?

ಅರುವತ್ತುಮೂರು ಮಂದಿ ಪುರಾತನರ ವಿಚಾರವನ್ನು ಹೇಳುವಾಗ ಮತ್ತೊಂದು ಮಹತ್ತ್ವದ ವಿಚಾರವನ್ನು ವಾಚಕರ ಗಮನಕ್ಕೆ ತರುವುದು ಅವಶ್ಯವೆನಿಸಿದೆ. ಈ ಅರುವತ್ತುಮೂವರ ಪರಂಪರೆಯು ಹಿಂದೂ ಜನರಲ್ಲಿ ಅತ್ಯಂತ ಪ್ರಾಚೀನಕಾಲದಿಂದ ನಡೆದುಬಂದಂತೆ ತೋರುತ್ತದೆ. ಹಿಂದೂ ಧರ್ಮದ ಒಂದಂಗವಾದ ಜೈನಮತದಲ್ಲಿ "ತ್ರಿಷಷ್ಠಿ ಶಲಾಕಾ ಪುರುಷರು" ಎಂಬ ಹೆಸರಿನ ಅರುವತ್ತುಮೂರು ಮಂದಿ ಧಾರ್ಮಿಕ ಪುರುಷರು ಅತ್ಯಂತ ಮಾನ್ಯರೆನಿಸಿದ್ದಾರೆ. ಭಾರತೀಯ ತತ್ತ್ವಜ್ಞಾನದ ಬುನಾದಿಯೆನಿಸಿದ ಋಗ್ವೇದದಲ್ಲಿ "ತ್ರಿಃ ಷಷ್ಠಿಃ ತ್ವಾ ಮರುತಃ" ಎಂಬ ವಾಕ್ಯ ಹೊಂದಿದೆ. ಇದು ಅರುವತ್ತುಮೂರು ಮಂದಿ ಮರುತರು ಎಂಬ ಅರ್ಥವನ್ನು ಬೋಧಿಸುತ್ತದೆ. ವೈದಿಕ ಋಷಿಯೊಬ್ಬನು "ಆಕಳ ಹಿಂಡಿನಂತೆ ತ್ರಿಷಷ್ಠಿಗಣಗಳು ನಮಗೆ ಪೂಜ್ಯರಾಗಿದ್ದಾರೆ" ಎಂದು ಪುರಾತನರಿಗೆ ತಲೆಬಾಗಿದ್ದಾನೆ. ಈ ಎಲ್ಲ ವಿಚಾರಗಳಲ್ಲಿಯ ಇತಿಹಾಸಪಂಡಿತರು ಚೆನ್ನಾಗಿ ಸಂಶೋಧಿಸಬೇಕಾದ ವಿಚಾರ ಬಹಳವಿದೆ. ಈ ಅರುವತ್ತುಮೂವರ ಪ್ರಾಚೀನತೆಯನ್ನು ಕುರಿತು ಶ್ರೀಮಾನ್ ಶಂ. ಬಾ. ಜೋಶಿಯವರು "ಶಿವರಹಸ್ಯ" ಎಂಬ ತಮ್ಮ ಗ್ರಂಥದಲ್ಲಿ ವಿಸ್ತಾರವಾಗಿ ಚರ್ಚಿಸಿದ್ದಾರೆ.



CC-0. Jangamwadi Math Collection, Varanasi. An eGangotri Initiative



# ವೀರಶೈವರ ಕಾಯಕಗಳು

## ಕಾರಣಗಳು

ಜಗದಾದಿಯಿಂದಲೂ ಈ ಭೂಮಂಡಲದಲ್ಲಿ ಅನೇಕಾನೇಕ ಧರ್ಮಗಳು ಮಹಾನ್ ಮಹಾನ್ ವಿಭೂತಿಗಳಿಂದ ಪ್ರಸ್ತಾಪಿಸಲ್ಪಟ್ಟಿರುವವು. ಅವೆಲ್ಲವುಗಳಲ್ಲಿ "ಕನಕ, ಕಾಂತಾ" ಇವೆರಡು ವಮನ (ಕಾರಿಕೆಯು) ಸಮಾನವೆಂದು ಹೇಳಿರುವುದಲ್ಲದೆ ಬರಬರುತ್ತ "ಯದ್ದೃಷ್ಟಂ ತನ್ನಷ್ಟಮ್" ಅಂದರೆ ಕಣ್ಣಿಗೆ ತೋರುವುದೆಲ್ಲವೂ ನಶ್ವರವೆಂತಲೂ ಹೇಳಿರುವವು. "ಬ್ರಹ್ಮಸತ್ಯಂ ಜಗನ್ಮಿಥ್ಯಂ" ಎಂಬುವ ಭಾವನೆಯು ಬಲಿಯುತ್ತ ಹೋದದ್ದರಿಂದ ಸರ್ವಸಂಗ ಪರಿತ್ಯಾಗವೇ-ಎಂದರೆ ಕೇವಲ ಸನ್ಯಾಸತ್ವದಿಂದಲೇ ಸೌಖ್ಯದ ಹಾಗು ಮೋಕ್ಷದ ಪ್ರಾಪ್ತಿಯೆಂಬುದು ಮನವರಿಕೆಯಾಗಹತ್ತಿತು. ಆದುದರಿಂದ 'ಮಾಯಾ' ಇದರ ಅರ್ಥವನ್ನು 'ಮಾ= ಇಲ್ಲವು ಯಾ= ಯಾವುದು' ಯಾವುದು ಇಲ್ಲವೋ ಅದು ಮಾಯೆಯೆಂದು ಮಾಡತೊಡಗಿದರು. ತಾವು ಸುಳ್ಳೆಂದು ಹೇಳುವ ಪದಾರ್ಥಗಳಿಂದಲೆ ನಿಜವಾಗಿ ಪೋಷಿತರಾಗಿಯೂ ಕೂಡ ವಾಗದ್ವೈತಿಗಳ ಸುಳಿದಾಟವು ಹೆಚ್ಚಾಗತೊಡಗಿತು. ಶ್ರಮವಿಭಾಗದವರಾದ ಚಾತುರ್ವರ್ಣದವರಿಗೆ ತ್ಯಾಗವೇ ತಮ್ಮ ಅಂತಿಮ ಧ್ಯೇಯವೆಂದು ಮನವರಿಕೆಯಾದುದರಿಂದ ಅವರಲ್ಲಿ ಸೋಮಾರಿತನವು ಮಿತಿಮೀರಿ ಬೆಳೆಯಹತ್ತಿತು. ಮತ್ತು ಶ್ರೇಷ್ಠರೆಂದು ಅಂದುಕೊಳ್ಳುವವರು ಉದ್ಯೋಗಮಾಡುವುದು ಕೀಳೆಂದು ಬಗೆದಿದ್ದರಿಂದ ಹಾಗು ರಾಮಾವತಾರದಲ್ಲಿ ಶೂದ್ರನಾದ ಶಂಬುಕನು ತನ್ನ ಸೇವಾವೃತ್ತಿಯನ್ನು ಬಿಟ್ಟು ತಪಶ್ಚರ್ಯವನ್ನು ಮಾಡಲುದ್ಯುಕ್ತನಾದದ್ದರಿಂದ ವರ್ಣಸಂಕರವಾಯಿತು, ಉತ್ಪಾತಗಳು ಉದ್ಭವಿಸಹತ್ತಿದುವು ಎಂದು ಸನಾತನಿಗಳು ಕೋಲಾಹಲವನೆಬ್ಬಿಸಿ ರಾಜನಿಂದ ಶಂಬುಕನನ್ನು ಕೊಲ್ಲಿಸಿದರು; ಅಂದಿನಿಂದ ಈವರೆಗೆ ನಮ್ಮ ದಾಸ್ಯತ್ವದಿಂದ ಬಿಡುಗಡೆಯೆ ಇಲ್ಲವೆಂದು ಜನರು ತಿಳಿದಿದ್ದರಿಂದಲೂ ಮತ್ತು ಮೂರೂ ವರ್ಣದವರು ದುಡಿದೇ ತೀರಬೇಕು, ಉಳಿದವರು ತಾವು ಶ್ರೇಷ್ಠರೆಂದು ಭಾವಿಸಿಕೊಂಡು ಕರ್ತವ್ಯಶೂನ್ಯರಾಗಿ ಪರಾನ್ನಪುಷ್ಟರಾಗಿ ಉಳಿಯಬೇಕಾದದ್ದರಿಂದಲೂ ಇವರ ಕುಟುಂಬ ಪೋಷಣೆಯ ಭಾರವು ಬೆಳೆದದ್ದರಿಂದಲೂ ದುಡಿಯುವವರು ಬೇಸತ್ತು ಬೇಜಾರಾದರು.

ಕಾರಣವಿಲ್ಲದೆ ಕಾರ್ಯೋತ್ಪತ್ತಿಯಾಗಲಾರದೆಂಬ ಗಾದೆಯಂತೆ ಈ ವಿಪತ್ತಿಯನ್ನು ಹೋಗಲಾಡಿಸಲು ಶ್ರೀ ಬಸವಾದಿ ಪ್ರಮುಖರು ಉದಯರಾದರು. ಇವರಾದರು



CC-0. Jangamwadi Math Collection, Varanasi. An eGangotri Initiative

ಹೊನ್ನು, ಹೆಣ್ಣು, ಮಣ್ಣು (ಭೂಮಿ) ಇವು ಮೂರು ಮಲತ್ರಯವೆಂದು ಹೇಳಿದರೂ ಮಾಯೆಯ ಅರ್ಥವನ್ನು ಅದ್ವೈತಿಗಳು ಮಾಡುವಂತೆ ಮಾಡಲಿಲ್ಲ. ಪ್ರಮಥಾಗ್ರಣಿಯಾದ ಶ್ರೀ ಮದನಾದಿ ಅಲ್ಲಮಪ್ರಭುದೇವರು ಮಾಯೆಯ ಉತ್ಪತ್ತಿ ಮತ್ತು ಅದರ ಸ್ವರೂಪಗಳನ್ನು ತಮ್ಮ ವಚನಗಳಲ್ಲಿ ಈ ಪ್ರಕಾರವಾಗಿ ಹೇಳಿರುವರು.

"ವಾರಿ ಬಲಿದು ವಾರಿ ಕಲ್ಲಾದಂತೆ, ಶೂನ್ಯವೆ ಸ್ವಯಂಭುವಾಯಿತ್ತು. ಆ ಸ್ವಯಂಭು ಲಿಂಗದಿಂದ ಆಯಿತ್ತು ಮೂರ್ತಿ. ಆ ಮೂರ್ತಿಯಿಂದ ಆಯಿತ್ತು ವಿಶ್ವೋತ್ಪತ್ತಿ. ಆ ವಿಶ್ವೋತ್ಪತ್ತಿಯಿಂದಾಯಿತ್ತು ಸಂಸಾರ. ಆ ಸಂಸಾರದಿಂದಾಯಿತ್ತು ಮರವೆ. ಆ ಮರವೆ ಎಂಬ ಮಹಾಮಾಯೆ ವಿಶ್ವವ ಮುಸುಕಿಹಲ್ಲಿ ನಾ ಬಲ್ಲೆ ಬಲ್ಲಿದರೆಂಬ ಅರುಹಿರಿಯರೆಲ್ಲ ತಾಮಸಕ್ಕೊಳಗಾಗಿ ಮೀನಕೇತನನ ಬಲೆಗೆ ಸಿಕ್ಕಿ ಮಾಯೆಯ ಬಾಯ ತುತ್ತಾದರಲ್ಲಾ ಗುಹೇಶ್ವರಾ."

"ಹೊನ್ನು ಮಾಯೆ ಎಂಬರು, ಹೆಣ್ಣುಮಾಯೆ ಎಂಬರು, ಮಣ್ಣು ಮಾಯೆ ಎಂಬರು. ಹೊನ್ನು ಮಾಯೆಯಲ್ಲ, ಹೆಣ್ಣು ಮಾಯೆಯಲ್ಲ, ಮಣ್ಣುಮಾಯೆಯಲ್ಲ. ಮನದ ಮುಂದಣಾಸೆಯೇ ಮಾಯೆ ಕಾಣಾ ಗುಹೇಶ್ವರಾ"

## ವ್ಯಾಪ್ತಿ

ಭಕ್ತನಾಗಲಿ, ಮಹೇಶನಾಗಲಿ, ಗುರುವಾಗಲಿ ಇಲ್ಲವೆ ಜಂಗಮನಾಗಲಿ ಪ್ರತಿಯೊಬ್ಬ ವೀರಶೈವನಿಗೂ ಗುರು-ಲಿಂಗ-ಜಂಗಮರು ಬೇಕು; ಅಂದರೆ ಗುರುವಿಗೂ ಹಾಗೂ ಜಂಗಮನಿಗೂ ಈ ಮೂವರ ಅವಶ್ಯಕತೆಯು ಇದ್ದೇ ಇರುವುದು. ಏಕೆಂದರೆ ಗುರು-ಜಂಗಮರಾದರೂ ಭಕ್ತರಾಗಿಯೇ "ಅಷ್ಟಾವರಣ ಸಂಪನ್ನಃ ಪಂಚಾಚಾರ ಪರಾಯಣಃ" ಆಗಬೇಕಾಗಿರುವುದು. ಈ ರೀತಿ ಭಕ್ತನಾದವನಿಗೆ ತನ್ನ ಉದ್ಧಾರಾರ್ಥವಾಗಿ ತನ್ನವುಗಳಾದ ತನುವನ್ನು ಗುರುವಿಗೂ ಮನವನ್ನು ಲಿಂಗಕ್ಕೂ ಧನವನ್ನು ಜಂಗಮಕ್ಕೂ ಅರ್ಪಿಸಬೇಕಾಗುವುದು. ತನು-ಮನ-ಧನಗಳನ್ನು ಗುರು-ಲಿಂಗ-ಜಂಗಮಕ್ಕೆ ಅರ್ಪಿಸಬೇಕಾದರೆ ಈ ಮೂವರು ಅತೀವ ಶುದ್ಧರಾಗಿರಬೇಕಾಗುವುದು. ಈ ಮೂರರಲ್ಲಿಯ ತನು-ಮನಂಗಳು ಇವೆರಡೂ ತನ್ನ ಹತ್ತಿರವೇ ಇರುವುವು. ಮೂರನೆಯದಾದ ಧನವನ್ನು ಹೊರಗಿನಿಂದ ಸಂಪಾದಿಸಬೇಕಾಗುವುದು. ಇವುಗಳ ಅರ್ಪಣವನ್ನು ಪ್ರಮಥರು ತಮ್ಮ ವಚನಗಳಲ್ಲಿ ಬಹುಮಾರ್ಮಿಕವಾಗಿ ವರ್ಣಿಸಿರುವರು.

"ನಹಿ ಜ್ಞಾನೇನ ಸದೃಶಂ ಪವಿತ್ರಮಿಹ ವಿದ್ಯತೇ" ಎಂದು ಅದ್ವೈತಿಗಳು ಜ್ಞಾನ ಘನತೆಯನ್ನು ವಿಶೇಷವಾಗಿ ಕೊಂಡಾಡುವರು. ಆದರೆ ಅದ್ವೈತ ಸಿದ್ಧಿಯಾದಾಗ್ಗೆ ಜ್ಞಾನವೆನ್ನುವ ಮಾತಿಗೆ ಏನೂ ಅರ್ಥವಿಲ್ಲ, ಸಿದ್ಧಿಯಲ್ಲಿ ಜ್ಞಾನಿಯೂ ಇಲ್ಲ, ಜ್ಞೇಯವೂ ಇಲ್ಲ. ಅದ್ವೈತ ಸಿದ್ಧಿಯ ಹೊರತು ಉಳಿದ ಅವಸ್ಥೆಯಲ್ಲಿ ಜ್ಞಾನವೆನ್ನುವುದು ಅಜ್ಞಾನವನ್ನು ಹೋಗಲಾಡಿಸುವ ವ್ಯವಹಾರಿಕ ಜ್ಞಾನಮಾತ್ರ ಅಷ್ಟೇ. ನಟ್ಟಿದ್ದ ಮುಳ್ಳನ್ನು ತೆಗೆಯುವುದಕ್ಕೆ ಉಪಯೋಗಿಸುವ ಇನ್ನೊಂದು ಮುಳ್ಳಿನಂತೆ ಈ ವ್ಯವಹಾರಿಕ ಜ್ಞಾನವೂ ಅನುಪಾದೇಯವೇ; ಆದರೆ ಅದು ಸಿದ್ಧಿಯನ್ನು ಪಡೆಯುವುದಕ್ಕೆ ಅವಶ್ಯವಾದ ಅನೇಕ ಸಾಧನಗಳಲ್ಲಿ ಒಂದು ಸಾಧನವು. ಪೂರ್ಣ ಜ್ಞಾನವನ್ನು ಪಡೆಯುವುದು ಬಹಳ ಕಷ್ಟ. ಏಕೆಂದರೆ ಎಷ್ಟು ಮಾಡಿದರೂ ಮಾನವನ ಅಹಂಭಾವವು ಸಂಪೂರ್ಣವಾಗಿ ಅಳಿಯುವುದಿಲ್ಲ. ಉಳ್ಳೇಗಡ್ಡಿಯ ಚಟ್ಣಿಯನ್ನು ಇಟ್ಟಿದ್ದ ಪಾತ್ರೆಯು ಎಷ್ಟು ತೊಳೆದರೂ ಅದರ ನಾತ ಹೋಗುವು



CC-0. Jangamwadi Math Collection, Varanasi. An eGangotri Initiative

ದಿಲ್ಲ ನಾನು ಎನ್ನುವುದೂ ಹಾಗೆಯೇ. ಎಂಥ ಜ್ಞಾನಿಗೂ ದೇಹದಲ್ಲಿರುವವರೆಗೆ ನಾನು ಎನ್ನುವುದು ಸ್ವಲ್ಪವಾದರೂ ಅಂಟಿಕೊಂಡಿರುತ್ತದೆ. ಅವರು ದೇಹವನ್ನು ನಡಿಸಿಕೊಳ್ಳುವಷ್ಟು ಮಾತ್ರಕ್ಕೆ ಬೇಕಾದ ಅಭಿಮಾನವು ಚಂದ್ರರೇಖೆಯಂತೆ ಸ್ವಲ್ಪ ಇದ್ದೇ ಇರುತ್ತದೆ. ಆದುದರಿಂದ ಶಿವಶರಣರು ಜ್ಞಾನಸ್ಥಲದಲ್ಲಿ ನಿಲ್ಲದೆ ಜ್ಞಾನಶೂನ್ಯ ಸ್ಥಲಕ್ಕೆ ಹೋಗಿ ಅದೇ ಕಡೆಯದಾದ ೧೦೧ ನೆಯ ಸ್ಥಲ ವೆಂದು ಸಾರಿದರು. ಆದರೆ ಭಕ್ತಿಯು ಅಷ್ಟು ಕಷ್ಟದ್ದಲ್ಲ. ಏಕೆಂದರೆ ಶ್ರೀಮಂತರ ಮನೆಯ ತೊತ್ತು ಅವರ ಮಕ್ಕಳನ್ನು ಬಹು ಪ್ರೀತಿಯಿಂದ ಜೋಪಾನ ಮಾಡಿದರೂ ಅವು ಮನೆಯ ಯಜ ಮಾನರವು ಎಂದು ನೆನಪಿನಲ್ಲಿಟ್ಟುಕೊಂಡಿರುವಂತೆಯೆ ಮತ್ತು ಸರಕಾರಿ ನೌಕರನು ಸರಕಾರಕ್ಕೆ ಬರತಕ್ಕ ಹಣವನ್ನು ವಸೂಲಮಾಡಿ ಅದನ್ನು ಖಜಾನಿಗೆ ಜಮೆಮಾಡಿ ತನಗೆ ಗೊತ್ತಾದ ಸಂಬಳ ದಲ್ಲಿ ಸಂತುಷ್ಟನಾಗಿರುವಂತೆ-ಭಕ್ತನು ದೀಕ್ಷೆಯಲ್ಲಿ ತನು–ಮನ–ಧನಂಗಳನ್ನು ಗುರು–ಲಿಂಗ–ಜಂಗ ಮಕ್ಕೆ ಅರ್ಪಣ ಮಾಡಿದ ಬಳಿಕ ಎಚ್ಚರಿಕೆಯಿಂದ ಗುರು–ಲಿಂಗ–ಜಂಗಮದ ಸೇವೆಗಾಗಿಯೆಂದು ದುಡಿಯುವುದು ತನ್ನ ಆದ್ಯಕರ್ತವ್ಯವೆಂದು ಬಗೆದು ಲಿಂಗಾಣತೆಯಿಂದ ಬಂದದ್ದನ್ನು, ಗುರು–ಲಿಂಗ–ಜಂಗಮರ ಶೇಷ ಪ್ರಸಾದವನ್ನು ಸೇವಿಸಿಕೊಂಡು ಬಾಳುವನು. ಆದುದರಿಂದ ಈ ಭಕ್ತನ ದುಡಿತವು ನಿಜವಾದ ನಿಷ್ಕಾಮ ಕರ್ಮವೆಂದಿನಿಸುವುದು. ಇದರಲ್ಲಿ ಹೆಮ್ಮೆಗೆ ಆಸ್ಪದವಿಲ್ಲ. ಏಕೆಂದರೆ ಭಕ್ತನು ತನ್ನ ದೇಹ, ಮನಸ್ಸು, ಐಶ್ವರ್ಯ ಎಲ್ಲವನ್ನೂ ಗುರು–ಲಿಂಗ–ಜಂಗಮಕ್ಕೆ ಅರ್ಪಿಸಿದ ಮೇಲೆ ತಾನು ಮಾಡುವ ಎಲ್ಲ ಕಾರ್ಯಗಳು ತನ್ನವುಗಳೆಂದು ಅನ್ನುವುದಿಲ್ಲ. ದೇವರ ವೆಂದು ಎನ್ನುವನು. ಹಾಗು ತಾನು ಮಾಡುವ ಎಲ್ಲ ಪ್ರಪಂಚವೇ ದೇವರದು; ತನ್ನದಲ್ಲ. ತಾನು ದೇವರ ಅಪ್ಪಣೆಯನ್ನು ನಡೆಯಿಸತಕ್ಕವನು. ಕೇವಲ ಅವನ ದಾಸನು. ಇದರ ವಿಶೇಷ ಸ್ಪಷ್ಟೀಕರ ಣಾರ್ಥವಾಗಿ ಒಂದು ಉದಾಹರಣೆಯನ್ನು ಕೊಡುವೆವು:— ಮಂಗಗಳು ಹಾಗು ಬೆಕ್ಕುಗಳು ತಮ್ಮ ಮರಿಗಳನ್ನು ಬಹಳ ಮಮತೆಯಿಂದ ಕಾಪಾಡುವುವು. ಎರಡೂ ಪ್ರಾಣಿಗಳು ತಮ್ಮ ಮರಿ ಗಳನ್ನು ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಆಗಾಗ್ಗೆ ಒಯ್ಯುವವು. ಇವೆರಡರಲ್ಲಿಯೂ ಮಮತೆಯು ಸಮಾನವಾಗಿರುವುದು. ಆದಾಗ್ಯೂ ಮರಿಗಳನ್ನು ಒಯ್ಯುವಾಗ್ಗೆ ಅವುಗಳನ್ನು ಜೋಪಾನ ಮಾಡುವ ಭಾರವು ಭಿನ್ನವಾಗಿರುವುದು. ಅದು ಹೇಗೆಂದರೆ ಮಂಗನ ಮರಿಗಳು ತಾಯಿಯನ್ನು ಅಪ್ಪಿಕೊಳ್ಳುವುದರಿಂದ ಬೀಳುವ ಮತ್ತು ಅದರಿಂದ ಉಂಟಾಗುವ ಹಾನಿಯ ಜವಾಬುದಾರಿಯು ವಿಶೇಷವಾಗಿ ಮರಿಗಳ ಮೇಲಿರುವುದು. ಆದರೆ ಬೆಕ್ಕುಗಳು ತಮ್ಮ ಮರಿ ಗಳನ್ನು ಬಾಯಲ್ಲಿ ಕಚ್ಚಿಕೊಂಡು ಹೋಗುವುದರಿಂದ ಮರಿಯ ಜೋಪಾನದ ಜವಾಬ್ದಾರಿಯು ತಾಯಿಯ ಮೇಲೆಯೇ ಇರುವುದು. ಆದುದರಿಂದ ಮರ್ಕಟನ್ಯಾಯಕ್ಕಿಂತಲೂ ಮಾರ್ಜಾಲ ನ್ಯಾಯವು ಶ್ರೇಷ್ಠವೆಂದು ಭಕ್ತಿಮಾರ್ಗದಲ್ಲಿ ಹೇಳಿರುವರು. ಇದರಂತೆ ಭಾಕ್ತಿಕರು ಶಿವಾರ್ಪಣ ಬುದ್ಧಿಯಿಂದ ನಡೆಯುವುದರಿಂದ ಕೈಗೆ ಸ್ವಲ್ಪ ಎಣ್ಣೆ ಹಚ್ಚಿಕೊಂಡು ಹಲಸಿನಕಾಯಿಯನ್ನು ಬಿಡಿಸುವವನಿಗೆ ಅದರ ಹಾಲು ಕೈಗೆ ಹೇಗೆ ಅಂಟುವುದಿಲ್ಲವೋ ಹಾಗೆಯೇ ಈ ಭಕ್ತನಿಗೆ ಈ ವೈರಾಗ್ಯದಿಂದ ಅಹಂಕಾರಮಮಕಾರಗಳ ಲೇಶವೂ ಹತ್ತುವುದಿಲ್ಲ. ಆದಾಗ್ಯೂ ಶ್ರೀಮದನಾದಿ ಅಲ್ಲಮಪ್ರಭುದೇವರು ಬಸವಾದಿಪ್ರಮಥರಿಗೆ "ತನು ಅರ್ಪಿತವೆಂದರೆ, ಗುರುದ್ರೋಹ. ಮನ ಅರ್ಪಿತವೆಂದರೆ, ಲಿಂಗದ್ರೋಹ. ಧನ ಅರ್ಪಿತವೆಂದರೆ, ಜಂಗಮದ್ರೋಹ. ಇಂತೀ ತನು–ಮನ–ಧನಂಗಳೆಂಬ ಅನಿತ್ಯಗಳನ್ನು ನಿತ್ಯಕ್ಕರ್ಪಿಸಿ, ಭಕ್ತನಾದೆನೆಂದರೆ ಅದು ಅಜ್ಞಾನ ನೋಡಾ.



CC-0. Jangamwadi Math Collection, Varanasi. An eGangotri Initiative

ಒಡೆಯರಿಗೆ ಉಂಡಲಿಗೆಯ ಮುರಿದಿಕ್ಕಿ, ನಾ ಭಕ್ತನಾದೆನೆಂಬ ಮಾತು ಸಮ್ಯಕ್ ಶರಣರು ಮೆಚ್ಚುವರೆ ? ನಮ್ಮ ಗುಹೇಶ್ವರ ಲಿಂಗಕ್ಕೆ ನೀವು ಆವುದರಲ್ಲಿ ಏನನರ್ಪಿಸಿ, ಭಕ್ತನಾದೆ ಹೇಳಾ, ಬಸವಣ್ಣ ?" ಎಂದು ಎಚ್ಚರಿಕೆಯನ್ನು ಕೊಟ್ಟಿರುವರು.

## ಉದ್ಯೋಗ ಪ್ರಾರಂಭ

ಯಾವತರದ ಉದ್ಯೋಗದಿಂದಲೂ ಮೋಕ್ಷಕ್ಕೆ ಪ್ರತಿಬಂಧವಿಲ್ಲವೆಂಬುದನ್ನು ಪ್ರಮಥರು ಮನವರಿಕೆ ಮಾಡಿಕೊಟ್ಟದ್ದರಿಂದ ಸರ್ವರೂ ಉದ್ಯೋಗನಿರತರಾದರು. ಜಂಗಮಕ್ಕೆ ಅರ್ಪಣ ಮಾಡುವ ಧನವನ್ನು ಎರಡು ಬಗೆಯಿಂದ ಸಂಪಾದಿಸಬಹುದು. ೧ ನೆಯದು ಸ್ವಕಷ್ಟಾರ್ಜನೆಯಿಂದ ಸ್ವಾವಲಂಬಿಗಳಾಗುವುದು. ೨ ನೆಯದು ಪರರ ಕಷ್ಟಾರ್ಜನೆಯಿಂದ ಪರಾವಲಂಬಿಗಳಾಗುವುದು "ಹಂಗಿನರಮನೆಗಿಂತ ಇಂಗಡದ ಗುಡಿಲೇಸು" ಎಂದು ಬಗೆದು ೨ನೆಯದ್ದನ್ನು ಬಿಟ್ಟು ಮೊದಲಿನ ರೀತಿಯಂತೆ ಆಚರಿಸಬೇಕೆಂದು ಬಗೆದು ಶ್ರೀ ಬಸವಾದಿ ಪ್ರಮಥರು ಮೊದಲು ಕಾಯಕದ ಮಹತ್ತ್ವವನ್ನು ಹೇಳಿದರು. ಅದು ಹೇಗೆಂದರೆ —

"ಕಾಯಕದಲ್ಲಿ ನಿರತನಾದಡೆ,ಗುರು ದರ್ಶನವಾದರೂ ಮರೆಯಬೇಕು, ಲಿಂಗಪೂಜೆಯಾದಡೂ ಮರೆಯಬೇಕು, ಜಂಗಮ ಮುಂದಿದ್ದರೂ ಹಂಗುಹರಿಯಬೇಕು. ಕಾಯಕವೇ ಕೈಲಾಸವಾದ ಕಾರಣ, ಅಮಳೇಶ್ವರ ಲಿಂಗವಾಯಿತ್ತಾದಡೂ ಕಾಯಕದೊಳು." "ಕಂದಿಸಿ, ಕುಂದಿಸಿ, ಬಂಧಿಸಿ, ನೋಯಿಸಿ, ಕಂಡಕಂಡವರ ಬೇಡಿತಂದು, ಮಾಡಿಹೆನೆಂಬುದು ದಂದುಗದೋಗರ. ಲಿಂಗ ನೈವೇದ್ಯಕ್ಕೆ ಸಲ್ಲದು. ತನುಕರಗಿ, ಮನಬಳಲಿ, ಬಂದ ತೆರದನುವನರಿದು, ಸಂದಿಲ್ಲದೆ, ಸಂಶಯವಿಲ್ಲದೆ, ದಾಸೋಹವ ಮಾಡುವುದೇ ಮಾಟ. ಕಾರೆಯ ಸೊಪ್ಪಾದರೂ ಕಾಯಕದಿಂದ ಬಂದುದು ಲಿಂಗಕ್ಕರ್ಪಿತವಲ್ಲದೆ ದುರಾಶೆಯಿಂ ಬಂದುದು ಅನರ್ಪಿತ. ಇದುಕಾರಣ ಸತ್ಯ, ಶುದ್ಧ ಕಾಯಕದ ನಿತ್ಯ ದ್ರವ್ಯ ಚಂದೇಶ್ವರ ಲಿಂಗಕ್ಕೆ ನೈವೇದ್ಯ ಕೇಳಯ್ಯಾ."

"ತನು, ಮನ ಬಳಲಡೆ, ಉದ್ದಂಡವೃತ್ತಿಯಲ್ಲಿ ಧನವ ಗಳಿಸಿ, ದಾಸೋಹವ ಮಾಡಿ ಭಕ್ತರಾಪೆನೆಂಬುವರ ಮುಖವ ತೋರದಿರಯ್ಯ ಎನಗೆ. ಅವನಲ್ಲವೇ ಧನಚೋರ, ಅವ ಪಾಪಿ, ಕೋಪಿ, ಪರಿಭ್ರಷ್ಟ. ಅವನ ಕಾಯಕವ ವಿಚಾರಿಸದೆ ಅವನ ಮನೆಯಲ್ಲಿ ಹೊಕ್ಕು ಲಿಂಗಾರ್ಚನೆಯ ಮಾಡುವ ಜಂಗಮಕ್ಕೆ ಏಳನೆಯ ಪಾತಕ. ಇಂತಪ್ಪ ಗುರು-ಶಿಷ್ಯ- ಜಂಗಮರ ಬಾಳುವೆ ಹುಲಿ ಕವಿಲೆಯ ತಿಂದು ಮಿಕ್ಕಿದ ನರಿತಿಂದಂತಾಯಿತ್ತು ಕಾಣಾ ಕೂಡಲ ಚೆನ್ನಸಂಗಮದೇವಾ."

"ಕೃಷಿ ಕೃತ್ಯ ಕಾಯಕದಿಂದಾದಡೇನು? ತನು ಮನ ಬಳಲಿಸಿ ತಂದು ದಾಸೋಹವ ಮಾಡುವ ಪರಮ ಸದ್ಭಕ್ತನ ಪಾದವ ತೋರಯ್ಯಾ ಎನಗೆ. ಅದೆಂತೆನೆ, ಆತನ ತನು ಶುದ್ಧ, ಆತನ ಮನ ಶುದ್ಧ, ಆತನ ನಡೆ ಶುದ್ಧ, ನುಡಿಯೆಲ್ಲ ಪಾವನವು. ಆತಂಗೆ ಉಪದೇಶವ ಮಾಡುವಾತನೆ ಪರಮ ಸದ್ಗುರು. ಅಂತಪ್ಪ ಸದ್ಭಕ್ತನ ಮನೆಯು ಕೈಲಾಸವೆಂದು ಹೊಕ್ಕು ಲಿಂಗಾರ್ಚನೆ ಮಾಡುವ ಜಂಗಮವೆ ಜಗತ್‌ಪಾವನ. ಇಂತಪ್ಪವರ ನಾನು ನೆರೆನಂಬಿ ನಮೋ ನಮೋ ಎಂಬೆನಯ್ಯಾ ಕೂಡಲಸಂಗಮದೇವಾ."



CC-0. Jangamwadi Math Collection, Varanasi. An eGangotri Initiative

ನುಡಿದಂತೆ ನಡೆಯುವುದು ಶಿವಶರಣರ ದೃಢಸಂಕಲ್ಪವಿರುವುದರಿಂದ ಮಹಾನುಭಾವಿಗಳಾದ ಬಸವಣ್ಣನವರೇ ಮೊದಲು ಭವಿ ಬಿಜ್ಜಳನ ಸೇವೆಯನ್ನು ಕೈಕೊಂಡು ಉಳಿದವರಿಗೆ ಮಾರ್ಗದರ್ಶಿಗಳಾದುದರಿಂದ ಪ್ರತಿಯೊಬ್ಬ ವೀರಶೈವನು ದುಡಿಯಲಾರಂಭಿಸಿದನು. ಇವರುಗಳಲ್ಲಿ ಕೆಲವರ ಹೆಸರುಗಳನ್ನು ಇಲ್ಲಿ ಕೊಡುತ್ತೇವೆ. ಅವರಲ್ಲಿ ಕೆಳಗಿನಂತೆ ವರ್ಗೀಕರಣ ಮಾಡಬಹುದು.

(೧) ಕೇವಲ ಶಾರೀರಕ ಶ್ರಮದಿಂದಲೇ ಉಪಜೀವಿಸುವವರು :—

(೧) ನಗೆಮಾರಿ ತಂದೆ (೨) ಶಿವಲೆಂಕ ಮಂಚಣ್ಣ (೩) ಮಡಿವಾಳ ಮಾಚಯ್ಯ (೪) ಗಾವುದಿ ಮಾಚಯ್ಯ (೫) ತಳವಾರ ಕಾಮಿದೇವ (೬) ಕೀಲಾರ ಭೀಮಣ್ಣ (೭) ಡಕ್ಕೆಯ ಬೊಮ್ಮಣ್ಣ (೮) ಹೊಡೆಹುಲ್ಲ ಬಂಕಣ್ಣ (೯) ತುರುಗಾಹಿ ರಾಮಣ್ಣ (೧೦) ಗುಪ್ತ ಮಂಚಣ್ಣ (೧೧) ಶಿವದಾಸಿಮಯ್ಯ (೧೨) ಕಾಲುಕಣ್ಣಿಯ ಕಾಯಮ್ಮ (೧೩) ಕೊಟ್ಟಣದ ಸೋಮವ್ವೆ (೧೪) ಮೋಳಿಗೆ ಮಾರಯ್ಯ (೧೫) ಕಾಮಾಟದ ಭೀಮಣ್ಣ (೧೬) ಪಾಕದ ಭೀಮಯ್ಯ (೧೭) ಕಿನ್ನರಿ ಬ್ರಹ್ಮಯ್ಯ (೧೮) ಆಯ್ದಕ್ಕಿ ಮಾರಯ್ಯ (೧೯) ಬಹು ರೂಪಿ ಚೌಡಯ್ಯ (೨೦) ಶಾರ್ದೂಲ ಸಂಗಯ್ಯ (೨೧) ಶಿವಪೂಜೆಯ ಭೀಮಯ್ಯ (೨೨) ಎಚ್ಚರಿಕೆಯ ಮುಕ್ತಿನಾಥಯ್ಯ (೨೩) ಅರುವಿನ ಮಾರಿತಂದೆ (೨೪) ಅವಸರದ ರೇಚಣ್ಣ (೨೫) ಪುಷ್ಪದ ಸೋಮಯ್ಯ (೨೬) ಮಲಹರ ಕಾಯಕದ ಚಿಕ್ಕದೇವಯ್ಯ.

(೨) ಸ್ವಲ್ಪ ಭಾಂಡವಳದಿಂದ ಉದ್ಯೋಗಮಾಡುವವರು:—

(೧) ಕುಂಬಾರ ಗುಂಡಯ್ಯ (೨) ಮಾದಾರ ಚನ್ನಯ್ಯ (೩) ಕದರೀ ರೆಮ್ಮವ್ವೆ (೪) ಬಾಚಿ ಕಾಯಕದ ಬಸವಯ್ಯ (೫) ಮಾದಾರ ಧೂಳಯ್ಯ (೬) ಕುಪ್ಪಸದ ಚಂದಯ್ಯ (೭) ಗಾಣದ ಕನ್ನಪ್ಪ (೮) ಮೇದಾರ ಕೇತಯ್ಯ (೯) ಕನ್ನಡೀ ಕಾಯಕದ ಅಮ್ಮಿದೇವಯ್ಯ (೧೦) ನುಲಿಯ ಚಂದಯ್ಯ (೧೧) ರಾಯಸದ ಮಂಚಣ್ಣ (೧೨) ಶಂಕರದಾಸಿಮಯ್ಯ (೧೩) ಜೇಡರ ದಾಸಿಮಯ್ಯ (೧೪) ಹಡಪದ ಅಪ್ಪಣ್ಣ (೧೫) ಸೂಜಿಕಾಯಕದ ರಾಮಿತಂದೆ (೧೬) ಬೊಕ್ಕಸದ ಸಂಗಣ್ಣ (೧೭) ಸುಂಕದ ಬಂಕಣ್ಣ (೧೮) ವೈದ್ಯ ಸಂಗಣ್ಣ (೧೯) ಡೋಹರ ಕಕ್ಕಯ್ಯ (೨೦) ಸಮಗಾರ ಹರಳಯ್ಯ.

(೩) ಸ್ವಲ್ಪ ಭಾಂಡವಳ ಮತ್ತು ಸಹಕಾರದಿಂದ ಉದ್ಯೋಗ ಮಾಡುವವರು.

(೧) ಗಾಜಲ ಬೊಮ್ಮಯ್ಯ (೨) ಅಂಬಿಗರ ಚೌಡಯ್ಯ (೩) ಸತ್ತಿಗೆಯ ಕಾಯಕದ ಇಟ್ಟಪ್ಪಯ್ಯ (೪) ಒಕ್ಕಲು ಮುದ್ದಯ್ಯ

(೪) ಹೆಚ್ಚಿನ ಭಾಂಡವಲದಿಂದ ಉದ್ಯೋಗ ಮಾಡುವವರು.

(೧) ಮಾಕ್ತಿಕ ಸಂಗಯ್ಯ (೨) ರತ್ನದ ರಾಜಯ್ಯ (೩) ಕನಕದ ನಾಚಯ್ಯ ಮುಂತಾದವರು.

ಈ ಮೇಲ್ಕಂಡ ಉದ್ಯೋಗದವರಲ್ಲಿ ಪ್ರತಿಯೊಬ್ಬರು ತಮಗೆ ಲಕ್ಷಾಂತರ ಸಹೋದ್ಯೋಗಿಗಳನ್ನು ತಯಾರಿಸಿಕೊಂಡಿದ್ದರು. ಗಾಜಲ ಬೊಮ್ಮಯ್ಯ ಮೊದಲಾದ ಶಿವಶರಣರು ಕಚ್ಚಾಬದುಕು ದೊರೆಯುವ ಸ್ಥಳಗಳಲ್ಲಿ ದೊಡ್ಡದೊಡ್ಡ ಕಾರ್ಯಾಲಯಗಳನ್ನು ಸ್ಥಾಪಿಸಿ ಅವು



CC-0. Jangamwadi Math Collection, Varanasi. An eGangotri Initiative

ಗಳಲ್ಲಿ ಜನರಿಗೆ ಕೈಗಾರಿಕೆಯ ಶಿಕ್ಷಣವನ್ನು ಕೊಟ್ಟು, ದೇಶದ ಸಂಪದಭ್ಯುದಯಕ್ಕೆ ಕಾರಣೀಭೂತರಾದರು. ಅಷ್ಟೇಕೆ, ಸದ್ಯದ ವೀರಶೈವರಲ್ಲಿಯ ಬೆಣ್ಣೆ, ತುಪ್ಪದ, ಬೆಲ್ಲದ, ಗೋದಿ, ಕಡ್ಲಿ, ಜೋಳ, ಅಕ್ಕಿ, ಬ್ಯಾಳಿ ಮುಂತಾದ ಆಹಾರ ಪದಾರ್ಥಗಳ ಅಡ್ಡಹೆಸರಿನ ಮನೆತನದ ಪೂರ್ವಜರು ಆ ಆ ಸಾಮಾನುಗಳ ವ್ಯವಹಾರಸ್ಥರೇ ಆಗಿದ್ದರು.

ಗುರುಜಂಗಮರಾದರೂ ಕಾಯಕದಿಂದಲೆ ಉಪಜೀವಿಸತಕ್ಕದ್ದು. ಅವರು ಯಾವ ಕಾಯಕ ಕೈಕೊಂಡರೂ ಅದರಿಂದ ಅವರ ಪೂಜ್ಯತ್ವಕ್ಕೆ ಯಾವ ಪ್ರಕಾರದ ಹಾನಿಯೂ ತಟ್ಟಲಾರದೆಂದು ಪ್ರಮಥರು " ಗುರುವಾದಡೂ ಕಾಯಕದಿಂದವೇ ಜೀವನ್ಮುಕ್ತಿ. ಲಿಂಗವಾದಡೂ ಕಾಯಕದಿಂದವೇ ಶಿಲೆಯ ಕುಲ ಹರಿವುದು. ಜಂಗಮವಾದಡೂ ಕಾಯಕದಿಂದವೇ ವೇಷದ ಪಾಶವು ಹರಿವುದು. ಇದು ಚೆನ್ನಬಸವಣ್ಣ ಪ್ರಿಯ ಚಂದೇಶ್ವರ ಲಿಂಗದ ಅರಿವು. " ಎಂದು ಸಾರಿರುವುದರಿಂದ ಎಲ್ಲ ಮಹೇಶ್ವರರು ಭೇದಭಾವವಿಲ್ಲದೆ ಮನಬಲ್ಲಂತೆ ಉದ್ಯೋಗಗಳನ್ನು ಮಾಡತೊಡಗಿದರು. ಅವರುಗಳಲ್ಲಿ ಕೆಲವರ ನಾಮ ನಿರ್ದೇಶವನ್ನು ಇಲ್ಲಿ ಮಾಡುತ್ತೇವೆ.

೧. ವಿಭೂತಿಯವರು, ವಸ್ತ್ರದವರು, ಬಣ್ಣದವರು, ಓಲೆಯವರು, ಓದಿಸುವವರು ಭೃಂಗಿಯವರು, ಕಾಳಿಯವರು, ಕರಣಿಯವರು, ಸಂಬಾಳದವರು, ಕಂಬಿಯವರು, ಕಂತೆ ಇಡುವವರು, ಉದ್ಧರಣಿಯವರು, ಶಬ್ದಮಣಿಯವರು, ಅರವಟ್ಟಿಗೆಯವರು, ಓಲೆಕಾರರು, ಕುಲಕರಣಿಯವರು, ಗೌಡರು, ಅರ್ಚಕರು, ಪತ್ರಿಯವರು, ಶೆಟ್ಟಿಯವರು ಮುಂತಾದವರು.

ದುಡ್ಡಿಗೆ ದಾನ, ಭೋಗ, ನಾಶಗಳೆಂಬ ಮೂರು ಅವಸ್ಥೆಗಳಲ್ಲಿಯ ದಾನ-ಭೋಗಗಳ ಮಹತ್ತ್ವವನ್ನು ವೀರಶೈವರು ಅರಿತವರಾದುದರಿಂದ ನಿರಾಶ್ರಿತರಿಗೆ ದ್ರವ್ಯದ ಸಹಾಯ ಮಾಡುವುದಲ್ಲದೆ ಭೋಗದ ಎಲ್ಲ ಒಡವೆಗಳನ್ನು ತಮ್ಮಲ್ಲಿಯೆ ತಯಾರಿಸತೊಡಗಿದರು. ಹಾಗು ಭವಿಗಳು ಮಾಡಿದ ಒಡವೆಗಳನ್ನು ಕೊಂಡುಕೊಳ್ಳಬಾರದೆಂದು ಬಹಿಷ್ಕಾರ ಹಾಕಿದರು. ಈ ಬಹಿಷ್ಕಾರದಲ್ಲಿ ವಿಶೇಷ ಅರ್ಥವಿರುವುದು. ಅದು ಹೇಗೆಂದರೆ— ಬ್ರಾಹ್ಮಣರು ಬ್ರಾಹ್ಮಣೇತರರಿಗೆ ಶೂದ್ರರೆಂದೆನ್ನುವರು. ಅದರಂತೆ ವೀರಶೈವರು ಲಿಂಗಾಯತೇತರರಿಗೆ ಭವಿಗಳೆಂದೆನ್ನುವರು. ಆದರೆ ಶೂದ್ರರೆನ್ನುವವರು ಶೂದ್ರರನ್ನು ಪುನೀತರನ್ನಾಗಿ ಮಾಡಿ ತಮ್ಮೊಳಗೆ ಎಂದೂ ಸೇರಿಸಿಕೊಳ್ಳುವುದಿಲ್ಲ. ಹಾಗೆ ವೀರಶೈವರದಲ್ಲ. ಏಕೆಂದರೆ ಭವಿ ಎಂಬ ಸಂಬೋಧನೆಯಿಂದ ಎಲ್ಲರೂ ಲಿಂಗಧಾರಿಗಳಾಗಿ ಪ್ರಪಂಚದ ಎಲ್ಲ ಜನರು ಉದ್ಯೋಗನಿರುತರಾಗಲೆಂಬ ಸದುದ್ದೇಶದಿಂದ ಎಲ್ಲ ಮಾನವರ ಕಲ್ಯಾಣಾರ್ಥವಾಗಿಯೇ ಇವರು ಈ ಬಹಿಷ್ಕಾರವನ್ನು ಹಾಕಿರುವರು.

ಹೀಗೆ ಭಕ್ತರೂ ಮಹೇಶ್ವರರೂ ಹೆಂಗಸರೂ ಗಂಡಸರೂ ಯಾವ ನಿರ್ಬಂಧನೆಯಿಲ್ಲದೆ ದುಡಿಯಹತ್ತಿದ್ದರಿಂದ ಔದ್ಯೋಗಿಕ ಪ್ರಗತಿಯು ಹೆಚ್ಚಾಯಿತು. ಸಂಪತ್ತು ಬೆಳೆದಂತೆ ಶೆಟ್ಟರು ಮೊದಲಾದವರು ಅನೇಕ ಪೇಟೆ – ಪಟ್ಟಣಗಳನ್ನು ಸ್ಥಾಪಿಸಿ ಪರದೇಶದ ಕೂಡ ವ್ಯವಹಾರ ನಡೆಯಿಸಿದರು. ಅಲ್ಲದೆ ಪೇಟೆಗಳ ಸುವ್ಯವಸ್ಥೆಗಾಗಿ ಸರ್ಕಾರದಿಂದ ಅಧಿಕಾರ ಪಡೆದಿದ್ದರು; ಮತ್ತೆ ಕೆಲವರು (೧) ಮೇಟಿಯ ರೈತನನ್ನು ಮುಖ್ಯಸ್ಥನನ್ನಾಗಿ ಮಾಡಿ ಭೂಮಿ ಸಾಗು ಮಾಡುವ ಹಲವು ರೈತರನ್ನೂ (೨) ರೈತರ ಗಳೆದ ಸಾಮಾನುಗಳ ದೆಸೆಯಿಂದ ಬಡಿಗನನ್ನೂ



CC-0. Jangamwadi Math Collection, Varanasi. An eGangotri Initiative

(೩) ಕಬ್ಬಿಣದ ಸಾಮಾನುಗಳ ದೆಸೆಯಿಂದ ಕಮ್ಮಾರನನ್ನೂ (೪) ಸತ್ತ ದನಗಳನ್ನು ಒಯ್ಯಲಿಕ್ಕೆ ಹೊಲೆಯನನ್ನೂ (೫) ಸತ್ತ ದನಗಳ ಚರ್ಮದಿಂದ ಕಣ್ಣಿ, ಮಿಣಿ, ಪಾದರಕ್ಷೆ ಮೊದಲಾದುವುಗಳನ್ನು ಮಾಡುವ ದೆಸೆಯಿಂದ ಮಾದಿಗನನ್ನೂ (೬) ಮಣ್ಣಿನ ಪಾತ್ರೆ ಮತ್ತು ಹಂಚುಗಳನ್ನು ಮಾಡುವುದ ಕ್ಕಾಗಿ ಕುಂಬಾರನನ್ನೂ (೭) ಕ್ಷೌರದ ಸಲುವಾಗಿ ಹಡಪದವನನ್ನೂ (೮) ಬಟ್ಟೆ ತೊಳೆಯುವ ದೆಸೆಯಿಂದ ಮಡಿವಾಳನನ್ನೂ – ಇವರೆಲ್ಲರನ್ನೂ ಆಳುವ ದೆಸೆಯಿಂದ (೯) ಗೌಡನನ್ನೂ ರೈತರ ಲೆಕ್ಕಪತ್ರ ಬರೆಯುವುದಕ್ಕಾಗಿ ಗೌಡನ ಕೈಕೆಳಗೆ (೧೦) ಶಾನುಭೋಗನನ್ನೂ ಊರ ರಕ್ಷಣೆಗಾಗಿ (೧೧) ತಳವಾರನನ್ನೂ ಧರ್ಮಕಾರ್ಯದ ಸಲುವಾಗಿ (೧೨) ಜಂಗಮನನ್ನೂ ಈ ಪ್ರಕಾರವಾಗಿ ೧೨ ಆಯಗಾರರನ್ನು ಒಟ್ಟುಗೂಡಿಸಿ ಒಂದು ಗ್ರಾಮ ಇಲ್ಲವೆ ಹಲವು ಗ್ರಾಮಗಳ ಒಂದು ಪರಗಣೆ ಯನ್ನು ದೇಸಾಯರು ಇಲ್ಲವೆ ದೇಶಮುಖರು ಸ್ಥಾಪಿಸಿದರು. ಇದರಂತೆ ಹಲವು ಪರಗಣೆಗಳನ್ನು ಸರದೇಸಾಯರು (ಸರದೇಶಮುಖರು) ಸ್ಥಾಪಿಸಿದರು. ಇವುಗಳ ವ್ಯವಸ್ಥೆಗಾಗಿ ಮತ್ತು ಇವುಗಳನ್ನು ಆಳುವುದರ ದೆಸೆಯಿಂದ ಹಳ್ಳಿಗೆ ಗೌಡ, ಪರಗಣೆಗೆ ನಾಡಗೌಡ, ಅನೇಕ ಪರಗಣೆಗಳಿಗೆ ಸರನಾಡ ಗೌಡರನ್ನು ನೇಮಿಸಿದರು. ಹಳ್ಳಿಗೆ ಶಾನುಭೋಗ, ಪರಗಣೆಗೆ ದೇಶಪಾಂಡೆ, ಹಲವು ಪರಗಣೆಗಳಿಗೆ ಸರದೇಶಪಾಂಡೆಗಳನ್ನು ಬರೆಹಗಾರರಾಗಿ ನೇಮಿಸಿದರು. ಒಂದು ಊರ ಕಾವಲಿಗಾಗಿ ಚೌಧರಿ (ಪೋಲೀಸ) ಚೌಗಲ, ಮಗದುಮ್, ಓಲೆಕಾರ, ನಾಯಕ ಹೀಗೆ ಐವರನ್ನು ಗ್ರಾಮದ ಕಾವಲು ಗಾರರನ್ನಾಗಿ ನೇಮಿಸಿದರು. ಪರಗಣೆಯ ದೆಸೆಯಿಂದ ದಳವಾಯಿಗಳು ಹಾಗು ಸರನಾಯಿಕರನ್ನು ಮೇಲಾಧಿಕಾರಿಗಳನ್ನಾಗಿ ಮಾಡಿದರು. ಒಟ್ಟಿನಲ್ಲಿ ಇವರಿಗೆ ಮುಲ್ಕಿ, ದಿವಾಣಿ, ಫೌಜದಾರಿ, ಲಷ್ಕರಿ ಮುಂತಾದ ಎಲ್ಲ ಅಧಿಕಾರಗಳು ಇರುತ್ತಿದ್ದುವು. ಇದರಿಂದ ಇವರು Civil Rulers ರಂತೆ ಇದ್ದರು. ಮತ್ತೆ ಕೆಲವರು ಬಲಾಢ್ಯರಾಗಿ ಕನ್ಯಾಕುಮಾರಿಯಿಂದ ಸುರತದವರೆಗೆ ರಾಜ್ಯಗಳನ್ನು ಸ್ಥಾಪಿಸಿದರು. ಅವರೆಲ್ಲ ಮಹಾ ಪರಾಕ್ರಮಶಾಲಿಗಳಾಗಿ ವೀರಸ್ವರ್ಗವನ್ನೈದು ಕೀರ್ತಿಶೇಷ ರಾದರು. ಇನ್ನು ಹಲವರು ಇಂಥ ರಾಜ್ಯಗಳಲ್ಲಿ ಪ್ರಧಾನ ಮಂತ್ರಿಗಳಾಗಿದ್ದರು.

## ಸಮಾಜ ಸಂಘಟನೆ ಹಾಗೂ ಧರ್ಮಪ್ರಸಾರಣೆ

ಜಗತ್ತಿನಲ್ಲಿಯ ಅಖಿಲ ಮಾನವ ಕೋಟಿಯ ಜನರ ಆತ್ಮೋದ್ಧಾರದ ತಳಹದಿಯ ತಳಗಲ್ಲಿನಂತಿರುವ ಅಲ್ಲದೆ ವಿಶೇಷತಃ ವೀರಶೈವರ ಜೀವಾಳದಂತಿರುವ (೧) ಶಾಸ್ತ್ರಸಮ್ಮತವಾದ ಸದಾಚಾರವು (೨) ಗೌಣಿ ಹಾಗು ಪರಾಗುಣದಿಂದ ಕೂಡಿದ ನವವಿಧ ಭಕ್ತಿಗಳಿಗೆ ಮಣಿಸೂತ್ರ ದಂತಿರುವ ಅವ್ಯಭಿಚಾರಿಣೀಭಾವವುಳ್ಳ ಶಿವಾಚಾರವು (೩) ತಲೆಯಮೇಲೆ ಕೊಡಹೊತ್ತು ನರ್ತನ ಮಾಡುವವರು ತಮ್ಮ ನಾಟ್ಯಕ್ಕೂ ತಾಳಕ್ಕೂ ಹಾಗೂ ಹಾಡುವ ಸ್ವರಕ್ಕೂ ಚ್ಯುತಿಬಾರದಂತೆ ಬಹು ಎಚ್ಚರಿಕೆಯಿಂದ ಅಭಿನಯಿಸುತ್ತಿದ್ದರೂ ಸದಾ ಅವರ ಲಕ್ಷವು ತಲೆಯಮೇಲಿನ ಕೊಡವು ಬೀಳದಂತೆ ನರ್ತಿಸುವ ನಿಯತಾಚಾರವು. (೪) ಈ ಆಚಾರಗಳಿಗೆ ಲೋಪಬಾರದಂತೆ ವೀರ ವೃತ್ತಿಯುಳ್ಳವನಾಗಿ ಇವುಗಳನ್ನು ನಿಂದಿಸುವವರ ಜಿಹ್ವಾಛೇದನಮಾಡಿ–ಎಂದರೆ ನಿಂದಕರಿಗೆ ಇವು ಯೋಗ್ಯವಾದುವುಗಳೆಂದು ಶಾಸ್ತ್ರದಿಂದಲೂ ಅನುಭವದಿಂದಲೂ ಮನಗಾಣಿಸಿ ಅವರಿಂದಲೆ ಅವು ಗಳ ಸ್ತುತಿಯನ್ನು ಮಾಡಿಸುವುದು ಗಣಾಚಾರವು. (೫) "ಆನೆ ಆ ದಾರಿಯಲ್ಲಿ ಹೋಯಿತ್ತೆಂದರೆ ಆಡು ಆ ದಾರಿಯಲ್ಲಿ ಹೋಯಿತ್ತೆನ್ನಬಹುದೆ? ಸಂಗನ ಶರಣರಿಗೆ ಆನು ಸರಿಯೇ ಹೇಳಾ ಕೂಡಲ



CC-0. Jangamwadi Math Collection, Varanasi. An eGangotri Initiative

ಸಂಗಮದೇವಾ" ಎಂದು ಮಹಾನುಭಾವಿಗಳಾದ ಬಸವಣ್ಣನವರು ಹಾಡಿದಂತೆ ನಾನು ಭಕ್ತನೆಂಬ ಹೆಮ್ಮೆಯನ್ನು ಬಿಟ್ಟು ಅತಿ ಕಿಂಕರತ್ವದಿಂದ ನಡೆಯುವುದೇ ಭೃತ್ಯಾಚಾರವು. ಈ ಪಂಚಾಚಾರ ಗಳನ್ನು ಒಳಕೊಂಡಿರುವ ವೀರಶೈವನೇ ಪಂಚಾಚಾರ ಪರಾಯಣನಾದ ನಿಜವಾದ ವೀರಶೈವನು.

ಈ ಆಚಾರಗಳಂತೆ ನಡೆದು ಜನರಿಗೆ ಆದರ್ಶಭೂತರಾಗಿ ಇತರರನ್ನು ತಮ್ಮಂತೆ ಆಚಾರಶೀಲರನ್ನಾಗಿ ಮಾಡುವ ಕಾಯಕದ ಭಾರವನ್ನು ಕೈಕೊಂಡು ಮಠದಯ್ಯ, ಮಠಪತಿ, ಗಣಾಚಾರ್ಯ, ಗಣಕುಮಾರ, ಸ್ಥಾವರೀಕ ಎಂಬ ೫ ವೃತ್ಯಾಚಾರ್ಯರು ಕಾರ್ಯೋನ್ಮುಖರಾದರು. ಈ ಪಂಚ ವೃತ್ಯಾಚಾರರೆಲ್ಲರೂ ಸಮಾನ ಸಂಸ್ಕಾರವುಳ್ಳವರೂ ಸಮಾನಶೀಲರೂ ಸಮಾನ ಅಧಿಕಾರ ವುಳ್ಳವರೂ ಇರುವರಲ್ಲದೆ ಎಲ್ಲರೂ ಗುರುಸ್ಥಲದವರೇ ಆಗಿರುವರು. ಇಂಥ ಅನೇಕ ಮನೆತನಗಳನ್ನು ಸದ್ಯಕ್ಕೆ ನಾವು ಸಮಾಜದಲ್ಲಿ ಅಲ್ಲಲ್ಲಿ ಕಾಣಬಹುದು. ಈಗ್ಗೆ ಕೆಲವರು ತಮಗೆ ವತನಭೂಮಿ, ಹಕ್ಕು, ಬಾಬು, ಬಟ್ಟು ಮುಂತಾದುವುಗಳೇನೂ ಇಲ್ಲದೆ ಮತ್ತು ಶಿಷ್ಯರ ಮನೆಗಳು ಸಹ ಇಲ್ಲದಲೇ, ಇಲ್ಲವೆ ಅಂಥ ಸ್ಥಾನಗಳನ್ನು ಇತ್ತೀಚೆಗೆ ಆಕ್ರಮಿಸಿಕೊಂಡು ಕೆಲವು ಭಕ್ತರ ಆಶ್ರಯದಿಂದ ತಮ್ಮ ಷ್ಟಕ್ಕೆ ತಾವೇ ಗುರುಸ್ಥಲದವರೆಂದು ಕರೆದುಕೊಂಡು ಮೆರೆಯುತ್ತಿರುವರು. ಹಲವು ಮಠಪತಿ, ಗಣಾಚಾರ್ಯರು ಇನಾಮು ಭೂಮಿ, ಶಿಷ್ಯರ ಮನೆಗಳಿಲ್ಲದವರು ಅಥವಾ ಇದ್ದವರು ತಮ್ಮ ಕಾಯ ಕದ ಹಾಗೂ ಗುರುತ್ವದ ನಿಜಸ್ವರೂಪವನ್ನು ಮರೆತು ಭಕ್ತಾಧೀನರಾಗಿ ಅವರಿಂದ ಕೀಳೆಂದೆನಿಸಿ ಕೊಂಡು ಸಂಸ್ಕಾರವಿಹೀನರಾಗಿ ಕೆಲವು ಎಡೆಗಳಲ್ಲಿ ಈಗ್ಯೂ ಬಾಳುತ್ತಿರುವರು. ಇನ್ನು ಕೆಲವರು ತಮ್ಮಲ್ಲಿ ಮಿಥ್ಯವಾಗಿ ಆರೋಪಿತವಾದ ಕೀಳುತನವನ್ನು ಹೋಗಲಾಡಿಸುವ ಕುರಿತು ತಮ್ಮ ಕಾಯಕವನ್ನು ಕೀಳೆಂದು ಬಗೆದು, ಅದನ್ನು ಬಿಟ್ಟು ಇತ್ತೀಚೆಗೆ ಸಂಸ್ಕಾರವಿಹೀನರಾಗಿದ್ದಾಗ್ಯೂ ಮಠದವರು, ಹಿರೇಮಠದವರೆಂದು ಕರೆದುಕೊಳ್ಳುತ್ತಿರುವರು. ಆದರೆ ಮಠಪತಿ ಇದರ ಮುಂದಿನ ಪತಿ ಎಂಬ ವ್ಯಾಪಿಯನ್ನು ತೆಗೆದು ಹಾಗೇ ಇಲ್ಲವೆ ಆ ಮಠ ಎಂಬ ಶಬ್ದದ ಹಿಂದೆ ಹಿರೇ ಎಂಬ ಪತಿಯನ್ನು ಹಚ್ಚಿ ಕರೆದುಕೊಳ್ಳುತ್ತಿರುವರು. ಈ ಸಮಾಜದ ಕಟ್ಟನ್ನು ಸಡಲಿಸಿದ ಪಾಪವು ಕೆಲವುಮಟ್ಟಿಗೆ ಹಲವು ತಿಳಿಗೇಡಿಗಳಾದ ಭಕ್ತಾದಿಗಳ ಮೇಲೆ ಇರುವುದು.

ಈ ಐವರಲ್ಲಿ ಮಠದಯ್ಯನು ಮಠಪತಿಯ ಸಹಾಯದಿಂದ ವೀರಶೈವರ ಲಿಂಗಧಾರಣೆ ಯಿಂದ ಅಂತ್ಯದ ಸಮಾಧಿಯವರಿಗೆ ಯಾವತ್ತೂ ದಶಕರ್ಮಗಳನ್ನು ವಿಧಿಯುಕ್ತವಾಗಿಯೂ ಕ್ರಮಬದ್ಧವಾಗಿಯೂ ಮಾಡತಕ್ಕದ್ದು. ಗಣಾಚಾರ್ಯನು ಗಣಕುಮಾರನ ಸಹಾಯದಿಂದ ತನ್ನ ವೀರವೃತ್ತಿಯಿಂದ ಎಲ್ಲರನ್ನು ಕಾಪಾಡುವನು. ಆದ್ದರಿಂದಲೇ "ಗಂಡ ಬಿಟ್ಟರೂ ಗಣಾಚಾರ್ಯ ಬಿಡ" ಎಂಬ ಗಾದೆಯ ಮಾತು ಬಳಕೆಯಲ್ಲಿ ಬಂದಿರುವುದು. ಸ್ಥಾವರೀಕನು ಎಲ್ಲ ಶಿವಾಲಯಗಳ ಮೇಲ್ವಿಚಾರಕನಾಗಿ ಯಾವತ್ತೂ ಸ್ಥಾವರಲಿಂಗಗಳ ಪೂಜಾದಿಗಳು ಯೋಗ್ಯ ರೀತಿಯಿಂದ ಸಾಗಿವೆಯೋ ಇಲ್ಲವೋ ಎಂಬುದನ್ನು ನೋಡತಕ್ಕದ್ದು. ಈ ಪಂಚವೃತ್ಯಾಚಾ ರ್ಯರು ಊರ ಪ್ರಮುಖರಾದ ದೇಸಾಯಿ, ಗೌಡ, ಶಾನುಭೋಗ, ಮೇಟಿಯರೈತ ಮುಂತಾದ ಪಂಚರ ಸಾಕ್ಷಿಯಾಗಿ ಎಲ್ಲ ಕಾರ್ಯಗಳನ್ನು ನಿರ್ವಹಿಸುತ್ತಿದ್ದರು. ಸ್ಥಾವರಲಿಂಗಗಳು ವೀರ ಶೈವ ತತ್ತ್ವಕ್ಕೆ ಪ್ರಾಥಮಿಕ ಸಾಧನಗಳಾಗಿರುವುವು. ವೀರಶೈವರು ಮಹಮದೀಯರಂತೆ ಮೂರ್ತಿ ಭಂಜಕರಲ್ಲ. ಅವರು ಮೂರ್ತಿಭೇದಕರಾಗಿದ್ದರೆ ಅನೇಕ ಮಾಹೇಶ್ವರರು ಸ್ಥಾವರಲಿಂಗಗಳನ್ನು



CC-0. Jangamwadi Math Collection, Varanasi. An eGangotri Initiative

ಪೂಜಿಸುತ್ತಿರಲಿಲ್ಲ. " ಕಟ್ಟಿದ ಲಿಂಗವ ಬಿಟ್ಟು, ಬೆಟ್ಟದ ಲಿಂಗಕ್ಕೆ ಹೋಗಿ, ಹೊಟ್ಟಡಿ ಬೀಳುವ ಲೊಟ್ಟ ಮೂಳನ ಕಂಡರೆ ಮೆಟ್ಟಿದ ಎಡಪಾದರಕ್ಷೆ ತಕ್ಕೊಂಡು ಲಟಲಟನೆ ಹೊಡೆಯೆಂದಾತ ನಮ್ಮ ಅಂಬಿಗರ ಚೌಡಯ್ಯ" ಹಾಗು " ಮೆಟ್ಟಿದಾ ಕಲ್ಲಿಂಗೆ। ಒಟ್ಟಿ ಪತ್ರೆಯ ಹಾಕಿ। ಕಟ್ಟಿದಾ ಲಿಂಗ-ಅಡಿಮಾಡಿ ಶರಣೆಂಬ। ಭ್ರಷ್ಟನವ ಕಾಣೋ ಸರ್ವಜ್ಞ ॥" ಎಂದು ಅಂಬಿಗರ ಚೌಡಯ್ಯ ಹಾಗು ಸರ್ವಜ್ಞನು ಅಂದಿರುವರಾದರೂ ಕೂಡ ಮಾಹೇಶ್ವರರು ಸ್ಥಾವರ ಲಿಂಗಗಳನ್ನು ಇಂದಿಗೂ ಪೂಜಿಸುತ್ತಿರುವರು. ಇದರಿಂದ ವೀರಶೈವನ ಇಷ್ಟಲಿಂಗದ ನಿಷ್ಠೆಯು ಕಡಿಮೆಯಾಗಬಾರದೆಂಬುದೆ ಈ ವಚನಗಳಲ್ಲಿಯ ಮುಖ್ಯವಾದ ಭಾವಾರ್ಥವು. ಇದರಂತೆ ಅಕ್ಕ ಮಹಾದೇವಿಯವರು " ಹಾಲ ಹಿಡಿದು ಬೆಣ್ಣೆಯನರಸಲುಂಟೇ ? ಲಿಂಗವ ಹಿಡಿದು ಪುಣ್ಯ ತೀರ್ಥಕ್ಕೆ ಹೋಗಲುಂಟೇ ? ಲಿಂಗದ ಪಾದತೀರ್ಥ ಪ್ರಸಾದವ ಕೊಂಡು, ಅನ್ಯ ಬೋಧೆ, ಅನ್ಯ ಶಾಸ್ತ್ರಕ್ಕೆ, ಹಾರೈಸಲೇತಕ್ಕೆ ? ಇಷ್ಟಲಿಂಗವಿದ್ದಂತೆ ಸ್ಥಾವರಲಿಂಗಕ್ಕೆ ಶರಣೆಂದೊಡೆ ತಡೆಯದೆ ಹುಟ್ಟಿಸುವ ಶ್ವಾನನ ಗರ್ಭವಲ್ಲಿ. ಗುರು ಕೊಟ್ಟ ಲಿಂಗದಲ್ಲಿ ಎಲ್ಲಾ ತೀರ್ಥಂಗಳು, ಎಲ್ಲಾ ಕ್ಷೇತ್ರಂಗಳು, ಇಹನೆಂದು ಭಾವಿಸಿ ಮುಕ್ತರಪ್ಪದಯ್ಯಾ! ಇಂತಲ್ಲದೆ ಗುರು ಕೊಟ್ಟ ಲಿಂಗವ ಕಿರಿದು ಮಾಡಿ; ತೀರ್ಥಲಿಂಗವ ಹಿರಿದು ಮಾಡಿ ಹೋದಾತಂಗೆ ಅಘೋರ ನರಕ ತಪ್ಪದು ಕಾಣಾ! ಚೆನ್ನಮಲ್ಲಿಕಾರ್ಜುನಾ" ಎಂದು ತಮ್ಮ ವಚನದಲ್ಲಿ ಈ ಭಾವವನ್ನು ವಿಶೇಷವಾಗಿ ಸ್ಪಷ್ಟೀಕರಿಸಿದ್ದಾರೆ. ಇದರ ಮರ್ಮವೇನೆಂದರೆ ಸತಿಗೆ ಪತಿಯು ಪರದೈವನಂತೆ ಇದ್ದರೂ ಅವಳು ತನ್ನ ಅತ್ತೆ, ಮಾವ, ಭಾವಮೈದುನ, ನಾದುನಿ ಮೊದಲಾದವರನ್ನು ಯಾವ ರೀತಿಯಾಗಿ ಪೂಜ್ಯರೆಂದು ಮನ್ನಿಸುವಳೋ ಅದರಂತೆ ವೀರಶೈವನಿಗೆ ಅವನ ಇಷ್ಟಲಿಂಗವು ಅವನಿಗೆ ಪ್ರಾಣಸ್ವರೂಪವಾಗಿದ್ದರೂ ವೀರಶೈವತ್ವಕ್ಕೆ ಮಾತೃಭೂಮಿಯಂತಿರುವ ಶೈವರ ಸ್ಥಾವರ ಲಿಂಗಗಳನ್ನು ವೀರಶೈವನು ಮನ್ನಿಸತಕ್ಕದ್ದು. ಮತ್ತು ವೀರಶೈವನು ತಾನು ಇಷ್ಟಲಿಂಗಧಾರಿಯಾಗಿ ಸ್ಥಾವರ ಲಿಂಗವನ್ನು ಪೂಜಿಸುವ ಇನ್ನೊಂದು ಮರ್ಮವೇನೆಂದರೆ ಉಳಿದ ವೀರಶೈವರು ತಮಗೆ ಬೇಕಾದ ಅನೇಕಾನೇಕ ಕಾಯಕಗಳನ್ನು ಮಾಡಿದರೆ ಅವರಿಗೆ ಏನೂ ಚ್ಯುತಿ ಬಾರದಂತೆ ಇವರಿಗಾದರೂ ಈ ಪೂಜಾದಿಗಳಿಂದ ಇವರ ಮಾಹೇಶ್ವರ ಪೂಜ್ಯತ್ವಕ್ಕೆ ಯಾವ ನಷ್ಟವೂ ಬರಲಾರದು. ಇದರ ಸತ್ಯತೆಯನ್ನು ಕಲ್ಯಾಣ ಕಟಕದೊಳಗಿದ್ದ ಢಕ್ಕೆಯ ಮಾರಣ್ಣನ ಚರಿತ್ರಾಂಶದಿಂದ ಮನಗಾಣಬಹುದು. ಅಂತೆಯೇ ಅನೇಕ ಪಟ್ಟ – ಚರಾಧಿಕಾರಿಗಳು ಸ್ಥಾವರ ಲಿಂಗಗಳ ಪೂಜಾದಿಗಳನ್ನು ಈಗ್ಯೂ ಮಾಡುವರಲ್ಲದೆ ಅವುಗಳ ಅರ್ಚನಾದಿಗಳ ಸಲುವಾಗಿ ಅವರಿಗೆ ಹೇರಳ ಭೂದಾನಗಳು ಇನಾಮಾಗಿ ಕೊಡಲ್ಪಟ್ಟು, ಅವು ಇಂದಿಗೂ ನಡೆದಿರುವುವು.

ಅಲ್ಲಲ್ಲಿಗೆ ಸ್ಥಾನಿಕ ವಿಚಾರಣೆ ಮಾಡುವುದರ ದೆಸೆಯಿಂದ ಈ ಐವರ ಮೇಲೆ ಪಟ್ಟ ಚರಾಧಿಕಾರಿಗಳೆಂಬುವರನ್ನು ವರಿಷ್ಠರನ್ನಾಗಿ ನೇಮಿಸಿದರು. ಧರ್ಮ ಪ್ರಸಾರವು ಹೆಚ್ಚಾದಂತೆ ಇವರಾದರೂ ಬಹುಸಂಖ್ಯಾಕರಾದರು. ಆದುದರಿಂದ ಇವರಿಗೂ ಶ್ರೇಷ್ಠರೆಂದು ದೇಶಮಧ್ಯದಲ್ಲಿ ಮೊದಲು ನಾಲ್ಕು ಪೀಠಾಧಿಕಾರಿಗಳನ್ನೂ ಆಮೇಲೆ ಅಗತ್ಯ ಬಿದ್ದಂತೆ ಮತ್ತೊಬ್ಬ ಪೀಠಾಧಿಕಾರಿಯನ್ನು ನಿಯಮಿಸಿದರು. ಒಟ್ಟಿನಲ್ಲಿ ಹೀಗೆ ಪೀಠಾಧಿಕಾರಿಗಳಾದರೂ ಐವರಾದರು. ತರುವಾಯ ಎಲ್ಲಕ್ಕೂ ಮೇಲ್ವಿಚಾರಕರೆಂದು ಮೀರಿದ ಸ್ಥಲದವರಾದ ನಿರಂಜನ ಮೂರ್ತಿಗಳನ್ನು ಏರ್ಪಾಟು ಮಾಡಿದರು. ಈ ವಿರಕ್ತರಲ್ಲಿ ಸ್ಥಾನಿಕ ಭಕ್ತ – ಮಾಹೇಶ್ವರರಿಗೆ " ಕ್ರಿಯಾಮೂರ್ತಿ " ಗಳೆಂದೂ ಉಪಯೋಗ ಬೀಳುವುದರ ಸಲುವಾಗಿ " ಸ್ವಯ ಜಂಗಮ " ರೆಂದೂ " ಪಟ್ಟಣಕ್ಕೆ ಪಂಚರಾತ್ರಿ



CC-0. Jangamwadi Math Collection, Varanasi. An eGangotri Initiative

ಹಳ್ಳಿಗೆ ಏಕ ರಾತ್ರಿ "ಯಂತೆ ಸಂಚರಿಸಿ ಭಕ್ತ-ಮಾಹೇಶ್ವರರ ಆಚಾರ-ವಿಚಾರಗಳನ್ನು ಪರೀಕ್ಷಿಸುವುದರಲ್ಲಿ ಒರೆಗಲ್ಲಿನಂತಿರುವ "ಚರಜಂಗಮ" ರೆಂದೂ, ಈ ಎಲ್ಲರಿಗೂ ಆದರ್ಶಪ್ರಾಯರಾದ "ಪರಜಂಗಮ" ರೆಂದೂ ಮೂರು ಬಗೆಯವರನ್ನು ನೇಮಿಸಿದರು. ಈ ಸಂಘಟನೆಯು ಸುಸೂತ್ರವಾಗಿಯೂ ನಿರಂತರವಾಗಿಯೂ ಹಾಗು ನಿರಾತಂಕವಾಗಿಯೂ ನಡೆಯುವುದರ ಸಲುವಾಗಿ ಈ ಯಾವತ್ತು ಜಂಗಮರಿಗೆ ಭಕ್ತ-ಮಾಹೇಶ್ವರರು ತಾವು ಅವರಿಗೆ ಸಾರ್ವಜನಿಕ ಸಂಸ್ಥೆಗಳಾದ ಮಠಗಳನ್ನು ಕಟ್ಟಿಸಿಕೊಟ್ಟು, ಅವುಗಳಿಗೆ ಭೂದಾನಗಳನ್ನು ಕೊಟ್ಟು, ಆ ಭೂಮಿಗಳನ್ನು ಸ್ಥಾನಿಕ ಸರಕಾರದವರ ಕಡೆಯಿಂದ ಇನಾಮಾಗಿ ಮಾಡಿಸಿಕೊಟ್ಟರಲ್ಲದೆ, ಇವರಿಗೆ ಸರಕಾರದವರ ಕಡೆಯಿಂದಲೂ ಹೇರಳವಾಗಿ ಭೂದಾನಗಳನ್ನು ಕೊಡಿಸಿದರು. ಇವರಲ್ಲಿಯ ಪರಜಂಗಮರು ಸಂತೋಷದಿಂದ ಮನಬಂದ ಕಡೆಗೆ ಲೋಕೋದ್ಧಾರಾರ್ಥವಾಗಿ ಸಂಚರಿಸಿ ಕಡೆಗೆ ತಮಗೆ ಇಷ್ಟಬಂದ ಠಾವಿನಲ್ಲಿ ಅಂದರೆ ಅಲತಗಿ (ಕೊಲ್ಹಾಪೂರ ಸಂಸ್ಥಾನ) ಯಲ್ಲಿ ಶ್ರೀ ಆದಿ ಲಿಂಗೇಶನೆಂಬ ಗಣವರನೂ ಎಡೆಯೂರ (ಮೈಸೂರ ಸಂಸ್ಥಾನ)ಲ್ಲಿ ತೋಂಟದಾರ್ಯನೂ ಕೊಟ್ಟೂರ (ಬಳ್ಳಾರಿ ಜಿಲ್ಲೆ)ದಲ್ಲಿ ಬಸವೇಶ್ವರ ದೇವರೂ ಮೊದಲಾದವರು ಬಯಲಾದಂತೆ ಬಯಲಾಗುತ್ತಿದ್ದರು. ಇವರು ಬಯಲಾದ ಸ್ಥಾನಗಳಲ್ಲಿ ಭಕ್ತಾದಿಗಳು ದಿವ್ಯವಾದ ಮಠಗಳನ್ನು ಕಟ್ಟಿಸಿ ಅವರ ಗದ್ದುಗೆಗಳ ಪೂಜಾರ್ಚನೆಗಳು ಸಾಂಗವಾಗಿ ನಡೆಯುವಂತೆ ಏರ್ಪಾಡು ಮಾಡಲು-ಎಲ್ಲ ಜಾತಿಯವರು ನಡೆದುಕೊಳ್ಳಲು ಪ್ರಾರಂಭವಾಗಿ ಅವೇ ಮುಂದೆ ಬರಬರುತ್ತ ಜಾಗ್ರತ ದೇವಸ್ಥಾನಗಳಾದವು. ಇವು ವೀರಶೈವರೊಳಗಿನ ಖಾಸಗಿ ಮಠಗಳು. ಇವುಗಳಿಗೆ ಇದ್ದ ಎಲ್ಲ ಉತ್ಪತ್ತಿಯನ್ನು ಅವುಗಳ ಏಳಿಗೆಯ ಸಲುವಾಗಿಯೇ ಉಪಯೋಗಿಸತಕ್ಕದ್ದು. ಇವು ಸೇವೆ ಮಾಡುವಂಥಾ ಸಾರ್ವಜನಿಕ ಸಂಸ್ಥೆಯೆಂದು ಬಗೆಯಲಾಗದು. ಇವಕ್ಕೆ ದೊರೆತ ಉತ್ಪನ್ನವು ಆ ಆ ಕರ್ತೃಗಳ ನಿವೃತ್ತ ನಿಧಿ (ಫಂಡಿ) ಯಂತೆಯಿರುವುವು. ಇವು ವೀರಶೈವರೊಳಗಿನ ಆದರ್ಶಭೂತವಾದ ಕ್ಷೇತ್ರಗಳಿರುವದರಿಂದ ಎಲ್ಲರು ಅವುಗಳನ್ನು ಚನ್ನಾಗಿ ಕಾಪಾಡತಕ್ಕದ್ದು. ಮತ್ತು ಇವುಗಳಿಂದ ದರ್ಶನಾಶೀರ್ವಾದದ ಹೊರತೇ ಬೇರೆ ಯಾವದನ್ನೂ ಅಪೇಕ್ಷೆ ಮಾಡಕೂಡದು.

ಇತ್ತೀಚೆಗೆ, ನಿರಂಜನ ಮೂರ್ತಿಗಳಾದ ಶ್ರೀ ಇಳಕಲ್ (ಜಿ. ವಿಜಾಪುರ) ಮಹಾಂತ ಸ್ವಾಮಿಗಳೂ ಹಾಳಕೇರಿ (ಧಾರವಾಡ ಜಿಲ್ಲೆ) ಅನ್ನದಾನ ಸ್ವಾಮಿಗಳೂ (ಅಜ್ಜಯ್ಯನವರು) ಬಿದರೆ (ಜಮಖಂಡಿ ಸಂಸ್ಥಾನ) ಯಲ್ಲಿ ಕುಮಾರ ಸ್ವಾಮಿಗಳೂ ಹಾನಗಲ್ಲ ಸದಾಶಿವ ಸ್ವಾಮಿಗಳೂ ಬೀಳೂರ (ಜತ್ ಸಂಸ್ಥಾನ) ಗುರುಬಸವ ಸ್ವಾಮಿಗಳೂ ಅಥಣಿ ಮುರುಘೇಂದ್ರ ಸ್ವಾಮಿಗಳೂ ಮುಂತಾದವರು ಪರಜಂಗಮರಾಗಿ ಆಚರಿಸಿ ಕಡೆಗೆ ಐವರೂ ತಮ್ಮ ಮಠಗಳಲ್ಲಿ ಮತ್ತು ಹಾನಗಲ್ ಕುಮಾರ ಮಹಾ ಸ್ವಾಮಿಗಳು ಶ್ರೀ ಶಿವಯೋಗ ಮಂದಿರದಲ್ಲಿ ಬಯಲಾದರು.

## ಸಮಾಜ ಸೇವಕರು

ಈ ಸುಸಂಘಟಿತವಾದ ಜಂಗಮ ವರ್ಗಕ್ಕೆ ಸ್ವಯಂಸೇವಕರಂತಿರುವ ಕಲಿಖ್ಯಾತರು, ಶೀಲವಂತರು, ಗುಂಡಗೊಪ್ಪರಿಕೆಯವರು, ಮುಳ್ಳಾವಿಗೆಯವರು, ಘಂಟೆ ಕಾಯಕದವರು, ತೆಕ್ಕೆ ಕಾಯಕದವರು, ಮೂಕ ವೃತ್ತಿಯವರು, ಶಂಖದವರು, ಕರಪಲ್ಲವಿಯವರು, ಶಿದ್ಧಾಟಿಗೆಯವರು, ಏಕದಾರಿಯವರು, ದಮಡಿಯವರು, ಆಸನ ಕಾಯಕದವರು, ಗದ್ದುಗೆಯವರು, ಸಾರುವವರು



CC-0. Jangamwadi Math Collection, Varanasi. An eGangotri Initiative

ಎಂದು ವಿವಿಧ ಜಂಗಮರು ತರತರದ ಕಾಯಕಗಳನ್ನು ಕೈಕೊಂಡು ವಿಚಿತ್ರ ವೇಷಧಾರಿಗಳಾಗಿ ಪೀಠಾಧಿಕಾರಿಗಳಿಂದ ಮನ್ನಣೆ ಪಡೆದು ಯಾವುದಾದರೊಂದು ಸಿದ್ಧಿಯನ್ನು ಹೊಂದಿ ದೇಶಾಟನ ವನ್ನು ಮಾಡತೊಡಗಿದರು. ದೇಶಮಧ್ಯದೊಳಗಿನ ಭಕ್ತಾದಿಗಳಲ್ಲಿ ಆಚಾರ-ವಿಚಾರದೊಳಗೆ ಯಾವುದಾದರೊಂದು ನ್ಯೂನಾತಿರೇಕವನ್ನು ಕಂಡರೆ, ಅದನ್ನು ಗುಪ್ತವಾಗಿ ಪೀಠಾಧಿಕಾರಿಗಳಿಗೆ ತಿಳಿಸಿ, ಅದನ್ನು ಅವರಿಂದ ಸರಿಪಡಿಸುತ್ತಿದ್ದರು. ಹಸ್ತಪತ್ರಿಕೆಗಳಂತಿರುವ ತಮ್ಮ ಕೈಯೊಳಗಿನ ಘಂಟೆಗಳನ್ನು ಬಾರಿಸುತ್ತ ಹೋಗುತ್ತಿರುವಲ್ಲಿ ಯಾರಾದರೂ ಎದುರು ವಾದಿಸುವವರು ಬಂದಲ್ಲಿ, ಅವರ ಸಂಗಡ ವಾದ ಹಾಕಿ ಶಾಸ್ತ್ರಾಧಾರಗಳಿಂದ ಅವರನ್ನು ಸೋಲಿಸುತ್ತಿದ್ದರು. ಪ್ರಸಂಗವೊದಗಿ ದಲ್ಲಿ ತಾವು ಪಡೆದ ಸಿದ್ಧಿಯನ್ನು ಪ್ರದರ್ಶಿಸುತ್ತಿದ್ದರು.

ಈ ಸ್ವಯಂಸೇವಕರಲ್ಲಿ ಶಾರೀರಿಕ, ವಾಚಕ, ಮಾನಸಿಕವೆಂಬ ಮೂರು ವಿಭಾಗಗಳನ್ನು ಮಾಡಿದರು. ಮೇಲೆ ಹೇಳಿದವರೇ ಶಾರೀರಿಕ ಕಾಯಕದವರು. ಪುರಾಣ ಹೇಳುವುದು, ಓದಿಸು ವುದು, ಹಾಡುವುದು, ಮೊದಲಾದುವುಗಳನ್ನು ಮಾಡುವವರು ವಾಚಕ ಕಾಯಕದವರೆಂದೆನಿಸು ವರು. ಕಾವ್ಯ, ಪುರಾಣ ಮೊದಲಾದುವುಗಳನ್ನು ರಚಿಸುವವರೂ ಅವುಗಳ ಪ್ರತಿಗಳನ್ನು ಬರೆದು ಕೊಡುವವರೂ ಇವೇ ಮೊದಲಾದ ಮಾನಸಿಕ ಕಾರ್ಯಗಳನ್ನೆಸಗುವವರು ಮಾನಸಿಕ ಕಾಯಕ ದವರಾದರು. ಶಾರೀರಿಕ, ವಾಚಕ, ಮಾನಸಿಕವೆಂಬ ಮೂರು ಬಗೆಯ ಕಾಯಕವನ್ನು ಮಾಡು ವವರಾದರೂ ಒಬ್ಬರು ಮತ್ತೊಂದು ಕಾಯಕವನ್ನು ಮಾಡುತ್ತಿದ್ದಿಲ್ಲವೆಂತಲ್ಲ- ಎಂದರೆ ಒಂದನ್ನು ಮುಖ್ಯವಾಗಿಯೂ ಉಳಿದವನ್ನು ಗೌಣವಾಗಿಯೂ ಮಾಡುತ್ತಿದ್ದರು.

## ಸ್ವಯಂಸೇವಕರ ಉಪಜೀವನವು

ಈ ಕಾಯಕದವರು ಭಿಕ್ಷೆಯನ್ನು ಬೇಡುತ್ತ ಏನೂ ಕಾರ್ಯ ಮಾಡದೆ ಆಲಸ್ಯದಿಂದ ತಿರುಗಾಡುವ ತಂಡದಂತೆ ಕಾಣುತ್ತಿದ್ದರೂ ಅವರಿಂದ ಸಹಜವಾಗಿ ಹೇಳತೀರದಷ್ಟು ಸಾಮಾಜಿಕ ಕೆಲಸಗಳಾಗುತ್ತಿದ್ದುವು. ಅವುಗಳಲ್ಲಿಯ ಕೆಲವನ್ನು ಇಲ್ಲಿ ಹೇಳುತ್ತೇವೆ. (೧) ಶಾರೀರಿಕ ಕಾಯಕದವರು ತಮ್ಮ ಊರು ಬಿಟ್ಟು ಪರಸ್ಥಳಕ್ಕೆ ಹೋದಕೂಡಲೆ ಆ ಊರ ಮಠದಲ್ಲಿ ಇಳಿದು ಕೊಳ್ಳುವರು. (೨) ಇದರಿಂದ ಆ ಊರ ಮಠದಯ್ಯನ ನಡಾವಳಿ, ಆಚಾರ-ವಿಚಾರಗಳು, ಅವನು ದಿನವೂ ಮಾಡುವ ಕಾರ್ಯಗಳು. (೩) ಅವುಗಳಲ್ಲಿ ಸಮಾಜಕ್ಕೆ ಸಂಬಂಧಿಸಿದವುಗಳೆಷ್ಟು? (೪) ಮಠವು ಸಾರ್ವಜನಿಕ ಸೊತ್ತಾದರೂ ಅದರ ವಿಷಯಕ್ಕೆ ಮಠದಯ್ಯನ ಭಾವನೆಯು ಹೇಗೆ? (೫) ಪರಸ್ಥಳದವರಿಗೆ ಇಳಿದುಕೊಳ್ಳಲಿಕ್ಕೆ ಅವನು ಮಾಡಿಕೊಡುವ ಸೌಕರ್ಯ ಇವೇ ಮೊದ ಲಾದುವುಗಳು ಗೊತ್ತಾಗುತ್ತಿದ್ದುವು. ಅನಂತರ ಇಳಿದುಕೊಂಡ ಮಾರನೆಯ ದಿನ ಮುಂಜಾನೆ ಸ್ನಾನ-ಪೂಜಾದಿಗಳನ್ನು ತೀರಿಸಿಕೊಂಡು, ಊರ ಆಯಕಟ್ಟಿನ ಸ್ಥಳದಲ್ಲಿ ತನ್ನ ಕಾಯಕವನ್ನು ಪ್ರಾರಂಭಿಸುವನು. ೫ ಆಣೆ, ೧೦ ಆಣೆ, ೧ ರೂ ೪ ಆಣೆಯಂತೆ ಕಾಯಕದ ಹಾಗಗಳಿರುವುವು. ಊರವರೆಲ್ಲರೂ ಅಷ್ಟು ಹಣವನ್ನು ಕೂಡಿಸಿಕೊಟ್ಟರೆ ತಮ್ಮ ಕಾಯಕವನ್ನು ಬಿಡುವರು. ಇಲ್ಲವಾದರೆ, ಹಾಗೆಯೇ ಮುಂದುವರಿಸುವರು. ಈ ಕಾಯಕದ ಭಾವದಲ್ಲಿ ಇಂದಿನ ಸತ್ಯಾಗ್ರಹದ ಅಂಕುರವು ವಾಚಕರಿಗೆ ಸ್ಥೂಲವಾಗಿ ಗೋಚರಿಸಬಹುದು. ಇದರಂತೆ ವಸೂಲ ಮಾಡಿಕೊಂಡು, ಭಕ್ತರಲ್ಲಿ ಪ್ರಸಾದ ತೆಗೆದುಕೊಂಡು ಮುಂದಕ್ಕೆ ಸಾಗುವರು. ಹೀಗೆ ಭಕ್ತಾದಿಗಳಲ್ಲಿ ಊಟ



CC-0. Jangamwadi Math Collection, Varanasi. An eGangotri Initiative

ಮಾಡುವುದರಿಂದ ಭಕ್ತಾದಿಗಳಲ್ಲಿಯ ಆಚಾರ – ವಿಚಾರಗಳು ಗೊತ್ತಾಗುತ್ತಿದ್ದುವು. ಮತ್ತು ಮನೆ ಮನೆಗೆ ಹೋಗಿ ಭಿಕ್ಷೆ ಬೇಡುವ ಪ್ರಸಂಗ ಬಂದರೆ ಅದರಂತೆ ಅವರು ಮಾಡುವರು. ಆಗ್ಗೆ ಅವರು ಭಿಕ್ಷೆ ಕೊಟ್ಟ ಭಕ್ತನ ಗುರುವಿನ ಹೆಸರನ್ನು ಕೇಳುವರು. ಇದರಿಂದ ಭಿಕ್ಷೆ ಕೊಡುವ ಭಕ್ತನು ಗುರುಪುತ್ರನಾಗಿರುವನೊ ಇಲ್ಲವೊ ಎಂಬುದು ಗೊತ್ತಾಗುತ್ತಿತ್ತಲ್ಲದೆ ಆ ಗುರುವು ಎಂಥವನು? ಯಾವ ಕಾಯಕದ ಜಗೆಗೆ ಸೇರಿದವನು ? ಹಾಗು ಇಷ್ಟರಲ್ಲಿ ಎಷ್ಟು ಶಿಷ್ಯ ಮಕ್ಕಳನ್ನು ಮಾಡಿ ಕೊಂಡಿರುವನೆಂಬುದು ಸಹಜವಾಗಿ ಗೊತ್ತಾಗುತ್ತಿತ್ತು.

ವಾಚಕ ಕಾಯಕದವರು ದಿನವೂ ಪ್ರಾತಃಕಾಲಕ್ಕೆ ಬಹಿರ್ದೆಶೆಗೆ ಹೋಗಿ, ಊರಹೊರಗೆ ಲಿಂಗಾಯತರ ರುದ್ರಭೂಮಿಯಲ್ಲಿರುವ ಮಠದೊಳಗಿನ ಬಾವಿಯಲ್ಲಿ ಮುಖಮಾರ್ಜನ ಮಾಡಿ ಕೊಂಡು, ಬಟ್ಟೆಬರೆಗಳನ್ನು ತೊಳೆದುಕೊಂಡು, ಪತ್ರಿ ಪುಷ್ಪಗಳನ್ನೆತ್ತಿಕೊಂಡು, ಭಸ್ಮಧಾರಿಯಾಗಿ ಒಂದು ಸ್ಥಾನದಲ್ಲಿ ಕುಳಿತು ಶಿವಾನುಭವ ಬೋಧೆಯನ್ನು ಹೇಳಲಿಕ್ಕೆ ಪ್ರಾರಂಭಿಸುತ್ತಿದ್ದನು. ಇದರಂತೆ ಆ ಚಾಕೀ ಮಠಕ್ಕೆ ಬಂದ ಭಕ್ತ–ಮಾಹೇಶ್ವರರು ಇವರಂತೆಯೇ ಶ್ರವಣಮಾಡಿ ಎಲ್ಲರೂ ಸುಮಾರು ೮ ಗಂಟೆಗೆ ತೆರಳುವರು. ಮುಂದೆ ವಾಚಕ ಕಾಯಕದವರಾದ ಮಠದಯ್ಯಗಳು ಕಾಲಿಗೆ ಜಂಗವನ್ನು ಧರಿಸಿ ಭಿಕ್ಷೆಗೆ ಹೋಗುವರು. ಮರಳಿ ಬಂದು ಸ್ನಾನ-ಪೂಜಾದಿಗಳನ್ನು ತೀರಿಸಿಕೊಂಡು ತಮ್ಮಲ್ಲಿ ಇಲ್ಲವೆ ಭಕ್ತರಲ್ಲಿ ಅರ್ಪಿತ ಮಾಡಿಕೊಂಡು, ಸ್ವಲ್ಪ ವಿಶ್ರಾಂತಿ ತೆಗೆದುಕೊಂಡಮೇಲೆ ವಿದ್ಯಾರ್ಥಿಗಳಿಗೆ ಪಾಠವನ್ನು ಹೇಳುವರು. ಪಾಠಗಳನ್ನು ಚೌಪದನದಿಂದ ಆರಂಭಮಾಡಿ ೫–೬ ವರ್ಷಗಳಲ್ಲಿ ಪ್ರೌಢರಾಯನ ಕಾವ್ಯ, ಷಡಕ್ಷರದೇವನ ಕಾವ್ಯ ಮುಂತಾದುವುಗಳನ್ನು ಮುಗಿಸಿ ವಿದ್ಯಾರ್ಥಿಗಳಿಗೆ ಕನ್ನಡದ ಪೂರ್ಣ ಜ್ಞಾನವನ್ನು ಮಾಡಿಕೊಡುತ್ತಿದ್ದರು. ಸಾಯಂಕಾಲಕ್ಕೆ ತಮ್ಮ ಮಠದಲ್ಲಿ ಪುರಾಣ, ಪುಣ್ಯ ಕಥೆಗಳನ್ನು ಹೇಳುವರು. ಭಿಕ್ಷೆಯಲ್ಲಿ ಕಾಳು ( ಕೋರಾನ್ನ=ಅರ್ಧ ಸಮಾಜದ+ ಅರ್ಧ ತನ್ನದು) ಇಲ್ಲವೆ ಸ್ವಯಂಪಾಕ (ಹಿಟ್ಟನ್ನು) ಬೇಡುವರು. ಪಲ್ಲೆ, ಉಪ್ಪು ಮೊದಲಾದುವುಗಳ ದೆಸೆಯಿಂದ ಊರ ಸಂತೆಗಳಲ್ಲಿ “ ಫಸಕಿ ” ಬೇಡುವರು. ಹಾಗು ಮಠದಲ್ಲಿ ದೀಪದ ದೆಸೆಯಿಂದ ಪ್ರತಿ ಸೋಮವಾರ ದೀಪಾರಾಧನೆಯ ( ತೈಲೆಂದು) ಎಣ್ಣೆಯನ್ನು ಬೇಡುವರು. ಹಾಗು ಇವರಿಗೆ ಲಗ್ನ ಮುಂತಾದ ಮಂಗಲ ಕಾರ್ಯಗಳಲ್ಲಿ ಪರಡಿ ಕೊಡುವರು.

ಮಾನಸಿಕ ಶ್ರಮದ ಕಾಯಕದವರು ದೇಶ ಮಧ್ಯದಲ್ಲಿ ಸಂಚರಿಸುತ್ತಾ ಕಂತೆ ಭಿಕ್ಷೆಯಿಂದ ಉಪಜೀವಿಸಿ, ಜನರ ನಡೆನುಡಿಗಳನ್ನು ಅರಿತು, ಅವರಲ್ಲಿಯ ನ್ಯೂನಾತಿರೇಕಗಳನ್ನು ತಿದ್ದಿ, ಅವರಿಗೆ ಮುಂದಿನ ಮೆಟ್ಟಗಳನ್ನು ಹೇಳಿ, ಮೊದಲೇ ಎಲ್ಲ ಬಗೆಯಿಂದ ಈ ರೀತಿ ತಯಾರಾದವರನ್ನು ಅನುಭವ ಮಂಟಪಕ್ಕೆ ಸೇರಿಸಿಕೊಳ್ಳುತ್ತಿದ್ದರು. ಇವರೆಲ್ಲರೂ ಸಮಾನಸ್ಕಂದರಾಗಿದ್ದರೂ ಕೆಲವು ಕಡೆಗೆ ವಿನಾಕಾರಣವಾಗಿ ತಿಳುವಳಿಕೆಯಿಲ್ಲದೆ ಇವರಿಗೆ “ ಸುಖವಸ್ತು ಜಂಗಮ” ರೆಂದೂ ಮತ್ತು “ಗಂಡು ಜೋಳಿಗೆಯವ” ರೆಂದೂ ಹೀಯಾಳಿಸಿ ನುಡಿಯುತ್ತಿರುವರು. ಇದಕ್ಕೆ ಕಾರಣವೇನಂದರೆ ಈ ರೀತಿಯಾಗಿ ಇವರು ಸದಾ ಸಮಾಜ ಸೇವೆಗಾಗಿ ತಿರುಗಾಡುವುದರಿಂದ ಇವರಿಗೆ ಯಾವುದಾದರೊಂದು ಊರೊಳಗಿನ ಹಕ್ಕು, ಬಾಬು, ಬಟ್ಟು ಮೊದಲಾದವುಗಳೇನೂ ಇರುವುದಿಲ್ಲ. ಆದರೆ ಊರಲ್ಲಿಯ ಹಕ್ಕು–ಬಾಬುಗಳುಳ್ಳ ಜಂಗಮರಾದರೂ ಸಮಾಜ ಸೇವಕರೇ. ಅಂತೆಯೆ ಇವರ ಇನಾಮು ಭೂಮಿಗಳು ಸರಕಾರದ ಲೆಕ್ಕಪತ್ರುಗಳಲ್ಲಿ ರೈತೋಪಯೋಗಿ ನೌಕರ



CC-0. Jangamwadi Math Collection, Varanasi. An eGangotri Initiative

ಎಂದು ಗಣನೆಯಾಗಿ, ಅವರ ಹೆಸರಲ್ಲಿ ಖರ್ಚು ಬೀಳುತ್ತದೆ. ಮತ್ತು ಕೆಲವೆಡೆಯಲ್ಲಿ ಇವರ ನಷ್ಟಾಂಶದ ಉತ್ಪನ್ನವು ಸರಕಾರದ ಉತ್ಪನ್ನವೆಂದು ಸರಕಾರಕ್ಕೆ ಜಮಾ ಆಗುತ್ತದೆ. ಇನ್ನು, ಇವರು ಭಿಕ್ಷೆ ಬೇಡುವ ಕೋರಾನ್ನ ಎಂದರೆ ಕಾಳು, ಸ್ವಯಂಪಾಕ ( ಹಿಟ್ಟು ) ಕಂತೆಭಿಕ್ಷೆ ( ಕಜ್ಜಾಯ ) ಇವು ಮೂರು ಸಮಾನವಿದ್ದರೂ ಕೆಲವೆಡೆಗಳಲ್ಲಿ ಕೋರಾನ್ನ ಬೇಡುವವರು ಹೆಚ್ಚು, ಹಿಟ್ಟನ್ನು ಬೇಡುವವರು ಕಡಿಮೆಯೆಂದೂ ಹಲವೆಡೆಯಲ್ಲಿ ಹಿಟ್ಟು ಬೇಡುವವರು ಹೆಚ್ಚು ಕೋರಾನ್ನ ಬೇಡುವವರು ಕೀಳೆಂದೂ ಗಣಿಸಲ್ಪಡುವರು. ಇದು ಶುದ್ಧ ತಪ್ಪು. ವೀರಶೈವರಲ್ಲಿ ಯಾರೂ ಭಿಕ್ಷೆಯನ್ನು ಬೇಡಕೂಡದು. ಎಲ್ಲರೂ ಕಾರ್ಯದಿಂದಲೇ ಉಪಜೀವಿಸತಕ್ಕದ್ದು ಎಂದು ಧರ್ಮದ ಕಟ್ಟಪ್ಪಣೆ ಇರುವುದು. ಈ ವಿಷಯವಾಗಿ ಅಕ್ಕನವರು "ಮನೆಮನೆಗೆ ತಪ್ಪದೆ ಕೈಯೊಡ್ಡಿ ಬೇಡದಂತೆ ಮಾಡಯ್ಯಾ ! ಇಕ್ಕಿದೊಡೆ ನೆಲಕ್ಕೆ ಬೀಳುವಂತೆ ಮಾಡಯ್ಯಾ ! ನೆಲಕ್ಕೆ ಬಿದ್ದೊಡೆ ನಾನೆತ್ತಿಕೊಂಬುದಕ್ಕೆ ಮುನ್ನವೆ ಶುನಿ ಎತ್ತಿಕೊಂಬಂತೆ ಮಾಡಯ್ಯಾ ! ಚೆನ್ನಮಲ್ಲಿಕಾರ್ಜುನಾ" ಎಂದು ತಮ್ಮ ವಚನದಲ್ಲಿ ಬಹು ಸ್ವಾರಸ್ಯವಾಗಿ ಹಾಡಿರುವರು. ಆದರೆ ಈ ಸ್ವಯಂಸೇವಕರು ತಮ್ಮ ಉಪಜೀವನಕ್ಕಾಗಿ ಬೇಡುವುದು ಭಿಕ್ಷೆಯಾಗುವುದಿಲ್ಲೇನೆಂದು ಯಾರಾದರೂ ಕೇಳಿದರೆ ಇದು ಎಂದೆಂದಿಗೂ ಭಿಕ್ಷೆಯಾಗಲಾರದೆಂದು ಎದೆ ತಟ್ಟಿ ಹೇಳಬಹುದು. ಏಕೆಂದರೆ ಅವರೊಂದು ಮಾಡಿದರೆ ತಾವೊಂದು ಮಾಡಿದಂತೆ ಆಗುವುದು. ಇವರು ಮಾಡುವುದು ಸಮಾಜ ಸೇವೆ; ಅವರು ಸಲ್ಲಿಸುವುದು ಸ್ವಲ್ಪ ಸಹಾಯ; ಇದರಿಂದ ಕಂಕಿಹಾಕಿ ಕಾಳು ಗೆದ್ದಂತೆ ಯಾಗುವುದು. ಮೇಲಾಗಿ, ಸ್ವಲ್ಪ ಸಹಾಯದಿಂದ ಅನಂತ ಫಲ ದೊರಕುವುದು. ಹಾಗು ಇವರು ಭಿಕ್ಷಾ ರೂಪದಿಂದ ನೀಡುವ ಅತ್ಯಲ್ಪ ಸಹಾಯವು ಸುಸಂಘಟಿತವಾಗಿ ನಡೆಯುಬಂದಂತ ಮಹಾ ಕಾರ್ಯಕ್ಕೆ ಸಹಾಯ ಮಾಡಿದಂತೆಯಾಗಿ ಇದರಿಂದ ತಮ್ಮದೂ ತಮ್ಮ ಜಾತಿ ಬಾಂಧವರದೂ ಹಾಗು ದೇಶದ್ದೂ ಕಲ್ಯಾಣವಾಗುವುದರಿಂದ ಇವರು ಮಾಡುವ ಅಲ್ಪ ಸಹಾಯದಲ್ಲಿ ಇವರ ಒಂದು ಬಗೆಯ ಸ್ವಾರ್ಥವೇ ಹೆಚ್ಚಾಗಿರುವುದು.

ಉದ್ಯೋಗವು ಮತ್ತು ಕಾಯಕವು ಇವೆರಡೂ ಸಮಾನಾರ್ಥವುಳ್ಳವುಗಳಾದರೂ ಇವುಗಳ ತಾರತಮ್ಯದಲ್ಲಿ ಭೂಮ್ಯಾಕಾಶದಷ್ಟು ಅಂತರವಿರುವುದು. ಅದು ಹೇಗೆಂದರೆ ಸ್ವಾರ್ಥದ ಸಲುವಾಗಿ ನಾನು ಮಾಡುವೆನೆಂಬ ಹೆಮ್ಮೆಯಿಂದ ಮಾಡುವ ಉದ್ಯಮವು ಉದ್ಯೋಗವೆನಿಸುವುದು. ಆದರೆ ನಿಸ್ವಾರ್ಥ ಬುದ್ಧಿಯಿಂದ ಗುರು-ಲಿಂಗ-ಜಂಗಮದ ಸೇವೆಗಾಗಿ ದಾಸೋಹಂಭಾವದಿಂದ ಮಾಡುವ ಉದ್ಯೋಗಕ್ಕೆ ಕಾಯಕವೆಂದೆನ್ನುವರು. ಈ ಪಾರಿಭಾಷಿಕ ಅರ್ಥವನ್ನು ನೆನಪಿನಲ್ಲಿಟ್ಟುಕೊಂಡು ಪ್ರತಿಯೊಬ್ಬ ವೀರಶೈವನು ತಾನು ತನ್ನ, ತನ್ನ ಬಾಂಧವರ, ತನ್ನ ಊರ, ತನ್ನ ದೇಶದ ಸಲು ವಾಗಿ ಸದಾ ದುಡಿಯುತ್ತಿರುವನು. ಆದ್ದರಿಂದ ಶಿವಶರಣರಿಗೆ ದಿನಾಲು ಬಳಸಿ ಉಳಿದದ್ದು ತಂಗಳೆಂದೆನಿಸುವುದು. ಇದರ ಸ್ಪಷ್ಟೀಕರಣಾರ್ಥವಾಗಿ ಒಬ್ಬ ಶಿವಶರಣನ ಚರಿತ್ರೆಯನ್ನೇ ಇದರಡಿ ಯಲ್ಲಿ ಉಲ್ಲೇಖಿಸುವೆವು.

### ಕೇತಯ್ಯನವರ ಕಥೆ

ಮೇದಾರ ಕೇತಯ್ಯನೆಂಬೊಬ್ಬ ಶರಣ. ಇವನು ದಿನಾಲು ಅರಣ್ಯದಿಂದ ಬಿದಿರನ್ನು ತಂದು ಬಿಬ್ಬಲಗಳನ್ನು ಮಾಡಿ ಹಾಗಕ್ಕೆ (fixed rate) ಮಾರಿ ಬಂದ ಹಣದಿಂದ ಗುರು-ಲಿಂಗ-



CC-0. Jangamwadi Math Collection, Varanasi. An eGangotri Initiative

ಜಂಗಮ ದಾಸೋಹ ನಡೆಸಿದ್ದನು. ಇವನ ಸತ್ತ್ವ ಪರೀಕ್ಷೆಗಾಗಿ ಶ್ರೀ ಶಂಕರನು ಬಸವೇಶನ ವೇಷಧಾರಿಯಾಗಿ ಕೇತಯ್ಯನು ಮನೆಯಲ್ಲಿಲ್ಲದಾಗ ಪದರಲ್ಲಿ ಹೊನ್ನುಗಳನ್ನು ಕಟ್ಟಿಕೊಂಡು ಅವರ ಮನೆಗೆ ಬಂದನು. ಆಗ್ಗೆ ಕೇತಯ್ಯನವರ ಧರ್ಮ ಪತ್ನಿಯವರು ವೇಷಧಾರಿ ಬಸವಣ್ಣನವರ ಪಾದ ಪ್ರಕ್ಷಾಲನೆಗೆ ನೀರು ಕೊಟ್ಟು, ಆಸನ ಕೊಟ್ಟು, ಸಾಷ್ಟಾಂಗವೆರಗಿ, ಕೈಜೋಡಿಸಿಕೊಂಡು ಬಂದ ಕಾರಣವನ್ನು ಬಿನ್ನವಿಸಿಕೊಂಡಳು. ವೇಷಧಾರಿಯಾದ ಬಸವನು ತಾನು ತಂದ ಹೊನ್ನುಗಳನ್ನು ತೋರಿಸಿ ನೀವು ಬಹಳೇ ಬಡವರು; ಈ ಹೊನ್ನುಗಳನ್ನು ದಾಸೋಹದ ವೆಚ್ಚಕ್ಕಾಗಿ ತಕ್ಕೊಳ್ಳಿರಿ ಎಂದು ಆಜ್ಞಾಪಿಸಿದನು. ಅದಕ್ಕೆ ಆ ಸಾಧ್ವಿ ಶಿರೋಮಣಿಯು 'ನಮ್ಮ ಕಾಯಕವೆ ನಮಗೆ ಕೈಲಾಸ ವಾದುದರಿಂದ ನಮಗೆ ಅವು ಸಲ್ಲವು' ಎಂದು ನುಡಿದಳು. ಅದಕ್ಕೆ ಆತನು ಸಿಟ್ಟಿನಿಂದ ನನಗೆ ಎದುರುತ್ತರವೆ? ಎಂದು ಅರ್ಭಟಿಸಿ ನುಡಿದದ್ದಕ್ಕೆ ಭಯ-ಭಕ್ತಿಯಿಂದ ಸುಮ್ಮನಾದಳು. ಆ ಸಾಧ್ವಿಯ ನಿರುತ್ತರವೇ ಸಮ್ಮತಿಯೆಂದು ಬಗೆದು, ತಂದ ಹೊನ್ನುಗಳನ್ನು ಸುರುವಿ, ಹೊರಗೆ ಹೋಗಿ ಬಯಲಾದನು. ಆ ಶರಣೆಯು ಅವುಗಳನ್ನು ಮುಟ್ಟದೆ ತನ್ನ ನಿತ್ಯದ ಗೃಹಕೃತ್ಯದಲ್ಲಿ ತೊಡಗಿದಳು. ಅಷ್ಟರಲ್ಲಿ ಕೇತಯ್ಯನವರು ದಯಮಾಡಿಸಿದರು. ಅವರು ಬಂದೊಡನೆಯೆ ಅವರ ಪಾದ ತೊಳೆಯು ವುದಕ್ಕಾಗಿ ನೀರು ಕೊಟ್ಟಳು. ಪಾದ ಪ್ರಕ್ಷಾಲನಂಗೈದು, ಒಳಗೆ ಬಂದು, ಹೊನ್ನಿನ ರಾಶಿಯನ್ನು ನೋಡಿ— ಕಡುಕೋಪದಿಂದ ತನ್ನ ಮಡದಿಗೆ— "ಈ ಮಲವನ್ನು ಇಲ್ಲಿ ಯಾರು ತಂದು ಚೆಲ್ಲಿರುವರು?" ಎಂದು ಕೇಳಲು ಅವಳು— "ಬಸವಣ್ಣನವರು ನಾವು ಬಡವರೆಂದು ಹೇಳಿ ದಾಸೋಹದ ಸಲುವಾಗಿ ನಾನು ಬೇಡವೆಂದರೂ ಸುರಿದು ಹೋದರು. ಆ ಮಾತಿಗೆ ಕೇತಯ್ಯ ನವರು ಮತ್ತಷ್ಟು ಸಿಟ್ಟಿಗೆದ್ದು ಬಸವಣ್ಣನಿಗೆ ಸೊಕ್ಕು ಬಂದಿತೆ? ಅವನಿಗೆ ರೊಕ್ಕ ಹೆಚ್ಚಿತೆ! ಎಂದು ಗದ್ದರಿಸಿ ನುಡಿದು, ಮೊದಲು ಈ ಮಲವನ್ನು ಹೊರಗೆ ತಿಪ್ಪೆಗೆ ಬಿಸಾಕಿ ಈ ಸ್ಥಳವನ್ನು ಗೋಮಯ ದಿಂದ ಸಾರಣೆಮಾಡಿ ಶುದ್ಧಗೊಳಿಸಿ, ಸಚೈಲ ಸ್ನಾನ ಮಾಡಿ ಬಾರೆಂದು ಆಜ್ಞಾಪಿಸಿ, ಕಾಯಕ ದಿಂದಲ್ಲದೆ ಬಂದುದನ್ನು ಕಂಡು ಮೈಲಿಗೆಯಾಯಿತೆಂದು ತಾವೂ ಸಹ ಸ್ನಾನಕ್ಕೆ ಹೋದರು. ಉಭಯತರೂ ಶುಚಿರ್ಭೂತರಾಗಿ ಎಂದಿನಂತೆ ದಾಸೋಹ ನಡೆಸಿದರು. ಮುಂದೆ ಕೆಲವು ದಿನಗಳ ಮೇಲೆ- ಶಿವನು, ಕೇತಯ್ಯನು ತರುವ ಅರಣ್ಯದೊಳಗಿನ ಬಿದುರುಗಳೊಳಗೆಲ್ಲ ಮುತ್ತು, ರತ್ನಾದಿ ಗಳನ್ನು ತುಂಬಿದಂತೆ ಮಾಡಿದನು. ಮುಂದೆ, ಕೇತಯ್ಯನು ಹೋಗಿ ಬಿದುರು ಕಡಿಯಲು ಹುಳಗಳಂತೆ ಬಳಬಳನೆ ಮುತ್ತು, ರತ್ನಾದಿಗಳು ಸುರಿಯುವುದನ್ನು ಕಂಡು ಇವು ಹುಳಿತಿವೆ, ಮೇಲ ಕ್ಕೇರಿ ಉತ್ತಮವಾದದ್ದನ್ನು ತಕ್ಕೊಳ್ಳುವೆನೆಂದು ಹವಣಿಸಿ ಬಿದಿರು ಮೆಳೆಯನ್ನೇರಿದನು. ಆಗ್ಗೆ ಶಿವನು ಸುಂಟರ ಗಾಳಿಯನ್ನು ನಿರ್ಮಿಸಿ ಅವನು ಕೆಳಗೆ ಬೀಳುವಂತೆ ಮಾಡಿದನು. ಬೀಳುವಾಗ್ಗೆ ಬಿದುರಿನ ತುದಿಯೊಂದು ಶರಣನ ಹೃದಯದೊಳಗೆ ಚುಚ್ಚಿ ಬೆನ್ನೊಳಗೆ ಪಾರಾಯಿತು. ಆಗ್ಗೆ ಶರಣನು ದೇವಾ! "ಜಾತಸ್ಯ ಮರಣಂ ಧ್ರುವಂ" ಎಂಬುದನ್ನು ನಾ ಬಲ್ಲೆ. ಸಾವಿಗೆ ನಾನಂಜು ವವನಲ್ಲ. ಆದರೆ ಜಂಗಮದಾಸೋಹ ತೀರಿದನಂತರ ನೀನು ನನ್ನ ಪ್ರಾಣವನ್ನು ಒಯ್ಯಬಹುದು. ಅಲ್ಲಿಯವರೆಗೆ ಒಯ್ದದ್ದಾದರೆ ನಿನಗೆ ಕಟ್ಟಾಣೆಯೆಂದು ಆಣೆ ಇಟ್ಟು, ಕೈಯೊಳಗಿನ ಕೊಯತದಿಂದ ನಟ್ಟ ಬಿದುರನ್ನು ಸವರಿ, ಬೇಕಾಗುವ ಬಿದರನ್ನು ತೆಗೆದುಕೊಂಡು ಬಂದನು. ದಿನದಂತೆ ಚಿಬ್ಬಲ ಗಳನ್ನು ಮಾಡಿ, ಮಾರಿ, ಹಣ ತಂದು-ದಾಸೋಹದ ಕಾರ್ಯ ಮುಗಿದನಂತರ ತಾನು ಪದ್ಮಾಸನ ದಿಂದ ಗೋಡೆಗೆ ಕುಳಿತು, ಕ್ರಿಯಾಮೂರ್ತಿಗಳಿಗೆ ತನ್ನ ಮಸ್ತಕದ ಮೇಲೆ ಪಾದವನ್ನು ಇಡಹೇಳಿ,



CC-0. Jangamwadi Math Collection, Varanasi. An eGangotri Initiative

ನಟ್ಟ ಬಿದುರನ್ನು ಕೀಳಲು ಮಡದಿಗೆ ಆಜ್ಞಾಪಿಸಿದನು. ಅದರಂತೆ ಅವಳು ಮಾಡಲು ತತ್‌ಕ್ಷಣವೆ ಪ್ರಾಣೋತ್ಕ್ರಮಣವಾಯಿತು. ಆವಾಗ ಕಲ್ಯಾಣದೊಳಗಿನ ಲಕ್ಷದ ಮೇಲೆ ೯೬ ಸಾವಿರ ಗಣಾಧೀಶ್ವರರೂ ೭೭೦ ಅಮರಗಣಂಗಳೂ ಷೋಢಶರೂ ತೇರಸರೂ ಏಕಾದಶ ರುದ್ರರೂ ಮೊದಲಾದ ಎಲ್ಲ ಭಕ್ತ – ಮಾಹೇಶ್ವರರೂ ಕೂಡಿದರು. ಶರಣರ ಗುಂಪಿನಲ್ಲಿ ಶ್ರೀಮದನಾದಿ ಅಲ್ಲಮಪ್ರಭು ಮತ್ತು ಮಡಿವಾಳ ಮಾಚಯ್ಯನವರು ಇದ್ದಿಲ್ಲ. ಮಡಿವಾಳಯ್ಯನವರನ್ನು ಕರಿಯಲಿಕ್ಕೆ ಪಡಿಹಾರಿಯೆಂಬ ಶರಣನು ಹೋದನು. ಅವನ ಮುಖಾಂತರ ಈ ಎಲ್ಲ ಸುದ್ದಿಯನ್ನು ಕೇಳಿ ತಾವು ಬರಲಿಕ್ಕೆ ಒಪ್ಪಲಿಲ್ಲ. ಏಕೆಂದರೆ ಬಸವಣ್ಣನು ತಾನು ಅವತರಿಸುವಾಗ್ಗೆ ಶರಣನ ಪ್ರಾಣವೇ ತನ್ನ ಪ್ರಾಣವೆಂದು ಮಾಡಿದ ಪ್ರತಿಜ್ಞೆಯನ್ನು ಮರೆತಂತಾಯಿತು. ಏಕೆಂದರೆ ಕೇತಯ್ಯನ ಪ್ರಾಣ ಹೋಯಿತು ಹೇಗೆ? ಹಾಗೂ ಬಸವಣ್ಣನವರ ಪ್ರಾಣ ಉಳಿಯಿತು ಹೇಗೆ? ಎಂದ ಮಾತನ್ನು ಪಡಿಹಾರಿಯು ಮರಳಿ ಬಂದು ಎಲ್ಲ ಶರಣರ ಮುಂದೆ ಹೇಳಲು, ಆ ಕ್ಷಣವೇ ಬಸವಣ್ಣನವರು ಎಚ್ಚರಗೊಂಡು ತಮ್ಮ ಪ್ರಾಣವನ್ನು ಬಿಟ್ಟರು. ಆಗ್ಗೆ ಕಲ್ಯಾಣದಲ್ಲಿ ಕೋಲಾಹಲವೆದ್ದಿತು. ಇದನ್ನು ಕೇಳಿ ಮಡಿವಾಳಯ್ಯನು ತನ್ನ ವೀರ ಘಂಟೆಯನ್ನು ನುಡಿಸಿ, ಜಂಗಮ ದಾಸೋಹ ಮಾಡುವವರ ಪ್ರಾಣವನ್ನು ಶಿವನು ನಿಷ್ಕಾರಣವಾಗಿ ಹೇಗೆ ಸೆಳೆದೊಯ್ದನು; ಅವನನ್ನು ನೋಡುವೆ ಎಂದು ಗರ್ಜಿಸಿ ನುಡಿಯಲು, ಅದನ್ನು ಕೇಳಿ ಕೈಲಾಸದಲ್ಲಿ ಜಗನ್ಮಾತೆಯಾದ ಪರ್ವತಮ್ಮನವರು ಹೆದರಿ, ಶರಣರಗೊಡವೆ ನಮಗೇಕೆಂದು ಶಿವನಿಗೆ ಬುದ್ಧಿ ಹೇಳಿ, ಅವರ ಪ್ರಾಣವನ್ನು ಮರಳಿ, ಕೊಡಿಸಿದಳು. ಆಗ್ಗೆ ಅಲ್ಲಮಪ್ರಭುವನ್ನು ಪಲ್ಲಕ್ಕಿಯಲ್ಲಿ ಮೂರ್ತಿಗೊಳಿಸಿ ಸಂಭ್ರಮದಿಂದ ಉತ್ಸವ ಮಾಡಿದರು.

## ಸ್ವಯಂಸೇವಕರ ವಿಶೇಷ ಕಾರ್ಯ

ಮೇಲೆ ಹೇಳಿದ ಸಮಾಜಸೇವಕರು ಊರು – ಕೇರಿಗಳಲ್ಲಿರತಕ್ಕ ಜನರನ್ನಷ್ಟೇ ಉದ್ಧಾರ ಮಾಡದೆ ಮನೆ-ಮಾರು ಇಲ್ಲದವರು, ಕಾಡಿನಲ್ಲಿ ವಾಸಿಸುವವರು ಮೊದಲಾದವರನ್ನು ಸುಸಂಘಟಿತರನ್ನಾಗಿ, ಸುಸಂಸ್ಕೃತರನ್ನಾಗಿ ಮಾಡಿದರು. ಇವರು ಅನೇಕ ಪಂಗಡದವರಿರುವರು. ಇವರುಗಳಲ್ಲಿ ಅಡವಿ ರಾಜೋಟಿಯವರು, ಪರ್ವತ ಮಲ್ಲಯ್ಯನವರು, ಗೌಲೆತ್ತಿನವರು, ಸುಡುಗಾಡಸಿದ್ಧರು, ಶಾಸ್ತ್ರ ಗೊಲ್ಲರು ಮೊದಲಾದವರು ಒಡೆದು ಕಾಣಿಸುತ್ತಿರುವರು. ಸ್ಥೂಲಮಾನದಿಂದ ಈ ಗೊಲ್ಲರ ಸಂಘಟನೆಯನ್ನು ಇಲ್ಲಿ ಹೇಳುತ್ತೇವೆ. ಗೊಲ್ಲರಲ್ಲಿ ಹಣಮ ಗೊಲ್ಲರು, ಶಾಸ್ತ್ರ ಗೊಲ್ಲರು ಎಂಬ ೨ ಭೇಧಗಳುಂಟು. ಶಾಸ್ತ್ರಗೊಲ್ಲರು ಶಿವೋಪಾಸಕರು. ಇವರು ೧೦–೨೫ ಮನೆತನಗಳವರೆಗೆ ಗುಂಪಾಗಿ ತಿರುಗಾಡುವರು. ಇವರಿಗೆ ಮನೆಮಾರುಗಳೇನೂ ಇರುವುದಿಲ್ಲ. ಒಂದು ಸ್ಥಲದಿಂದ ಮತ್ತೊಂದು ಸ್ಥಲಕ್ಕೆ ತಮ್ಮ ಸಾಮಾನುಗಳನ್ನು ಒಯ್ಯಲಿಕ್ಕೆ ಕತ್ತೆಗಳನ್ನು ಸಾಕುವರು. ಜಗತ್ತಿನಲ್ಲಿ ನಿರುಪಯೋಗಿಗಳಾದ ಯಾವ ವಸ್ತುಗಳಿಲ್ಲವೆಂದೂ ಮತ್ತು ಕೆಟ್ಟದರಲ್ಲಿಯೂ ಸದ್ಗುಣಗಳಿರುವುವೆಂದೂ ಜಗತ್ತಿಗೇನೆ ತೋರಿಸುವ ಕುರಿತು, ಜನರು ನಿರುಪಯೋಗಿಗಳೆಂದು ತ್ಯಾಜ್ಯ ಮಾಡಿದ ಕತ್ತೆಗಳನ್ನು ತಮ್ಮ ವಾಹನಗಳನ್ನಾಗಿ ಮಾಡಿಕೊಂಡರು. ಇವುಗಳಲ್ಲಿ ಭಾರವಾಹಕ ಶಕ್ತಿಯು, ಸಮಯವರಿತು ಧನಿಗೈವುದು, ಶಿತೋಷ್ಣ ಕಟಬಂಧ ಪ್ರದೇಶಗಳಲ್ಲಿ ಜೋಪಾನಾಗುವ ಸ್ವಾಭಾವಿಕ ಶಾರೀರಿಕ ದಾರ್ಢ್ಯವೂ ಏನೂ ಖರ್ಚಿಲ್ಲದಲೇ ಜೋಪಾನವಾಗುವ ಗುಣವೂ ಇವೇ ಮೊದಲಾದ ಸದ್ಗುಣಗಳು ಇರುವುವು. ತಮ್ಮ ಸಾಮಾನುಗಳನ್ನು ಕಾಯಲಿಕ್ಕೆಂದು ಮನೆಗೆ ಒಂದೊಂದರಂತೆ



CC-0. Jangamwadi Math Collection, Varanasi. An eGangotri Initiative

ನಾಯಿಗಳನ್ನು ಸಾಕುವರು. ಇವರು ಊರಿಂದ ಊರಿಗೆ ಹೋದಕೂಡಲೆ ತಮ್ಮ ತಮ್ಮ ಗುಡಿಸಲುಗಳನ್ನು ಹಾಕಿಕೊಂಡು ಕತ್ತೆಗಳನ್ನು ಮೇಯಲಿಕ್ಕೆ ಬಿಟ್ಟು, ನಾಯಿಗಳನ್ನು ಕಾವಲಾಗಿರಿಸಿ, ತಮ್ಮ ಉದ್ಯೋಗಕ್ಕೆ ತೊಡಗುವರು. ತಮ್ಮ ತಂಡಕ್ಕೆ ಒಬ್ಬನನ್ನು ಮುಖ್ಯಸ್ಥನನ್ನಾಗಿ ಮಾಡಿ ಅವನಿಗೆ ಶಾಸ್ತ್ರಿಯೆಂದು ಕರೆಯುವರು. ಈ ಶಾಸ್ತ್ರಿಯು ಇವರ ಲಗ್ನ ಮೊದಲಾದ ಎಲ್ಲ ಧರ್ಮ ಕಾರ್ಯಗಳನ್ನು ಮಾಡುವನಲ್ಲದೆ ಅವರ ಮಕ್ಕಳಿಗೆ ಓದು-ಬರೆಹ ಕಲಿಸುವನು. ಮೊದಲು ನೆಲದ ಮೇಲೆ ಅಕ್ಷರಭ್ಯಾಸ ಮಾಡಿಸಿ, ಎಕ್ಕೆಯ ಎಲೆಗಳ ಮೇಲೆ ಮುಳ್ಳಿನಿಂದ ಪುಸ್ತಿಗಳನ್ನು ( ಫೇರ್ ಕಾಫಿ) ಬರೆಯಿಸುವನು. ಇವನ ಹತ್ತರ ಬಸವಣ್ಣನವರ ಘಟಚಕ್ರ, ಭೂಚಕ್ರ ಚೆನ್ನಬಸವಣ್ಣನವರ ಮೇಘಚಕ್ರ ಇಲ್ಲವೆ ಖಗಚಕ್ರ ಪ್ರಭುದೇವರ ಕಾಲಚಕ್ರ, ಮಿಶ್ರಾರ್ಪಣ, ಕರಣಹಸಿಗೆ, ಮಂತ್ರಗೋಪ್ಯ ಇರುವುದಲ್ಲದೆ ಆ ಮಹಾತ್ಮರ ವಚನಗಳೂ ಇರುವುವು. ಇವನ ಪ್ರಪಂಚದ ಎಲ್ಲ ಭಾರವನ್ನು ತಂಡದವರೆಲ್ಲರೂ ತಮ್ಮ ಆದಾಯದ ಕೆಲವು ಭಾಗವನ್ನು ಕೊಟ್ಟು ಸಾಗಿಸುವರು. ಚಿಲ್ಲರ ವ್ಯಾಜ್ಯಗಳನ್ನು ಇವನ ಮುಖಾಂತರವೆ ತೀರಿಸಿಕೊಳ್ಳುವರು. ಇವನು ಸಾಯಂಕಾಲಕ್ಕೆ ಅವರಿಗೆ ತನಗೆ ತಿಳಿದಷ್ಟು ಶಿವಾನುಭವ ಹೇಳುವನು. ಹೆಂಗಸರು, ಗಂಡಸರು ಎಲ್ಲರೂ ಉದ್ಯೋಗ ಮಾಡುವರು. ಇವರು ಭಿಕ್ಷೆಯನ್ನು ಎಂದೂ ಬೇಡುವುದಿಲ್ಲ. ಹೆಂಗಸರು ಗುಲಗಂಜಿ, ಕೇರು, ಭಜಿ, ಅಜವಾನ, ರುದ್ರಾಕ್ಷಿ ಮುಂತಾದುವುಗಳನ್ನು ಬುಟ್ಟಿಯಲ್ಲಿ ಹೊತ್ತುಕೊಂಡು ಮನಿಮನಿ ತಿರುಗಿ ಮಾರುವರು. ಒಂದು ಮನೆಯಿಂದ ಮತ್ತೊಂದು ಮನೆಗೆ ಹೋಗಬೇಕಾದರೆ ದಾರಿಗುಂಟ ಹುಲ್ಲಿನಿಂದ ಗಿಲಗಂಚಿ ಮೊದಲಾದ ಹುಡುಗರ ಆಟಿಗೆ ಸಾಮಾನುಗಳನ್ನು ಮಾಡುತ್ತಹೋಗಿ ಅವುಗಳನ್ನು ಮಾರುವರು. ಗಂಡಸರು ವನಸ್ಪತಿಗಳ ಗುಣಧರ್ಮಗಳನ್ನು ಅರಿತು ಕುಂಟಗಾಲಿಗೆ ವೈದ್ಯ, ನಾರುಗಾಲಿಗೆ ವೈದ್ಯಯೆಂದು ಕೂಗುತ್ತ ಹೋಗಿ, ಔಷಧಿ ಸಾಮಾನುಗಳ ಮಾರಾಟದಿಂದ ಉಪಜೀವಿಸುವರು. ತಮ್ಮೊಳಗೆ ಬಗೆಹರಿಯದೆ ಇದ್ದ ವ್ಯಾಜ್ಯಗಳ ಸಲುವಾಗಿ ವರ್ಷಕ್ಕೊಂದಾವರ್ತಿ ಸಂಗಡದ ಶೆಟ್ಟರ ಕಡಿಗೆ ಹೋಗಿ, ಅವುಗಳನ್ನು ತೀರಿಸಿಕೊಂಡು, ತಮ್ಮ ದಂಡ ಖಂಡನಾದಿಗಳನ್ನು ಶೆಟ್ಟರ ಸಂಗಡ ಶ್ರೀ ಶೈಲಕ್ಕೆ ಹೋಗಿ ಅಲ್ಲಿ ಸಿಂಹಾಸನಾಧಿಪತಿಗಳಿಗೆ ಸಲ್ಲಿಸುವರು. ಇದರಲ್ಲಿ ಎಳ್ಳಷ್ಟೂ ಚ್ಯುತಿ ಬಾರದಂತೆ ಇವರು ಇಂದಿಗೂ ನಡೆಯುವರು.

ಇಂತಹ ಭೂಮಿಕೆಗಳನ್ನು ಇವರು ಸಿದ್ಧಮಾಡಿಟ್ಟರೂ ಶ್ರೀ ಬಸವಾದಿ ಪ್ರಮಥರು ಬ್ರಾಹ್ಮಣನಿಗೆ ೩ ವರ್ಷ, ಕ್ಷತ್ರಿಯನಿಗೆ ೬ ವರ್ಷ, ವೈಶ್ಯನಿಗೆ ೯ ವರ್ಷ, ಶೂದ್ರನಿಗೆ ೧೨ ವರ್ಷವೆಂದು ಕಾಲ ಪರಿಮಿತಿಯನ್ನು ಮಾಡಿ ಆ ಅವಧಿಯಲ್ಲಿ ಅವರ ವಿಷಯವಾದ ನಿಷ್ಠೆಯನ್ನು ನೋಡಿ ಯೋಗ್ಯರಾದವರಿಗೆ ಮಾತ್ರ, ಲಿಂಗಧಾರಣ ಮಾಡುತ್ತಿದ್ದರು. ಏಕೆಂದರೆ ಮಾನವರ ಉದ್ಧಾರ ಮಾರ್ಗಗಳಲ್ಲಿ ಕ್ರಮಸೃಷ್ಟಿಯಂತಲೂ ಯುಗಪತ್‌ಸೃಷ್ಟಿಯಂತಲೂ ಎರಡು ತೆರನಾಗಿರುವುವು. ಕ್ರಮವಾಗಿ, ಶಾಸ್ತ್ರಾನುಸಾರವಾಗಿ ತಕ್ಕ ಸಂಸ್ಕಾರಗಳನ್ನು ಕಾಲಕಾಲಕ್ಕೆ ಹೊಂದುತ್ತ ಹೋಗಿ ಕಡೆಗೆ ಉದ್ಧಾರವಾಗುವುದಕ್ಕೆ ಕ್ರಮಸೃಷ್ಟಿಯೆನ್ನುವರು. ಅಕ್ರಮದಿಂದ ಅಪವಾದಾತ್ಮಕವಾಗಿ ಉದ್ಧಾರವಾಗುವುದಕ್ಕೆ ಯುಗಪಥ ಸೃಷ್ಟಿಯೆಂದೆನ್ನುವರು. ಪ್ರಥಮರು, ಶ್ರೀ ರೇಣುಕಾಚಾರ್ಯರು ಎಲ್ಲರೂ ಯುಗಪತ್‌ಸೃಷ್ಟಿಯವರೇ. ಇದರಂತೆ ಡೋಹರ ಕಕ್ಕಯ್ಯ, ಸಮಗಾರ ಹರಳಯ್ಯ, ಹೊಲೆಯರ ಶಿವನಾಗಮಯ್ಯ, ಮಾದರ ಚೆನ್ನಯ್ಯ ಮುಂತಾದವರೂ ಯುಗಪತ್‌ಸೃಷ್ಟಿಯವರೇ. ಏಕೆಂದರೆ ಇವರು ಅಸ್ಪೃಶ್ಯರಿದ್ದಾಗ್ಯೂ ಇವರ ಲಿಂಗಧಾರಣಕ್ಕೆ ಯಾವ ಪರಿಮಿತಿಯನ್ನೂ



CC-0. Jangamwadi Math Collection, Varanasi. An eGangotri Initiative

ನೋಡಲಿಲ್ಲ. ಮತ್ತು ಅಸ್ಪೃಶ್ಯರಿದ್ದಾಗ್ಯೂ ಯೋಗ್ಯರಾದವರನ್ನೇ (Subject) ಮೇಲಕ್ಕೆತ್ತಿಕೊಂಡಿರುವರು. ಆದುದರಿಂದಲೇ ಮಹಾನುಭಾವಿಗಳಾದ ಬಸವಣ್ಣನವರು "ಅಪ್ಪನು ನಮ್ಮ ಮಾದಾರ ಚೆನ್ನಯ್ಯ, ಜೊಪ್ಪನು ನಮ್ಮ ಡೋಹರ ಕಕ್ಕಯ್ಯ, ಅಣ್ಣನು ನಮ್ಮ ಕಿನ್ನರಿ ಬ್ರಹ್ಮಯ್ಯ" ಮೊದಲಾಗಿ ಯೋಗ್ಯರಾದವರ ಹೆಸರನ್ನೇ (Subject) ಕೊಟ್ಟಿರುವರಲ್ಲದೆ ಒಟ್ಟು ಆ ಕುಲಗಳ ಹೆಸರುಗಳನ್ನು ಮಾತ್ರ ಎಲ್ಲೆಲ್ಲಿಯೂ ಹೇಳಿಲ್ಲ. ಅಂದಮೇಲೆ ಹಿಂದುಮುಂದು ನೋಡದೆ ಧುಡಂ ಪ್ರವೇಶ ಮಾಡುವ ಇಂದಿನ ತರುಣರು ಇತ್ತ ಕಡೆಗೆ ವಿಶೇಷ ಗಮನಿಸಬೇಕು.

## ನಿಜವಾದ ವೀರಶೈವರು

(ಅ) ಇರಿವೆಗೆ ಮರದ ಯಾವ ವಾಲಿಯಲ್ಲಿ ಹಣ್ಣು ಕಳಿತಿರುವುದೆಂಬುದು ಗೊತ್ತಾದರೂ ಅದು ಮೊದಲಿಗೆ ಗಿಡದ ಬೊಡ್ಡೆಯನ್ನು ಮೂಸಿ ನೋಡಿ ಮರದ ಮೇಲಕ್ಕೇರಿ ಹಣ್ಣು ಇದ್ದ ವಾಲಿಗುಂಟ ಹೋಗಿ ಆ ಪಕ್ವವಾದ ಹಣ್ಣನ್ನು ಸವಿಯುವಂತೆ ಭಕ್ತನು ತಾನೇ ಗುರುವಾದ ದ್ದನ್ನು ಮರೆತು ಮೊದಲಿಗೆ ಗುರುವನ್ನು ಹುಡುಕಿ ಅವನ ಕರುಣೆಯನ್ನು ಪಡೆದು ಗುರುಪುತ್ರನಾಗಿ ಭಕ್ತಿಭಾವದಿಂದ ಆಚರಿಸಿ ಕಡೆಗೆ ಲಿಂಗಾಂಗ ಸಾಮರಸ್ಯವನ್ನು ಹೇಗೆ ಹೊಂದುವನೋ— (ಆ) ವಿಹಂಗಮವು (ತೊಗಲಬಾವಲಿಯು) ತಾನು ಇದ್ದ ಠಾವಿನಲ್ಲಿಯೇ ೧೨ ಯೋಜನಾಂತರದಲ್ಲಿರುವ ಹಣ್ಣಿನ ತೋಟದೊಳಗಿನ ಕಾಯಿಗಳು ಪಾಡಾದದ್ದನ್ನು ಘ್ರಾಣೇಂದ್ರಿಯದಿಂದ ಅರಿತು ಕಣ್ಣಿನ ಸಹಾಯದಿಂದ ಅಲ್ಲಿಗೆ ಹೋಗಿ, ಎರಗಿ, ಹಣ್ಣಿನ ಸ್ವಾದವನ್ನು ಸವಿಯುವಂತೆ ಭಕ್ತನು ಭಕ್ತಸ್ಥಲದಿಂದ ಮಾಹೇಶ್ವರ ಸ್ಥಲಕ್ಕೆ ಬಂದು, ಒದಗುವ ಎಡರುಗಳನ್ನು ಸಾಹಸದಿಂದ ಲಕ್ಷಿಸದೆ ಕ್ರಿಯಾನಿಷ್ಠನಾಗಿ ಹೇಗೆ ಮುಕ್ತಿಯನ್ನು ಪಡೆಯುವನೋ—(ಇ) ಕುಕ್ಕುಟವು (ಕೋಳಿಯು) ತನ್ನ ಹೊಟ್ಟೆಗಾಗಿ ಹುಳಗಳ ಹಾಗು ಕಾಳುಗಳ ದೆಶೆಯಿಂದ ತಿಪ್ಪಿ ಮೊದಲಾದ ಸ್ಥಾನಂಗಳಲ್ಲಿ ಸದಾ ತಿರುಗಾಡುತ್ತಿದ್ದರೂ ಸಮಯವರಿತು ಕೂಗುವಂತೆ, ಭಕ್ತನು ಪ್ರಸಾದದ ದೆಸೆಯಿಂದ ಹಲವು ಉದ್ಯೋಗಗಳನ್ನು ಮಾಡುತ್ತಿದ್ದರೂ ಮಾಹೇಶ್ವರ ಸ್ಥಲದಿಂದ ಪ್ರಸಾದಿ ಸ್ಥಲಕ್ಕೆ ಬಂದು ಅಲ್ಲಿ ಜಗತ್ತನ್ನೇ ಶಿವಪ್ರಸಾದವೆಂದು ಭಾವಿಸಿ ಸೇವಿಸಿಕೊಂಡು ಎಲ್ಲ ಸತ್ಕ್ರಿಯೆಗಳನ್ನು ಎಚ್ಚರಿಕೆಯಿಂದ ಮಾಡುತ್ತ ಸದಾಶಿವನ ಧ್ಯಾನದಲ್ಲಿ ಮಗ್ನನಾಗಿ ಹೇಗೆ ಶಿವಾನುಭವ ಸೌಖ್ಯವನ್ನು ಹೊಂದುವನೋ— (ಈ) ಮರ್ಕಟವು (ಮಂಗವು) ಹಣ್ಣಿನ ಮರವನ್ನು ಏರಿ ಅದರ ಫಲಗಳು ಹಣ್ಣಾಗಿವೆಯೋ ಇಲ್ಲವೋ ಎಂದು ತನ್ನ ಕೈಯಿಂದ ಹಿಚುಕಿ ನೋಡಿ ಕಸುಕಾದದ್ದನ್ನು ಬಿಟ್ಟು ಹಣ್ಣಾದದ್ದನ್ನು ಸೇವಿಸುವಂತೆ, ಭಕ್ತನು ಪ್ರಸಾದಿ ಸ್ಥಲದಿಂದ ಪ್ರಾಣಲಿಂಗಿ ಸ್ಥಲಕ್ಕೆ ಬಂದು ಮಹಾ ಶಿವಾನುಭಾವಿಯಾದಾಗ್ಯೂ ಅದ್ವೈತಿಗಳಾದ ದುರುಳ ವಾಗದ್ವೈತಿಯಾಗದೆ ಸದಾ ಸಮ್ಯಕ್-ಜ್ಞಾನ ಕ್ರಿಯೆಗಳನ್ನು ಮಾಡುತ್ತ ಹೇಗೆ ಸುಖಸಾಮ್ರಾಜ್ಯವನ್ನು ಹೊಂದುವನೊ— (ಉ) ಶ್ವಾನವು (ನಾಯಿಯು) ತನ್ನ ಯಜಮಾನನ ಮನೆಮಾರುಗಳನ್ನು ಏಕನಿಷ್ಠೆಯಿಂದಲೂ ಬಹು ಜಾಗರೂಕತೆಯಿಂದಲೂ ಕಾಯ್ದುಕೊಂಡಿರುತ್ತಿರಲು ಯಜಮಾನನು ಕೈಯೆತ್ತಿ ಹಾಕಿದ್ದನ್ನು ತಿಂದು, ಹೆಚ್ಚಿಗೆ ಆಸೆ ಮಾಡದೆ ಅಷ್ಟರಲ್ಲಿಯೇ ತೃಪ್ತಿಯಾಗಿದ್ದು, ತನ್ನ ಸೇವೆಯನ್ನು ಸಲ್ಲಿಸುವಂತೆ, ಭಕ್ತನು ತಾನು ತನ್ನ ತಿಳುವಳಿಕೆ ಹಾಗು ನಡೆವಳಿಕೆಗಳಿಂದ ಶರಣರ ಸ್ಥಲಕ್ಕೆ ಬಂದು ತನ್ನ ಪಂಚ ಜ್ಞಾನೇಂದ್ರಿಯ ಹಾಗು ಮನದಲ್ಲಿ ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ,



CC-0. Jangamwadi Math Collection, Varanasi. An eGangotri Initiative

ಪ್ರಸಾದಲಿಂಗ ಹಾಗು ಮಹಾಲಿಂಗವೆಂಬ ಷಡ್ವಿಧ ಲಿಂಗಗಳು ಇರುವುದರ ಜ್ಞಾನವನ್ನು ಮಾಡಿಕೊಂಡು ಆ ಆ ಲಿಂಗಗಳ ದ್ವಾರದಿಂದಲೇ ಜಗತ್ತು ಪ್ರಸಾರವಾಗುವುದನ್ನು ಕಂಡು ಲಿಂಗಾಣತಿಯಿಂದ ಬಂದದ್ದನ್ನು ಸೇವಿಸಿ, ಕೈಂಕರ್ಯದಿಂದ ಇದ್ದು, ಇರುವೆಯು ಸಕ್ಕರಿಯ ಸವಿಯನ್ನು ಸವಿಯುವಂತೆ ಶರಣನು ಹೇಗೆ ನಲಿದಾಡುವನೋ— ( ೫ ) ಗಜವು ( ಆನೆಯು ) ತಾನು ದಾರಿಗುಂಟ ಹೋಗುತ್ತಿರಲು ನಾಯಿಗಳು ಬೊಗಳಿದರೂ ಅದನ್ನು ಲಕ್ಷಿಸದೆ ಸ್ಥಿರ ಬುದ್ಧಿಯಿಂದ ಮುಂದಕ್ಕೆ ಸಾಗುವಂತೆ, ಭಕ್ತನು ಐಕ್ಯ ಸ್ಥಲದಲ್ಲಿದ್ದರೂ ಶಿವೋಹಂ ಭಾವವನ್ನು ಬಿಟ್ಟು ದಾಸೋಹಂ ಭಾವದಿಂದಿದ್ದು, ಹೇಳಲಿಕ್ಕೆ ಬಾರದಂತೆ— ಇದ್ದೂ ಇಲ್ಲದಂತೆ ಇದ್ದು— ಹೇಗೆ ಶಿವ ಜೀವೈಕ್ಯವನ್ನು ಹೊಂದುವನೋ; ಅಂಥ ಶ್ರದ್ಧೆ, ನಿಷ್ಠೆ, ಅವಧಾನ, ಅನುಭವ, ಆನಂದ, ಸಮರಸವೆಂಬ ಷಡ್ವಿಧ ಸ್ಥಲಂಗಳಲ್ಲಿ ಆಚರಿಸಿ, ಮೇಲೆ ಹೇಳಿದ ೬ ಭಾವಗಳನ್ನು ಅಳವಡಿಸಿಕೊಂಡು ಹಿಂದಕ್ಕೆ ಶ್ರೀ ಬಸವಾದಿ ಪ್ರಮಥರು ತಾವು ನುಡಿದು, ನಡೆದು ಲೋಕಶಿಕ್ಷಕರಾಗಿದ್ದುದನ್ನು ನಾವು ಕಣ್ಣಾರೆ ಕಂಡೂ ಅವರ ಸಾಂಪ್ರದಾಯಕರೆಂದು ಈಗ್ಯೂ ಕರೆದುಕೊಂಡರೂ ಈಗಿನವರಾದ ನಾವು ಆ ಪ್ರಮಥರ ನಡಾವಳಿಯನ್ನು ಅಲಕ್ಷಿಸಿ ಭಕ್ತ – ಭಕ್ತರಲ್ಲಿ ಭೇದ, ಜಂಗಮ- ಜಂಗಮರುಗಳಲ್ಲಿ ಭೇದಗಳನ್ನು ಆಗಂತುಕವಾಗಿ ಕಲ್ಪಿಸಿಕೊಂಡು ನಡೆಯುವುದೆಂದರೆ ವೀರಶೈವರ ದುರ್ದೈವವೇ ಸರಿ. ಶ್ರೀ ಬಸವಾದಿ ಪ್ರಮಥರು ಎಲ್ಲ ಮಾನವರ ಉದ್ಧಾರವಾಗಲೆಂದು, ಅಂತಃಕರಣದಿಂದ ಮುಕ್ತಿ ಮಾರ್ಗವನ್ನು ಬೀರಿ ಅದನ್ನು ಮುಕ್ತದ್ವಾರವಾಗಿ ತೆರೆದಿಟ್ಟಿರುವುದೆತ್ತ ! ಅದನ್ನು ನಾವು ಸಂಕುಚಿತ ದೃಷ್ಟಿಯುಳ್ಳವರಾಗಿ ನಾವೂ ಕಾಣದೇ ಇತರರಿಗೂ ಕಾಣದಂತೆ ಮುಚ್ಚಿಡುವದೆತ್ತ ! "ದಯವೇ ಧರ್ಮದ ಮೂಲವಯ್ಯಾ" ಎಂದು ಮಹಾನುಭಾವಿಗಳಾದ ಬಸವಣ್ಣನವರು ಸಾರಿದುದು ಎತ್ತ ! ನಮ್ಮ ಸದ್ಯದ ನಡಾವಳಿ ಎತ್ತ !

ಮಾತಾ ಚ ಪಾರ್ವತೀದೇವೀ । ಪಿತಾದೇವೋ ಮಹೇಶ್ವರಃ ॥
ಬಾಂಧವಾಃ ಶಿವ ಭಕ್ತಾಶ್ಚ । ಸ್ವದೇಶೋ ಭುವನತ್ರಯಂ ॥

ಎಂದು ಆಗಮದಲ್ಲಿ ಹೇಳಿರುವ ನಿಜವಾದ ವೀರಶೈವನ ಲಕ್ಷಣಗಳೆತ್ತ ! ಮತ್ತು ಕೂಪಮಂಡೂಕನ್ಯಾಯದಂತೆ ನಾ ಹೆಚ್ಚು ನಾ ಹೆಚ್ಚೆಂದು ಒಣ ಹೆಮ್ಮೆಯಿಂದ ಬಡಿದಾಡುವ ಸದ್ಯದ ವೀರಶೈವರೆತ್ತ!

"ಹೊಲೆಯ ಹೊಲೆಯ ಎಂದಡೆ, ಹೊಲೆಯರೆಂತಪ್ಪರಯ್ಯ ? ಹೊಲೆಯ ಹೊರಕೇರಿಯಲ್ಲಿರುವರು, ಊರೊಳಗಿಲ್ಲವಯ್ಯ ಹೊಲೆಯರು ? ತಾಯಿಗೆ ಬೈದವನೇ ಹೊಲೆಯ. ತಂದೆಗೆ ಉತ್ತರ ಕೊಟ್ಟವನೇ ಹೊಲೆಯ. ತಂದೆಗೆ ಬೈದವನೇ ಹೊಲೆಯ. ಕೊಡುವ ಹಣಕ್ಕೆ ಅಡ್ಡ ಬಂದವನೇ ಹೊಲೆಯ. ನಡುದಾರಿಗೆ ಮುಳ್ಳು ಹಚ್ಚಿದವನೇ ಹೊಲೆಯ. ಬ್ರಾಹ್ಮಣನ ಕುತ್ತಿಗೆ ಕೊಯ್ದವನೇ ಹೊಲೆಯ. ಹತ್ತು ಆಡಿದರೆ, ಒಂದು ನಿಜವಿಲ್ಲದವನೇ ಹೊಲೆಯ. ಅರ್ಥಕ್ಕೆ ಪ್ರಾಣಹತ್ಯವ ಮಾಡುವವನೇ ಹೊಲೆಯ. ಚಿತ್ತದಲ್ಲಿ ಪರಸತಿಯ ಬಯಸಿದವನೇ ಹೊಲೆಯ. ಲಿಂಗಮುದ್ರೆಯ ಕಿತ್ತಿದವನೇ, ಲಿಂಗಬಿಟ್ಟು ತಿರುಗುವವನೇ ಹೊಲೆಯ. ನಿಂದೆಯ ಮಾಡುವವನೇ ಹೊಲೆಯ. ಧರ್ಮವ ಮಾಡದವನೇ ಹೊಲೆಯ. ಬಸವನ ಕೊಂದವನೇ ಹೊಲೆಯ ಬಸವನ ಇರಿದವನೇ ಹೊಲೆಯ. ಲಿಂಗಪೂಜೆಯ ಮಾಡದವನೇ ಹೊಲೆಯ. ಇಂತಪ್ಪ ಹೊಲೆಯರು ಊರುತುಂಬ ಇರಲಾಗಿ, ಹೊರಕೇರಿಯವರಿಗೆ ಹೊಲೆಯರೆನಬಹುದೇ ?



CC-0. Jangamwadi Math Collection, Varanasi. An eGangotri Initiative

ಹೊಲೆ ಹುಟ್ಟಿದ ಮೂರುದಿನಕ್ಕೆ ಪಿಂಡಕ್ಕೆ ನೆಲೆಯಾಯಿತ್ತು, ಹೊಲೆಯನುಂಡ ಪತ್ರಾವಳಿ ಹೊಳಿಗೆ ಹರಗೋಲವಾಯಿತ್ತು, ಗುರುಗಳಿಗೆ ಚರ್ಮಾವುಗೆಯಾಯಿತ್ತು, ಹೂಡಲಿಕ್ಕೆ ಮಿಣಿ ಯಾಯಿತ್ತು, ಹೊಡೆಯಲಿಕ್ಕೆ ಬಾರಕೋಲವಾಯಿತ್ತು, ಅರಸನಿಗೆ ಮೃದಂಗವಾಯಿತ್ತು, ತೋಲು ನಗಾರಿಯಾಯಿತ್ತು, ತುಪ್ಪ ತುಂಬಲಿಕ್ಕೆ ಸಿದ್ಧಲಿಕೆ, ಎಣ್ಣೆ ತುಂಬಲಿಕ್ಕೆ ಬುದ್ಧಲಿಕೆ, ಸಿದ್ಧಲಿಕೇನ ತುಪ್ಪ, ಬುದ್ಧಲಿಕೇನ ಎಣ್ಣೆ, ಕಲ್ಲಶೆಟ್ಟಿ ಮಲ್ಲಶೆಟ್ಟಿಗಳ ಕೂಡಿ, ನಾ ಶೀಲವಂತ ತಾ ಶೀಲವಂತ ಎಂದು ಶುದ್ಧೈಸಿಕೊಂಡು ತಿಂದು, ಒಂದು ಸ್ಥಳಕ್ಕೆ ಬಂದಾಗ, ನನ್ನ ಕುಲ ಹೆಚ್ಚು, ನಿನ್ನ ಕುಲ ಕಡಿಮಿ ಎಂದು ಒಡಿದಾಡುವ ಕುನ್ನಿ ನಾಯಿಗಳ ಮೋರೆ ಮೋರೆಯ ಮೇಲೆ ನಮ್ಮ ಪಡಿಹಾರಿ ಉತ್ತಣ್ಣಗಳ .... .... .... .... .... .... .... ....
ಎಂದಾತ ನಮ್ಮ ದಿಟ್ಟಧೀರ ಅಂಬಿಗರ ಚೌಡಯ್ಯ ನಿಜಶರಣನು."

## ಸದ್ಯದ ವೀರಶೈವರು

ಸದ್ಯದ ವೀರಶೈವರ ನಡಾವಳಿಯನ್ನು ನಮ್ಮ ಶಬ್ದಗಳಿಂದ ಹೆಚ್ಚಿಗೆ ಹೇಳದೆ ಈ ಪುರಾತನರ ದಿವ್ಯ ವಚನಗಳನ್ನೇ ಇಲ್ಲಿ ಸಾಕ್ಷಿಯಾಗಿ ಉದಾಹರಿಸುತ್ತೇವೆ.

"ಅಯ್ಯಾ ನಾವು ಪರಮ ವಿರಕ್ತರು ಪಟ್ಟದೊಡೆಯರೆಂದು, ಪರದೇಶಯ್ಯಗಳು ಅತೀತ ಚರಮೂರ್ತಿಗಳೆಂದು, ಶಂಖಗಿಳಿಲು ದಂಡಾಗ್ರವ ಪಿಡಿದು, ಕಾವಿಕಾಷಾಯಾಂಬರವ ಹೊದ್ದು, ಮಹಾಘನಲಿಂಗ ಚರಮೂರ್ತಿಗಳೆಂದು ಚನ್ನಾಗಿ ನುಡಿಮಕೊಂಬ ತೊನ್ನ ಹುಲಿಮಾದಿಗರ ಪ್ರಸಂಗಕ್ಕೆ ಮನವೆಳಸದೆ ಮುಖವೆತ್ತಿ ನೋಡದೆ ಶಬ್ದ ಮುಗ್ಧನಾಗಿ ಸುಮ್ಮನೆ ಕುಳಿತಿರ್ದನು ಕಾಣಾ ನಿಮ್ಮ ಶರಣ! ಅದೇನು ಕಾರಣವೆಂದರೆ, ತನ್ನ ತಾನಾರೆಂದರಿಯದೆ, ತನ್ನ ಇಷ್ಟ ಮಹಾಘನಲಿಂಗದ ಗೊತ್ತುಮುಟ್ಟದೆ, ತನುಮನಧನವೆಂಬ ತ್ರಿವಿಧ ಪದಾರ್ಥವನರ್ಪಿಸಿ, ತ್ರಿವಿಧ ಪ್ರಸಾದವ ಗರ್ಭೀಕರಿಸಿಕೊಂಡ ಪ್ರಸನ್ನ ಪ್ರಸಾದವ ಸ್ವೀಕರಿಸಿ ಪರತತ್ತ್ವ ಪ್ರಸಾದಮೂರ್ತಿ ತಾನಾಗಲರಿಯದೆ, ಉಚ್ಚಂಗೀದುರ್ಗಿಗೆ ಬಿಟ್ಟ ಪೋತರಾಜನಂತೆ ಮಾರು ಮಾರು ಜಡೆಮುಡಿ ಗಡ್ಡಗಳ ಬಿಟ್ಟುಕೊಂಡು, ಡೊಂಬ ಜಾತಿಕಾರರಂತೆ ವೇಷವ ತೊಟ್ಟು, ಸಂಸ್ಕೃತಾದಿ ಪ್ರಾಕೃತಾಂತ್ಯ ಮಾದ ನಾನಾಶಾಸ್ತ್ರವ ಹೇಳಿ, ಸುಡುಗಾಡ ಸಿದ್ಧಯ್ಯಗಳಂತೆ ಕುಟಿಲ, ಕುಹಕ, ಯಂತ್ರ-ತಂತ್ರಗಳ ಕಟ್ಟುತ, ಪುರಜನರ ಮೆಚ್ಚಿಸಬೇಕೆಂದು, ಅಯ್ಯಾ ನಾವು ಕೆರೆ, ಭಾವಿ, ಮಠಮಾನ್ಯ, ಮದುವೆ, ಮಾಂಗಲ್ಯ, ದೀಕ್ಷೆ, ಪಟ್ಟಪ್ರಯೋಜನ, ಅಯ್ಯತನ, ಅನ್ನಕ್ಷೇತ್ರ, ಅರವಟಿಗೆ, ದಾಸೋಹ ಪುರಾಣ-ಪುಸ್ತಕ ಮಾಡಿಸಬೇಕೆಂದು ಗುರು - ಲಿಂಗ - ಜಂಗಮಕ್ಕಲ್ಲದೆ ನಿರಾಭಾರಿ ವೀರಶೈವಕ್ಕೆ ಹೊರಗಾಗಿ, ದುರಾಸೆ ಮುಂದುಗೊಂಡು ನಾನಾದೇಶವ ತಿರುಗಿ ಅರಸಗಳಾದಿ ದೇಸಾಯಿಗಳಂತ್ಯ ಮಾದ ಹೊಲೆ-ಮಾದಿಗರ ಕಾಡಿ, ಬೇಡಿ, ಹುಸಿಯ ಬೊಗಳಿ ವ್ಯಾಪಾರದ ಮರೆಯಿಂದ ನಡ ಊರ ಬೀದಿ ಬಾಜಾರದ ನಡುವೆ ಕುಳಿತು ಪರರೊಡವೆಯ ಅಪಹರಿಸುವ ಶೆಟ್ಟಿ, ವರ್ತಕ ಮುಂತಾದ ಸಮಸ್ತ ಕಳ್ಳರ ಮಕ್ಕಳ ಕಾಡಿ, ಬೇಡಿ, ಅವರು ಕೊಟ್ಟರೆ ಹೊಗಳಿ, ಕೊಡದಿರ್ದಡೆ ಬೊಗಳಿ, ಆ ಭ್ರಷ್ಟ ಹೊಲೆ-ಮಾದಿಗರು ಕೊಟ್ಟ ದ್ರವ್ಯಗಳ ಕೊಂಡು ಬಂದು, ಕಡೆಗೆ ಜೋರ ರೊಯ್ದರೆಂದು ಮಠದೊಳಗೆ ಮಡಗಿಕೊಂಡು ಪರಸ್ತ್ರೀಯರ .... .... .... ....



CC-0. Jangamwadi Math Collection, Varanasi. An eGangotri Initiative

ದುರ್ಗುಣ ದುರಾಚಾರಿಗಳ ಶ್ರೀಗುರು ಲಿಂಗಜಂಗಮವೆಂದು ಕರೆತಂದು ತೀರ್ಥಪ್ರಸಾದವ ತೆಗೆದು ಕೊಂಬುವವರಿಗೆ ಇಪ್ಪತ್ತೆಂಟು ಕೋಟಿ ಯುಗಪರಿಯಂತರದಲ್ಲಿ ನರಕಕೊಂಡದಲ್ಲಿಕ್ಕುವ ಕಾಣಾ ನಿಮ್ಮ ಶರಣ ಕಲಿದೇವರ ದೇವಾ."

ಈ ವಚನಗಳು ಮುದ್ರಿಕೆಗಳಿಂದ ಪುರಾತನರವು ಎಂದು ಕಾಣುತ್ತದೆ. ಆದರೆ ಒಳಗಿನ ವಿಷಯ ಪ್ರತಿಪಾದನೆಯ ಮೇಲಿಂದ ಅಂದರೆ ಒಂದು ಕಾಲಕ್ಕೆ ಘನತೆಗೇರಿದ ಸಮಾಜವು ಹೀನ ಸ್ಥಿತಿಗೆ ಬಂದಕಾಲಕ್ಕೆ ಜನರನ್ನು ಎಚ್ಚರಗೊಳಿಸುವ ಉದ್ದೇಶವಾಗಿ ಆಡಿದವುಗಳಂತೆ ಭಾವವುಳ್ಳವು ಗಳಾಗಿ ತೋರುವುದರಿಂದ ಇವು ಇತ್ತೀಚಿನವುಗಳೆಂದು ವಾಚಕರಿಗೆ ಅನಿಸಬಹುದು. ಆದರೆ ಸಮಾಜರಚನೆಯ ಕಾಲಕ್ಕೆ ಕೆಲವು ಹೇಡಿಗಳಾದ ಮೈಗಳ್ಳರು ಆ ಸಮಾಜ ಕಾರ್ಯದಲ್ಲಿ ತೋಂ ಕೆಗೆ ಉದ್ಯುಕ್ತರಾಗಿ ಹಿಂದುಗಡೆ ಕರ್ತವ್ಯಶೂನ್ಯರಾಗಿ ವರ್ತಿಸುವ ಕೆಲವರ ದೆಸೆಯಿಂದ ನುಡಿದವು ಗಳಂತೆ ತೋರುತ್ತವೆ. ಏಕೆಂದರೆ ಸಂಘಟನಾ ಕಾಲಕ್ಕೆ ಎಚ್ಚರಿಕೆಗಳನ್ನು ( ಪ್ರೆಸ್ ನೋಟಿನಂಥ) ಕೊಡುವ ಪ್ರಸಂಗ ಬರುತ್ತದೆ. ಆದುದರಿಂದ ಇವು ಪ್ರಮಥರವುಗಳೇ ಆಗಿರಬೇಕೆಂದು ನಮ್ಮ ಬಲವಾದ ನಂಬಿಗೆ. ಇದನ್ನು ಇತಿಹಾಸ ಸಂಶೋಧಕರು ವಿಶೇಷ ಗಮನಿಸತಕ್ಕದ್ದು.

ನಮ್ಮಲ್ಲಿಯ ಆಗಂತುಕ ರೂಢಿಯನ್ನು ಅನ್ಯರು ಎತ್ತಿ ನಗೆಯಾಡುವುದಕ್ಕಿಂತಲೂ ಪೂರ್ವದಲ್ಲಿಯೇ ಅವುಗಳನ್ನು ಸರಿಪಡಿಸಿಕೊಳ್ಳುವುದು ಒಳ್ಳೇ ಯುಕ್ತವೆಂದು ಬಗೆದು ಈ ರೀತಿ ಯಾಗಿ ಈ ವಿಷಯವನ್ನು ಸ್ಪಷ್ಟೀಕರಿಸಿದ್ದೇವೆ. ಈ ತತ್ತ್ವಗಳಂತೆ ನಿರ್ಭಯದಿಂದ ನಡೆದದ್ದಾದರೆ ಲೇಖಕರ ಶ್ರಮದ ಸಾರ್ಥಕ್ಯವಾಗುವುದೆಂದು ನಂಬುತ್ತೇವೆ.



CC-0. Jangamwadi Math Collection, Varanasi. An eGangotri Initiative



# ಶೈವ ಧರ್ಮದ ವಿಕಾಸ

## ಪೀಠಿಕೆ

ಭರತಖಂಡದ ಪುರಾತನ ನಾಗರಿಕತೆಯು ಕಲೆ, ವಾಸ್ತುಶಿಲ್ಪ, ಸಾಹಿತ್ಯ, ಮತ, ನೀತಿ, ವಿಜ್ಞಾನ ಮುಂತಾದ ಹಲವು ಅಂಗಗಳಾಗಿ ಬೆಳವಣಿಗೆಯಿಂದುಂಟಾದ ಒಂದು ರೂಪವನ್ನು ಹೊಂದಿರುತ್ತದೆ. ಈ ಹಲವು ಅಂಗಗಳು ಆ ಕಾಲಕ್ಕೆ ತಕ್ಕ ರೀತಿಯಲ್ಲಿ, ಆ ಕಾಲಕ್ಕೆ ತಕ್ಕ ಭಾವನೆಗೂ ತಿಳುವಳಿಕೆಗೂ ಅನುಗುಣವಾಗಿ ಬೆಳೆದಿದ್ದುವು. ಆದರೆ ಇವುಗಳೆಲ್ಲಕ್ಕಿಂತಲೂ "ತತ್ತ್ವ" ವಿಚಾರವೇ ಈ ಭರತಖಂಡದ ವಿಚಾರದ ಮುಖ್ಯ ಸಿದ್ಧಿಯಾಗಿರುತ್ತದೆ. ಈ ತತ್ತ್ವ ವಿಚಾರವು ಕೇವಲ ತಿಳಿವಳಿಕೆ ಮತ್ತು ಅನುಷ್ಠಾನ ಎನ್ನುವ ಎರಡು ರೀತಿಗಳಲ್ಲಿಯೂ ಅತಿ ಉನ್ನತ ಧ್ಯೇಯವು ಎಂಬುದಾಗಿ ಭಾವಿಸಲ್ಪಟ್ಟಿತು. ಈ ನಾಡು ವಿಸ್ತೀರ್ಣವಾದ ಪ್ರದೇಶದಲ್ಲಿ ನಾನಾವಿಧ ಜನದ ಜೀವನದಿಂದಾದ ಸಂಸ್ಕೃತಿಯ ಸಂಕೀರ್ಣ ಬೆಳವಣಿಗೆಯು ಕೇಂದ್ರೀಕರಿಸುವ ಸ್ಥಾನ ವಾಗಿರುತ್ತದೆ. ಈ ದೇಶವು ವಿಸ್ತಾರವಾದುದು. ಇದರಲ್ಲಿ ವಾಸವಾಗಿರುವವರು ನಾನಾ ಜನಾಂಗ ದವರು. ಇವರುಗಳ ಆಚರಣೆಗೆ ವ್ಯವಹಾರ ಹಲವು ಬಗೆಯಾಗಿರುವುದು. ಹೀಗೆ ನಾನಾಬಗೆಯ ಜೀವನದಲ್ಲಿ ಒಟ್ಟಾಗಿ ಬೆಳೆದು ಬಂದಿರುವ ಸಂಕೀರ್ಣಸಂಸ್ಕೃತಿಯಲ್ಲಿ ಈ ವ್ಯತ್ಯಾಸಗಳು ಎಲ್ಲವೂ ಮರೆಯಾಗಿ ಒಂದೇ ಐಕ್ಯವನ್ನು ತೋರಿಸುವ ಕೇಂದ್ರಸ್ಥಾನವೇ ಈ ತತ್ತ್ವಜ್ಞಾನವಾಗಿದೆ. ಈ ದೇಶದ ದಂಡಯಾತ್ರೆಗಳಿಂದಲ್ಲ; ಆಯಾಯ ಕಾಲದಲ್ಲಿ ಏಳಿಗೆಗೆ ಬಂದ ಸ್ವತಂತ್ರ ರಾಷ್ಟ್ರಗಳಿಂದಲ್ಲ; ಈ ದೊಡ್ಡ ರಾಜನು, ಆ ಚಕ್ರವರ್ತಿಯು ಕಟ್ಟಿದ ಸಾಮ್ರಾಜ್ಯದಿಂದಲ್ಲ. ಆದರೆ ಅದು ಆತ್ಮೀಕ ಗುರಿಗಳಿಂದಲೂ ಆತ್ಮಾರ್ಥ ವಿಧಿಗಳಿಗೆ ಒಳಪಟ್ಟು ನಡೆಯುವುದರಿಂದಲೂ ಈ ಐಕ್ಯಮತವಿರುವುದು. ಇವುಗಳು ಇತರ ಎಲ್ಲಾ ವಿಷಯಗಳಿಗಿಂತಲೂ ಮೇಲಾದುವು ಎಂಬ ಗಣನೆಯು ಈ ಭರತ ದೇಶದಲ್ಲಿ ವಾಸವಾಗಿರುವ ಮಕ್ಕಳಿಗೂ ಕಂಡುಬರುವ ಭಾವವು. ಇದು ಈ ದೇಶದಲ್ಲಿ ಆದ ಎಲ್ಲಾ ರಾಷ್ಟ್ರೀಯ ಮಾರ್ಪಾಡುಗಳು ನಾಶವಾದರೂ ನಾಶವಾಗದೆ ಉಳಿದು ನೆಲಸಿ ಬಂದಿರುವುದು.

ಗ್ರೀಕರು, ಹೂಣರು, ಸಿಥಿಯನ್ನರು, ಪಠಾಣರು, ಮೊಗಲರು ಈ ದೇಶವನ್ನು ಆಕ್ರಮಿ ಸಿದರು. ಇದರ ರಾಷ್ಟ್ರೀಯ ಯಂತ್ರವನ್ನು ಒಳಪಡಿಸಿಕೊಂಡು ನಡೆಯಿಸಿದರು. ಆದರೆ ನಾಡಿನ ಪ್ರಜೆಗಳ ಮನಸ್ಸನ್ನು ಅವರು ತಮ್ಮ ಆಳ್ವಿಕೆಗೆ ಒಳಪಡಿಸಲಿಲ್ಲಾ. ಇವರುಗಳ ಈ ರಾಷ್ಟ್ರೀಯ



CC-0. Jangamwadi Math Collection, Varanasi. An eGangotri Initiative

ಸಂಭವಗಳು ಚಂಡ ಮಾರುತದಂತೆ ಬಂದುಹೋದುವು. ಋತುಗಳಂತೆ ತೋರಿ ಬದಲಾಯಿಸಿ ಹೋದುವು. ಇವುಗಳು ಕೇವಲ ಪ್ರಾಕೃತಿಕ ಅಥವಾ ಭೌತಿಕ ಸಂಭವಗಳಂತೆ ಆದುವು. ಹಿಂದೂ ಸಂಸ್ಕೃತಿಯ "ಆತ್ಮಸತ್ತ್ವ"ವನ್ನು ಅವು ಚಲಿಸಲಿಲ್ಲ; ಬಾಧಿಸಲಿಲ್ಲ. ಈಗ ಹಲವು ಶತಮಾನಗಳ ಕಾಲ ಅಡಗಿದ್ದು ಈಗ ತಿರುಗಿಯೂ ಸೃಷ್ಟಿಕಾರ್ಯಗಳಲ್ಲಿ ಅಲ್ಲಲ್ಲಿ ತೋರುತ್ತಿರುವುದು. ಭರತ ಖಂಡದ ಸಂಸ್ಕೃತಿಯ ತಾತ್ಪರ್ಯದಲ್ಲಿ ಅಡಗಿರುವ ಶಕ್ತಿಯನ್ನು ವಿಚಾರಿಸಲು ಇಚ್ಛಿಸುವ ಎಲ್ಲರೂ ಈ ನಾಡಿನ ತತ್ತ್ವ ವಿಚಾರದ ಚರಿತ್ರೆಯನ್ನು ಸರಿಯಾಗಿ ಅರಿಯಬೇಕು. ಈ ತತ್ತ್ವ ವಿಚಾರವೇ ನಮ್ಮ ದೇಶದಲ್ಲಿ ಉತ್ತಮವಾಗಿಯೂ ಉನ್ನತವಾಗಿಯೂ ಬೆಳೆದಿರುವ ಎಲ್ಲಾ ವಿಷಯಕ್ಕೂ ಅಂಡ ಪ್ರಧಾನದಂತಿರುವುದು.

ಭಾರತತತ್ತ್ವವಿಚಾರದ ತಿಳುವಳಿಕೆಯು ಭಾರತದ ಹೃದಯವನ್ನು ಸರಿಯಾಗಿ ಅರಿಯುವುದಕ್ಕೆ ಮಾತ್ರವೇ ಅಲ್ಲ; ಭಾರತದ ಪ್ರಾಚೀನ ವಿಚಾರಸರಣಿ, ಇತಿಹಾಸವನ್ನು ತಿಳಿಯುವುದಕ್ಕೂ ಅಲ್ಲ. ಈ ಕಾಲದಲ್ಲಿ ಮನುಷ್ಯರು ಚರ್ಚಿಸಿರುವ ಸಮಸ್ಸೆಗಳು ಭಾರತದಲ್ಲಿಯೂ ಹೆಚ್ಚುಕಡಿಮೆ ಹಲವು ರೂಪಗಳಲ್ಲಿ ಚರ್ಚಿಸಲ್ಪಟ್ಟಿವೆ. ಆಧುನಿಕ ಸಮಸ್ಸೆಗಳಿಗೂ ವಿವೇಚನೆ ವಿಚಾರ ರಚನೆಗಳಿಗೂ ಭಾರತತತ್ತ್ವ ವಿಚಾರಜ್ಞಾನವು ತಕ್ಕ ಬೆಳಕನ್ನು ಕೊಡುವುದು. ಈ ದೃಷ್ಟಿಯಿಂದಲೂ ಪ್ರಾಚೀನ ಧರ್ಮತತ್ತ್ವ ಇವುಗಳ ತಿಳುವಳಿಕೆಯು ಅವಶ್ಯಕವಾಗಿದೆ.

## ಶೈವ ಧರ್ಮದ ಉಗಮ

ಶೈವ ಧರ್ಮವು ನಮ್ಮ ದೇಶದಲ್ಲಿ ಬಹು ಕಾಲದಿಂದ ಆಚರಣೆಯಲ್ಲಿರುತ್ತದೆ. ಇದು ದಕ್ಷಿಣ ದೇಶದಲ್ಲಿ ಉದಯಿಸಿ ದಕ್ಷಿಣ ದೇಶದವರಿಂದ ಆದಿಯಲ್ಲಿ ಬೆಳೆದು ಬಂದಿತು ಎನ್ನುವುದಕ್ಕೆ ಹಲವು ನ್ಯಾಯಗಳುಂಟು. ಆದರೂ ಶೈವ ಸಮಯವು ಕಾಶ್ಮೀರ, ನೇಪಾಳ, ಘೂರ್ಜರ ಮೊದಲಾದ ಉತ್ತರ ದೇಶಗಳಲ್ಲಿ ಅನುಷ್ಠಾನದಲ್ಲಿರುವುದರಿಂದಲೂ ಶೈವ ಧರ್ಮವು ದಕ್ಷಿಣ ದೇಶಕ್ಕೇ ಸೇರಿದುದು ಎಂದು ಹೇಳುವುದು ಸರಿಯಾದುದಲ್ಲ. ಅಲ್ಲದೆ ಮೊಹೆಂಜದಾರೋದಲ್ಲಿ ಶಿವಲಿಂಗದಂತಿರುವ ಶಿಲೆಗಳು ಕಂಡುಬರುವುದರಿಂದ ಅಲ್ಲಿ ಶೈವ ಧರ್ಮಾವಲಂಬನೆ ರೂಢಿಯಲ್ಲಿದ್ದಿತೆಂದು ಹೇಳುವವರೂ ಉಂಟು. ಮತ್ತು ಹಳೆಯದಾದ ಶೈವ ಸಮಯ ಶಾಸ್ತ್ರಗಳು ಸಂಸ್ಕೃತ ಭಾಷೆಯಲ್ಲಿಯೇ ಬರೆಯಲ್ಪಟ್ಟಿವೆ. ಈ ಸಂಸ್ಕೃತ ಭಾಷೆಯು ಒಂದು ಜಾತಿಯವರಿಗೆ ಸೇರಿದ ಭಾಷೆ ಎಂಬುದು ವಿಮರ್ಶಕರು ಹೇಳುವ ಮಾತಲ್ಲ. ಸಂಸ್ಕೃತ ಭಾಷೆಯು ಭರತಖಂಡದಲ್ಲಿ ಸಮಯ ಜ್ಞಾನವು ಹೆಚ್ಚಾದ ಎಲ್ಲಾ ಮತ ಪಂಥದವರು ತಮ್ಮ ತಮ್ಮ ಮತವನ್ನು ಲೋಕಕ್ಕೆ ಹೇಳುವುದಕ್ಕೆ ಆರಿಸಿ ಕೊಂಡ ಭಾಷೆಯಾಗಿದೆ. ಶೈವಾಗಮಗಳೂ ಅವುಗಳನ್ನು ಅನುಸರಿಸಿ ತೋರಿದ ಉಪಾಗಮಗಳೂ ಪ್ರಕರಣ ಗ್ರಂಥಗಳೂ ಸಂಸ್ಕೃತದಲ್ಲಿಯೇ ಇರುತ್ತವೆ. ದ್ರಾವಿಡ ಭಾಷೆಯನ್ನು ತೆಗೆದುಕೊಂಡರೆ "ತಿರುವುಂದಿಯಾರ್, ತಿರುಕ್ಕಳಿಟ್ರುಪ್ಪಡಿಯಾರ್" ಮುಂತಾದ ಕೆಲವು ಗ್ರಂಥಗಳೇ ಮೊದಲು ತೋರಿದುವು ಎಂದು ಕಾಣುತ್ತದೆ. ಅವುಗಳು ಸಂಸ್ಕೃತ ಗ್ರಂಥಗಳಲ್ಲಿ ಹೆಚ್ಚಾದುವು ತೋರಿದ ಮೇಲೆಯೇ ತೋರಿದವು ಎನ್ನಬೇಕು.

ಶೈವ ಧರ್ಮದ ಪ್ರಾರಂಭವು ಯಾವ ಕಾಲದಲ್ಲಿ ಉಂಟಾದುದೆಂದು ಗೊತ್ತಾಗುವುದಿಲ್ಲ. ಅದರ ಚರಿತ್ರೆಯು, ವೈದಿಕ ಧರ್ಮವೂ ಅದರ ಹಿಂದಿನ ಧರ್ಮವೂ ಆದ ಎರಡು ಬೆಳವಣಿಗೆಗಳ



CC-0. Jangamwadi Math Collection, Varanasi. An eGangotri Initiative

ಸೇರುವಿಕೆ. ಇದಕ್ಕೆ ಸೇರಿದ ತತ್ತ್ವ ವಿಚಾರವೂ ದೈವವಿಚಾರವೂ ಬೇರೆಯಾಗಿವೆ.ಇದು ಯೋಗಕ್ಕೂ ಅತಿ ಸಂಬಂಧವನ್ನು ತೋರಿಸುತ್ತದೆ. ಇದು ಒಂದು ಮತವಲ್ಲ. ಅನೇಕ ಸಂಬಂಧಪಟ್ಟ ಮತಗಳ ಒಟ್ಟುಗೂಡುವಿಕೆಯಾಗಿದೆ. ಈ ಮತದಲ್ಲಿ ಒಂದು ಕಡೆ ಬಹು ನಿರ್ಮಲ ಉನ್ನತ ಜೀವನ, ಮತ್ತೊಂದು ಕಡೆ ಅತಿ ಹೀನ ಪದ್ಧತಿ ಕಂಡುಬರುತ್ತದೆ. ಶೈವವು ಭರತಖಂಡದಲ್ಲಿ ಎಲ್ಲೆಲ್ಲಿಯೂ ವ್ಯಾಪಿಸಿರುವುದಲ್ಲದೆ ಮಧ್ಯ ಏಷ್ಯಾ ಪರ್ವತಗಳ ಆಚೆಯೂ ಸಮುದ್ರವನ್ನು ದಾಟಿ ಪೂರ್ವ ದ್ವೀಪ ಸ್ತೋಮಗಳಲ್ಲಿಯೂ ವ್ಯಾಪಿಸಿರುತ್ತದೆ. ಇದರ ಉತ್ಪತ್ತಿಯನ್ನೂ ಬೆಳವಣಿಗೆಯ ಮುಖ್ಯವಾದ ಅಂತಸ್ತುಗಳನ್ನೂ ಸ್ವಲ್ಪ ನೋಡೋಣ. ಸಾಹಿತ್ಯ, ಪುರಾತನ ಶಾಸನ ಇವುಗಳಿಂದ ಇದರ ವ್ಯಾಪ್ತಿಯನ್ನೂ ಇದು ಹೇಗೆ ಮನುಷ್ಯನನ್ನು ಬದಲಾಯಿಸಿದೆ ಎನ್ನುವುದನ್ನೂ ನೋಡೋಣ. ಶೈವ ಧರ್ಮದ ಮುಖ್ಯ ಗುಣಗಳು ಶಿವನಿಗೆ ಪರತತ್ತ್ವವನ್ನು ಹೇಳುವುದು, ಶಿವ ಸಗುಣಮೂರ್ತಿ ವೈಶಿಷ್ಟ್ಯ, ಶಿವನಿಗೂ ಭಕ್ತರಿಗೂ ಇರುವ ಉಜ್ವಲ ವೈಯುಕ್ತಿಕ ಸಂಬಂಧ ಈ ಗುರುತುಗಳೆಲ್ಲವೂ ಶ್ವೇತಾಶ್ವತರ ಉಪನಿಷತ್ತಿನಲ್ಲಿ ಬಹಳ ಸ್ಪಷ್ಟವಾಗಿ ಕಂಡುಬರುತ್ತವೆ. ಶೈವ ಧರ್ಮದ ಮುಖ್ಯಾಂಶ ಗಳೆಲ್ಲವೂ ಈ ಉಪನಿಷತ್ತಿನಲ್ಲಿ ಕಾಣುತ್ತವೆ.

'ಶಿವ' ಶಬ್ದವು ನಾಮಪದವಾಗಿ ಋಗ್ವೇದದಲ್ಲಿ ಹೆಚ್ಚಾಗಿ ಬರುವುದಿಲ್ಲ. ಅನೇಕ ದೇವತೆ ಗಳಿಗೆ "ಮಂಗಳಕರ" ಎನ್ನುವ ಅರ್ಥದಲ್ಲಿರುತ್ತದೆ. ರುದ್ರನಿಗೂ ಒಂದು ಕಡೆ ಉಪಯುಕ್ತ ವಾಗಿದೆ. ಋಗ್ವೇದದ ಅತಿ ಪುರಾತನ ಭಾಗದಲ್ಲಿಯೂ ಶಿವಲೀಲೆಗಳ ಸೂಚನೆಗಳು ಕಂಡುಬರು ತ್ತವೆ. ಯಜುರ್ವೇದದಲ್ಲಿಯೂ ರುದ್ರನ ಸಂಬಂಧವಾದ ಕಥೆಗಳು ಕಾಣುತ್ತವೆ. ಅವರಲ್ಲಿರುವ "ಶತರುದ್ರೀಯ" ದಲ್ಲಿ ರುದ್ರ ಶಿವನನ್ನು ಕುರಿತು ಭಾವಗಳೆಲ್ಲವೂ ಒಂದಾಗಿ ಸೇರಿಸಿರುತ್ತವೆ. ಅವುಗಳ ಮುಂದಿನ ಬೆಳವಣಿಗೆಯು ಶ್ವೇತಾಶ್ವತರ ಉಪನಿಷತ್ತಿನ ವೇದಾಂತವಾಗಿ ಕೊನೆ ಗೊಂಡಿರುತ್ತದೆ. ಮುಂದಕ್ಕೆ ಶಿವಕಥೆಗಳು ಉಪನಿಷತ್ತುಗಳಲ್ಲಿಯೂ ಶೈವ ಪುರಾಣಗಳಲ್ಲಿಯೂ ವಿಸ್ತಾರ ಹೊಂದಿರುತ್ತವೆ. ಶತರುದ್ರೀಯದ ಮಹಿಮೆಯು "ಜಾಬಾಲೋಪನಿಷತ್ತಿ"ನಲ್ಲಿ ವಿವರ ವಾಗಿದೆ. ತಮಿಳು ಪೆರಿಯಪುರಾಣದಲ್ಲಿಯೂ ಶತರುದ್ರೀಯದ ಮಹಿಮೆಯನ್ನು ಒತ್ತಿ ಹೇಳಿದೆ.

## ಶೈವ ಧರ್ಮದ ಸ್ವರೂಪ

ಶೈವ ಧರ್ಮವನ್ನು ವಿಮರ್ಶಿಸುವಲ್ಲಿ ಮುಖ್ಯವಾಗಿ ಎಲ್ಲರಿಗೂ ತೋರುವುದು ಅದರ ಸಮನ್ವಯಭಾವ, ಎಲ್ಲವನ್ನೂ ಒಳಕೊಳ್ಳುವ ತತ್ತ್ವ, ಅನೇಕ ಪಕ್ಷತ್ವ ಆರಿಸಿಕೂಡಿಸಿದಂತ ಸರ್ವ ವನ್ನೂ ಒಳಕೊಂಡಿರುವ ಸ್ವಭಾವ. ಇದು ಹಿಂದೆ ಹೇಳಿದ ಹಾಗೆ ಶ್ವೇತಾಶ್ವತರ ಉಪನಿಷತ್ತಿನಲ್ಲಿ ಸೂಚಿಸಿರುವುದಾದರೂ ಯೋಗ, ಸಾಂಖ್ಯ, ವೇದಾಂತಗಳ ಮಿಶ್ರವಾಗಿ ಕಾಣುವುದಾದರೂ ಆ ದರ್ಶನಗಳು ಉಪನಿಷತ್ತು ತೋರಿದ ಮೇಲೆ ಇದು ಉಂಟಾದುದು ಎಂದಾಗಲೀ—ಅವುಗಳಿಂದ ಬೆಳೆದುದು ಎಂದಾಗಲೀ ಹೇಳಲಿಕ್ಕೆ ಬರುವುದಿಲ್ಲ. ಭರತಖಂಡದ ದರ್ಶನಗಳು— ಒಂದೊಂದು ಇಂತಹ ಕಾಲದಲ್ಲಿ ಇದಕ್ಕೆ ಹಿಂದೆಯೋ ಮುಂದೆಯೋ ತೋರಿದುವೆಂದು ಐತಿಹಾಸಿಕ ದೃಷ್ಟಿಯಿಂದ ವಿಮರ್ಶಿಸಿ ನೋಡಿದರೆ ಹೇಳುವುದಕ್ಕೆ ಆಗುವುದಿಲ್ಲ. ಇವುಗಳೊಂದೊಂದೂ ಬಹುಕಾಲದ ಹಿಂದೆಯೇ ಬೆಳೆದು ಫಲಕ್ಕೆ ಬಂದಿರುತ್ತವೆ. ಇವುಗಳನ್ನು ಕ್ರಮಪಡಿಸುವುದು ಆಗುವುದೇ ಇಲ್ಲ. ಅಲ್ಲದೆ ಕಾಲಕ್ರಮದಲ್ಲಿ ಇದು ಇದಕ್ಕೆ ಹಿಂದಿನದೆಂದು ಹೇಳಲಾಗದು. ದರ್ಶನಗಳು ಒಂದರ



CC-0. Jangamwadi Math Collection, Varanasi. An eGangotri Initiative

ಪಕ್ಕದಲ್ಲಿಯೇ ಮತ್ತೊಂದು ಬೆಳೆದು ಬಂದಿರುತ್ತವೆ. ಅನೇಕ ಶತಮಾನಗಳಾಗಿ ಒಟ್ಟಿಗೆ ನೆಲೆಸಿ, ಹಿಂದಿನ ಕಾಲದಲ್ಲಿ ಸೂಕ್ಷ್ಮವಾಗಿ ತೋರಿರುವುದು. ಮುಂದೆ ಕ್ರಮ ಕಟ್ಟು ಸ್ಪಷ್ಟತೆ ಇವುಗಳಲ್ಲಿ ಹೆಚ್ಚಾದ ಅಭಿವೃದ್ಧಿಯನ್ನು ಹೊಂದಿ ಬಂದಿರುತ್ತವೆ. ಈ ಧರ್ಮಕ್ಕೆ ಅನುಸಾರವಾಗಿ ಮತವೂ ಅನಾದಿಯಾಗಿ ಬಂದಿರುತ್ತದೆ. ಸಾರ್ವಜನಿಕ ಮತಾವಲಂಬನೆಯೂ ಅನಾದಿಯಾಗಿಯೇ ರೂಪಭೇದದೊಡನೆ ನೆಲಸಿ ಬೆಳೆದು ಮಾರ್ಪಾಡುಗಳನ್ನು ಹೊಂದಿ ಕವಲೊಡೆದು ಹರಡಿ ಬಂದಿರುತ್ತದೆ. ಇಂತಹ ಬೆಳವಣಿಗೆಯಲ್ಲಿ ಪರಸ್ಪರ ಪರಿಣಾಮವನ್ನು ಹೊಂದಿವೆ.

ಶೈವಧರ್ಮವು ಸಾರ್ವತ್ರಿಕ ಧರ್ಮ (ವಿಶ್ವಧರ್ಮ) ವೆನ್ನುವುದಕ್ಕೆ ಯಾವುದು ನಿಜವಾದ ಧರ್ಮ—ಮತಗಳೂ, ಅವುಗಳಲ್ಲಿ ಹೇಳುವ ತತ್ತ್ವ ಕಟ್ಟಳೆಗಳೂ, ಶಾಸ್ತ್ರಗಳೂ ವಿವಿಧವಾಗಿ ಒಂದಕ್ಕೊಂದು ವಿರುದ್ಧವಾಗಿ ಇರುತ್ತವೆ. ಯಾವುದು ನಿಜವಾದ ಧರ್ಮ? ಯಾವುದು ನಿಜವಾದ ಶಾಸ್ತ್ರ? ಯಾವುದು ನಿಜವಾದ ತತ್ತ್ವ? ಇದನ್ನು ಸರಿ ಅದನ್ನು ತಪ್ಪು ಎಂದು ಖಂಡಿಸಿ ಹೋರಾಡದೆ ಎಲ್ಲವನ್ನೂ ತನ್ನಲ್ಲಿ ಅಡಗಿಸಿಕೊಂಡಿರುವುದೇ ನಿಜವಾದ ಧರ್ಮ; ಇದುವೆ ವೇದದಲ್ಲಿಯೂ ಆಗಮಗಳಲ್ಲಿಯೂ ಪ್ರತಿಪಾದಿತವಾಗಿದೆ. ಇದುವೆ "ಹರನ" ಪಾದದಲ್ಲಿ ಅಡಗಿರುವುದೆಂದು ಹಿರಿಯರು ಹೇಳುವರು. ಆದುದರಿಂದ ಶೈವದಲ್ಲಿ ವೈದಿಕ ಯಾವುದು? ಅವೈದಿಕವಾವುದು? ವೇದಪೂರ್ವತತ್ತ್ವ ಯಾವುದು? ವೇದೋಕ್ತತತ್ತ್ವ ಯಾವುದು? ಎಂದು ಚರ್ಚಿಸಲು ಸಾಮಾನ್ಯವಾಗಿರುತ್ತದೆ. ಅನಾದಿಯಾಗಿ ನಾನಾಭೇದವುಳ್ಳದ್ದಾಗಿ ಬಂದಿರುತ್ತದೆ ಎಂದು ಹೇಳುವುದಲ್ಲದೆ ಈಗ ತಾನೆ ತೋರಿದ್ದು ಹೀಗೆ ಹೀಗೆ ಬೆಳದಿದ್ದು ಎಂದು ವಿಂಗಡಿಸಿ ಹೇಳುವುದು ಈಗ ನಮಗೆ ಸಿಕ್ಕಿರುವ ಆಧಾರಗಳಿಂದ ಆಗದ ಕಾರ್ಯ.

ಶೈವಧರ್ಮವು ಜನಸಾಮಾನ್ಯದ ಆಚರಣೆಯಲ್ಲಿ ಹಲವು ರೂಪಗಳನ್ನು ಹೊಂದಿರುತ್ತದೆ. ಇವುಗಳಲ್ಲಿ ಸಗುಣೋಪಾಸನೆಯು ಒಂದು ಮುಖ್ಯ ಅಂಶವಾಗಿ ಕಾಣುತ್ತದೆ. ಲಿಂಗೋಪಾಸನೆಯು ಸಗುಣೋಪಾಸನೆಗಳಲ್ಲೆಲ್ಲಾ ಅತಿ ಉನ್ನತ ಭಾವದ ದಿವ್ಯರೂಪವಾಗಿ ಇರುವುದನ್ನು ಕಾಣಬಹುದು. ಈ ಲಿಂಗೋಪಾಸನೆಯು ಅನಾದಿಯಾಗಿ ಬಂದಿರುವುದು. "ಮೊಹೆಂಜದರೋ" ನಾಗರಿಕತೆಯಲ್ಲಿಯೂ ಸಂಸ್ಕೃತಿಯಲ್ಲಿಯೂ ಇದಕ್ಕೆ ಅವಕಾಶವಿದ್ದಂತೆ ಕಾಣುತ್ತದೆ. ಪುರಾತನ ತಮಿಳು ಸಂಸ್ಕೃತಿಯಲ್ಲಿ ಇದು "ಕಂದಳಿ" ಎಂದು ತಾನೇ ಆಗಿ ತತ್ತ್ವವತೀತವಾದ ಒಂದು ವಸ್ತುವಿಗೆ ರೂಪವಾಗಿ ಇದ್ದಂತೆ ಕಾಣುತ್ತದೆ. ಶೈವ ಧರ್ಮಕ್ಕೆ ಯೋಗ, ಸಾಂಖ್ಯ, ವೇದಾಂತಗಳು ಹೆಚ್ಚಾದ ಸಂಬಂಧವುಳ್ಳವುಗಳಾಗಿವೆ. ಪತಿ, ಪಶು, ಪಾಶ, ವಸ್ತುನಿರ್ದೇಶವು ಇದರಲ್ಲಿ ಕಾಣುತ್ತಲಿದೆ. ವಿಭೂತಿಧಾರಣೆಯು ಅಥರ್ವಶಿರಸ್ಸು ಉಪನಿಷತ್ತಿನಲ್ಲಿ ಹೇಳಲ್ಪಟ್ಟಿರುವ ಚಿಹ್ನೆಯಾಗಿದೆ. ಇದಕ್ಕೆ ಪಶುವನ್ನು ಪಾಶದಿಂದ ಬಿಡಿಸುವ ಪಾಶುಪತವ್ರತವಾಗಿ ಹೇಳಿರುತ್ತದೆ. ಶಿವಯೋಗವು ಶೈವಧರ್ಮದಲ್ಲಿ ಒಂದು ಅಂಗವಾಗಿ (ಲಕ್ಷಣವಾಗಿ) ಬಂದಿರುತ್ತದೆ. ಸನ್ಯಾಸವು ಈ ಧರ್ಮಕ್ಕೆ ಒಪ್ಪಿದ್ದು. ಕೇಸಿಮುನಿಗಳು ಋಗ್ವೇದದಲ್ಲಿ ಹೇಳಿದ್ದಾರೆ. ಶೈವರು ಉತ್ತಮ ಪವಿತ್ರಜೀವನವುಳ್ಳ ಈ ಧರ್ಮಾವಲಂಬಿಗಳನ್ನು ಕುರಿತು ಹೇಳಿದ್ದಾರೆ. ತತ್ತ್ವವಿಚಾರದಲ್ಲಿ ಸಾಂಖ್ಯವನ್ನು ಆಚರಣೆ ನಿಯಮಗಳ ವಿಚಾರದಲ್ಲಿ ಯೋಗವನ್ನು ಬಹುಮಟ್ಟಿಗೆ ಒಪ್ಪುತ್ತದೆ. ವೈಶೇಷಿಕ ದರ್ಶನ ಸ್ಥಾಪಕ ಪುರುಷಯೋಗಾವಲಂಬನೆಯಿಂದ ಮಹೇಶ್ವರನ ಕೃಪೆಯನ್ನು ಪಡೆದು ತನ್ನ ದರ್ಶನ



CC-0. Jangamwadi Math Collection, Varanasi. An eGangotri Initiative

ವನ್ನು ಪ್ರಾರಂಭಿಸುವುದಾಗಿ ಹೇಳುವರು. ಗೌತಮಕಣಾದರೂ ಸಹ ಶೈವರೇ ತಿಳಿದಿರುತ್ತದೆ. ಹೀಗೆಯೇ ಶೈವದ ಬೇರು ಎಲ್ಲಾದರ್ಶನಗಳಲ್ಲಿಯೂ ಹೊಕ್ಕಿರುವುದನ್ನು ಗಮನಿಸತಕ್ಕದ್ದಾಗಿದೆ.

## ಶೈವಧರ್ಮದ ಇತಿಹಾಸ ಮತ್ತು ಬೆಳವಣಿಗೆ

ಶೈವಧರ್ಮಪ್ರಚಾರವು ಗುರುಮುಖೇನ ಹರಡಿಬರುತ್ತದೆ. ಶಿವನೇ ದಕ್ಷಿಣಾಮೂರ್ತಿಯಾಗಿ ಮೊದಲು ಗುರುವಾಗಿರುತ್ತಾನೆ. ಚರಿತ್ರಕಾಲಕ್ಕೆ ಹಿಂದಿನಿಂದಲೇ ಕೆಲವು ಪದ್ಧತಿಗಳೂ ತತ್ತ್ವನಿರೂಪಣಕ್ರಮವೂ ಬೆಳೆದು ಬಂದಿರುತ್ತದೆ. ಶೈವಧರ್ಮದ ವಿಶ್ವವ್ಯಾಪಕತ್ವವನ್ನು ಈ ವೇದಾಗಮಗಳ ಸಮತ್ವದೃಷ್ಟಿಯಲ್ಲಿಯೂ ಕಾಣತಕ್ಕದ್ದು. ಆಗಮ ಅಂಗೀಕಾರದೊಡನೆಯೇ ಶೈವಧರ್ಮವು ಕೇವಲ ಭೇದವನ್ನೂ ಸಂಸ್ಕೃತವನ್ನೂ ಆ ವೇದಕ್ಕೆ ಸಂಬಂಧಪಟ್ಟ ಕರ್ಮವನ್ನೂ ಕೊಳ್ಳುವುದಲ್ಲದೆ ದೇಶಸಾಮಾನ್ಯ ನುಡಿಯನ್ನೂ ಆಚರಣೆಯನ್ನೂ ಸ್ತೋತ್ರವನ್ನೂ ಪೂಜೆಯನ್ನೂ ತನ್ನೊಳಗೆ ಅಂಗೀಕರಿಸಿ ಒಪ್ಪಿಕೊಂಡಿರುವುದು ಗೊತ್ತಾಗುತ್ತದೆ. ಹೀಗೆ ವೇದಕ್ಕೂ ಆಗಮಕ್ಕೂ ಹೋಮಕ್ಕೂ ಅಭಿಷೇಕಕ್ಕೂ ಸಂಸ್ಕೃತಕ್ಕೂ ಜನಸಾಮಾನ್ಯ ಭಾಷೆಗೂ ಗೃಹಸ್ಥ ಧರ್ಮಕ್ಕೂ ಸನ್ಯಾಸಧರ್ಮಕ್ಕೂ ಇದು ಮುಖ್ಯ ಅದು ಮುಖ್ಯ ಎನ್ನದೆ ಶ್ರೇಷ್ಠತೆಯನ್ನೂ ಕೊಟ್ಟಿರುವುದು ಈ ಶೈವ ಧರ್ಮ.

ಶೈವಧರ್ಮದ ಸಹನೆಯೂ ಸೋಪಾನ ರೀತಿಯೂ ಸಮನ್ವಯಭಾವವೂ ಶಿವಶರಣರ ಚರಿತ್ರೆಗಳಿಂದ ವಿಕಾಸವಾಗುತ್ತದೆ. ಇದಕ್ಕೆ ತಮಿಳುನಾಡಿನ ಚರಿತ್ರೆಯಿಂದ ಕೆಲವು ಅಂಶಗಳನ್ನು ತಿಳಿಯಿಸುವುದು ಯುಕ್ತವಾಗಿ ಕಾಣುತ್ತದೆ. ಶೈವಧರ್ಮವು ಭರತಖಂಡದ ಎಲ್ಲಾ ಭಾಗಗಳಲ್ಲಿ ನೆಲೆಸಿ ಬೆಳೆದು ಹರಡಿರುವುದು ನಿಜ. ಕಾಶ್ಮೀರ ಶೈವರನ್ನು ಕುರಿತೂ ಸಾಮಾನ್ಯವಾಗಿ ಉತ್ತರದೇಶದ ಶೈವವನ್ನು ಕುರಿತೂ ವಿಮರ್ಶೆಗಳು ಹೆಚ್ಚಾಗಿ ನಡೆದಿರುತ್ತವೆ. ದಕ್ಷಿಣ ದೇಶದ ಶೈವಧರ್ಮದ ಚರಿತ್ರೆಯು ಈಚೆಗೆ ತಮಿಳು ಗ್ರಂಥಗಳ ಶಾಸನಗಳ ವಾಸ್ತುಶಿಲ್ಪದ ಪರಿಶೀಲನೆಯಿಂದ ಹೊರಕ್ಕೆ ಬರುತ್ತಿವೆ. ಶೈವಧರ್ಮವು ಅನಾದಿಯಾಗಿ ತಮಿಳುನಾಡಿನಲ್ಲಿ ನೆಲೆಸಿರುವುದು. "ಕಂದಳಿ" ಎನ್ನುವ ತಾನೇ ಆಗಿ ತಾತ್ತ್ವಿಕವಾಗಿ ಇರುವ ವಸ್ತುವಿನ ಪೂಜೆಯು ನಮಗೆ ದೊರೆತಿರುವ ತಮಿಳುಗ್ರಂಥಗಳಲ್ಲೆಲ್ಲಾ ಅತಿ ಪುರಾತನವಾದ ಗ್ರಂಥಗಳಲ್ಲಿಯೂ ಕಂಡು ಬರುತ್ತದೆ. ಕ್ರಿ. ಶ. ಒಂದನೆಯ ಶತಮಾನದಲ್ಲಿ ಪ್ರಸಿದ್ಧ ಗ್ರಂಥಗಳಲ್ಲಿಯೂ, ಶೈವಧರ್ಮದ ಪರಿಮಳವು ತೋರುತ್ತದೆ. ಅಲ್ಲಿಂದ ಚೇರ, ಪಲ್ಲವ ಅನಂತರ ಮೇಲೆ ಬಂದ ಚೋಳರಾಜರ ಕಾಲದಲ್ಲಿ ಶೈವವು ಮಹತ್ತಾದ ಬೆಳವಣಿಗೆಯನ್ನು ಹೊಂದಿತ್ತು. ಪಲ್ಲವರ ಕಾಲಕ್ಕೆ ಸರಿಯಾಗಿ "ಶೈವ ಸಮಯಾಚಾರ್ಯರು" ಎಂಬ ತಿರುಜ್ಞಾನಸಂಬಂಧ ವಾಗೀಶ, ಸುಂದರಮೂರ್ತಿ, ಮಾಣಿಕ್ಯವಾಚಕರ್ ಇವರೆಲ್ಲರೂ ಪ್ರಕಾಶಿಸುತ್ತಿದ್ದರು. ಇವರುಗಳು ಶೈವತತ್ತ್ವವನ್ನೂ ಆಚರಣೆಯನ್ನೂ ಜ್ಞಾನವನ್ನೂ ತಮ್ಮ ಭಕ್ತಿಭರಿತವಾದ ಉತ್ಕೃಷ್ಟಗೀತೆಗಳಲ್ಲಿ ತುಂಬಿಸಿ ಲೋಕದಲ್ಲಿ ಬೀರಿದರು. ಇವರಿಗೆ ಹಿಂದೆಯೂ ಇವರ ಕಾಲದಲ್ಲಿಯೂ "ಅರವತ್ತು ಮೂವರು" ಎಂಬ ಪುರಾತನರು ತೋರಿದರು. ಅವರುಗಳ ಜೀವನವನ್ನು ವಿವರಿಸಿ ಹೇಳುವ ಅದ್ಭುತ ಗ್ರಂಥವು ಹನ್ನೆರಡನೆಯ ಶತಮಾನದಲ್ಲಿದ್ದ ಸೇಕಿಳಾರ್ ಎಂಬ ಚೋಳಮಂತ್ರಿವರ್ಯರು ಬರೆದ "ಪೆರಿಯ ಪುರಾಣ" ಎನ್ನುವ ಗ್ರಂಥದಲ್ಲಿ ಹೇಳಿದೆ.



CC-0. Jangamwadi Math Collection, Varanasi. An eGangotri Initiative

ದ್ರಾವಿಡ ದೇಶದಲ್ಲಿ ಶೈವ ಶರಣರು ಬಹು ಕಾಲದಿಂದಲೂ ತಮ್ಮ ಪವಿತ್ರ ಜೀವನದಿಂದ ಬೆಟ್ಟದ ಮೇಲಿಟ್ಟ ದೀಪದಂತೆ ಮಾರ್ಗದರ್ಶಿಗಳಾಗಿ ಬೆಳಗುತ್ತಿರುವ ಕ್ರಿಸ್ತ ಶಕಕ್ಕೆ ಹಿಂದೆ ಇದ್ದ ಹಿರಿಯರ ಜೀವನವೆಮಗೆ ಗೊತ್ತಿಲ್ಲ. ಈಜಿಗೂ ಏಳನೆಯ ಶತಮಾನದವರೆಗೂ ಇದ್ದವರನ್ನು ಕುರಿತು ನಮಗೆ ಹೆಚ್ಚಾಗಿ ಗೊತ್ತಿಲ್ಲ. ಪುರಾತನರಲ್ಲಿ ಅಗಸ್ತ್ಯರು ದೊಡ್ಡ ಶೈವರಾಗಿದ್ದರು. ಇವರು ರಾವಣನ ನಂಟರಾಗಿ ಇದ್ದಂತೆಯೂ ದ್ರಾವಿಡ ಭಾಷೆಗೆ ಮೊಟ್ಟಮೊದಲು ವ್ಯಾಕರಣವನ್ನು ಬರೆದವರಾಗಿಯೂ ಮತ್ತು "ಶಿವ,ಸುಬ್ರಹ್ಮಣ್ಯ" ಇವರುಗಳನ್ನು ಪೂಜಿಸುವರಾಗಿಯೂ ಹೇಳಿದೆ. ಸುಮಾರು ಕ್ರಿ. ಶ. ಮೊದಲನೆಯ ಶತಮಾನದಲ್ಲಿ ಪಾಂಡ್ಯ ದೇಶದಲ್ಲಿ "ನಕ್ಕಿರ" ಎನ್ನುವ ಭಕ್ತರ ಗೀತೆಗಳು ಸಿಕ್ಕುತ್ತವೆ. ಬೇಡರ ಜಾತಿಗೆ ಸೇರಿದ "ಕಣ್ಣಪ್ಪ" ಭಕ್ತರ ಜೀವನವು ಮನ ಕರಗುವ ಜೀವನವಾಗಿದೆ. ಶಿವನಲ್ಲಿ ಇವರಿಗೆ ಉಂಟಾದ ಭಕ್ತಿ ಅಳವಿಲ್ಲದ್ದು. ಮಾಂಸವನ್ನು ತಂದು ಶಿವನಿಗೆ ಅರ್ಪಿಸಿ ಪೂಜಿಸುವರು. ತಮ್ಮ ಪ್ರೇಮದ ಅತಿಶಯದಿಂದ ತಮ್ಮ ಕಣ್ಣನ್ನೇ ತೆಗೆದು ಶಿವನ ಕಣ್ಣಿಗೆ ಅರ್ಪಿಸಿದರು. ತನ್ನ ನೆನಪಿಲ್ಲದ ಅತಿ ತೀವ್ರವಾದ ಇವರ ಪ್ರೇಮಕ್ಕೆ ಒಪ್ಪಾಗುವ ಪ್ರೇಮವೆಲ್ಲಿ ಕಾಣುವುದು? ತಿರುಮೂಲರ್ ಎಂಬವರು ಆರನೆಯ ಶತಮಾನಕ್ಕೆ ಹಿಂದೆ ಇದ್ದ ಸಿದ್ಧ ಪುರುಷರಲ್ಲೊಬ್ಬರು. ಲಕುಲೀದ ಜೀವನದಲ್ಲಿ ಹೇಳುವ ಹಾಗೆ ಇವರು ಒಬ್ಬ ಗೋಪಾಲನ ಶವದಲ್ಲಿ ಹೊಕ್ಕು "ತಿರುಮಂತ್ರ"ವೆನ್ನುವ ವ್ಯಾಗಮ ಮಾರ್ಗವನ್ನು ಬೋಧಿಸುವ ಗ್ರಂಥವನ್ನು ರಚಿಸಿದರು. ಅನಂತರ "ಸಮಯಾಚಾರ್ಯರು"ಎಂಬ ನಾಲ್ವರ ಕಾಲ ಬಂದಿತು. ಈ ನಾಲ್ವರೂ ಶೈವ ಮಾರ್ಗಗಳಾದ ಚರ್ಯ, ಕ್ರಿಯಾ, ಯೋಗ, ಜ್ಞಾನಗಳನ್ನು ಅವಲಂಬಿಸಿ,ಲೋಕಕ್ಕೆ ಶೈವ ಧರ್ಮವನ್ನು ಹರಡಿಸಿ, ಇಂದಾದ ಗೀತಗಳಿಂದ ದ್ರಾವಿಡ ದೇಶವನ್ನೂ ದ್ರಾವಿಡ ಭಾಷೆಯನ್ನೂ ಪುನರುಜ್ಜೀವನಗೊಳಿಸಿದರು. ಈ ನಾಲ್ಕು ಮಾರ್ಗಗಳನ್ನು ದಾಸಮಾರ್ಗ, ಸತ್ಪುತ್ರಮಾರ್ಗ, ಸಖಮಾರ್ಗ, ಸನ್ಮಾರ್ಗ ಎಂದು ಹೇಳುವುದೂ ಉಂಟು. ಸನ್ಮಾರ್ಗವನ್ನು ನಡೆಯಿಸಿ ತೋರಿಸಿದವರಲ್ಲಿ ಮಾಣಿಕ್ಯವಾಚಕರೇ ಶ್ರೇಷ್ಠರು. ಇವರು ಪಾಂಡ್ಯರಾಜ ಮಂತ್ರಿಯಾಗಿದ್ದು, ಅದನ್ನು ಬಿಟ್ಟು ಶಿವನಲ್ಲಿಟ್ಟ ಪ್ರೇಮದಿಂದ, ಅವನ ಅನುಭವವನ್ನೇ, ತಮ್ಮ ಗೀತೆಗಳಿಗೆ ವಿಷಯವಾಗಿಟ್ಟು ಕೊಂಡು, ತಿಳಿದಾದ ಜ್ಞಾನ, ಅಮಿತವಾದ ಪ್ರೇಮ ಇವುಗಳನ್ನು ಚೆಲ್ಲಿ ಸೂಸುವ ಅತಿ ಸುಂದರವಾದ "ತಿರುವಾಚಗರ್" ಎನ್ನುವ ಗೀತೆಗಳನ್ನು ಹಾಡಿದರು. ವಾಗೀಶರು ಏಳನೆಯ ಶತಮಾನದಲ್ಲಿದ್ದ ಮೊದಲನೆಯ ಮಹೇಂದ್ರಪಲ್ಲವನ ಸಮಕಾಲೀನರು. ಇವರು ಜೈನ ಮತವನ್ನು ಹೊಕ್ಕು ಪುನಃ ತಮ್ಮ ಅಕ್ಕನವರ ಪ್ರಯತ್ನದಿಂದ ಶೈವಮತಾವಲಂಬಿಗಳಾದರು. ಇವರ ಜೀವನದಲ್ಲಿ "ಚರ್ಯ" ಮಾರ್ಗವು ಪ್ರದರ್ಶನವಾಗುವುದು. **ಜ್ಞಾನಸಂಬಂಧ,** ವಾಗೀಶರು ಬಲು ಚಿಕ್ಕ ವಯಸ್ಸಿನಲ್ಲಿಯೇ ಸ್ತೋತ್ರಗಳನ್ನು ಮಾಡುತ್ತಾ ಜೈನ ಮತವನ್ನು ಖಂಡಿಸಿ ಶೈವವನ್ನು ದ್ರಾವಿಡ ದೇಶದಲ್ಲಿ ಸ್ಥಾಪಿಸಿ, ಸ್ಥಿರವಾಗಿ ನಿಲ್ಲಿಸಿ ಹರಡಿಸಿದರು. ಪ್ರಕೃತಿ ಸೌಂದರ್ಯವನ್ನೂ ಸ್ತ್ರೀ ಜನ್ಮದ ಮೇಲ್ಮೆಯನ್ನೂ ಇವರ ಗೀತಗಳಲ್ಲಿ ಕಾಣಬಹುದು. ಪಾರ್ವತಿಯನ್ನು ಪ್ರತಿಯೊಂದು ಹಾಡಿನಲ್ಲಿಯೂ ಸ್ತುತಿಸಿರುವರು. ದೇವರನ್ನು ತಂದೆಯಾಗಿ ಭಾವಿಸುವ ಸತ್ಪುತ್ರಮಾರ್ಗವು ಇವರ ಜೀವನದಲ್ಲಿ ಮುಖ್ಯವಾಗಿ ತೋರುವುದು. ಇವರಾದ ಮೇಲೆ ಸಖಮಾರ್ಗ ಪ್ರದರ್ಶಕರಾದ ಸುಂದರಮೂರ್ತಿಗಳು ಅವತರಿಸಿದರು. ಇವರ ಅರವತ್ತುಮೂವರು ಪುರಾತನರ ಸ್ತೋತ್ರವನ್ನು ತಮ್ಮ ಪದ್ಯದಲ್ಲಿ ಮೊಟ್ಟಮೊದಲು ಹೇಳಿರುವಂತೆ ಕಂಡುಬರುತ್ತದೆ. ಶಿವಲಾಂಛನಗಳನ್ನೂ



CC-0. Jangamwadi Math Collection, Varanasi. An eGangotri Initiative

ಹೆಗ್ಗುರಿಯಾಗಿ ಇಟ್ಟುಕೊಂಡು ತಮ್ಮ ಶತ್ರುವಾದರೂ ಅವನು ಶೈವವೇಷ ಉಳ್ಳವನಾದರೆ ಅವನನ್ನು ಕ್ಷಮಿಸಿಬಿಡುತ್ತಿದ್ದರು. ಮೈಪರುಳ್‌ನಾಯನಾರ್ ಬೌದ್ಧರಾಗಿದ್ದರು. ಶಿವನನ್ನು ಕಲ್ಲಿನಿಂದ ಎಸೆದು ಪೂಜಿಸಿದ ಸಾಂಖ್ಯನಾಯಿನಾರ್, ಮತ್ತು ಕೀಳು ಕುಲದಲ್ಲಿ ಹುಟ್ಟಿದರೂ ಮೇಲು ಕುಲದವರಾದ ತಿರುನಾಳೈಪ್ಪೋವರ್ (ನಂದನಾರ್) ತಿರುಜ್ಞಾನಸಂಬಂಧರಿಗೆ ಸ್ನೇಹಿತರಾಗಿ ಅವರ ಗೀತೆಗಳನ್ನೆಲ್ಲಾ ತಮ್ಮ ವೀಣೆಯಲ್ಲಿ ಬಾರಿಸುತ್ತ ಅವರೊಡನೆ ಕುಟುಂಬ ಸಮೇತರಾಗಿ ಸಂಚಾರ ಮಾಡುತ್ತಿದ್ದ ಕೀಳು ಕುಲದವರಾದ ತಿರುನೀಲಕಂಠ, ಯಾಳ್‌ಪಾಣ ಮುಂತಾದ ಅನೇಕ ದಿವ್ಯ ಶರಣರ ಚರಿತ್ರೆಯು ಪೆರಿಯ ಪುರಾಣದಲ್ಲಿ ಹೇಳಿದೆ. ವೇದಾಗಮ ಸಮರಸಭಾವದಿಂದಲೂ ಜನಸಮೂಹದ ಕಟ್ಟಿಗೆ ಒಪ್ಪುವಂತೆಯೂ ಗಂಡಸರು, ಹೆಂಗಸರು, ಎಲ್ಲಾ ವರ್ಣದವರು, ಎಲ್ಲಾ ಆಶ್ರಮದವರು, ಎಲ್ಲಾ ಕೆಲಸದವರು, ಎಲ್ಲಾ ವಯಸ್ಸಿನವರು ತಮ್ಮ ತಮ್ಮ ನೆಲೆಯಲ್ಲಿ ನಿಂತೇ ಶಿವಾನಂದ ಅನುಭವವನ್ನು ಪಡೆಯುವುದು ಸಾಧ್ಯವೆನ್ನುವ ಉತ್ತಮ ಸಂದೇಶವನ್ನು ಲೋಕಕ್ಕೆ ಕೊಟ್ಟ ಶೈವ ಧರ್ಮವು ನಿಂತು ಬೆಳೆದು ಉತ್ತಮ ಫಲವನ್ನು ಕೊಡುವುದಕ್ಕೆ ಸಹಕಾರಿಯಾಗಿರುವ ಮಹತ್ತಾದ ಗ್ರಂಥವು ಈ "ಪೆರಿಯ ಪುರಾಣ"ವೆನ್ನುವುದಕ್ಕೆ ಸಂದೇಹವೇ ಇಲ್ಲ. ತಮಿಳುನಾಡಿನಲ್ಲಿ ಶೈವಧರ್ಮ ಪ್ರಕಾಶಿತರಾಗಿ ಬೆಳಗುತ್ತಿದ್ದ ಸ್ತ್ರೀ ರತ್ನಗಳಲ್ಲಿ, ಕಾರೈಕ್ಕಾಲಮ್ಮೈಯರು, ಅವ್ವೆ, ತಿಲಕವತಿ, ಮಂಗಯಕ್ಕಾರಸಿ ಮುಂತಾದ ಜೀವನಗಳು ಸ್ತ್ರೀಯರಿಗೂ ಸಚ್ಚಿದಾನಂದ ಅನುಭವವು ಸಿದ್ಧಿಸುವುದೆನ್ನುವುದಕ್ಕೆ ಸಾಕ್ಷಿ ಹೇಳುತ್ತದೆ. ಮಾಣಿಕ್ಯವಾಚಕರ್, ವಾಗೀಶ, ಸಂಬಂಧ, ಸುಂದರಮೂರ್ತಿ ಈ ನಾಲ್ವರನ್ನೂ ಶೈವ ಸಮಯಾಚಾರ್ಯರೆಂದು ಕರೆಯುವರು. ಇವರುಗಳ ಕಾಲದಿಂದ ಈಗಿನವರೆವಿಗೂ ಶೈವ ಸಂತಾನವು ನೆಲೆಗೊಂಡು ಬಂದಿರುತ್ತದೆ.

ಹದಿಮೂರನೆಯ ಶತಮಾನದಲ್ಲಿ ಶೈವಶಾಸ್ತ್ರಗಳು ತಮಿಳಿನಲ್ಲಿ ಉಂಟಾದುವು. 'ಶಿವಜ್ಞಾನ ಬೋಧಂ' ಎಂಬ ಶಾಸ್ತ್ರಗ್ರಂಥವನ್ನು ಮೈಕಂಡಾರ್‌ರವರು ಬರೆದರು. ಈ ಶಿವಜ್ಞಾನ ಬೋಧವು ಹನ್ನೆರಡು ಸೂತ್ರಗಳನ್ನುಳ್ಳದ್ದಾಗಿದೆ. ಇವು ರೌರವ ಆಗಮದ ಒಂದು ಭಾಗವೆನ್ನುತ್ತಾರೆ. ಇದಕ್ಕೆ ಮೈಕಂಡ ದೇವರೇ ವಾರ್ಧಿಕವನ್ನು ಬರೆದಿದ್ದಾರೆ. ಈ ಗ್ರಂಥದ ಅತಿಮುಖ್ಯಸ್ಥಾನವು ಕೆಳಗೆ ಬರೆದಿರುವ ಒಂದು ಪದ್ಯದಿಂದ ತೋರುವುದು.

"ವೇದ ಪಶು. ಸತ್ಯ ಆಗಮವು. ಅದರ ಹಾಲು ನಾಲ್ವರ್ ಸಮಯಾಚಾರ್ಯರು ಹಾಡಿದ' ದೇವಾರಂ, ತಿರುವಾಚಕಂ ಆ ಹಾಲಿನಿಂದ ತೆಗೆದ ತುಪ್ಪ. ಈ ಮೈಕಂಡದೇವರ ಬೋಧವು ಆ ತುಪ್ಪದ ಕಂಪು." ಮೈಕಂಡದೇವರ ಶಿಷ್ಯರು ಅರುಳ್ನಂದಿ ಶಿವಾಚಾರ್ಯರು; ಶಿಷ್ಯರು ಮರೆಜ್ಞಾನ ಸಂಬಂಧ ಅವರ ಶಿಷ್ಯರು ಉಮಾಪತಿ ಶಿವಾಚಾರ್ಯ. ಈ ಉಮಾಪತಿ ಶಿವಾಚಾರ್ಯರೇ ತಮಿಳು ಶೈವಸಿದ್ಧಾಂತ ಶಾಸ್ತ್ರಗಳಲ್ಲಿ ಹಲವನ್ನು ಬರೆದುದಲ್ಲದೆ ಪೆರಿಯ ಪುರಾಣವನ್ನು ಬರೆದ ಶೇಕ್ಕಿಳಾರ್ ಚರಿತ್ರೆಯನ್ನೂ ಮತ್ತು ತಮಿಳು ಶೈವಸ್ತೋತ್ರ ಗ್ರಂಥಗಳನ್ನೆಲ್ಲಾ ಹನ್ನೆರಡು ವಿಭಾಗಗಳಾಗಿ ಮಾಡಿದ ವಿಧವನ್ನೂ ನಮಗೆ ತಿಳಿಸಿರುತ್ತಾರೆ. ಮೈಕಂಡಾರ್ ಆದಿ ನಾಲ್ವರಿಗೂ 'ಸಂತಾನಾಚಾರ್ಯರು' ಎಂದು ಹೇಳುವರು.

### ಶೈವಸಂತಾನ, ಮಠಪರಂಪರೆ

ದಿವ್ಯಾಗಮಗಳು ಇಪ್ಪತ್ತೆಂಟರಲ್ಲಿ ಒಂದಾದ ಕಾರಣಾಗಮವು ಆಚಾರ್ಯ ಲಕ್ಷಣವನ್ನು ಹೇಳುವಾಗ ಶೈವರು ಐದು ಬಗೆಯವರು ಎಂದು ಹೇಳಿ ಸದಾಶಿವ ಅನಾದಿ ಶೈವರೆಂದೂ, ಕೌಶಿಕ



CC-0. Jangamwadi Math Collection, Varanasi. An eGangotri Initiative

ಕಾಶ್ಯಪ ಭಾರದ್ವಾಜ ಗೌತಮ ಅಗಸ್ತ್ಯ ಎನ್ನುವ ಐವರು ಋಷಿಗಳು ಸದಾಶಿವಮೂರ್ತಿಯ ಐದು ಮುಖಗಳಲ್ಲೂ ದೀಕ್ಷೆ ಪಡೆದವರೆಂದೂ, ಇವರ ಪರಂಪರೆಯಲ್ಲಿ ಬಂದ ಶೈವ ಬ್ರಾಹ್ಮಣರೇ ಸ್ಥಾಪನಾದಿ ಕ್ರಿಯೆಗಳಿಗೆ ಅರ್ಹರು ಎಂದೂ ಹೇಳಿದೆ. ಇದುವೆ ಆದಿ ಶೈವ ಸಂತಾನವು ತೋರಿದ ಕ್ರಮ. ಉಪದೇಶಕಾಂಡದ ಎಂಬತ್ತಾರನೆಯ ಅಧ್ಯಾಯದಲ್ಲಿ ಕೈಲಾಸಗಿರಿಯಲ್ಲಿ ಪುಷ್ಪಗಿರಿ, ಆಮರ್ದನಗಿರಿ, ಗೋಳಗಿರಿ, ಭಿಕ್ಷಾಗಿರಿ ಎನ್ನುವ ನಾಲ್ಕು ಶೃಂಗಗಳಲ್ಲಿ ಆದಿಯಲ್ಲಿ ದೇವಿಯಾದಿಯವರಿಗೂ, ನಂದಿಕೇಶ್ವರಾದಿಯವರಿಗೂ, ಹರಿವಿರಿಂಚಾದಿಯವರಿಗೂ, ಸನಕಾದಿ ಮುನೀಂದ್ರರಿಗೂ, ಆಗಮಗಳು ಉಪದೇಶಿಸಲ್ಪಟ್ಟವು ಎಂದು ಹೇಳಿದೆ. ತ್ರಿಲೋಚನ ಶಿವಾಚಾರ್ಯರು ಬರೆದ ಸಿದ್ಧಾಂತ ಸಾರಾವಳಿಯಲ್ಲಿ ಶೈವ ಸಂತಾನವು ಅನಂತೇಶ್ವರ ಮೊದಲಾದ ಅಷ್ಟವಿದ್ಯೇಶ್ವರ ಕ್ರಮವಾಗಿ ಬಂದು ದೂರ್ವಾಸ ಮಹಾ ಮುನಿಯಿಂದ ಈ ಭೂಲೋಕದಲ್ಲಿ ಉದ್ಭವಿಸಿತು. ಆ ದೂರ್ವಾಸ ಋಷಿಯಲ್ಲಿ ದೀಕ್ಷಾದಿ ಅನುಗ್ರಹವನ್ನು ಪಡೆದ ಋಷಿಗಳಿಗೆ ಭಾರತ ವರ್ಷದಲ್ಲಿ ಭೋಗ, ಮೋಕ್ಷಪ್ರದವಾದುದರಿಂದ ಶ್ರೇಷ್ಠವಾದ ಕದಂಬ ವೃಕ್ಷದ ಅಲಂಕಾರದೊಡನೆ ಕೂಡಿದ 'ಆಮರ್ದಕ' ಎಂಬ ಹೆಸರಿನ ಮಠವು ಉಂಟಾಗಿತ್ತು; ಎನ್ನುವ ಅರ್ಥವುಳ್ಳ ಒಂದು ಶ್ಲೋಕಕ್ಕೆ ವ್ಯಾಖ್ಯಾನವನ್ನು ಬರೆಯುವಾಗ ವ್ಯಾಖ್ಯಾತ ಅನಂತ ಶಿವಾಚಾರ್ಯರು "ಭೂಲೋಕದಲ್ಲಿ ಜಂಬುದ್ವೀಪದ ಮಧ್ಯದಲ್ಲಿರುವ ಮೇರು ಪರ್ವತಕ್ಕೆ ದಕ್ಷಿಣದಲ್ಲಿರುವ ಹಿಮಾಲಯ ಪರ್ವತಕ್ಕೆ ದಕ್ಷಿಣ ಪಾರ್ಶ್ವದಲ್ಲಿ ಭಾರತ ವರ್ಷವೆಂಬುದು ಪ್ರಸಿದ್ಧಿಯಾಗಿದೆ. ಅದರಲ್ಲಿರುವ ಭರತಖಂಡದಲ್ಲಿ ದೂರ್ವಾಸ ಮಹಾ ಮುನಿಯಿಂದ ಸ್ಥಾಪಿಸಲ್ಪಟ್ಟಿದ್ದ ಆಮರ್ದಕ ಮಠ. ಆ ಮಠದಲ್ಲಿ ಕೌಶಿಕ ಮುಂತಾದವರು ದಕ್ಷಿಣಾ ಮೂರ್ತಿಸ್ವರೂಪರಾದ ಶ್ರೀಕಂಠ ಪರಮೇಶ್ವರರನ್ನು ಉಪಾಸಿಸಿ ಅವರಿಂದ ಆಗಮ ಜ್ಞಾನವನ್ನು ಪಡೆದುಕೊಂಡಿದ್ದರು. ಇವರುಗಳ ಶಿಷ್ಯರು ಸನತ್ಕುಮಾರ, ಸನಕ, ಸನಾತನ, ಸನಂದ ಎಂಬ ನಾಲ್ವರು. ಆ ಮೇಲೆ ಆಮರ್ದಕ ಮಠದಿಂದ ಸರಿಯಾಗಿ ರಣಭದ್ರ, ಗೋಳಕಿ, ಪುಷ್ಪಗಿರಿ, ಎಂಬ ಮೂರು ಮಠಗಳೂ ವಿಭಾಗವಾದುವು. ಆಮರ್ದಕದೊಡನೆ ಸೇರಿ ಈ ನಾಲ್ಕು ಮಠಗಳಿಗೂ ಸನತ್ಕುಮಾರ ಮುಂತಾದ ನಾಲ್ವರೂ ಅಧಿಪತಿಗಳಾಗಿದ್ದರು. ಆಮರ್ದಕ ಮಠದ ಅಧಿಕಾರಿ ಸನತ್ಕುಮಾರ. ಅಲ್ಲಿ ಕದಂಬ ವೃಕ್ಷ ಅವರ ಸಂತತಿಯವರು ಆ ಮಠಾಧಿಪತಿಗಳಾಗಿದ್ದರು. ಪುಷ್ಪಗಿರಿ ಮಠಕ್ಕೆ ಅಧಿಪತಿ ಸನಕರು. ಅಲ್ಲಿ ಅರ್ಜುನವೃಕ್ಷ ಅವರ ಸಂತತಿಯವರು ಆ ಮಠಕ್ಕೆ ಅಧಿಪತಿಗಳಾಗಿದ್ದರು. ಗೋಳಕಿಮಠಕ್ಕೆ ಅಧಿಪತಿ ಸನಾತನರು. ಅಲ್ಲಿ ಜಂಬೂವೃಕ್ಷವೂ ಅವರ ಸಂತತಿಯವರು ಆ ಮಠಾಧಿಪತಿಗಳಾಗಿದ್ದರು. ರಣಭದ್ರಮಠಕ್ಕೆ ಅಧಿಪತಿ ಸನಂದಕರು. ಅಲ್ಲಿ ವಟವೃಕ್ಷ ಅವರ ಸಂತತಿಯವರು ಆ ಮಠಾಧಿಪತಿಗಳಾಗಿದ್ದರು. ಗೋದಾವರಿ ತೀರದಲ್ಲಿ ಶೈವರು ವಾಸವಾಗಿರುವ ಮಂತ್ರಕಾಳಿ ಎನ್ನುವ ಒಂದು ಪಟ್ಟಣ ಉಂಟು. ಅಲ್ಲಿ ಶಿವನ್ ವಾಸವಾಗಿರುತ್ತಾರೆ. ಆ ಸ್ಥಳದಲ್ಲೇ ಶಿವಾಚಾರ್ಯರು ವಿಶೇಷವಾಗಿ ಅವತರಿಸಿದ್ದರು. ಅಲ್ಲಿ ಮಂತ್ರಕಾಳೀಶ್ವರನನ್ನು ಸುತ್ತಲೂ ಆಮರ್ದಕ ಮೊದಲಾದ ಈ ನಾಲ್ಕು ಮಠಗಳೂ ಇದ್ದುವು ಎಂದು ಮಠಗಳ ಚರಿತ್ರೆಯನ್ನು ವಿವರಿಸಿದ್ದಾರೆ. ಅದಕ್ಕೆ ಮುಂದಿನ ಶ್ಲೋಕದ ಟೀಕೆಯಲ್ಲಿ ಸ್ವಾಯಂಭುವ ಮನುವಿನಕಾಲದಲ್ಲಿ ಆಮರ್ದಕ ಮಠದ ಸಂಪ್ರದಾಯವು ಬಂದಾಗಿ ಋಷಿಸಂಪ್ರದಾಯವಾಗಿ ಇತ್ತು. ಆಮೇಲೆ ಸ್ವಾರೋಚಿಷ ಮನುವಿನ ಕಾಲದಲ್ಲಿ ಆಮರ್ದಕ ಮೊದಲಾದ ನಾಲ್ಕು ಮಠಗಳಾದುವು. ನಾಲ್ಕು ವಿಧಸಂಪ್ರದಾಯವುಳ್ಳ ಮಠಗಳಲ್ಲಿ ಉಂಟಾದ ಶೈವ



CC-0. Jangamwadi Math Collection, Varanasi. An eGangotri Initiative

ಬ್ರಾಹ್ಮಣರೂ, ಬ್ರಹ್ಮಚಾರಿ, ಗೃಹಸ್ಥ, ವಾನಪ್ರಸ್ಥ, ಯತಿ ಎನ್ನುವ ನಾಲ್ಕು ವಿಧಗಳಾದರು. ತ್ರಿಲೋಚನ ಶಿವಾಚಾರ್ಯರ ಸಂತತಿಕ್ರಮವು ನಾಲ್ಕು ವಿಧ ಸಂಪ್ರದಾಯದ ಮಠಗಳಲ್ಲಿ ಜಲ ಸ್ನಾನಾದಿಗಳಿಂದ ಬಂದ ಹೊರಗಣ ಪರಿಶುದ್ಧವೂ ಇಂದ್ರಿಯ ನಿಗ್ರಹದಿಂದ ಬಂದ ಒಳಗಣ ಪರಿಶುದ್ಧವೂಳುಳ್ಳ, ಕಾಶ್ಯಪಾದಿ ಸತ್ಸಂತತಿಯನ್ನುಳ್ಳ ಆಮರ್ದಕ ಮಠದಿಂದ ಕಲಿಯುಗಾದಿ ಕಾಲದಲ್ಲಿ ಭೋಗ ಮೋಕ್ಷಪ್ರದರಾದ ವ್ಯಾಪಕಶಂಭು ಎಂಬ ಮಹಾ ಗುರುಗಳು ಉಂಟಾದರು. ಹೀಗೆ ಪೂರ್ವ ಕಾಲದಿಂದ ಗುರುಪರಂಪರ್ಯದೊಡನೆ ಕೂಡಿದ ವಂಶಕ್ರಮವು ತಮ್ಮ ಉತ್ಪತ್ತಿ ಕಾಲದವರಿವಿಗೂ ಕ್ರಮವಾಗಿ ಬಂದುದೆಂದು ತಿಳಿಯಿರಿ.— ಪೂರ್ವ ಕಥೆ— "ರಾಜೇಂದ್ರ ಚೋಳ ನೆಂಬ ಹೆಸರುಳ್ಳ ಚೋಳರಾಜನೊಬ್ಬನು ಭೂಮಿಯನ್ನು ಆಳುವ ಕಾಲದಲ್ಲಿ ಗಂಗಾ ಸ್ನಾನಕ್ಕೆ ಹೋದಾಗ ಅಲ್ಲಿ ಶೈವಾಚಾರ್ಯರನ್ನು ಕರೆದುಕೊಂಡು ಬಂದು ತನ್ನ ರಾಜ್ಯದಲ್ಲಿ ಸ್ಥಾಪಿಸಿದನು. ಅದು ಮೊದಲು ಕಾಂಚಿ ಮಂಡಲದಲ್ಲೂ ಚೋಳ ಮಂಡಲದಲ್ಲೂ ಎಲ್ಲೆಲ್ಲಿಯೂ ಶೈವ ಸಂಪ್ರದಾಯವು ವಿಸ್ತಾರವಾಯಿತು ಎಂದು ತಿಳಿಯಲಿ." ಎಂದು ಹೀಗೆ ಶೈವ ಸಂಪ್ರದಾಯವು ಎಲ್ಲೆಲ್ಲಿಯೂ ಹರಡಿದುದನ್ನು ಸ್ಪಷ್ಟಗೊಳಿಸಿದ್ದಾರೆ.

ದ್ರಾವಿಡ ಭಾಷೆಯಲ್ಲಿ ತಿರುಮೂಲದೇವರು ಬರೆದ ತಿರುಮಂತ್ರ ಎನ್ನುವ ಗ್ರಂಥದಲ್ಲಿ ಎಂಟು ಸಂತಾನಗಳನ್ನು ಸೂಚಿಸಿದ್ದಾರೆ. ಇವುಗಳ ವಿವರಣೆಯು ಧರ್ಮಪುರ ಎನ್ನುವ ತಂಜಾವೂರ ಜಿಲ್ಲೆಯಲ್ಲಿ ಇರುವ ಶೈವ ಮಠದ ಆದಿ ಗುರುಗಳಾದ ಶ್ರೀ ಗುರುಜ್ಞಾನ ಸಂಬಂಧದೇಶಿಕರು ಬರೆದ ಮುಕ್ತಿನಿಶ್ಚಯ ಎನ್ನುವ ಗ್ರಂಥದ ಟೀಕೆಯಲ್ಲಿ ಕಂಡುಬರುತ್ತದೆ. ನಾಲ್ವರು ನಂದಿಗಳು ಇವರು ಸನಕರು ಸನತ್ಕುಮಾರ ಸನಂದನ ಸನಾತನ. ಆದಿಯಲ್ಲಿ ಸನಕರಿಂದ ಶುಭಸಂತಾನ, ಮಲಯಮಾನ್ ಸಂತಾನ ಎಂದು ಎರಡಾಗಿ ಮುಂದೆ ಹಲವಾದವು. ಸನತ್ಕುಮಾರರಿಂದ ವಿಜ್ಞಾನದೇವರ ಸಂತಾನ, ಮಾಕಾಂಡದೇವರ ಸಂತಾನ ಎಂದು ಎರಡಾಗಿ ಮುಂದೆ ಹಲವಾದವು. ಸನಂದನರಿಂದ ಶಿವಮಣ್ಯದೇವರ ಸಂತಾನವೂ ಪರಮದೇವರ ಸಂತಾನವೂ ಶಿವಾನಂದ ಬೋಧರ ಸಂತಾನ ಎಂದೂ ಮೂರಾಗಿ ಮುಂದೆ ಹಲವಾದವು. ಸನಾತನರಿಂದ ಬ್ರಹ್ಮದೇವರ ಸಂತಾನ, ಸಿಂಹನಾಥದೇವರ ಸಂತಾನ ಎಂದು ಎರಡಾಗಿ ಮುಂದೆ ಹಲವಾದವು. ಶಿವಯೋಗ ಮಹಾ ಮುನಿಗಳಿಂದ ವಾಮದೇವರ ಸಂತಾನವು ಒಂದಾಗಿ ಮುಂದಕ್ಕೆ ಹಲವಾದವು. ಪತಂಜಲಿ ಮುನಿಗಳಿಂದ ನಿರೈಂದ ನಾಯನಾರ್ ಸಂತಾನವು ಒಂದಾಗಿ ಮುಂದಕ್ಕೆ ಹಲವಾದವು. ವ್ಯಾಘ್ರಪಾದ ಮುನಿಗಳಿಂದ ಸದ್ಯೋಜಾತದೇವರ ಸಂತಾನವು ಒಂದಾಗಿ ಮುಂದಕ್ಕೆ ಹಲವಾದವು. ತಿರುಮೂಲ ದೇವರಿಂದ ಬ್ರಹ್ಮದೇವ ಇಂದ್ರದೇವ ವಿಷ್ಣುದೇವ ರುದ್ರದೇವ ಕಂತ್ರುಮಹರ್ಷಿ ಕಾಲಾಗ್ನಿರುದ್ರ ಕಂಜನೂರ್‌ಮಲಯಮಾನ್ ಎಂದು ಏಳು ಸಂತಾನವಾಗಿ ಮುಂದಕ್ಕೆ ಹಲವಾದವು. ಇನ್ನೂ ಹೇಳಿದರೆ ವಿಸ್ತಾರವಾಗುವುದು ಎಂದು ಇಷ್ಟನ್ನೆ ಹೇಳಿರುತ್ತದೆ.

## ಶೈವ ಧರ್ಮದ ಮುಖ್ಯ ತತ್ತ್ವಗಳು

ಶೈವತತ್ತ್ವ ವಿಚಾರವು ಎಲ್ಲಾ ಹಿಂದೂ ತತ್ತ್ವ ವಿಚಾರಗಳಲ್ಲಿ ಬರುವ ವಿಷಯಗಳನ್ನು ಒಳಕೊಂಡಿರುತ್ತದೆ. ಒಂದು ಕೊನೆಯಲ್ಲಿ ಏಕಾತ್ಮವಾದ ಮತ್ತೊಂದು ಕೊನೆಯಲ್ಲಿ ಸತ್ಕಾರ್ಯವಾದ ಹೀಗೆ ವಿವಿಧವಾಗಿ ಇದ್ದರೂ ಶೈವದ ಎಲ್ಲಾ ಬೇಧಗಳಲ್ಲಿಯೂ ಪತಿ ಪಶು ಪಾಶ ಎಂಬ



CC-0. Jangamwadi Math Collection, Varanasi. An eGangotri Initiative

ನೂರು ತ್ರಿಪದಾರ್ಥಗಳ ಸತ್ವವನ್ನೂ ಮೂವತ್ತಾರು ತತ್ವಗಳನ್ನೂ ಅವುಗಳ ಸತ್ವವನ್ನೂ ಆತ್ಮ ಗಳಿಗೂ ಜಡ ಪದಾರ್ಥಕ್ಕೂ ಸ್ವಾತಂತ್ರ್ಯ ಈ ವಿಷಯಗಳಲ್ಲಿ ನಂಬಿಕೆ ಉಳ್ಳವುಗಳು ಮೋಕ್ಷಕ್ಕೆ ಪ್ರಧಾನಸಾಧನ ಜ್ಞಾನವೆಂಬುದನ್ನೂ ಕೆಲವು ಕರ್ಮದೊಡನೆ ಕೂಡಿದ ಜ್ಞಾನವೆಂಬುದನ್ನೂ ಕೊಳ್ಳುತ್ತವೆ. ಇವು ಪಾಶುಪತ ಮಹಾವ್ರತ ಕಾಪಾಲ ಭೈರವ ಮುಂತಾದ ಕೆಲವು ಪಂಗಡಗಳು ಅಲ್ಲದ ಇತರ ಎಲ್ಲಾ ಪಂಗಡಗಳಿಗೂ ಅಂಗೀಕಾರವಾದುವು. ಪಾಶುಪತ ಪತಿಯನ್ನೂ ಉಪಾದಾನ ಕಾರಣವಾಗಿ ಕೊಳ್ಳುವುದಿಲ್ಲ. ಪತಿ ಪಶುಗಳ ಕರ್ಮಕ್ಕೆ ಅನುಸಾರವಾಗಿ ಸೃಷ್ಟಿಯನ್ನು ನಡೆಯಿ ಸುವುದು ಎನ್ನುವುದನ್ನೂ ಕೊಳ್ಳುವುದಿಲ್ಲ. ಈ ಸಮಯ ಭೇದಗಳನ್ನು ಹೊರಗಣ ಪ್ರಾಕಾರ ದಲ್ಲಿಯೇ ಗಣನೆ ಮಾಡತಕ್ಕದ್ದು. ಇತರ ಒಳಗಣ ಪ್ರಭೇದಗಳಲ್ಲಿ ತಾರತಮ್ಯವು ಆ ಪಂಗಡ ದವರ ದೃಷ್ಟಿಗೆ ತಕ್ಕಂತೆ ಬೇರಾಗುತ್ತದೆ. ಏಕಾನ್ತವಾದ ಶೈವಕ್ಕೆ ಐಕ್ಯವಾದ ಶೈವ ಎನ್ನುವರು. ಶುದ್ಧಾದ್ವೈತ ಶರಣರು ಸಿದ್ಧಾಂತ ಶೈವವೂ ಆದ ಈ ಪ್ರಭೇದಗಳಲ್ಲಿ ಉಪನಿಷತ್ತುಗಳಲ್ಲಿ ಕಂಡು ಬರುವ ಎಲ್ಲಾ ಪ್ರಭೇದಗಳೂ ಕಾಣುತ್ತವೆ. ಉಪನಿಷತ್ತಿಗೆ ನಾನಾ ರೀತಿಯಾಗಿ ಅರ್ಥ ಮಾಡುವ ಹಾಗೆ ಇಲ್ಲಿಯೂ ಆಗುತ್ತದೆ.

ಶೈವ ಧರ್ಮತತ್ತ್ವವು ಮೂವತ್ತಾರು ತತ್ತ್ವಗಳನ್ನು ಅಂಗೀಕರಿಸುತ್ತದೆ. ಸಾಂಖ್ಯ ಯೋಗಗಳು ಇಪ್ಪತ್ತೈದು ತತ್ತ್ವಗಳನ್ನೆ ಹೇಳುತ್ತವೆ. ಪಂಚರಾತ್ರವು ಇಪ್ಪತ್ತುನಾಲ್ಕನ್ನೆ ಒಪ್ಪು ತ್ತದೆ. ಹೆಚ್ಚು ತತ್ತ್ವಗಳನ್ನು ಒಪ್ಪುವುದು ಒಂದು ವಿಶೇಷ, ಎಂದು ಶೈವನು ಕೊಳ್ಳುತ್ತಾನೆ. ಹೆಚ್ಚು ಗಣಿಸುವುದು ಹೆಚ್ಚಾಗಿ ತಿಳಿದುದಕ್ಕೆ ಗುರಿ. ಹೆಚ್ಚಾಗಿ ತಿಳಿಯುವುದು ಚನ್ನಾಗಿ ತಿಳಿಯುವುದಕ್ಕೆ ಗುರಿ. ತತ್ತ್ವಗಳ ಕಡೆಯ ಪರಿಣಾಮಗಳು ಮಹಾ ಭೂತಗಳಾದ ಆಕಾಶ ವಾಯು ತೇಜಸ್ಸು ಅಪ್ಪು ಪೃಥ್ವಿ. ಪ್ರಥ್ವಿಗೆ ಶಬ್ದ ಸ್ಪರ್ಶ ರೂಪ ರಸ ಗಂಧ ಆದ ಐದು ಗುಣಗಳುಂಟು. ನೀರಿಗೆ ಗಂಧವಿಲ್ಲ. ಅಗ್ನಿಗೆ ಗಂಧರಸಗಳಿಲ್ಲ. ವಾಯುವಿಗೆ ಗಂಧ ರಸ ರೂಪಗಳಿಲ್ಲ. ಆಕಾಶದಲ್ಲಿ ಶಬ್ದ ಒಂದೆ ಇರುವದು. ಈ ಗುಣಗಳಿಗೂ ತನ್ಮಾತ್ರಗಳು ಎಂದು ಹೆಸರು. ಭೂತಗಳು ಇವುಗಳೊಡ ಗೂಡಿವೆ. ಭೂತಗಳಿಗಿಂತ ಇವುಗಳು ಸೂಕ್ಷ್ಮವಾದ ತತ್ತ್ವಗಳು. ವಸ್ತು ಗುಣಗಳ ಒಟ್ಟುಗೂಡು ವಿಕೆಯೆ. ಮರವಿಲ್ಲದೆ ಕಾಡಿಲ್ಲ. ಮರಗಳ ಒಟ್ಟು ಕೂಟವೆ ಕಾಡು. ಹಾಗೆ ತನ್ಮಾತ್ರಗಳ ಸೇರು ವಿಕೆಯೆ ಭೂತ. ಈ ತನ್ಮಾತ್ರಗಳು ಅಹಂಕಾರ ತತ್ತ್ವದಿಂದ ತೋರಿದವು. ಅಹಂಕಾರ ತತ್ತ್ವವು ಮೂರು ಬಗೆಯಾದುದು. ಸತ್ವಗುಣದಿಂದ ಕೂಡಿದ ತೈಜಸ ಅಹಂಕಾರವು ರಾಜಸ ಗುಣದೊಡನೆ ಕೂಡಿದ ವೈಕೃತ ( ಸಾಂಖ್ಯದಲ್ಲಿ ಸಾತ್ವಿಕ ಅಹಂಕಾರವನ್ನು ವೈಕೃತಂವೆದೂ, ರಾಜಸ ಅಹಂಕಾರ ವನ್ನು ತೈಜಸವೆಂದೂ ಹೇಳುವರು. ) ತೈಜಸ ಅಹಂಕಾರದಿಂದ ಮನಸ್ತತ್ವವೂ ಚಿತ್ತ ತತ್ತ್ವವೂ ಜ್ಞಾನೇಂದ್ರಿಯಗಳೂ ಆಗುತ್ತವೆ. ಇಲ್ಲಿಯೂ ಸಾಂಖ್ಯಕ್ಕೂ ಶೈವಕ್ಕೂ ಸ್ವಲ್ಪ ಭೇದ. ಸಾಂಖ್ಯ ಸಾತ್ವೀಕ ಅಹಂಕಾರದಿಂದ ಜ್ಞಾನಕರ್ಮೇಂದ್ರಿಯಗಳನ್ನೂ ಮನಸ್ಸನ್ನೂ ತೋರುವ ಹಾಗೆ ಹೇಳುತ್ತದೆ.

ಹೀಗಿದ್ದರೂ ಮಾಯವಾದ ಜ್ಞಾನ ಕರ್ಮೇಂದ್ರಿಯಗಳನ್ನು ಭೂತ ಪರಿಣಾಮಗಳಾಗಿ ಕೊಳ್ಳದೆ ಅಹಂಕಾರದ ಭೇದಗಳಿಂದ ಜ್ಞಾನ ಕರ್ಮೇಂದ್ರಿಯಗಳ ಎಣಿಕೆಯು ಇತರ ಸಮಯ ಗಳಲ್ಲಿರುವ ಹಾಗೆಯೆ ಸಾಂಖ್ಯದಲ್ಲಿ ಮನಸ್ಸು. ಸಾಂಖ್ಯದಲ್ಲಿ ಹೇಳುವ ಹಾಗೆಯೆ ಜ್ಞಾನ ಕರ್ಮ. ಎರಡಕ್ಕೂ ಬೇಕಾದ ಇಂದ್ರಿಯವಾಗಿ ಹೇಳಿದೆ. ಅಹಂಕಾರ ಬುದ್ಧಿ ತತ್ತ್ವದಿಂದ ಬರುವುದು.



CC-0. Jangamwadi Math Collection, Varanasi. An eGangotri Initiative

ಬುದ್ಧಿ ನಿಶ್ಚಯಿಸುವುದು. ಬುದ್ಧಿ ಯಾತರಿಂದ ಉಂಟಾದುದು ಎನ್ನುವುದನ್ನು ಕುರಿತು ಅಭಿಪ್ರಾಯ ಭೇದಗಳು ಉಂಟು. ಕೆಲವು ಗ್ರಂಥಗಳಲ್ಲಿ ಮೂರು ಗುಣಗಳಿಗೂ ಸಮಾನವಾದ ಚಿತ್ತ ತತ್ತ್ವಗಳನ್ನು ಹೇಳುತ್ತದೆ. ಮತ್ತೆ ಕೆಲವರು ಗುಣತತ್ತ್ವವನ್ನು ಕೊಳ್ಳುವರು. ಇನ್ನು ಕೆಲವರು ಪ್ರಕೃತಿ ತತ್ತ್ವವನ್ನು ಅಂಗೀಕರಿಸಿ ಗುಣತತ್ತ್ವವನ್ನು ಬೇರೆಯಾಗಿ ಕೊಳ್ಳದೆ ಪ್ರಕೃತಿಯೂ ಚಿತ್ತವೂ ಒಂದೇ ಎನ್ನುವರು. ಇನ್ನು ಕೆಲವರು ಮನಸ್ಸಿನ ಕೆಲಸದ ಒಂದು ಭೇದವೆ ಚಿತ್ತ ಎನ್ನುವರು. ಒಟ್ಟಿನಲ್ಲಿ ಪ್ರಕೃತಿಯಿಂದ ಇಪ್ಪತ್ತುನಾಲ್ಕು ತತ್ತ್ವಗಳನ್ನು ಎಣಿಸುವುದೆ ಹೆಚ್ಚಾಗಿ ಕಾಣುತ್ತದೆ. ಶೈವ ಸಿದ್ಧಾಂತದಲ್ಲಿ ತೈಜಸ ಅಹಂಕಾರದ ಪರಿಣಾಮವಾಗಿ ಚಿತ್ತವೂ ಮನಸ್ಸೂ ಕೊಳ್ಳಲ್ಪಡುತ್ತವೆ.

ಬುದ್ಧಿ ಅಹಂಕಾರ ಮನಸ್ಸು ಚಿತ್ತ ಇವು ಅಂತಃಕರಣದ ಇಂದ್ರಿಯಗಳು. ವಸ್ತುಗಳೊಡನೆ ಸಂಬಂಧಪಟ್ಟಾಗ ನಿಶ್ಚಯವಿಲ್ಲದ ಒಂದು ತಿಳಿವಳಿಕೆ ಆಗುತ್ತದೆ. ಚಿತ್ತವು ಈ ಅನಿಶ್ಚಿತ ತಿಳಿವಳಿಕೆಯಲ್ಲಿ ಯಾವುದೋ ಒಂದು ವಿಷಯವನ್ನು ಗ್ರಹಿಸುತ್ತದೆ. ಅದನ್ನು ವಿಶೇಷ್ಯ ವಿಶೇಷಣ ಎಂದು ವಿವೇಚನೆ ಮಾಡಿ, ಈ ವಿಶೇಷಣ ಈ ವಿಶೇಷ್ಯಕ್ಕೆ ಸೇರಿದುದು ಎಂದು ತಿಳಿದು, ಈಗ ಇರುವ ಈ ವಿಶೇಷಣಗಳೂ ಇದಕ್ಕೆ ಸೇರಿದುವೋ ಅದಕ್ಕೆ ಸೇರಿದುವೋ ಎನ್ನುವ ಸಂದೇಹವನ್ನು ಕೊಳ್ಳುತ್ತದೆ. ಅಹಂಕಾರವು ಈ ಸಂದೇಹ ನಿವೃತ್ತಿಗೆ ನಿಶ್ಚಯಿಸುತ್ತದೆ. ಸಾಂಖ್ಯದಲ್ಲಿ ಇರುವಹಾಗೆಯೆ ಬುದ್ಧಿಗೆ ಎಂಟು ಭಾವಗಳುಂಟು. ಧರ್ಮ, ಜ್ಞಾನ, ವೈರಾಗ್ಯ, ಐಶ್ವರ್ಯವೂ ಇವುಗಳ ಇದಿರಾದ ಅಧರ್ಮ, ಅಜ್ಞಾನ, ಅವೈರಾಗ್ಯ, ಅನೈಶ್ವರ್ಯವೂ ಇವುಗಳ ಒಳವಿಭಾಗಗಳೂ ಸಾಂಖ್ಯದಂತೆಯೇ ಇರುತ್ತವೆ. ಹೀಗೆ ಬುದ್ಧಿಯಿಂದ ಆಗುವ ಪ್ರತ್ಯಯಗಳು ಆರುನೂರ ಹನ್ನೆರಡು. ಮೂಲ ಪ್ರಕೃತಿಯು (ಇದನ್ನು ಪ್ರಕೃತಿಮಾಯೆಯೆಂದೂ ಕರೆಯುವರು ) ಅಶುದ್ಧಮಾಯೆಯ ಕಾರ್ಯ. ಇದು ಕತಿ ಎನ್ನುವ ತತ್ತ್ವದಿಂದ ಆಗಿರುವದು. ಅಶುದ್ಧಮಾಯೆ ಮೂರು ತತ್ತ್ವಗಳನ್ನು ಉಂಟುಮಾಡುತ್ತವೆ. ಕಾಲ, ನಿಯತಿ, ಕಲ, ಎನ್ನುವ ಮೂರುತತ್ತ್ವಗಳಿಗೆ ಉತ್ಪತ್ತಿಸ್ಥಾನವಾಗಿದೆ. ಕಾಲವು ಪ್ರತ್ಯೇಕವಾದ ಒಂದು ತತ್ವವಾಗಿಯೇ ಭಾವಿಸಬೇಕು. ಏನೆಂದರೆ ಇತರ ಎಲ್ಲಾ ಕಾರಣಗಳು ಇದ್ದಾಗ್ಯೂ ಕಾಲವಾಗದ ಮುನ್ನ ಫಲವಾಗುವುದಿಲ್ಲ. ಆಯಾ ಋತುಗಳು ಬಂದಾಗಲೇ ಆಯಾ ಪೈರುಗಳು ಬೆಳೆಯುತ್ತವೆ. ಕಾಲ ಒಂದು ತತ್ತ್ವ ಎಂದರೆ ಅದಕ್ಕೂ ಗುಣಗಳಿರಬೇಕು. ಅದನ್ನು ವ್ಯತ್ಯಾಸಪಡಿಸುವ ಪದಾರ್ಥಗಳು ಇರಬೇಕು. ಕಾಲವು ಹಲವು ರೀತಿಯಾಗಿದೆ. ಅದು ಜಡಯಾವುದು ನಾನಾ ಭೇದವುಳ್ಳದ್ದಾಗಿ ಜಡವಾಗಿರುತ್ತದೆಯೋ ಅದಕ್ಕೆ ಕಾರಣವುಂಟು. ಅದು ಒಂದು ಕಾರ್ಯ. ಅದು ಅನಿತ್ಯ. ಕೆಲವರು ಚಿತ್ತ ಎಂಬ ಒಂದು ತತ್ತ್ವವನ್ನು ಹೇಳುತ್ತಾರೆ ಅದು ಪ್ರಪಂಚಕಾರಣಗಳಾದ ಮೂರು ಗುಣಗಳಿಗೆ ಸಮವಾಗಿ ಇರುವುದು. ಈ ಮೂರು ಗುಣಗಳ ಸಮತ್ವ ಸ್ಥಿತಿಗೆ ಚಿತ್ತವೆಂದು ಹೇಳುವರು. ಇವುಗಳಿಗೆ ಮೇಲೆ ಈ ಗುಣಗಳಿಗೆ ಕಾರಣವಾದ ಪ್ರಕೃತಿ ಎನ್ನುವ ತತ್ತ್ವವನ್ನು ಒಪ್ಪಿಕೊಳ್ಳುತ್ತಾರೆ. ಯಾವುದು ಬಹುವಿಧವಾಗಿಯೂ ಜಡವಾಗಿಯೂ ಇರುತ್ತದೆಯೋ ಅದಕ್ಕೆಲ್ಲಾ ಕಾರಣ ಒಂದು ಇರಬೇಕೆನ್ನುವ ನಿಯತಿಯಮೇಲೆ ಈ ಗುಣಗಳಿಗೂ ಕಾರಣಗಳಿರಬೇಕು. ಆ ಕಾರಣವೇ ಪ್ರಕೃತಿ. ಇದು ಆ ಗುಣಗಳ ಹೆಚ್ಚುಕಡಿಮೆಗಳಿಲ್ಲದ ಸಮತ್ವ ಸ್ಥಿತಿಗಿಂತ ಬೇರೆಯಾದ ಒಂದು ತತ್ತ್ವ. ಮತ್ತೆ ಕೆಲವರು ಪ್ರಕೃತಿ ತತ್ತ್ವವನ್ನು ಒಪ್ಪಿಕೊಂಡು ಗುಣತತ್ತ್ವ ಎಂದು ಬೇರೆಯಾಗಿ



CC-0. Jangamwadi Math Collection, Varanasi. An eGangotri Initiative

ಗಣಿಸುವುದಕ್ಕೆ ಆವಶ್ಯಕತೆಯಿಲ್ಲವೆಂದು ಚಿತ್ತವನ್ನೂ ಪ್ರಕೃತಿಯನ್ನೂ ಒಂದೇ ಆಗಿ ಎಣಿಸುವರು. ಇನ್ನು ಕೆಲವರು ಚಿತ್ತವನ್ನೂ ಮನಸ್ಸಿನ ಕೆಲಸಗಳ ಪ್ರಭೇದಗಳಲ್ಲಿ ಒಂದಾದ ಗಮನಶಕ್ತಿಯೋ ಎಂದು ಹೇಳಿ ಬೇರೆ ಒಂದು ತತ್ತ್ವವಾಗಿ ಭಾವಿಸುವುದಿಲ್ಲ. ಇದೆಲ್ಲಾ ಈ ತತ್ತ್ವಗಳನ್ನೂ ಎಣಿಸು ವುದರಲ್ಲಿ ಭಿನ್ನಾಭಿಪ್ರಾಯಗಳು ಇವೆ ಎನ್ನುವುದನ್ನು ತೋರಿಸುವುದಕ್ಕೆ.

ಬುದ್ಧಿ, ಅಹಂಕಾರ, ಮನಸ್ಸು, ಚಿತ್ತ ಇವು ಅಂತಃಕರಣಗಳು. ಇಂದ್ರಿಯಗಳಿಗೆ ವಸ್ತುಗಳ ಸಂಬಂಧನಾದಾಗ ಅಸ್ಪಷ್ಟವಾದ ಒಂದು ತಿಳಿವಳಿಕೆ ಉಂಟಾಗುತ್ತದೆ. ಚಿತ್ತವು ಹೀಗೆ ಮುಂದೆ ತೋರುವ ಅಸ್ಪಷ್ಟ ತೋರಿಕೆಯ ಪ್ರವಾಹದಲ್ಲಿ ಯಾವುದೋ ಈ ಆ ವಿಷಯಗಳಿಗೆ ಅಂಟುತ್ತದೆ. ಆಮೇಲೆ ಹೀಗೆ ಅಂಟಿದ ವಿಷಯಗಳನ್ನು ವಿಭಜನೆ ಮಾಡಿ ವಿಶೇಷಣ, ವಿಶೇಷ್ಯ ಎನ್ನುವ ಎರಡು ಭಾಗಗಳಾಗಿ ಮಾಡಿ ಈ ವಿಶೇಷಣಗಳು ಇಂತಹ ಇಂತಹ ವಿಷೇಷ್ಯಕ್ಕೆ ಸೇರಿದುದು ಎಂದು ಕಂಡು ಇವುಗಳಲ್ಲಿ ತನ್ನ ಮುಂದೆ ಇರುವ ಪದಾರ್ಥವು ಯಾವ ವಿಶೇಷ್ಯವಾಗಿರ ಬಹುದು ಎಂದೂ ಸಂಶಯಗೊಳ್ಳುತ್ತದೆ. ಅಹಂಕಾರವು ಇದನ್ನು ನಿಶ್ಚಯಿಸಬೇಕು ಎಂದು ನಿರ್ಧರಿಸುತ್ತದೆ. ಬುದ್ಧಿಯು ಈ ಸಂದೇಹಗೊಂಡ ಪದಾರ್ಥಗಳಲ್ಲಿ ಇದುವೇ ವಿಶೇಷ್ಯ ಎಂದು ನಿಶ್ಚಯಿಸುತ್ತದೆ. ನಿಯತಿಯು ಆತ್ಮ ತನ್ನ ಕರ್ಮಫಲವನ್ನು ತಾನು ಉಣ್ಣುವಂತೆ ಮಾಡುವ ವಿಧಿ. ಅದು ಜಡವಾದುದರಿಂದ ಅದನ್ನು ಪ್ರೇರಿಸುವ ಜ್ಞಾನವು ಇರಬೇಕು. ಹಾಗೆ ಮಾಡುವುದು ಶಿವಶಕ್ತಿ. ಶಿವಶಕ್ತಿ ಎಲ್ಲ ಕಾರ್ಯಗಳಿಗೂ ಪ್ರೇರಕವಾಗಿರುವುದರಿಂದ ಬೇರೆಬೇರೆ ಕಾರ್ಯಗಳಿಗೆ ಬೇರೆಬೇರೆ ಉಪಾದಾನಗಳನ್ನು ತೆಗೆದುಕೊಳ್ಳುತ್ತದೆ. ಕರ್ಮಫಲವನ್ನು ಅನುಭವಿಸುವುದನ್ನು ನಡೆಯಿಸುವ ಆ ಉಪಾದಾನಕ್ಕೆ ನಿಯತಿ ಎನ್ನುತ್ತೇವೆ.

ಕಲಾ ಆತ್ಮವನ್ನು ಸುತ್ತಿರುವ ಕತ್ತಲೆಯನ್ನು ಸ್ವಲ್ಪ ಹೋಗಲಾಡಿಸುವ ಶಕ್ತಿಯಾಗಿದೆ. ಒಂದು ಕಡೆ ಇದು ಮೂಲ ಪ್ರಕೃತಿಯಾಗಿ ಪರಿಣಮಿಸುವುದು. ಮತ್ತೊಂದು ಕಡೆ ವಿದ್ಯೆ ರಾಗ ಗಳಾಗಿ ಪರಿಣಮಿಸುವುದು. ವಿದ್ಯಾ ರಾಗಗಳನ್ನು ಜ್ಞಾನ ಅವೈರಾಗ್ಯಗಳಾಗಿ ತಪ್ಪಾಗಿ ಭಾವಿಸುವು ದುಂಟು. ಆದರೆ ಜ್ಞಾನ ಅವೈರಾಗ್ಯಗಳು ಬುದ್ಧಿಯ ಭಾವಕಗಳು. ಜ್ಞಾನ ಅವೈರಾಗ್ಯಗಳು ಕೇವಲ ಪ್ರಾಕೃತಿಕ. ಅವು ಆತ್ಮದೊಡನೆ ಸೇರುವುದಕ್ಕೆ ಶುದ್ಧ ಜ್ಞಾನವಾದ ಶಿವಶಕ್ತಿ ಅವುಗಳನ್ನು ಪ್ರೇರಿಸಬೇಕು. ಈ ಪ್ರೇರಣೆಗೆ ಪೂರ್ಣ ಶುದ್ಧ ಅಥವಾ ಪೂರ್ಣ ಅಶುದ್ಧ ಅಲ್ಲದಂತಹ ಕೆಲವು ಮಧ್ಯದಲ್ಲಿರುವ ತತ್ತ್ವಗಳು ಬೇಕು. ಅದರಿಂದಲೇ ವಿದ್ಯಾರಾಗಗಳು ಗಣಿಸಲ್ಪಟ್ಟವೆ. ಚಿತ್ತಿನ ಭಾವಕವಾದ ಜ್ಞಾನವು ಬೇರೆ ಬೇರೆ ತಿಳಿವಳಿಕೆಗೆ ಕಾರಣವಾಗುತ್ತದೆ. ಆದರೆ ಈ ತಿಳಿವಳಿಕೆಗಳು ಮನುಷ್ಯನ ತಿಳಿವಳಿಕೆ ಶಕ್ತಿಯು ತೋರದಲ್ಲದೆ ಆಗುವುದಿಲ್ಲ. ಇದು ವಿದ್ಯಾತತ್ತ್ವದ ಮೂಲಕ ತೋರ್ಪಡುತ್ತದೆ. ಈಶ್ವರನ ಜ್ಞಾನಶಕ್ತಿಯು ನೇರವಾಗಿಯೇ ಪ್ರೇರಿಸಿದರೆ ಆನಂದವೇ ಅನುಭವ ವಾಗತಕ್ಕದ್ದು. ಏಕೆಂದರೆ ಆ ಶಕ್ತಿಯ ಸ್ವಭಾವವು ಕೇವಲ ಆನಂದಮಯ. ಸುಖದುಃಖಾನು ಭವ ನಮಗೆ ಉಂಟಾಗುವುದಕ್ಕೋಸ್ಕರ ವಿದ್ಯಾತತ್ತ್ವವನ್ನು ಮಧ್ಯೆ ತರಬೇಕಾಗಿರುತ್ತದೆ. ಹೀಗೆಯೇ ಇಚ್ಛೆಯು ಚಿತ್ತಿನಲ್ಲಿ ತೋರುತ್ತದೆ. ಅದು ಶಿವಶಕ್ತಿಯಿಂದ ಹೊರಪಡುವುದಕ್ಕೆ ಮಧ್ಯದಲ್ಲಿ ಬೇಕಾಗಿರುವ ಸಲಕರಣೆಯು ರಾಗವು. ವಿದ್ಯೆಯಿಂದ ಜ್ಞಾನಶಕ್ತಿ ಬೆಳಗುತ್ತಾ ವಿಷಯಗಳನ್ನು ಅರಿಯುತ್ತಲಿರುವ ಆತ್ಮನಿಗೆ ಇಚ್ಛೆಯುಂಟಾದರೆ ಅಲ್ಲದೆ ಭೋಗ, ಅನುಭವ ಸಲ್ಲುವುದಿಲ್ಲ. ಆದುದರಿಂದ ವಿದ್ಯೆಯಿಂದ ತೋರಿ ಇಚ್ಛಾಶಕ್ತಿಯನ್ನು ಬೆಳಗಿಸಿ ಬುದ್ಧಿ ಗುಣಗಳ



CC-0. Jangamwadi Math Collection, Varanasi. An eGangotri Initiative

ಅವೈರಾಗ್ಯ ಎನ್ನಲ್ಪಡುವ ರಾಗದ ಸಂಭವಕ್ಕೆ ಹೇತುವಾಗಿ ನಿಲ್ಲುವುದು ರಾಗತತ್ತ್ವ. ಕಾಲ, ನಿಯತಿ, ಕಲಾ, ವಿದ್ಯಾ, ರಾಗ ಈ ಐದು ಪಂಚ ಕಂಚುಕಗಳು ಎನ್ನುತ್ತ ಈ ಪದರಿಂದ ಆವರಿಸಲ್ಪಟ್ಟು ಅವಿದ್ಯಾ, ಅಸ್ಮಿತ, ರಾಗ, ದ್ವೇಷ, ಅಭಿನಿವೇಶ ಎಂಬ ಪಂಚ ಕ್ಲೇಶಗಳಿಗೆ ಒಳಗಾಗಿ ಮೂಲ ಪ್ರಕೃತಿಯ ಅನುಭವವನ್ನು ಪಡೆಯುವುದಕ್ಕೆ ಆತ್ಮಸಿದ್ಧವಾಗುತ್ತದೆ. ಈ ಪಂಚ ಕ್ಲೇಶಗಳು ಪುಂಸ್ತ್ವಮಲ ಎನ್ನಲ್ಪಡುತ್ತವೆ. ಹೀಗೆ ಪಂಚ ಕಂಚುಕಗಳಿಂದ ಆವರಿಸಲ್ಪಟ್ಟು ಪುಂಸ್ತ್ವಮಲದೊಡಗೂಡಿ ಸಾಧಾರಣವಾಗಿ ಭೋಕ್ತೃತ್ವವನ್ನು ಪಡೆದಿರುವ ಆ ಆತ್ಮನ ನೆಲೆಗೆ ಪುರುಷ ತತ್ತ್ವ ಎನ್ನುತ್ತೇವೆ. ಅಶುದ್ಧ ಮಾಯೆಯಿಂದ ಪುರುಷ ತತ್ತ್ವದವರೆಗೂ ಪುರುಷ ತತ್ತ್ವವನ್ನು ಸೇರಿಸಿಕೊಂಡು ಏಳು ತತ್ತ್ವಗಳಿರುತ್ತವೆ. ಪ್ರಕೃತಿಯಿಂದ ಇಪ್ಪತ್ತುನಾಲ್ಕು ಅಥವಾ ಇಪ್ಪತ್ತೈದು ತತ್ತ್ವಗಳು ಪೂರ್ಣ ಅಶುದ್ಧವಾದುವು. ಈ ಏಳು ಮಿಶ್ರವಾದುವು. ಇವುಗಳಿಗೆ ಮಿಶ್ರಾಧ್ವನ್ ಎಂದು ಹೆಸರು. ಆ ಇಪ್ಪತ್ತುನಾಲ್ಕು ಅಶುದ್ಧಾಧ್ವನ್ ಇನ್ನು ಮುಂದೆ ಹೇಳುವ ಶಿವತತ್ತ್ವ ಮುಂತಾದುವು ಶುದ್ಧ ಅಧ್ವನ್ ಆಗುತ್ತವೆ. ಈ ಅಶುದ್ಧ ಮಾಯೆಯಿಂದಾದ ಈ ಏಳಕ್ಕೂ ಭೋಜಯಿತ್ರಿಕಾಂಡ ಅಂದರೆ ಅನುಭವವನ್ನು ಕೊಡುವ ಭಾಗ ಎಂದು ಹೆಸರು. ಭೋಗವಸ್ತುಗಳನ್ನು ಉಳ್ಳ ಭಾಗವು ಭೋಗ್ಯ ಕಾಂಡ ಪ್ರೇರಿಸುವ ಭಾಗವು ಪ್ರೇರಕ ಕಾಂಡವಾಗುತ್ತದೆ.

ಶುದ್ಧ ತತ್ತ್ವಗಳು ಐದು. ಶಿವತತ್ತ್ವ ಅವುಗಳಲ್ಲಿ ಮೊದಲನೆಯದು. ಅದುವೆ ಇತರ ತತ್ತ್ವಗಳಿಗೆ ಕಾರಣ. ಇತರ ತತ್ತ್ವಗಳು ಶಕ್ತಿ, ಸದಾಶಿವ, ಈಶ್ವರ. ಶುದ್ಧ ವಿದ್ಯ ಶಿವತತ್ತ್ವವು ಶುದ್ಧ ಮಾಯೆ. ಮಹಾ ಸಂಹಾರ ಕಾಲದಲ್ಲಿ ತನ್ನ ಕಾರ್ಯಗಳೆಲ್ಲಾ ಉಡುಗಿ ಕಾರಣಮಾತ್ರವಾಗಿ ನಿಲ್ಲುವಾಗ ಶಿವನೂ ತನ್ನ ಶಕ್ತಿ ವ್ಯಾಪಾರಗಳನ್ನು ಬಿಟ್ಟು ಭಾಗವಿಲ್ಲದೆ ತಾನೇಯಾಗಿ ನಿಲ್ಲುವನು. ಅಂತಹ ಶಿವನು ಅಂತಹ ಶುದ್ಧ ಮಾಯೆ ತಿರುಗಿ ಕಾರ್ಯಪಡುವುದಕ್ಕೆ ಯೋಗ್ಯವಾಗುವಂತೆ ತನ್ನಿಂದ ಹೊರಟ ಜ್ಞಾನಶಕ್ತಿ ಮಾತ್ರದಿಂದಲೇ ಅದನ್ನು ನೋಡಿ ನಿಲ್ಲುವನು. ಹಾಗೆ ನೋಡಿ ನಿಂತಾಗ ಶುದ್ಧ ಮಾಯೆಯಲ್ಲಿ ಕಲಕಿಸಿದ ಭಾಗವು ಜ್ಞಾನಮಾತ್ರೆಯಾಗಿ ನಿಂತ ಶಿವನಿಂದ ಅಧಿಷ್ಠಿಸಲ್ಪಡುವುದರಿಂದ ಶಿವತತ್ತ್ವವೆಂದೂ ಲಯಿಸಿದ ಮಾತ್ರವಾಗಿ ನಿಲ್ಲುವುದರಿಂದ ಲಯತತ್ತ್ವವೆಂದೂ ರೂಪವಿಲ್ಲದಿರುವುದರಿಂದ ನಿಷ್ಕಳ ತತ್ತ್ವವೆಂದೂ ಕಾರ್ಯಪಡುವುದಕ್ಕೆ ಯೋಗ್ಯವಾದುದರಿಂದ ಶಕ್ತಿಮಾನ್ ಎಂದೂ ನಾಲ್ಕನೆಯ ವಾಕ್ಕುಗಳಲ್ಲಿ ಸೂಕ್ಷ್ಮ ವಾಕ್ಕಾದ ನಾದಕ್ಕೆ ಆಧಾರವಾಗುವುದರಿಂದ ನಾದ ತತ್ತ್ವವೆಂದೂ ಎನ್ನಿಸಿಕೊಳ್ಳುತ್ತದೆ. ಅದನ್ನು ಅಧಿಷ್ಠಿಸುವ ಶಿವನು ಈ ಐದು ಬಗೆಯ ಹೆಸರು ಹೊಂದಿ ನಿಲ್ಲುತ್ತಾನೆ. ಶುದ್ಧ ಮಾಯೆಯ ಮೊದಲು ಉತ್ಪತ್ತಿಯಾದಂಥ ಈ ಶಿವತತ್ತ್ವವು ಜ್ಞಾನಶಕ್ತಿಗೂ ಅದರ ಭೇದವಾದಂಥಾ ಇಂದಿಕಾ, ದೀಪಿಕಾ, ರೋಚಿಕಾ, ಮೋಚಿಕ, ಊರ್ಧ್ವಗಾಮಿನಿ, ವ್ಯಾಪಿನಿ, ವ್ಯೋಮರೂಪ, ಅನಂತ, ಅನಾದ, ಅನಾಶ್ರಿತ ಎನ್ನುವ ಹತ್ತು ಕಲೆಗಳಿಗೂ ಕಾಮಿಕ ಮೊದಲಾದ ಭೇದ ತೋರದೆ ಸೂಕ್ಷ್ಮ ವಾಕ್ರೂಪವಾಗಿ ನಿಲ್ಲುವ ಶಿವಾಗಮಕ್ಕೂ ಶಿವತತ್ತ್ವ ಭುವನವನ್ನು ಕೋರಿ ಶಿವನ ದೀಕ್ಷೆಯನ್ನು ಪಡೆದು ನಾದಮೂರ್ತಿಯನ್ನು ಉಪಾಸಿಸಿ ಅಧಿಕಾರ, ಮಲವಾಸನೆಯೂ ಅಗಲಿ ಮುಕ್ತರಾಗಿ ಸೂಕ್ಷ್ಮ ಲಯ, ವಾಸನೆ ಮಾತ್ರವುಳ್ಳ ಆತ್ಮಗಳಿಗೂ ಅಲ್ಲಿ ಉಳ್ಳ ಭುವನ ಭೋಗಗಳಿಗೂ ನೆಲೆಯಾಗುವುದು.

### ಶಕ್ತಿತತ್ತ್ವ

ಹೀಗೆ ಜ್ಞಾನಶಕ್ತಿಯಿಂದ ಕಲಕಿಸಲ್ಪಟ್ಟ ಭಾಗದಲ್ಲಿ ಶಿವತತ್ತ್ವ ಎಂದು ವೃದ್ಧಿಯಾಗಿ



CC-0. Jangamwadi Math Collection, Varanasi. An eGangotri Initiative

ಕಾರ್ಯಕೊಡುವುದಕ್ಕೆ ಯೋಗ್ಯವಾಗಿ ನಿಂತ ಶುದ್ಧ ಮಾಯೆ ಕಾರ್ಯಪಡುವ ಹಾಗೆ ಸೂಕ್ಷ್ಮ, ಲಯ, ಅವಸ್ಥೆಯಲ್ಲಿ ನಿಂತ, ಮೊದಲಿಗಿನ ( ಶಿವನ ) ಕ್ರಿಯಾಶಕ್ತಿ ಹೊರಪಟ್ಟು ಸಾಮಾನ್ಯದಲ್ಲಿ ಸಂಕಲ್ಪಿಸಿದಾಗ ಶುದ್ಧಮಾಯೆ ಕಾರ್ಯಪಡುವುದಾಗಿನಿಂದ ಎರಡನೆಯ ವೃದ್ಧಿ ಶಕ್ತಿ ಎಂದು ಹೇಳಲ್ಪಡುವ ಶಿವನಿಂದ ಅಧಿಷ್ಠಿಸಲ್ಪಡುವುದರಿಂದ ಶಕ್ತಿತತ್ತ್ವವೆಂದೂ ಶಿವತತ್ತ್ವವೆಂದೂ ಶಿವತತ್ತ್ವದ ಸ್ವರೂಪವನ್ನು ಹೋಲಿಸಲು ಸ್ಥೂಲವಾದ್ದರಿಂದ ಸ್ಥೂಲಲಯತತ್ತ್ವವೆಂದೂ, ಸ್ಥೂಲ ನಿಷ್ಕಳತತ್ತ್ವವೆಂದೂ, ಪಶ್ಯಂತಿ ಎನ್ನುವ ವಾಕ್ಕಿಗೆ ಆಧಾರವಾಗಿರುವುದರಿಂದ ಬಿಂದು ತತ್ತ್ವವೆಂದೂ ಹೆಸರು ಹೊಂದುತ್ತದೆ. ಅದನ್ನು ಅಧಿಷ್ಠಿಸುವ ಮೊದಲಿಗನು ಆ ಹೆಸರು ಹೊಂದುತ್ತಾನೆ. ಇದು ಮೊದಲಿಗನ ಕ್ರಿಯಾಶಕ್ತಿಗೂ ಅದರ ಭೇದವಾದಂಥ ನಿವೃತ್ತಿ ಮೊದಲಾದ ಪಂಚಕಲೆಗಳಿಗೂ ಪಶ್ಯಂತಿರೂಪವಾಗಿ ನಿಲ್ಲುವ ಶಿವಾಗಮಗಳಿಗೂ ಬಿಂದು ತತ್ತ್ವಭುವನವನ್ನು ಕೋರಿ ದೀಕ್ಷೆಹೊಂದಿ ಬಿಂದು ಮೂರ್ತಿಯನ್ನು ಉಪಾಸಿಸಿ ಮಲಬಂಧವು ಆಗಲಿ ಸ್ಥೂಲ, ಲಯ, ವಾಸನೆ ಮಾತ್ರ ಉಳ್ಳ ಮುಕ್ತರಿಗೂ ಅವರಿಗೆ ಸಲ್ಲುವ ಭುವನ ಭೋಗಗಳಿಗೂ ನೆಲೆಯಾಗಿರುತ್ತದೆ.

## ಸದಾಶಿವನ ತತ್ತ್ವ

ಹೀಗೆ ಕಾರ್ಯಪಡುವುದಾಗಿ ಶಕ್ತಿತತ್ತ್ವದ ಸಿದ್ಧಿಹೊಂದಿ ನಿಂತ ಶುದ್ಧ ಮಾಯೆಯನ್ನು ಕಾರ್ಯಪಡಿಸುವ ರೀತಿ ಎಲ್ಲವೂ ಹಾಗೆ ಸ್ಥೂಲ ಲಯ ಅವಸ್ಥೆಯಿಂದ ಸಾಮಾನ್ಯ ರೀತಿಯಲ್ಲಿ ಸಂಕಲ್ಪಿಸಿದ ಮೊದಲಿಗನು ಆಮೇಲೆ ಭೋಗ ಅವಸ್ಥೆಯಿಂದ ತನ್ನ ಜ್ಞಾನಶಕ್ತಿಯಿಂದ ವಿಶೇಷ ಬಗೆಯಲ್ಲಿ ಸಂಕಲ್ಪಿಸಿದಾಗ ಕಾರ್ಯಗಳನ್ನು ತೋರಿಸುವುದಕ್ಕೆ ಉನ್ಮುಖಿಯಾಗಿ ನಿಂತ ಶುದ್ಧ ಮಾಯೆಯ ಮೂರನೆಯ ವೃತ್ತಿಯು. ಸದಾಶಿವಂ ಎಂದು ಹೆಸರುಳ್ಳ ಶಿವನಿಂದ ಅಧಿಷ್ಠಿಸಲ್ಪಡುವುದರಿಂದ ಸದಾಶಿವತತ್ತ್ವಂ ಎಂದೂ ಉನ್ಮುಖವಾಗಿ ನಿಲ್ಲುವುದರಿಂದ ಉದ್ಯುತ ತತ್ತ್ವವೆಂದೂ ಭೋಗವೆನ್ನುವ ಅವಸ್ಥೆಯುಳ್ಳದ್ದರಿಂದ ಭೋಗತತ್ವವೆಂದೂ ಸದಾಶಿವಮೂರ್ತಿ ಶಕ್ತಿ ಕಲೆಯುಳ್ಳದ್ದರಿಂದ ಸಕಳವಾಗುವುದು. ಮಾಯಾಕಲೆ ಇಲ್ಲದಿರುವುದರಿಂದ ನಿಷ್ಕಳವಾಗುವುದು. ಎಂಬ ಈ ಎರಡೂ ಉಳ್ಳದ್ದರಿಂದಲೂ ಪ್ರವೃತ್ತಿ ನಿವೃತ್ತಿ ಎರಡಕ್ಕೂ ಸಾಮಾನ್ಯವಾಗುವುದರಿಂದಲೂ ಸಕಳ ನಿಷ್ಕಳತತ್ತ್ವಂ ಎಂದೂ ತನ್ನನ್ನು ಅಧಿಷ್ಠಿಸುವ ಮೊದಲಿಗನಿಗೆವುಳ್ಳ ಹೆಸರಿಷ್ಟ ಪಡೆದು ನಿಲ್ಲುವುದು. ಸದಾಶಿವನಿಗೂ ಸದಾಶಿವಮೂರ್ತಿಗೂ ಮೌಳಿಮುಡಿ ಮುಂತಾದ ಅಂಗಗಳಿಂದ ಪಂಚಶಕ್ತಿಗಳಿಗೂ ಅವುಗಳ ಭೇದವಾದ ಸಶಿನಿ ಮುಂತಾದ ಮೂವತ್ತೆಂಟು ಕಲೆಗಳಿಗೂ ಆರಿಣಿ, ಜನನಿ ಮುಂತಾದ ಶಕ್ತಿಗಳಿಗೂ, ಮಧ್ಯಮ, ವಾಗ್ರೂಪವಾಗಿ ನಿಂತ ಶಿವಾಗಮಕ್ಕೂ ಆ ಶಿವಾಗಮವು ಕಾಮಿಕ ಮೊದಲು ವಾತುಳ ಕೊನೆಯಾಗಿ ಇಪ್ಪತ್ತೆಂಟು ಭಾಗಗಳಾಗುವುದಕ್ಕೆ ಕಾರಣವಾದ ಪ್ರಣವರು ಮುಂತಾದವರಿಗೂ, ಶುದ್ಧ ಸಾಮೀಪ್ಯ ಮೊದಲಾದ ಮುಕ್ತಿಪದಗಳಲ್ಲಿ ಭೋಗ ವಾಸನೆಯುಳ್ಳ ಅಣುಸದಾಶಿವ ಮುಂತಾದವರಿಗೂ ಅವರ ತನು ಕರಣ ಭುವನ ಭೋಗಗಳಿಗೂ ಸ್ಥಾನವಾಗುವುದು.

## ಈಶ್ವರ ತತ್ತ್ವ

ಉನ್ಮುಖಿಯಾಗಿ ನಿಂತ ಶುದ್ಧ ಮಾಯೆಯಲ್ಲಿ ಸೂಕ್ಷ್ಮವಾಗಿ ಕಾರ್ಯ ತೋರುವುದಕ್ಕೆ ಉದ್ಯುಕ್ತನಾಗಿ ನಿಂತ ಮೊದಲಿಗನು ಅಧಿಕಾರಾವಸ್ಥೆಯಿಂದ ಕ್ರಿಯಾಶಕ್ತಿಯನ್ನು ಹೆಚ್ಚು ಸಲ್ಲಿಸಿ



CC-0. Jangamwadi Math Collection, Varanasi. An eGangotri Initiative

ಪ್ರವೃತ್ತಿ ಮಾಡಿದಾಗ ಸೂಕ್ಷ್ಮವಾಗಿ ಕಾರ್ಯಪಟ್ಟ ಶುದ್ಧ ಮಾಯೆಯ ನಾಲ್ಕನೆಯ ವೃದ್ಧಿಯು ಈಶ್ವರನಾಗಿ ನಿಂತ ಶಿವನಿಂದ ಅಧಿಷ್ಠಿಸಲ್ಪಡುವುದರಿಂದ ಈಶ್ವರತತ್ತ್ವವೆಂದೂ ಸೂಕ್ಷ್ಮ ಅಧಿಕಾರ ತತ್ತ್ವವೆಂದೂ ಸೂಕ್ಷ್ಮ ಪ್ರವೃತ್ತಿ ತತ್ತ್ವವೆಂದೂ ತನ್ನನ್ನು ಅಧಿಷ್ಠಿಸುವ ಮೊದಲಿಗನಿಗೆ ಸೇರಿದ ಹೆಸರೆಲ್ಲವನ್ನೂ ಹೊಂದಿ ನಿಲ್ಲುತ್ತದೆ. ಇದು ಈಶ್ವರನಿಗೂ ಸೂಕ್ಷ್ಮ ವೈಖರಿರೂಪವಾಗಿ ನಿಂತ ಶಿವಾಗಮಗಳಿಗೂ ಅಧಿಕಾರ ಮಲವಾಸನೆಯುಳ್ಳವರಾಗಿ ಅಶುದ್ಧ ಮಾಯೆಯನ್ನೂ ಕಾರ್ಯ ಪಡಿಸುವ ಅನಂತದೇವ ಮುಂತಾದ ಎಂಟು ವಿದ್ಯೇಶ್ವರರಿಗೂ ಅವರನ್ನು ಉಪಾಸಿಸಿ ಆ ಪದವನ್ನು ಹೊಂದಿದ ರುದ್ರರುಗಳಿಗೂ ಅವರ ತನು ಕರಣ ಮುಂತಾದುವುಗಳಿಗೂ ಸ್ಥಳವಾಗುವುದು.

## ಶುದ್ಧ ವಿದ್ಯಾತತ್ತ್ವ

ಹೀಗೆ ನಿಂತ ಶುದ್ಧ ಮಾಯೆಯಲ್ಲಿ ಸ್ಥೂಲ ಕಾರ್ಯ ತೋರುವುದಕ್ಕೆ ಆ ಮೊದಲಿಗನು ಸ್ಥೂಲ ಅಧಿಕಾರ ಅವಸ್ಥೆಯಿಂದ ಜ್ಞಾನ ಶಕ್ತಿಯನ್ನೂ ಹೆಚ್ಚಾಗಿ ಸಲ್ಲಿಸಿ ಪ್ರವೃತ್ತಿ ಮಾಡಿದಾಗ ಸ್ಥೂಲವಾಗಿ ಕಾರ್ಯಪಟ್ಟ ಶುದ್ಧ ಮಾಯೆಯು ಐದನೆಯ ವೃತ್ತಿಯು ವಿದ್ಯೆಗೆ ಹೇತುವಾದ ಈಶ್ವರ ನಾಗಿ ನಿಂತ ಶಿವನಿಂದ ಅಧಿಷ್ಠಿಸಲ್ಪಟ್ಟಿರುವುದರಿಂದ ಶುದ್ಧ ವಿದ್ಯಾತತ್ತ್ವವೆಂದೂ ಸ್ಥೂಲ ಈಶ್ವರ ತತ್ತ್ವವೆಂದೂ ತನ್ನನ್ನು ಅಧಿಷ್ಠಿಸುವ ಮೊದಲಿಗನು ಉಳ್ಳ ಹೆಸರು ಅನ್ನೂ ಹೊಂದಿ ನಿಲ್ಲುವುದು. ಇದು ಸ್ಥೂಲವಾಗಿ ನಿಂತ ಈಶ್ವರನಿಗೂ ಸ್ಥೂಲ ವೈಖರಿಯಾಗಿ ನಿಂತ ಶಿವಾಗಮ ಮೊದಲಾದ ಶಾಸ್ತ್ರಗಳಿಗೂ ಏಳು ಕೋಟಿ ಮಂತ್ರಗಳಿಗೂ ನಂದಿ ಮುಂತಾದ ಗುಣಗಳಿಗೂ ವಾಮ ಮುಂತಾದ ಒಂಭತ್ತು ಶಕ್ತಿಗಳಿಗೂ ಮುಕ್ತಿ ಪಡೆದು ಮಲವಾಸನೆ ಮಾತ್ರ ಉಳ್ಳವರಾಗಿ ಕೆಳಗೆ ಉಳ್ಳಂಥ ರುದ್ರ, ವಿಷ್ಣು, ಅಜ, ಇಂದ್ರ ಮುಂತಾದವರನ್ನೂ ತಮ್ಮತಮ್ಮ ಕಾರ್ಯಗಳಲ್ಲಿ ಪ್ರೇರೇಪಿಸುವರಾದ ರುದ್ರ, ವಿಷ್ಣು, ಅಜ, ಇಂದ್ರ ಮುಂತಾದವರಿಗೂ ಅವರ ತನುಕರಣಾದಿಗಳಿಗೂ ಸ್ಥಳವಾಗುವುದು. ಇದುವರೆವಿಗೂ ಶುದ್ಧ ಮಾಯಾ ಕಾರ್ಯವಾದ ಅರ್ಥ ಪ್ರಪಂಚವನ್ನೂ ಶಬ್ದ ಪ್ರಪಂಚವನ್ನೂ ಹೇಳಿದ್ದಾಯಿತು. ನಮ್ಮ ಕಿವಿಗಳಿಗೆಲ್ಲಾ ಕೇಳುವ ಶಬ್ದಕ್ಕಿಂತ ಬೇರೆಯಾದ ಪರಾಪಶ್ಯಂತಿ ಮಧ್ಯಮಾ ಎನ್ನುವ ಮೂರು ವಾಕ್ಕುಗಳುಂಟು. ನಾವು ಕೇಳುವುದು ವೈಖರಿ. ಇವುಗಳಲ್ಲಿ ಎರಡು ಸೂಕ್ಷ್ಮ, ಸ್ಥೂಲ. ಸೂಕ್ಷ್ಮ ವೈಖರಿಯು ಶುದ್ಧ ವಿದ್ಯಾ ತತ್ತ್ವದಲ್ಲಿಯೂ ಸ್ಥೂಲ ವೈಖರಿಯು ಈಶ್ವರ ತತ್ತ್ವದಲ್ಲಿಯೂ ಇರುತ್ತವೆ. ಮಧ್ಯಮ ಸದಾಶಿವ ತತ್ತ್ವದ್ದು, ಪಶ್ಯಂತಿ ಶಕ್ತಿ ತತ್ತ್ವದ್ದು, ಪರಾಶಿವ ತತ್ತ್ವದ್ದು.

ಅರ್ಥವು ಅಕ್ಷರಗಳಿಂದ ಅಲ್ಲ. ಪದಗಳಿಂದ ಅಲ್ಲ. ಅಕ್ಷರಗಳೂ ಪದಗಳೂ ಇವುಗಳ ಮೂಲಕ ತೋರುವ ಒಂದು ಶಕ್ತಿಯಿಂದ ಗೊತ್ತಾಗುವುದು. ಈ ಶಕ್ತಿಗೆ ವೈಯ್ಯಾಕರಣಿಗಳು ಸ್ಫೋಟ ಎನ್ನುವರು. ಇದು ಶುದ್ಧ ಮಾಯೆಯಿಂದ ಮೊದಲು ತೋರುವ ನಾದ ತತ್ತ್ವದಲ್ಲಿ ನೆಲಸಿರುವುದು.

ಆತ್ಮಗಳು ಅನಂತ. ಸರ್ವವ್ಯಾಪಕ ಸರ್ವಜ್ಞನಾದರೂ ಖಂಡವಾಗಿಯೂ ಕಿಂಚಿಜ್ಞ. ಇವಕ್ಕೆ ಕಾರಣ ಆಣವ, ಕರ್ಮ, ಮಾಯ ಎನ್ನುವ ಮೂರು ಬಂಧನಗಳು. ಆಣವ ಸಹಜ ಮಲ. ಅದು ಅನಾದಿಯಾಗಿ ನೆಲ್ಲಿನಲ್ಲಿ ಹೊಟ್ಟು ತವುಡಿನ ಹಾಗೆಯೂ ತಾಮ್ರದಲ್ಲಿ ಕಿಲುಬಿನ ಹಾಗೆಯೂ ಆತ್ಮಗಳಲ್ಲಿ ಇರುತ್ತದೆ. ಈ ಮಲದಿಂದಲೇ ವಿಭುವಾದ ಆತ್ಮ ಅಣುವಾಗಿ ತನ್ನನ್ನು ತಿಳಿದುಕೊಳ್ಳು



CC-0. Jangamwadi Math Collection, Varanasi. An eGangotri Initiative

ತ್ತದೆ. ಹೀಗೆ ಜ್ಞಾನ ಕ್ರಿಯಾ ಶಕ್ತಿಗಳಲ್ಲಿ ಬಂಧನೆ ಇರುವುದರಿಂದ ಒಳ್ಳೆಯದು ಕೆಟ್ಟದ್ದು ಎನ್ನುವ ಕೆಲವು ಮಾರ್ಗಗಳಲ್ಲಿ ಈ ಆತ್ಮಗಳು ವರ್ತಿಸುತ್ತವೆ. ಈ ಕಾರ್ಯಗಳು ಅನುಭವಿಸಬೇಕಾದ ಕೆಲವು ಫಲಗಳನ್ನು ಕೊಡುತ್ತವೆ. ಈ ಫಲಗಳು ಎರಡನೆಯ ಬಂಧನವಾಗುತ್ತವೆ. ಅದಕ್ಕೆ ಕರ್ಮವೆಂದು ಹೆಸರು. ಈ ಫಲಗಳನ್ನು ಅನುಭವಿಸಿ ಅದರಿಂದ ಜ್ಞಾನವನ್ನು ಪಡೆಯುವುದಕ್ಕೆ ತನು, ಕರಣ, ಭುವನ, ಭೋಗಗಳು ಬೇಕು. ಇವುಗಳು ಮೂರನೆಯ ಬಂಧವಾದ ಅಶುದ್ಧವಾದ ಮಾಯೆಯಿಂದಾಗುತ್ತವೆ. ಆಣವದ ಕೆಲಸವೂ ಮಾಯೆಯ ಕೆಲಸವೂ ಒಂದಕ್ಕೊಂದು ವಿರೋಧವಾದುವುಗಳು. ಆಣವ ಮರೆ ಮಾಡುತ್ತದೆ. ಮಾಯೆಯು ಪ್ರಕಾಶಪಡಿಸುತ್ತದೆ. ಆಣವ ಬಂಧಿಸುತ್ತದೆ. ಮಾಯೆಯು ಬಿಡಿಸುತ್ತದೆ. ಆದರೆ ಈ ಮಾಯೆಯಿಂದಾಗುವ ಬಿಡುಗಡೆಯೂ ಬೆಳಕೂ ಸ್ವಲ್ಪವೇ. ಅದರಿಂದಾಗುವ ಜ್ಞಾನವು ಸರಿಯಾದುದಲ್ಲ.

ಈ ಮೂರು ವಿಧ ಬಂಧನಗಳೂ ಉಳ್ಳ ಆತ್ಮಗಳು ಸಕಲರು, ಮಾಯೆ ಮಾತ್ರ ಇಲ್ಲದವರು ಪ್ರಳಯಾಕಲರು. ಇವರಿಗೆ ಆಣವದ ಜತೆಗೆ ಕರ್ಮವೂ ಇರುತ್ತದೆ. ಈ ಕರ್ಮ ಕ್ಷಯವಾಗುವುದಕ್ಕೆ ಹೊಸ ಸೃಷ್ಟಿಯಲ್ಲಿ ಹೊಸ ಲೋಕಗಳಲ್ಲಿ ಈ ಕರ್ಮ ಅನುಭವದಿಂದ ಕ್ಷಯವಾಗಬೇಕು. ಕರ್ಮಬಂಧವು ಆಗಲಿ ಆಣವದಲ್ಲಿ ಮಾತ್ರ ಕಟ್ಟಲ್ಪಟ್ಟಿರುವವರು ವಿಜ್ಞಾನಕಲರು. ಇವರು ಶುದ್ಧ ಮಾಯಾ ಭುವನಗಳಲ್ಲಿ ಇರುವರು.

ಪತಿಯು ಶುದ್ಧನು ಸರ್ವಶಕ್ತನು ಸರ್ವಜ್ಞನು ಮಂಗಳಕರನು. ನಿತ್ಯವಾಗಿ ಪಾಶದಿಂದ ಮುಕ್ತನು ಆಗಿರುವನು. ಈಶ್ವರನು ಪ್ರಪಂಚಕ್ಕೆ ಸಮವಾಯಿಕಾರಣನಾಗಿಯೂ (ಉಪಾದಾನ) ನಿಮಿತ್ತಕಾರಣನಾಗಿಯೂ ತನ್ನ ಶಕ್ತಿಗಳ ಮೂಲಕ ಆವನು ಉಪಾದಾನಕಾರಣನಾಗಿಯೂ ತನ್ನ ಸ್ವರೂಪದಿಂದ ನಿಮಿತ್ತ ಕಾರಣನಾಗಿಯೂ ಇರುವನು. ಈ ವ್ಯತ್ಯಾಸವು ನಿಜವಾದ ವ್ಯತ್ಯಾಸವಲ್ಲ. ಏಕೆಂದರೆ ಶಕ್ತಿಗೂ ಶಕ್ತಿಮಾನಿಗೂ ವಿಶೇಷಣಕ್ಕೂ ವಿಶೇಷ್ಯಕ್ಕೂ ಇರುವ ತಾದಾತ್ಮ್ಯಸಂಬಂಧವಿರುತ್ತದೆ. ಶೈವಸಮಯಗಳಲ್ಲಿ ಕೆಲವು ಶಿವನೇ ಉಪಾದಾನ ಕಾರಣನು ಎಂಬುದನ್ನು ನಿಜವಾಗಿಯೇ ಭಾವಿಸುತ್ತೇವೆ. ಮತ್ತೆ ಕೆಲವು ಇದನ್ನು ಔಪಚಾರಕವಾಗಿ ಭಾವಿಸುತ್ತವೆ. ಈಶ್ವರನು ಸೃಷ್ಟಿ, ಸ್ಥಿತಿ, ಸಂಹಾರ, ಶಿರೋಭವ, ಅನುಗ್ರಹ ಎಂಬ ಪಂಚಕೃತ್ಯಗಳನ್ನು ನಡೆಯಿಸುತ್ತಾನೆ. ಇದುವೆ ನಟರಾಜನ ಪಾಂಡವ ಲೀಲೆಯಲ್ಲಿ ತೋರುವ ರಹಸ್ಯ. ಈ ವಿಗ್ರಹವು ಒಬ್ಬ ಮನುಷ್ಯನು ನೃತ್ಯಮಾಡುವ ರೂಪವಾಗಿ ಅಣುಗಳನ್ನು ಕರಿತು ವಿಮರ್ಶೆ ಮಾಡುವ ವಿಜ್ಞಾನಿಗಳು ಅಣುಗಳೆಲ್ಲವೂ ಏಕತಾಳದಲ್ಲಿ ಕುಣಿದುಕೊಂಡಿರುತ್ತವೆ ಎನ್ನುತ್ತಾರೆ. ಅಣುಗಳು ಕುಣಿಯಲು ಅಂಡಗಳು ಕುಣಿಯುತ್ತವೆ. ಇವುಗಳನ್ನು ಕುಣಿಸುವ ಆಂಡವನು ತಾನು ಕುಣಿಯುವನು. ಮನುಷ್ಯರ ಧ್ಯೇಯವು ದುಃಖವು ಅಗಲಿ ಸುಖವು ಪ್ರಾಪ್ತವಾಗಬೇಕು ಎನ್ನುವದು. ಈ ತಾಂಡವ ಮೂರ್ತಿಯು ಲೋಕವು ಸುಖವನ್ನು ಪಡೆಯುವದಕ್ಕೋಸ್ಕರ ಆನಂದ ತಾಂಡವ ಮಾಡುತ್ತಿದ್ದಾನೆ. ಇದರಲ್ಲಿ ಬಲಗಾಲನ್ನು ಒಬ್ಬ ರಾಕ್ಷಸನ ಮೇಲೆ ಮೆಟ್ಟಿ ಎಡಗಾಲನ್ನು ಮೇಲಕ್ಕೆ ಎತ್ತಿ ಒಂದು ಎಡಗೈಯಿಂದ ಹಾಗೆ ಎತ್ತಿದ ಕಾಲನ್ನು ತೋರಿಸಿ, ಮತ್ತೊಂದು ಎಡಗೈಯಿಂದ ಅಗ್ನಿಯನ್ನು ಹಿಡಿದು ಒಂದು ಬಲಗೈಯಲ್ಲಿ ಅಭಯ ಮುದ್ರಿ ಹಸ್ತವನ್ನು ತೋರಿಸಿ ಮತ್ತೊಂದು ಬಲಗೈಯಲ್ಲಿ ಡಮರುಗವನ್ನು ಹಿಡಿದಿರುವನು. ಈ ಡಮರುಗದಿಂದ ಬರುವ ನಾದ ಲೋಕಸೃಷ್ಟಿ ಕಾರ್ಯ ಸೂಚಿಸುತ್ತದೆ. ಅಭಯ ಹಸ್ತವು ಸ್ಥಿತಿ ಕಾರ್ಯಕ್ಕೆ ಚಿನ್ಹೆ. ಅಗ್ನಿಯು ಕಾರ್ಯವನ್ನು ತೋರಿಸುತ್ತದೆ.



CC-0. Jangamwadi Math Collection, Varanasi. An eGangotri Initiative

ಮೆಟ್ಟಿದ ಪಾದವು ಜೀವರು ತಮ್ಮ ಕರ್ಮಕ್ಕೆ ಈಡಾದ ಫಲಗಳನ್ನು ಅನುಭವಿಸುವವರೆಗೂ ತಮ್ಮ ಸ್ವರೂಪವನ್ನು ಅರಿಯದೆ ಇರುವದಕ್ಕೆ ಕಾರಣವಾಗಿರುವ ಮರೆಮಾಡುವ ಮಾಯಾ ಶಕ್ತಿಯಾವ ತಿರೋಭವವನ್ನು ತೋರಿಸುತ್ತದೆ. ಕುಂಚಿತ ಪಾದವಾದ ಎತ್ತಿದ ಎಡಗಾಲು ಮೋಕ್ಷಕ್ಕೆ ಕಾರಣವಾದ ಅನುಗ್ರಹವನ್ನು ತೋರಿಸುತ್ತದೆ. ಈ ಪಾದವನ್ನು ಒಂದು ಎಡಗೈ ತೋರಿಸುವದು. ಅವನ ಪಾದವಲ್ಲದೆ ಜೀವನಿಗೆ ಬೇರೆ ಗತಿಯಿಲ್ಲ. ಅದನ್ನು ಹೊಂದುವದಕ್ಕೆ ಪ್ರಯತ್ನಪಡಿ ಎಂಬ ಉಪದೇಶವನ್ನು ಹೇಳುವ ರೀತಿಯಲ್ಲಿ ಇದೆ. ಅನುಗ್ರಹವೇ ಈಶ್ವರನ ಎಲ್ಲಾ ಕಾರ್ಯಗಳಲ್ಲಿಯೂ ಮೊದಲಾದುದು. ಜೀವರು ತಮ್ಮ ಸ್ವರೂಪದಲ್ಲಿ ಈಶ್ವರನಂತೆಯೇ ಆದರೆ ಅವರುಗಳ ಶಕ್ತಿಗಳು ಅನಾದಿಯಾದ ಆಣವದಿಂದ ಮರೆಯಾಗಿವೆ. ಈ ಮರೆಯನ್ನು ತೆರೆದು ಅಡಗಿರುವ ಶಕ್ತಿಗಳನ್ನು ಹೊರಪಡಿಸುವುದೇ ಈಶ್ವರನ ಕಾರ್ಯಗಳ ಉದ್ದೇಶ. ಜೀವರುಗಳ ಅಜ್ಞಾನವು ನಮ್ಮನ್ನು ಸುತ್ತಿರುವ ಈ ಭೂತ ಪ್ರಪಂಚವಾದ ಅಶುದ್ಧ ಮಾಯಾಕಾರ್ಯವಾದ ದೇಹಾದಿಕರಣಗಳಿಂದ ಸ್ವಲ್ಪಮಟ್ಟಿಗೆ ಹೋಗಲಾಡಿಸಲಾಗುವುದು. ಈ ಪ್ರಪಂಚದ ಸೃಷ್ಟಿಸ್ಥಿತಿಗಳನ್ನು ಈ ಉದ್ದೇಶದಿಂದಲೇ ಈಶ್ವರನು ಕೈಗೊಳ್ಳುವನು. ಈತನು ವಾದಿ ಸಲಕರಣೆಗಳನ್ನು ಪಡೆದ ಆತ್ಮನು ಕರ್ಮವನ್ನು ಕೂಡಿಸುತ್ತಲೂ, ಕಳೆಯುತ್ತಲೂ ಅನುಭವವನ್ನು ಪಡೆದು ಮರೆಮಾಡುತ್ತಿರುವ ಆಣವದ ಶಕ್ತಿಯಿಂದ ಬಿಡಿಸಿಕೊಳ್ಳುತ್ತಾ ಜೀವನು ಜನ್ಮಾಂತರಗಳನ್ನು ಹೊಂದಿಬರುತ್ತದೆ. ಈ ಅಭಿವೃದ್ಧಿಯು ಒಂದೇ ಸಮನಾಗಿರುವುದಿಲ್ಲ. ಒಂದೇ ರೀತಿಯಲ್ಲಿ ನಡೆಯುವುದಿಲ್ಲ. ಬೇರೆ ಬೇರೆ ಜೀವರು ಬೇರೆ ಬೇರೆ ಕಾಲಬೇಕಾಗಿರುತ್ತದೆ. ಕೆಲವು ಹಿಂದಕ್ಕೂ ಹೋಗಿಬಿಡುತ್ತವೆ. ಏಕೆಂದರೆ ತನ್ನನ್ನು ಪ್ರಪಂಚವೆಂದೇ ತಿಳಿದು ಪ್ರಪಂಚ ವಿಷಯಗಳಲ್ಲಿ ಆಸಕ್ತಿ ಹೆಚ್ಚಿದರೆ ಹೀಗೆ ಆಗುವುದು. ಈ ಜನ್ಮಾಂತರದಲ್ಲಿ ಈ ಜನ್ಮವನ್ನು ಎತ್ತಿ ಎತ್ತಿ ಬರುವುದು ತುಂಬಾ ದುಃಖ. ಹೀಗೆ ಪರಿಣಾಮವನ್ನು ಹೊಂದುತ್ತಿರುವ ಜೀವರಿಗೆ ಆಗಾಗ ವಿಶ್ರಾಂತಿಯು ಬೇಕಾಗಿರುತ್ತದೆ. ಕುಂದುತ್ತಿರುವ ಹಸಿದ ಮಾಯಾಶಕ್ತಿಗಳು ವಿರಾಮ ಹೊಂದಿ ಆಯಾಸ ತೀರಬೇಕಾಗಿರುತ್ತದೆ. ಆದುದರಿಂದ ಸಂಹಾರ ಕಾರ್ಯವು ಒಂದು ಅನುಗ್ರಹ ಕಾರ್ಯವೇ. ಕ್ರೌರ್ಯದಿಂದಾದುದಲ್ಲ. ಜೀವನನ್ನು ಸುಮ್ಮನೆ ಬಿಟ್ಟರೆ ಹೀಗೆ ಹೊಸ ಅನುಭವಗಳನ್ನು ಪಡೆಯುವ ಕಾರ್ಯಗಳಲ್ಲಿ ಪ್ರವರ್ತಿಸಲು ಆಗದೆ ಇರಬಹುದು. ಆಣವು ಜಡವಾದುದರಿಂದ ಅದು ತಾನೇ ಕಾರ್ಯವನ್ನು ಮಾಡಲು ಸಾಧ್ಯವಿಲ್ಲ. ಜೀವರುಗಳ ಸುಖಕ್ಕಾಗಿಯೇ ಅವರುಗಳು ಈ ಲೋಕದಲ್ಲಿ ಅನುಭವ ಹೊಂದಿ ಲೋಕದ ಸುಖವೇ ಆನಂದವೆಂದೂ, ತಮ್ಮ ಕಿಂಚಿತ್ ಜ್ಞಾನವೇ ಪೂರ್ಣ ಜ್ಞಾನವೆಂದೂ ಕೆಲಸ ಮಾಡುವುದಕ್ಕಾಗಿ ಈಶ್ವರನು ತನ್ನ ತಿರೋಧಾನಶಕ್ತಿ ಎನ್ನುವ ಮರೆಮಾಡುವ ಶಕ್ತಿಯಿಂದ ಮಲವನ್ನು ಕಾರ್ಯಪಡಿಸುತ್ತಾನೆ. ಈ ಶಕ್ತಿಗೆ ಔಪಚಾರಿಕವಾಗಿ ಮಲ ಎನ್ನುವ ಹೆಸರೇ ಬರುತ್ತದೆ. ಈ ಮರೆಮಾಡುವ ಕೆಲಸವು ಜೀವರುಗಳ ಒಳ್ಳೆಯದಕ್ಕಾಗಿಯೇ ನಡೆಯುತ್ತದೆ. ಹಲವು ಜನ್ಮಗಳಿಂದ ಉಂಟಾದ ಅನುಭವದಿಂದ ಜೀವನು ಒಳ್ಳೆಯ ಕರ್ಮ ಕೆಟ್ಟ ಕರ್ಮ ಇವೆರಡೂ ನಿಜವಾಗಿ ಉಪಯೋಗವಿಲ್ಲದವು; ಎಂದು ತಿಳಿದು ಇವೆರಡನ್ನೂ ಮಾಡುವುದಕ್ಕೆ ಉದಾಸೀನವಾಗಿ ಬಂದಾಗ ಈ ಮಲವು ಪರಿಪಾಕವಾಗುತ್ತದೆ. ಈಗ ಈಶ್ವರನ ಅನುಗ್ರಹ ಶಕ್ತಿ ಬರುತ್ತದೆ. ಇದಕ್ಕೆ ಶಕ್ತಿನಿಪಾತವೆಂದು ಹೆಸರು. ಜೀವನು ತನ್ನ ಅಲ್ಪ ಕೊರಗುವ ಅರಿವಿನಿಂದ ಅರಿವುದನ್ನು ಬಿಟ್ಟು ಅಶುದ್ಧ ಮಾಯಾಕಾರ್ಯವಾದ ಕಾರಣಗಳಿಂದ ತಿಳಿಯು



CC-0. Jangamwadi Math Collection, Varanasi. An eGangotri Initiative

ವುದನ್ನು ಬಿಟ್ಟು ತನ್ನ ಸ್ವರೂಪವು ಸ್ವಭಾವದಲ್ಲಿಯೇ ತನಗೆ ಸೇರಿದ್ದಾದ ಸರ್ವಜ್ಞತೆಯನ್ನೂ ಹೊಡುತ್ತಾನೆ. ಶಕ್ತಿನಿಪಾತ ತೀವ್ರವಾಗಿಯೋ ಮಂದವಾಗಿಯೋ ಜೀವನ ಪಕ್ವಕ್ಕೂ ಅವನ ಪೂಜೆ ಧ್ಯಾನ ಆದಿ ಕಾರ್ಯಗಳಿಗೂ ತಕ್ಕಂತೆ ಉಂಟಾಗುವದು. ಪೂರ್ಣವಾಗಿ ಶಕ್ತಿನಿಪಾತ ವಾದರೆ ಈಶ್ವರನು ತನ್ನನ್ನೇ ತೋರಿಸಿ, ಆತ್ಮನಿಗೆ ಉಪದೇಶ ಮಾಡುತ್ತಾನೆ. ವಿಜ್ಞಾನಾಕಲ ರಿಗೆ ತಮ್ಮ ಅಂತರ್ಜ್ಯೋತಿಯಾಗಿ ತೋರುತ್ತಾನೆ. ಪ್ರಳಯಾಕಲರಿಗೆ ಒಂದು ದೈವಿಕ ಅಪ್ರಾಕೃತ ರೂಪದಲ್ಲಿ ತೋರುತ್ತಾನೆ. ಸಕಲರಿಗೆ ಅವರ ಹಾಗೆಯೇ ರೂಪಗೊಂಡು ಗುರುವಾಗಿ ತೋರುತ್ತಾನೆ. ನೋಡುವವರಿಂದಲೊ ಮುಟ್ಟುವದರಿಂದಲೊ ಉಪದೇಶದಿಂದಲೊ ಈ ಶುದ್ಧಮಾಡುವ ಕಾರ್ಯ ವನ್ನು ಅಂದರೆ ದೀಕ್ಷೆಯನ್ನು ಮಾಡುತ್ತಾನೆ. ಆ ಜೀವರ ಅಜ್ಞಾನವು ಜ್ಞಾನದ ಅಭಾವದಿಂದ ಆಗಿದ್ದರೆ ಜ್ಞಾನವನ್ನು ಕೊಟ್ಟು ಹೋಗಲಾಡಿಸಬಹುದು. ಆದರೆ ಮಲ ಎಂಬುದು ಒಂದು ಪದಾರ್ಥ ಅದನ್ನು ಮತ್ತೊಂದು ಪದಾರ್ಥದಿಂದಲೇ ಹೋಗಲಾಡಿಸಬೇಕು. ಅದಕ್ಕೋಸ್ಕರ ದೀಕ್ಷೆ ಬೇಕಾಗಿರುವದು. ದೀಕ್ಷೆಕೊಟ್ಟ ಮಾತ್ರಕ್ಕೆ ಗುರುವಿನ ಸಹಾಯ ಮುಗಿಯಿತು ಎಂಬುವದಿಲ್ಲ. ಮುಂದಕ್ಕೂ ಗುರುವಿನ ಸಹಾಯ ಬೇಕಾಗಿದೆ. ಹೀಗೆ ಜ್ಞಾನವು ಪಡೆದ ಆತ್ಮ ತನ್ನನ್ನು ಪಾಶ ವೆಂದಾಗಲೀ ಪಶುವೆಂದಾಗಲೀ ತಿಳಿಯುವದಿಲ್ಲ. ಪಾಶದೊಡನೆ ಸೇರಿ ಅಣುವಾಗಿ ತನ್ನನ್ನು ಅರಿತಿದ್ದ ಆ ನೆಲೆ ಹೋಗಿ ತನ್ನ ನಿಜಸ್ವರೂಪ ಜ್ಞಾನವನ್ನು ಹೊಂದುತ್ತದೆ. ಶಿವತತ್ವವನ್ನು ಅನುಭವಿಸುತ್ತದೆ. ತಿಳಿವುದೆಲ್ಲವೂ ಶಿವನಾಗಿಯೇ ತಿಳಿಯುತ್ತದೆ. ಕೊರತೆಯಿಲ್ಲ. ದುಃಖವಿಲ್ಲ. ಅವುಗಳಿಗೆ ಕಾರಣವಿಲ್ಲದೆ ಇರುವದರಿಂದ ಜ್ಞಾತೃಜ್ಞೇಯವೂ ಆದ ಇಬ್ಬರು ಶಿವನಾದಾಗ ಯಾರು ಯಾರಿಗೆ ದುಃಖವನ್ನು ಕೊಡಲಾಗುವದು. ಇದುವೆ ಮುಕ್ತಿಯು.

ಇದಕ್ಕೆ ದೇಹದಿಂದ ಬಿಡುಗಡೆ ಯಾಗಬೇಕು ಎನ್ನುವ ಅವಶ್ಯಕತೆಯಿಲ್ಲ. ಏಕೆಂದರೆ ಈ ಬದಲಾವಣೆ ಭೌತಿಕವಾದುದಲ್ಲ. ಆತ್ಮೀಕವಾಸನೆಯಿಂದ ಪ್ರಾರಬ್ಧ ಕರ್ಮದಿಂದಲೋ ಶಿವಾನುಭವ ಹೊಂದಿದಮೇಲೂ, ದೇಹದೊಡನೆ ಜೀವ ಕೂಡಿರಬಹುದು. ಆದರೆ ಈ ಶಿವ ಪ್ರಕಾಶವನ್ನು ಹೊಂದಿದ ಆ ಆತ್ಮನು ಮೋಹದಿಂದ ಬಂಧಿಸಲ್ಪಡುವದಿಲ್ಲ.

ಈ ಶಿವತ್ವವನ್ನು ಹೊಂದುವುದು ಶಿವನೊಡನೆ ಸಂಪೂರ್ಣವಾಗಿ ಬೆರೆತು ಹೋಗುವು ದಾಗಿಯೂ ಬೇರೆಬೇರೆಯಾಗಿ ವಸ್ತುತಃ ಇದ್ದರೂ ತನ್ನ ಸ್ವರೂಪವು ಶಿವಸ್ವರೂಪವೇ ಎನ್ನುವ ಅನುಭವವು ಆಗಬಹುದು. ಇದು ಕಾಶ್ಮೀರದ ಶೈವಕ್ಕೂ ಶೈವ ಸಿದ್ಧಾಂತಕ್ಕೂ ಇರುವ ಭೇದ. ಶೈವ ಸಿದ್ಧಾಂತದ ಈ ಅಭಿಪ್ರಾಯವು ಕಾಶ್ಮೀರದಲ್ಲಿಯೂ ಇದ್ದಂತೆ ತೋರುತ್ತದೆ. ಅದ್ವೈತ ಎನ್ನುವುದಕ್ಕೆ ಶೈವ ಸಿದ್ಧಾಂತಿಗಳು ಎರಡು ಪದಾರ್ಥಗಳು ಇಲ್ಲ ಎಂದು ಹೇಳುವುದನ್ನು ಒಪ್ಪಿ ಕೊಳ್ಳದೆ ಎರಡು ಪದಾರ್ಥಗಳೂ ಸ್ವರೂಪದಲ್ಲಿ ಬೇರೆಯಿಲ್ಲ ಎಂದು ಹೇಳುವುದಾಗಿದೆ. ಅವು ಎರಡಲ್ಲ ಎಂದು ಹೇಳುವುದೇ ಅವರ ತಾತ್ಪರ್ಯ. ಅಲ್ಲಿ ಎರಡು ಇಲ್ಲ ಎಂದು ಹೇಳುವುದಿಲ್ಲ. ಈ ಶೈವ ಸಿದ್ಧಾಂತಿಗಳು ಹೇಳುವ ಅದ್ವೈತ ನೆಲೆಯನ್ನು ಕೆಲವು ಉದಾಹರಣೆಗಳಿಂದ ಹೇಳ ಬಹುದು. ಇವು ಜೀವನು ಶಿವನೊಡನೆ ಒಂದಾಗಿ ನೆಲಸಿಯೂ ಬೇರೆಯಾಗಿ ಅರಿತು ಬಡನಾಗಿ ಅನುಭವಿಸುತ್ತಲೂ ಇರುವರು. ಒಂದಾಗಿ ನೆಲಸುವುದಕ್ಕೆ ರಾಗವೂ ಅದರಿಂದ ಉಂಟಾಗುವ ಇಂಚರವೂ ಶಿವನಾದ ಚಿತ್ತು ಅಲ್ಲದೆ ಚಿತ್ತಿನ ಭೇದವಾದ ಜೀವನು ಶಿವನೇ ಅಲ್ಲದೆ ತನಿಯಾಗಿ ನಿಲ್ಲುವುದಿಲ್ಲ ಎನ್ನುವುದಕ್ಕೆ ಉದಾಹರಣೆ.



CC-0. Jangamwadi Math Collection, Varanasi. An eGangotri Initiative

ಸೂರ್ಯಚಂದ್ರರು ಹಾಗೆ ನಿಲ್ಲುವುದು ಇಲ್ಲವಾದರೂ ವಸ್ತುತಃ ಬೇರೆ ಎನ್ನುವುದು ತಿಲ, ತೈಲ ಜೀವನವನ್ನು ಬಿಟ್ಟು ಶಿವನನ್ನು ಬೇರೆಯಾಗಿ ಅರಿಯಲಾಗದು ಎನ್ನುವುದಕ್ಕೆ ಉದಾಹರಣೆ. ಬೆಂಕಿಯೂ, ಕಬ್ಬಿಣವೂ, ನೀರೂ, ಉಪ್ಪೂ, ಆಕಾಶವೂ, ವಾಯುವೂ, ಜೀವನನ್ನೂ, ಶಿವನನ್ನೂ ಬೇರೆಯಾಗಿ ಅರಿಯುವುದಕ್ಕೆ ಉದಾಹರಣೆಗಳು. ಮೊದಲನೆಯ ಉದಾಹರಣೆ ಜೀವನಿಂದ ಬೇರೆಯಾಗಿ ಶಿವನು ನಿಲ್ಲುತ್ತಾನೆ. ಎರಡನೆಯದು ಕನಿಯಾಗಿಯೂ ನಿಲ್ಲುವನು. ಮೂರನೆಯದು ಜೀವ ಯಾವ ಕಾಲದಲ್ಲಿಯೂ ಶಿವನನ್ನು ಬಿಟ್ಟು ಅಗಲಿ ಇರದು ಎನ್ನುವುದಕ್ಕೆ ಉದಾಹರಣೆ. ಉಡನಾಯ್ ಅನುಭವಿಸುವುದಕ್ಕೆ ಒಡಲು ಜೀವನೂ ಈಶ್ವರನು ಜೀವನೊಡನೆ ನಿಂತು ಚಲಿಸುತ್ತಾನೆ ಎಂಬುದಕ್ಕೆ ಉದಾಹರಣೆ. ಯಾವಾಗಲೂ ಬೇರ್ಪಡುವುದಲ್ಲದೆ ಹರಡಿ ನಿಲ್ಲುವುದಕ್ಕೆ ಉದಾಹರಣೆ. ನೀರೂ ಅದರಲ್ಲಿ ತೋರುವ ಬಿಂಬವು ಸೂರ್ಯನ ಪ್ರಕಾಶವು ಸ್ಫಟಿಕವು. ಶಿವನೊಡನೆ ಜೀವನು ಬೆರೆತು ವಿಷಯಗಳನ್ನು ಅರಿಯದೆ ಇರುವುವೆ ಎಂದು ಎನ್ನುವುದಕ್ಕೆ ಉದಾಹರಣೆ. ಹಗಲು ದೀಪವು ಜೀವನು ತದ್ಬೋಧ ಕೆಟ್ಟು ನಿಲ್ಲುವುದಕ್ಕೆ ಉದಾಹರಣೆ. ಹಾಲು ನೀರು ತನ್ನಸುಖ ಅಷ್ಟೂ ಜೀವನಿಗೆ ಆಗುವಂತೆ ಮಾಡಿ ತನ್ನೊಳಗೆ ಅಡಗಿ ನಿಲ್ಲುವಂತೆ ಮಾಡುವುದಕ್ಕೆ ಉದಾಹರಣೆ. ಇದು ಜೀವನು ಚಿತ್ತಾದರೆ ಶಿವನಿಲ್ಲದೆ ಎಂದಿಗೂ ಅರಿಯದು.

ಜಾಗ್ರುದಾವಸ್ಥೆಯು ಕಣ್ಣು ಬೇರೆ ಸ್ಥಳಗಳಲ್ಲಿರುವುದಿಲ್ಲ. ಒಂದೇ ಸ್ಥಳದಲ್ಲಿ ಬೆರೆತು ನಿಲ್ಲುವುವು ಎನ್ನುವುದಕ್ಕೆ ಉದಾಹರಣೆ. ಈ ರೀತಿಯಾಗಿ ಅದ್ವೈತ ನೆಲೆ ಹೇಳಿರುತ್ತದೆ.

ಇದುವರಿವಿಗೂ ಶೈವಧರ್ಮವು ಚರಿತ್ರಕಾಲ ಯಾವಾಗ ಪ್ರಾರಂಭವಾಗುತ್ತದೆಯೋ ಆ ಕಾಲದಿಂದಲೇ ನೆಲಸಿ ಬಂದಿರುವುದೆಂದೂ ತತ್ತ್ವವಿಚಾರವು ಯಾವ ಕಾಲದಲ್ಲಿ ಅವನು ತನ್ನ ಗೀತೆಗಳಲ್ಲೊ, ಮಾತುಗಳಲ್ಲೊ, ತನ್ನ ಕ್ರಿಯೆಗಳಲ್ಲೊ ತೋರಿಸುವುದಕ್ಕೆ ಪ್ರಾರಂಭಿಸಿದನೊ ಆ ಕಾಲದಿಂದಲೇ ಹಲವು ಪ್ರಭೇದಗಳೊಡನೆಯೇ ಕಂಡು ಬರುತ್ತದೆ ಎಂದು ಒಂದು ರೀತಿಯಾಗಿ ಹೇಳಲಾಯಿತು. ಈ ಶೈವ ಧರ್ಮವು ಈಗ ನೆಲಸಿರುವ ಈ ಭರತ ಭೂಮಿಯಲ್ಲಿ ಅಲ್ಲದೆ ಮತ್ತು ಅನೇಕ ಪ್ರಾಂತಗಳಲ್ಲಿ ಹರಡಿತು ಎಂದು ಕಂಡು ಬರುವುದನ್ನು ಸೂಚಿಸಲಾಯಿತು. ಶೈವ ಶಾಸ್ತ್ರಗಳು, ವೇದ ಆಗಮಗಳು ಎಂಬ ಉತ್ಪತ್ತಿ ಸ್ಥಾನದಿಂದ ಬಂದಿರುವುದನ್ನು ವೇದವೇ ಪಶು ಆಗಮವೇ ಅದರ ಹಾಲು ಎಂದು ಹೇಳಿದ ಉದಾಹರಣೆ ಶ್ಲೋಕದಿಂದ ಕಾಣುತ್ತದೆ. ಈ ಶೈವ ಧರ್ಮವಿಕಾಸವು ಕಾಶ್ಮೀರ, ನೇಪಾಳ, ಬಂಗಾಳ ಮುಂತಾದ ಭಾಗಗಳಲ್ಲಿ ಒಟ್ಟಿನಲ್ಲಿ ಉತ್ತರ ಹಿಂದುಸ್ಥಾನದಲ್ಲಿ ನಡೆದು ಬಂದಿರುವ ರೀತಿಯನ್ನು ಅನೇಕ ವಿದ್ವಾಂಸರು ವಿಸ್ತಾರವಾಗಿ ವಿಚಕ್ಷಣೆ ಮಾಡಿ ಇರುವುದರಿಂದ ಅದನ್ನು ವಿವರಿಸದೆ ದಕ್ಷಿಣ ದೇಶದಲ್ಲಿ ತಮಿಳಗಂ ಎನ್ನುವ ತಮಿಳ್ ನಾಡಿನಲ್ಲಿ ಹೇಗೆ ಹೊರಳಿ ತನ್ನ ಪರಿಮಳವನ್ನು ಬೀರುತ್ತಾ ಸೊಬಗನ್ನು ತೋರುತ್ತಾ ಬಂದಿದೆ ಎಂಬುದನ್ನು ಸಂಕ್ಷೇಪವಾಗಿ ಹೇಳಿದೆ. ಈಗ ಶೈವ ಧರ್ಮವು ಯಾವ ರೀತಿಯಲ್ಲಿ ಮಾನವನ ಬಯಕೆಯನ್ನು ತೀರಿಸುತ್ತದೆ ಎನ್ನುವ ಅದರ ಫಲದಾಯಕ ಸೂಚನೆಯನ್ನು ಕುರಿತು ಒಂದೆರಡು ಮಾತು ಹೇಳಿ'ಈ ಅಲ್ಪ ಪ್ರಬಂಧವನ್ನು ಮುಗಿಸುವುದು ಯುಕ್ತ ಮನುಷ್ಯ ಸ್ವಭಾವವು. ಕರ್ಮ, ಭಕ್ತಿ, ಜ್ಞಾನ ಎಂದು ಮೂರು ಬಾಹುಗಳುಳ್ಳ ಒಂದು ಪ್ರದೇಶವಾಗಿದೆ. ಇದರಲ್ಲಿ ಇವು ಮೂರಕ್ಕೂ ಅವನ ಕಲೆ ಎದೆ, ಕೈ ಚಿನ್ಹೆಗಳಾಗಿವೆ ಎಂದುಕೊಳ್ಳಬಹುದು. ಈ ಮೂರು ವಿಧವಾದ ಸ್ವಭಾವದಿಂದ ಅವನಲ್ಲಿ ಉಂಟಾಗುವ ಎಲ್ಲಾ ಬಯಕೆಗಳನ್ನೂ ಸ್ಫೂರ್ತಿಗೊಳಿಸಿ,



CC-0. Jangamwadi Math Collection, Varanasi. An eGangotri Initiative

ತೃಪ್ತಿಗೊಳಿಸಿ ಅವನನ್ನು ಪರಿಪೂರ್ಣನನ್ನಾಗಿ ಮಾಡುವ ಮಹತ್ತಾದ ಶಕ್ತಿ ಈ ಶೈವ ಧರ್ಮದಲ್ಲಿ ನೆಲೆಗೊಂಡಿರುತ್ತದೆ. ಪಾಮರನಿಗೂ, ಪಂಡಿತನಿಗೂ, ಎಳೆಯವನಿಗೂ, ಮುದಿಯವನಿಗೂ, ಬಡವನಿಗೂ, ಬಲ್ಲಿದನಿಗೂ, ತಾಮಸನಿಗೂ, ರಾಜಸನಿಗೂ, ಸಾತ್ವಿಕನಿಗೂ, ಕರ್ಮವೀರನಿಗೂ, ಮೌನವೀರನಿಗೂ, ಹೆಂಗಸಿಗೂ, ಗಂಡಸಿಗೂ ಹೀಗೆ ಎಲ್ಲರಿಗೂ ನಂಬಿಕೆಯನ್ನು ಕೊಟ್ಟು ಸನ್ಮಾರ್ಗದಲ್ಲಿ ನಡೆಯಿಸುವ ಸತ್ವವು ಶೈವ ಧರ್ಮದಲ್ಲಿ ಉಂಟು. ಬರೀ ಚರ್ಚೆಗೆ, ಬರೀ ವಾದಕ್ಕೆ, ಬರೀ ನುಡಿಗೆ, ಬರೀ ತರ್ಕಕ್ಕೆ, ಬರೀ ಯೋಚನೆಗೆ, ಬರೀ ಹೊರಂಗಣ ಅಲಂಕಾರಕ್ಕೆ, ಆಡಂಬರಕ್ಕೆ, ದರ್ಪಕ್ಕೆ ಅಲ್ಲದೆ ಜೀವನದ ದಿನಚರಿ ನಡೆಗೆ ಈ ಶೈವ ಧರ್ಮವು ಮಾರ್ಗದರ್ಶಿಯಾಗಿಯೂ, ಬೆಳಕಾಗಿಯೂ, ಶಕ್ತಿಯಾಗಿಯೂ, ಕೈ ಹಿಡಿದು ನಡೆಯಿಸುವ ಧರ್ಮದೇವತೆಯಾಗಿರುತ್ತದೆ. ಈ ಶೈವ ಧರ್ಮವನ್ನು ಅರಿಯುವುದಕ್ಕೆ ಸಾಮಾನ್ಯ ಮಾನವನು ವೇದಕ್ಕೂ ಹೋಗಬೇಡ, ಆಗಮದಲ್ಲೇ ಅರಿಯಬೇಡ. ಶಾಸ್ತ್ರಹೋರಾಟವೆಂಬ ಮರುಭೂಮಿಯಲ್ಲಿ ಆನಂದವೆಂಬ ನೀರನ್ನು ಹುಡುಕಿಕೊಂಡು ವೃಥಾ ಮೋಸ ಹೋಗಬೇಡ.

ಶಿವಶರಣರ ಜೀವನವೆಂಬ ತಣ್ಣಿತಾದ, ತಿಳ್ಳದಾದ, ಪರಿಶುದ್ಧವಾದ ಜೀವತೀರ್ಥವನ್ನು ಆಚಮಾನ ಮಾಡುವುದು ಸಾಕು. ಅವರುಗಳ ಜೀವನದಿಂದ ನಾವು ಅರಿಯುವುದು ಯಾವನೋ, ಯಾವಳೋ, ಯಾವಕುಲದಲ್ಲಿ ಹುಟ್ಟಿದರೋ, ಯಾವ ಆಚಾರವನ್ನು ಆಚರಿಸಿದರೋ, ಯಾವ ಆಶ್ರಮದಲ್ಲಿ ನೆಲಸಿದರೋ, ಯಾವ ವೃತ್ತಿಯಲ್ಲಿ ವರ್ತಿಸಿದರೋ, ಯಾವ ಮಾರ್ಗದಲ್ಲಿ ನಡೆದರೋ ಈಶ್ವರನನ್ನೂ ಅವನ ಸೃಷ್ಟಿಯನ್ನು ಮರೆಯದೆ ಪ್ರೀತಿಯಿಂದ ಸತ್ಯದಿಂದ ತನ್ನ ಕರ್ತವ್ಯವನ್ನು ಮಾಡಿಕೊಂಡು ಬರುವುದೇ ಎರಡು ಅಲ್ಲದಂಥ ನಿರತಿಶಯವಾದ ಆನಂದವನ್ನು ಪಡೆಯುವುದಕ್ಕೆ ಮಾರ್ಗ. ಈ ವಿಶ್ವವನ್ನೆಲ್ಲಾ ಒಳಗೊಂಡು ವಿಶ್ವದಲ್ಲಿರುವ ಹಲವು ತೆರನಾದ ಜೀವರಿಗೆ ತಕ್ಕಹಾಗೆ ಒಪ್ಪುವ ಹಾಗೆ ಮಾರ್ಗದರ್ಶಿನಿಯಾಗಿರುವುದು ಶೈವ ಧರ್ಮ ಪ್ರೀತಿ ಮಾರ್ಗವೇ ಶೈವಧರ್ಮವೆನ್ನುವುದು. ಎಲುಬೇ ಸಮಿತ್ತಾಗಿ ಮಾಂಸವನ್ನು ಕೊಯ್ದು ಹೆನ್ನಿನಂತೆ ಬೆಂಕಿಯಲ್ಲಿ ಕರಿದರೂ ಪ್ರೀತಿಯೊಡಗೂಡಿ ಮನಸ್ಸು ಕರಗದವರಿಗೆ ಈಶ್ವರನನ್ನು ಸೇರಲಾಗದು. ಅರಣಿಯಲ್ಲಿರುವ ಕಿಚ್ಚಿನಂತೆ ಹಾಲಿನಲ್ಲಿ ತುಪ್ಪದೊಳ್ ಮರೆಯಾಗಿದ್ದು ನಿಂತಿಹನು ಮಹಾಮಣಿ. ಜ್ಯೋತಿಯನು ಪ್ರೀತಿಯೆಂಬ ಕಡಗೋಲಿಟ್ಟು, ಜ್ಞಾನವೆಂಬ ಹಗ್ಗದಿಂದ ಕರಗುವಂತೆ ಕಡೆದರೆ ಮುಂದೆ ಬಂದು ನಿಲ್ಲುವನು.

ಪ್ರೀತಿಯೂ ಶಿವನೂ ಎರಡೆಂಬರ್ ಅರಿನಿಲ್ಲದವರು. ಪ್ರೀತಿಯೇ ಶಿವನಾಗುವುದು ಯಾರು ಅರಿಯಲಿಲ್ಲ. ಪ್ರೀತಿಯೇ ಶಿವನಾಗುವುದು. ಎಲ್ಲರೂ ಅರಿತ ಮೇಲೆ ಪ್ರೀತಿಯೇ ಶಿವನಾಗಿ ನೆಲೆತು ನಿಲ್ಲುವದು.

ಓಂ ಶಾಂತಂ ಶಿವಂ ಅದ್ವೈತಂ

ಓಂ ಶಾಂತಿಃ ಶಾಂತಿಃ ಶಾಂತಿಃ



CC-0. Jangamwadi Math Collection, Varanasi. An eGangotri Initiative



# ಅನುಭವ ಮಂಟಪ

೧

ವೀರಶೈವ ಮತೋದ್ಧಾರಕರಾದ ಶ್ರೀ ಬಸವಣ್ಣನವರು ಅನೇಕ ಪವಾಡಗಳನ್ನು ಮೆರೆಯಿಸಿ ಕಾರಣ ಪುರುಷರೆಂದು ಹೆಸರಾದರು. ತಮ್ಮ ಶುಭ್ರವಾದ ಜೀವನದಿಂದ ಎಲ್ಲ ಧರ್ಮಗಳ ಬುನಾದಿಯಾದ ಭಕ್ತಿ, ಜ್ಞಾನ, ವೈರಾಗ್ಯಗಳನ್ನು ತಮ್ಮ ಜೀವನದಲ್ಲಿಯೇ ಸಮನ್ವಯ ಮಾಡಿ ತೋರಿದರು. ತತ್ತ್ವಗಳ ಹೆಸರಿನ ಹೋರಾಟದಲ್ಲಿ ಮೈಮರೆತಿದ್ದ 'ಮತ' ಗಳಿಗೆ ಈ ಶಾಂತಿ ಮಂತ್ರವು ನೂತನವೂ ಪವಾಡಮಯವೂ ಆಗಿ ಕಂಡಿರಬೇಕು. ವೀರಶೈವ ಸಿದ್ಧಾಂತದಲ್ಲಿ ಅಡಗಿದ್ದ ಭಕ್ತಿ, ಜ್ಞಾನ, ವೈರಾಗ್ಯಗಳ ತ್ರಿವೇಣಿ ಸಂಗಮಕ್ಕೆ ಒಂದು ಶಾಶ್ವತವಾದ ನಿಲವನ್ನು ಕೊಡಲು ಬಸವಣ್ಣನವರು ನಿಶ್ಚಯಿಸಿದರು. ಬಸವಣ್ಣನವರು ಸಾಧಿಸಿದ ಪವಾಡ ಗಳಲ್ಲಿ ಅತ್ಯಂತ ಮಹತ್ತ್ವವಾದುದೆಂದರೆ ಇದೇ.

'ದೇವನೊಬ್ಬ ನಾಮ ಹಲವು' ಎಂಬ ಸೂಕ್ಷ್ಮ ಆಧ್ಯಾತ್ಮಿಕ ತತ್ತ್ವವನ್ನು ಮನಗಂಡಿದ್ದ ಬಸವಣ್ಣನವರು ಆ ದೇವರನ್ನು ಸಾಧಿಸುವ ಮಾರ್ಗಗಳೂ ಹಲವೆಂಬುದನ್ನು ತಿಳಿದಿದ್ದರು. ಸಹಜವಾಗಿ ತಮ್ಮ ಒಲವು ಭಕ್ತಿ ಮಾರ್ಗವನ್ನು ಅವಲಂಬಿಸಿತೆಂದು ಎಲ್ಲರೂ ಆ ಮಾರ್ಗವನ್ನೇ ಅನುಸರಿಸಬೇಕೆಂಬ ಛಲ ಅವರಿಗಿರಲಿಲ್ಲ. ವ್ಯಕ್ತಿ ತನ್ನ ಸಂಸ್ಕಾರ ಹಾಗೂ ಮನೋಧರ್ಮವನ್ನು ಅವಲಂಬಿಸಿ ಪ್ರಗತಿ ಪಥದಲ್ಲಿ ಅಡಿಯಿಡಬೇಕೆಂದು ಬಯಸಿದರು. ಈ ಸಾಧಕ ಸ್ಥಿತಿಯಲ್ಲಿ ತಮ್ಮ ಮಾರ್ಗದಿಂದ ಭಿನ್ನವಾದರೂ ಪ್ರಗತಿಯ ಜಾಡನ್ನು ಬಿಡದಿರುವ ಪ್ರತಿಯೊಬ್ಬನೂ ಸಮಾನ ಧರ್ಮಿಯೆಂಬುದನ್ನು ಒಪ್ಪಿಕೊಳ್ಳುವ ಔದಾರ್ಯವನ್ನು ತೋರಿದರು. ಇಂತಹ ಸಮಾನ ಧರ್ಮಿಗಳು ಒಂದು ಕಡೆ ಕಲೆತು, ವಿಚಾರವಿನಿಮಯ ಮಾಡಿ, ವಾದ ಮಥನಕ್ಕೆ ತಮ್ಮ ತತ್ತ್ವವನ್ನು ನಿವೇದಿಸಿ ನೋಡಿ ಸತ್ಯಾನ್ವೇಷಣೆಯನ್ನು ಮಾಡಬೇಕಾಗಿದ್ದುದರ ಅವಶ್ಯಕತೆ ಬಹಳವಾಗಿತ್ತು.

ವೀರಶೈವ ಧರ್ಮ ಕೇವಲ ವ್ಯಕ್ತಿ ವೈಶಿಷ್ಟ್ಯವನ್ನು ಸಾರುವುದಕ್ಕಾಗಲಿ, ವ್ಯಕ್ತಿಯ ವಿಮುಕ್ತಿಯನ್ನು ಸಾಧಿಸುವುದಕ್ಕಾಗಲಿ ಜನ್ಮ ತಾಳಲಿಲ್ಲ. ಪಾಂಡಿತ್ಯದ ಕೆಚ್ಚಿನಿಂದ ಒಂದು ಗಹನ ತತ್ತ್ವವನ್ನು ಪ್ರತಿಪಾದಿಸಿ ಜನತೆಯನ್ನು ದಂಗುಗೊಳಿಸುವುದಕ್ಕೂ ಪ್ರಯತ್ನಿಸಲಿಲ್ಲ. ಬಸವಣ್ಣನವರೇ ಆದಿಯಾಗಿ ವೀರಶೈವ ಧರ್ಮ ಪ್ರತಿಪಾದಕರು ಜನತೆಯಿಂದ ಬಹಳ ಎತ್ತರದಲ್ಲಿ



CC-0. Jangamwadi Math Collection, Varanasi. An eGangotri Initiative

ನಿಂತು ಜನಸಾಮಾನ್ಯರನ್ನು ಕಡೆಗಣ್ಣಿನಿಂದ ಕಾಣುವ 'ಮಹಾನುಭಾವತ್ವ'ವನ್ನೂ ಮೆರೆಸಲಿಲ್ಲ. ತಮ್ಮ ಆಧ್ಯಾತ್ಮಿಕ ಸಾಧನೆಯಿಂದ ಯಾವ ಆನಂದ, ಶಾಂತಿ, ನೈರ್ಮಲ್ಯಗಳನ್ನು ದೊರಕಿಸಿಕೊಂಡಿದ್ದರೋ ಅದರ ಲಾಭ ಎಲ್ಲರಿಗೂ ದೊರೆಯಬೇಕೆಂದು ಬಯಸಿದರು. ತಮ್ಮ ಜೀವನ ಹಸನಾದಂತೆ ನಾಡವರೆಲ್ಲರ ಜೀವನವೂ ಹಸನಾಗಬೇಕು; ಲೋಕವೆಲ್ಲಾ ಒಂದು ಧರ್ಮದ ಶ್ವೇತಚ್ಛತ್ರದ ಕೆಳಗೆ ಕೆಳೆಯರಂತೆ, ಸೋದರರಂತೆ ಬಾಳಬೇಕೆಂಬುದು ಅವರ ಹಿರಿಯಾಸೆಯಾಗಿತ್ತು.

ವಿಶ್ವ ಧರ್ಮವನ್ನು ಗುರಿಯನ್ನಾಗಿಟ್ಟುಕೊಂಡ ಶಿವಶರಣರು ಇಂದಿನ-ಇಲ್ಲಿನ ಬಾಳುವೆಯನ್ನು ಮರೆತು ಸದಾ ಪರಲೋಕದ ಚಿಂತೆಯಲ್ಲಿರುವುದು ನಿರರ್ಥಕವಾದುದೆಂದು ಬಗೆದರು. ಇಹ-ಪರಲೋಕಗಳನ್ನು ಎರಡು ಜಗತ್ತುಗಳನ್ನಾಗಿ ವಿಭಾಗಿಸದೆ ಒಂದು ಮತ್ತೊಂದರ ಪೂರಕವೆಂದು ಭಾವಿಸಿದರು. ಮುಂದಿನ ಲೋಕಕ್ಕೆ ಹೋಗಿ ಬಾಳುವೆ ಮಾಡುವುದೆಂದರೆ ಈ ಲೋಕದ ಜೀವನವನ್ನು ಮುಂದುವರಿಸಿದಂತಲ್ಲದೆ ಬೇರೆಯಲ್ಲವೆಂಬುದನ್ನು ಸಾರಿದರು. ಇಹಲೋಕದ ಕುಂದು ಕೊರತೆಗಳನ್ನೂ ಅಪೂರ್ಣವಾದ ಆಶೆಗಳನ್ನೂ ಪೂರೈಸುವುದಕ್ಕೇ ಮುಂದಿನ ಲೋಕವೊಂದಿದೆ ಎಂದು ಭಾವಿಸುವ ಮಾಯಾ ನಿರಸನವನ್ನು ಮಾಡಲೆತ್ನಿಸಿದರು. ಎಲ್ಲದಕ್ಕೂ ಕೈಲಾಸ ಕೈಲಾಸವೆಂದು ಕೈ ತೋರಿಸುವವರಿಗೆ—

> "ಕೈಲಾಸ ಕೈಲಾಸವೆಂದು' ಬಡಿದಾಡುವ ಅಣ್ಣಗಳಿರಾ, ಕೇಳಿರಯ್ಯ ಕೈಲಾಸವೆಂಬುದೊಂದು ಭೂಮಿಯೊಳಿರುವ ಹಾಳು ಬೆಟ್ಟ. ಅಲ್ಲಿರುವ ಮುನಿಗಳೆಲ್ಲರು ಜೀವಗಳ್ಳರು. ಅಲ್ಲಿರುವ ಚಂದ್ರಶೇಖರನು ಬಹು ಎಡ್ಡ. ಇದರಾಡಂಬರವೇಕಯ್ಯ ? ಎಮ್ಮ ಪುರಾತನರಿಗೆ ಸದಾಚಾರದಿಂದ ವರ್ತಿಸಿ,ಲಿಂಗಾಂಗ ಸಮರಸವ ತಿಳಿದು,ನಿಮ್ಮ ಪಾದಪದ್ಮದೊಳು ಬಯಲಾದ ಪದವಿಯೇ ಕೈಲಾಸವಯ್ಯ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ"

ಎಂದು ವಿವೇಕ ಹೇಳಿದರು. ಪ್ರಗತಿಪಥಗಾಮಿಯಾಗುವ ವ್ಯಕ್ತಿ ನನಗೆ ಶಿವಸಾಯುಜ್ಯ ದೊರೆಯುವುದೇ ? – ದೇವಲೋಕದ ಸುಧೆ, ಅಪ್ಸರೆಯರು ಸಿಕ್ಕುವರೇ ? ಎಂದು ಬಯಸಕೂಡದು. ಅವನ ಭಕ್ತಿ ನಿರ್ವ್ಯಾಜವಾಗಿರಬೇಕು, ಕರ್ಮ ನಿಷ್ಕಾಮಪೂರಿತವಾಗಿರಬೇಕು, ಜ್ಞಾನ ಸಾಂತಃಕರಣದ್ದಾಗಿರಬೇಕು. ಇದಕ್ಕೆ ಶರಣರ ಸಂಗ, ಶರಣರ ಮಹೋನ್ನತ ಜೀವನದ ಮೇಲ್ಪಂಕ್ತಿಯ ವಶ್ಯಕವೆಂದರಿತರು.

ವೀರಶೈವ ಧರ್ಮದ ಉನ್ನತ ತತ್ತ್ವಗಳಿಗೆ ಸಾರ್ವತ್ರಿಕ ಸ್ವರೂಪ ಕೊಡುವುದಕ್ಕೆ ಒಂದು "ಅನುಭವ ಮಂಟಪ" ವನ್ನು ಸ್ಥಾಪಿಸಿ ಅದನ್ನು ಆಧ್ಯಾತ್ಮಿಕ ಪರಮಹಂಸಗಳ ತಿಳಿಗೊಳವನ್ನಾಗಿ ಮಾಡಬೇಕೆಂದು ನಿಶ್ಚಯಿಸಿದರು. ತಮ್ಮ ಮಂಟಪವು ಶಿವಜ್ಞಾನದ ಒಂದು ವಿಶ್ವವಿದ್ಯಾನಿಲಯವಾಗಬೇಕೆಂಬುದೇ ಬಸವಣ್ಣನವರ ಹೆಬ್ಬಯಕೆಯಾಗಿತ್ತು.

೨

ವೀರಶೈವ ಧರ್ಮ ಸಜೀವ ಧರ್ಮವಾಗುವುದಕ್ಕೆ ಅದರ ಪ್ರತ್ಯೇಕ ರೂಪವೇ ಮೂಲ ಕಾರಣವೆನ್ನಬಹುದು. ಆತ್ಮನ ಕಲ್ಯಾಣಯಾತ್ರೆಗೆ ಆರು ಹಂತಗಳನ್ನೇರ್ಪಡಿಸಿದ ಶಿವಶರಣರು ಸಾಧಕನಿಗೆ ದೊಡ್ಡ ಪ್ರವೇಶ ಪರೀಕ್ಷೆಯನ್ನೇರ್ಪಡಿಸಿದರು. ಸಾಧಕನು ವಸ್ತುವಿನೊಂದಿಗೆ ತದೇಕ



CC-0. Jangamwadi Math Collection, Varanasi. An eGangotri Initiative

ಚಿತ್ತನಾಗಿ ಅದರ ಜೀವ ತಂತಿಗೆ ತನ್ನ ಜೀವ ತಂತಿಯನ್ನು ಶೃತಿಯಾಗಿ ಹಚ್ಚುತ್ತಾನೆಯೇ? ಇಲ್ಲ ಹೊರಗೇ ನಿಂತು ಆಗಂತುಕ ಪ್ರವೃತ್ತಿಯನ್ನು ಅವಲಂಬಿಸುತ್ತಾನೆಯೇ? ಎಂಬುದನ್ನು ಮೊದಲು ಪೃಥಪಡಿಸಿಕೊಳ್ಳಬೇಕಾಯಿತು. ಅನುಭಾವದ ಬೆಲೆಯನ್ನು ವಿವರಿಸುತ್ತಾ ಬಸವಣ್ಣನವರು —

> ಅನುಭಾವವಿಲ್ಲದ ಭಕ್ತಿ ಅರಿವಿಂಗೆ ಬಾರದು. ಅನುಭಾವವಿಲ್ಲದ ಸಂಗವು ಸಮರಸಕ್ಕೆ ನಿಲುಕದು. ಅನುಭಾವವಿಲ್ಲದ ಪ್ರಸಾದ ಪರಿಣಾಮವ ಕೊಡದು. ಅನುಭಾವವಿಲ್ಲದೆ ಏನೇನೂ ಅರಿಯ ಬಾರದು. ತನ್ನಲ್ಲಿ ಸನ್ನಿಹಿತ ಉಳ್ಳೊಡೆ ಶಿವಶರಣರ ಸಂಗವೇತಕ್ಕೆನಲುಂಟೇ ? ಕೂಡಲ ಸಂಗಮ ದೇವಯ್ಯ ನಿಮ್ಮ ಅನುಭಾವ ಮಾತಿನ ಮಥನವೆಂದು ನುಡಿಯಬಹುದೇ ಪ್ರಭುವೇ ?

ಎಂದು ಹೇಳಿದ್ದಾರೆ. ಅಲ್ಲಮ ಪ್ರಭುಗಳು —

> "ಅನುಭಾವದಿಂದ ಹುಟ್ಟಿತ್ತು ಲಿಂಗ. ಅನುಭಾವದಿಂದ ಹುಟ್ಟಿತ್ತು ಜಂಗಮ. ಅನುಭಾವದಿಂದ ಹುಟ್ಟಿತ್ತು ಪ್ರಸಾದ. ಅನುಭಾವದನುವಿನಲ್ಲಿ ಗುಹೇಶ್ವರಾ ನಿಮ್ಮ ಶರಣ ಅನುಪಮ ಸುಖಿ"

ಎಂದು ಹೇಳಿದ್ದಾರೆ. ಅನುಭಾವದ ಪ್ರಭುಶಕ್ತಿಯನ್ನು ವರ್ಣಿಸುತ್ತಾ ಚೆನ್ನಬಸವಣ್ಣನವರು —

> "ಅರುಹಿನ ತೃಪ್ತಿಗೆ ಅನುಭಾವದಾಶ್ರಯ, ಲಿಂಗದ ಅನುಭಾವದಿಂದ ನಿಮ್ಮ ಕಂಡೆನು, ನಿಮ್ಮ ಕಂಡೆನ್ನ ಮರೆದೆ ಕಾಣಾ ಪ್ರಭುವೇ ಕೂಡಲ ಚೆನ್ನಸಂಗಮದೇವಾ"

ಎಂದು ಹೇಳುತ್ತಾ ಅನುಭಾವವಿಲ್ಲದ ಗೋಷ್ಠಿಯ ಪರಿಣಾಮವನ್ನು ಚಿತ್ರವತ್ತಾಗಿ ವರ್ಣಿಸುತ್ತಾರೆ.

> "ನಾನೊಂದ ನುಡಿದರೆ ತಾವೊಂದ ನುಡಿವರು. ತಾವೊಂದ ನುಡಿದರೆ ನಾನೊಂದ ನುಡಿವೆನು. ಇದುಕಾರಣ ಅವರಿಗೆ ನಮಗೆ ಮೇಳವಿಲ್ಲ. ಮೇಳವಿಲ್ಲದ ಬಳಿಕ ಅನುಭವಗೋಷ್ಠಿ ಇಲ್ಲ. ಅನುಭವಗೋಷ್ಠಿ ಇಲ್ಲದ ಬಳಿಕ ಗುಹೇಶ್ವರನು ಇಲ್ಲಿಲ್ಲ ಕೇಳಾ ಚೆನ್ನಬಸವ"

ಅನುಭಾವಕ್ಕೆ ವೇದ್ಯವಾಗುವ ಜ್ಞಾನ ಭಕ್ತಿಗಳೇ ಚಿರಸ್ಥಾಯಿಯಾಗಿ ಉಳಿಯತಕ್ಕವು. ಹೃದಯ ಮಂದಿರದಲ್ಲಿ ಅದು ತನ್ನ ಮಹತ್ತ್ವವನ್ನು ತೋರದೆ ಇರುವುದಿಲ್ಲ. ಅನುಭಾವದ ಕಸಿಗೆ ಸಿಕ್ಕಿದ ಮನುಷ್ಯ ಹಣ್ಣಾಗುತ್ತಾನೆ, ಅವನ ಜೀವ ಉಚ್ಚವಾಗುತ್ತದೆ, ಅವನ ಆಚಾರ, ವಿಚಾರ ಗಳೆಲ್ಲವೂ ಪವಿತ್ರವಾಗುತ್ತವೆ. ತಮ್ಮ ಮಂಟಪವು ಇದನ್ನು ಸಾಧಿಸಬೇಕೆಂದು ಬಸವಣ್ಣನವರು ಬಯಸಿ ಮಂಟಪಕ್ಕೆ 'ಅನುಭವ ಮಂಟಪ'ವೆಂದು ಹೆಸರಿಟ್ಟರು.

೩

ಅನುಭವ ಮಂಟಪವು ಯಾವ ಆಕಾರವನ್ನು ತೆಗೆದುಕೊಂಡಿತು. ಅದರ ಪ್ರಧಾನ ಪೀಠವಾದ ಶೂನ್ಯ ಸಿಂಹಾಸನವನ್ನು ಬಸವಣ್ಣನವರು ಯಾವ ರೀತಿ ನಿರ್ಮಿಸಿದರೆಂಬುದನ್ನು ಚಾಮರಸಾದಿ ಕವಿಗಳು ಮನೋಹರವಾಗಿ ವರ್ಣಿಸಿದ್ದಾರೆ. ನೀಲಾಂಬಿಕೆಯ ಮಾತಿನಲ್ಲಿ ಹೇಳ ಬೇಕಾದರೆ—

> "ಅಷ್ಟದಳ ಕಮಲದ ಹೂಗಲ್ಲವಿಡಿದು ಶೂನ್ಯಸಿಂಹಾಸನಕೆ ಧವಳಾಲಯವೆತ್ತಿತ್ತು। ಚಂದ್ರ ಕಾಂತದ ಶಿಲೆಯಲ್ಲಿ ಪಶ್ಚಿಮ ದ್ವಾರಮಂ ತೆಗೆದು ನೋಡುವರೆ ವಿಪರೀತ। ಏಕೋಭಾವವೆಂಬು ದೊಂದು ಕಂಭ ! ಅದಕ್ಕೆ ಅನೇಕ ಚಿತ್ರಂಗಳಡಗಿದ ಪ್ರಭೆಯೊಳಗೆ ಬ್ರಹ್ಮರಂಧ್ರವೆಂಬ ಮಸ್ತಕದ ಮೇಲೆ ಪವಳಹಾರದ ಪಂಜರಮಂ ಕಟ್ಟಿ, ಪಂಚ ಮೌಕ್ತಿಕದ ಮಾಲೆಯ ನಿಳಿಯಬಿಟ್ಟು, ಮಲಕಂ ಮಲಕಿನ ನಡುವೆ ಕಟ್ಟಿದುವು ನವರತ್ನದ ಗೊಂಡೆಯಂಗಳು। ಕಾಳಿಕೆಯ ಕಪ್ಪಡವದಕೆ ಮೇಲು



CC-0. Jangamwadi Math Collection, Varanasi. An eGangotri Initiative

ಹೊದಕೆ! ಉಲುಹಿನರಳೆಲೆಯ ಬಳಸುದೋರಣವ ಕಟ್ಟಿ, ದಶವಾಯುಗಳನೊಂದು ಮಾಡಿ, ಲಿಂಗ ಸುಖವಾಯುವ ಸಂತೈಸಿ ಆಲವಟ್ಟವಂ ಮಾಡಿ, ಲಂಬಿಸಿದ ಮಂದಾನಿಲನಂಮಲಗಂ ಮಾಡಿ, ಹರುಷವನೀವ ವಸಂತನ ಚಾಕವಟ್ಟಗೆಯ ಆಸನವಂ ಮಾಡಿ, ನವನಾಳ ಸುನಾಳದೊಳು ಮೊರೆವ ಶಬ್ದಮಂ ಶುಕಪಿಕ ಭ್ರಮರಾಮೋದಮಂ ಮಾಡಿ, ಪರಮ ಶಾಂತಿಯೆಂಬ ಶೈತ್ಯಾಕಾರ ಸೋಂಕಿನ ಚೂತ ಫಲಂಗಳಂ ಹಾಸಿ, ಉತ್ತರ ದ್ವಾರವೆಂಬ ನುಸುಳು ಗಂಡಿಯಂ ರಚಿಸಿ, ಪೂರ್ವ ಯೋಗಂಗ ಳೆಂಬ ಸೋಪಾನಮಂ ಮಾಡಿ, ಪಶ್ಚಿಮ ದ್ವಾರವೆಂಬ ನಿಜದ್ವಾರಮಂ ಮಾಡಿ, ಸಪ್ತವ್ಯಸನ ಪಂಚೇಂದ್ರಿಯಂಗಳೆಂಬ ಗವಾಕ್ಷಯನಿಕ್ಕಿ, ಆಶೆಯಾಮಿಷಮಂ ಕೆಡಿಸಿ, ಊರ್ಧ್ವ ಚಕ್ರನೆಂಬ ಮೇಲುಪ್ಪರಿಗೆಯಂ ಮಾಡಿ, ಚಂದ್ರ ಸೂರ್ಯರೆಂಬ ದೀಪಗಳಂ ಬೆಳಗಿ, ಶಿವೋಹವೆಂಬ ಶಿಖರಿಯ ಮೇಲೆ ಮಹಾಜ್ಞಾನ ಪ್ರಕಾಶವೆಂಬ ಹೊನ್ನ ಕಳಶವ ಸಿಂಗಾರವಂ ಮಾಡಿ, ನಿಃಶೂನ್ಯ ನಿರಾಳವೆಂಬ ಶೂನ್ಯಸಿಂಹಾಸನಮಂ ಮಾಡಿದ ಬಸವ ಪ್ರಿಯ ಕೂಡಲ ಚೆನ್ನ ಸಂಗನಲ್ಲಿ ಎನ್ನ ಪರಮಗುರು ಸಂಗನ ಬಸವಣ್ಣ "

ಕನಕ, ಮಕರತ ಮೊದಲಾದ ಮಣಿಗಳಿಂದ ಮಿನುಮಿನುಗುವಂತೆ ಪೀಠವನ್ನು ರಚಿಸಿ, ಇಂದುಕಾಂತದ ಶಿಲೆಯಿಂದ ಸಪ್ತಸೋಪಾನಗಳನ್ನು ನಿರ್ಮಿಸಿ, ಹೊರವಳಯದಲ್ಲಿ ಒಂಬತ್ತು ಬಾಗಿಲು, ಮಧ್ಯದಲ್ಲಿ ನಾಲ್ಕು ಬಾಗಿಲು, ಗರ್ಭವಳಯದಲ್ಲಿ ಎರಡು ಬಾಗಿಲುಗಳನ್ನು ರಚಿಸಿ ಶಿಖರದಲ್ಲಿ 'ಅರಿವಿನಂಬರ ಪೀಠವನ್ನು' ಏರ್ಪಡಿಸಿದರು. ಪೀಠವು ಎಲ್ಲ ವಿಧದಲ್ಲಿಯೂ ವೀರಶೈವಧರ್ಮದ ಪ್ರತೀಕವಾಗಿತ್ತೆಂದು ಹೇಳುವುದಕ್ಕೆ ಈ ವರ್ಣನೆಯನ್ನು ಕವಿಗಳು ಕೊಟ್ಟ ಹಾಗೆ ಕಾಣುತ್ತದೆ. ಪ್ರಭುಲಿಂಗ ಪುರಾಣಕಾರನು ಹರಿತವಾದ ಅಲಗುಗಳಿಂದ ಶೂನ್ಯ ಸಿಂಹಾಸನವನ್ನು ರಚಿಸಿದ್ದರೆಂದು ಸಾಂಕೇತಿಕವಾಗಿ ಹೇಳುತ್ತಾನೆ. ಸ್ಥಾನದ ಗುರುತರವಾದ ಮಹತ್ತ್ವ ಅಲಗುಗಳಮೇಲೆ ಕುಳಿತುಕೊಳ್ಳುವಷ್ಟು ಕಠಿಣಸಾಧ್ಯವಾಗಿತ್ತು. ಸಿಕ್ಕಿದವರು ಬಂದು ಅಧಿಕಾರಲಾಲಸೆಯಿಂದಲೂ ಕೀರ್ತಿಕಾಮನೆಯಿಂದಲೂ ಶೂನ್ಯಪೀಠವನ್ನಡರಲಾಗುತ್ತಿರಲಿಲ್ಲ. ಷಟ್ಸ್ಥಲ, ಅಷ್ಟಾವರಣ, ಪಂಚಾಚಾರಗಳಿಗತೀತನಾದ ಮಹಾವ್ಯಕ್ತಿಗಾಗಿ ಆ ಪೀಠವು ಕಾಯ್ದಿಡ ಲಾಯಿತು. ಪೀಠವನ್ನೇನೋ ಬಸವಣ್ಣನವರು ರಚಿಸಿಬಿಟ್ಟರು. ಗುರುವಿನ ಬರವನ್ನು ಕಾಯುತ್ತ ಕುಳಿತರು. ಆ ಕಾಲದ ತಮ್ಮ ಸ್ಥಿತಿಯನ್ನು ಹೀಗೆ ವರ್ಣಿಸುತ್ತಾರೆ—

" ಎನ್ನ ಗಂಡ ಬರಬೇಕೆಂದು ಆನು ಅಂತರಂಗವೆಂಬ ಮನೆಯ ತೆರಹುಮಾಡಿ, ಅಷ್ಟದಳವೆಂಬ ಓವರಿಯೊಳಗೆ ನಿಜನಿವಾಸವೆಂಬ ಹಾಸುಗೆಯ ಹಾಸಿ, ಧ್ಯಾನವೆಂಬ ಮೇಲುಕಟ್ಟ ಕಟ್ಟಿ, ಜ್ಞಾನ ವೆಂಬ ದೀಪಮಂ ಬೆಳಗಿಸಿ, ಕ್ರಿಯವೆಂಬ ಉಪಚಾರಂಗಳ ಹರಹಿಕೊಂಡು, ಪಶ್ಚಿಮದ್ವಾರವೆಂಬ ಬಾಗಿಲು ತೆರೆದು, ಕಂಗಳೇ ಪ್ರಾಣವಾಗಿ ಬರವ ಹಾರೈಸುತ್ತಿರ್ದೆನಯ್ಯಾ ! ನಾನು ಬಾರೆನೆಂದು ಉಮ್ಮಳಿಸಿಹೆಳೆಂದು ತಾನೆ ಬಂದು ಎನ್ನ ಹೃದಯ ಸಿಂಹಾಸನದ ಮೇಲೆ ಮೂರ್ತಿಗೊಂಡ ರೆನ್ನ ಮನದ ಬಯಕೆ ಸ್ವಯವಾಗಿತ್ತು. ಹಿಂದೆ ಹನ್ನೆರಡು ವರ್ಷದಲ್ಲಿರ್ದ ಚಿಂತೆ ಇಂದು ನಿಶ್ಚಿಂತ ವಾಯಿತ್ತು. ಕೂಡಲ ಸಂಗಮ ದೇವರು ಕೃಪಾಮೂರ್ತಿಯಾದ ಕಾರಣ ನಾನು ಬದುಕಿದೆನು."

ಭಕ್ತನ ಹೆಬ್ಬಯಕೆಯನ್ನು ಪೂರೈಸುವುದಕ್ಕೆ ಪರಮ ಗುರುವಾದ ಅಲ್ಲಮಪ್ರಭುವು ಪೌಳಿಯ ಉತ್ತರ ಬಾಗಿಲಲ್ಲಿ ತಲೆವಾಗಿ ಹೊಕ್ಕು 'ಗತಿಯ ಪವಣದಲಿ ದವಳಾರಮಪ್ಪ ಪಶ್ಚಿಮ ದ್ವಾರದಿಂ ತ್ರಿವಿಧಗತಿಯ ಶೂನ್ಯಸಿಂಹಾಸನದ ಮೇಲೆ ಮುಕ್ತಕೇಶ'ನಾಗಿ ಕುಳಿತುಕೊಳ್ಳುತ್ತಾನೆ. ನೆರೆದಿದ್ದ ಜಂಗಮ ತಂಡಕ್ಕೆ ಮನಸ್ಸು ಕಲುಷಿತವಾಗುತ್ತದೆ. 'ಅವನಲ್ಲಿ ಏನು ಲೇಸ ಕಂಡನೋ ? ನಮ್ಮಲ್ಲಿ ಏನು ಹೊಲ್ಲೆಯವ ಕಂಡನೋ ? ಕಂಚನೊಲ್ಲದೆ ಹಂಚ ಹಿಡಿದನು. ಆ ಅನಾಚಾರಿ



CC-0. Jangamwadi Math Collection, Varanasi. An eGangotri Initiative

ಆವನೊಬ್ಬ, ವ್ರತಗೇಡಿ ಬಸವನೊಬ್ಬ. ಇವರಿಬ್ಬರು ದೇವ, ಮರ್ತ್ಯ ಲೋಕಕ್ಕೆ ಹೊರಗು. ಇವದಿರ ಮುಖವ ನೋಡಲಾಗದೆನುತ' ಹೊರಟು ಹೋಗುತ್ತಾರೆ. ಬಸವಣ್ಣನವರು ಒಂದೇ ಸಮನೆ ಮರುಗುತ್ತಾರೆ. ಒಂದು ಕಡೆ ಗುರು, ಮತ್ತೊಂದು ಕಡೆ ಜಂಗಮ. ಯಾವುದಕ್ಕೆ ಅಪಚಾರವಾದರೂ ತಮ್ಮ ಉದ್ದೇಶ ನಿಷ್ಫಲವಾದಂತೆ. ಆಗ ಪ್ರಭುದೇವರು ಬಸವಣ್ಣನವ ರನ್ನು ಸಂತೈಸಿ, ತಾವು ಆರೋಗಣೆಯನ್ನೊಪ್ಪಿಸಿಕೊಂಡು 'ಬಸುರ ಹೆಂಗಸಿನೂಟ ಹೊಟ್ಟೆಯ ಶಿಶುವ ದಣಿಸುವವೊಲು' ಜಂಗಮದ ತೃಪ್ತಿಯನ್ನುಂಟುಮಾಡುತ್ತಾರೆ.

೪

ಕಲ್ಯಾಣದಲ್ಲಿಯೇ ಇದ್ದ ಶಿವಶರಣರಲ್ಲವೆ ಯೋಗಿ ಶ್ರೇಷ್ಠರಾದ ಸಿದ್ಧರಾಮಣ್ಣನವರು 'ಕರಸ್ಥಲದ ನಿಜವ' ಬಸವರಾಜದೇವನಿಂದ ಅರಿಯಲು ಪ್ರಭುದೇವರೊಂದಿಗೆ ಬಂದು ನೆಲಸಿದ್ದರು. ಅನುಭವ ಮಂಟಪದ ಕೀರ್ತಿ ದಶದಿಕ್ಕುಗಳಿಗೂ ಹರಡಲಾರಂಭಿಸಿತು. ತಂಡ ತಂಡವಾಗಿ ಜನರು ಬಂದು ಸೇರಲಾರಂಭಿಸಿದರು. ಕಲ್ಯಾಣ, ಶಿವಭಕ್ತ-ಭಕ್ತೆಯರಿಂದ ತುಂಬಿ ಕೈಲಾಸದಂತೆ ಮೆರೆಯತೊಡಗಿತು. ಈ ನಂದನವನದಲ್ಲಿ ಚಂದ್ರಕಳೆ ಮೂಡಿದಂತೆ ಮತ್ತೊಂದು ಮಹಾವ್ಯಕ್ತಿಯ ಆಗಮನವಾಯಿತು. "ಭವಿಯ ಸೋಂಕದೆ, ಅಂಗ ಸಂಗಮಂ ತೊರೆದು, ಲಿಂಗಸಂಗದೊಳು ಅವಿರಳ ಸಂಗಿಯಾಗಿ, ತನ್ನ ದಿವ್ಯ ರೂಪ ಲಾವಣ್ಯವನೆಡೆಗೊಂಡು, ಷೋಡಶ ಪ್ರಾಯದ ಯೌವನದ ಸುಖದ ಸುಗ್ಗಿ, ಶಿವನೊಳ್ಪರವಶವನೈದಿ, ಸರ್ವಕರಣಂಗಳ ಅರುವಿಂಗಾ ಹುತಿಯನಿಕ್ಕಿ, ದಿಗಂಬರದುಡಿಗೆಯನ್ನುಟ್ಟು, ತನ್ನ ಕೇಶವೆಂಬ ಅಂಬರವ ಮುಸುಕಿಟ್ಟು, ಲೌಕಿಕ ಲಜ್ಜಾಭಾವಮಂ ತೊರೆದು, ಚೆನ್ನಮಲ್ಲಿಕಾರ್ಜುನನ ವಿಕಳಾವಸ್ಥೆಯೊಳ್ ತನ್ನ ಮರೆದು" ಬರುತ್ತಿದ್ದ ಉಡುತಡಿಯ ಮಹಾದೇವಿಯಕ್ಕನ ಮಹತ್ತ್ವವನ್ನು ಸಕಲ ಪ್ರಮಥರಿಗೆ ತೋರ ಬೇಕೆಂದು ಆವಳನ್ನು ಕರೆತರಲು ಕಿನ್ನರಯ್ಯಗಳನ್ನು ಕಳುಹಿಸುತ್ತಾರೆ. ಕಿನ್ನರಯ್ಯಗಳ ಜತೆಯಲ್ಲಿ ಬಂದ ಮಹಾದೇವಿಯಕ್ಕನನ್ನು ಬಹು ವಿಧವಾಗಿ ಪರೀಕ್ಷಿಸಿ—

> 'ಭಾವ ಶುದ್ಧವಾದಲ್ಲಿ ಸೀರೆಯನಳಿದು ಕೂದಲ ಮರೆಮಾಡಲೇತಕ್ಕೆ'

ಎಂದು ಆಕೆಯ ನಗ್ನತೆಯನ್ನು ಕುರಿತು ಪ್ರಶ್ನಿಸಲು ಮಹಾದೇವಿಯಕ್ಕ—

> "ಫಲ ಪಕ್ವವಾದಲ್ಲದೆ ಹೊರಗಣ ಸಿಪ್ಪೆ ಬಪ್ಪ ಕೆಡದು. ಕಾಮನ ಮುದ್ರೆಯ ಕಂಡು ನಿಮಗೆ ನೋವಾದಿತ್ತೆಂದು— ಆ ಭಾವದಿಂದೆ ಮುಚ್ಚಿದೆ"

ಎಂದು ಸಮಂಜಸವಾಗಿ ಉತ್ತರ ಹೇಳುತ್ತಾಳೆ. ಮಹಾದೇವಿಯಕ್ಕನ ದೃಢತೆ, ವೀರ ವೈರಾಗ್ಯ, ಜ್ಞಾನದ ಪರಿಪಕ್ವತೆ, ಭಕ್ತಿಯ ಆತ್ಮರತಿಗಳನ್ನು ಕಂಡು ಎಲ್ಲರೂ ತಲೆದೂಗುತ್ತಾರೆ. ಬಸವಣ್ಣ ನವರೇ ಆದಿಯಾಗಿ ಎಲ್ಲ ಪ್ರಮಥರೂ ಅಕ್ಕಮಹಾದೇವಿಗೆ ಸ್ವಾಗತ ಬಯಸಿ, ಆಕೆಗೆ ಮಂಟಪದಲ್ಲಿ ಹಿರಿಯ ಸ್ಥಾನವನ್ನು ಕೊಡುತ್ತಾರೆ. ಆಕೆಯ ವಚನಗಳ ಹಿರಿಮೆಯನ್ನು ಕುರಿತು ಚೆನ್ನಬಸ ವಣ್ಣನವರು—

> "ಆದ್ಯರ ಅರುವತ್ತು ವಚನಕ್ಕೆ ದಣ್ಣಾಯಕರ ಇಪ್ಪತ್ತು ವಚನ. ದಣ್ಣಾಯಕರ ಇಪ್ಪತ್ತು ವಚನಕ್ಕೆ ಪ್ರಭುದೇವರ ಹತ್ತು ವಚನ. ಪ್ರಭುದೇವರ ಹತ್ತು ವಚನಕ್ಕೆ ಅಜಗಣ್ಣನ ಅಯ್ದು ವಚನ. ಅಜಗಣ್ಣನ ಅಯ್ದು ವಚನಕ್ಕೆ ಮಹಾದೇವಿಯಕ್ಕನ ಒಂದು ವಚನ"

ಎಂದು ಕೊಂಡಾಡಿದ್ದಾರೆ. ಸಾಕ್ಷಾತ್ ಅಲ್ಲಮಪ್ರಭುಗಳೇ—



CC-0. Jangamwadi Math Collection, Varanasi. An eGangotri Initiative

"ತನುಗುಣ ನಾಸ್ತಿಯಾಗಿ ಲಿಂಗ ಸಂಗಿಯಾದಳು. ಮನಗುಣ ನಾಸ್ತಿಯಾಗಿ ಅರಿವು ಸಂಗಿಯಾದಳು. ಭಾವಗುಣ ನಾಸ್ತಿಯಾಗಿ ಮಹಾಪ್ರಭೆ ತಾನಾದಳು. ತಾನಿದಿರೆಂಬೆರಡಳಿದು ನಮ್ಮ ಗುಹೇಶ್ವರ ಲಿಂಗದಲ್ಲಿ ಸ್ವಯ ಲಿಂಗವಾದ ಮಹಾದೇವಿಯಕ್ಕಗಳ ನಿಲವಿಂಗೆ ಶರಣೆನುತಿರ್ದೆನು"
ಎಂದು ತಮ್ಮ ಭಕ್ತಿ ಕಾಣಿಕೆಯನ್ನರ್ಪಿಸಿದ್ದಾರೆ.

ಅನುಭವ ಮಂಟಪವು ವಿವಿಧ ವೃತ್ತಿಯ, ವಿವಿಧ ಜಾತಿ ಮತಗಳಿಗೆ ಸೇರಿದ ಎಲ್ಲರಿಗೂ ಆಶ್ರಯ ಸ್ಥಾನವಾಗಿತ್ತು. ಅಲ್ಲಿ ವ್ಯಕ್ತಿಯ ಸಾಮಾಜಿಕ ಸ್ಥಿತಿಗೆ ಬೆಲೆಯಿರಲಿಲ್ಲ. ಅವನ ಶಿವಾನುಭವ ಮಹತ್ತ್ವವಷ್ಟನ್ನೇ ಎಣಿಕೆಗೆ ತೆಗೆದುಕೊಳ್ಳಲಾಗುತ್ತಿತ್ತು. ಈ ಉದಾರ ದೃಷ್ಟಿಯಿಂದ ಅನುಭವ ಮಂಟಪವು ಸಾಮ್ಯತೆಯ ಭದ್ರವಾದ ತಳಪಾಯವನ್ನು ಹಾಕಿತು. ರಾಜ್ಯಭೋಗವನ್ನು ತೊರೆದು ಬಂದಿದ್ದ ಕಲ್ಲುಕುರಿಕೆಯ ಅರಸು ಸಕಲೇಶ ಮಾದರಸ, ರಾಜ್ಯತ್ಯಾಗ ಮಾಡಿ ಕಟ್ಟಿಗೆ ಹೊರೆಯನ್ನು ಮಾರಿ ಜೀವನವನ್ನು ಸಾಗಿಸುತ್ತಿದ್ದ ಕಾಶ್ಮೀರದ ಅರಸು ಮೋಳಿಗೆಯ ಮಾರಯ್ಯ, ಅಂಬಿಗ ಚೌಡಯ್ಯ, ಕ್ಷೌರಿಕ ಹಡಪದ ಅಪ್ಪಣ್ಣ, ನೇಕಾರ ಜೇಡರ ದಾಸಿಮಯ್ಯ, ಶಿಂಪಿಗ ಶಂಕರ ದಾಸಿಮಯ್ಯ, ಅಗಸ ಮಡಿವಾಳ ಮಾಚಯ್ಯ, ದನಕಾಯುವ ರಾಮಣ್ಣ, ಸುಂಕದ ಬಂಕಣ್ಣ, ಅಕ್ಕಸಾಲಿಗ ಬೊಮ್ಮಣ್ಣ, ಸಿಪಾಯಿ ಮಾದಣ್ಣ, ತೊಗಲಗಾರ ಡೋಹರ ಕಕ್ಕಯ್ಯ, ತಳವಾರ ರಾಮಿದೇವ, ಮೊಜ್ಜಿಗಾರ ಮಾದರ ಚೆನ್ನಯ್ಯ, ವೈದ್ಯ ಸಂಗಣ್ಣ, ಹಗ ಮಾಡುವ ನುಲಿಯ ಚಂದಯ್ಯ, ಜೇಡ ಸಂಗಯ್ಯ, ಸೂಜಿಕಾರ ರಾಮಿತಂದೆ, ಹಳೆಯ ಕಂಚು ಹಿತ್ತಾಳೆ ಸಾಮಾನು ಮಾಡುವ ಚಿಕ್ಕದೇವ, ಕನ್ನಡಿಕಾರ ಅಮ್ಮಿದೇವ, ಮೇದರ ಕೇತಯ್ಯ, ಡೋಲುಗಾರ ಬೊಮ್ಮಣ್ಣ, ಶ್ರೀಮಂತ ಆದಯ್ಯ, ಆಯದಕ್ಕಿಯ ಮಾರಯ್ಯ ಮೊದಲಾದವರಿದ್ದರು. ಇವರಲ್ಲದೆ ಮಹದೇವಿ, ಸತ್ಯಕ್ಕ, ಮುಕ್ತಾಯಕ್ಕ, ರೆಮ್ಮವ್ವೆ, ಸೋಮವ್ವೆ, ಸುವರ್ಣದೇವಿ, ನೀಲಲೊಚನೆ, ಲಕ್ಷ್ಮಮ್ಮ, ಲಿಂಗಮ್ಮ, ರಾಯಮ್ಮ, ಕಾಳವ್ವೆ, ರೇಚವ್ವೆ, ಗಂಗಾಂಬಿಕೆ, ಗಂಗಮ್ಮ, ವೀರಮ್ಮ, ಗೊಗ್ಗವ್ವೆ, ಮಸಣಮ್ಮ, ಕಾಯಮ್ಮ ಗುಡ್ಡವ್ವೆ, ನೀಲಾಂಬಿಕೆ, ಅಕ್ಕನಾಗಾಯಿ, ಬೊಂತಾದೇವಿ, ರೇಕಮ್ಮ ಮೊದಲಾದ ವಿವಿಧ ಕಾಯಕದ ಶಿವಶರಣೆಯರೂ ಇದ್ದರು. ಇವರಲ್ಲಿ ಸುಮಾರು ೨೮ ಮಂದಿ ಶಿವಶರಣೆಯರು ಉತ್ತಮವಾದ ವಚನಗಳನ್ನು ನುಡಿದಿದ್ದಾರೆ.

ಆಧುನಿಕ ನಾಗರಿಕತೆಯ ಯಾವ ಬಗೆಯ ಪ್ರಯಾಣ ಸೌಕರ್ಯಗಳೂ ವಾರ್ತಾವಾಹನಗಳೂ ಇಲ್ಲದ ಕಾಲದಲ್ಲಿ ಅನುಭವ ಮಂಟಪದ ಕೀರ್ತಿ ಹಿಂದುಸ್ಥಾನದ ಎಂಟು ಮೂಲೆಗಳಿಗೂ ಹರಡಿ ಕಾಶ್ಮೀರ, ಸೌರಾಷ್ಟ್ರ, ಕಳಿಂಗ, ಆಂಧ್ರ, ತಮಿಳುನಾಡು ಮತ್ತು ಕರ್ನಾಟಕದ ವಿವಿಧ ಭಾಗಗಳಿಂದ ಶಿವಶರಣ-ಶರಣೆಯರು ಬರುವಂತಾದುದು ಅದರ ಹೆಚ್ಚುಳವನ್ನು ಎತ್ತಿ ಸಾರುತ್ತದೆ.

೫

ಜಗತ್ತಿನ ಧಾರ್ಮಿಕ ಇತಿಹಾಸದಲ್ಲಿ ಸಂಘಶಕ್ತಿಯಿಂದ ಆದ ಅನೇಕ ಮಹತ್ತ್ವದ ಕೆಲಸಗಳ ಉಲ್ಲೇಖಗಳು ದೊರೆಯುತ್ತವೆ. ಪ್ಲೇಟೋ ಸಂಗ್ರಹಿಸಿರುವ ಸೊಕ್ರೇಟಿಸನ ಸಂಭಾಷಣೆಗಳು, ತಮಿಳುನಾಡಿನ ಸಂಘಸಾಹಿತ್ಯ, ಮಧ್ಯಕಾಲದ ಪರ್ಶಿಯಾ ದೇಶದ ಸೂಫಿ ಸಾಹಿತ್ಯಗಳನ್ನು ಅನುಭವ ಮಂಟಪದ ಸಾಹಿತ್ಯಸೃಷ್ಟಿಗೆ ಹೋಲಿಸಬಹುದು. ಆದರೆ ಒಬ್ಬ ವ್ಯಕ್ತಿಯನ್ನೇ



CC-0. Jangamwadi Math Collection, Varanasi. An eGangotri Initiative

ಅವಲಂಬಿಸಿದೆ ತತ್ತ್ವಗಳ ಬುನಾದಿಯ ಮೇಲೆ ನಿಂತು ಸಮಾಜ, ಧರ್ಮ, ವ್ಯಕ್ತಿ ಪ್ರಗತಿಗಳೆಲ್ಲ ವನ್ನೂ ಸಮಾನ ದೃಷ್ಟಿಯಿಂದ ಅನುಲಕ್ಷಿಸಿ, ಜನಜೀವನದ ಎಲ್ಲ ಅಂಗಗಳ ಮೇಲೂ ತನ್ನ ಪ್ರಭಾವ ಮುದ್ರೆಯನ್ನೊತ್ತಿದ ಕೀರ್ತಿ ಅನುಭವ ಮಂಟಪಕ್ಕೆ ಸೇರುತ್ತದೆ. ಅನುಭವ ಮಂಟಪದ ಶರಣರ ಜಿಜ್ಞಾಸು ಲಕ್ಷಣ, ವಿಚಾರ ಧೋರಣ ಹಾಗೂ ಸತ್ಯದ ಸ್ಪಷ್ಟ ಆವಿಷ್ಕರಣ–ಇವು ಅವರ ಬೋಧೆಗೆ ಹಿರಿಯ ಸ್ಥಾನವನ್ನು ಕಲ್ಪಿಸಿಕೊಟ್ಟಿವೆ. ಹದಿನೈದನೆಯ ಶತಮಾನದ ಮಧ್ಯ ಭಾಗದಲ್ಲಿ ಆಗಿ ಹೋದ ಗೂಳೂರ ಸಿದ್ಧವೀರಣಾಚಾರ್ಯನು ರಚಿಸಿರುವ "ಶೂನ್ಯಸಂಪಾದನೆ" ಯನ್ನು ಅನುಭವ ಮಂಟಪದ ಕೈಪಿಡಿಯನ್ನಾಗಿ ಸ್ವೀಕರಿಸಬಹುದು. ಶಿವಶರಣ, ಶಿವಶರಣೆಯರ ವಚನಗಳಿಂದಲೇ ಮಂಟಪದ ವಿಚಾರವಿನಿಮಯ ಸರಣಿಯನ್ನು ಜೋಡಿಸಿ ಸಿದ್ಧವೀರಣಾಚಾರ್ಯನು ಅಪೂರ್ವ ವಾದ ಗ್ರಂಥವನ್ನು ರಚಿಸಿದ್ದಾನೆ. ರೀತಿ ಮತ್ತು ನೀತಿ ಎರಡು ದೃಷ್ಟಿಯಿಂದಲೂ ಇದಕ್ಕೆ ಸಮಾನವಾದ ಈ ಬಗೆಯ ಗ್ರಂಥ ಕನ್ನಡದಲ್ಲಿ ಬೇರೊಂದಿಲ್ಲ. ಇದನ್ನು ಪ್ಲೇಟೋವಿನ ಸಂಭಾಷ ಣೆಗೆ ಹೋಲಿಸುವುದೂ ತಪ್ಪಾಗಲಾರದು.

ಸತ್ಯದ ಹಾದಿ ಹೊರಗಣ್ಣಿಗೆ ಎಷ್ಟು ನೇರವಾಗಿ ಕಾಣುವುದೋ ಒಳಗಣ್ಣಿಗೆ ಅಷ್ಟು ಸುಗಮವಾಗಿ ಕಾಣುವುದಿಲ್ಲ. ಹಾದಿಯಲ್ಲಿ ಅನೇಕ ಮುಳ್ಳು ಗಿಡಗಳು, ಕಲ್ಲು ಕಸರೆಗಳು ತುಂಬಿ ಕೊಂಡು ಪಥಿಕನನ್ನು ಹಲವು ರೀತಿಯಲ್ಲಿ ಆಯಾಸಗೊಳಿಸುತ್ತವೆ. ಹೀಂದೂ ಧರ್ಮದ ಹಾದಿ ಯಂತೂ ಒಂದಲ್ಲ ಒಂದು ರೀತಿಯಲ್ಲಿ ಅಭೇದ್ಯವಾಗಿಬಿಟ್ಟಿದೆ. ಒಂದು ಕಡೆ ವಿಚಾರವಿಲ್ಲದ ಆಚಾರ, ಮತ್ತೊಂದು ಕಡೆ ಗುರಿಯನ್ನರಿಯದ ವಿಚಾರದ ವಿಶ್ಲೇಷಣೆ, ಮಗದೊಂದು ಕಡೆ ಹದಗೆಟ್ಟ ಭಾವಲೀಲೆ. ಈ ಅತಿರೇಕಗಳಲ್ಲಿ ಧರ್ಮದ ಸೂಕ್ಷ್ಮ ಜ್ಯೋತಿಯು ನಂದಿಹೋಗಿ ಬಿಡುತ್ತದೆ. ಸಾಧಕನು ತನ್ನ ಅಂತರಾತ್ಮನನ್ನು ಪರಿಶುದ್ಧಗೊಳಿಸಿಕೊಂಡು, ಧರ್ಮದ ಬೆಳಕು ಬಿತ್ತರಿಸಲು ಬೇಕಾದ ಭೂಮಿಕೆಯನ್ನು ಸಿದ್ಧಗೊಳಿಸಿಕೊಳ್ಳುವ ಘನ ಆವಶ್ಯಕತೆಯನ್ನು ಅನುಭವ ಮಂಟಪದ ಶರಣರು ಎತ್ತಿ ಸಾರಿದರು. ಶೀಲಕ್ಕೆ ಸಲ್ಲಬೇಕಾದ ಗೌರವವನ್ನಿತ್ತು ಅದರ ಮಹತ್ತ್ವ ವನ್ನು ಕೊಂಡಾಡಿದರು.

> "ಶೀಲವಂತನಾದರೆ ತಾ ಸವೆದು ಶೀಲವ ಮಾಡಬೇಕಯ್ಯ. ತಾನಿರ್ದೆಡೆಯಲ್ಲಿ ಸುಳಿದು ಮಾಡುವ ಶೀಲ ಕೊಟ್ಟು ಪೂಜಿಸುವ ಕೈಕೂಲಿತನವಲ್ಲ. ಪೂಜೆಯ ಫಲ ಕೊಡವಾಲ ಕರೆವ ಸುರಭಿಯಂತೆ. ಅಟ್ಟಿದರಟ್ಟುವ,ಬೇಡಿ ಮರಗುವ ದಾಸಿಯ ಪದದಂತೆ,ತನ್ನುದರ ನಿಮಿತ್ತ ವಿಡಿದು ಶೀಲಬೇಕೆಂಬ ದುಶ್ಶೀಲರ ಮೆಚ್ಚುವನೇ ಸಕಳೇಶ್ವರಾ"

ಶೀಲದಾಚರಣೆ ನೋಡುವುದಕ್ಕೆ ಮತ್ತು ಹೇಳುವುದಕ್ಕೆ ಎಷ್ಟು ಸುಲಭವೋ ಆಚರಿಸು ವುದಕ್ಕೆ ಅಷ್ಟು ಸುಲಭವಲ್ಲವೆಂಬುದನ್ನು ಚೆನ್ನಬಸವಣ್ಣನವರು ದೃಢಪಡಿಸುತ್ತಾರೆ.

> "ಶೀಲವಂತನಾದೊಡೆ ಪ್ರಪಂಚ ನಾಸ್ತಿಯಾಗಿರಬೇಕು. ಸೀಮೆಯಾದೊಡೆ ಪಂಚೇಂದ್ರಿಯಂಗಳು ನಾಸ್ತಿಯಾಗಿರಬೇಕು. ತನ್ನ ಕರ್ತುವಿನಲ್ಲಿ ಸಕಲ ಸಂಶಯ ನಾಸ್ತಿಯಾದ ಶೀಲಕ್ಕೆ ಭವ ನಾಸ್ತಿ. ಭ್ರಮೆ ನಾಸ್ತಿಯಾದಲ್ಲದೆ ನಮ್ಮ ಕೂಡಲ ಚೆನ್ನಸಂಗಯ್ಯನಲ್ಲಿ ಶೀಲವಂತನೆನಿಸಬಾರದು. ಈ ವಂಚನೆಯ ಡಂಭಕ ಅಪಸ್ಮಾರಿಗಳಿಗೆಂತಯ್ಯ ?"

ಶೀಲವೆಂದರೆ ಗರ್ವಿಸಿ ನುಡಿಯುವುದಲ್ಲ, ಹೊರಗಣ ಆಚಾರದಿಂದ ಜನಗಳನ್ನು ಮರುಳು ಮಾಡುವುದೂ ಅಲ್ಲ.



CC-0. Jangamwadi Math Collection, Varanasi. An eGangotri Initiative

"....ಅಂತರಂಗದ ವಿಚಾರವನರಿಯದೆ ಹಾಳ ಸಂಕಲ್ಪದಿಂದೆ ಬಹಿರಂಗದ ಪದಾರ್ಥಗಳ ಬಿಟ್ಟು, ಮುಕ್ತಿಯ ಪಡೆವೆನೆಂಬ ಯುಕ್ತಿಗೇಡಿಗಳಿಗೆ ಭವ ಬಂಧನಗಳು ಹಿಂಗಲಿಲ್ಲ. ಜನನ ಮರಣಂಗಳು ಜಾರಲಿಲ್ಲ. ಸಂಸಾರ ಮಾಯಾ ಮೋಹವು ನೀಗಲಿಲ್ಲ. ಇಂತಪ್ಪ ಅಜ್ಞಾನಿಗಳ ವಿಧಿ ಎಂತಾಯಿತೆಂದರೆ ಹುತ್ತದೊಳಗಣ ಹಾವು ಕೊಲ್ಲುವೆನೆಂದು ಮೇಲೆ ಹುತ್ತವ ಬಡಿವ ಮರುಳನಂತಾಯಿತ್ತು ನೋಡಾ ಅಖಂಡೇಶ್ವರಾ"

"ಶೀಲವಾವುದೆಂದರಿಯರೇ ? ಇದ್ದುದ ವಂಚನೆಯ ಮಾಡದಿಪ್ಪುದೇ ಶೀಲ. ಇಲ್ಲದುದಕ್ಕೆ ಕಡನ ಮಾಡದಿಪ್ಪುದೇ ಶೀಲ. ಪರಧನ ಪರಸ್ತ್ರೀಯರ ಮುಟ್ಟದಿಪ್ಪುದೇ ಶೀಲ. ಪರದೈವ ಪರಸಮಯಕ್ಕೆ ಅಳುಪದಿರ್ಪುದೇ ಶೀಲ. ನಮ್ಮ ಕೂಡಲ ಚೆನ್ನಸಂಗನ ಶರಣರ ಬರವಿಂಗೆ ಮುಯ್ಯಾಂತುದೇ ಅಚ್ಚ ಶೀಲ"

ಎಂದು ಸ್ಪಷ್ಟಪಡಿಸಿದ್ದಾರೆ.

ಸಾಧಕನಿಗೆ ಆರಂಭದ ದೆಸೆಯಲ್ಲಿ ಒದಗುವ ಎರಡು ಕಂಟಕಗಳೆಂದರೆ ವಿಲೋಭನೆ ಮತ್ತು ಬುದ್ಧಿ ಭ್ರಂಶತೆ. ಸಾಧಕ ಸ್ಥಿತಿಯ ಬಾಲ್ಯದಲ್ಲಿಯೇ ಕರಗತವಾಗುವ ಸಣ್ಣಪುಟ್ಟ ಶಕ್ತಿಗಳನ್ನೇ ಅಪಾರವೆಂದು ಬಗೆದು ಅವನು ಯೋಗಭ್ರಷ್ಟನಾಗುತ್ತಾನೆ. ಇಲ್ಲದಿದ್ದರೆ ಈ ದೇವ, ಆ ದೇವ ಎಂದುಕೊಂಡು ನಿರ್ದಿಷ್ಟ ಗುರಿಯ ಲಕ್ಷ್ಯವನ್ನು ಕಳೆದುಕೊಳ್ಳುತ್ತಾನೆ. ಇದೂ ಒಂದು ಬಗೆಯ ಯೋಗ ಭ್ರಷ್ಟತೆಯೇ ಆಗಿ ಸಾಧಕನನ್ನು ಹಾಳು ಮಾಡಿ ಬಿಡುತ್ತದೆ. ತಾಮಸ ವಸ್ತುಗಳನ್ನು ದೇವರೆಂದು ಭ್ರಮಿಸಿ ಪೂಜಿಸುವುದನ್ನೂ ಹಲವು ದೇವರುಗಳನ್ನು ಉಪಾಸಿಸುವ ವ್ಯಕ್ತಿಯನ್ನೂ ಕುರಿತು—

"ಕಲ್ಲು ದೇವರು ದೇವರಲ್ಲ. ಮಣ್ಣು ದೇವರು ದೇವರಲ್ಲ. ಮರ ದೇವರಲ್ಲ. ಪಂಚ ಲೋಹದಲ್ಲಿ ಮಾಡುವ ದೇವರು ದೇವರಲ್ಲ. ಸೇತುಬಂಧ, ರಾಮೇಶ್ವರ, ಗೋಕರ್ಣ, ಕಾಶಿ, ಕೇದಾರ ಮೊದಲಾದ ಅಷ್ಟಾಷಷ್ಟಿ ಪುಣ್ಯ ತೀರ್ಥಗಳಲ್ಲಿಹ ದೇವರು ದೇವರಲ್ಲ. ತನ್ನ ತಾನರಿದು ತಾನಾರೆಂದು ತಿಳಿದಡೆ ತಾನೇ ದೇವ ನೋಡಾ ಅಪ್ರಮಾಣ ಕೂಡಲ ಸಂಗಮದೇವಾ."

ಎಂದು ಹೇಳಿದ್ದಾರೆ. ಇಂತಹ ದೇವರ ಪೂಜೆಯನ್ನು ಬಹಿರಾಡಂಬರಕ್ಕೆ ಆಚರಿಸುವುದನ್ನೂ ತೀರ್ಥಯಾತ್ರಾದಿಗಳನ್ನು ಮಾಡಿ ಮುಕ್ತರಾದೆವೆಂದು ಭಾವಿಸುವುದನ್ನೂ ಖಂಡಿಸುತ್ತಾರೆ.

"ಮಜ್ಜನಕ್ಕೆರೆದು ಫಲವ ಬೇಡುವರಯ್ಯ — ತಮಗೆಲ್ಲಿಯದೋ ಆ ಫಲವು ಸೀತಾಳಕ್ಕಲ್ಲದೆ. ಪತ್ರೆ ಪುಷ್ಪವ ಪೂಜಿಸಿ ಫಲವ ಬೇಡುವರು — ತಮಗೆಲ್ಲಿಯದೋ ಆ ಫಲವು ಗಿಡಗಳಿಗಲ್ಲದೆ. ಸುಯಿಧಾನವ ಅರ್ಪಿಸಿ ಪ್ರಸಾದದ ಫಲವ ಬೇಡುವರು — ತಮಗೆಲ್ಲಿಯದೋ ಆ ಫಲವು ಹದಿನೆಂಟು ಧಾನ್ಯಕ್ಕಲ್ಲದೆ. ಲಿಂಗದೊಡವೆಯ ಲಿಂಗಕ್ಕೇ ಕೊಟ್ಟು, ಫಲವ ಬೇಡುವ ಸರ್ವ ಅನ್ಯಾಯಿಗಳನೇನೆಂಬೆ ಗುಹೇಶ್ವರಾ ?"

"ಒಬ್ಬರ ಮನವ ನೋಯಿಸಿ, ಒಬ್ಬರ ಮನೆಯ ಘಾತವ ಮಾಡಿ, ಗಂಗೆಯಲ್ಲಿ ಮುಳುಗಿದರೆ ಆಗುವದೇನಯ್ಯ ? ಚಂದ್ರನು ಗಂಗೆಯ ತಡಿಯಲ್ಲಿದ್ದರೇನು ? ಕಲಂಕ ಬಿಡದಾಯಿತಯ್ಯ. ಅದು ಕಾರಣ — ಮನವ ನೋಯಿಸದವನೇ, ಘಾತವ ಮಾಡದವನೇ ಪರಮ ಪಾವನ ನೋಡಾ ಕಪಿಲಸಿದ್ಧ ಮಲ್ಲಿಕಾರ್ಜುನಾ"

ಈ ಬಗೆಯ ಉಪಾಧಿಗಳನ್ನು ನಿರಾಕರಿಸಿದ ಸಾಧಕನು ನಿಶ್ಚಲ ಚಿತ್ತದಿಂದ ಒಬ್ಬ ದೇವರ ಕಡೆಗೆ ಲಕ್ಷ್ಯವಿಡಬೇಕಾಗುತ್ತದೆ.



CC-0. Jangamwadi Math Collection, Varanasi. An eGangotri Initiative

" ದೇವನೊಬ್ಬ ನಾಮ ಹಲವು. ಪರಮ ಪತಿವ್ರತೆಗೆ ಗಂಡನೊಬ್ಬ. ಮತ್ತೊಂದಕ್ಕೆರಗಿದಡೆ ಕಿವಿಮೂಗ ಕೊಯ್ವನು. ಹಲವು ದೇವರ ಎಂಜಲ ತಿಂಬವರನೇನೆಂಬೆನಯ್ಯ ಕೂಡಲ ಸಂಗಮ ದೇವಾ "

" ಕುಂಭ ಸಹಸ್ರ ಉದಕದೊಳಗೆ ಬಿಂಬಿಸಿ ತೋರುವ ಸೂರ್ಯನೊಬ್ಬನಲ್ಲದೆ ಮತ್ತೆ ಹಲಬರುಂಟೇನಯ್ಯ ? ಸಕಲ ದೇಹಗಳೊಳಗೆ ಭ್ರಮಿಸಿ ತುಂಬಿಪ್ಪ ಪರವಸ್ತು ನೀನೊಬ್ಬನಲ್ಲದೆ ಮತ್ತಾರನೂ ಕಾಣೆ ಅಖಂಡೇಶ್ವರಾ. "

" ಎಲ್ಲಿ ನೋಡಿದಡಲ್ಲಿ ನೀನೇ ದೇವಾ. ಎಲ್ಲಿ ಮುಟ್ಟಿದಲ್ಲಿ ನೀನೇ ದೇವಾ. ಎಲ್ಲಿ ಭಾವಿಸಿದಲ್ಲಿ ನೀನೇ ದೇವಾ. ಎಲ್ಲೆಡೆಯಲ್ಲಿ ನಿಮ್ಮ ಮಹಾಪ್ರಭೆಯೇ ಮುಸುಕಿತ್ತಾಗಿ, ಅಖಂಡೇಶ ನಾನು ನೀನೆಂಬುದಕ್ಕೆ ತೆರಹಿಲ್ಲ ದೇವಾ. "

ಈಶ್ವರನ ಈ ಸರ್ವವ್ಯಾಪಕತೆಯ ಅರಿವಾಗಬೇಕಾದರೆ ಮನಸ್ಸಿನ ಕೆಲವು ನೋಡಗಳು ಹರಿಯಬೇಕಾಗುತ್ತದೆ. ಸಾಧಕ ಮೊದಲು 'ತನ್ನತನ' ದ ಸುವರ್ಣ ಪಂಜರದಿಂದ ಹೊರಗೆ ಬರಬೇಕಾಗುತ್ತದೆ. ತಾನು ಹಿರಿಯ, ತನ್ನ ಜಾತಿ ಹಿಂದು ಎಂಬ ಮೋಹವನ್ನು ಸೀಳಿ—ಎನಗಿಂತ ಕಿರಿಯರಿಲ್ಲ, ಶಿವಭಕ್ತರಿಗಿಂತ ಹಿರಿಯರಿಲ್ಲ ಎಂಬ ತತ್ತ್ವವನ್ನು ಸಾಕ್ಷಾತ್ಕಾರ ಮಾಡಿಕೊಳ್ಳಬೇಕಾಗುತ್ತದೆ.

" ಜಾತಿವಿಡಿದು ಸೂತಕವನರಸುವರೆ ? ಜ್ಯೋತಿವಿಡಿದು ಕತ್ತಲೆಯನರಸುವರೆ ? ಇದೇತಕೊ ಮರುಳ ಮಾನವಾ ? ಜಾತಿಯಲ್ಲಿ ಅಧಿಕನೆಂಬೆನೆ, ವಿಪ್ರ ಶತಕೋಟಿಗಳಿರ್ದು ಫಲವೇನು, ಭಕ್ತ ಶಿಖಾಮಣಿ ಎಂದುದು ವಚನ. ನಮ್ಮ ಕೂಡಲ ಸಂಗನ ಶರಣರ ಪಾದಪರುಷವ ನಂಬು ಕೆಡಬೇಡ ಮನುಜಾ. "

" ಸೆಟ್ಟಿ ಎಂಬೆನೆ ಸಿರಿಯಾಳನ. ಮಡಿವಾಳನೆಂಬೆನೆ ಮಾಚಯ್ಯನ. ಡೋಹರನೆಂಬೆನೆ ಕಕ್ಕಯ್ಯನ. ಮಾದರನೆಂಬೆನೆ ಚೆನ್ನಯ್ಯನ. ಅನು ಹಾರುವನೆಂದಡೆ, ಕೂಡಲ ಸಂಗಯ್ಯ ನಗುವನಯ್ಯ. "

ಜಾತಿಯಿಂದ ಹಿರಿತನ ಬರುವುದಿಲ್ಲವೆಂದೂ, ವ್ಯಕ್ತಿಯಿಂದ, ಆಚಾರದಿಂದ, ಚಿತ್ತಶುದ್ಧಿಯಿಂದ ಹೀನ-ಉತ್ತಮ ಜಾತಿಗಳ ನಿರ್ಣಯವಾಗುತ್ತವೆಂದೂ ತಿಳಿಸಿ, ಹೊಲೆಯರೆಂದು ಒಂದು ಪಂಗಡದವರಿಗೆ ಹೆಸರಿಟ್ಟು ಅವರನ್ನು ವ್ಯವಹಾರ ಬಾಹಿರರನ್ನಾಗಿ ಮಾಡುವ ಕಾರ್ಯವನ್ನು ಖಂಡಿಸಿದ್ದಾರೆ.

" ಹೊಲೆಯ ಹೊಲೆಯ ಎಂದಡೆ ಹೊಲೆಯರೆಂತಪ್ಪರಯ್ಯ. ಹೊಲೆಯ ಹೊರಕೇರಿಯಲ್ಲಿರುವರು; ಊರೊಳಗಿಲ್ಲವೇನಯ್ಯ ಹೊಲೆಯರು. ತಾಯಿಗೆ ಬೈದವನೆ ಹೊಲೆಯ. ತಂದೆಗೆ ಉತ್ತರ ಕೊಟ್ಟವನೆ ಹೊಲೆಯ. ಕೊಡುವ ಹಣಕ್ಕೆ ಅಡ್ಡ ಬಂದವನೆ ಹೊಲೆಯ. ನಡುವಾರಿಗೆ ಮುಳ್ಳು ಹಚ್ಚಿದವನೆ ಹೊಲೆಯ. ಬ್ರಾಹ್ಮಣನ ಕುತ್ತಿಗೆಯ ಕುಯ್ದವನೆ ಹೊಲೆಯ. ಹತ್ತು ಆಡಿದರೆ ಒಂದು ನಿಜವಿಲ್ಲದವನೆ ಹೊಲೆಯ. ಅರ್ಥಕ್ಕೆ ಪ್ರಾಣ ಹತ್ಯವ ಮಾಡುವವನೆ ಹೊಲೆಯ. ಚಿತ್ತದಲ್ಲಿ ಪರಸತಿಯ ಬಯಸಿದವನೆ ಹೊಲೆಯ. ಲಿಂಗ ಮುದ್ರೆಯ ಕಿತ್ತಿದವನೆ, ಲಿಂಗ ಬಿಟ್ಟು ತಿರುಗುವವನೆ ಹೊಲೆಯ. ನಿಂದೆಯ ಮಾಡುವವನೆ ಹೊಲೆಯ. ಧರ್ಮವ ಮಾಡದವನೆ ಹೊಲೆಯ. ಬಸವನ ಕೊಂದವನೆ ಹೊಲೆಯ. ಬಸವನ ಇರಿದವನೆ ಹೊಲೆಯ. ಲಿಂಗ ಪೂಜೆಯ ಮಾಡದವನೆ ಹೊಲೆಯ. ಇಂತಪ್ಪ ಹೊಲೆಯರು ಊರ ತುಂಬ ಇರಲಾಗಿ ಹೊರಕೇರಿಯವರಿಗೆ ಹೊಲೆಯರೆನಬಹುದೇ ? "



CC-0. Jangamwadi Math Collection, Varanasi. An eGangotri Initiative

ಸಕಲ ಜೀವಾತ್ಮರಿಗೆ ಲೇಸ ಬಯಸುವವರೆಲ್ಲ ಕುಲಜರು ಎಂಬ ಘನತತ್ತ್ವವನ್ನು ಸಾರಿ ವಿಶ್ವಬಂಧುತ್ವವನ್ನು ಬಂಧುರಗೊಳಿಸಿದರು. ಋಜುವಾದ ಮಾನವ ಗುಣವನ್ನು ಎತ್ತಿ ಹಿಡಿದು ಹಿರಿದು ಕಿರಿದು, ದೊಡ್ಡವನು ಚಿಕ್ಕವನು, ಉತ್ತಮ ಕುಲಜ, ಹೀನ ಕುಲಜ ಎನ್ನುವ ಘೋರ ಅಪಶಬ್ದಗಳನ್ನು ತೊಡೆದುಹಾಕಲೆತ್ನಿಸಿದರು.

> " ನಾನು ಘನ ತಾನು ಘನವೆಂಬ ಹಿರಿಯರುಂಟೆ ಜಗದೊಳಗೆ ? ಹಿರಿಯರ ಹಿರಿತನದಿಂದೇನಾಯಿತ್ತು ? ಹಿರಿದು ಕಿರಿದೆಂಬ ಶಬ್ದವಡಗಿದರೆ ಆತನೇ ಶರಣ ಗುಹೇಶ್ವರಾ. "

> " ನಾನು ಹಿರಿಯ ತಾನು ಹಿರಿಯರೆಂದವರೆಲ್ಲ ಹಿರಿಯರೇ ? ಕಾಮ ಕ್ರೋಧ ಲೋಭ ಮೋಹ ಮದ ಮತ್ಸರದೊಳಗಿಪ್ಪವರೆಲ್ಲ ಹಿರಿಯರೇ ? ಆಟಮಟ ಕುಟಿಲ ಕುಹಕ ಪಿಸುಣತನದಲ್ಲಿಪ್ಪವರೆಲ್ಲ ಹಿರಿಯರೇ ? ಸರ್ಪ ಸಾವಿರಕಾಲವಿದ್ದರೇನು ವಿಷಬಿಡುವವೇ ? ಹಾವು ಮೆಕ್ಕೆಯ ಹಣ್ಣಾದರೇನು, ಮಧುರವಪ್ಪುದೇ ? ಅರಿಷಡ್ವರ್ಗದುರುವಣೆಯೊಳಗಾದಾತ ಹಿರಿಯನೇ ? ಸಮತೆ ಸಮಾಧಾನ ತುಂಬಿ ಸುಜ್ಞಾನಭರಿತವಾದಡಾತ ಹಿರಿಯನು. ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರಾ ನಿಮ್ಮನರಿಯದ ಬರುಮಾತಿನಲ್ಲಿ ಹಿರಿಯನೆಂದಡೆ ನಾಚಿತೆನ್ನ ಮನವು. "

ಹಿರಿಯ - ಕಿರಿಯತನದ ದೃಷ್ಟಿಯನ್ನು ಬದಲಾಯಿಸಿದಂತೆ ಸ್ತ್ರೀಯರ ಬಗ್ಗೆ ಇದ್ದ ಕಲ್ಪನೆಯನ್ನೂ ಬದಲಾಯಿಸಿದರು. ಸ್ತ್ರೀ, ಸ್ವಾತಂತ್ರ್ಯಕ್ಕೆ ಅನರ್ಹಳೆಂದೂ, ವಿಚಾರ ಹೀನಳೆಂದೂ, ಸದಾ ಕಾಲವೂ ಯಾರೊಬ್ಬರ ಆಶ್ರಿತಳೆಂದೂ ಪರಿಗಣಿಸಲ್ಪಟ್ಟಿದ್ದಳು. ಅನುಭವ ಮಂಟಪದಲ್ಲಿ ಹಿರಿಯ ಶಿವಶರಣರಿಗೆ ಸಮಾನವಾದ ಪೀಠವು ಸ್ತ್ರೀಯರಿಗೆ ಏರ್ಪಟ್ಟಿದ್ದಲ್ಲದೆ ಅಕ್ಕಮಹಾದೇವಿಯಂತಹ ಜೀವನ್ಮುಕ್ತೆಗೆ ಮಹತ್ತರವಾದ ಅಗ್ರಸ್ಥಾನವು ಕೊಡಲ್ಪಟ್ಟಿತು. ಹತ್ತೊಂಬತ್ತನೆಯ ಶತಮಾನಾಂತ್ಯದಲ್ಲಿ ಪ್ಯಾಂಕ್ ಹರ್ಸ್ಟ್ ( Pank hurst ), ಆನಿ ಬೆಸೆಂಟ, ಮಾರಿ ಸ್ಟೋಪ್ಸ ಮೊದಲಾದ ಮಾನಿನಿಯರು ನಡಸಿದ ಸ್ತ್ರೀಮುಕ್ತಿ ಚಳವಳಿಯನ್ನು ಅನುಭವ ಮಂಟಪದ ಪ್ರಮುಖರು ಹದಿಮೂರನೆಯ ಶತಮಾನದಲ್ಲಿಯೇ ನಡಸಿದರು. ಲೈಂಗಿಕ ಸುಖಾನುಭವಕ್ಕೋಸ್ಕರ ಈ ಬಗೆಯ ವಿಭೇದವು ರೂಢಿಗೆ ಬಂದು ಅದರ ಹಿನ್ನೆಲೆಯಾಗಿ ಪುರುಷನ ದಬ್ಬಾಳಿಕೆಯು ಆರಂಭವಾಯಿತೆಂಬ ಅಂಶವನ್ನು ಶಿವಶರಣರು ಚೆನ್ನಾಗಿ ಮನಗಂಡಿದ್ದರು. ಪ್ರಭುದೇವರು ಈ ಮಾತನ್ನೇ " ಸತಿಪತಿಯೆಂಬ ಅಂಗಸುಖ ಹಿಂಗಿ ಲಿಂಗವೇ ಪತಿಯಾದ ಬಳಿಕ ಸತಿಗೆ ಪತಿಯುಂಟೇ ? ಪತಿಗೆ ಸತಿಯುಂಟೇ ? " ಎಂದು ಕೇಳಿದ್ದಾರೆ. " ಹೆಣ್ಣು ಹೆಣ್ಣಲ್ಲ, ಹೆಣ್ಣು ರಾಕ್ಷಸಿಯಲ್ಲ, ಹೆಣ್ಣು ಪ್ರತ್ಯಕ್ಷ ಕಪಿಲಸಿದ್ಧ ಮಲ್ಲಿಕಾರ್ಜುನ. " ಕೂಡಿದ ಹೆಣ್ಣನ್ನು ಜತೆಯಲ್ಲಿ ಒಯ್ಯದವನ ಭಕ್ತಿ ಭಕ್ತಿಯಲ್ಲ ಎಂದು ಹೇಳಿದರು.

> " ಸತಿಪತಿಗಳೊಂದಾದ ಭಕ್ತಿ ಹಿತವಾಗಿಪ್ಪುದು ಶಿವಂಗೆ. ಸತಿಪತಿಗಳೊಂದಾಗದವನ ಭಕ್ತಿ ಅಮೃತದೊಳು ವಿಷ ಬೆರಿಸಿದಂತೆ ಕಾಣಾ ರಾಮನಾಥಾ. "

ಬಸವಣ್ಣನವರು ಪರವಧುವನ್ನು ಮಹಾದೇವಿಯೆಂದು ಕಾಣುತ್ತಿದ್ದುದಲ್ಲದೆ, ತಮ್ಮನ್ನೇ ಹೆಣ್ಣೆಂದೂ ಈಶ್ವರನನ್ನೇ ಪತಿಯೆಂದೂ ಭಾವಿಸಿಕೊಂಡು ಸ್ತ್ರೀ ಜನಾಂಗಕ್ಕೆ ಹೆಚ್ಚಿನ ಸನ್ಮಾನವನ್ನು ಸಲ್ಲಿಸಿದರು. ವೀರ ವಿರಾಗಿನಿಯಾಗಿದ್ದ ಮಹಾದೇವಿಯಕ್ಕಗಳಂತಹ ಶಿವಶರಣೆಯರು ನಾಮಮಾತ್ರವಾದ ತಮ್ಮ ಲೈಂಗಿಕ ದೌರ್ಬಲ್ಯವನ್ನು ನೀಗಿ ತಮ್ಮ ವೈರಾಗ್ಯದ ' ಗಂಡಸುತನ ' ವನ್ನು ಸಾರಿದರು.



CC-0. Jangamwadi Math Collection, Varanasi. An eGangotri Initiative

" ಕಾಮಾರಿಯ ಗೆಲಿವೆನು ಬಸವ ನಿಮ್ಮ ದಯದಿಂದ. ಸೋಮಧರನ ಹಿಡಿತಪ್ಪೆನು ಬಸವ ನಿಮ್ಮ ಕೃಪೆಯಿಂದ. ನಾಮದಲ್ಲಿ ಹೆಂಗುಸೆಂಬ ಹೆಸರಾದರೇನು ? ಭಾವಿಸಲು ಗಂಡುರೂಪು. ಅತಿಕಾಮಿ ಚೆನ್ನಮಲ್ಲಿಕಾರ್ಜುನಂಗೆ ತೊಡರಿಕ್ಕಿ ಎರಡುವರಿಯದೆ ಕೂಡಿದೆನು ಬಸವ ನಿಮ್ಮ ಕೃಪೆಯಿಂದ.

೬

ಮನೋಭೂಮಿಕೆಯನ್ನು ಇಂತು ಶುಚಿಗೊಳಿಸಿಕೊಂಡ ಶರಣರು ಪ್ರಗತಿಪಥದಲ್ಲಿ ಬಹಳ ಮುಂದುವರಿದಂತೆಯೇ ಆಯಿತು. ಈ ಮುಕ್ತಿಯಾತ್ರೆ ಸುಗಮವೂ ಶ್ರೇಯಃಪ್ರದವೂ ಆಗುವಂತೆ ಶಿವಶರಣರು 'ಷಟ್‌ಸ್ಥಲ'ಗಳನ್ನು ನಿಯೋಜಿಸಿ ತಮ್ಮ ಧರ್ಮತತ್ತ್ವ ಶಾಸ್ತ್ರೋಕ್ತವಾಗುವಂತೆ ಮಾಡಿದರು. ಷಟ್‌ಸ್ಥಲ ಮೂರ್ತಿಗಳಾಗಿದ್ದ ಚೆನ್ನಬಸವಣ್ಣನವರಿಂದ ಅಧಿಕೃತರಿಗೆ ದೀಕ್ಷೆ ದೊರಕುತ್ತಿತ್ತು. ಬಸವಣ್ಣನವರು, ಅಲ್ಲಮ ಪ್ರಭುಗಳು, ಸಿದ್ಧರಾಮದೇವರು, ಮಹಾದೇವಿ ಯಕ್ಕಗಳು ಸಾಧಕರ ಕೈ ಹಿಡಿದು ಯಾರು ಯಾರನ್ನು, ಎಲ್ಲಿ ಎಲ್ಲಿ ಮುಟ್ಟಿಸಬೇಕೋ, ಅಲ್ಲಿ ಅಲ್ಲಿಗೆ ಒಯ್ದು ಮುಟ್ಟಿಸುತ್ತಿದ್ದರು. ಇದರಿಂದ 'ಅನುಭವ ಮಂಟಪ'ವು ಕೇವಲ ಜ್ಞಾನ, ಪಾಂಡಿತ್ಯ ಗಳಿಂದ ಕೊಬ್ಬಿದ ಕೆಲವು ಪಂಡಿತರ ವಾದ ಸಂತೆಯಾಗದೆ ಸಜೀವ ಸಾಧಕರ ಒಂದು ಪ್ರಯೋಗ ಕ್ಷೇತ್ರವಾಯಿತು. ದಿದೃಕ್ಷುಗಳೂ, ಜಿಜ್ಞಾಸುಗಳೂ, ಜ್ಞಾನ ಭಿಕ್ಷುಗಳೂ, ಭಕ್ತಿ ಮಾರ್ಗಾನು ಯಾಯಿಗಳೂ, ಉತ್ಕಟ ಯೋಗಿಗಳೂ ಎಲ್ಲರೂ ನೆರೆಯಲು ಅನುವಾಯಿತು.

ಈ ಮಹಾ ಮಥನದಿಂದ ಅಮೃತ ಸದೃಶವಾದ ಸಾಹಿತ್ಯವು ಹುಟ್ಟಿತು. ಶಿವಶರಣ ಶರಣೆ ಯರ ವಚನಗಳೇ ಸಾಹಿತ್ಯದ ಒಂದಮೌಲ್ಯ ರಸಘಟ್ಟಿಯಾದುದಲ್ಲದೆ, ಅವರ ವಚನ ಹಾಗೂ ಜೀವನ ಸ್ಫೂರ್ತಿಯಿಂದ ಹರಿಹರ, ರಾಘವಾಂಕ, ಚಾಮರಸ, ವಿರೂಪಾಕ್ಷ ಪಂಡಿತ, ಷಡಕ್ಷರಿ, ನಿಜಗುಣ ಶಿವಯೋಗಿ ಮೊದಲಾದ ಕವಿ ಪುಂಗವರು ಕನ್ನಡ ಸಾಹಿತ್ಯವನ್ನು ತಮ್ಮ ಕೃತಿರತ್ನ ಗಳಿಂದಲಂಕರಿಸಲು ಸಹಾಯವಾಯಿತು. ಅನುಭವ ಮಂಟಪದ ಕಾಲದಿಂದ ಐದು ಶತಮಾನಗಳಾ ನಂತರ ಬಂದ ಸರ್ವಜ್ಞ ಕವಿಯು ವಚನಕಾರರ ಮಾತುಗಳನ್ನು ಇದ್ದಂತೆಯೇ ಉಪಯೋಗಿಸಿ ಕೊಂಡಿರುವುದೂ ಇಂದಿಗೂ ಕನ್ನಡಿಗರ ಜೀವನದ ಹಾಸುಹೊಕ್ಕಾಗಿ ವಚನಕಾರರ ನುಡಿಗಳು, ಉಪಮೆಗಳು, ಪ್ರಯೋಗಗಳು ಬಳಕೆಯಲ್ಲಿರುವುದೂ ಅವರ ಕೃತಿಯ ಜೀವಂತತೆಯ ಸಲ್ಲಕ್ಷಣ ಗಳಾಗಿವೆ. ವಚನಕಾರರು ಕನ್ನಡ ಸಾಹಿತ್ಯಕ್ಕೆ ಮಾಡಿರುವ ಉಪಕಾರ, ಸಲ್ಲಿಸಿರುವ ಸೇವೆ ಅನರ್ಘ್ಯವಾದುದು. ಕನ್ನಡ ತಾಯಿಯನ್ನು ಭಾವ, ಭಾಷೆಗಳೆರಡರ ಬಂಧನದಿಂದ ಬಿಡುಗಡೆ ಮಾಡಿ ತಾಯಿಯ ಸಿರಿರೂಪಕ್ಕೆ ತಕ್ಕುದಾದ ನೂತನ ಉಡುಗೆತೊಡಿಗೆಗಳಿಂದ ಅಲಂಕರಿಸಿದ ಕೀರ್ತಿ ವೀರಶೈವ ವಚನಕಾರರಿಗೆ ಸಲ್ಲುತ್ತದೆ.

೭

ವೀರಶೈವ ಅನುಭಾವಿಗಳು, ತಮ್ಮ ಜೀವನದ ಜೇನುಕೊಡವನ್ನು 'ಅನುಭವ ಮಂಟಪ' ದಲ್ಲಿ ಶೇಖರಿಸಿ, ಜೇನು ಹೊಂಡವನ್ನೇ ನಿರ್ಮಾಣ ಮಾಡಿಬಿಟ್ಟರು. ಇದರಲ್ಲಿ ಎಲ್ಲ ಪುಷ್ಪಗಳ ಸೌರಭ್ಯ,ಪರಿಮಳ ಸವಿಗಳು ಬೆರೆತುಕೊಂಡಿವೆ.ಎಲ್ಲ ಧರ್ಮಗಳೂ ಒಂದೊಂದು ಜಾಡನ್ನು ಹಿಡಿಯು



CC-0. Jangamwadi Math Collection, Varanasi. An eGangotri Initiative

ಹೋಗಿ, ಕಂಡ ಸತ್ಯದ ಕೇಂದ್ರುವನ್ನೇ ವೀರಶೈವ ಧರ್ಮವು ಅರಿಸಿತು. ಇದು ಎಲ್ಲ ಧರ್ಮಗಳ ಸಾರವಾಯಿತು. ಅಂತೇ ವಿಶ್ವಧರ್ಮವೆನಿಸಿಕೊಳ್ಳಲು ಪೂರ್ಣ ಅರ್ಹತೆಯನ್ನು ಪಡೆಯಿತು. ವಿಶ್ವಧರ್ಮವನ್ನೇ ಗುರಿಯನ್ನಾಗಿಟ್ಟುಕೊಂಡು ಮಧ್ಯಯುಗದಲ್ಲಿ ಅರೇಬಿಯಾ, ಪರ್ಶಿಯಾ ದೇಶಗಳಲ್ಲಿ 'ಸೂಫಿ ಧರ್ಮ' ತಲೆಯೆತ್ತಿತ್ತು. ಆದರೆ ಇಸ್ಲಾಮಿನ ಕಟು ಧರ್ಮೀಯತೆಯನ್ನು ತಾಳಲಾರದೆ ಅದು ಒಂದು 'ಮತ'ದ ಸ್ವರೂಪ ತಾಳಿ ಅಲ್ಲಿ ಇಲ್ಲಿ ತಲೆಮರೆಸಿಕೊಳ್ಳಬೇಕಾಯಿತು. ಹದಿನಾರನೆಯ ಶತಮಾನದಲ್ಲಿ ಅಕ್ಬರ್ ಸ್ಥಾಪಿಸಲೆತ್ನಿಸಿದ 'ದೀನ್ ಇ ಇಲಾಹಿ' ಎನ್ನುವ ವಿಶ್ವ ಧರ್ಮವೂ ಇದೇ ಗತಿಯನ್ನು ಪಡೆಯಿತು. ಅದು ಮುಂದಿನ ತಲೆಮಾರಿನತನಕ ಕೂಡ ಹೋಗಲಿಲ್ಲ. ಆದರೆ ವೀರಶೈವ ಧರ್ಮ ಜೀವಂತ ಧರ್ಮವಾಗಿ ಉಳಿದಿದೆ. ಅನುಭವ ಮಂಟಪದ ಮಹಾನುಭಾವಿಗಳ ಕೃತಿಗಳು ನಾಡವರ ಕೊರಳಲ್ಲಿ ಮುಕ್ತಾಮಣಿಗಳಾಗಿ ರಾರಾಜಿಸುತ್ತಿವೆ. ಇಂದಿನ ಜಗತ್ತಿನ ಧರ್ಮ ಹಾಗೂ ಜೀವನ ಸಮಸ್ಯೆಗಳಿಗೆ ತನ್ನಲ್ಲಿ ನಿವಾರಣೋಪಾಯವನ್ನು ಧರಿಸಿದೆಯೋ ಏನೋ? ಜಗತ್ತಿನ ಕಲ್ಯಾಣಕ್ಕೆ ಅವಶ್ಯಕವಾದ ಬೆಳಕನ್ನು ನೀಡುವ ಸೌಭಾಗ್ಯವನ್ನು ಅನುಭವ ಮಂಟಪದ ಶಿವಾನುಭಾವಿಗಳು ಕನ್ನಡನಾಡಿಗೆ ಒದಗಿಸಿಕೊಟ್ಟರ ಬಾರದೇತಕ್ಕೆ?

---



CC-0. Jangamwadi Math Collection, Varanasi. An eGangotri Initiative



# ಯೋಗವೂ ವೀರಶೈವರೂ

EACH soul is potentially divine. The goal is to manifest this divine within, by controlling nature, external and internal. Do this either by work, or worship, or psychic control, or by philosophy, or by one, or more, or all of these- and be free.

—SWAMI VIVEKANANDA.

ಹಿಂದೂ ಧರ್ಮದ ಹೆಚ್ಚಳವನ್ನು ಸಾರುವ ಶಾಸ್ತ್ರಗಳಲ್ಲಿ ಯೋಗವು ಒಂದು. ಯೋಗ ಶಬ್ದದ ವ್ಯಾಖ್ಯೆಯನ್ನು ಬೇರೆ ಬೇರೆ ಜನರು ಬೇರೆ ಬೇರೆ ಪ್ರಕಾರ ಮಾಡಿರುವರು.[೧] ಮನಸ್ಸಿನ ಚಲನವಲನವನ್ನು ತಡೆದು, ಒಂದೇ ವಿಷಯದ ಮೇಲೆ ಅದನ್ನು ಸ್ಥಿರಪಡಿಸಿ, ಅದೇ ವಿಷಯದ ಧ್ಯಾನದಲ್ಲಿ ತಲ್ಲೀನರಾಗಿ, ಬಾಹ್ಯವ್ಯವಹಾರವನ್ನು ಮರೆತುಬಿಡುವುದೂ, ಮತ್ತು ಧ್ಯಾನವನ್ನೂ ವಿಷಯ ತನ್ಮಯತೆಯನ್ನೂ ಬಲಿಸುವುದಕ್ಕಾಗಿ ಕುಂಭಕ, ಪೂರಕ, ರೇಚಕಗಳ ದ್ವಾರಾ ಸ್ಥೂಲ ಶರೀರದೊಳಗಿನ ಮಲಿನತ್ವೆಯನ್ನು ನಾಶಮಾಡಿ ವ್ಯಾಧಿಗಳನ್ನು ಗೆಲಿಯುವುದೂ ಯೋಗದ ಉದ್ದೇಶಗಳು. ಮೇಲಾಗಿ ಯೋಗದಿಂದ ಅಂತರಂಗ ಬಹಿರಂಗಗಳ ಶುದ್ಧಿಯಾಗುವದಲ್ಲದೆ ಈಶ್ವರ ಧ್ಯಾನವು ಬಲಪಡುವುದು.

ಆವಕಾಲದಲ್ಲಿ ಯೋಗವು ಉದ್ಭವಿಸಿತೆಂಬುದನ್ನೂ ಅದರ ಉತ್ಪಾದಕರಾರೆಂಬದನ್ನೂ ಖಂಡಿತವಾಗಿ ಈಗ ಹೇಳಲು ಸಾಧ್ಯವಿಲ್ಲ. ಪ್ರಾಚೀನ ಗ್ರಂಥಗಳಾದ ಉಪನಿಷತ್ತುಗಳಲ್ಲಿ ಅಲ್ಲಲ್ಲಿ ಯೋಗಕ್ಕೆ ಸಂಬಂಧಿಸಿದ ವಾಕ್ಯಗಳು ಕಂಡುಬರುವವು. ಬೌದ್ಧರ ಪ್ರಾಚೀನ ಮತ್ತು ಪವಿತ್ರವಾದ ಪುಸ್ತಕಗಳಲ್ಲಿ ಅನೇಕ ಕಡೆಗೆ ಯೋಗಶಾಸ್ತ್ರದ ವರ್ಚಸ್ವವೂ ಅನುಕರಣೆಯೂ ಕಂಡುಬರುವವು.[೨] ಭಗವಾನ್ ಬುದ್ಧದೇವನು ಪೂರ್ವಾಶ್ರಮದಲ್ಲಿ ಅತಿ ಕಠೋರವಾದ

---

೧ " ಯೋಗಶ್ಚಿತ್ತವೃತ್ತಿಃ ನಿರೋಧಃ " ॥ ಯೋಗಸೂತ್ರ ೧. ೨. " ಯೋಗಃ ಕರ್ಮಸು ಕೌಶಲಮ್ " ಭಗವದ್ಗೀತಾ ೨. ೫೦. " ಸಿದ್ಧ್ಯಸಿದ್ಧ್ಯೋಃ ಸಮೋ ಭೂತ್ವಾ ಸಮತ್ವಂ ಯೋಗ ಉಚ್ಯತೇ " ಭಗವದ್ಗೀತಾ ೨. ೪೮.

೨ From Yoga Buddhism borrowed the conception of a carefully planned regulation of physical life in order to attain the desired end. —Dr. A. B. Keith Buddhist Philosophy in India and Ceylon.



CC-0. Jangamwadi Math Collection, Varanasi. An eGangotri Initiative

ಯೋಗಸಾಧನೆಯನ್ನೇ ಮಾಡಿದನೆಂದು ಪ್ರತೀತಿಯಿದೆ.[೩] ಇಷ್ಟೇ ಅಲ್ಲ; ಆತನು ಕೈಕೊಂಡ ಅತಿ ಕಟುತರ ಯೋಗದ್ಯೋತಕವೂ, ಕೇವಲ ಅಸ್ಥಿಪಂಜರಮಯವೂ ಆದ ಆತನ ಶಿಲಾ ಪ್ರತಿಮೆಗಳೂ ಇನ್ನೂ ಅನೇಕ ಕಡೆಗೆ ದೊರೆಯುವವು.[೪] ಗ್ರೀಕ ಅರಸನಾದ ಅಲೆಕ್ಝಾಂಡರನು ಸಮಗ್ರ ಪೃಥ್ವಿಯನ್ನು ಗೆಲ್ಲಬೇಕೆಂಬ ಮಹತ್ವಾಕಾಂಕ್ಷೆಯಿಂದ ಕ್ರಿ. ಶ. ಪೂ. ೩೨೭ರಲ್ಲಿ ನಮ್ಮ ದೇಶವನ್ನೊಳಸುಗ್ಗಿದಾಗ ಅನೇಕ ಯೋಗಿಗಳನ್ನು ಕಂಡಿದ್ದನಂತೆ. ಇವೆಲ್ಲ ಕಾರಣಗಳಿಂದ ಯೋಗವು ಪ್ರಾಚೀನತಮವೆಂಬುದು ನಿರ್ವಿವಾದವಾದ ಮಾತು.

ಆದರೂ ಆಯಾ ಕಾಲಗಳಲ್ಲಿ ಅಂದರೆ ಉಪನಿಷತ್ ಮತ್ತು ಬೌದ್ಧಕಾಲಗಳಲ್ಲಿ ಯೋಗವು ಅಸ್ತಿತ್ವದಲ್ಲಿದ್ದರೂ ಅನಿಶ್ಚಿತ ಸ್ವರೂಪ ( unsystematised form ) ದಲ್ಲಿಯೇ ಇತ್ತೆಂದೂ, ಅದಕ್ಕೆ ನಿಶ್ಚಿತಸ್ವರೂಪವನ್ನು ಕೊಟ್ಟು ಷಡ್ದರ್ಶನಗಳಲ್ಲೊಂದಾಗುವಂತೆ ಮಾಡಲು ಯತ್ನಿಸಿದವರಲ್ಲಿ ಯೋಗಸೂತ್ರಕಾರರೇ ಮೊದಲನೆಯವರೆಂದೂ ಕೆಲವು ವಿದ್ವಾಂಸರ ಮತವು. ಯೋಗಸೂತ್ರಕ್ಕೂ ಮೊದಲಿನವೆಂದು ಗಣಿಸಲ್ಪಡುವ ಗ್ರಂಥಗಳಲ್ಲಿ ಯೋಗ ಶಬ್ದವನ್ನು ನಿಯಮಿತವಾದ ಒಂದೇ ಅರ್ಥದಲ್ಲಿ ಉಪಯೋಗಿಸಿಲ್ಲವೆಂದೂ ಯೋಗವು ಷಡ್ದರ್ಶನಗಳಲ್ಲೊಂದು ಮಹತ್ವದ ಸ್ಥಾನವನ್ನಾಕ್ರಮಿಸಿದ ನಂತರವೇ "ಯೋಗಶ್ಚಿತ್ತವೃತ್ತಿನಿರೋಧಃ" ಎಂಬ ವ್ಯಾಖ್ಯೆಯು ಸರ್ವತ್ರ ಪ್ರಚಲಿತವಾಯಿತೆಂದೂ ಅವರ ಹೇಳಿಕೆಯು. ಪ್ರಸ್ಥಾನತ್ರಯಿಗಳಲ್ಲೊಂದಾದ ಭಗವದ್ಗೀತೆಯಲ್ಲಿಯೂ ಕೂಡ ಯೋಗ ಶಬ್ದವನ್ನು ಭಕ್ತಿ, ಜ್ಞಾನ, ಕರ್ಮ ಮೊದಲಾದ ಶಬ್ದಗಳೊಡನೆ ಜೋಡಿಸಿ ಭಕ್ತಿಯೋಗ, ಜ್ಞಾನಯೋಗ, ಕರ್ಮಯೋಗವೆಂಬುದಾಗಿ ಉಪಯೋಗಿಸಿರುವುದು ಅರಿದಾದ ಮಾತಲ್ಲ.[೫] ಯೋಗದರ್ಶನದ ಅನೇಕಾಂಶಗಳು ಭಗವದ್ಗೀತಾಕಾರರಿಗೆ ಗೊತ್ತಿದ್ದವೆಂಬುದು ನಿಜವು;[೬] ಆದುದರಿಂದ ಮೇಲೆ ಸೂಚಿಸಿದ ಕೆಲವು ವಿದ್ವಾಂಸರ ಮತವು ಅನಾದರಣೀಯವಲ್ಲ.

ಯೋಗದರ್ಶನದ ಪಿತರೆಂದು ಹೆಸರಾದ ಪತಂಜಲ ಮಹರ್ಷಿಗಳಿಂದಿತ್ತಿತ್ತಲಾಗಿ ಯೋಗಶಾಸ್ತ್ರವು ಬಲು ವಿಪುಲವಾಗಿ ಬೆಳೆದು, ಅಣಿಮಾ, ಗರಿಮಾ, ಲಘಿಮಾ, ಮಹಿಮಾ ಮೊದಲಾದ ಅಷ್ಟಸಿದ್ಧಿಗಳನ್ನು ಸಂಪಾದಿಸುವ ವಿದ್ಯೆಯೆಂದೂ, ಸಿದ್ಧಿಗಳನ್ನು ತಿರಸ್ಕರಿಸಿದರೆ ಈಶ್ವರ ಸಿದ್ಧಿಯ ಮಾರ್ಗವೆಂದೂ ಗಣಿಸಲ್ಪಡಹತ್ತಿತು. ಅದರ ಓಘವು ಇಷ್ಟಕ್ಕೆ ನಿಲ್ಲಲಿಲ್ಲ. ಅನುಭವದಿಂದ ಕಂಡುಹಿಡಿಯಲಸಾಧ್ಯವಾದ ಅನೇಕ ವಿಷಯಗಳು ಬರಬರುತ್ತ ಅದರಲ್ಲಿ ಸೇರಹತ್ತಿ ಯೋಗನೆಂದರೆ ಆರಿಗೂ ತಿಳಿಯದಂಥ ಮತ್ತು ತಿಳಿಹೇಳದಂಥ ಒಂದು ವಿದ್ಯೆ (mysticism) ಯಾಯಿತು. ಇತ್ತಿತ್ತಲಾಗಿ ಆಗಿಹೋದ ಗ್ರಂಥಕಾರರಂತೂ ತಮ್ಮ ಅಸಂಗತ ಮತ್ತು ಅಸಂದಿಗ್ಧವಾದ ಬರಹಗಳಿಂದ ಯೋಗ ವಿದ್ಯೆಯಲ್ಲಿದ್ದ ಅಲ್ಪ ಸ್ವಲ್ಪ ನಿಷ್ಠೆಯನ್ನೂ ನಂಬುಗೆಯನ್ನೂ ಕಳೆದು ಬಿಟ್ಟಿರುವರು. ಸ್ವಾಮಿ ವಿವೇಕಾನಂದರ ಆರೋಪವಾದರೂ ಹೀಗೇ

೩ ಅಶ್ವಘೋಷನ ಬುದ್ಧಚರಿತೆಯನ್ನು ನೋಡಬೇಕು.

೪ Vide a plate in the Ancient India by V. A. Smith.

೫ ಜ್ಞಾನಯೋಗೇನ ಸಾಂಖ್ಯಾನಾಂ ಕರ್ಮಯೋಗೇನ ಯೋಗೀನಾಂ । ಭಗವದ್ಗೀತಾ ೩. ೩. ಬುದ್ಧಿಯೋಗ ಭ. ಗೀ. ೨. ೪೯. ಬ್ರಹ್ಮಯೋಗ ೫. ೨೧ ಇತ್ಯಾದಿ.

೬ ಭಗವದ್ಗೀತಾ ೫. ೧೩; ೬. ೧೦–೧೫.



CC-0. Jangamwadi Math Collection, Varanasi. An eGangotri Initiative

ಇರುವದು.[೭] ಗ್ರಂಥಕಾರರು ಹೆಚ್ಚು ಹಳಬರಿದ್ದಷ್ಟು ಹೆಚ್ಚು ತಥ್ಯಾಂಶಗಳು ಅವರ ಗ್ರಂಥಗಳಲ್ಲಿ ಕಂಡುಬರುವವು.

ಯೋಗದಲ್ಲಿ ಯಮ,[೮] ನಿಯಮ,[೯] ಆಸನ,[೧೦] ಪ್ರಾಣಾಯಾಮ,[೧೧] ಪ್ರತ್ಯಾಹಾರ,[೧೨] ಧಾರಣ,[೧೩] ಧ್ಯಾನ[೧೪] ಮತ್ತು ಸಮಾಧಿ[೧೫] ಗಳೆಂದು ಎಂಟು[೧೬] ಅಂಗಗಳಿರುವವು. ಇವುಗಳಲ್ಲಿ ಮೊದಲಿನವೆರಡು ಸದಾಚಾರ ಮತ್ತು ನೀತಿಯನ್ನು ಬೆಳೆಯಿಸುವ ಮಾರ್ಗಗಳು. ಆಧ್ಯಾತ್ಮಿಕೋನ್ನತಿಗೆ ನೀತಿಯೇ ತಳಹದಿಯು. ನಮ್ಮ ಭೌತಿಕ ವ್ಯವಹಾರದಲ್ಲಿಯೂ ಕೂಡ ನೀತಿಯನ್ನು ಬಿಟ್ಟರೆ ಬಾಳುವೆಯೇ ಹಾಳು. ಮೂರನೆಯದಾದ ಆಸನವು ಶಾರೀರಕ ಮತ್ತು ಮಾನಸಿಕ ಚಲನವಲನೆಗಳನ್ನು ಸರಿಯಾಗಿ ಕಾಯ್ದಿಡಲು ಅನುಕೂಲವಾಗುವುದು. ಯೋಗವನ್ನು ಬಲಿಸುತ್ತ ಹೋದಂತೆ ಸಾಕಷ್ಟು ಕಾಲ ಪರಿಶ್ರಮವಿಲ್ಲದೆ ಒಂದೇ ಸ್ಥಿತಿಯಲ್ಲಿರುವುದಕ್ಕೋಸುಗ ಇದರ ಉಪಯೋಗವು. ಪ್ರಾಣಾಯಾಮದಿಂದ ಶರೀರದೊಳಗಿನ ಮಲಿನತೆಯನ್ನು ಶ್ವಾಸೋಚ್ಛ್ವಾಸದ ದ್ವಾರಾ ಹೊರಗೆ ಹಾಕಲು ಸಹಾಯವಾಗುವುದು. ಶರೀರದಲ್ಲಿ ಮಲಿನತೆಯನ್ನಿರಗೊಟ್ಟರೆ ವ್ಯಾಧಿಗಳಿಗೀಡಾಗುವುದಲ್ಲದೆ ಮನಸ್ಸೂ ಮಲಿನವಾಗುವುದು. ಮನಸ್ಸು ಮಲಿನವಾಗಿದ್ದರೆ ಯೋಗವು ಎಂದಿಗೂ ಸಾಧ್ಯವಾಗಲಾರದು. ಪ್ರತ್ಯಾಹಾರದಿಂದ ಶರೀರವು ಬಲು ಸ್ಥೂಲವಾಗದಂತೆಯೂ ಬಲು ಕ್ಷೀಣವಾಗದಂತೆಯೂ ಇಡಲು ಬರುವುದು. ಉಳಿದ ಅಂಗಗಳಾದ ಧಾರಣ, ಧ್ಯಾನ, ಸಮಾಧಿಗಳು ಮನಸ್ಸಿಗೇ ಹೆಚ್ಚಾಗಿ ಸಂಬಂಧಿಸಿರುವವು.

---

೭ Mystery-mongering weakens the human brain. It has well nigh destroyed Yoga one of the greatest of sciences. From the time it was discovered, more than four thousand years ago, Yoga was perfectly delineated, formulated and preached in India. It is a striking fact that the more modern the commentator the greater the mistakes he makes, while the more ancient the writer the more rational he is. Most of the modern writers talk of all sorts of mystery. Thus Yoga fell into the hands of a few persons who made it a secret, instead of letting the full blaze of day light and reason fall upon it. They did so that they might have the powers to themselves.
—Raja-Yoga P. 10.

೮ ಅಹಿಂಸಾ ಸತ್ಯಾಸ್ತೇಯ ಬ್ರಹ್ಮಚರ್ಯಾಪರಿಗ್ರಹಾ ಯಮಾಃ ॥ ಯೋಗಸೂತ್ರ ೨. ೩೦.

೯ ಶೌಚ ಸಂತೋಷ-ತಪಃ-ಸ್ವಾಧ್ಯಾಯೇಶ್ವರಪ್ರಣಿಧಾನಾನಿ ನಿಯಮಾಃ ॥ ಯೋ. ಸೂ. ೨. ೩೨

೧೦ ಸ್ಥಿರಸುಖಮಾಸನಂ ॥ ಯೋ. ಸೂ. ೨. ೪೬.

೧೧ ತಸ್ಮಿನ್ ಸತಿ ಶ್ವಾಸಪ್ರಶ್ವಾಸಯೋರ್ಗತಿವಿಚ್ಛೇದಃ ಪ್ರಾಣಾಯಾಮಃ ॥ ಯೋ. ಸೂ. ೨. ೪೯.

೧೨ ಸ್ವಸ್ವವಿಷಯಾಸಂಪ್ರಯೋಗೇ ಚಿತ್ತಸ್ವರೂಪಾನುಕಾರ ಇವೇಂದ್ರಿಯಾಣಾಂ ಪ್ರತ್ಯಾಹಾರಃ ॥ ಯೋ. ಸೂ. ೨. ೫೪.

೧೩ ದೇಶಬಂಧಶ್ಚಿತ್ತಸ್ಯ ಧಾರಣಾ ॥ ಯೋ. ಸೂ. ೩. ೧.

೧೪ ತತ್ರ ಪ್ರತ್ಯಯೈಕತಾನತಾ ಧ್ಯಾನಮ್ ॥ ಯೋ. ಸೂ. ೩. ೨.

೧೫ ತದೇವಾರ್ಥಮಾತ್ರನಿರ್ಭಾಸಂ ಸ್ವರೂಪಶೂನ್ಯಮಿವ ಸಮಾಧಿಃ ॥ ಯೋ. ಸೂ. ೩. ೩.

೧೬ ಯಮ ನಿಯಮಾಸನ ಪ್ರಾಣಾಯಾಮ ಪ್ರತ್ಯಾಹಾರ ಧಾರಣ ಧ್ಯಾನ ಸಮಾಧಯೋಽಷ್ಟಾಂಗಾನಿ ॥ ಯೋ. ಸೂ. ೨. ೨೯.



CC-0. Jangamwadi Math Collection, Varanasi. An eGangotri Initiative

ಯೋಗ ಶಾಸ್ತ್ರಜ್ಞರು ಅಷ್ಟಾಂಗಗಳಲ್ಲಿ ಅನೇಕ ಭಾಗಗಳನ್ನು ಮಾಡಿ ಯೋಗದರ್ಶನವನ್ನು ಅತಿ ವಿಸ್ತಾರವಾದ ಶಾಸ್ತ್ರಗಳಲ್ಲೊಂದನ್ನಾಗಿ ಮಾಡಿರುವರು.[೧೭] ಪತಂಜಲ ಮಹರ್ಷಿಗಳು ಇವುಗಳ ವ್ಯಾಖ್ಯೆಯನ್ನು ಹೇಗೆ ಮಾಡಿರುವರೆಂಬುದನ್ನು ಕೆಳಗಿನ ಟಿಪ್ಪಣೆಗಳಿಂದ ಕಂಡುಕೊಳ್ಳ ಬಹುದು.[೧೮] ಈ ಎಂಟು ಅಂಗಗಳು ಅತಿ ಮಹತ್ವವಾದುವು. ಇವು ಯೋಗಸಾಧನೆಯ ಎಂಟು ಪಾವಟಿಗೆಗಳೆಂದರೂ ಅಡ್ಡಿಯಿಲ್ಲ. ಇವುಗಳ ಸಿದ್ಧಿಯಿಂದಲೇ ಶಾರೀರಕ ಮತ್ತು ಮಾನಸಿಕ ವೃತ್ತಿಗಳನ್ನು ಸ್ವಾಧೀನದಲ್ಲಿಟ್ಟುಕೊಳ್ಳಲು ಸಾಧ್ಯವಿದೆ.

ಯೋಗವನ್ನು ಬಲ್ಲವರು ಯೋಗವನ್ನು ಮಂತ್ರಯೋಗವೆಂದೂ ಲಯಯೋಗವೆಂದೂ ಹಠಯೋಗವೆಂದೂ ರಾಜಯೋಗವೆಂದೂ ನಾಲ್ಕು ವಿಧವಾಗಿ ಹೇಳುವರು.[೧೯] ಓಂಕಾರ ಮೊದಲಾದ ಮಂತ್ರಗಳನ್ನು ಜಪಿಸುವವರು ಮಂತ್ರಯೋಗಿಗಳೆಂದೂ,[೨೦] ಮನೋಮಾರುತ ನೊಡನೆ ಕೂಡಿದ ಚಿತ್ತವನ್ನು ಆತ್ಮಧ್ಯೇಯದಲ್ಲಾಗಲೀ ಅಥವಾ ನಾದದಲ್ಲಾಗಲೀ ತಲ್ಲೀನವನ್ನಾಗಿ ಮಾಡುವವರು ಲಯಯೋಗಿಗಳೆಂದೂ,[೨೧] ಅಷ್ಟಾಂಗ ಮಾರ್ಗಗಳಿಂದಲೂ, ಮುದ್ರಾ ಕರಣ ಬಂಧನಗಳಿಂದಲೂ ಅಥವಾ ಕುಂಭಕದಿಂದಲೂ ವಾಯುವನ್ನು ಸ್ವಾಧೀನಪಡಿಸಿಕೊಂಡವರು ಹಠಯೋಗಿಗಳೆಂದೂ,[೨೨] ಮನೋವೃತ್ತಿಯಿಲ್ಲದವರೂ, ಜ್ಞಾನದಿಂದ ಬ್ರಹ್ಮ ಸಾಕ್ಷಾತ್ಕಾರವನ್ನು ಪಡೆದವರೂ ರಾಜಯೋಗಿಗಳೆಂದೂ,[೨೩] ಚನ್ನಸದಾಶಿವಯೋಗೀಂದ್ರರು ಹೇಳುವರು. ಇವೆಲ್ಲವುಗಳಲ್ಲಿ ರಾಜಯೋಗವೇ ಮಿಗಿಲಾದುದೆಂದು ಎಲ್ಲರ ಮತವು.[೨೪] ಎಲ್ಲ ದರ್ಶನಗಳ ಅಂತಿಮಧ್ಯೇಯವಾದ ಸದ್ವಸ್ತುವನ್ನು ಕಂಡು ಹಿಡಿಯಲು ಸರಿಯಾದ ಮತ್ತು ಸುಲಭಸಾಧ್ಯವಾದ ಮಾರ್ಗವನ್ನೂ ಮತ್ತು ಜೀವಿಯ ಅಂತರಂಗದ ಪರಿಸ್ಥಿತಿಯನ್ನೂ ಮತ್ತು ಅಂತಃಕರಣಗಳನ್ನು

---

೧೭ ಮುಂದಿನ ಗ್ರಂಥಕಾರರು "ಯಮ" ದಲ್ಲಿ ೫ ಭಾಗಗಳನ್ನೂ "ನಿಯಮ" ದಲ್ಲಿ ೫ ಭಾಗಗಳನ್ನೂ "ಆಸನ" ದಲ್ಲಿ ಅನೇಕ ಭಾಗಗಳನ್ನೂ ಕಲ್ಪಿಸಿರುವರು. ನಿಜಗುಣ ಶಿವಯೋಗಿಗಳು ತಮ್ಮ ವಿವೇಕಚಿಂತಾಮಣಿಯಲ್ಲಿ ೮೪ ಪ್ರಕಾರದ ಆಸನಗಳಿರುವವೆಂದು ಹೇಳಿರುವರು. ಇಂಥ ವಿಭಾಗಗಳು ಅವುಗಳ ವರ್ಣನೆ ಮತ್ತು ತತ್ವವಿವೇಚನ ಮೊದಲಾದವುಗಳಿಂದೊಡಗೂಡಿ ಯೋಗಶಾಸ್ತ್ರವು ವಿಪುಲವಾಗಿ ಬೆಳೆದದೆ.

೧೮ ಟಿಪ್ಪಣಿ ೮–೧೫ರ ವರೆಗೆ ನೋಡಿರಿ.

೧೯ ಮಂತ್ರೋ ಲಯೋ ಹಠೋ ರಾಜಯೋಗಶ್ಚೇತಿ ಚತುರ್ವಿಧಮ್ । ಶಿವಯೋಗಪ್ರದೀಪಿಕಾ ಪಟಲ ೧. ೪.

೨೦ ಏಕಾಕ್ಷರಂ ದ್ವ್ಯಕ್ಷರಂ ವಾ ಷಡಕ್ಷರಮಥಾಪಿ ವಾ । ಅಷ್ಟಾಕ್ಷರಂ ವಾ ಮೋಕ್ಷಾಯ ಮಂತ್ರಯೋಗೀ ಜಪೇತ್ಸದಾ ॥ ಶಿ. ಪ್ರ. ೧. ೫.

೨೧ ಯಸ್ಯ ಚಿತ್ತಂ ನಿಜಧ್ಯೇಯೇ ಮನಸಾ ಮರುತಾ ಸಹ । ಲೀನಂ ಭವತಿ ನಾದೇ ವಾ ಲಯಯೋಗೀ ಸ ಏವ ಹಿ ॥ ಶಿ. ಪ್ರ. ೧. ೬.

೨೨ ಭವೇದಷ್ಟಾಂಗ ಮಾರ್ಗೇಣ ಮುದ್ರಾಕರಣಬಂಧನೈಃ । ತಥಾ ಕೇವಲ ಕುಂಭೇ ವಾ ಹಠಯೋಗೀ ವಶಾನಿಲಃ ॥ ಶಿ. ಪ್ರ. ೧. ೭.

೨೩ ತ್ರಿಷು ಜ್ಞೇಯೇಷು ಯೋ ಬ್ರಹ್ಮ ಸಾಕ್ಷಾತ್ಕಾರಮ್ ಗಮಿಷ್ಯತಿ । ಜ್ಞಾನೇ ವಾಽಥ ಮನೋವೃತ್ತಿ ರಹಿತೋ ರಾಜಯೋಗವಿತ್ ॥ ಶಿ. ಪ್ರ. ೧. ೮.

೨೪ ಉತ್ತರೋತ್ತರವೈಶಿಷ್ಟ್ಯಾದ್ಯೋಗಶ್ಚತ್ವಾರ ಏವ ಹಿ । ತೇಷ್ವೇಕ ಏವ ಮುಖ್ಯೋಽಸೌ ರಾಜಯೋಗೋತ್ತಮೋತ್ತಮಃ ॥ ಶಿ. ಪ್ರ. ೧. ೯.



CC-0. Jangamwadi Math Collection, Varanasi. An eGangotri Initiative

ಪರಿಶೋಧಿಸುವ ಹಾದಿಯನ್ನೂ ರಾಜಯೋಗವು ತೋರಿಸುವುದು. ಲಯ, ಹಠ ಮೊದಲಾದವುಗಳಂತೆ ಶರೀರವನ್ನು ವಿಶೇಷವಾಗಿ ಸಣ್ಣಿಸದೆ ಮನೋವೃತ್ತಿಗಳನ್ನು ಸ್ವಾಧೀನಪಡಿಸಿಕೊಳ್ಳುವುದೇ ರಾಜಯೋಗದ ವಿಶಿಷ್ಟತೆ. ಮನಸ್ಸೇ ಮನುಷ್ಯನ ಬಂಧಕ್ಕೂ ಮೋಕ್ಷಕ್ಕೂ ಕಾರಣವಾದುದರಿಂದ ಅದನ್ನು ಅಧೀನದಲ್ಲಿಟ್ಟುಕೊಳ್ಳುವುದರಿಂದಲೇ ರಾಜಯೋಗದ ಹೆಚ್ಚಳವು. ರಾಜಯೋಗದಲ್ಲಿ ಸಾಂಖ್ಯ, ತಾರಕ, ಮತ್ತು ಅಮನಸ್ಕಗಳೆಂದು ಮೂರು ಭಾಗಗಳು.[೨೫]

ಆದಿಯಿಂದಲೂ ಶೈವಶಾಸ್ತ್ರಗಳು ಯೋಗಕ್ಕೆ ಅತಿಮಹತ್ವದ ಸ್ಥಾನವನ್ನು ಕೊಟ್ಟಿರುವುವು. ಯೋಗಸೂತ್ರಕಾರರಾದ ಪತಂಜಲ ಮಹರ್ಷಿಗಳು ಶೈವರೇ ಇದ್ದರೆಂದು ಪ್ರತೀತಿ. ಹಾಗಿದ್ದ ಪಕ್ಷದಲ್ಲಿ ಯೋಗದರ್ಶನದ ವರ್ಚಸ್ಸವು ಶೈವರ ಮೇಲಾದುದು ಅರಿದಲ್ಲ. ಶೈವರಿಗೆ ಪ್ರಮಾಣ ಗ್ರಂಥಗಳಾದ ಆಗಮಗಳಲ್ಲಿ ಪ್ರತಿಪಾದಿತವಾದ ಕ್ರಿಯಾ, ಚರ್ಯಾ, ಯೋಗ ಮತ್ತು ಜ್ಞಾನಗಳೆಂಬ ನಾಲ್ಕು ಪಾದಗಳಲ್ಲಿ ಯೋಗದ ಸ್ಥಾನವು ಜ್ಞಾನದ ನಂತರ ಬಂದಿದೆ. ದುರ್ದೈವದಿಂದ ಮಹತ್ವದ ಶೈವಾಗಮಗಳ ಅಭಾವದ ಮೂಲಕ ಶೈವಾಗಮಗಳಲ್ಲಿ ಪ್ರತಿಪಾದಿತವಾದ ಯೋಗಕ್ಕೂ ಯೋಗದರ್ಶನಕ್ಕೂ ಇರುವ ಸಾಮ್ಯವೈಷಮ್ಯಗಳನ್ನು ಕಂಡುಹಿಡಿಯುವುದು ಈಗ ಸಾಧ್ಯವಿಲ್ಲದಿದ್ದರೂ ಈಗ ದೊರೆಯುವ ಆಗಮಗಳ ತುಂಡುಗಳಿಂದ ಅವುಗಳಲ್ಲಿ ಯೋಗಕ್ಕಿರುವ ಮಹತ್ವವನ್ನು ತಿಳಿದುಕೊಳ್ಳಲು ಸಾಧ್ಯವಿದೆ. ಸುಪ್ರಭೇದಾಗಮ ಮತ್ತು ಈಶಾನ-ಶಿವಯೋಗಿಗಳ "ಈಶಾನ ಶಿವ ಗುರುದೇವ ಪದ್ಧತಿ" ಗಳಲ್ಲಿ[೨೬] ವರ್ಣಿತವಾದ ಯೋಗವು ಯೋಗದರ್ಶನದಿಂದ ವಿಶೇಷವಾಗಿ ಭಿನ್ನವಾಗಿಲ್ಲ. ಆದರೂ ಸ್ವಲ್ಪ ಪ್ರಮಾಣದಿಂದಾದರೂ ವ್ಯತ್ಯಾಸವಿಲ್ಲದೆ ಇಲ್ಲ. ಈಶ್ವರನ ಪ್ರತಿಬಿಂಬದ (ಮೂರ್ತಿಯ)ನ್ನು ಮುಂದಿಟ್ಟುಕೊಂಡು ಅದರ ಮೇಲೆ ದೃಷ್ಟಿಯನ್ನು ಚೆಲ್ಲಿ, ಅದರಲ್ಲಿಯೇ ಮನಸ್ಸಿನ ವ್ಯಾಪಾರವನ್ನೆಲ್ಲ ಕೇಂದ್ರೀಕರಿಸಿ, ಧ್ಯಾನವನ್ನು ಬಲಿಸಿ, ಸಮಾಧಿಯನ್ನು ಸಾಧಿಸುವ ಮಾರ್ಗಕ್ಕೆ ಶೈವಾಗಮಗಳು ಪ್ರಾಮುಖ್ಯತೆಯನ್ನು ಕೊಟ್ಟಂತೆ ತೋರುವುದು. ರಾಜಯೋಗದ ತತ್ವಗಳು ಶೈವಾಗಮಗಳ ಯೋಗದಲ್ಲಿ ಅಡಕವಾಗಿವೆಯಾದರೂ ಮೂರ್ತಿಯನ್ನು ಮುಂದಿಟ್ಟುಕೊಂಡು ಧ್ಯಾನಿಸುವುದೊಂದು ಅದರ ವೈಶಿಷ್ಟ್ಯ.

ವೀರಶೈವರಿಗೂ ಯೋಗಕ್ಕೂ ಅತಿ ನಿಕಟಸಂಬಂಧವಿದೆಯೆಂಬುದನ್ನು ವೀರಶೈವರಲ್ಲಿ ಈಗಲೂ ರೂಢಿಯಲ್ಲಿರುವ ಅನೇಕ ವಿಷಯಗಳಿಂದ ಕಂಡುಕೊಳ್ಳಬಹುದು. ವೀರಶೈವರ ತತ್ವಜ್ಞಾನ (Philosophy) ದಲ್ಲಿ ಷಟ್‌ಸ್ಥಲ ಸಿದ್ಧಾಂತವು ಅತಿ ಮಹತ್ವವಾದುದೆಂಬುದು ವೀರಶೈವ ತತ್ವಾನ್ವೇಷಿಗಳಿಗೆ ಅರಿದಾದ ಮಾತಲ್ಲ. ಅದರಲ್ಲಿ ಹೆಜ್ಜೆ ಹೆಜ್ಜೆಗೂ ಯೋಗದ ತತ್ವಗಳು ಅಡಕವಾಗಿವೆ. ವೀರಶೈವ ಧಾರ್ಮಿಕ ವಾಙ್ಮಯದಲ್ಲಿ ಅತಿ ಮಹತ್ವವಾದುವು ವಚನಶಾಸ್ತ್ರಗಳು. ಇವುಗಳಲ್ಲಿ ಯೋಗಾಂಗಗಳ ವರ್ಣನೆಯು ವೀರಶೈವ ಪರವಾಗಿ ವಿಪುಲವಾಗಿರುವುದು. ಪ್ರಾಣಲಿಂಗಿಸ್ಥಲದ ವಚನಗಳೆಲ್ಲವೂ ಯೋಗಮಯವಾಗಿವೆಯೆಂದರೂ ಅಡ್ಡಿಯಿಲ್ಲ.[೨೭] ಆದರೂ ಕೆಲವು ಕಡೆಗೆ ಯೋಗದ ಮೇಲೆ ಕಟುತರವಾದ ಟೀಕೆಯು ಕಂಡು ಬರುವುದು. ಇಂಥವುಗಳ ಆಧಾರದಿಂದ ವಚನಶಾಸ್ತ್ರಕಾರರು ಯೋಗವಿರೋಧಿಗಳೆಂದು ಮಾತ್ರ ಕಲ್ಪಿಸ

---

೨೫ ಶಿ. ಪ್ರ. ೧. ೧೦.

೨೬ Ed. by T. Ganapat Sastri Trivendrum. T. S. S. Nos. 69. 72. 77.

೨೭ ವಚನಶಾಸ್ತ್ರಸಾರ ಪುಟ ೪೦೬–೪೬೫ ಇವುಗಳಲ್ಲಿ ಮುಖ್ಯವಾಗಿ ಪಾನ ೪೩೮ ರಿಂದ ೪೪೫ರ ವರೆಗೆ ನೋಡಿರಿ.



CC-0. Jangamwadi Math Collection, Varanasi. An eGangotri Initiative

ಬಾರದು. ಅವರ ಟೀಕೆಯು ಯೋಗದ ಮುಖ್ಯ ಧ್ಯೇಯವಾದ ಅಂತರಂಗ ಶುದ್ಧಿಯನ್ನೂ ಈಶ್ವರ ಸಿದ್ಧಿಯನ್ನೂ ಮರೆತು ಕೇವಲ ಬಾಹ್ಯಶರೀರ ಚಮತ್ಕಾರ (feats) ಗಳನ್ನು ಸಾಧಿಸಿದ ಹಠಯೋಗಿಗಳನ್ನುದ್ದೇಶಿಸಿ ಮಾಡಲ್ಪಟ್ಟದೆಯೆಂಬುದನ್ನು ಲಕ್ಷ್ಯದಲ್ಲಿಡಬೇಕು.[೨೮] ಶಿವಶರಣರು ಅಡ್ಡಮಾರ್ಗದಿಂದ ಹೋಗುವವರನ್ನು ಹಾದಿಗೆ ತರಲು ಹಿಂದೆ ಮುಂದೆ ನೋಡುವವರಲ್ಲ. ಅರಿಯದೆ ಶಿವಪೂಜೆ ಮಾಡುವವರನ್ನು ಹೀಗೆ ಬಯ್ದಿರುವರು.[೨೯]

ನಮ್ಮ ವೀರಶೈವ ಗುರುಗಳು ಯೋಗವಿದ್ಯೆಯಲ್ಲಿ ಒಳ್ಳೇ ನಿಪುಣರಾಗಿದ್ದರು. ಯೋಗದ ಗುಟ್ಟನ್ನು ಕಂಡು ಹಿಡಿದು ಅದು ಸರ್ವರಿಗೂ ಸಾಧ್ಯವಾಗುವಂತೆ ತಮ್ಮ ಸ್ವಾನುಭವದಿಂದ ಅದರಲ್ಲಿ ತಿದ್ದು ಪಡೆಯನ್ನು ಮಾಡಿ ಅದಕ್ಕೆ ಶಿವಯೋಗವೆಂದು ಹೆಸರಿಟ್ಟರು. ಶಿವಯೋಗವನ್ನು ತಿಳಿದು ಆಚರಿಸುವವರಿಗೆ ಶಿವಯೋಗಿಗಳೆಂದು ಹೆಸರು.

ಶಿವಯೋಗದ ಸ್ವರೂಪವನ್ನು ವಚನಕಾರರು ವಿಪುಲವಾಗಿ ತಮ್ಮ ವಚನಗಳಲ್ಲಿಯೂ, ಚೆನ್ನಸದಾಶಿವ ಯೋಗಿಗಳು ತಮ್ಮ "ಶಿವಯೋಗ ಪ್ರದೀಪಿಕೆ" ಯಲ್ಲಿಯೂ ವರ್ಣಿಸಿರುವರು. ಇವೆಲ್ಲವುಗಳ ಮಥಿತಾರ್ಥವು ತೋಂಟದ ಸಿದ್ಧಲಿಂಗ ಯತಿಗಳ ಒಂದೇ ವಚನದಲ್ಲಿ ಬಂದಿದೆಯೆಂದರೆ ವಿಶೇಷ ತಪ್ಪಾಗದು. ಅವರು ಯೋಗದ ಅಷ್ಟಾಂಗಗಳನ್ನು ಶಿವಯೋಗಕ್ಕನುಸರಿಸಿ ಹೇಳಿ, ಶಿವಯೋಗದಲ್ಲಿ ಹೆಜ್ಜೆ ಹೆಜ್ಜೆಗೂ ಲಿಂಗದ ಅವಶ್ಯಕತೆಯಿದೆಯೆಂದೂ, ಲಿಂಗಾಂಗ ಯೋಗದ ಧ್ಯೇಯವು ಶಿವಲಿಂಗಾರ್ಚನೆಯ ಮಾಡಿ ಶಿವತತ್ತ್ವದೊಡನೆ ಕೂಡುವುದೆಂದೂ ಅಭಿಪ್ರಾಯಪಟ್ಟದ್ದಾರೆ. ನಂತರ —

"ಇನ್ನು ವೀರ ಮಾಹೇಶ್ವರರುಗಳ ಲಿಂಗ ಸಂಧಾನವೆಂತೆಂದೊಡೆ ಬ್ರಹ್ಮರಂಧ್ರದಲ್ಲಿಪ್ಪನಾದ ಚೈತನ್ಯವಪ್ಪ ಪರಮಚಿತ್ಕಳೆಯೇ ಭಾವಮನಕರದಲ್ಲಿ ಶ್ರೀಗುರು ತಂದು ಸಾಹಿತ್ಯವ ಮಾಡಿದನಾಗಿ, ಭಾವದಲ್ಲಿ ಸತ್ತ್ವಸ್ವರೂಪವಪ್ಪ ಇಷ್ಟಲಿಂಗವೆಂದೆನಿಸಿ, ಒಂದೇ ವಸ್ತು ತನು ಮನ ಭಾವಂಗಳಲ್ಲಿ ಇಷ್ಟಪ್ರಾಣ ಭಾವವಾದ ಭೇದವನರಿಯದೆ,[೩೦] ಇಷ್ಟಲಿಂಗವ ದೃಷ್ಟಿಯಿಂದ ಗ್ರಹಿಸಿ, ಪ್ರಾಣಲಿಂಗವ ಮನಜ್ಞಾನದಿಂದ ಗ್ರಹಿಸಿ, ತೃಪ್ತಿಲಿಂಗವ ಭಾವಜ್ಞಾನದಿಂದ ಗ್ರಹಿಸಿ, ಈ ಲಿಂಗತ್ರಯವಿಡಿದು ಆಚರಿಸಿ, ಲಿಂಗದೊಡನೆ ಕೂಡಿ, ಲಿಂಗವೇ ತಾನು ತಾನಾಗಿ, ವಿರಾಜಿಸುತಿರ್ಪುದೀಗ ಶಿವಯೋಗ ನೋಡಾ, ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೇ." [೩೧]

ಎಂದು ಶಿವಯೋಗವನ್ನು ವರ್ಣಿಸಿರುವರು. ಅವರ ಈ ವಾಕ್ಯವನ್ನು ಸ್ವಲ್ಪ ವಿವೇಚಿಸಿದರೆ ಕೆಳಗಿನಂತೆ ಅದರ ಅರ್ಥವು ಹೊರಡುವುದು.

---

೨೮ He (Hatha-yogi) is determined not to fall sick, and he never does. He lives long; a hundred years is nothing to him; he is quite young and fresh when he is 150, without one hair turned gray. But that is all. A Banyan tree lives sometimes 5000 years, but it is a Banyan tree and nothing more. So, if a man lives long, he is only a healthy animal.

SWAMI VIVEKANANDA, Raja-yoga P. 14.

೨೯ ವಚನಶಾಸ್ತ್ರಸಾರ ಪಾನು ೧೯೪ ರಿಂದ ೧೯೮ ರ ವರೆಗೆ ನೋಡಿರಿ.

೩೦ ಭೇದವನರಿದು ( ? )

೩೧ ವಚನಶಾಸ್ತ್ರಸಾರ ಪುಟ ೪೪೫.



CC-0. Jangamwadi Math Collection, Varanasi. An eGangotri Initiative

ಜೀವಿಗಳಿಗೆ ಸ್ಥೂಲ, ಸೂಕ್ಷ್ಮ, ಕಾರಣಗಳೆಂದು ಮೂರು ಶರೀರಗಳು— ಒಂದರೊಳಗೊಂದು ಅಡಕವಾಗಿರುವುವೆಂದೂ, ಮೂರೂ ಶರೀರಗಳಲ್ಲಿರುವ ಮಲಿನತೆಯು ಹೋದಾಗಲೇ ಜೀವಿಯು ಶುದ್ಧನಾಗುವನೆಂದೂ ವೀರಶೈವರ ನಂಬುಗೆ. ಯೋಗದ ಮುಖ್ಯ ಧ್ಯೇಯವು ಬಾಹ್ಯಾಭ್ಯಂತರ ಶುದ್ಧಿಯೆಂಬುದನ್ನು ಮೇಲೆಯೇ ಸೂಚಿಸಿರುವುದಷ್ಟೇ. ಅದಕ್ಕೋಸುಗ ಗುರುವು ದೀಕ್ಷಾಕಾಲದಲ್ಲಿ ತನ್ನ ಯೋಗಬಲದಿಂದ ಶಿಷ್ಯನ ಚೈತನ್ಯವನ್ನು ಗಟ್ಟಿಗೊಳಿಸಿ ಹೊರಗೆ ಇಷ್ಟಲಿಂಗವೆಂದು ಸ್ಥೂಲಶರೀರಕ್ಕೂ, ಒಳಗೆ ಪ್ರಾಣಲಿಂಗವೆಂದು ಸೂಕ್ಷ್ಮಶರೀರಕ್ಕೂ, ಭಾವಲಿಂಗವೆಂದು ಕಾರಣ ಶರೀರಕ್ಕೂ ಜೋಡಿಸಿ, ಅವುಗಳ ಅನುಸಂಧಾನಕ್ರಮವನ್ನು ತೋರಿಸಿಕೊಡುವನು. ಅದೇ ಮಾರ್ಗದಿಂದ ಶಿಷ್ಯನು ತನ್ನ ಎಡ ಹಸ್ತದ ಅಂಗೈಯೊಳಗೆ ಇಷ್ಟಲಿಂಗವನ್ನು ಭದ್ರಪಡಿಸಿ, ಉಳಿದ ಅವಯವಗಳ ವ್ಯಾಪಾರವನ್ನು ತಡೆದು, ಪ್ರಾಣಾಯಾಮದಿಂದ ಶ್ವಾಸೋಚ್ಛ್ವಾಸವನ್ನು ಸರಿಪಡಿಸಿ, ಮನಸ್ಸಿನ ಚಲನವಲನವನ್ನು ತಡೆದು, ಸ್ಥೂಲ ದೃಷ್ಟಿಯನ್ನು ಇಷ್ಟಲಿಂಗದಮೇಲೂ, ಸೂಕ್ಷ್ಮದೃಷ್ಟಿಯನ್ನು ಪ್ರಾಣಲಿಂಗದಮೇಲೂ, ಭಾವದೃಷ್ಟಿಯನ್ನು ಭಾವಲಿಂಗದಮೇಲೂ ಚಲ್ಲಿ ಲಿಂಗದೊಡನೆ ಕೂಡಿ ಲಿಂಗತ್ರಯವನ್ನು ಏಕಾಕಾರವಮಾಡಿ, ಲಿಂಗವೇ ತಾನಾಗಿರುವನು. ಇದೇ ಶಿವಯೋಗ. ಈ ವಚನದ ಮೇಲಿಂದಲೂ ಮತ್ತು ಇಂಥ ಅನೇಕ ವಚನಗಳಿಂದಲೂ[೩೨] ಶಿವಯೋಗದ ತತ್ತ್ವವು ಲಿಂಗ ಪೂಜೆಯಲ್ಲಿ ಅಡಕವಾಗಿರಬೇಕಷ್ಟೇ ಅಲ್ಲ. ಲಿಂಗಪೂಜೆಯು ಶಿವಯೋಗದ ಮುಖ್ಯಾಂಗವಾಗಿರಬೇಕೆಂದು ಊಹಿಸಲವಕಾಶವಿದೆ.

ವೀರಶೈವನಾಗಿರತಕ್ಕ ಪ್ರತಿಯೊಬ್ಬ ವ್ಯಕ್ತಿಯು ಶಿವಯೋಗಸಾಧಕನಾಗಿರಬೇಕೆಂದು ವೀರಶೈವ ಮತಸ್ಥಾಪಕರ ಅಪೇಕ್ಷೆ. ಅಂತೇ ಅವರು ಶಿವಯೋಗ ಸಾಧನೆಯನ್ನು ಅಷ್ಟು ಸುಲಭವಾಗಿ ಸರ್ವರಿಗೂ ಸಾಧ್ಯವಾಗುವಂತೆ ಮಾಡಿರಲೇಬೇಕು. ಮೇಲೆ ಯೋಗದ ಒಳಭೇದಗಳನ್ನು ಹೇಳುವಾಗ ರಾಜಯೋಗವು ಉತ್ಕೃಷ್ಟವಾದುದೆಂದು ಸೂಚಿಸಿರುವುದಷ್ಟೆ. ಅಂಥ ರಾಜಯೋಗಕ್ಕೂ ಶಿವಯೋಗಕ್ಕೂ ನಿಜವಾಗಿ ಭೇದವಿಲ್ಲೆಂದೂ ಸಾಧಕರ ಜ್ಞಾನಶಕ್ತಿಯ ಬೆಳವಣಿಗೆಗಾಗಿ ಭೇದವು ಹೇಳಲ್ಪಟ್ಟಿದೆಯೆಂದೂ ಚೆನ್ನ ಸದಾಶಿವಯೋಗಿಗಳ ಮತ.[೩೩] ಸೂಕ್ಷ್ಮವಾಗಿ ವಿಚಾರಿಸಿದರೆ ರಾಜಯೋಗಕ್ಕೂ ಶಿವಯೋಗಕ್ಕೂ ಭೇದವಿಲ್ಲೆಂಬುದು ನಿಜ; ಆದರೆ ಸ್ವಲ್ಪ ಸ್ಥೂಲಮಾನದಿಂದ ನೋಡಿದರೆ ಶಿವಯೋಗದಲ್ಲಿ ರಾಜಯೋಗದಲ್ಲಿಲ್ಲದ ಒಂದು ವೈಶಿಷ್ಟ್ಯವುಂಟೆಂದೂ, ಆ ವೈಶಿಷ್ಟ್ಯವು ಇಷ್ಟಲಿಂಗದ ಆವಶ್ಯಕತೆಯೆಂಬುದೂ ಮೇಲಿನ ವಚನಗಳಿಂದ ಸ್ಪಷ್ಟವಾಗುವುದು. ಇನ್ನು ವೀರಶೈವ ಗುರುಗಳು ಇಷ್ಟಲಿಂಗದ ಆವಶ್ಯಕತೆಯನ್ನು ಸಾರಲು ಕಾರಣವೇನೆಂಬುದನ್ನು ಹುಡುಕಲು ನಾವು ದೂರಹೋಗುವ ಕಾರಣವಿಲ್ಲ.

ಈಶ್ವರ ಧ್ಯಾನವನ್ನು ಬಲಪಡಿಸಲಿಕ್ಕೂ ಮನಸ್ಸಿನ ಚಲನವಲನವನ್ನು ತಡೆದು ಈಶ್ವರಮಯವಾಗಿ ಮಾಡುವುದಕ್ಕೂ ಬಾಹ್ಯದಲ್ಲಿ ಈಶ್ವರ ಪ್ರತಿಬಿಂಬವು ಬೇಕೆಂದು ಶೈವಾಗಮುಗಳು ಸಾರುವುವೆಂದು ಮೇಲೆ ಸೂಚಿಸಿದೆಯಷ್ಟೇ. ಆದರ ಗುಟ್ಟನ್ನು ನಮ್ಮಾದ್ಯರಾದ ವೀರಶೈವ

೩೨ ವಚನಶಾಸ್ತ್ರಸಾರ ಪುಟ ೪೩೨–೪೪೫ ಇವುಗಳಲ್ಲಿ ವಚನ ೧೧ ಪುಟ ೪೩೬. ವಚನ ೪ ಪುಟ ೩೪೪. ವಚನ ೯ ಪುಟ ೪೩೫ ಇತ್ಯಾದಿ.

೩೩ ನ ಭೇದಶ್ಶಿವಯೋಗಸ್ಯ ರಾಜಯೋಗಸ್ಯ ತತ್ತ್ವತಃ । ಶಿವಾರ್ಥಿನಾಂ ತಥಾಪ್ಯೇವ ಮುಕ್ತೋ ಬುದ್ಧೇಃ ಪ್ರವೃದ್ಧಯೇ ॥ ಶಿ. ಪ್ರ. ೧. ೧೩.



CC-0. Jangamwadi Math Collection, Varanasi. An eGangotri Initiative

ಮತಸ್ಥಾಪಕರು ಅರಿತಿದ್ದರು. ಆದರೂ ಅವರು ಮೂರ್ತಿಪೂಜಕರಲ್ಲ. ಮೂರ್ತಿಪೂಜೆಯನ್ನು ಅತಿ ಕಠೋರವಚನಗಳಿಂದ ವಚನಶಾಸ್ತ್ರಕಾರರು ನಿರಾಕರಿಸಿರುವರು.[೩೪] ಸ್ವಪ್ರತಿಬಿಂಬವನ್ನು ಕಾಣಲು ದರ್ಪಣವು ಹೇಗೆ ಅಗತ್ಯವಿದೆಯೋ ಹಾಗೆ ಮನಸ್ಸಿನ ಚಲನವಲನವನ್ನು ತಡೆದು ಒಂದೇ ವಸ್ತುವಿನಮೇಲೆ ಅದನ್ನು ಕೇಂದ್ರೀಕರಿಸಿ, ನಿಜಾತ್ಮನ ಪ್ರತಿಬಿಂಬವನ್ನು ಕಾಣಲು ದರ್ಪಣದಂಥ ಒಂದು ವಸ್ತುವನ್ನು ಅವರು ಸ್ವೀಕರಿಸಲೇ ಬೇಕಾಗಿತ್ತು. ಅಂತೆಯೇ ಸ್ಥಾವರಮೂರ್ತಿಗಳಿಗೆ ಬದಲಾಗಿ ಈ ಉದ್ದೇಶವನ್ನೀಡೇರಿಸುವಂಥ ಅತಿ ಪ್ರಾಚೀನವಾದ ಶಿವಲಿಂಗವನ್ನು ಧರಿಸಲು ಪ್ರೇರೇಪಿಸಿರಬಹುದೆಂದು ತೋರುವುದು. ಮುಗ್ಗಿಯ ಮಾಯಿದೇವರು ತಮ್ಮೊಂದು ಪದ್ಯದಲ್ಲಿ ಶರಣನು ಲಿಂಗವೆಂಬ ದರ್ಪಣದಲ್ಲಿ ಸ್ವಸ್ವರೂಪವನ್ನೇ ನೋಡುವನೆಂದು ಹೇಳಿದ್ದಾರೆ.[೩೫] ಬೌದ್ಧ ಭಿಕ್ಷುಗಳೂ ಕೂಡ ಧ್ಯಾನದಲ್ಲಿ ತಮ್ಮ ದೇಹಾಕೃತಿಯನ್ನು ಮನದೊಳಗೆ ಗುರಿಯಾಗಿಟ್ಟುಕೊಳ್ಳುತ್ತಿದ್ದರೆಂದೂ ಮತ್ತು ನೀಲಿ, ಹಳದಿ, ಬಿಳೀ ಮತ್ತು ಕೆಂಪು ಬಣ್ಣಗಳದ್ವಾರಾ ಧ್ಯಾನಿಸುತ್ತಿದ್ದರೆಂದೂ ಪ್ರತೀತಿಯದೆ[೩೬] ಬಾಹ್ಯಪ್ರಪಂಚವನ್ನೂ ತನ್ನನ್ನೂ ಮರೆದು ಸಮಾಧಿಯನ್ನು ಹೊಂದಲು ಬಾಹ್ಯ ವಸ್ತುವಿನ ಅಗತ್ಯವಿದೆಯೆಂದು ಪಾಶ್ಚಾತ್ಯರಲ್ಲನೇಕ ಮಾನಸಶಾಸ್ತ್ರವೇತ್ತರು (Psychologists) ಅಭಿಪ್ರಾಯಪಡುವರು. ಇವೆಲ್ಲ ಕಾರಣಗಳಿಂದ ಲಿಂಗವು ಧ್ಯಾನವನ್ನು ಬಲಿಸಲು ಕರಣವೂ ಸಮಾಧಿಯನ್ನು ಸಾಧಿಸಲು ಸಾಧನವೂ ಆಗಿರುವುದೆಂದು ತೋರುವುದು. ಆದುದರಿಂದ ವೀರಶೈವ ಗುರುಗಳು ಇಷ್ಟಲಿಂಗದ ಅಗತ್ಯವನ್ನು ಸಾರಿರಬಹುದು.

ಇನ್ನು ಯೋಗದ ತತ್ವಗಳನ್ನು ಅನುಭವಕ್ಕನುಸರಿಸಿ ವಿವೇಚಿಸಲು ಅವು ಸರ್ವರಿಗೂ ಸಾಧ್ಯವಿರುವುವೆಂದೂ, ಸರ್ವರೂ ಸಾಧಿಸಿ ಇಹದಲ್ಲಿಯೇ ಪರಮಸುಖವನ್ನನುಭವಿಸಬೇಕೆಂದು ಮಾಡಲ್ಪಟ್ಟಿರುವುವೆಂದೂ ಕಂಡು ಬರುವುದು. ಅದು ಹೇಗೆಂಬುದನ್ನು ನೋಡುವಾ —

ಇನ್ನು ಬಾಹ್ಯಶರೀರದ ಶುದ್ಧಿಗಾಗಿ ಸ್ನಾನವನ್ನು ಮಾಡಬೇಕೆಂಬುದೂ, ಶರೀರದೊಳಗಿನ ರಕ್ತ ಮೊದಲಾದ ಧಾತುಗಳಲ್ಲಿ ಮಲಿನತೆ ಇದ್ದರೆ ಶರೀರದ ಮೇಲ್ಭಾಗವಾದ ತ್ವಚವನ್ನು ಎಷ್ಟು ತೊಳೆದರೂ ಶುದ್ಧಿಯಾಗಿ ಮನುಷ್ಯನು ನಿರೋಗಿಯಾಗಿರಲಾರನೆಂದೂ ಸರ್ವರಿಗೂ ಗೊತ್ತಿದ್ದ ಮಾತೆ. ಹೊರಗಿನ ಮಲಿನತೆಯನ್ನು ಸ್ನಾನದಿಂದ ತೊಳೆಯುವಂತೆ ಒಳಗಿನ ಮಲಿನತೆ

---

೩೪ ವಚನಶಾಸ್ತ್ರ ಪುಟ ೨೮೧–೨೯೩.

೩೫ ಮುಕುರವನೀಕ್ಷಿಪಂಗನೆಯ ಬುದ್ಧಿಯದೇಂ ವರರೂಪಹಾವಭಾ ।
ವಕಲಿತ ವಿಭ್ರಮಾಪ್ತ ನಿಜಮಂಗಳಮೂರ್ತಿಯ ನೀಕ್ಷಿಪಲ್ಲಿಯೋ ॥
ಮುಕುರವನೇ ನಿರೀಕ್ಷಿಪೆಡೆಯಲ್ಲಿಯೊ ತನ್ನನೆ ನೋಳ್ಪಳ್ಳೆಸೆಲ್ವೆಂ ।
ಗಿಕನಿಯಮಾರ್ಚನಾನುಭವದರ್ಪಣದೊಳ್ ಶರಣಂ ಶಿವಾಧವಾ ॥ ಶತಕತ್ರಯ ೧. ೨೩.

೩೬ More abstruse are positions of Mastery ( ಅಭಿಭಾಯತನಾನಿ ) which are essentially modes of contemplating external forms finite or boundless, and coloured blue, yellow, red and white, and appreciating their true impermanence and thus presumably rendering vacant the mind. Akin to these exercises are the first three of the Stages of Deliverance (ವಿಮೋಕ್ಷ) which seem to be first the contemplation of his own material form, then of external form and then the attainment of intentness.

—Dr. A. B. Keith: Buddhist Philosophy in India and Ceylon.



CC-0. Jangamwadi Math Collection, Varanasi. An eGangotri Initiative

ಯನ್ನು ಸರಿಯಾದ ಆಹಾರವಿಹಾರದಿಂದಲೂ ವ್ಯಾಯಾಮಾದಿ ಪರಿಶ್ರಮಗಳಿಂದಲೂ ತೊಳೆಯಲು ಬರುವುದೆಂಬುದು ಅನುಭವಸಿದ್ಧವಾದ ಮಾತು. ಯೋಗಶಾಸ್ತ್ರಜ್ಞರಾದ ಪೂರ್ವದ ಮಹರ್ಷಿಗಳು ಶರೀರದೊಳಗಿನ ಮಲಿನತೆಯನ್ನು ತೊಳೆಯಲು ಯಮ, ನಿಯಮ, ಆಸನ, ಪ್ರಾಣಾಯಾಮ ಪ್ರತ್ಯಾಹಾರಗಳೆಂಬ ಯೋಗಾಂಗಗಳನ್ನು ಮಾಡಿ ಅವಕ್ಕೆ ಅತಿ ಮಹತ್ವದ ಸ್ಥಾನವನ್ನು ಕೊಟ್ಟಿರುವರು. ಶರೀರದಲ್ಲಿಯ ಸರ್ವವ್ಯಾಧಿಗಳನ್ನು ಹೊರದೂಡಿ ಆದನ್ನು ಬಹು ಕಾಲ ಆರೋಗ್ಯದಿಂದಿಡಬೇಕಾದರೆ ಈ ಯೋಗಾಂಗಗಳನ್ನು ಸಾಧಿಸುವುದು ಬಲು ನೆಟ್ಟಗೆ. ಇವು ಮುಖ್ಯವಾಗಿ ಆರೋಗ್ಯದೃಷ್ಟಿಯಿಂದ ( from hygienic point of view ) ಬಲು ಉಪಯುಕ್ತವಾದವುಗಳು. ವರೆಗೆ ಹಚ್ಚಿ ನೋಡಬೇಕೆನ್ನುವವರು ಅಭ್ಯಾಸಮಾಡಿ ಅನುಭವ ಪಡೆದುಕೊಳ್ಳಬಹುದು.[೩೭] ಇನ್ನು ಶರೀರದ ಒಳಹೊರಗಿನ ಭಾಗಗಳು ಶುದ್ಧವಾದವುಗಳೆಂದೂ, ಸರ್ವ ರೋಗಾದಿಗಳು ಹೇಳಹೆಸರಿಲ್ಲದಂತಾಗುವವೆಂದೂ ಗ್ರಹಿಸುವಾ! ಆದರೂ ಇಷ್ಟರಿಂದಲೇ ಮನುಷ್ಯನು ಶುದ್ಧನಾದನೆಂದು ಹೇಳಲಾಗದು. ಏಕೆಂದರೆ ಬರೇ ಶರೀರವೇ ಮನುಷ್ಯನಲ್ಲ. ಚೈತನ್ಯದಿಂದೊಡಗೂಡಿದ ಶರೀರಕ್ಕೆ ಮನುಷ್ಯನೆನ್ನಬಹುದು. ಚೈತನ್ಯಮಯನೇ ಆತ್ಮನು. ಆತ್ಮನಿಗೆ ಬುದ್ಧಿ, ಮನಸ್ಸು, ಅಹಂಕಾರಾದಿ ಅಂತಃಕರಣಗಳುಂಟು. ಅವುಗಳ ಶುದ್ಧಿಯಾಗದ ವಿನಾ ಮನುಷ್ಯನು ಶುದ್ಧನಾಗಲಾರನು. ಬುದ್ಧಿ, ಮನಸ್ಸು, ಅಹಂಕಾರಾದಿಗಳ ಶುದ್ಧಿಗಾಗಿ ಧಾರಣ, ಧ್ಯಾನ, ಸಮಾಧಿಗಳೆಂಬ ಯೋಗಾಂಗಗಳ ಅಗತ್ಯ. ತತ್ವಶಾಸ್ತ್ರಜ್ಞರು ಸೂಕ್ಷ್ಮ ದೃಷ್ಟಿಯಿಂದ ಅಂತರಂಗದ ವೃತ್ತಿಗಳನ್ನು ವಿಭಾಗಿಸಿ ಪ್ರತಿಯೊಂದು ವೃತ್ತಿಯನ್ನೇ ನಡೆಯಿಸುವುದಕ್ಕೊಂದೊಂದು ಕರಣವನ್ನು ನಿರ್ಮಿಸಿರುವರು. ತಾತ್ತ್ವಿಕ ದೃಷ್ಟಿಯಿಂದ ಅಷ್ಟೇನೂ ಸರಿಯಾಗಿಲ್ಲದಿದ್ದರೂ ನಮ್ಮ ಅನುಕೂಲತೆಗಾಗಿ ಸ್ಥೂಲಮಾನದಿಂದ ಆ ಎಲ್ಲ ವೃತ್ತಿಗಳನ್ನು ಮನಸ್ಸೆಂಬ ಶಬ್ದದಲ್ಲಿ ಸಮಾವೇಶ ಮಾಡುವಾ. ಮೇಲಿನ ವಿಷಯವನ್ನೇ ಸ್ವಲ್ಪದರಲ್ಲಿ ಹೇಳುವುದಾದರೆ ಮನಸ್ಸು ಶುದ್ಧಿಯಾಗದ ಹೊರತು ಶರೀರವು ಶುದ್ಧಿಯಾಗಲಾರದೆಂದೂ, ಮನಶ್ಶುದ್ಧಿಗಾಗಿಯೇ ಕಡೆಯ ಮೂರು ಯೋಗಾಂಗಗಳು ನಿರ್ಮಿಸಲ್ಪಟ್ಟಿರುವವೆಂದೂ ಹೇಳಬಹುದು. ಮನಶ್ಶುದ್ಧಿಯನ್ನು ಮಾಡಬೇಕಾದರೆ ಬಾಹ್ಯವಸ್ತುವಾದ ಶರೀರ ಶುದ್ಧಿಯು ಮೊದಲು ಬೇಕೆಂದು ಪತಂಜಲ ಮಹರ್ಷಿಗಳಂಥ ಯೋಗಶಾಸ್ತ್ರಜ್ಞರ ಮತವು. ಇದು ಒಂದು ಪಕ್ಷ. ಮನಶ್ಶುದ್ಧಿಗಾಗಿ ಬಾಹ್ಯ ಶರೀರ ಶುದ್ಧಿಯಿಂದ ಹೊರಡುವ ಕಾರಣವಿಲ್ಲೆಂದೂ, ಮನಶ್ಶುದ್ಧಿಯನ್ನು ಮನಸ್ಸಿನಿಂದಲೇ ಮಾಡುವುದು ಸಾಧ್ಯವೆಂದೂ, ಮನಸ್ಸೊಂದು ಶುದ್ಧಿಯಾದರೆ ಸರ್ವವೂ ತಮ್ಮಿಂದ ತಾವೇ ಶುದ್ಧಿಯಾಗುವುವೆಂದೂ ಕೆಲವರ ಮತ. ಇದು ಮತ್ತೊಂದು ಪಕ್ಷ. ಅರ್ವಾಚೀನ ಸಾಧುಗಳಾದ ರಾಮಕೃಷ್ಣ ಪರಮಹಂಸ ಮತ್ತು ಅರವಿಂದ

---

[೩೭] For instance, some of you will find it a good thing for headaches to drink cold water through nose as soon as you get up in the morning; the whole day your brain will be nice and cool, and you will never catch cold.

SWAMI VIVEKANANDA: Rajayoga, P. 14.



CC-0. Jangamwadi Math Collection, Varanasi. An eGangotri Initiative

ಘೋಷ ಮೊದಲಾದವರು ಎರಡನೆಯ ಪಕ್ಷಕ್ಕೆ ಸೇರಿದವರು.[೩೮] ನಮ್ಮ ವೀರಶೈವ ಗುರುಗಳಾದರೂ ದ್ವಿತೀಯ ಪಕ್ಷವನ್ನವಲಂಬಿಸಿದವರೆಂದು ನಿರ್ಧರಿಸಲು ಸಾಕಷ್ಟು ಸಾಧನಗಳಿವೆ. ಶಿವಯೋಗದ ವಿವರಣೆಯೂ ಲಿಂಗಪೂಜೆಯ ಅಗತ್ಯವೂ ನಮ್ಮೀ ಅಭಿಪ್ರಾಯವನ್ನು ಬಲಪಡಿಸುವವು.

ಶುದ್ಧ ವಾತಾವರಣದಲ್ಲಿ ಕುಳಿತು[೩೯] ಮನಸ್ಸಿನ ಸಾಂಸಾರಿಕ ಮಂಡಿಗೆಗಳನ್ನೆಲ್ಲ ಮರೆತು ಕೆಲಕಾಲವಾದರೂ ನಿಶ್ಚಿಂತಮನಸ್ಕರಾಗಿರುವುದು ಆಧ್ಯಾತ್ಮಿಕ ದೃಷ್ಟಿಯಿಂದ ಉತ್ತಮವೆಂದು ಬಲ್ಲವರ ನಂಬುಗೆ. ಜಗತ್ತಿನಲ್ಲಿರುವ ಪ್ರತಿಯೊಂದು ವಸ್ತುವಿಗೂ ವಿಶ್ರಾಂತಿಯು ಬೇಕೇ ಬೇಕು. ಅದರಂತೆ ಮನಸ್ಸಿಗಾದರೂ ವಿಶ್ರಾಂತಿಯ ಅಗತ್ಯವಿದೆ; ಆದುದರಿಂದಲೇ ಶರೀರದ ಮತ್ತು ಮನಸ್ಸಿನ ವಿಶ್ರಾಂತಿಗಾಗಿ ನಿದ್ರೆಯು ಸ್ವಾಭಾವಿಕವಾಗಿ ಕಲ್ಪಿಸಲ್ಪಟ್ಟಿದೆ. ಆದರೂ ನಮ್ಮಲ್ಲನೇಕರಿಗೆ ನಿದ್ರೆಯಲ್ಲಿಯೂ ಕೂಡ ಮನಸ್ಸಿಗೆ ವಿಶ್ರಾಂತಿಯಿರುವುದಿಲ್ಲ. ಸ್ವಾಭಾವಿಕ ವಿಶ್ರಾಂತಿಯಲ್ಲದೆ ಆತ್ಮ ಶಕ್ತಿಯಿಂದ ಮನಸ್ಸಿಗೆ ವಿಶ್ರಾಂತಿ ( sub-conscious state ) ಕೊಡಲು ಬರುವುದೆಂದು ಯೋಗವೂ ಮತ್ತು ಅನುಭವಿಕರಾದ ಮಾನಸ ಶಾಸ್ತ್ರಜ್ಞರೂ ತೋರಿಸಿ

---

೩೮ There is no need of Asana, Pranayama, Kumbhaka, Chitta-suddhi or anything else preparatory if one starts with the will. That was what Sri Ramakrishna came to show so far as Yoga is concerned.

AUROBIND GHOSE– Yogic Sadhana P. 1.

೩೯ ಶುದ್ಧ ವಾತಾವರಣದ ಪರಿಣಾಮವು ಮನಸ್ಸಿನಮೇಲೆ ಬಲು ಹಿತಕರವಾಗಿರುವುದು. ಸಂಧ್ಯಾಕಾಲದಲ್ಲಾಗಲಿ ಪ್ರಾತಃಕಾಲದಲ್ಲಾಗಲಿ ಶಾಂತ ಮತ್ತು ನೈಸರ್ಗಿಕ ಸುಂದರವಾದ ಪ್ರದೇಶದಲ್ಲಿ ಕುಳಿತುಕೊಳ್ಳುವುದರಿಂದ ಮನಸ್ಸು ಪ್ರಶಾಂತವಾಗುವದೆಂಬುದು ನಮ್ಮೆಲ್ಲರಿಗೆ ಅನುಭವಸಿದ್ಧವಾದುದು. ಸ್ವಾಮಿ ವಿವೇಕಾನಂದರು ಹೇಳುವುದೇನಂದರೆ–

Those of you who can afford it will do better to have a room for this practice alone; do not sleep in that room; it must be kept holy, you must not enter the room until you have bathed, and are perfectly clean in body and mind, place flowers in that room always; they are the best surroundings for a Yogi; also pictures that are pleasing. Burn incense morning and evening. Have no quarrelling, or anger, or unholy thought in that room. Only allow those persons to enter it who are of the same thought as you. Then gradually there will be an atmosphere of holiness in the room, so that when you are miserable, sorrowfull, doubtfull, or your mind is disturbed, the very fact of entering that room will make you calm...............The idea is that by keeping holy vibration there the place becomes and remains illumined.

ವೀರಶೈವರಲ್ಲಿ ಪ್ರತಿಯೊಂದು ಮನೆಯಲ್ಲಿಯೂ ಶಿವಪೂಜಾಗ್ರಹ ಅಥವಾ ದೇವರ ಮನೆಯೆಂದು ಕೋಣೆಗಳಿರುವವು. ಅವುಗಳನ್ನು ರೂಢಿಯಲ್ಲಿ ತಂದವರ ಉದ್ದೇಶವು ಸ್ವಾಮಿಜಿಯವರ ಮೇಲೆ ಹೇಳಿದ ಉದ್ದೇಶದಂತಿರಬಹುದೇನು ?

RAJA-YOGA. P. 21.



CC-0. Jangamwadi Math Collection, Varanasi. An eGangotri Initiative

ಕೊಡುವರು. ಇತ್ತಿತ್ತಲಾಗಿ ಪಾಶ್ಚಾತ್ಯ ದೇಶಗಳಲ್ಲಿ ಮಾನಸ ಶಾಸ್ತ್ರಕ್ಕೆ ಬಲು ಮಹತ್ತ್ವಕೊಡ ಹತ್ತಿರುವರು. ಅದರ ಅಭ್ಯಾಸವು ಒಳ್ಳೇ ಸರಿಯಾಗಿ ನಡೆದಿದೆಯೆಂಬುದಕ್ಕೆ ಇತ್ತಿತ್ತಲಾಗಿ ಬೈಲಿಗೆ ಬರಹತ್ತಿದ ಅದರ ಅಂಗಗಳಾದ ( psycho-analysis, hypnotism, mesmerism) ಮೊದಲಾದುವುಗಳೇ ಸಾಕ್ಷಿ. ' ಮೆಸ್ಮೆರಿಝುಮ್ ' ೪೦ ವೆಂಬ ವಿದ್ಯೆಯಿಂದ ಅನ್ಯರ ಮಾನಸ ವ್ಯವಹಾರವನ್ನು ತಡೆದು ಅವರನ್ನು ನಮ್ಮಂತೆಯೇ ಕಾಯಾ ವಾಚಾ ಮನಸ್ಸಿಸಿಂದ ನಡೆಯ ಹಚ್ಚಲು ಬರುವದೆಂದು ಪ್ರಯೋಗದಿಂದ ಸಿದ್ಧಮಾಡಲ್ಪಟ್ಟಿದೆ. ಈ ವಿದ್ಯೆಯ ಸ್ವರೂಪವು ಬೇರೆ ರೀತಿಯಿಂದಾದರೂ ನಮ್ಮ ಪೂರ್ವಜರಿಗೆ ಗೊತ್ತಿತ್ತೆಂಬಂತೆ ತೋರುವುದು. ಬೇರೆ ಜನರ ವಿಚಾರಗಳು ಬೇರೆಬೇರೆಯಾಗಿರುವಂತೆ ಒಬ್ಬ ವ್ಯಕ್ತಿಯಲ್ಲಿಯೂ ಕೂಡ ಬೇರೆಬೇರೆ ಅಸಂಗತ ವಿಚಾರಗಳು ಉದ್ಭವಿಸುವುದುಂಟು. ಮಾನವನಲ್ಲಿ ಪುಣ್ಯ ಮತ್ತು ಪಾಪ ( good and evil ) ಇವುಗಳ ನಡುವೆ ಸತತ ಕದನವು ನಡದೇ ಇರುವುದು. ಮೆಸ್ಮೆರಿಝುಮ್‌ದ ಪ್ರಯೋಗದಿಂದ ಅನ್ಯರನ್ನು ನಮ್ಮಂತೆ ಮಾಡಿಕೊಳ್ಳಲು ಹೇಗೆ ಬರುವದೋ ಹಾಗೆ ಅಂಥದೊಂದು ವಿದ್ಯೆಯ ಪ್ರಯೋಗವನ್ನು ಪುಣ್ಯಮಯವಾದ ವಿಚಾರಗಳ ಪರವಾಗಿ ನಮ್ಮ ಮೇಲೆಯೇ ಮಾಡಿಕೊಳ್ಳುವುದರಿಂದ ನಮ್ಮಲ್ಲಿರುವ ಪಾಪಮಯವಾದ ವಿಚಾರಗಳು ಪುಣ್ಯಮಯವಾದವುಗಳಾಗುವುವೆಂದು ನಮ್ಮ ಪೂರ್ವಜರಿಗೆ ಗೊತ್ತಿದ್ದಂತೆ ತೋರುವುದ. ಆದುದರಿಂದಲೇ ಪವಿತ್ರ ಮಂತ್ರಗಳ ಜಪವನ್ನಾಗಲೀ ಈಶ್ವರ ಧ್ಯಾನವನ್ನಾಗಲೀ ಮಾಡಲು ಅವರು ಪ್ರೇರೇಪಿಸಿರಬಹುದು. ಇಷ್ಟಲಿಂಗ ಪೂಜೆಯಲ್ಲಿ ಈ ತತ್ತ್ವಗಳು ಅಡಗಿರುವುದರಿಂದಲೂ ಇಷ್ಟಲಿಂಗವು ಪಾಪಗಳನ್ನು ತೊಳೆಯುವುದೆಂದು ಈಗಲೂ ವೀರಶೈವರು ಶ್ರದ್ಧೆಯಿಂದ ನಂಬುವುದರಿಂದಲೂ ಇಷ್ಟಲಿಂಗವು ಇಂಥದೊಂದು ವಿದ್ಯೆಯನ್ನು ಸಾಧಿಸುವ ಕರಣವೆಂದೂ ಶಿವಪೂಜೆಯು ಅಂಥ ವಿದ್ಯೆಯ ಸಾಧನ ಮಾರ್ಗವೆಂದೂ ಊಹಿಸಲವಕಾಶವಿದೆ. ಅದುದರಿಂದ ವೀರಶೈವ ಶರಣರು ತಮ್ಮ ಆಧ್ಯಾತ್ಮಿಕೋನ್ನತಿಯನ್ನು ಅನುಭವದಿಂದಲೇ ಸಾಧಿಸುತ್ತಿದ್ದರೆಂದು ತರ್ಕಿಸಬಹುದು.

೪೦ ಈ ವಿದ್ಯೆಯನ್ನು ಜರ್ಮನದೇಶದ ವೈದ್ಯನಾದ ಮೆಸ್ಮೇರ (Mesmer) ಎಂಬವನು ಕ್ರಿ. ಶ. ೧೭೭೮ರಲ್ಲಿ ಕಂಡುಹಿಡಿದನು.





CC-0. Jangamwadi Math Collection, Varanasi. An eGangotri Initiative

# ವೀರಶೈವ ತತ್ತ್ವ ಪ್ರಕಾಶದ

## ಪಾರಿಭಾಷಿಕ ಶಬ್ದಗಳ ಅಕಾರಾದಿ ಪಟ್ಟಿಕೆ

[ – ಈ ಚಿಹ್ನವು ಒಂದು ಶಬ್ದದ ಹಿಂದೆ ಅಥವಾ ಮುಂದೆ ಇದ್ದರೆ ಅವರ ಶಿರೋಭಾಗದಲ್ಲಿದ್ದ ಶಬ್ದವನ್ನು ಅದಕ್ಕೆ ಕೂಡಿಸಿಕೊಂಡು ಓದಬೇಕೆಂದು ಸೂಚನೆ. ಉದಾ: 'ಅಂಗ' –ತ್ರಯ=ಅಂಗ ತ್ರಯ ಮತ್ತು 'ಆಚಾರ' ಪಂಚ– = ಪಂಚ ಆಚಾರ ]

—ವೀ. ರು. ಕೊಪ್ಪಳ






CC-0. Jangamwadi Math Collection, Varanasi. An eGangotri Initiative

CC-0. Jangamwadi Math Collection, Varanasi. An eGangotri Initiative

CC-0. Jangamwadi Math Collection, Varanasi. An eGangotri Initiative

CC-0. Jangamwadi Math Collection, Varanasi. An eGangotri Initiative

# ಶರಣೆಸತಿ ಲಿಂಗಪತಿ

ಶರಣೆಸತಿ ಲಿಂಗಪತಿ ಎಂಬ ತತ್ತ್ವವನ್ನು ನುಡಿದು ನಡೆದು ತೋರಿದ ಶಿವಶರಣೆಯರಲ್ಲಿ ಅಕ್ಕಮಹಾದೇವಿಯು ಅಗ್ರಗಣ್ಯಳಾಗಿದ್ದಾಳೆ. ಆದ್ದರಿಂದ ಆಕೆಯ ಜೀವನ ರಹಸ್ಯದಿಂದಲೇ ಈ ಲೇಖವನ್ನು ಪ್ರಾರಂಭಿಸುತ್ತೇನೆ. ವೀರಶೈವ ಧರ್ಮಜ್ಯೋತಿಯಾದ ಮಹಾದೇವಿಯಕ್ಕನು ಜನಿಸಿದ ಊರು ಉಡುತಡಿ. ಅವಳ ತಂದೆಯ ಹೆಸರು ನಿರ್ಮಲಸೆಟ್ಟಿ; ತಾಯಿಯ ಹೆಸರು ಸುಮತಿ. ಅವರು ಶಿವಭಕ್ತರಿದ್ದುದರಿಂದ ಅಕ್ಕನಿಗೆ ಚಿಕ್ಕಂದಿನಲ್ಲಿಯೇ ಸತ್ಯ, ಸದಾಚಾರ, ಶಿವಪೂಜೆಯ ಶಿಕ್ಷಣವು ದೊರಕಿತು. ಅಕ್ಕನು ಬಿದಿಗೆಯ ಚಂದ್ರನಂತೆ ಬೆಳೆಯುತ್ತ ಬೆಳೆಯುತ್ತ ಯೌವನಾವಸ್ಥೆಗೆ ಬಂದಳು. ಆಗ ನಿರ್ಮಲ ಸುಮತಿಯರು ಅಕ್ಕನಿಗೆ ತಕ್ಕ ವರನನ್ನು ಹುಡುಕುವ ಸಲುವಾಗಿ ಚಿಂತಿಸುತ್ತಿದ್ದರು.

ಒಮ್ಮೆ ಆ ಉಡುತಡಿಯ ಅರಸನಾದ ಕೌಶಿಕನು ಅಕಸ್ಮಾತ್ತಾಗಿ ಅಕ್ಕನನ್ನು ನೋಡಿದನು. ಆಕೆಯ ದಿವ್ಯ ತೇಜಸ್ಸು, ರೂಪ, ಲಾವಣ್ಯಗಳಿಗೆ ಮನಸೋತು ಅವಳನ್ನು ಲಗ್ನವಾಗಬೇಕೆಂಬ ಹುಚ್ಚು ಅವನ ತಲೆಗೇರಿತು. ಆಗ ಅವನು ಅವಳ ತಾಯಿತಂದೆಗಳಿಗೆ ನಿಮ್ಮ ಮಗಳನ್ನು ನನಗೆ ಕೊಟ್ಟು ಲಗ್ನಮಾಡಿರಿ, ಇಲ್ಲದಿದ್ದರೆ ಆಗ್ರಹದಿಂದ ಅವಳನ್ನು ತಂದು ಮದುವೆಯಾಗುವೆನೆಂದು ಹೇಳಿಕಳುಹಿಸಿದನು. ಇದನ್ನು ಕೇಳಿ ಅಕ್ಕನ ತಾಯಿ ತಂದೆಗಳಿಗೆ ಬಹಳ ಕೆಡಕೆನಿಸಿತು. ಮಗಳನ್ನು ಭವಿಗೆ ಕೊಟ್ಟು ಹೇಗೆ ಲಗ್ನಮಾಡುವುದು, ಎಂದು ಚಿಂತಿಸುತ್ತಿರಲು ಅಕ್ಕನು ಅವರಿಗೆ ಸಮಾಧಾನ ಹೇಳಿ ಕೌಶಿಕನ ಅರಮನೆಗೆ ತಾನೇ ಹೋದಳು. ಅಕ್ಕನು ತಾನಾಗಿ ಬಂದದ್ದನ್ನು ನೋಡಿ ಕೌಶಿಕನಿಗೆ ಬಹಳ ಆನಂದವಾಯಿತು. ಆಗ ಅಕ್ಕನು ಕೌಶಿಕನಿಗೆ ನೀನು ಶಿವಭಕ್ತನಾದರೆ ಮಾತ್ರ ನಾನು ನಿನ್ನನ್ನು ಲಗ್ನವಾಗುವೆನೆಂದು ಹೇಳಿದಳು. ಇದನ್ನು ಕೇಳಿ ಕೌಶಿಕನಿಗೆ ಹಿಡಿದರೆ ಕಚ್ಚುವದು ಬಿಟ್ಟರೆ ಓಡುವದು ಎಂಬ ಅವಸ್ಥೆಯಾಯಿತು. ಅತ್ತ ಜಾತಿಯನ್ನು ಬಿಡಲು ಮನಸಿಲ್ಲ, ಇತ್ತ ಮಹದೇವಿಯಕ್ಕನನ್ನು ಬಿಡಲು ಮನಸಿಲ್ಲ, ಹೀಗಾಗಿ ಅವಳನ್ನು ಹಿಡಿಯ ಹೋಗಲು ಅಕ್ಕನು ಎಲೇ ಮರುಳೇ ಈ ಮಾಂಸ ಮುದ್ದಿಯ ದೇಹಕ್ಕೆ ಮರುಳಾಗಿರುವೆಯಾ ? ಎಂದು ಬಟ್ಟೆಗಳ ಬಿಸಾಡಿ ಇಳಿಗೂದಲೀಸಾಡಿ ಹೊರಟು ಹೋಗುವಳು. ಅವಳ ತಾಯಿ ತಂದೆಗಳು ಎಷ್ಟು ಹೇಳಿದರೂ ಕೇಳುವುದಿಲ್ಲ. ಮುಂದೆ ಅವಳು ಕಲ್ಯಾಣಪಟ್ಟಣದಲ್ಲಿಯ ಶಿವಾನುಭವ ಮಂಟಪಕ್ಕೆ ಹೋಗುವಳು. ಅಲ್ಲಿ ಬಸವಣ್ಣ, ಚೆನ್ನಬಸವಣ್ಣ, ಸಿದ್ಧರಾಮೇಶ್ವರ ಮುಂತಾದ



CC-0. Jangamwadi Math Collection, Varanasi. An eGangotri Initiative

ಎಲ್ಲ ಶಿವಶರಣರಿರುತ್ತಿದ್ದರು. ಅಕ್ಕನನ್ನು ಕಂಡು ಪ್ರಭುದೇವರು "ಉದಮುದದ ಯೌವನವ ನೊಳಕೊಂಡ ಸತಿ ನೀನು ಇತ್ತಲೇತಕ್ಕೆ ಬಂದೆಯವ್ವಾ, ಸತಿಯೆಂದರೆ ಮುನಿವರು ಎಮ್ಮ ಶರಣರು, ನಿನ್ನ ಪತಿಯ ಕುರುಹು ಹೇಳಿದರೆ ಬಂದು ಕುಳ್ಳಿರು ಅಲ್ಲದಿರೆ ತೊಲಗು ತಾಯೆ ನಮ್ಮ ಗುಹೇಶ್ವರನ ಶರಣರಲ್ಲಿ ಸಂಗಸುಖ ಸನ್ನಿಹಿತವ ಬಯಸುವರೇ ನಿನ್ನ ಪತಿ ಯಾರೆಂಬುದು ಹೇಳಾ ಎಲೆ ಅವ್ವಾ" ಎಂದು ಕೇಳುವರು. ಆದರೆ ಅಕ್ಕನು ಹೀಗೆ ಹೇಳಿದಳು:—

"ಪಚ್ಚೆಯದ ನೆಲೆಗಟ್ಟು, ಕನಕದ ತೋರಣ, ವಜ್ರದ ಕಂಭ, ಪವಳದ ಚಪ್ಪರವನಿಕ್ಕಿ ಮದುವೆಯ ಮಾಡಿದರೆಮ್ಮವರೆನ್ನ ಮದುವೆಯ ಮಾಡಿದರು. ಕಂಕಣ ಕೈದಾರೆ ಸ್ಥಿರಸೇವೆ ಯನಿಕ್ಕಿ ಚೆನ್ನಮಲ್ಲಿಕಾರ್ಜುನನೆಂಬ ಗಂಡಗೆನ್ನ ಮದುವೆಯ ಮಾಡಿದರು".

"ಗುರುವೆ ತೆತ್ತಿಗನಾದ ಲಿಂಗವೆ ಮದುವಳಿಗನಾದ ನಾನೆ ಮದುವಳಿಗೆಯಾದೆನು ಕೊಟ್ಟರು ಸಾದ್ರುಶ್ಯವಪ್ಪ ವರನ ನೋಡಿ ಇದುಕಾರಣ ಚೆನ್ನಮಲ್ಲಿಕಾರ್ಜುನ ಗಂಡನೆನಗೆ ಮಿಕ್ಕಿನ ಲೋಕದ ಗಂಡರೆನಗೆ ಸಂಬಂಧವಿಲ್ಲವಯ್ಯಾ ಪ್ರಭುವೆ."

ಅಕ್ಕನು ಆಳರಸನನ್ನು ಬಿಟ್ಟು ಲೌಕಿಕಕ್ಕೆ ಮನಸ್ಸು ಹಾಕದೆ "ಶರಣೆಸತಿ-ಲಿಂಗಪತಿ" ಎಂಬುದನ್ನು ಆದರ್ಶವಾಗಿಟ್ಟುಕೊಂಡು ಸಾವಿಲ್ಲದ ಕೇಡಿಲ್ಲದ ಗಂಡನಿಗೆ ಒಲಿದಳು, ತಾರುಣ್ಯದಲ್ಲಿ ಅರಸನೊಡನೆ ಸುಖವಾಗಿರಬೇಕೆಂಬ ಅಲ್ಪಾಶೆಯನ್ನು ಬಿಟ್ಟು ಚೆನ್ನಮಲ್ಲಿಕಾರ್ಜುನನೇ ತನ್ನ ಪತಿಯೆಂದು ನಂಬಿ ನಿಜೈಕ್ಯವನ್ನು ಹೊಂದಿದಳು. ಅಕ್ಕನಿಗೆ ತನ್ನ ಶರೀರದ ಮೇಲೆ ಆಸೆ ಪ್ರೀತಿಗಳಿರಲಿಲ್ಲ.

"ಕಾಯ ಕರ್ರನೆ ಕಂದಿದರೇನಯ್ಯ ಕಾಯ ಮಿರ್ರನೆ ಮಿಂಚಿದರೇನಯ್ಯ? ಅಂತರಂಗ ಶುದ್ಧವಾದ ಬಳಿಕ ಚೆನ್ನಮಲ್ಲಿಕಾರ್ಜುನ ಲಿಂಗವು ಒಲಿದ ಕಾಯವು ಹೇಗಿದ್ದರೇನಯ್ಯ" ಎಂದು ತನ್ನ ನಿಜಸ್ಥಿತಿಯನ್ನು ಹೇಳಿದಳು. ಪ್ರಭುದೇವನು ಅವಳ ಮನಸ್ಸನ್ನು ನೋಡಲು ಇಲ್ಲದ ಪ್ರಶ್ನೆಗಳನ್ನು ಕೇಳಿ ನೋಡಿದನು.

"ದೇವನೊಲಿಯದೆ ನೀ ನೊಲಿಸಿದೆನೆಂಬುದು ಅದಾವುದಕ್ಕೆ ಭಾವ ಶುದ್ಧವಾದಲ್ಲಿ ಸೀರೆ ಯನಳಿದು ಕೂದಲ ಮರೆಮಾಡಲೇತಕ್ಕೆ? ಅದು ಅಂತರಂಗದ ನಾಚಿಕೆ ಬಾಹ್ಯದಲ್ಲಿ ತೋರಿತು. ಅದು ಗುಹೇಶ್ವರ ಲಿಂಗಕ್ಕೆ ಒಲವರವಲ್ಲ ಎಂದು ಹೇಳಿದರು" ಅದಕ್ಕೆ ಅಕ್ಕನು ತಾನು ಕೇಶವೆಂಬ ಸೀರೆಯನ್ನು ಏತಕೋಸ್ಕರ ಉಟ್ಟಿರುವೆನೆಂದು ಹೇಳುವ ವಚನವಿದು:—

"ಫಲಪಕ್ವವಾದಲ್ಲದೆ ಹೊರಗಣ ಸಿಪ್ಪೆ ಒಪ್ಪಗೆಡದು. ಕಾಮನ ಮುದ್ರೆಯ ಕಂಡು ನಿಮಗೆ ನೋವಾದಿತ್ತೆಂದು ಆ ಭಾವದಿಂದ ಮುಚ್ಚಿದೆ. ಇದಕ್ಕೆ ನೋವೇಕೆ? ಕಾಡದಿರಣ್ಣಾ ಚೆನ್ನ ಮಲ್ಲಿಕಾರ್ಜುನ ದೇವರ ದೇವನ ಒಳಗಾದವಳಾ" ಎಂದು ಬೇಡಿಕೊಳ್ಳುವಳು.

"ಅಂಗವ ಲಿಂಗ ಮುಖದಿಂದರ್ಪಿಸಿ ಅಂಗ ಅನಂಗವಾಯಿತ್ತು, ಮನವ ಅರಿವಿಂಗರ್ಪಿಸಿ ಮನ ಲಯವಾಯಿತ್ತು. ಭಾವವೆ ತೃಪ್ತಿಗರ್ಪಿಸಿ, ಭಾವ ಬಯಲಾಯಿತ್ತು. ಅಂಗ ಮನ ಭಾವವಳಿದ ಕಾರಣ ಕಾಯ ಅಕಾಯವಾಯಿತ್ತು. ಎನ್ನ ಕಾಯದ ಸುಖದ ಭೋಗವ ಲಿಂಗವೆ ಭೋಗಿಸುವುದಾಗಿ ಶರಣೆಸತಿ ಲಿಂಗಪತಿಯಾದೆನು ಇದು ಕಾರಣ ಚೆನ್ನಮಲ್ಲಿಕಾರ್ಜುನನೆಂಬ ಗಂಡನ ಒಳಹೊಕ್ಕು ಬೆರಸಿದೆನು." ಎಂದು ಹೇಳಿದಳು. ಅದಕ್ಕೆ ಪ್ರಭುದೇವರು "ನಾ ಸತ್ತೆನೆಂದು



CC-0. Jangamwadi Math Collection, Varanasi. An eGangotri Initiative

ಹೆಣ ಕೂಗಿದುದುಂಟೇ ಹೆಪ್ಪಿಟ್ಟ ಹಾಲು ಸಿಹಿಯಪ್ಪುದೇ, ಬಚ್ಚಿಟ್ಟ ಬಯಕೆ ಕರೆದುದುಂಟೇ ? ಈ ಮಾತು ಒಪ್ಪಬಹುದೇ ಗುಹೇಶ್ವರ ಲಿಂಗಕ್ಕೆ " ಎಂದರು. ಅದಕ್ಕೆ ಅಕ್ಕನು ಈ ಪ್ರಕಾರವಾಗಿ ಉತ್ತರ ಕೊಡುವಳು.

"ಮರೆದೊರಗಿ ಕನಸುಕಂಡು ಹೇಳುವಲ್ಲಿ ಸತ್ತಹೆಣ ಎದ್ದಿತ್ತು. ತನ್ನ ಋಣವಿಧಾನ ಎದ್ದು ಕರೆಯಿತ್ತು. ಹೆಪ್ಪಿಟ್ಟಹಾಲು ಗಟ್ಟಿದುಪ್ಪವಾಗಿ ಸಿಹಿಯಾಗಿತ್ತು. ಇದಕ್ಕೆ ತಪ್ಪಸಾಧಿಸಲೇಕೆ ಚೆನ್ನಮಲ್ಲಿಕಾರ್ಜುನ ದೇವರ ದೇವನಣ್ಣಗಳಿರಾ" ಪ್ರಭುದೇವರು ಅಕ್ಕನಕೂಡ ವಾದಮಾಡ ಲಾರದೆ ಅವಳ ಅನುಭವದ ವಾಕ್ಚಾತುರ್ಯವನ್ನು ಕಂಡು ಆಶ್ಚರ್ಯಪಟ್ಟು ಈ ರೀತಿ ಅನ್ನುವರು: "ಇದು ಲೇಸಾಯಿತ್ತು ತುಂಬಿದ ಲೆಕ್ಕಕ್ಕೆ ಮತ್ತೊಂದೆಂದು ಕಡೆಗಾಣಿಸುವಂತೆ ಸ್ಥಾಣುವಿನ ಮರೆಯಂತೆ ಅಂಬುಧಿಯ ಕೊಂಬಿನಲ್ಲಿರ್ದ ವಿಹಂಗನಂತೆ ಎಲ್ಲಿ ಬಂದಡೆ ಗುಹೇಶ್ವರನೆಂಬ ಭಾವ ಒಂದಾಯಿತ್ತು. ಅಕ್ಕನ ನಿಲುವ ಕೊಂಡಾಡಲು ತೆರಹಿಲ್ಲ ಕಾಣಾ" ಎಂದು ಚೆನ್ನಬಸವಣ್ಣನವರಿಗೆ ಹೇಳುವರು. ಅಕ್ಕನ ಲಿಂಗೈಕ್ಯದ ಸ್ಥಿತಿಯನ್ನು ಅವಳೇ ಸುಂದರವಾಗಿ ವರ್ಣಿಸಿದ್ದಾಳೆ.

"ಅಂಗದೊಳಗೆ ಅಂಗವಾಗಿ ಲಿಂಗೈಕ್ಯವ ಮಾಡಿದೆ, ಮನದೊಳಗೆ ಮನವಾಗಿ ಮನ ಲಿಂಗೈಕ್ಯವ ಮಾಡಿದೆ. ಭಾವದೊಳಗೆ ಭಾವವಾಗಿ ಭಾವಲಿಂಗೈಕ್ಯವ ಮಾಡಿದೆ. ಅರಿವಿನೊಳಗೆ ಅರಿವಾಗಿ ಅರಿವ ಲಿಂಗೈಕ್ಯವ ಮಾಡಿದೆ. ಕ್ರಿಯೆಗಳೆಲ್ಲವ ನಿಲಿಸಿ ಕ್ರಿಯಾತೀತವಾಗಿ ನಿಷ್ಪತ್ತಿ ಲಿಂಗೈಕ್ಯವ ಮಾಡಿದೆ. ನಾನೆಂಬುದ ನಿಲಿಸಿ ನೀನೆಂಬುದ ಕೆಡಿಸಿ ಉಭಯ ಲಿಂಗೈಕ್ಯವ ಮಾಡಿದೆ. ಚೆನ್ನಮಲ್ಲಿಕಾರ್ಜುನನೊಳಗೆ ನಾನಳಿದೆನಾಗಿ ಲಿಂಗವೆಂಬ ಘನವು ಎನ್ನಲ್ಲಿ ಅಳಿಯಿತ್ತು ಕಾಣಾ ಸಂಗನಬಸವಣ್ಣಾ" ತಾನು ಬೇರೆ ಲಿಂಗ ಬೇರೆ ಎಂಬ ಭೇದವನ್ನು ಮರೆತು, ಲಿಂಗದಲ್ಲಿ ತಾನು ಐಕ್ಯವಾದಳೆಂದೂ ತನ್ನಲ್ಲಿ ಲಿಂಗವು ಐಕ್ಯವಾಯಿತೆಂದೂ ಹೇಳಿದ್ದಾಳೆ. ಅಕ್ಕನು ತಾನು ಘನ ಲಿಂಗೈಕ್ಯವಾದದ್ದನ್ನು ಬಹಳ ಸರಸವಾಗಿ ಹೇಳಿದ್ದಾಳೆ. ಅಂಗವೆಂಬ ಸತಿಯು ಲಿಂಗವೆಂಬ ಪತಿಯನ್ನು ಹೊಂದಿದ್ದನ್ನು ಅಕ್ಕನು ತಿಳಿಸಿದ್ದಾಳೆ.

"ನೀ ನಾನೆಂಬುಭಯ ಸಂಗವನಳಿದು ತಾನು ತಾನಾದ ತ್ರಿಕೂಟವೆಂಬ ಮಹಾಗಿರಿಯ ತುಟ್ಟ ತುದಿಯ ಮೆಟ್ಟಿನೋಡಲು, ಬಟ್ಟಬಯಲು ಕಾಣಬಹುದು ನೋಡಾ; ಆ ಬಯಲ ಬಯಸುವರೆ ತ್ರಿಕೂಟ ಗಿರಿಯೊಳಗೊಂದು ಕಾಣಬಾರದ ಕದಳಿಯುಂಟು ನೋಡಾ; ಆ ಕದಳಿಯ ವನದಲ್ಲಿ ಒಳಹೊಕ್ಕು ನೋಡಲು, ತೊಳಗಿ ಬೆಳಗುವ ಜ್ಯೋತಿಯುಂಟು ನೋಡಾ. ನಡೆಯಲ್ಲಿಗೆ ತಾಯೆ ಗುಹೇಶ್ವರ ಲಿಂಗದಲ್ಲಿ ಪರಮ ನಿನಗೆ ಸ್ವಯವಹುದು ನೋಡಾ" ಎಂದು ಪ್ರಭುದೇವರು ಹೇಳಿದರು. ಅಕ್ಕನು ಈ ವಾಕ್ಯಗಳನ್ನು ಕೇಳಿ ಕಲ್ಯಾಣವು ತನ್ನ ಆತ್ಮೋನ್ನತಿಗೆ ಸಹಾಯವಾಯಿತೆಂದು ಹೇಳಿ ಎಲ್ಲ ಶಿವಶರಣ-ಶರಣೆಯರಿಗೆ ನಮಿಸಿ ಮನದಲ್ಲಿ ತನ್ನ ಪತಿಯಾದ ಮಲ್ಲಿಕಾರ್ಜುನನ ನಾಮಸ್ಮರಣೆಯನ್ನು ಮಾಡುತ್ತ ಶ್ರೀಶೈಲದ ಕಡೆಗೆ ಹೋಗುವಳು. "ಕದಳಿ ಎಂಬುದು ತನು. ಕದಳಿ ಎಂಬುದು ಮನ. ಕದಳಿ ಎಂಬುದು ವಿಷಯಂಗಳು. ಕದಳಿ ಎಂಬುದು ಘೋರಾರಣ್ಯ. ಕದಳಿ ಎಂಬುದ ಗೆದ್ದು ತವೆ ಬದುಕಿ ಬಂದು ಕದಳಿಯ ಬನದಲ್ಲಿ ಭವಹರನ ಕಂಡೆನು, ಭವಗೆಟ್ಟು ಬಂದೆಯಾ ಮಗಳೆ ಎಂದು ಕರುಣದಿಂ ತೆಗೆದು ಬಿಗಿದಪ್ಪಿದರೆ ಚೆನ್ನಮಲ್ಲಿಕಾರ್ಜುನನೇ ಹೃದಯ ಕಮಲದಲ್ಲಿ ಅಡಗಿದೆನು." ಅಕ್ಕನ ಈ ವಚನಗಳಲ್ಲೆಲ್ಲ ಅಂಗ ಸತಿ ಲಿಂಗ ಪತಿ ಎಂಬ ಭಾವನೆ ಕಂಡು ಬರುತ್ತದೆ. ಸಾವ ಕೆಡುವ ಲೌಕಿಕದ ಗಂಡನಾದ ಕೌಶಿಕನನ್ನು ತೊರೆದು



CC-0. Jangamwadi Math Collection, Varanasi. An eGangotri Initiative

ಚೆನ್ನಮಲ್ಲಿಕಾರ್ಜುನನೇ ತನ್ನ ಪತಿಯೆಂದು ತಿಳಿದುಕೊಂಡ ಅಕ್ಕನಲ್ಲಿ ಈ ತತ್ತ್ವದ ನಿಷ್ಠೆ, ಕೆಚ್ಚು ಹೆಚ್ಚಾಗಿ ಕಂಡುಬರುತ್ತದೆ. ಪ್ರೇಮಯೋಗಿನಿಯಾದ ಮೀರಾಬಾಯಿಯಲ್ಲಿ ಭಕ್ತಿಯ ಆವೇಶ ಇದೆ. ಜೆಬುನ್ನೀಸಾನಲ್ಲಿ ಪ್ರೇಮದ ದೈನ್ಯವಿದೆ. ಅಕ್ಕನು ಅವೆರಡನ್ನೂ ಹೊಂದಿಸಿಕೊಂಡು ತನ್ನ ನಡೆವಳಿಕೆಯಿಂದ ನುಡಿಯನ್ನು ಸಿದ್ಧಮಾಡಿ ತೋರಿಸಿದ್ದಾಳೆ. ಬಾಲ್ಯದಿಂದಲೂ ಆ ಭಾವನೆ ಅವಳಲ್ಲಿ ಇತ್ತೆಂದಮೇಲೆ ಆಕೆಯು ಲಿಂಗಪತಿ, ಅಂಗಸತಿ ಎಂಬ ತತ್ತ್ವದ ವಾತಾವರಣದಲ್ಲಿ ಹುಟ್ಟಿ ಬೆಳೆದವಳೆಂದು ತಾನೇ ವ್ಯಕ್ತವಾಗುತ್ತದೆ. ಇಂತಹ ತತ್ತ್ವಗಳು ಭಾಷ್ಯ, ಟೀಕೆಗಳಿಂದ ಸರಿಯಾಗಿ ಅರ್ಥವಾಗಲಾರವು. ಆದರೆ ಅಕ್ಕಮಹದೇವಿಯಂತಹರ ಜೀವನದಿಂದ ಅವು ಸುಲಭ ವಾಗಿ ಅರ್ಥವಾಗುತ್ತವೆ. ಅಕ್ಕನ ಆಧ್ಯಾತ್ಮಿಕ, ಪ್ರಣಯ, ವಿರಹ ಸಮಾಗಮ ಇವುಗಳು ರೋಮಾಂಚಕಾರಿಯಾಗಿವೆ. ಅಕ್ಕನು ಪ್ರೇಮಯೋಗಿನಿಯೂ ಅಹುದು. ತತ್ತ್ವದರ್ಶನಿಯೂ ಅಹುದು.

## ಆಯದಕ್ಕಿ ಮಾರಯ್ಯಗಳ ಸತಿ ಲಕ್ಕಮ್ಮ

ಕಲ್ಯಾಣ ಪಟ್ಟಣದಲ್ಲಿ ಆಯದಕ್ಕಿ ಮಾರಯ್ಯ ಎಂಬ ಶಿವಶರಣರಿದ್ದರು. ಅವರ ಪತ್ನಿ ಭಕ್ತಿಯ ಬೆಳಕಾಗಿರುವ ಲಕ್ಕಮ್ಮ. ಮಾರಯ್ಯನವರು ಪ್ರತಿದಿವಸ ಶರಣರ ಅಂಗಳದಲ್ಲಿ ಬಿದ್ದಂಥ ಅಕ್ಕಿಯನ್ನು ಆರಿಸಿ ತರುತ್ತಿದ್ದರು. ಆದರಿಂದಲೇ ಅವರು ಗುರು, ಲಿಂಗ, ಜಂಗಮ ತೃಪ್ತಿಯ ನ್ನುಂಟು ಮಾಡುತ್ತಿದ್ದರು. ಇದೇ ಅವರ ಕಾಯಕ.

ಒಂದು ದಿವಸ ಪ್ರಭುದೇವರು, ಬಸವಣ್ಣ, ಚೆನ್ನಬಸವಣ್ಣ ಮುಂತಾದ ಎಲ್ಲ ಶರಣರು ಅನುಭವ ಮಂಟಪದಲ್ಲಿ ಅನುಭವ ಗೋಷ್ಠಿಯನ್ನು ನಡೆಸಿದ್ದರು. ಆಗ ಆಯದಕ್ಕಿ ಮಾರಯ್ಯ ನವರು ಪ್ರಭುದೇವರೊಡನೆ ತಮ್ಮ ಕಾಯಕದ ನಿರ್ವಂಚಕತ್ವವೆ ಗುರು, ಲಿಂಗ, ಜಂಗಮ ಕಾಯ ಕವೇ ಕೈಲಾಸವೆಂದು ಬಿನ್ನವಿಸಿದರು. ಅದಕ್ಕೆ ಪ್ರಭುದೇವರು, ಮಾಡುವ ಮಾಟದಿಂದಲೇ ಬೇರೊಂದನರಿಯಬೇಕು, ಅರುವಿಂಗೆ ನೆಮ್ಮುಗೆ ಒಡಗೂಡಿಸಿದ ಬಳಿಕ ಬಯಲ ಭ್ರಮೆಯ ಕಳೆದು ನಮ್ಮ ಗುಹೇಶ್ವರ ಲಿಂಗದಲ್ಲಿ ನಿಜಪದವನೈದುವದು, ಮಾರಯ್ಯ ಎಂದು ಉಪದೇಶ ಮಾಡಿದರು. ಆಗ ಮಾರಯ್ಯನವರು, ಅರಿವರಿತು ಮರಹು ನಷ್ಟವಾಗಿ, ಅಮರೇಶ್ವರ ಲಿಂಗದಲ್ಲಿ ನಿಜಪದವ ಬೆರಿಸಿ ಪ್ರಭುದೇವರ ಶ್ರೀಪಾದಕ್ಕೆ ನಮೋನಮೋ ಎನುತಿರ್ದನು. ಎಂದು ಬಿನ್ನೈ ಸುತ್ತಿರಲು ಮಾರಯ್ಯನವರ ಪತ್ನಿ ಲಕ್ಕಮ್ಮನು ತಮ್ಮ ಪರಿಶುದ್ಧವಾದ ಮನಸ್ಸಿನಿಂದ ಪತಿಯನ್ನು ಬಿನ್ನೈಸುವ ವಚನ:—

"ಕಾಯಕ ನಿಂದಿತ್ತು ಹೋಗಯ್ಯ ಎನ್ನಾಳ್ದನೆ. ಭಾವ ಶುದ್ಧವಾಗಿ ಮಹಾ ಶರಣರ ತಿಪ್ಪೆಯ ತಪ್ಪಲ ಅಕ್ಕಿಯ ತಂದು ನಿಶ್ಚಯಿಸಿ ಮಾಡಬೇಕು ಮಾರಯ್ಯ ಪ್ರಿಯ ಅಮರೇ ಶ್ವರ ಲಿಂಗಕ್ಕೆ ಬೇಗ ಹೋಗು ಮಾರಯ್ಯ" ಎಂದು ಲಕ್ಕಮ್ಮನು ಮಾರಯ್ಯನವರನ್ನು ಕಾಯ ಕಕ್ಕೆ ಕಳುಹಲು ಮಾರಯ್ಯನವರು ಆನಂದದಿಂದ ಬಸವಣ್ಣನ ಅಂಗಳಕ್ಕೆ ಹೋಗಿ ಅಲ್ಲಿ ಚೆಲ್ಲಿದ ಅಕ್ಕಿಯನ್ನು ನಿತ್ಯನಿಯಮಕ್ಕಿಂತ ಹೆಚ್ಚಾಗಿ ತಂದರು. ಆಶೆ ರೋಷಗಳನ್ನರಿಯದ ಲಕ್ಕಮ್ಮನ ಗುಣಗಳು ಪ್ರತಿಯೊಬ್ಬರೂ ಕಲಿಯತಕ್ಕಂಥಹವಿರುತ್ತವೆ. ಆಕೆಯು ಗಂಡನಿಗೆ ಕಾಯಕವೇ ಕೈಲಾಸವೆಂದು ಹೇಗೆ ತಿಳುಹಿಸಿ ಕೊಡುತ್ತಾಳೆ.



CC-0. Jangamwadi Math Collection, Varanasi. An eGangotri Initiative

" ಆಸೆ ಎಂಬುದು ಅರಸಿಂಗಲ್ಲದೆ ಶಿವಭಕ್ತರಿಗುಂಟೇ ? ಎಲೆ ಅಯ್ಯಾ ರೋಷವೆಂಬುದು ಯಮದೂತರಿಗಲ್ಲದೆ ಅಜಾತರಿಗುಂಟೇ ? ಎಲೆ ಅಯ್ಯಾ ಈಸಕ್ಕಿಯ ಆಶೆ ನಿಮಗೇಕೆ ? ಈಶ್ವರ ನೊಪ್ಪ ಮಾರಯ್ಯಪ್ರಿಯ ಅಮರೇಶ್ವರ ಲಿಂಗಕ್ಕೆ ದೂರ ಮಾರಯ್ಯ "

ಆಶೆ ರೋಷಗಳೆಂಬುವು ಶಿವಭಕ್ತರಿಗಿರುವುವೇ ? ಇರಕೂಡದು, ಎಂದು ಲಕ್ಕಮ್ಮನು ಹೇಳಿದ್ದಾಳೆ. ಶಿವಭಕ್ತರೆಂದರೆ ಸತ್ಯ ಸಹನತೆಯ ಮೂರ್ತಿ. ಜ್ಞಾನ, ಭಕ್ತಿಯ ಬೀಡು. ಆಶೆ, ಅಹಂಕಾರಗಳನ್ನರಿಯದ ಸದ್ಗುರು ಎಂದು ಅರ್ಥವಾಗುವುದಿಲ್ಲವೇ.

" ಒಮ್ಮನವ ಮಾರಿ ಇಮ್ಮನದಲ್ಲಿ ತಂದಿರಿ, ಇದು ನಿಮ್ಮ ಮನವೋ ? ಬಸವಣ್ಣನ ಅನುಮಾನದ ಚಿತ್ತ. ಈ ಮಾತು ಮಾರಯ್ಯಪ್ರಿಯ ಅಮರೇಶ್ವರ ಲಿಂಗಕ್ಕೆ ಸಲ್ಲದ ಬೋನವ ಅಲ್ಲಿಯೆ ಸುರಿದು ಬನ್ನಿ ಮಾರಯ್ಯ. "

ಎಂದು ಲಕ್ಕಮ್ಮನು ಹೇಳಿದ್ದಾಳೆ. ಸ್ತ್ರೀಯರ ಹೃದಯದಲ್ಲಿ ಇಂಥ ತ್ಯಾಗ ಬುದ್ಧಿಯನ್ನು ಕಾಣುವುದು ಅಪರೂಪ, ಈಗಿನ ಕಾಲದಲ್ಲಂತೂ ಸಿಗುವುದೇ ಇಲ್ಲ. ಈಗಿನ ಕಾಲದ ಸ್ತ್ರೀ ಪುರುಷ ರಿಗೆ ತಮ್ಮ ಹೊಟ್ಟೆ ಬಟ್ಟೆಗೆ ಬೇಕಾದಷ್ಟಿದ್ದರೂ ಎರಡನೆಯವರಿಗೆ ಒಂದು ದುಡ್ಡನ್ನು ಕೈಯಲ್ಲಿ ಕೊಡಬೇಕಾದರೆ ಜೀವದ ಸುತ್ತು ಬರುತ್ತದೆ. ಆದರೆ ನಮ್ಮ ಶರಣರು ಹೊನ್ನು, ಹೆಣ್ಣು, ಮಣ್ಣು ಕಂಡರೆ ಅಂಜಿ ಅಷ್ಟುದೂರ ಸರಿಯುತ್ತಿದ್ದರು. ಈಗಿನದು ದುಡ್ಡೇ ದೊಡ್ಡಪ್ಪ ಎನ್ನುವ ಕಾಲ; ದುಡ್ಡಿದ್ದವನೇ ಬಲವಂತನು, ದುಡ್ಡಿಲ್ಲದವನು ನಿರ್ಬಲನು. ಈ ಶಾಶ್ವ ತವಲ್ಲದ ಶರೀರವನ್ನು ಕಾಪಾಡಲು ಎಷ್ಟು ಕಷ್ಟಪಡುತ್ತೇವೆ. ಆದರೆ ಅಷ್ಟೇ ಕಷ್ಟವನ್ನು ಶಾಶ್ವತವಾದ ಲಿಂಗೈಕ್ಯವನ್ನು ಪಡೆಯಲು ಮಾಡಿದರೆ ಸಾರ್ಥಕವಾಗುವುದು. ಲಕ್ಕಮ್ಮನು ಪತಿಗೆ ಆಶೆ ಎಂಬುದು ಇರಕೂಡದು ಎಂದು ಬೋಧಿಸಿದರು. ಆಗ ಮಾರಯ್ಯನವರು ತಮ್ಮ ಪತ್ನಿಗೆ ಶಿವಲೋಕಕ್ಕೆ ಹೋಗುವ ಮಾರ್ಗವನ್ನರುಹು ಎಂದು ಬೇಡಿಕೊಂಡರು. ಆದಕ್ಕೆ ಲಕ್ಕಮ್ಮನು ಲಿಂಗವಿದ್ದ ಸ್ಥಳವೇ ಶಿವಶರಣರಿಗೆ ಕೈಲಾಸ, ನಿಮಗೇಕೆ ಕೈಲಾಸದ ಆಶೆ ಎಂದು ಹೇಳುವ ವಚನ ಹೀಗಿದೆ:—

" ಮಾಡುವ ಮಾಟವುಳ್ಳನ್ನಕ್ಕರ ಬೇರೊಂದು ಪದವನರಸಲೇತಕ್ಕೆ? ದಾಸೋಹವೆಂಬ ಸೇವೆಯ ಬಿಟ್ಟು ನಿರಿಸಲಾರದೆ ಕೈಲಾಸವೆಂಬ ಆಸೆ ಬೇಡ ಮಾರಯ್ಯ. ಪ್ರಿಯ ಅಮರೇಶ್ವರ ಲಿಂಗ ವಿದ್ದ ಠಾವೇ ಕೈಲಾಸವು" ಅದಕ್ಕೆ ಮಾರಯ್ಯನವರು,

" ಅಂಧಕಂಗೆ ಜೀವವಿದ್ದರೆ ಕಣ್ಣಿನಿಂದಲೇ ಕಂಡು ನಡೆಯಬಲ್ಲನೇ. ನೀ ಸತಿಯಾಗಿ ನಾ ಪತಿಯಾಗಿ ಉಭಯ ಪ್ರಾಣ ಏಕ ರೂಪವಾಗಿ ಯೋಗದ ಅಂಗನೆಯ ಅಮರೇಶ್ವರ ಲಿಂಗವ ತೋರಾ" ಎಂದು ಕೇಳುವರು.

ಇದರಿಂದ ಶಿವಶರಣರಲ್ಲಿ ಸತಿ-ಪತಿ ಎಂಬ ಭಾವದಲ್ಲಿ ಎಷ್ಟು ಸರಳತನವಿರುತ್ತಿತ್ತೆಂಬುದು ಕಾಣಿಸುತ್ತದೆ. ತ್ರಿವಿಧ ದಾಸೋಹವೆ ಮಹಾಘನಲಿಂಗೈಕ್ಯವೆಂದು ಹೇಳುವರು.

"ಆವ ಬೀಜವ ಬಿತ್ತಿದರೂ ಮೊಳೆಯ ಮುಖ ಹಿಂಚು ಮುಂಚುಂಟೆ? ನೀನು ಮರೆದಲ್ಲಿ ನಾನಾದಲ್ಲಿ ಬೇರೊಂದೊಡಲುಂಟೇ ? ಮೂಲ ನಷ್ಟವಾದಲ್ಲಿ ಅಂಕುರ ನಿಂದಿತ್ತು, ಕೂಟಕ್ಕೆ ಸತಿ



CC-0. Jangamwadi Math Collection, Varanasi. An eGangotri Initiative

ಪತಿ ಎಂಬ ನಾಮವಲ್ಲದೆ ಅರಿವಿಂಗೆ ಬೇರೊಂದೊಡಲುಂಟೇ? ಬೇರೊಂದಡಿ ಇಡದಿರು ಮಾರಯ್ಯ ಪ್ರಿಯ ಅಮರೇಶ್ವರ ಲಿಂಗವನರಿಯ ಬಲ್ಲಡೆ" ಎಂದು ಹೇಳಿದರು. ಎಲ್ಲ ಶಿವಶರಣರೊಡನೆ ಲಕ್ಷದ ಮೇಲೆ ತೊಂಬತ್ತಾರು ಸಾವಿರ ಜಂಗಮರನ್ನು ತಮ್ಮ ಮನೆಗೆ ಬಿನ್ನಹಕ್ಕೆ ಕರೆದುಕೊಂಡು ಬನ್ನಿರೆಂದು ಲಕ್ಕಮ್ಮನು ಮಾರಯ್ಯನವರಿಗೆ ಹೇಳುವ ವಚನವಿದು:—

"ಬಸವಣ್ಣ ಚೆನ್ನಬಸವಣ್ಣ ಪ್ರಭುದೇವರು ಮೊದಲಾದ ನೇಮ ನಿತ್ಯ ಕೃತ್ಯ ಸಕಲ ಸಮೂಹ ನಿತ್ಯನಿಯಮದ ಜಂಗಮ ಭಕ್ತರುಗಳು ಗಣಂಗಳು ಮುಂತಾದ ಸಮೂಹ ಸಂಪದಕ್ಕೆ ನೈವೇದ್ಯಕ್ಕೆ ವೇಳೆ ಎಂದು ಹೇಳಿ ಬಾ ಮಾರಯ್ಯ ಪ್ರಿಯ ಅಮರೇಶ್ವರ ಅಂಗದ ಮಹಾ ಮನೆಯಲ್ಲಿ ಪದಾರ್ಥವಾಯಿತ್ತೆಂದು" ಇದರಲ್ಲಿ ಎಳ್ಳಷ್ಟಾದರೂ ಅಹಂಕಾರಕ್ಕೆ ಆಸ್ಪದವಿದೆಯೇ ? ಭಕ್ತಿಯ ತವರ್ಮನೆಯೊದ ಲಕ್ಕಮ್ಮನು ಅಷ್ಟು ಜನರನ್ನು ಬಿನ್ನಹಕ್ಕೆ ಕರೆದರೂ ನಮ್ಮ ಮನೆಗೆ ಊಟಕ್ಕೆ ಬನ್ನಿರೆಂದು ಹೇಳಿಲ್ಲ, ತನ್ನ ಇಷ್ಟಲಿಂಗವಾದ ಅಮರೇಶ್ವರ ಅಂಗ ಲಿಂಗಗಳಲ್ಲಿ ಭೇದವಿಲ್ಲದ ಕಾರಣ ಅಂಗದ ಮಹಾಮನೆಯಲ್ಲಿ ನೈವೇದ್ಯಕ್ಕೆ ವೇಳೆ ಎಂದು ಹೇಳಿ ಬಾ ಎಂದಳು. ಅದಕ್ಕೆ ಮಾರಯ್ಯನವರು ನಾವು ಬಡವರು ಆ ನೇಮ ನಿತ್ಯ ವ್ರತ ಶೀಲ ಸಂಪನ್ನರಾದ ಎಲ್ಲ ಶರಣರನ್ನು ತೃಪ್ತಿ ಪಡಿಸುವುದು ಸಾಧ್ಯವೆ? ಬೇಡಾ ಎಂದು ಹೇಳಿದರು. ಅದಕ್ಕೆ ಲಕ್ಕಮ್ಮನು:—

"ಮನ ಶುದ್ಧವಿಲ್ಲದವರಿಗೆ ದ್ರವ್ಯದ ಬಡತನವಲ್ಲದೆ ಚಿತ್ತಶುದ್ಧದಲ್ಲಿ ಕಾಯಕವ ಮಾಡುವಲ್ಲಿ ಸದ್ಭಕ್ತರಿಗೆ ಎತ್ತ ನೋಡಿದತ್ತ ಲಕ್ಷ್ಮಿ ತಾನಾಗಿಪ್ಪಳು ಮಾರಯ್ಯ ಪ್ರಿಯ ಅಮರೇಶ್ವರ ಲಿಂಗದ ಸೇವೆಯುಳ್ಳನ್ನಕ್ಕ" ಎಂದಳು. ಇದನ್ನು ಕೇಳಿ ಮಾರಯ್ಯನವರು ಆನಂದದಿಂದ ಅನುಭವ ಮಂಟಪಕ್ಕೆ ಹೋದರು. ಅಲ್ಲಿ ಎಲ್ಲ ಶಿವ ಶರಣರಿದ್ದರು.

"ಸತ್ಯವೆಂಬ ತಟ್ಟೆಯಲ್ಲಿ ಚಿತ್ತಶುದ್ಧವೆಂಬ ವಿಭೂತಿಯ ಬೈಚಿಟ್ಟು, ಸಕಲ ಸಂಪದ ಪ್ರಮಥರು ಮುಂತಾಗಿ ಅಮರೇಶ್ವರ ಲಿಂಗದ ಆಶ್ರಮದಲ್ಲಿ ಪ್ರಸಾದವ ಕೊಂಬುದಕ್ಕೆ ಬಾರಾ ಸಂಗನಬಸವಣ್ಣಾ" ಇದನ್ನು ಕೇಳಿ ಎಲ್ಲ ಶರಣರೂ ಆನಂದದಿಂದ ಒಪ್ಪಿದರು. ಮಾರಯ್ಯನವರು ಅವರನ್ನೆಲ್ಲ ಕರೆದುಕೊಂಡು ಬರುವುದರೊಳಗಾಗಿ ಲಕ್ಕಮ್ಮನು ತನ್ನ ಮಹಾಜ್ಞಾನದಿಂದ ಯಾರು ಯಾರಿಗೆ ಏನೇನು ಬೇಕಾಗುತ್ತದೆಂಬುದನ್ನು ತಿಳಿದುಕೊಂಡು ಎಲ್ಲವನ್ನು ತಯಾರ ಮಾಡಿದಳು. ಎಲ್ಲ ಶರಣರು ಬಂದೊಡನೆ ಅವರ ಪಾದಾರ್ಚನೆಯನ್ನು ಮಾಡಿ ಅವರವರಿಗೆ ಏನೇನು ಬೇಕಾಗುತ್ತದೋ ಅದನ್ನೆಲ್ಲ ನೈವೇದ್ಯ ಮಾಡಿದಳು. ಎಲ್ಲರಿಗೂ ಇಚ್ಛಾಭೋಜನವ ಮಾಡಿಸಿದ್ದನ್ನು ನೋಡಿ ಆಶ್ಚರ್ಯ ಆನಂದದಿಂದ ಪ್ರಭುದೇವರು ಹೀಗೆನ್ನುವರು—

"ಆರಾರ ನೇಮಕ್ಕೆ ಸಂದಿತ್ತು ಇಚ್ಛಾ ಭೋಜನಕ್ಕೆ ಕೃತ್ಯವಾಯಿತ್ತು. ಮನ ಘನವು ಕಂಡಯ್ಯ ಸಂಗನಬಸವಣ್ಣ ಗುಹೇಶ್ವರ ಲಿಂಗಕ್ಕೆ ಆಶ್ಚರ್ಯವಾಯಿತ್ತು" ಅದಕ್ಕೆ ಬಸವಣ್ಣನವರು, ಶಿವಶರಣರು ಘನಮಹಿಮರೆಂದು ಹೇಳುವ ವಚನ—

"ಮನೆ ನೋಡಾ ಬಡವರು. ಮನನೋಡಾ ಸಂಪನ್ನರು. ಧನನೋಡಾ ಬಡವರು, ಘನಮನ ಸಂಪನ್ನರು. ಕೂಡಲ ಸಂಗನ ಶರಣರು ಕರುಳಿಲ್ಲದ ಕಲಿಗಳು ಆರಿಗುಪಮಿಸಬಾರದು" ಮಾರಯ್ಯನವರು ಎಲ್ಲ ಶರಣರನ್ನು ಸ್ತುತಿಸುತ್ತ ತಮ್ಮ ಭಕ್ತಿ ಪ್ರಕಟವಾಯಿತ್ತೆಂದು, ಸತಿ ಪತಿ ಒಂದಾಗಿ ಶರಣ ಸತಿಯಾದರು, ತಮ್ಮ— ಆತ್ಮವನ್ನು ಲಿಂಗಪತಿಗೆ ಅರ್ಪಿಸಿದರು.



CC-0. Jangamwadi Math Collection, Varanasi. An eGangotri Initiative

ಲಕ್ಕಮ್ಮನು ತನ್ನ ಜ್ಞಾನವೆಂಬ ದೀಪಕ್ಕೆ ಪತಿಯ ಭಕ್ತಿಯೆಂಬ ತೈಲವನ್ನು ಹಾಕಿದಳು. ಆ ಜ್ಞಾನ ಭಕ್ತಿಯಿಂದ ಕೂಡಿದ ಬೆಳಕು ವೀರಶೈವ ಧರ್ಮದಲ್ಲಿ ಪ್ರಕಾಶಿಸುತ್ತಲಿದೆ.

## ಮೋಳಿಗೆ ಮಾರಯ್ಯನವರ ಪತ್ನಿ ಮಹಾದೇವಿಯಮ್ಮ

ಕಲ್ಯಾಣ ಪಟ್ಟಣದಲ್ಲಿ ಮೋಳಿಗೆ ಮಾರಯ್ಯ ಎಂಬ ಶರಣರಿದ್ದರು. ಅವರ ಪತ್ನಿ ಮುಕ್ತಿಯ ಮಾರ್ಗವಾದ ಮಹದೇವಿಯಮ್ಮ. ಮಾರಯ್ಯನವರು ಕಾಶ್ಮೀರದ ಅರಸರು. ತಮ್ಮ ಅರಸುತನವನ್ನು ಬಿಟ್ಟು ಅವರು ಕಲ್ಯಾಣದಲ್ಲಿ ಮೋಳಿಗೆಯ ಕಾಯಕವನ್ನು ಮಾಡಿಕೊಂಡ್ರು ಅದರಿಂದ ಗುರು, ಲಿಂಗ, ಜಂಗಮ ತೃಪ್ತಿಯನ್ನುಂಟುಮಾಡುತ್ತಿದ್ದರು.

ಒಂದು ದಿನಸ ಮಾರಯ್ಯನವರು ಬಸವಣ್ಣನವರ ಮುಂದೆ ಈ ಪ್ರಕಾರವಾಗಿ ಮಾತನಾಡುತ್ತಿದ್ದರು. "ಕಾಯ ಸಮಾಧಿಯನೊಲ್ಲೆ, ಜೀವನೆನಹು ಸಮಾಧಿಯನೊಲ್ಲೆ. ಕೈಲಾಸನೆಂಬ ಭವಸಾಗರವನೊಲ್ಲೆ,ನೀ ಎನ್ನ ಅಲ್ಲಿಗೆ ಇಲ್ಲಿಗೆ ಎಳೆಯದೆ ನಿನ್ನಲ್ಲಿ ಕೂಟಸ್ಥನ ಮಾಡಾ, ನಿಃಕಳಂಕ ಮಲ್ಲಿಕಾರ್ಜುನ" ಎಂದು ಲಿಂಗೈಕ್ಯವಾಗುವ ಅವಸ್ಥೆಯಿಂದ ನುಡಿಯಲು ಭಕ್ತಿಸಾಗರಳಾದ ಅವರ ಪತ್ನಿ ಮಹಾದೇವಿಯಮ್ಮನು ಮುನ್ನ ಲಿಂಗದಲ್ಲಿ ಏಕಾರ್ಥವಿಲ್ಲವೇ? ಎಂದು ಕೇಳುವ ವಚನ:—
"ಕಾಷ್ಟವ ಸುವರ್ಣವ ಮಾಡಿಹೆನೆಂಬ ಘಾತುಕತನವೇ ನಿಮ್ಮ ಭಕ್ತಿ? ಸಕಲ ದೇಶ ಕೋಶವ ಬಿಟ್ಟು ಬಂದೆನೆಂಬ ಕೈಕೂಲಿಯೇ ನಿಮ್ಮ ಭಕ್ತಿ, ನಿಮ್ಮ ಭಾವವ ನಿಮ್ಮಲ್ಲೆ ತಿಳಿದುಕೊಳ್ಳಿ, ನಿಮ್ಮ ಕೂಟಕ್ಕೆ ಎನ್ನ ನಾಚಿಕೆಯ ಬಿಡಿಸಿದ ತೆರನ ತಿಳಿದುಕೊಳ್ಳಿ, ಶಕ್ತಿಯಮಾತೆಂದು ಧಿಕ್ಕರಿಸಬೇಡಿ ಇದು ನಿಃಸಂಗದ ಸಂಗ ನಿಮ್ಮ ನೀವೇ ತಿಳಿದುಕೊಳ್ಳಿ. ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನಾ" "ಮನೆಯಲ್ಲಿ ವೀರ ಧೀರ,ರಣದಲ್ಲಿ ಓಸರಿಸಿದ ಮತ್ತೆ ಭಾಷೆ ಬಂಟನಲ್ಲ,ನಿಮ್ಮ ಪ್ರಮಥರೆಲ್ಲ ಹಂಗಿಸುವರು ನಿರಂಗ ವಚನವ ಕೂಡಿಹೆನೆಂಬ ಸಂದಿಯಲ್ಲಿಯೇ ನಿಂದಿತ್ತು ನಿಜ ಲಿಂಗದ ಕೂಟ, ಆ ಗುಣ ನಿನ್ನ ನೀನೇ ನೋಡಿಕೋ ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನಾ" ಎಂದು ಅನ್ನಲು ಮಾರಯ್ಯನವರು ಮುಕ್ತಿಗೆ ಮಾರ್ಗಳಾದ ಮಹಾದೇವಿಯಮ್ಮನನ್ನು ನಿಜಲಿಂಗೈಕ್ಯದ ನಿಲುವನ್ನು ಹೇಳು ಎಂದು ಕೇಳುವ ವಚನ:—

"ಭಕ್ತಿಯುಳ್ಳನ್ನಕ್ಕ ಇಷ್ಟಲಿಂಗದ ಹಂಗುಬೇಕು. ಆತ್ಮವುಳ್ಳನ್ನಕ್ಕ ಕರ್ಕಶದ ಜಗ. ಇದು ಕಾರಣದಲ್ಲಿ ಕೈಲಾಸನೆಂಬ ಬಟ್ಟೆಯನರಸಬೇಕು. ಎನ್ನ ಸತ್ಯಕ್ಕೆ ಎನ್ನ ಭಕ್ತಿಗೆ ಎನ್ನ ಮನಕ್ಕೆ ಎನ್ನ ಮುಕ್ತಾಂಗನೆಯನ್ನ ನಿಶ್ಚಯಕ್ಕೆ ಒಂದು ಗೊತ್ತು ತೋರಾ ನಿಃಕಳಂಕ ಮಲ್ಲಿಕಾರ್ಜುನನು ಎಲ್ಲಿಹನು ಹೇಳಾ" ಎಂದು ಕೇಳಿದರು.

ಅದಕ್ಕೆ ಮಹದೇವಿಯಮ್ಮನು ಪತಿಯೆಂದವರೆ ನೀವು ಲಿಂಗ ಘನಲಿಂಗ ಸ್ವರೂಪರು ನೀವಾದಕಾರಣ ಎನಗೆ ಹೇಳಲಿಕ್ಕೆ ಸ್ವತಂತ್ರವಿಲ್ಲೆಂದು ಬಿನ್ನವಿಸಿಕೊಳ್ಳುವ ವಚನ—

"ಚಿತ್ರಬೊಂಬೆಯ ಹಾಗೆ ಎಲ್ಲಕ್ಕೂ ಆತ್ಮನಿಂದ ಚೇತರಿಸಿ ನಡೆವುತ್ತಿಹವೆ? ಅವು ಸೂತ್ರಾಧಿಕನ ಭೇದ, ಎನ್ನ ಶಕ್ತಿ ಜಾತಿ ಲಕ್ಷಣ ನಿಮ್ಮ ಭಕ್ತಿ ಸೂತ್ರದಿಂದ, ಎನ್ನ ಸ್ತ್ರೀಜಾತಿ ನಿಮ್ಮ ಪಾದದಲ್ಲಿ ಅಡಗಿತ್ತು, ಎನಗೆ ಭಿನ್ನದ ಮಾತಿಲ್ಲ ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನನೆಂಬವರು ನೀವೆ" ಇದರೊಳಗಿನ ಇವರ ನಯ, ವಿನಯ, ಜ್ಞಾನ, ಭಕ್ತಿ, ಇವು ಪ್ರತಿಯೊಬ್ಬ



CC-0. Jangamwadi Math Collection, Varanasi. An eGangotri Initiative

ಸ್ತ್ರೀಯಳಿಗೆ ಆದರ್ಶವಾಗಿವೆ. ಮಾರಯ್ಯನವರು ಹೇಳುವ ಈ ವಚನವು ಅವರಲ್ಲಿ ಸತಿ-ಪತಿ ಎಂಬಲ್ಲಿರುವ ಉಚ್ಚಧ್ಯೇಯವನ್ನು ಹೇಳುತ್ತದೆ.

"ಸತ್ವಗೆಟ್ಟಲ್ಲಿ ಕಾಷ್ಟವನೂರಿ ನಡೆಯಬೇಕು. ಮತತ್ವವಿದ್ದಲ್ಲಿ ನಿಶ್ಚಯವ ಹೇಳಲಾಗಿ ಮಹಾ ಪ್ರಸಾದವೆಂದು ಕೈಕೊಳ್ಳಬೇಕು. ಎನ್ನ ಭಕ್ತಿಗೆ ನೀ ಶಕ್ತಿಯಾದ ಕಾರಣ, ಎನ್ನ ಸತ್ಯಕ್ಕೆ ನೀ ಸತಿಯಾದ ಕಾರಣ ಎನ್ನ ಸುಖ-ದುಃಖ ನಿನ್ನ ಸುಖ-ದುಃಖ ಅನ್ಯವಿಲ್ಲ, ಇದಕ್ಕೆ ಭಿನ್ನ ಭೇದ ವೇನು ಹೇಳಾ ನಿಃಕಳಂಕ ಮಲ್ಲಿಕಾರ್ಜುನ" ಎಂದು ಕೇಳುವರು. ಅದಕ್ಕೆ ಮಹಾದೇವಿಯಮ್ಮನು ಈ ಪ್ರಕಾರವಾಗಿ ಹೇಳುವರು. "ಕಾಯವುಳ್ಳನ್ನಕ್ಕ ಲಿಂಗಪೂಜೆ, ಆತ್ಮವುಳ್ಳನ್ನಕ್ಕ ಗುರುವಿನ ಭೇದ, ಪುರುಷ ನೀ ಸತಿ ನಾನೆಂಬಲ್ಲಿ ಉಭಯದ ಬೀಜ. ನಾನೀನೆಂಬನ್ನಕ್ಕ ಅಂಗವು ಲಿಂಗದ ಲ್ಲಿಯೇ ನಿರಂಗವಾಗಬೇಕು. ಕಾಯವೆರಿಸಿ ಕೈಲಾಸಕ್ಕೆ ಹೋದಿಹೆನೆಂಬುದು ಮತವಲ್ಲ, ಘನ ಲಿಂಗ ಕರಸ್ಥಲದಲ್ಲಿಪ್ಪ ಅನುವನರಿಯದೆ ಇಲ್ಲಿಗೆ ಕರ್ಮ ಅಲ್ಲಿಗೆ ನಿಃಕರ್ಮವೆ? ಹೇಮದ ಮಾಟದ ಒಳಹೊರಗಿನಂತೆ ಮರ್ತ್ಯ ಕೈಲಾಸ ಕಟ್ಟಳೆ ಇಲ್ಲ. ಆತ್ಮ ನಿಶ್ಚಯವಾದಲ್ಲಿಯೇ ಕೈಲಾಸ, ಮತತ್ವ ವಾದಲ್ಲಿಯೆ ಮರ್ತ್ಯದೊಳಗು, ಈ ಗುಣ ಸದಮಲ ಭಕ್ತನ ಯುಕ್ತಿ, ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನ ಇಕ್ಕಿದ ಗೊತ್ತು."

ಸುಮ್ಮಾನ, ಸುಬುದ್ಧಿ, ಭಕ್ತಿಸ್ಥಲ, ಮಲ, ಅಮಲ, ಮಹೇಶ್ವರ ಸ್ಥಲ, ಅಜ್ಞಾನ ಸುಜ್ಞಾನ, ಪ್ರಸಾದಿ ಸ್ಥಲ, ಉಭಯ ಕೂಟಸ್ಥವೆಂಬುದ ಪರಿಹರಿಸಿದಲ್ಲಿ ಪ್ರಾಣಲಿಂಗಸ್ಥಲ. ಸ್ತುತಿ ನಿಂದ್ಯಾ ದಿಗಳಲ್ಲಿ ಒಡಲಳಿದು ನಿಂದುದು ಶರಣ ಸ್ಥಲ, ಇಂತೀ ಪಂಚ ಭೇದಂಗಳ ಸಂಚವನರಿತು ವಿಸಂಚ ವಿಲ್ಲದೆ ಪರುಷ ಪಾಷಾಣದಂತೆ ಭಿನ್ನ ಭಾವವಿಲ್ಲದೆ ಆರುದರುಹಿಸಿಕೊಂಬ ಕುರುಹು ಏಕವಾದಲ್ಲಿ ಐಕ್ಯಸ್ಥಲ, ಎನ್ನಯ್ಯ ಎನ್ನ ನಿಮ್ಮ ಷಡಸ್ಥಲ. ಇದಕ್ಕೆ ಭಿನ್ನ ಭಾವವಿಲ್ಲ. ಅದು ಎನ್ನ ನಿನ್ನ ಕೂಟದ ಸುಖದಂತೆ, ಇದ ಚೆನ್ನಾಗಿ ತಿಳಿದು ನೋಡಿಕೊಳ್ಳಿ. ಅಲ್ಲಿ ಇಲ್ಲಿ ಎಂಬ ಗೆಲ್ಲುಗುಳಿತನ ಬೇಡಾ ಹಾಂಗೆಂಬಲ್ಲಿಯೆ ಬಯಲಾಗಬೇಕು ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನಾ." ಎಂದು ಮಹಾದೇವಿಯಮ್ಮನು ನಿಜ ಲಿಂಗೈಕ್ಯದ ಮಾರ್ಗವನ್ನು ಸರಸವಾಗಿ ತಿಳಿಸಿದ್ದಾಳೆ. ಲಿಂಗಕ್ಕೂ ತಮಗೂ ಯಾವರೀತಿಯಲ್ಲಿ ಹೇಗೆ ಸಂಬಂಧವನ್ನು ಇಟ್ಟುಕೊಳ್ಳಬೇಕೆಂಬುದನ್ನು ಪತಿಗೆ ಪ್ರೇಮದಿಂದ, ಅಂತಃಕರುಣದಿಂದ ತಿಳಿಸಿದ್ದಾಳೆ. ಮಹಾದೇವಿಯಮ್ಮನ ಭಕ್ತಿ ಮಾರಯ್ಯನವರ ಅನುಭವವೊಂದಾಗಿ ಶರಣೆ ಸತಿಯಾಗಿ ಲಿಂಗವನ್ನೇ ಪತಿಯನ್ನಾಗಿ ಮಾಡಿ ಕೊಂಡರು.

ಆಗಿನ ನಮ್ಮ ಶರಣ-ಶರಣೆಯರು ಸತಿ-ಪತಿ ಯೆಂದರೆ ಎರಡು ದೇಹ ಒಂದೇ ಮನ ಸ್ಸಿನವರಾಗಿದ್ದರು. ಶರಣರು ದೇಹವೇ ಸತಿ, ಲಿಂಗವೇ ಪತಿ ಎಂದು ತಿಳಿದುಕೊಳ್ಳುತ್ತಿದ್ದರು. ಅಂಗ ಲಿಂಗ ಸಮರಸವನ್ನು ಮಾಡುವುದೇ ಅವರ ಜೀವನದ ಮುಖ್ಯ ಧ್ಯೇಯವಾಗಿತ್ತು. ಅವರು ಯಾವ ಕಾಯಕವನ್ನು ಮಾಡಿದರೂ ತಮ್ಮ ಸಲುವಾಗಿ ಮಾಡುತ್ತಿರಲಿಲ್ಲ. ಗುರು, ಲಿಂಗ, ಜಂಗ ಮರ ಸಲುವಾಗಿ ಮಾಡುತ್ತಿದ್ದರು.

—ಶಾಂತಾದೇವಿ ಮಾಳವಾಡ



CC-0. Jangamwadi Math Collection, Varanasi. An eGangotri Initiative

# ಭಗವಾನ್ ಬಸವೇಶ್ವರ*

ಪೂಜ್ಯರೇ ಮತ್ತು ಬಂಧು-ಭಗಿನಿಯರೇ, ಶ್ರೀ ಬಸವ ಜಯಂತಿಯ ದಿನವು ಪರಮ ಪವಿತ್ರವಾದುದು. ಆವ ಮಹಾಪುರುಷನು ನಮ್ಮ ಕನ್ನಡ ನಾಡಿನಲ್ಲಿ ಅವತರಿಸಿ ತನ್ನ ವಿಶ್ವ ಪ್ರೇಮಮಯವಾದ ಧರ್ಮ ತತ್ತ್ವಗಳಿಂದಲೂ ನಡೆನುಡಿಗಳಿಂದಲೂ ವೀರಶೈವ ಮತವನ್ನು ಉದ್ಧರಿಸಿ ಆ ಮತಕ್ಕೆ ಕೀರ್ತಿ ತೇಜವನ್ನು ಕಲ್ಪಿಸಿಕೊಟ್ಟು, ಭಾರತದಲ್ಲಿ—ಕನ್ನಡನಾಡಿನಲ್ಲಿ ಸಾಹಿತ್ಯ ಸಂಸ್ಕೃತಿಗಳ ಉನ್ನತಿಯನ್ನು ಎಸಗಿದನೋ,ಅಂತಹ ವಿಭೂತಿ ಬಸವೇಶ್ವರನು ಅವತರಿಸಿದ ದಿನವು ಎಲ್ಲರಿಗೂ ಪುಣ್ಯದಾಯಕವಾಗಿದೆ. ಜಗತ್ತಿನಲ್ಲಿ ಎಷ್ಟೋ ಜನ ಹುಟ್ಟಿ ಸತ್ತಿರುವರು. ಅವರ ಹುಟ್ಟು ಹಬ್ಬವನ್ನು ನಾವು ಮಾಡುವುದಿಲ್ಲ. ಆವ ಮಹಾತ್ಮನು ಹುಟ್ಟಿ, ತನ್ನ ಆತ್ಮಶಕ್ತಿಯಿಂದ, ತನ್ನ ಪವಿತ್ರ ಆಚಾರವಿಚಾರಗಳಿಂದ, ಸತ್ಯದ ಹೆಬ್ಬಾರಿಯನ್ನು ಜಗತ್ತಿಗೆ ತೋರಿಸಿ ಕೊಟ್ಟು, ಅದರ ಮಹತ್ತ್ವವನ್ನು ಜನಕೆಲ್ಲ ಅರುಹಿ, ವಿಶ್ವವನ್ನು ಉದ್ಧರಿಸಿ,ಪರಲೋಕಕ್ಕೆ ತೆರಳಿರುವನೋ ಅಂತಹ ಮಹಾನುಭಾವನ ಜಯಂತ್ಯುತ್ಸವವನ್ನು ಆಚರಿಸುತ್ತೇವೆ. ಶ್ರೀ ಬಸವೇಶ್ವರನ ಸಮಾಜ ಸುಧಾರಣೆಯು ಬಹು ಘನವಾದುದು. ಆತನು ಕೈಕೊಂಡ ಕಾರ್ಯವು ಶಾಶ್ವತವಾದ ಫಲಗಳನ್ನು ಕೊಟ್ಟಿತು. ಪುರುಷರಂತೆಯೇ ಸ್ತ್ರೀಯರಿಗೂ ಸ್ವಾತಂತ್ರ್ಯವಿದೆ ಎಂಬ ವಿಚಾರವನ್ನು ಬಸವೇಶ್ವರನು ಸರ್ವರಿಗೂ ತಿಳಿಸಿಕೊಟ್ಟನು. ಈ ರೀತಿ ಸ್ತ್ರೀಯರಿಗೂ ಉನ್ನತಿ ಹೊಂದಲು ದಾರಿ ಮಾಡಿಕೊಟ್ಟದ್ದರಿಂದಲೇ ಅಕ್ಕಮಹಾದೇವಿ, ನೀಲಮ್ಮ, ರೆಮ್ಮವ್ವೆ, ವೈಜವ್ವೆ, ಬಿಜ್ಜಮಹಾದೇವಿ ಮೊದಲಾದ ಅನೇಕ ಸ್ತ್ರೀಯರು ಮಹಾ ಜ್ಞಾನಿಗಳಾಗಿ ಉನ್ನತಿಯ ಶಿಖರವನ್ನೇರಿದರು.

ಬಸವೇಶ್ವರನು ಸ್ತ್ರೀ-ಪುರುಷರೆಂಬ ಭೇದವಿಲ್ಲದೆ ಹೊಸತರದ ಧೈರ್ಯ, ಹುರುಪನ್ನು ಸ್ತ್ರೀಯರ ಹೃದಯದಲ್ಲಿ ಹುಟ್ಟಿಸಿದನು. ಸ್ತ್ರೀಯರ ಬಂಧನವನ್ನು ಪರಿಹರಿಸುವ ಕಾರ್ಯದಲ್ಲಿ ಕೈಹಾಕಿ ಸ್ತ್ರೀಯರು ಎಲ್ಲಿಯವರೆಗೆ, ಯಾವ ಉನ್ನತ ಸೋಪಾನದವರೆಗೆ ಹೋಗಬಹುದು ಎಂಬುದನ್ನು ತಿಳಿಸಿದನು. ಇದಕ್ಕೆ ಮಹಾದೇವಿ ಅಕ್ಕನವರ ಜೀವನವೇ ಆದರ್ಶಮಯವಾಗಿದೆ. ಬಸವೇಶ್ವರನ ಕಾಲದಲ್ಲಿ ಸ್ತ್ರೀಯರ ಸ್ಥಿತಿಯು ಉಚ್ಚರೀತಿಯಲ್ಲಿತ್ತು ಎಂದು ಹೇಳುವುದರಲ್ಲಿ ಸಂಶಯವಿಲ್ಲ. ವಿದ್ಯಾವತಿಯರೂ ಮಹಾಜ್ಞಾನಿಗಳೂ ಆದ ಅನೇಕಮಂದಿ ಸ್ತ್ರೀಯರಿದ್ದರು. ತನ್ನ ಜ್ಞಾನದಿಂದ ಜ್ಞಾನಜ್ಯೋತಿ ಪ್ರಭುದೇವರನ್ನು ವಾದದಲ್ಲಿ ಗೆಲ್ಲಬೇಕಾದರೆ, ಮಹಾದೇವಿ ಅಕ್ಕನಲ್ಲಿ ಎಷ್ಟು ಬುದ್ಧಿಚತುರತೆ ವಿಶಾಲಜ್ಞಾನಗಳಿದ್ದವೆಂದು ಹೇಳಬರುವಂತಿಲ್ಲ. 'ಅಕ್ಕನ ನಿಲುವ ಕೊಂಡಾಡಲು ತೆರಹಿಲ್ಲ ಕಾಣಾ' ಎಂದು ಪ್ರಭುದೇವರು ಹೇಳಿರುವವೇ ಆಗಿನ ಸ್ತ್ರೀಯರ ಉತ್ತಮ ಸ್ಥಿತಿಯನ್ನು ತೋರಲು ನಿದರ್ಶನವಾಗಿದೆ. ಸ್ತ್ರೀಯರ ಉನ್ನತ ಸ್ಥಿತಿಗೆ ಬಸವೇಶ್ವರನ ತತ್ತೋಪದೇಶವೇ ಕಾರಣ. ಶ್ರೀ ಬಸವೇಶ್ವರನ ಕಾಲಾನಂತರ ಸ್ತ್ರೀಯರ ಸ್ಥಿತಿಯು ಮತ್ತೆ ಕೆಳಗಿಳಿಯಿತು. ಸಮಾಜ ಸುಧಾರಕನಾದ ಬಸವೇಶ್ವರನ ತತ್ತ್ವಗಳನ್ನು ಆಧಾರವಾಗಿಟ್ಟುಕೊಂಡು, ನಮ್ಮ ಸ್ತ್ರೀ ಪುರುಷರು ಈಗಿನ ಕಾಲಕ್ಕನುಸಾರವಾಗಿ ಸಮಾಜ ಮತ್ತು ದೇಶದ ಏಳ್ಗೆಗಾಗಿ ಪ್ರಯತ್ನ ಪಡುವುದು ತಮ್ಮ ಕರ್ತವ್ಯವೆಂದು ಭಾವಿಸಬೇಕು. ತಿರುಗಿ ನಾವೆಲ್ಲರೂ ಆ ಉನ್ನತ ಶಿಖರವನ್ನೇರಬೇಕು. ಬಸವೇಶ್ವರನ ಕಾಲದ ಕ್ರಾಂತಿ ದೀಪವು ಇಂದಿಗಾದರೂ ಪ್ರಜ್ವಲಿಸಬೇಕು—ಎಂದು ಬೇಡಿಕೊಳ್ಳುವೆನು.

—ಕಾಮಾಕ್ಷಿ ಬಸವನಾಳ

ಧಾರವಾಡ, ತಾ–೯–೫–೧೯೪೦

* ಈ ಲೇಖವು ಬಸವ ಜಯಂತ್ಯುತ್ಸವದ ಸ್ಮರಣೆಗಾಗಿ ೧೪ ವರ್ಷ ವಯಸ್ಸಿನ ಕುಮಾರಿ ಕಾಮಾಕ್ಷಿ ಬಸವನಾಳ ಇವರಿಂದ ಬರೆಯಲ್ಪಟ್ಟದ್ದು. ಅದನ್ನೇ ಇಲ್ಲಿ ಯಾವ ಬದಲಾವಣೆಯನ್ನೂ ಮಾಡದೆ ಶ್ರೀ ಲೇಖಕರ ಉತ್ತೇಜನಾರ್ಥವಾಗಿ ಎಂದು ಪ್ರಕಟಿಸಲಾಗಿದೆ.



CC-0. Jangamwadi Math Collection, Varanasi. An eGangotri Initiative

# ಪರಿಶಿಷ್ಟ ೧

## ೩೩ ಶೀಲಗಳು*

ಗುರುಕಾರುಣ್ಯವಂ ಪಡೆದು, ಶಿವಲಿಂಗ ಸಂಬಂಧಿಯಾಗಿ, ಅನ್ಯದೇವಂಗಳ ಭಜನೆಯಂ ಬಿಟ್ಟು, ಗುರುಲಿಂಗ ಜಂಗಮರಲ್ಲಿ ಸಿದ್ಧ ಸಹಿತ ಶಿವಲಿಂಗಾರ್ಚಕನಾಗಿರ್ಪುದೇ ೧ ನೆಯ ಶೀಲವು.

ಲೌಕಿಕಮಾರ್ಗವನತಿಗಳೆದು ಆಚರಿಸುವುದೇ ೨ ನೆಯ ಶೀಲವು.

ಶ್ವಾನ, ಸೂಕರ, ಕುಕ್ಕುಟ, ಮಾರ್ಜಾಲಂಗಳಂ ತಮ್ಮ ಸೀಮೆಯ ಹೊಗಿಸದಿಪ್ಪುದೇ ೩ ನೆಯ ಶೀಲವು.

ಪಂಚಸೂತಕಗಳನ್ನು ಬಿಡುವುದೇ ೪ ನೆಯ ಶೀಲವು.

ತದ್ದಿನ ಮೊದಲಾದ ಕರ್ಮವಂ ಬಿಡುವುದೇ ೫ನೆಯ ಶೀಲವು.

ಸೋಮವಾರಾದಿ ತಿಥಿಗಳಲ್ಲಿ ಏಕಭುಕ್ತೋಪವಾಸಗಳಂ ಮಾಡದಿಹುದೇ ೬ ನೆಯ ಶೀಲವು.

ಸ್ಥಾವರಲಿಂಗಗಳ ಭಜನೆಯನ್ನು ಬಿಡುವುದೇ ೭ ನೆಯ ಶೀಲವು.

ಭವಿಪಾಕಮಂ ಬಿಡುವುದು, ಮತ್ತು ಭಾಂಡಕ್ಕೆ ಸರ್ವಾಂಗ ಪಾವಡವನ್ನು ಕಟ್ಟುವುದೇ ೮ ನೆಯ ಶೀಲವು.

ಪಂಚಾಕ್ಷರೀ ಮಂತ್ರದಿಂದ ಜಲ ಶುದ್ಧಮಾಡುವುದೇ ೯ ನೆಯ ಶೀಲವು.

ತನ್ನ ಸತಿಗೆ ಸಮಶೀಲ ಮಾಡುವುದು ೧೦ ನೆಯ ಶೀಲವು.

ಭವಿಯ ಸ್ನೇಹಮೋಹವಂ ಬಿಡುವುದೇ ೧೧ ನೆಯ ಶೀಲವು.

ಗುರುಚರಣಗಳಲ್ಲಿ ಗುಣಸಂಪಾದನೆಯನ್ನು ಮಾಡುವುದೇ ೧೨ ನೆಯ ಶೀಲವು.

ಜಂಗಮ ಪಾದೋದಕದಿಂದ ಲಿಂಗಕ್ಕೆ ಮಜ್ಜನವನ್ನು ಮಾಡಿ, ಅವರ ಪ್ರಸಾದವನ್ನು ಲಿಂಗಕ್ಕೆ ನೈವೇದ್ಯ ಮಾಡುವುದು ೧೩ ನೆಯ ಶೀಲವು.

ತನ್ನ ಸತಿಯು ಗರ್ಭಿಣಿಯಾದರೆ ಅಷ್ಟಮಾಸಕ್ಕೆ ಚರಲಿಂಗದ ಕೈಯಿಂದ ವಿಭೂತಿ ಪಟ್ಟವಂ ಕಟ್ಟಿಸುವುದೇ ೧೪ ನೆಯ ಶೀಲವು.

ಶಿವಭಕ್ತರಲ್ಲಿ ಜಾತಿಸೂತಕವನರಿಯದಿರುವುದೇ ೧೫ ನೆಯ ಶೀಲವು.

ಶಿವಲಾಂಛನದಲ್ಲಿ ರೂಪ, ನಿರೂಪ, ಭಿನ್ನವರಿಯದಿಹುದೇ ೧೬ ನೆಯ ಶೀಲವು.

ಕರ್ಪೂರ, ಕಸ್ತೂರಿ, ಪುನುಗು, ಜವ್ವಾದಿ ಲೇಪನಗಳಂ ಬಿಡುವುದೇ ೧೭ ನೆಯ ಶೀಲವು.

---

* ಚೆನ್ನಬಸವ ಪುರಾಣವು ಶೀಲಗಳು ೬೪ ಎಂದು ಪ್ರತಿಪಾದಿಸುತ್ತದೆ.



CC-0. Jangamwadi Math Collection, Varanasi. An eGangotri Initiative

ಮಹಿಷಿಯ ಕ್ಷೀರ ಬಿಡುವುದೇ ೧೮ ನೆಯ ಶೀಲವು.

ಭವಿಗೆಲಸವನ್ನು ಮಾಡದ ಲಿಂಗವಂತನ ಕೈಯಿಂದ ಕ್ಷೌರಾದಿ ಕರ್ಮವಂ ಮಾಡಿಸಿಕೊಂಬುವುದೇ ೧೯ ನೆಯ ಶೀಲವು.

ಲವಣವಂ ಉಂಬುವದಂ ಬಿಡುವುದೇ ೨೦ ನೆಯ ಶೀಲವು.

ಲವಣ ಬೇಕಾದರೆ ತಮ್ಮ ಅನುವಿಂಗೆ ಕ್ರಿಯೆಯಲ್ಲಿ ತಾವೇ ಮಾಡಿಕೊಂಬುವುದು. ತೊಗಲ, ಕಿವಿ, ಜೀವಂ ಬಿಟ್ಟು ನೂತ ನೂಲಿನಿಂದ ಲಿಂಗವಂತರ ಕೈಯಿಂದ ಕೊಂಬಿನ ಲಾಳಿ ಮುಟ್ಟದೆ ನೆಯ್ದ ವಸ್ತ್ರದಿಂ ಅಂಗಧೋತ್ರ ಲಿಂಗವಸ್ತ್ರವ ಮಾಡುವುದು ೨೧ ನೆಯ ಶೀಲವು.

ಪಾದುಕೆಯಂ ಬಿಟ್ಟು ಪಾವುಗೆಯಂ ಮೆಟ್ಟಿ ಚಲಿಸುವುದು ೨೨ ನೆಯ ಶೀಲವು.

ಆವ ವಸ್ತ್ರಗಳನ್ನಾಗಲಿ ಚಿಲುಮೆಯ ಅಗ್ಗಣಿಯಲ್ಲಿ ತೊಳೆಯುವುದೇ ೨೩ ನೆಯ ಶೀಲವು.

ಪುಸಿಯಂ ನುಡಿಯದಿಹುದೇ ೨೪ ನೆಯ ಶೀಲವು.

ಗುರುಲಿಂಗಜಂಗಮಕ್ಕೆ ವಂಚನೆಯಿಲ್ಲದ ಭಕ್ತಿಯನ್ನು ಮಾಡುವುದು ೨೫ ನೆಯ ಶೀಲವು.

ಶಿವಭಕ್ತನೇ ಪಂಚಾಕ್ಷರಿಯ ಮಂತ್ರವೆಂದು ನಂಬುವದೇ ೨೬ ನೆಯ ಶೀಲವು.

ತಾನಿದ್ದ ಗೃಹಕ್ಕೆ ಲಿಂಗಮುದ್ರೆಯಂ ಮಾಡುವುದು, ಮತ್ತು ಭವಿಗಳಿಗೆ ಕೈ ಮುಗಿಯದಿಹುದು ೨೭ ನೆಯ ಶೀಲವು.

ಲಿಂಗವಂತರ ಕೈಯಿಂದ ಭೋಜನವಂ ಮಾಡಿಸುವುದು ೨೮ ನೆಯ ಶೀಲವು.

ಗೋವುಗಳಂ ಲಿಂಗಮುದ್ರಾಂಕಿತ ಮಾಡುವುದೇ ೨೯ ನೆಯ ಶೀಲವು.

ಭಾಂಡಗಳ ಕಂಠಕ್ಕೆ ಮತ್ತು ಗೃಹೋಪಕರಣಗಳಿಗೆ ಲಿಂಗ ಮುದ್ರಾಂಕಿತವಂ ಮಾಡುವುದೇ ೩೦ ನೆಯ ಶೀಲವು.

ಪಶುಗಳಿಗ ಲಿಂಗವಂತರ ಕೈಯಿಂದ ಹುಲ್ಲು ತರಿಸಿ ಹಾಕಿ ಚಿಲುಮೆಯ ಅಗ್ಗಣಿಯಂ ತೋರಿಸುವುದು ೩೧ ನೆಯ ಶೀಲವು.

ತಮ್ಮ ಹಿಂಡುವ ಪಶುಗಳನ್ನು ಲಿಂಗಮುದ್ರೆಯ ಬಸವನಿಂದ ಕಟ್ಟಿಸುವುದು ಮತ್ತು ಆ ಗೋವಿನ ಗೋಮಯದಿಂದ ಷಟ್‌ಸಮ್ಮಾರ್ಜನೆಯಂ ಮಾಡುವುದೇ ೩೨ ನೆಯ ಶೀಲವು.

ಶಿವಭಕ್ತರು ಅರಸನ ಕಡೆಯಿಂದ ಭೂಮಿಯನ್ನು ತಕ್ಕೊಂಡು ಅದನ್ನು ಶುದ್ಧಮಾಡಿ ಲಿಂಗಮುದ್ರೆಯ ಕಲ್ಲು ನಡಿಸಿ, ಅಲ್ಲಿ ಪೂ ಗಿಡಗಳಂ ಹಚ್ಚಿ ಬೆಳೆಯುವುದೇ ೩೩ ನೆಯ ಶೀಲವು

ಆ ತೋಟಕ್ಕೆ ಭವಿಯ ದೃಷ್ಟಿ ಬೀಳದಂತೆ ಸುತ್ತಲೂ ಪಾಗಾರ ಕಟ್ಟುವುದು ೩೪ ನೆಯ ಶೀಲವು.

ಆರಂಭ ಮಾಡುವ ಎತ್ತುಗಳಿಗೆ ಲಿಂಗಮುದ್ರೆಯನ್ನೊತ್ತಿ ತೊಗಲಮಿಣಿಗಳಂ ಕಳೆದು ಧಾನ್ಯಗಳಂ ಬೆಳಕೊಂಬುವುದೇ ೩೫ ನೆಯ ಶೀಲವು.



CC-0. Jangamwadi Math Collection, Varanasi. An eGangotri Initiative

ಭವಿ ಶಬ್ದವನ್ನು ಕಿವಿಯಿಂದ ಕೇಳದೆ ದೃಷ್ಟಿಯಿಂದ ನೋಡದಿರುವುದೇ ೩೬ ನೆಯ ಶೀಲವು.

ಭವಿಯ ನೆರೆ, ಭವಿಯ ಬೆಳಸು, ನುಡಿ, ಮುಂತಾದುವನ್ನು ಬಿಡುವುದೇ ೩೭ ನೆಯ ಶೀಲವು.

ಅಷ್ಟೋತ್ತರಶತವ್ಯಾಧಿಗಳಾದರೂ ನಾರು, ಬೇರು, ಮಣಿ ಮಂತ್ರೌಷಧಿಗಳಂ ಕೊಳ್ಳದೆ ಪಾದೋದಕ ಪ್ರಸಾದವನ್ನೇ ಕೊಂಬುವುದು ೩೮ ನೆಯ ಶೀಲವು.

ಕಾಮಿಸಿ ಲಿಂಗವಂ ಬಿಡದಿರುವುವೇ ೩೯ ನೆಯ ಶೀಲವು.

ಮಾಟತ್ರಯಂಗಳನರಿದು ದಾನ ಮಾಡುವುದೇ ೪೦ ನೆಯ ಶೀಲವು.

ಡಂಭಕತ್ವದಿಂದ ಶಿವಾರ್ಚನೆಯನ್ನು, ಆಶಾಪರವಾಗಿ ದೀಕ್ಷೆಯನ್ನು ಮಾಡದಿರುವುದೇ ೪೧ ನೆಯ ಶೀಲವು.

ಶ್ರೋತ್ರದಿಂ ಹೀನಶಬ್ದವಂ ಕೇಳದಿಹುದೇ ೪೨ ನೆಯ ಶೀಲವು

ನವರತ್ನಾದಿಗಳಂ ಬಿಟ್ಟು ರುದ್ರಾಕ್ಷಿಯನ್ನು ಧರಿಸುವುದೇ ೪೩ ನೆಯ ಶೀಲವು.

ತಮ್ಮ ಸಮಯಾಚಾರದ ಒಡೆಯರಿಗೆ ತಮಗಿಂತಲೂ ಅಧಿಕ ಭೋಗವ ಮಾಡಿಸಿ ಅವರ ಪಾದೋದಕ ಪ್ರಸಾದವಂ ಸೇವಿಸುವುದೇ ೪೪ ನೆಯ ಶೀಲವು.

ಆಚಾರವೇ ಗುರುರೂಪವಾಗಿ, ಅರುವೇ ಜಂಗಮವಾಗಿರುವುದೇ ೪೫ ನೆಯ ಶೀಲವು.

ಚಂದ್ರಸೂರ್ಯರನ್ನು ನೋಡದಿಹುದೇ ೪೬ ನೆಯ ಶೀಲವು. ( ಚಂದ್ರಸೂರ್ಯರನ್ನು ಪ್ರತ್ಯಕ್ಷ ದೇವರೆಂದು ತಿಳಿದು ವೀರಶೈವರು ಪೂಜಿಸಬಾರದು.)

ಸೀಮೋಲ್ಲಂಘನ ಮಾಡದಿರುವುದೇ ೪೭ ನೆಯ ಶೀಲವು.

ಕಾರ್ಯಕಾರಣದಿಂ ಗಮನ ಮಾಡಬೇಕಾದರೆ ಬಂಡಿಯ ಮೇಲೆ ಗುಡಾರ ಹಾಕಿಸಿ ಬಸವಣ್ಣಗಳಂ ಕಟ್ಟಿಸಿಕೊಂಡು ಹೋಗುವುದೇ ೪೮ ನೆಯ ಶೀಲವು.

ಲೋಕದ ವರ್ತನೆಯಲ್ಲಿ ನಡೆಯದೆ ಸಮಸ್ತವು ಶಿವಾಧೀನವೆಂದಾಚರಿಸುವುದೇ ೪೯ ನೆಯ ಶೀಲವು.

ದಶವಾಯುಗಳಿಚ್ಛೆಗೆ ಹರಿಯದಿಹುದೇ ೫೦ ನೆಯ ಶೀಲವು.

ಅರಿಷಡ್ವರ್ಗಂಗಳನತಿಗಳೆವುದೇ ೫೧ ನೆಯ ಶೀಲವು.

ಕಾಲಕಲ್ಪಿತಂಗಳನತಿಗಳೆದಿಪ್ಪುದೇ ೫೨ ನೆಯ ಶೀಲವು.

ಅವಸ್ಥಾತ್ರಯಂಗಳಲ್ಲಿ ಲಿಂಗವಲ್ಲದೆ ಅನ್ಯವನರಿಯದಿಪ್ಪುದೇ ೫೩ ನೆಯ ಶೀಲವು.

“ ಯತ್ರ ಜೀವಸ್ತತ್ರ ಶಿವಃ ” ಎಂಬುವದಂ ಸಟೆಮಾಡಿ “ ಶರಣನಲ್ಲಿ ಶಿವನುಂಟೆಂದು ” ನಂಬುವುದೇ ೫೪ ನೆಯ ಶೀಲವು.

ಲಿಂಗ ಮುಂತಾಗಿ ಸಕಲ ಭೋಗಂಗಳ ಭೋಗಿಸುವುದೇ ೫೫ ನೆಯ ಶೀಲವು.



CC-0. Jangamwadi Math Collection, Varanasi. An eGangotri Initiative

ಷಟ್‌ಸ್ಥಲ ಸಂಪನ್ನನಾಗಿ ನಿರಂತರ ಸಾವಧಾನಿಯಾಗಿರುವುದೇ ೫೬ ನೆಯ ಶೀಲವು.

ಬಯಸಿ ಬಂದುದು ಅಂಗಭೋಗ, ಬಯಸದೇ ಬಂದುದು ಲಿಂಗಭೋಗವೆಂದು ಅನುಭವಿಸುವುದೇ ೫೭ ನೆಯ ಶೀಲವು.

ಷಟ್‌ತ್ರಿದಶ ಲಿಂಗಾರ್ಚನದಲ್ಲಿ ನಿರತನಾಗಿರುವುದೇ ೫೮ ನೆಯ ಶೀಲವು.

ಆಹ್ವಾನ ವಿಸರ್ಜನಂಗಳನತಿಗಳೆದು ಅಂಗವೇ ಲಿಂಗವಾಗಿರ್ಪುದು ೫೯ ನೆಯ ಶೀಲವು.

ಅಷ್ಟಮಹಾಸಿದ್ಧಿಗಳ ತೃಣೀಕರಿಸಿ, ವೇದಾಂತ ಸಿದ್ಧಾಂತವೆಂಬ ದರ್ಶನ ಸಂಪಾದನೆಯ ತೊಲಗಿಸಿ, ಅಂತರ್ಬಾಹ್ಯದಲ್ಲಿ ಲಿಂಗಸನ್ನಿಹಿತನಾಗಿರುವುದೇ ೬೦ ನೆಯ ಶೀಲವು.

ಸರ್ವ ಕಾರ್ಯಗಳಲ್ಲಿ ಶಿವಶಿವಾ ಎಂಬುವದಲ್ಲದೆ ಅನ್ಯವನರಿಯದಿಹುದೇ ೬೧ ನೆಯ ಶೀಲವು.

ದೇಹವಿಡಿದಿರ್ದು ದೇಹೋಪಾಧಿಯಿಲ್ಲದೆ, ಪ್ರಾಣವಿಡಿದಿರ್ದು ಪ್ರಾಣೋಪಾಧಿಯಿಲ್ಲದೆ, ಮನವಿಡಿದಿರ್ದು ಸಂಕಲ್ಪ ನೆನಹಿಲ್ಲದಿಹುದೇ, ಮತ್ತು ಅಂಗವೇ ಲಿಂಗ, ಲಿಂಗವೇ ಪ್ರಾಣವಾಗಿರ್ದು, ಲಿಂಗಸಹವರ್ತಿಯಾಗಿ ಸಹಭೋಜನವನ್ನಾಚರಿಸುವುದೇ ೬೨ ನೆಯ ಶೀಲವು.

'ತತ್ತ್ವಮಸಿ' ವಾಕ್ಯವೆಂಬುವದನತಿಗಳೆದು ಶೀಲವೇ ಜ್ಞಾನ, ಜ್ಞಾನವೇ ಶೀಲವಾಗಿ ದ್ವೈತಖಂಡನ ಪರಮಾನಂದಮಯವಾಗಿರ್ಪುದೇ ೬೩ ನೆಯ ಶೀಲವು.



CC-0. Jangamwadi Math Collection, Varanasi. An eGangotri Initiative

# ಪರಿಶಿಷ್ಟ ೨

## ಬಸವ ಭಾಷೆ*

ನಿಚ್ಚಲುಂ ಶಿವರಾತ್ರಿಯಂ ಮಾ |
ಳ್ಪಚ್ಚರಿಯೆನಿಪ ಭಾಷೆ ಭಕ್ತರ |
ನಚ್ಚ ಶಿವನೆಂದಿರ್ಪ ಭಾಷೆ ಶಿವೈಕ್ಯರೆಗ್ಗುಗಳ ||
ಎಚ್ಚರಿಸದಿಹ ಭಾಷೆ ಶರಣರ |
ಹೆಚ್ಚುಕುಂದುಗಳಂ ನುಡಿಯದಿಹ |
ಸಚ್ಚರಿತ್ರದ ಭಾಷೆ ಏನುವಂ ವಂಚಿಸದ ಭಾಷೆ || ೧ ||

ಮೃಡನನಾದೊಡೆಯೊಂದು ಬಾರಿಗೆ |
ಕಡಗಿ ಬೇಡದ ಭಾಷೆ ಏನಾ |
ದೊಡೆ ಬಯಸಿದೊಡವಿಗಳನಡಿಯಿಡದೀವುದದು ಭಾಷೆ ||
ನುಡಿದು ಪುಸಿಯದ ಭಾಷೆ ನೆನಪಿನ |
ಗಡಣೆಯಂತಂ ತೋರೆಯಿಲ್ಲದೆ |
ನುಡಿವ ಭಾಷೆಯು ನುಡಿದಹಗೆ ತಾಂ ನಡೆಸುವುದು ಭಾಷೆ || ೨ ||

ಛಲವನಳಿಯದ ಭಾಷೆ ಭಕ್ತರ |
ಸಲುಗೆಯಂ ಸಲಿಸುವುದು ಭಾಷೆಯ |
ಚಲಿತ ದಾಸೋಹವನು ವಿರತಂ ಮಾಳ್ಪುದದು ಭಾಷೆ ||
ನಲಿದು ಕನಸಿನೊಳುಂ ಪಿನಾಕಿಗೆ |
ಗೆಲವನೀಯದ ಭಾಷೆ ಭಕ್ತರು |
ಗಳಿಗೆ ಗೆಲವಂ ಕೊಟ್ಟು ತಾಂ ಶರಣೆಂಬುದದು ಭಾಷೆ || ೩ ||

ಪರಸಮಯಿಗಳ ದರ್ಪಮಂ ಸಂ |
ಹರಿಪ ಭಾಷೆ ಕುತರ್ಕದಿಂ ಮು |
ತ್ತರಿಪ ಪರವಾದಿಗಳನೊಮ್ಮೆಗೆ ಸೋಲಿಸುವ ಭಾಷೆ ||
ಪರಮನಂ ನಿಂದಿಸುವವೊಂದಿರ |
ನೊರಸಿ ಕಳೆವುದು ಭಾಷೆ ಹರ ಭ |
ಕ್ತರನುದಾಸೀನದಿ ನುಡಿವ ನುಡಿಗೇಳದದು ಭಾಷೆ || ೪ ||

ಹರ ಶರಣ ಪರತಂತ್ರ ಭಾವದೆ |
ಬೆರಸಿ ಚರಿಸುವ ಭಾಷೆ ಎಂದುಂ |
ಹರ ಗಣಾರ್ಪಿತವಾಗದಿನಿತುಂ ಮುಟ್ಟದಿಹ ಭಾಷೆ ||

*'ಬಸವ ಭಾಷೆ'ಯಿಂದ ಸೂಕ್ತ ಕಂಡ ಕೆಲವು ತಿದ್ದುಪಡಿಗಳೊಡನೆ ಇಲ್ಲಿ ಉದ್ಧರಿಸಲಾಗಿದೆ.



CC-0. Jangamwadi Math Collection, Varanasi. An eGangotri Initiative

ಶರಣರೇನೆಂದೊಡೆಯುವರಿಗು |
ತ್ತರವನೀಯದ ಭಾಷೆ ಜಂಗಮ |
ವರರ ನೆಗಳು ಪ್ರಾಣಲಿಂಗವೆನಿಪ್ಪುದದು ಭಾಷೆ || ೫ ||

ನರರುಮಂ ಯಾಚಿಸದ ಭಾಷೆ ಇ |
ತರ ಜನಕೆ ಕೈ ಮುಗಿಯದದು ನಿ |
ರ್ಭರದ ಭಾಷೆ ಭವೌಘ ಬಾಧೆಗೆ ಸಿಲ್ಕದಿಹ ಭಾಷೆ ||
ಕರಣವಿಷಯಕ್ಕಿಂಬುಗುಡದ |
ಚ್ಚರಿಯ ಭಾಷೆ ಷಡರಿಗಳಂ ಪರಿ |
ಹರಿಪ ಭಾಷೆ ಶಿವೈಕ್ಯ ಭಕ್ತಿಯನಲರಿಸುವ ಭಾಷೆ || ೬ ||

ನೆಟ್ಟನೀಶಾಚಾರಮಂ ಮುಂ |
ದಿಟ್ಟು ಬಳೆಯಿಸ ಭಾಷೆ ತಲೆ ಪರಿ |
ದಟ್ಟಯುಳಿದೊಡೆ ಶರಣೆನುತ್ತಿಹ ಭಾಷೆ ತಲೆಗಟ್ಟಿ ||
ಬಿಟ್ಟೋಡಂ ವಂದಿಸುವ ಭಾಷೆಯು |
ಮುಟ್ಟದೊಡೆ ಹಿಮ್ಮೆಟ್ಟದಗ್ಗದ |
ಗಟ್ಟಿ ಭಾಷೆ ಇವೆಲ್ಲವಂ ತುದಿ ಮುಟ್ಟಸುವ ಭಾಷೆ || ೭ ||

ದ್ವಿತೀಯ ಶಂಭುವೆನಿಸಿದ ನಂದಿಕೇಶ್ವರನು ಭೂಲೋಕದಲ್ಲಿ ಕಾರಣಿಕ ಪುರುಷನಾಗಿ ಬಸವನಾಮದಿಂದ ಅವತರಿಸಿ ಅನೇಕ ಪ್ರತಿಜ್ಞೆಗಳನ್ನು ಮಾಡಿ ಅದರಂತೆ ನಡೆದು ತೋರಿಸಿದುದು ಜಗತ್ಪ್ರಸಿದ್ಧವಾಗಿರುವುದು. ಭೀಮ ಕವಿಯು ತನ್ನಿಂದ ರಚಿಸಲ್ಪಟ್ಟ ಬಸವಪುರಾಣದ ಆರನೆಯ ಸಂಧಿಯ ಪ್ರಾರಂಭದಲ್ಲಿ ಆ ಅನೇಕ ಪ್ರತಿಜ್ಞೆಗಳಲ್ಲಿ ೩೪ ನ್ನು ಮಾತ್ರ ೭ ಪದ್ಯಗಳಲ್ಲಿ ಉಸುರಿರುವನು. ಅವುಗಳನ್ನೇ ಮೇಲೆ ಉದ್ಧರಿಸಲಾಗಿದೆ.

ಈ ೩೪ ಭಾಷೆಗಳಲ್ಲಿ ಮಾದರಿಗಾಗಿ ಒಂದನ್ನು ಮಾತ್ರ ಇಲ್ಲಿ ವಿಶದವಾಗಿ ವಿವರಿಸಿರುತ್ತೇವೆ. ಹೀಗೆಯೇ ಎಲ್ಲ ಭಾಷೆಗಳ ಅರ್ಥ–ತಾತ್ಪರ್ಯವನ್ನು ತಿಳಿಯಲು ಇಚ್ಛಿಸುವ ಓದುಗರು ಲಿಂಗೈಕ್ಯ ಶ್ರೀಮನ್ನಿರಂಜನ ಪ್ರ. ಸ್ವ. ಶ್ರೀ. ಶಿವಯೋಗಮಂದಿರದ ಹಾಲಗಲ್ಲ ಶ್ರೀ. ಕುಮಾರ ಮಹಾ ಸ್ವಾಮಿಗಳವರಿಂದ ಪರಿಷ್ಕರಿಸಲ್ಪಟ್ಟು ಶಿ. ಮಹಾಲಿಂಗಯ್ಯನವರು ವೀರಯ್ಯನವರು ಹಿರೇಮಠ ಇವರಿಂದ ಪ್ರಸಿದ್ಧಿಸಲ್ಪಟ್ಟ 'ಬಸವ ಭಾಷೆ' ಎಂಬ ಪುಸ್ತಕವನ್ನು ಅವಲೋಕಿಸಬೇಕಾಗಿ ಸೂಚನೆ.

**ಮೊದಲನೆಯ ಭಾಷೆ: ನಿಚ್ಚಲುಂ ಶಿವರಾತ್ರಿಯಂ ಮಾಳ್ಪಚ್ಚರಿಯೆನಿಪ ಭಾಷೆ**

**ಅರ್ಥ :—** ನಿಚ್ಚಲುಂ=ಪ್ರತಿದಿನವೂ ಶಿವರಾತ್ರಿಯಂ =ಶಿವಯೋಗವನ್ನು ಮಾಳ್ಪ= ಮಾಡುತ್ತಿರುವ ಅಚ್ಚರಿಯೆನಿಪ=ಆಶ್ಚರ್ಯವೆಂದು ತೋರುವ ಭಾಷೆ=ಪ್ರತಿಜ್ಞೆಯು.

**ವಿವರಣೆ :—** ಶಿವರಾತ್ರಿ* ಇದು ವರ್ಷಕ್ಕೊಂದುಸಾರೆ ಮಾಘ ಕೃಷ್ಣಪಕ್ಷ ಚತುರ್ದಶಿ

---

* ಶಿವರಾತ್ರಿ— ರಾತಿ ಸುಖಮಿತಿ ರಾತ್ರಿಃ—ಸುಖವನ್ನು ಕೊಡುವುದಾದುದರಿಂದ ರಾತ್ರಿಯೆನಿಸಿಕೊಳ್ಳುವುದು. ಶಿವಸ್ಯ ರಾತ್ರಿಃ—ಶಿವರಾತ್ರಿ—ಶಿವಸಂಬಂಧ ಸುಖವನ್ನು ಕೊಡುವುದರಿಂದ ಶಿವರಾತ್ರಿಯೆನಿಸುವುದು. (ಶಿವಯೋಗಿಗಳಿಗೆ ಶಿವಸಂಬಂಧ ನಿತ್ಯವಾದ ಅಖಂಡ ಸುಖವನ್ನು ಕೊಡುವುದರಿಂದ ಶಿವರಾತ್ರಿಯೆನಿಸಿಕೊಳ್ಳುವುದು. ಮಿಕ್ಕವರಿಗೆ ಕ್ಷಣಿಕವೆನಿಸಿ ಮಾಯಾ ಸಂಬಂಧ ಸುಖವನ್ನು ಕೊಡುವುದರಿಂದ ರಾತ್ರಿಯೆನಿಸಿಕೊಳ್ಳುವುದು.) ವಿವೇಕಿಗಳಾದವರು ಶಿವಸಂಬಂಧವಾದ ರಾತ್ರಿಯನ್ನೇ ಸಾಧಿಸಬೇಕು.



CC-0. Jangamwadi Math Collection, Varanasi. An eGangotri Initiative

ಯಲ್ಲಿ ಮಾಡಲ್ಪಡುವುದು ಮಹಾ ಶಿವರಾತ್ರಿಯೆಂದೂ–ಪ್ರತಿ ತಿಂಗಳು ಕೃಷ್ಣ ಪಕ್ಷ ಚತುರ್ದಶಿಯಲ್ಲಿ ಮಾಡಲ್ಪಡುವುದು ಮಾಸ ಶಿವರಾತ್ರಿಯೆಂದೂ ಕರೆಯಲ್ಪಡುವುದು. ಶಿವಭಕ್ತರು ಈ ಎರಡೂ ಪ್ರಕಾರದ ಶಿವರಾತ್ರಿಗಳಲ್ಲಿಯೂ ಶಿವಸನ್ನಿಧಿಯನ್ನೈದು, ಕಾಮ – ನಿಷ್ಕಾಮವೆಂಬ ಉಭಯ ವಿಧಿಗಳಲ್ಲಿ, ತಮಗೆ ಬೇಕಾದ ವಿಧಿಯಿಂದ, ಶಿವಾರ್ಚನೆ, ಶಿವಕಥಾಶ್ರವಣ, ಜಾಗರಣ ಮೊದಲಾದ ಸತ್ಕ್ರಿಯೆಗಳನ್ನು ಮಾಡುವುದು ಪ್ರಸಿದ್ಧವಾಗಿರುವುದು.

ಶ್ರೋತ್ರಾದಿ ಜ್ಞಾನೇಂದ್ರಿಯಗಳೈದು, ವಾಗಾದಿ ಕರ್ಮೇಂದ್ರಿಯಗಳೈದು, ಮಾನಸಾದಿ ಅಂತಃಕರಣಗಳು ನಾಲ್ಕು– ಅಂತು ಹದಿನಾಲ್ಕು ಕರಣಗಳನ್ನು ಶಿವಲಿಂಗಕ್ಕರ್ಪಿಸಿದರೆ ( ಶಿವಧರ್ಮ ಕಾರ್ಯಗಳಲ್ಲಿ ಸವೆಸಿದರೆ) ಅದು ಚತುರ್ದಶಿ ಎನಿಸುವುದು. ಆ ಶಿವಲಿಂಗದ ನೆನಹಿನಲ್ಲಿ ಮನವು ಮಗ್ನವಾಗಿ ಹೋಗಲು ಅದು ಶಿವರಾತ್ರಿ ಎನಿಸುವುದು. ಆ ಶಿವಜ್ಞಾನದ ಎಚ್ಚರ ಕುಂದದಿರಲು ಜಾಗರಣವೆನಿಸುವುದು. ಇದೇ ವೀರಶೈವರು ಮುಖ್ಯವಾಗಿ ಪ್ರತಿ ದಿನದಲ್ಲಿ ಆಚರಿಸುವ ಆಶ್ಚರ್ಯಕರವಾದ ಶಿವರಾತ್ರಿಯು.* ಇದೇ ಶಿವಯೋಗವೆಂದು ಹೇಳಲ್ಪಡುತ್ತಿದೆ.

ಜ್ಞಾನ, ಭಕ್ತಿ, ಧ್ಯಾನ, ವೃತ, ಅರ್ಚನವೆಂಬ ಅಂಗಗಳುಳ್ಳ ಶಿವಯೋಗಕ್ಕೆ ಶಿವಜ್ಞಾನಾದಿ ನಾಲ್ಕು ಅಂಗಗಳು ಗರ್ಭೀಕರಿಸಿಕೊಂಡಿರುವುದರಿಂದ ಶಿವಾರ್ಚನೆಯೇ ಮುಖ್ಯವೆನಿಪ ಶಿವಯೋಗ ವೆಂಬುದಾಗಿ ಹೇಳಿರುವುದು. ಈ ಉಭಯ ಪಕ್ಷವನ್ನು ವಿಚಾರಿಸಿ ನೋಡಿದರೆ ಶಿವಾರ್ಚನೆ ಗಿಂತಲೂ ಮೊದಲೆ ಶಿವಜ್ಞಾನಾದಿ ನಾಲ್ಕು ಅಂಗಗಳನ್ನು ಸಾಮಾನ್ಯವಾಗಿ ಸಂಗ್ರಹಿಸಿ ಶಿವಾರ್ಚ ನೆಯ ಕಾಲಕ್ಕೆ ವಿಶೇಷ ರೂಪದಿಂದ ಕೂಡಿಕೊಂಡು ಆಚರಿಸತಕ್ಕದ್ದು ಎಂದು ಗೊತ್ತಾಗುವುದು. ಅನ್ಯ ಮತಜ್ಞಾನ ನಿಷೇಧವೂ ಅನ್ಯ ದೇವತಾ ನಿಷೇಧವೂ ಜ್ಞಾನ– ಭಕ್ತಿಗಳೆಂಬ ಎರಡು ಅಂಗ ಗಳಲ್ಲಿ ಉಕ್ತವಾಗಿರುವುದರಿಂದ ಈ ಎರಡನ್ನೂ ಪೂಜಾ ಕಾಲದಲ್ಲಿ ಆಚರಿಸಿದರೆ ಶಿವಯೋಗಕ್ಕೆ ಕೇವಲ ವಿರೋಧವೆನಿಸುವುದು. ಆದ್ದರಿಂದ ಶಿವಾರ್ಚನೆಯಲ್ಲಿ ಅನ್ಯ ಭಾವನೆಯಿಲ್ಲದೆ ಶಿವಾಕಾರ ವೃತ್ತಿಯುಳ್ಳ ಶಿವಜ್ಞಾನ, ಶಿವಭಕ್ತಿಗಳನ್ನು ಗುರುಮುಖದಿಂದರಿದು ವಿಶೇಷ ರೂಪದಿಂದ ಆಚರಿಸ ತಕ್ಕದ್ದು. ಮತ್ತು ಶಿವಧ್ಯಾನ, ಶಿವವೃತ ಈ ಎರಡು ಅಂಗಗಳನ್ನು ರುದ್ರರೂಪಿಯಾಗುವುದ ಕ್ಕೋಸ್ಕರ ಪೂಜಾಸನದಲ್ಲಿ ಕುಳಿತನಂತರ ಸಾಮಾನ್ಯ ರೂಪದಿಂದ ಮಾಡತಕ್ಕದ್ದು. ಶಿವಾರ್ಚ ನೆಯ ಕಾಲದಲ್ಲಿ ಗುರು ನಿರೂಪಿಸಿದಂತೆ ವಿಶೇಷ ರೂಪವಾಗಿ ಅಷ್ಟವಿಧಾರ್ಚನೆ ಷೋಡಶೋಪ ಚಾರಗಳಿಂದ ಇಷ್ಟಲಿಂಗ, ಪ್ರಾಣಲಿಂಗ, ಭಾವಲಿಂಗಗಳ ಅರ್ಚನೆಯನ್ನು ಆಚರಿಸತಕ್ಕದ್ದು. ಹೀಗೆ ಐದು ಅಂಗಗಳಿಂದ ಕೂಡಿದುದೇ ಶಿವಯೋಗವೆಂದು ಎನಿಸಿಕೊಳ್ಳುವುದು. ಇದೇ ವೀರಶೈವರ ಶಿವರಾತ್ರಿಯು. ಇಂತಹ ಶಿವರಾತ್ರಿಯನ್ನು ಪ್ರತಿದಿನವೂ ಮಾಡುವೆನೆಂಬುದು ಭಗವಾನ್ ಬಸವೇಶ್ವರನ ಮೊದಲನೆಯ ಪ್ರತಿಜ್ಞೆಯು.

---

* ಈ ಶಿವರಾತ್ರಿಯ ದಿವಸ ನಿರಾಹಾರಿಯಾಗಿ, ಉಪವಾಸ ಮಾಡಬೇಕೆಂಬ ವಿಧಿಯು ಕರ್ಮಿಗೆ ಉಂಟು. ಆದರೆ ವೀರಶೈವನು ಶಿವಪೂಜಾಕರ್ಮನಿಷ್ಠನಾದುದರಿಂದ ಶಿವಸನ್ನಿಧಿಯಲ್ಲಿ ವಾಸ ಮಾಡುವುದೇ ಉಪವಾಸವೆಂತಲೂ ಜಡ ಜೀವಿಗಳಂತೆ ಅಂಗಭೋಗಿಯಾಗದೆ ಲಿಂಗಭೋಗೋಪಭೋಗಿಯಾದುದರಿಂದ ನಿರಾಹಾರಿಯೆಂತಲೂ ಉಂಡು ಉಪವಾಸಿಯೆಂತಲೂ ಹೇಳಿರುವುದರಿಂದ ವೀರಶೈವನು ಇತರರಂತೆ ಉಪವಾಸ ಮಾಡುವವನಲ್ಲವೆಂದು ತಿಳಿಯತಕ್ಕದ್ದು.



CC-0. Jangamwadi Math Collection, Varanasi. An eGangotri Initiative

# ಪರಿಶಿಷ್ಟ ೩

## ಲಿಂಗಾಂಗ ಸಾಮರಸ್ಯದ ನೂರೊಂದು ಸ್ಥಲಗಳು*

### ೪೪ ಅಂಗಸ್ಥಲಗಳು

**ಭಕ್ತಸ್ಥಲಗಳು ೧೫:**

(೧) ಪಿಂಡ ಸ್ಥಲ (೨) ಪಿಂಡಜ್ಞಾನ ಸ್ಥಲ (೩) ಸಂಸಾರಹೇಯ ಸ್ಥಲ (೪) ಗುರು ಕಾರುಣ್ಯ ಸ್ಥಲ (೫) ಲಿಂಗಧಾರಣ ಸ್ಥಲ (೬) ವಿಭೂತಿ ಸ್ಥಲ (೭) ರುದ್ರಾಕ್ಷಿ ಸ್ಥಲ (೮) ಪಂಚಾಕ್ಷರಿ ಸ್ಥಲ (೯) ಭಕ್ತ ಸ್ಥಲ (೧೦) ಭಕ್ತ ಜಂಗಮ (ಉಭಯ) ಸ್ಥಲ (೧೧) ಗುರು ಲಿಂಗ ಜಂಗಮ ತ್ರಿವಿಧಸಂಪತ್ತು ಸ್ಥಲ (೧೨) ಗುರು ಲಿಂಗ ಜಂಗಮ ಪ್ರಸಾದ ಚತುರ್ವಿಧ ಸಾರಾಯ ಸ್ಥಲ (೧೩) ಉಪಾಧಿಮಾಟಸ್ಥಲ (೧೪) ನಿರುಪಾಧಿಮಾಟಸ್ಥಲ (೧೫) ಸಹಜಮಾಟಸ್ಥಲ.

**ಮಹೇಶ್ವರ ಸ್ಥಲ ೯:**

(೧) ಮಹೇಶ್ವರ ಸ್ಥಲ (೨) ಲಿಂಗನಿಷ್ಠಾಸ್ಥಲ (೩) ಪೂರ್ವಾಶ್ರಯ ನಿರಸನ ಸ್ಥಲ (೪) ವಾಗದ್ವೈತ ನಿರಸನ ಸ್ಥಲ (೫) ಆಹ್ವಾನ ನಿರಸನ ಸ್ಥಲ (೬) ಅಷ್ಟತನು ಮೂರ್ತಿ ನಿರಸನ ಸ್ಥಲ (೭) ಸರ್ವಗತ ನಿರಸನ ಸ್ಥಲ (೮) ಶಿವಜಗನ್ಮಯ ಸ್ಥಲ (೯) ಭಕ್ತದೇಹಿಕ ಲಿಂಗಸ್ಥಲ.

**ಪ್ರಸಾದಿ ಸ್ಥಲ ೭:**

(೧) ಪ್ರಸಾದಿ ಸ್ಥಲ (೨) ಗುರುಮಹಾತ್ಮೆ ಸ್ಥಲ (೩) ಲಿಂಗಮಹಾತ್ಮೆ ಸ್ಥಲ (೪) ಜಂಗಮ ಮಹಾತ್ಮೆ ಸ್ಥಲ (೫) ಭಕ್ತಮಹಾತ್ಮೆ ಸ್ಥಲ (೬) ಶರಣ ಮಹಾತ್ಮೆ ಸ್ಥಲ (೭) ಪ್ರಸಾದ ಮಹಾತ್ಮೆ ಸ್ಥಲ.

**ಪ್ರಾಣಲಿಂಗಿ ಸ್ಥಲ ೫:**

(೧) ಪ್ರಾಣಲಿಂಗಿ ಸ್ಥಲ (೨) ಪ್ರಾಣಲಿಂಗಾರ್ಚನೆ ಸ್ಥಲ (೩) ಶಿವಯೋಗ ಸಮಾಧಿ ಸ್ಥಲ (೪) ಲಿಂಗ ನಿಜಸ್ಥಲ (೫) ಅಂಗಲಿಂಗ ಸ್ಥಲ.

**ಶರಣ ಸ್ಥಲ ೪:**

(೧) ಶರಣಸ್ಥಲ (೨) ತಾಮಸನಿರಸನ ಸ್ಥಲ (೩) ನಿರ್ದೇಶ ಸ್ಥಲ (೪) ಶೀಲ ಸಂಪಾದನೆ ಸ್ಥಲ.

**ಐಕ್ಯಸ್ಥಲ ೪:**

(೧) ಐಕ್ಯಸ್ಥಲ (೨) ಸರ್ವಾಚಾರ ಸಂಪತ್ತು ಸ್ಥಲ (೩) ಏಕಭಾಜನ ಸ್ಥಲ (೪) ಸಹಭೋಜನ ಸ್ಥಲ.

* ಶ್ರೀಮಾನ್ ಬುದ್ಧಯ್ಯಸ್ವಾಮಿ ಪುರಾಣೀಕ ಇವರಿಂದ ದೊರೆತದ್ದು.



CC-0. Jangamwadi Math Collection, Varanasi. An eGangotri Initiative

## ೫೭ ಲಿಂಗ ಸ್ಥಲಗಳು

### ಆಚಾರ ಲಿಂಗಸ್ಥಲಗಳು ೯ :

( ಅ ) ಗುರುಲಿಂಗ ( ೧ ) ದೀಕ್ಷಾ ಗುರು ಸ್ಥಲ ( ೨ ) ಶಿಕ್ಷಾ ಗುರು ಸ್ಥಲ ( ೩ ) ಜ್ಞಾನ ಗುರುಸ್ಥಲ ( ಬ ) ಶಿವಲಿಂಗ ( ೪ ) ಕ್ರಿಯಾಲಿಂಗ ಸ್ಥಲ ( ೫ ) ಭಾವಲಿಂಗ ಸ್ಥಲ ( ೬ ) ಜ್ಞಾನ ಲಿಂಗ ಸ್ಥಲ ( ಕ ) ಜಂಗಮಲಿಂಗ ( ೭ ) ಸ್ವಯಸ್ಥಲ ( ೮ ) ಚರಸ್ಥಲ ( ೯ ) ಪರಸ್ಥಲ.

### ಗುರುಲಿಂಗ ಸ್ಥಲ ೯ :

( ಅ ) ಆಗಮಲಿಂಗ ( ೧ ) ಕ್ರಿಯಾಗಮ ಸ್ಥಲ ( ೨ ) ಭಾವಾಗಮ ಸ್ಥಲ ( ೩ ) ಜ್ಞಾನಾಗಮ ಸ್ಥಲ ( ಬ ) ಕಾಯಲಿಂಗ ( ೪ ) ಸಕಾಯ ಸ್ಥಲ ( ೫ ) ಅಕಾಯ ಸ್ಥಲ ( ೬ ) ಪರಕಾಯ ಸ್ಥಲ ( ಕ ) ಆಚಾರಲಿಂಗ ( ೭ ) ಧರ್ಮಾಚಾರ ಸ್ಥಲ ( ೮ ) ಭಾವಾಚಾರ ಸ್ಥಲ ( ೯ ) ಜ್ಞಾನಾಚಾರ ಸ್ಥಲ.

### ಶಿವಲಿಂಗ ಸ್ಥಲ ೯ :

( ಅ ) ಅನುಗ್ರಹ ಲಿಂಗ ( ೧ ) ಕಾಯಾನುಗ್ರಹ ಸ್ಥಲ ( ೨ ) ಇಂದ್ರಿಯಾನುಗ್ರಹ ಸ್ಥಲ ( ೩ ) ಪ್ರಾಣಾನುಗ್ರಹ ಸ್ಥಲ ( ಬ ) ಅರ್ಪಿತಲಿಂಗ ( ೪ ) ಕಾಯಾರ್ಪಿತ ಸ್ಥಲ ( ೫ ) ಕರಣಾರ್ಪಿತ ಸ್ಥಲ ( ೬ ) ಭಾವಾರ್ಪಿತ ಸ್ಥಲ ( ಕ ) ತನುಗುಣಲಿಂಗ ( ೭ ) ಶಿಷ್ಯ ಸ್ಥಲ ( ೮ ) ಶುಶ್ರೂಷಾ ಸ್ಥಲ ( ೯ ) ಸೇವ್ಯ ಸ್ಥಲ.

### ಜಂಗಮಲಿಂಗ ಸ್ಥಲ ೧೨ :

( ಅ ) ಒಲವುಲಿಂಗ ( ೧ ) ಜೀವಾತ್ಮ ಸ್ಥಲ ( ೨ ) ಅಂತರಾತ್ಮ ಸ್ಥಲ ( ೩ ) ಪರಮಾತ್ಮ ಸ್ಥಲ ( ಬ ) ನಿರೂಪಲಿಂಗ ( ೪ ) ನಿರ್ದೇಹಾಗಮ ಸ್ಥಲ ( ೫ ) ನಿರ್ಭಾವಾಗಮ ಸ್ಥಲ ( ೬ ) ನಷ್ಟಾಗಮ ಸ್ಥಲ ( ಕ ) ಪ್ರಸಾದಲಿಂಗ ( ೭ ) ಆದಿ ಪ್ರಸಾದಿ ಸ್ಥಲ ( ೮ ) ಅಂತ್ಯ ಪ್ರಸಾದಿ ಸ್ಥಲ ( ೯ ) ಸೇವ್ಯ ಪ್ರಸಾದಿ ಸ್ಥಲ ( ಡ ) ಪಾದೋದಕಲಿಂಗ (೧೦) ದೀಕ್ಷಾ ಪಾದೋದಕ ಸ್ಥಲ (೧೧) ಶಿಕ್ಷಾ ಪಾದೋದಕ ಸ್ಥಲ (೧೨) ಜ್ಞಾನ ಪಾದೋದಕ ಸ್ಥಲ.

### ಪ್ರಸಾದ ಲಿಂಗಸ್ಥಲ ೯ :

( ಅ ) ನಿಷ್ಪತ್ತಿಲಿಂಗ ( ೧ ) ಕ್ರಿಯಾ ನಿಷ್ಪತ್ತಿ ಸ್ಥಲ ( ೨ ) ಭಾವ ನಿಷ್ಪತ್ತಿ ಸ್ಥಲ ( ೩ ) ಜ್ಞಾನ ನಿಷ್ಪತ್ತಿ ಸ್ಥಲ ( ಬ ) ಆಕಾಶ ಲಿಂಗ ( ೪ ) ಪಿಂಡಾಕಾಶ ಸ್ಥಲ ( ೫ ) ಬಿಂದ್ವಾಕಾಶ ಸ್ಥಲ ( ೬ ) ಮಹದಾಕಾಶ ಸ್ಥಲ ( ಕ ) ಪ್ರಕಾಶಲಿಂಗ ( ೭ ) ಕ್ರಿಯಾ ಪ್ರಕಾಶ ಸ್ಥಲ ( ೮ ) ಭಾವ ಪ್ರಕಾಶ ಸ್ಥಲ ( ೯ ) ಜ್ಞಾನ ಪ್ರಕಾಶ ಸ್ಥಲ.

### ಮಹಾಲಿಂಗ ಸ್ಥಲ ೯ :

( ೧ ) ಸ್ವೀಕೃತ ಪ್ರಸಾದಿ ಸ್ಥಲ ( ೨ ) ಶಿಷ್ಟೋದನ ಪ್ರಸಾದಿ ಸ್ಥಲ ( ೩ ) ಚರಾಚರ ನಾಸ್ತಿ ಸ್ಥಲ ( ೪ ) ಭಾಂಡ ಸ್ಥಲ ( ೫ ) ಭಾಜನ ಸ್ಥಲ ( ೬ ) ಅಂಗಲೇಪನ ಸ್ಥಲ ( ೭ ) ಸ್ವಪರಜ್ಞಾನ ಸ್ಥಲ ( ೮ ) ಭಾವಾಭಾವ ನಷ್ಟ ಸ್ಥಲ ( ೯ ) ಜ್ಞಾನ ಶೂನ್ಯ ಸ್ಥಲ.



CC-0. Jangamwadi Math Collection, Varanasi. An eGangotri Initiative

ಪರಿಶಿಷ್ಟ ೪

# ವೀರಶೈವರ ೩೬ ತತ್ತ್ವಗಳು*

| ಮಹಾಲಿಂಗ | ಆತ್ಮ | ಆಕಾಶ | ವಾಯು | ಅಗ್ನಿ | ಅಪ್ಪು | ಪೃಥ್ವಿ |
|---|---|---|---|---|---|---|
| ಪ್ರಸಾದಲಿಂಗ | ಆಕಾಶ | ಜ್ಞಾನ | ಸಮಾನವಾಯು | ಶಿರೋತ್ರೇಂದ್ರಿಯ | ಶಬ್ದ | ಪ್ರಾಣೇಂದ್ರಿಯ |
| ಜಂಗಮಲಿಂಗ | ವಾಯು | ಮನಸ್ಸು | ಉದಾನವಾಯು | ತ್ವಗೇಂದ್ರಿಯ | ಸ್ಪರ್ಶ | ಹೃದಯೇಂದ್ರಿಯ |
| ಶಿವಲಿಂಗ | ತೇಜ | ಅಹಂಕಾರ | ವ್ಯಾನವಾಯು | ನೇತ್ರೇಂದ್ರಿಯ | ರೂಪ | ಗುಹ್ಯೇಂದ್ರಿಯ |
| ಗುರುಲಿಂಗ | ಅಪ್ಪು | ಬುದ್ಧಿ | ಅಪಾನವಾಯು | ಜಿಹ್ವೇಂದ್ರಿಯ | ರಸ | ವಾಗೇಂದ್ರಿಯ |
| ಆಚಾರಲಿಂಗ | ಪೃಥ್ವಿ | ಚಿತ್ತ | ಪ್ರಾಣವಾಯು | ಘ್ರಾಣೇಂದ್ರಿಯ | ಗಂಧ | ಪಾಯೇಂದ್ರಿಯ |

*ಶ್ರೀಮಾನ್ ಬುಧ್ಧಯ್ಯಸ್ವಾಮಿ ಪುರಾಣೀಕ ಇವರಿಂದ ದೊರೆತದ್ದು.

CC-0. Jangamwadi Math Collection, Varanasi. An eGangotri Initiative

ಪರಿಶಿಷ್ಟ ೫

# ೨೧೬ ಸಕೀಲಗಳ ನಿರ್ಣಯ*

| | | | | | | | | | |
|---|---|---|---|---|---|---|---|---|---|
| ಆಕೃತಿಗಳು | ಶಾರಕಾಕೃತಿ | ದಂಡಕಾಕೃತಿ | ಕುಂಡಲಾಕೃತಿ | ಅರ್ಧಚಂದ್ರಾಕೃತಿ | ದರ್ಪಣಾಕೃತಿ | ಜ್ಯೋತಿರಾಕೃತಿ | ನಿಃಖಲಾಕೃತಿ | ನಿರಂಜನಾಕೃತಿ | ನಿಃಶೂನ್ಯಾಕೃತಿ |
| ಪ್ರಣವುಗಳು | ನಕಾರಪ್ರಣವು | ಮಕಾರಪ್ರಣವು | ಶಿಕಾರಪ್ರಣವು | ವಕಾರಪ್ರಣವು | ಯಕಾರಪ್ರಣವು | ಓಂಕಾರ ಪ್ರಣವು | ಅಕಾರಪ್ರಣವು | ಉಕಾರಪ್ರಣವು | ಮಕಾರಪ್ರಣವು |
| ನಾದಗಳು | ವೇಣುನಾದ | ವೀಣಾನಾದ | ಘಂಟಾನಾದ | ಭೇರಿನಾದ | ಮೇಘನಾದ | ಪ್ರಣವುನಾದ | ದಿವ್ಯನಾದ | ಸಿಂಹನಾದ | ಮಹಾನಾದ |
| ಚಕ್ರಗಳು | ಆಧಾರಚಕ್ರ | ಸ್ವಾಧಿಷ್ಠಾನಚಕ್ರ | ಮಣಿಪೂರಕಚಕ್ರ | ಅನಾಹತಚಕ್ರ | ವಿಶುದ್ಧಿ ಚಕ್ರ | ಅಜ್ಞಾ ಚಕ್ರ | ಬ್ರಹ್ಮಚಕ್ರ | ಶಿಖಾಚಕ್ರ | ಪಶ್ಚಿಮಚಕ್ರ |
| ವರ್ಣಗಳು | ಪೀತವರ್ಣ | ಶ್ವೇತವರ್ಣ | ಹರಿತವರ್ಣ | ಮಾಂಜಿಷ್ಠವರ್ಣ | ಕಪೋತವರ್ಣ | ಎಳೆಮಿಂಚಿನವರ್ಣ | ಜ್ಯೋತಿರ್ವರ್ಣ | ಮಹಾಜ್ಯೋತಿ ವರ್ಣ | ಅಗಣಿತಜ್ಯೋತಿ ವರ್ಣ |
| ಅಂಗಗಳು | ಪೃಥ್ವಿ ಅಂಗ | ಅಪ್ಪುಅಂಗ | ಅಗ್ನಿಅಂಗ | ವಾಯು ಅಂಗ | ಆಕಾಶ ಅಂಗ | ಆತ್ಮಅಂಗ | ತ್ಯಾಗ ಅಂಗ | ಭೋಗ ಅಂಗ | ಯೋಗ ಅಂಗ |
| ಆತ್ಮಗಳು | ಜೀವಾತ್ಮ | ಅಂತರಾತ್ಮ | ಪರಮಾತ್ಮ | ನಿರ್ಮಲಆತ್ಮ | ಶುದ್ಧ ಆತ್ಮ | ಜ್ಞಾನಆತ್ಮ | ಮಹಾ ಆತ್ಮ | ದಿವ್ಯಆತ್ಮ | ಚಿನ್ಮಯಆತ್ಮ |
| ಸ್ಥಲಗಳು | ಭಕ್ತ | ಮಹೇಶ | ಪ್ರಸಾದಿ | ಪ್ರಾಣಲಿಂಗಿ | ಶರಣ | ಐಕ್ಯ | ನಿಷ್ಕಲ | ನಿರಂಜನ | ನಿಃಶ್ಶೂನ್ಯ |
| ತನುಗಳು | ಸ್ಥೂಲತನು | ಸೂಕ್ಷ್ಮತನು | ಕಾರಣತನು | ನಿರ್ಮಲತನು | ಆನಂದತನು | ಶುದ್ಧ- ತನು | ಚಿದ್ರೂಪತನು | ಚಿನ್ಮಯತನು | ನಿರ್ಮುಕ್ತತನು |
| ಹಸ್ತಗಳು | ಸುಚಿತ್ತಹಸ್ತ | ಸುಬುದ್ಧಿಹಸ್ತ | ನಿರಹಂಕಾರಹಸ್ತ | ಸುಮನಹಸ್ತ | ಸುಜ್ಞಾನಹಸ್ತ | ಸದ್ಭಾವಹಸ್ತ | ನಿಃಕಲಹಸ್ತ | ನಿರಾಳಹಸ್ತ | ನಿರಾಮಯಹಸ್ತ |
| ಲಿಂಗಗಳು | ಆಚಾರಲಿಂಗ | ಗುರುಲಿಂಗ | ಶಿವಲಿಂಗ | ಜಂಗಮಲಿಂಗ | ಪ್ರಸಾದಲಿಂಗ | ಮಹಾಲಿಂಗ | ಇಷ್ಟಲಿಂಗ | ಪ್ರಾಣಲಿಂಗ | ಭಾವಲಿಂಗ |
| ಮುಖಗಳು | ಘ್ರಾಣಮುಖ | ಜಿಹ್ವೆಮುಖ | ನೇತ್ರಮುಖ | ತ್ವಕ್ಕು ಮುಖ | ಶ್ರೋತ್ರಮುಖ | ಹೃದಯಮುಖ | ಬ್ರಹ್ಮರಂಧ್ರ ಮುಖ | ಉನ್ಮನಿಮುಖ | ಪಶ್ಚಿಮಮುಖ |

CC-0. Jangamwadi Math Collection, Varanasi. An eGangotri Initiative

| | | | | | | | | | |
|---|---|---|---|---|---|---|---|---|---|
| ಶಕ್ತಿಗಳು | ಕ್ರಿಯಾಶಕ್ತಿ | ಜ್ಞಾನಶಕ್ತಿ | ಇಚ್ಛಾಶಕ್ತಿ | ಆದಿಶಕ್ತಿ | ಪರಾಶಕ್ತಿ | ಚಿಚ್ಛಕ್ತಿ | ಆನಂದಮಯಶಕ್ತಿ | ನಿಭ್ರಾಂತಶಕ್ತಿ | ನಿರಾಮಯಶಕ್ತಿ |
| ಭಕ್ತಿಗಳು | ಶ್ರದ್ಧಾಭಕ್ತಿ | ನೈಷ್ಠಿಕಭಕ್ತಿ | ಸಾವಧಾನಭಕ್ತಿ | ಅನುಭವಭಕ್ತಿ | ಆನಂದಭಕ್ತಿ | ಸಮರಸಭಕ್ತಿ | ಪರಿಪೂರ್ಣಭಕ್ತಿ | ನಿರಂಜನಭಕ್ತಿ | ಅಪ್ರದರ್ಶನಭಕ್ತಿ |
| ಪದಾರ್ಥಗಳು | ಸುಗಂಧ ಪದಾರ್ಥ | ಸುರಸಪದಾರ್ಥ | ಸುರೂಪ ಪದಾರ್ಥ | ಸುಸ್ಪರ್ಶಪದಾರ್ಥ | ಸುಶಬ್ದ ಪದಾರ್ಥ | ಸುತೃಪ್ತಿ ಪದಾರ್ಥ | ಪರಮಾನಂದ ಪದಾರ್ಥ | ಪರಿಪೂರ್ಣ ಪದಾರ್ಥ | ಅವಿರಳಪದಾರ್ಥ |
| ಪ್ರಸಾದಗಳು | ಗಂಧ ಪ್ರಸಾದ | ರಸಪ್ರಸಾದ | ರೂಪಪ್ರಸಾದ | ಸ್ಪರ್ಶಪ್ರಸಾದ | ಶಬ್ದ ಪ್ರಸಾದ | ತೃಪ್ತಿ ಪ್ರಸಾದ | ಆನಂದ ಪ್ರಸಾದ | ಪರಿಪೂರ್ಣಪ್ರಸಾದ | ಅವಿರಳಪ್ರಸಾದ |
| ಪೂಜಾರಿಗಳು | ಬ್ರಹ್ಮ ಪೂಜಾರಿ | ವಿಷ್ಣು ಪೂಜಾರಿ | ರುದ್ರಪೂಜಾರಿ | ಈಶ್ವರಪೂಜಾರಿ | ಸದಾಶಿವಪೂಜಾರಿ | ನಿಃಕಲಪೂಜಾರಿ | ನಿಃಶೂನ್ಯಪೂಜಾರಿ | ನಿರಂಜನಪೂಜಾರಿ | ಮಹಾದೇವ ಪೂಜಾರಿ |
| ದೇವತೆಗಳು | ಬ್ರಹ್ಮನಧಿದೇವತೆ | ವಿಷ್ಣುನದಿದೈವ | ರುದ್ರನಧಿದೈವ | ಈಶ್ವರನಧಿದೈವ | ಸದಾಶಿವನಧಿದೈವ | ನಿಃಕಲನಧಿದೈವ | ನಿಃಶೂನ್ಯನಧಿದೈವ (ಪರಶಿವನಧಿದೈವ) | ನಿರಂಜನನಧಿದೈವ (ಸರ್ವೇಶ್ವರನಧಿದೈವ) | ಮಹಾದೇವ ನಧಿದೈವ |
| ಕಲೆಗಳು | ನಿವೃತ್ತಿಕಲೆ | ಪ್ರತಿಷ್ಠಾಕಲೆ | ವಿದ್ಯಾಕಲೆ | ಶಾಂತಿಕಲೆ | ಶಾಂತಾತೀತಕಲೆ | ಶಾಂತತೀತೋತ್ತರ ಕಲೆ | ಆನಂದಕಲೆ | ನಿರ್ಮಳಕಲೆ (ನಿರ್ನಾಮಕಲೆ) | ನಿರ್ವಾಚ್ಯಕಲೆ |
| ಸಾದಾಖ್ಯಗಳು | ಕರ್ಮಸಾದಾಖ್ಯ | ಕರ್ತೃಸಾದಾಖ್ಯ | ಮೂರ್ತಿಸಾದಾಖ್ಯ | ಅಮೂರ್ತಿ ಸಾದಾಖ್ಯ | ಶಿವಸಾದಾಖ್ಯ | ಮಹಾಸಾದಾಖ್ಯ | ಅಗಮ್ಯಸಾದಾಖ್ಯ | ಅವಿರಳಸಾದಾಖ್ಯ | ನಿರ್ಮುಕ್ತಿ ಸಾದಾಖ್ಯ (ನಿರ್ಮಳಸಾದಾಖ್ಯ) |
| ಲಕ್ಷಣಗಳು | ಸತ್ ಎಂಬ ಲಕ್ಷಣ | ಚಿತ್ ಎಂಬ ಲಕ್ಷಣ | ಆನಂದವೆಂಬ ಲಕ್ಷಣ | ನಿತ್ಯವೆಂಬ ಲಕ್ಷಣ | ಪರಿಪೂರ್ಣವೆಂಬ ಲಕ್ಷಣ | ಅಖಂಡವೆಂಬ ಲಕ್ಷಣ | ಅನಾಮಯವೆಂಬ ಲಕ್ಷಣ | ಅಗಮ್ಯವೆಂಬ ಲಕ್ಷಣ | ಅಗೋಚರವೆಂಬ ಲಕ್ಷಣ (ನಿರ್ವಾಚ್ಯವೆಂಬ ಲಕ್ಷಣ) |
| ಸಂಜ್ಞೆಗಳು | ಪರವೆಂಬ ಸಂಜ್ಞೆ | ಗೂಢವೆಂಬಸಂಜ್ಞೆ | ಶರೀರಸ್ಥವೆಂಬ ಸಂಜ್ಞೆ | ಲಿಂಗಕ್ಷೇತ್ರವೆಂಬ ಸಂಜ್ಞೆ | ಅನಾದಿ ಎಂಬ ಸಂಜ್ಞೆ | ಮಹಾಸಂಜ್ಞೆ | ಅಪ್ರಮಾಣವೆಂಬ ಸಂಜ್ಞೆ | ನಿರಾಮಯವೆಂಬ ಸಂಜ್ಞೆ | ಅವಿರಳವೆಂಬ ಸಂಜ್ಞೆ |
| ದಿಕ್ಕುಗಳು | ಪೂರ್ವ ದಿಕ್ಕು | ಪಶ್ಚಿಮ ದಿಕ್ಕು | ದಕ್ಷಿಣ ದಿಕ್ಕು | ಉತ್ತರ ದಿಕ್ಕು | ಪಾತಾಳ ದಿಕ್ಕು | ಶುದ್ಧಪಯನೆಂಬ ದಿಕ್ಕು | ಹೃತ್ಕಮಲದಿಕ್ಕು | ದಿವ್ಯನಾದಘೋಷ ದಿಕ್ಕು | ಲಿಂಗಕ್ಷೇತ್ರದಿಕ್ಕು |
| ವೇದಗಳು | ಋಗ್ವೇದ | ಯಜುರ್ವೇದ | ಸಾಮವೇದ | ಅಥರ್ವಣವೇದ | ಅಜಪವೇದ | ಗಾಯತ್ರಿವೇದ | ಧನುರ್ವೇದ | ಗಂಧರ್ವವೇದ | ಶಬ್ದವೇದ |

* ಶ್ರೀಮಾನ್ ಬುದ್ಧಯ್ಯಸ್ವಾಮಿ ಪುರಾಣೀಕ ಮತ್ತು ಶ್ರೀಮಾನ್ ವೀ. ರು. ಕೊಪ್ಪಳ, ಎಂ. ಎ., ಬಿ. ಟಿ. ಇವರಿಂದ ದೊರೆತದ್ದು.

CC-0. Jangamwadi Math Collection, Varanasi. An eGangotri Initiative

# ಪರಿಶಿಷ್ಟ ೬

## ಬಸವಣ್ಣನವರ ಘುಟಿಚಕ್ರ*

ಪೃಥ್ವಿಯೆಂಬ ಭೂ ಚಕ್ರದ ಮೇಲೆ ಕಾಯಪುರವೆಂಬ ಪಟ್ಟಣ. ಅಗಮ್ಯ, ಅಗೋಚರ, ಅಪ್ರಮಾಣ, ಸಪ್ತಪಾಯ, ಸಾಮದಂಡದಲ್ಲಿ ಕೋಳಹೋದ ಕೋಟೆ. ಇದೆಂತೆಂದೊಡೆ ಇದರ ಪರಿಯ ಪೇಳುವೆನು— ಸ್ಥೂಲತನು, ಸೂಕ್ಷ್ಮತನು, ಕಾರಣತನುವೆಂಬ ಮೂರು ಸುತ್ತಿನ ಕೊಟೆ. ಸಪ್ತ ವ್ಯಸನಗಳೆಂಬ ತೆನೆಗಳು, ಕುಟಿಲ ಕುಹಕವೆಂಬ ಕೊತ್ತಳಗಳು, ಪ್ರಪಂಚವೆಂಬ ಡೆಂಕಣಿಗಳು, ಕೋಪವೆಂಬ ಪಿರಂಗಿಯು, ನವನಾಳವೆಂಬ ಬೀದಿಗಳು, ದ್ವಾರ ಒಂಭತ್ತು ಬಾಗಿಲಗಳು, ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರಂಗಳು ಎಂಬ ಆರು ಬೀದಿಗಳು. ಮಾಯಾಪಾಶವೆಂಬ ಮಾನ್ಯನಾಯಕರು, ಕನಸು ಮನಸೆಂಬ ಹರಿಗೆಕಾರರು, ಆಶೆ, ಆಮಿಷೆ ಎಂಬ ತುರಂಗಗಳು, ಅಷ್ಟ ಮದವೆಂಬ ಆನೆಗಳು, ಅಂಗವಿಕಾರವೆಂಬ ಅರಸುಗಳು, ಪಂಚಭೂತಾತ್ಮರೆಂಬ ಪ್ರಧಾನರು, ಮನ, ಬುದ್ಧಿ, ಚಿತ್ತ, ಅಹಂಕಾರವೆಂಬ ಮಂತ್ರಿ ಶಾನಭೋಗರು. ದಶವಾಯುವೆಂಬ ದಳವಾಯಿಗಳು. ದಶ ಇಂದ್ರಿಯವೆಂಬ ದೌಡಿಕಾರರು. ಕಾಲಕರ್ಮಂಗಳೆಂಬ ಕಾವಲಿಗರು. ಮರವೆಕತ್ತಲೆ ಎಂಬ ಅರಮನೆ. ರಜ ತಾಮಸಗಳು ಅರಸು ಕುಳ್ಳಿರುವ ಸಿಂಹಾಸನವು. ಹಸಿವು, ತೃಷೆ, ಈಷೆ, ವ್ಯಸನಗಳೆಂಬ ನಾಲ್ವರು ಪಂಜುಗಾರರು. ೭೨ ಸಾವಿರ ಅಲಗುಗಳು. ಈ ಪಟ್ಟಣಕ್ಕೆ ಒಬ್ಬನ ಅಂಜಿಕೆಯುಂಟು. ಯಮನ ಗೆಲೆಯುವ ಪರಿಯೆಂತೆಂದರೆ ಇದರ ಪರಿಯ ಪೇಳ್ವೆನು—ಇದಕ್ಕೆ 'ಓಂ ನಮಃ ಶಿವಾಯ' ಎಂದು ಪ್ರಣವ ಮಂತ್ರಮಂ ಬಲಿದು, ಪಂಚಾಕ್ಷರಿ ಎಂಬ ಪಟ್ಟ ಸಿಂಹದ ಮುಂದೆ ಬೆರಕಿತ್ತು, ಶಿವಧ್ಯಾನ ಯೋಗಿಯಾಗಿ, ಮಹಾ ಸದಾಚಾರ ಸಂಪನ್ನನಾಗಿ, ಅಜ್ಞಾನವಳಿದು ಸುಜ್ಞಾನಿಯಾಗಿ, ಆ ಶಿಷ್ಯನ ತನುವು ಮೀಸಲ ಮಾಡಬಲ್ಲವ, ಕೈವಿಡಿದು ಚೌಕಮಧ್ಯದಲ್ಲಿ ಕುಳ್ಳಿರಿಸಿ, ಪೃಥ್ವಿ, ಅಪ್, ತೇಜ, ವಾಯು, ಆಕಾಶವೆಂಬ ಪಂಚು ಕಳಸ ವಹೂಡಿ,ವಿಭೂತಿ ಪಟ್ಟವಂ ಕಟ್ಟಿ, ಇಷ್ಟಲಿಂಗವನು ಹಸ್ತದಲಿ ಕೊಟ್ಟು, ಪ್ರಾಣಲಿಂಗವ ಪ್ರತಿಷ್ಠೆಯ ಮಾಡಿ, ಭಕ್ತ,ಮಾಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯನೆಂದೆನಿಸಿ, ಆರು ಸ್ಥಲದ ಭೇದವನರಿಸಿ ಅರ್ಪಿತ ಅನರ್ಪಿತ ಕುಡನೆ ದೇವ, ಭೇದವ ತೋರಿಸಿ ಮಾಂಸವಳಿದು ಮಂತ್ರು ಪಿಂಡವ ಮಾಡಿ ಬ್ರಹ್ಮಲಿಖಿತ ತೊಡೆದು ಶಿವಲಿಖಿತವ ಮಾಡಿ, ಪಂಚಾಕ್ಷರಿ ಯೆನಿಸಿ ಕರ್ಣಾದಿ ಮಂತ್ರವ ತುಂಬಿ,ಆ ಶಿಷ್ಯನ ತನುವೆ ಬಿಲ್ಲುಮಾಡಿ,ಮನವೆ ಹೆದೆಯಮಾಡಿ,ಅಂಗುಷ್ಟ ಉರಿನಾಗರಕ್ಕೆಬ್ಬಿಸಿ,ಊರ್ಧ್ವನಾಳವೆಂಬ ಅಂಬುಗಳ ಹೂಡಿ,ಆಧಾರ, ಸ್ವಾಧಿಷ್ಠಾನ, ಮಣಿಪೂರಕ, ಅನಾಹತ, ವಿಶುದ್ಧಿ, ಆಜ್ಞಾಚಕ್ರವೆಂಬ ಆರು ಕೂಟದ ಬಿಲ್ಲನೇರಿಸಿ, ತ್ರಿಕೂಟವೆಂಬ ಪರ್ವತವೇರಿ, ಕುಂಡಲಕ್ಷೇತ್ರವೆಂಬ ನೆತ್ತಿಗುಂಡ ಅಮೃತಪಾನವ ಸೇವಿಸಿ, ಆ ಶ್ರೀ ಗುರುವಿಗೆ ದೀರ್ಘ ದಂಡ ನಮಸ್ಕಾರವ ಮಾಡಿ, ಆ ಶ್ರೀಗುರುವಿನ ಕೈಯಲಿ ಜ್ಞಾನವ ಕೊಂಡು, ಗುರುವೆಂಬ ಗುರಿಯ ನೋಡಿ, ಜ್ಞಾನವೆಂಬ ಸರಳ ತೊಟ್ಟು, ಓಂ ನಮಃ ಶಿವಾಯ ಎಂದು ಎಸೆಯಲು ಸ್ಥೂಲತನು, ಸೂಕ್ಷ್ಮತನು, ಕಾರಣತನುವೆಂಬ ಮೂರು ಸುತ್ತಿನ ಕೋಟೆಗಳ ಕೆಡವಿ, ಸಪ್ತವ್ಯಸನವೆಂಬ ತೆನೆಗಳ ಕೆಡವಿ, ಕುಟಿಲ ಕುಹಕರೆಂಬ ಕೊತ್ತಳಗಳ ಕೆಡವಿ, ಪ್ರಪಂಚವೆಂಬ ಡೆಂಕಣಿಗಳ ಕೆಡವಿ, ಕೋಪವೆಂಬ ಪಿರಂಗಿಯ

* ಶ್ರೀಮಾನ್ ಬುದ್ಧಯ್ಯಸ್ವಾಮಿ ಪುರಾಣೀಕ ಇವರಿಂದ ದೊರೆತದ್ದು.



CC-0. Jangamwadi Math Collection, Varanasi. An eGangotri Initiative

ಮುರಿದಟ್ಟಿ, ನವನಾಳವೆಂಬ ಬೀದಿಗಳ ಕೆಡವಿ, ನವದ್ವಾರ, ಮತ್ಸರಂಗಳೆಂಬ ಆರು ಬೀದಿಗಳ ಸುಟ್ಟು, ಮಯಾಪಾಶವೆಂಬ ಮಾನ್ಯ ನಾಯಕರೋಡಿದರು. ಕನಸು ಮನಸೆಂಬ ಹರಿಗೆಕಾರರು ಹೌ ಆದರು. ಆಶೆ ಆಮಿಷವೆಂಬ ತುರಂಗಗಳು ಅಳಿದವು. ಅಷ್ಟಮದವೆಂಬ ಆನೆಗಳು ಧರೆಗೆ ಒರಗಿದವು. ಅಂಗ ವಿಕಾರವೆಂಬ ಅರಸು ಹತನಾದನು. ಪಂಚ ಭೂತಾತ್ಮರೆಂಬ ಪ್ರಧಾನರು ಪ್ರಳಯಕ್ಕೊಳಗಾದರು. ಮನ, ಬುದ್ಧಿ, ಚಿತ್ತ,ಅಹಂಕಾರವೆಂಬ ಮಂತ್ರಿಗಳು, ಶ್ಯಾನಭೋಗರು ಧರೆಗೊರಗಿದರು. ದಶವಾಯುಗಳೆಂಬ ದಳವಾಯಿಗಳು ಧರೆಗೊರಗಿದರು. ದಶ ಇಂದ್ರಿಯವೆಂಬ ಪೌಡಿಕಾರರು ಧರೆಗೊರಗಿದರು. ಹುಸಿಯೆಂಬ ಹುಯಿಲು ಹರಿದುಹೋಯಿತು. ಅಜ್ಞಾನವೆಂಬ ಹರಿಗೆಕಾರರು ಕಡೆಗೆ ಓಡಿದರು. ಕಾಲಕರ್ಮಗಳೆಂಬ ತಳವಾರರು ಕಡೆಗೆ ಹೋದರು. ಮರವು ಕತ್ತಲೆಯೆಂಬ ಅರಮನೆ ಅಳಿದು ಹೋಯಿತು. ರಜತಾಮಸವೆಂಬ ಅರಸು ಕುಳ್ಳಿರುವ ಸಿಂಹಾಸನ ಕುಸಿದುಬಿತ್ತು. ಹಸಿವು, ತೃಷೆ, ಈಷೆ, ವ್ಯಸನಂಗಳೆಂಬ ನಾಲ್ವರು ಪಂಜುಗಾರರು ಬಿಟ್ಟುಹೋದರು. ೬೨ ಸಾವಿರ ಅಲಗಂಗಳು ಬಿಟ್ಟುಹೋದವು. ಅರಸನ ಆನೆ, ಕುದುರೆ, ಸೇನೆ, ಭಂಡಾರ ಬಿಟ್ಟು ಬಯಲಾಯ್ತು. ಒಳಕೋಟೆ ಬೆಂದಿತು. ಹೊರ ಕೋಟೆಗೆ ಕಿಚ್ಚು. ಹೊನ್ನು, ಹೆಣ್ಣು, ಮಣ್ಣು ಮೂರು ಸೂರೆಗೊಂಡಾತ ನಮ್ಮ ಪ್ರಭುವಿನೊಳಿಹ ಶರಣನ ಸಂತತಿಗಲ್ಲದೆ ಉಳಿದಾದ ನರಗುರಿಗಳಿಗೆ ಸಲ್ಲದು ಸಲ್ಲದು ನಿಮ್ಮಾಣೆ ನಿಮ್ಮ ಪ್ರಮಥರಾಣೆ ಕೂಡಲ ಸಂಗಮದೇವ.



CC-0. Jangamwadi Math Collection, Varanasi. An eGangotri Initiative

ಪರಿಶಿಷ್ಟ ೭

# ಭೂಚಕ್ರ*

ಹಳಂದರ, ಜಳಂದರ, ತಳಂದರ, ಕಳಂದರ, ಅನಂತ, ಅದ್ಭುತ, ತಾರಜ, ತಂಡಜ, ಭಿನ್ನಜ, ಭಿನ್ನಯುಕ್ತ, ಅಮಂದ, ಅಮುಂದಯುಕ್ತ, ಮಣಿರಣ, ಮಹಾನ್ಯರಣ, ಯುವನಾಮ, ವಿಶ್ವಸ, ಅಲಕೃತ, ಕೃತ, ತ್ರೇತಾ, ದ್ವಾಪರ, ಕಲಿ.

ಅನಂತವೆಂಬ ಯುಗದಲ್ಲಿ ಸಾಕ್ಷಾತ್ ಸರ್ವಜ್ಞಾನಿ ಪುಟ್ಟಿದ. ಅದ್ಭುತವೆಂಬ ಯುಗದಲ್ಲಿ ಪಾರ್ವತಿ ಪುಟ್ಟಿದಳು. ತಾರಜವೆಂಬ ಯುಗದಲ್ಲಿ ನಾರಾಯಣ ಪುಟ್ಟಿದ; ಆ ನಾರಾಯಣನ ನಾಭಿ ಕಮಲದಲ್ಲಿ ಒಂದು ಕಮಲ ಪುಟ್ಟಿತು; ಆ ಕಮಲದಲ್ಲಿ ಬ್ರಹ್ಮ ಪುಟ್ಟಿದ. ತಂಡಜವೆಂಬ ಯುಗದಲ್ಲಿ ಬ್ರಹ್ಮಂಗೆ ಅಜನೆಂಬ ಹೆಸರಾಯಿತು. ಭಿನ್ನಜವೆಂಬ ಯುಗದಲ್ಲ ಬ್ರಹ್ಮಾಂಡವೆಂಬುದೊಂದು ತತ್ತಿ ಪುಟ್ಟಿತು. ಭಿನ್ನಯುಕ್ತವೆಂಬ ಯುಗದಲ್ಲಿ ಆ ತತ್ತಿ ಭಿನ್ನವಾಯಿತು. ಅಮುಂದವೆಂಬ ಯುಗದಲ್ಲಿ ಮೇಘಪರ್ವತಂಗಳು ಪುಟ್ಟಿದವು; ನಿಂದಲ್ಲಿ ಭೂಮಿ ಪುಟ್ಟಿತು. ಅಮುಂದಯುಕ್ತವೆಂಬ ಯುಗದಲ್ಲಿ ಆ ಕುಲಪರ್ವತಂಗಳು ಪುಟ್ಟಿದವು. ಮಣಿರಣವೆಂಬ ಯುಗದಲ್ಲಿ ಸಪ್ತಸಮುದ್ರಂಗಳು ಪುಟ್ಟಿದವು. ಮಹಾನ್ಯರಣವೆಂಬ ಯುಗದಲ್ಲಿ ಉತ್ತಮ, ಮಧ್ಯಮ, ಕನಿಷ್ಟಂಗಳು ಪುಟ್ಟಿದುವು. ಯುವನಾಮವೆಂಬ ಯುಗದಲ್ಲಿ ನಕ್ಷತ್ರಂಗಳು, ಚೌರಾಯಸಿಗಳು ಪುಟ್ಟಿದುವು. ವಿಶ್ವಸವೆಂಬ ಯುಗಪಲ್ಲಿ ಚಂದ್ರ, ಸೂರ್ಯಾದಿಗಳು ಪುಟ್ಟಿದುವು. ಅಲಕೃತವೆಂಬ ಯುಗದಲ್ಲಿ ದೇವಾದಿ ದೇವರ್ಕಳು ಪುಟ್ಟಿದುವು. ಕೃತಯುಗದಲ್ಲಿ ಕಾಮಧೇನುಗಳು ಪುಟ್ಟಿದುವು. ತ್ರೇತಾಯುಗದಲ್ಲಿ ದೇವದಾನವರಿಗೆ ಯುದ್ಧವಾಯಿತು. ದ್ವಾಪಾರದಲ್ಲಿ ಕೌರವ ಪಾಂಡವರಿಗೆ ಯುದ್ಧವಾಯಿತು. ಕಲಿಯುಗದಲ್ಲಿ ಮೌರ್ಯ ಕದಂಬರಿಗೆ ಯುದ್ಧವಾಯಿತು.

ಇಂತೀ ಹದಿನೇಳು ಯುಗದಲ್ಲಿ ರಾಜ್ಯವನಾಳುವ ಸೂರ್ಯವಂಶದ ಕ್ಷತ್ರಿಯರ ಹೆಸರು ಆವುವೆಂದೊಡೆ:— ಆದಿನಾರಾಯಣ, ಆದಿನಾರಾಯಣನ ಮಗ ಬ್ರಹ್ಮ, ಬ್ರಹ್ಮನ ಮಗ ಭೃಗು, ಭೃಗುವಿನ ಮಗ ಅಂಗೀರಸ, ಅಂಗೀರಸನ ಮಗ ಕಶ್ಯಪ, ಕಶ್ಯಪನ ಮಗ ಇಂದ್ರ, ಇಂದ್ರನ ಮಗ ನಯನೇಂದ್ರ, ನಯನೇಂದ್ರನ ಮಗ ಕಾಲಸ್ವಲ, ಕಾಲಸ್ವಲನ ಮಗ ದುಂದುಮಾರ, ದುಂದುಮಾರನ ಮಗ ತ್ರಿಶಂಕು, ತ್ರಿಶಂಕುವಿನ ಮಗ ಇಕ್ಷ್ವಂಕು, ಇಕ್ಷ್ವಂಕುವಿನ ಮಗ ಹರಿಶ್ಚಂದ್ರ, ಹರಿಶ್ಚಂದ್ರನ ಮಗ ಲೋಹಿತ, ಲೋಹಿತನ ಮಗ ನಳ, ನಳನ ಮಗ ಕೂರ್ಪಶ್ಯ, ಕೂರ್ಪಶ್ಯನ ಮಗ ಪುನೋರುಪಿ, ಪುನೋರುಪಿಯ ಮಗ ಪರತಾಶಿ, ಪರತಾಶಿಯ ಮಗ ಅಮರ, ಅಮರನ ಮಗ ಮಾಂದಾತ, ಮಾಂದಾತನ ಮಗ ಮಾಗ್ರಂಚಿ, ಮಾಗ್ರಂಚಿಯ ಮಗ ದಿಲೀಪ, ದೀಲೀಪನ ಮಗ ಬಿಂದು, ಬಿಂದುವಿನ ಮಗ ಲವ, ಲವನ ಮಗ ಶಿಶುಗೋಪಾಲ, ಶಿಶುಗೋಪಾಲನ ಮಗ ನಂದಗೋಪಾಲ, ನಂದಗೋಪಾಲನ ಮಗ ವಸುದೇವ, ವಸುದೇವನ ಮಗ ಕೃಷ್ಣ, ಕೃಷ್ಣನ ಮಗ ಶಿಳಪ, ಶಿಳಪನ ಮಗ ದ್ವಿಗು, ದ್ವಿಗುವಿನ ಮಗ ರಘು, ರಘುವಿನ ಮಗ ಆರಣ್ಯ, ಆರಣ್ಯನ

* ಶ್ರೀಮಾನ್ ಬುದ್ಧಯ್ಯಸ್ವಾಮಿ ಪುರಾಣೀಕ ಇವರಿಂದ ದೊರೆತದ್ದು.



CC-0. Jangamwadi Math Collection, Varanasi. An eGangotri Initiative

ಮಗ ಮೃಗರಾಜ; ಮೃಗರಾಜನ ಮಗ ದಶರಥ, ದಶರಥನ ಮಗ ರಾಮ. ಇಂತಿವರೆಲ್ಲರೂ ಪ್ರಳಯ ಕ್ಕೊಳಗಾದರು, ನೋಡಿರಮ; ಪ್ರಳಯ ವಿರಹಿತ ಸಂಗನ ಬಸವಣ್ಣ ತಾನು ತಾನಾಗಿರ್ದನು.

ಪೃಥ್ವಿಯಮೇಲೆ ಈಶ್ವರನ ಪರಿಯೆಂತೆಂದೊಡೆ ಶಿವತತ್ತ್ವದುತ್ಪತ್ತಿ ಪಂಚಕೋಟಿ ವಿಸ್ತೀರ್ಣಮಂ ಪೇಳ್ವೆ — ೧ ಕೋಟಿ ೨೭ ಲಕ್ಷ ೮೫ ಸಾವಿರ ಯೋಜನ ಪರಿಪ್ರಮಾಣ ಒಂದು ಮೇರುಮಂದಿರವು. ಆ ಮೇರುಮಂದಿರದಮೇಲೆ ಅಮರರು, ಬ್ರಹ್ಮ, ವಿಷ್ಣು, ರುದ್ರ, ಈಶ್ವರ, ಸದಾಶಿವ, ನಂದಿ, ಮಹಾಕಾಳ, ವೀರಭದ್ರ, ಅಷ್ಟಾಶೀತಿಸಹಸ್ರರು, ಋಷಿಗಳು, ಅಸಂಖ್ಯಾತ ಮಹಾಗಣಂಗಳು, ದ್ವಾದಶಾದಿತ್ಯರು, ನಾರದಮುನಿಯೋಗೀಶ್ವರರು, ಅಷ್ಟ ದಿಕ್ಪಾಲ ಕರು, ಏಕಾದಶ ರುದ್ರರು ಮುಖ್ಯವಾಗಿ ಶಿವಸುಖ ಸಂತತಿ ವಿನೋದ ರಾಜ್ಯಗೆಯ್ಯುವರೆಲೋ. ಆ ಮೇರು ಮಂದಿರದ ಕೆಳಗೆ ಜಂಬುದ್ವೀಪದ ವಿಸ್ತೀರ್ಣಮಂ ಪೇಳ್ವೆ. ಆ ಜಂಬುದ್ವೀಪದ ಕಟ್ಟಳೆ ೧ ಲಕ್ಷ ೬೫ ಸಾವಿರ ಯೋಜನ ಪರಿಪ್ರಮಾಣ; ಅಲ್ಲಿ ಒಂದು ಲವಣಸಮುದ್ರ ೧ ಲಕ್ಷ ೨೫ ಸಾವಿರ ಪರಿಪ್ರಮಾಣ. ಅಲ್ಲಿಂದಾಚೆಯಲಿ ಭೂಮಿ ೨ ಲಕ್ಷ ೫೦ ಸಾವಿರ ಯೋಜನ ಪರಿಪ್ರಮಾಣ; ಆ ದ್ವೀಪದ ಹೆಸರು ಪ್ಲಕ್ಷ ದ್ವೀಪ. ಅಲ್ಲಿಂದ ಇಕ್ಷುಸಮುದ್ರ ೨ ಲಕ್ಷ ೫೦ ಸಾವಿರ ಯೋಜನ ಪರಿಪ್ರಮಾಣ. ಅಲ್ಲಿಂದಾಚೆಯಲಿ ಭೂಮಿ ೫ ಲಕ್ಷ ಯೋಜನ ಪರಿಪ್ರಮಾಣ; ಆ ದ್ವೀಪದ ಹೆಸರು ಶಾಲ್ಮಲೀ ದ್ವೀಪ. ಅಲ್ಲಿಂದ ಮಧು ( ಸುರ ) ಸಮುದ್ರ ೫ ಲಕ್ಷ ಯೋಜನ ಪರಿಪ್ರಮಾಣ; ಅಲ್ಲಿಂದಾಚೆಯಲಿ ಭೂಮಿ ೧೦ ಲಕ್ಷ ಯೋಜನ ಪರಿಪ್ರಮಾಣ; ಆ ದ್ವೀಪದ ಹೆಸರು ಕುಶದ್ವೀಪ. ಅಲ್ಲಿಂದ ಘೃತ ಸಮುದ್ರ ೧೦ ಲಕ್ಷ ಯೋಜನ ಪರಿಪ್ರಮಾಣ; ಅಲ್ಲಿಂದಾಚೆ ಯಲಿ ಭೂಮಿ ೨೦ ಲಕ್ಷ ಯೋಜನ ಪರಿಪ್ರಮಾಣ; ಆ ದ್ವೀಪದ ಹೆಸರು ಕ್ರೌಂಚದ್ವೀಪ. ಅಲ್ಲಿಂದ ದಧಿಸಮುದ್ರ ೨೦ ಲಕ್ಷ ಯೋಜನ ಪರಿಪ್ರಮಾಣ. ಅಲ್ಲಿಂದಾಚೆಯಲಿ ಭೂಮಿ ೪೦ ಲಕ್ಷ ಯೋಜನ ಪರಿಪ್ರಮಾಣ; ಆ ದ್ವೀಪದ ಹೆಸರು ಶಾಖದ್ವೀಪ. ಅಲ್ಲಿಂದಾಚೆಯಲಿ ಕ್ಷೀರ ಸಮುದ್ರ ೪೦ ಲಕ್ಷ ಯೋಜನ ಪರಿಪ್ರಮಾಣ. ಅಲ್ಲಿಂದಾಚೆಯಲಿ ಭೂಮಿ ೮೦ ಲಕ್ಷ ಯೋಜನ ಪರಿಪ್ರಮಾಣ; ಆ ದ್ವೀಪದ ಹೆಸರು ಪುಷ್ಕರ (ಬರ್ಬರ) ದ್ವೀಪ ಅಲ್ಲಿಂದಾಚೆಯಲಿ ಜಲ ಸಮುದ್ರ ೮೦ ಲಕ್ಷ ಯೋಜನ ಪರಿಪ್ರಮಾಣ; ಅಲ್ಲಿಂದತ್ತ ಲೋಕಾದಿಲೋಕವೆಲ್ಲವು ಪರ್ವತಾಕಾರವಾಗಿಪ್ಪವು. ಇಂತೀ ಸಪ್ತ ಸಮುದ್ರಂಗಳು ಸಪ್ತದ್ವೀಪಂಗಳು ಪರಿಪ್ರಮಾಣ ಒಂದಾಗಿ ಪೇಳ್ಕೈಸಿದರೆ ೩ ಕೋಟಿ ೧೭ ಲಕ್ಷ ೫೦ ಸಾವಿರ ಯೋಜನ ಪರಿಪ್ರಮಾಣ ಎಣಿಕೆಯಾಯಿತ್ತು. ಮತ್ತದರಿಂದ ಭೂಮಂಡಲವುಂಟೇ? ಎಂದರೆ ಉಂಟು. ರಜತಾದ್ರಿ ೧೦ ಕೋಟಿ ಪರಿಪ್ರಮಾಣ. ಅಲ್ಲಿಂದತ್ತ ಭೂಮಂಡಲ ಉಂಟೇ ಎಂದರೆ? ಛತ್ರವಳಿ ೮೫ ಕೋಟಿ ೬೫ ಲಕ್ಷ ೭೫ ಸಾವಿರ ಯೋಜನ ಪರಿಪ್ರಮಾಣ. ಅಲ್ಲಿಂದತ್ತ ಭೂಮಂಡಲ ಉಂಟೇ— ಎಂದರೆ ಇಲ್ಲ. ಅಲ್ಲಿ ಕಾಳವಾಗಿ ಚಂದ್ರ ಸೂರ್ಯರ ಬೆಳಗಿನಲ್ಲಿ ಇಂತಿವ ನೆಲ್ಲವ ಒಂದರಿದರೇನು। ಕೋಟಿ ಯೋಜನ ಪರಿಪ್ರಮಾಣಂ ಇನಕಟ್ಟಳೆಣೆಯಾಯಿತು. ( ? ) ಆ ಮೇರುವಿನ ಪ್ರದಕ್ಷಿಣವಾಗಿ ಎಂಟು ಪಂಚಶತಕೋಟಿ ವಿಸ್ತೀರ್ಣಮಧ್ಯ ಭೂಮಂಡಲ ವಾಯಿತು. (?) ಇದನ್ನು ಸೂರ್ಯ ತಿರುಗುವ ಉದಯದೊಳು. ರಾತ್ರಿ ಸಪ್ತ ಋಷಿಯರು, ರಾಹು, ಕೇತು, ನವಗ್ರಹಂಗಳು. ಇಂತಿವರೆಲ್ಲರು ಮೇರು ಮಂದಿರ ಹೊರಳಿದಲ್ಲಿ ಪ್ರದಕ್ಷಿಣವಾಗಿ ದಿವಾರಾತ್ರಿ ಯಲ್ಲಿ ತಿರುಗ ಬಹರು. ಇಂತಿವರೆಲ್ಲ ಮಹಾಖಿಲವಾಗಿಪ್ಪ ಶರಣ ಸ್ಥಲದವರ ಬಾಲರು. ಅಲ್ಲಿಗೆ ಆರಾರು ಮುಖ್ಯರೆಂದರೆ ಪ್ರಭುದೇವರು, ಸಿದ್ಧರಾಮಯ್ಯ, ಶೆತ್ತಿಸ ಪುರವನೊಯಿಸಿದ



CC-0. Jangamwadi Math Collection, Varanasi. An eGangotri Initiative

ಸಮನ್ವಯಿಗಳು, ವಹಿಲಯ್ಯನು, ಉದ್ಭಟಯ್ಯನು, ಸದ್ಯೋಜಾತ, ವಾಮದೇವ, ಅಘೋರ, ತತ್ಪುರುಷ, ಈಶಾನ್ಯ, ಆದಿರಂಗ, ಅನಾದಿಶರಣ, ಪೂರ್ವಾಚಾರ್ಯ ಚೆನ್ನಬಸವಣ್ಣ ಕಟ್ಟಿದ ಕಟ್ಟಳೆಯೊಳಗೆ, ಜ್ಯೋತಿಜ್ಞ ಬಸವಣ್ಣ ಕಟ್ಟಿದ ಕಟ್ಟಳೆಯೊಳಗೆ ಜ್ಯೋತಿಜ್ಞನ ಪೇಳ್ವೆ. ತಿಥಿ, ವಾರ, ಯೋಗ, ಕರಣ, ಜೋತಿಷ ಸಂಗ್ರಹ, ಸಂಕ್ರಮಣ, ಸಂವತ್ಸರ ಇಂತೆಲ್ಲವು ಕೂಡಲ ಚೆನ್ನಸಂಗಮದೇವನಲ್ಲಿ ಅಂದು ಬಸವಣ್ಣ ಕಟ್ಟಿದ ಕಟ್ಟಳೆ.

— ಭೂ ಚಕ್ರ ಸಮಾಪ್ತ ಮಂಗಳಮಹಾ ಶ್ರೀ —





CC-0. Jangamwadi Math Collection, Varanasi. An eGangotri Initiative

## ಪರಿಶಿಷ್ಟ ೮

# ಚೆನ್ನಬಸವಣ್ಣನವರ ಮೇಘಚಕ್ರ*

ಮೇಘ ಚಕ್ರದಂಡ| ಮೇಘ ಬ್ರಹ್ಮಾಂಡ| ಚಕ್ರದಂಡದಮೇಲೆ ಬ್ರಹ್ಮಾಂಡ | ಚತಃ ಚಿತಃ ||೧|| ಭವನತ ||೨|| ದಂ ಔತಿನಂ ||೩|| ಕೂಪದಂಡ ||೪|| ತ್ರಿಯಷ್ಟಿ ಲಿಖಿತ ||೫|| ರವಿಭುತದಿವತಿ ||೬|| ನೀಲದಂಡ ||೭|| ಈ ಏಳು ಲೋಕವು ಧರೆಯಿಂದ ಮೇಲೆ. ‡

ಹನ್ನೆರಡು ಯೋಜನ ಉದ್ದದಲ್ಲಿ ಸಿಡಿಲು ಮಿಂಚುಗಳಿಹವು. (?) ಆ ಸಿಡಿಲು ಮಿಂಚುಗಳಿಂದ ಮೇಲೆ ಮೂರುಸಾವಿರದ ಮೂರುನೂರಾ ಅರವತ್ತು ಯೋಜನ ಉದ್ದದಲ್ಲಿ ಮಹಾಲೋಕವಿಹುದು. (?) ಆ ಮಹಾಲೋಕದಿಂದ ಮೇಲೆ ಹನ್ನೆರಡುಲಕ್ಷ ಮೂವತ್ತೈದುಸಾವಿರ ಯೋಜನ ಉದ್ದದಲ್ಲಿ ಅಷ್ಟ ದಿಕ್ಪಾಲಕರಿಹರು. (?) ಆ ಅಷ್ಟದಿಕ್ಪಾಲಕರಿಂದ ಮೇಲೆ ಒಂದು ಲಕ್ಷ ಯೋಜನದಲ್ಲಿ ಸೂರ್ಯ ನಿಹನು. ಆ ಸೂರ್ಯನಿಂದ ಮೇಲೆ ಎರಡು ಲಕ್ಷ ಯೋಜನ ಉದ್ದದಲ್ಲಿ ಚಂದ್ರನಿಹನು. ಆ ಚಂದ್ರನಿಂದ ಮೇಲೆ ನಾಲ್ಕುಲಕ್ಷ ಯೋಜನ ಉದ್ದದಲ್ಲಿ ಮಂಗಳನಿಹನು. ಆ ಮಂಗಳನಿಂದ ಮೇಲೆ ಎಂಟು ಲಕ್ಷ ಯೋಜನ ಉದ್ದದಲ್ಲಿ ಬುಧನಿಹನು. ಆ ಬುಧನಿಂದ ಮೇಲೆ ಹದಿನಾರು ಲಕ್ಷ ಯೋಜನ ಉದ್ದದಲ್ಲಿ ಬ್ರಹಸ್ಪತಿಯಿಹನು. ಆ ಬ್ರಹಸ್ಪತಿಯಿಂದ ಮೇಲೆ ಮೂವತ್ತೆರಡು ಲಕ್ಷ ಯೋಜನ ಮಧ್ಯದಲ್ಲಿ ಶುಕ್ರನಿಹನು. ಆ ಶುಕ್ರನಿಂದ ಮೇಲೆ ಅರವತ್ತುನಾಲ್ಕುಲಕ್ಷ ಯೋಜನ ಉದ್ದದಲ್ಲಿ ಶನಿಯಿಹನು. ಆ ಶನಿಯಿಂದ ಮೇಲೆ ೧೨೮ ಲಕ್ಷ ಯೋಜನ ಉದ್ದದಲ್ಲಿ ನವಗ್ರಹಂ ಗಳಿಹವು. ಆ ನವಗ್ರಹಗಳಿಂದ ಮೇಲೆ ೨೫೬ ಲಕ್ಷ ಯೋಜನ ಉದ್ದದಲ್ಲಿ ಸಪ್ತಮಹಾಋಷಿಗಳಿ ಹರು. ಆ ಸಪ್ತಮಹಾಋಷಿಗಳಿಂದ ಮೇಲೆ ೫ಕೋಟಿ ೧೨ ಲಕ್ಷ ಯೋಜನ ಉದ್ದದಲ್ಲಿ ವಿಶ್ವ ದೇವರ್ಕಗಳಿಹರು. ಆ ವಿಶ್ವದೇವರ್ಕಗಳಿಂದ ಮೇಲೆ ೨೦ಕೋಟಿ ೪೮ಲಕ್ಷ ಯೋಜನದ ಉದ್ದದಲ್ಲಿ ಬಾಲಸೂರ್ಯರಿಹರು. ಆ ಬಾಲಸೂರ್ಯರಿಂದ ಮೇಲೆ ೮೯ಕೋಟಿ ೩೩ಲಕ್ಷ ೬೦ಸಾವಿರ ಯೋಜನ (?) ಉದ್ದದಲ್ಲಿ ಸಿನಮಹಾಸಿನರಿಹರು. ಆ ಸಿನಮಹಾಸಿನರಿಂದ ಮೇಲೆ ೩೬೦ಕೋಟಿ ಯೋಜನ (?) ಉದ್ದದಲ್ಲಿ ಕೃತರಿಹರು. ಆ ಕೃತರಿಂದ ಮೇಲೆ ಮುನಿಗಳಿಹರು. ಆ ಮುನಿಗಳ ಮೇಲೆ ಕಾಳರಾತ್ರಿಯೆಂಬ ಕತ್ತಲೆ ಪರ್ಬಿಕೊಂಡಿಹುದು. ಉಭಯ ಕೂಡಲು ೬೬೫ ಕೋಟಿ ೬೮ ಸಾವಿರ (?) ಉದ್ದವಿಹುದೊಂದು ಲೋಕ. ಈ ಪರಿಯಲ್ಲಿ ಹದಿನೆಂಟು ಲೋಕವಿಹವು. ಇನ್ನು ಹದಿನಾಲ್ಕು ಲೋಕ ಎಂತೆಂದೊಡೆ— ಅತಳಲೋಕ ದೇವನ ಬಸುರಲ್ಲಿಹುದು. ವಿತಳಲೋಕ ದೇವನ ನಾಭಿಯಲ್ಲಿಹುದು. ಸುತಳಲೋಕ ದೇವನ ಕಟಿಯಲ್ಲಿಹುದು. ಮಹೀತಳ ಲೋಕ ದೇವನ ಪೆರ್ದೊಡೆಯಲ್ಲಿಹುದು. ರಸಾತಳಲೋಕ ದೇವನ ಕಣಕಾಲಿನಲ್ಲಿಹುದು. ತಳಾತಳಲೋಕ ದೇವನ ಪಾದದಲ್ಲಿಹುದು. ಪಾತಾಳಲೋಕ ದೇವನ ಅಂಗಾಲಲ್ಲಿಹುದು. ಅಲ್ಲಿಂದ ಮೇಲೇಳು ಲೋಕ ಗಳು -- ಭೂಲೋಕ ದೇವನ ಹೃದಯವಲ್ಲಿಹುದು. ಭವಲೋಕದೇವನ ಡಮರುಗದಲ್ಲಿಹುದು.

---

*ಶ್ರೀ ಬುದ್ಧಯ್ಯಸ್ವಾಮಿ ಪುರಾಣೀಕ ಇವರಿಂದ ದೊರೆತದ್ದು.

‡ ನಮಗೆ ದೊರೆತ ಪ್ರತಿಯಲ್ಲಿ ಈ ಮೇಲಿನಂತೆ ಬರಹವಿದೆ. ಅದು ಸರಿಯಾಗಿ ಅರ್ಥವಾಗುವಂತಿಲ್ಲ ದಿದ್ದರೂ ಅದನ್ನೇ ಕೊಟ್ಟಿದೆ.



CC-0. Jangamwadi Math Collection, Varanasi. An eGangotri Initiative

ಜನಲೋಕ ದೇವನ ಎದೆಯಲ್ಲಿಹುದು. ಸುವರ್ಲೋಕ ದೇವನ ಕಂಠದಲ್ಲಿಹುದು. ತಪೋಲೋಕ ದೇವನ ಕರ್ಣದಲ್ಲಿಹುದು. ಮಹಾಲೋಕ ದೇವನ ಲಲಾಟದಲ್ಲಿಹುದು. ಸತ್ಯಲೋಕ ದೇವನ ಉತ್ತಮಾಂಗದಲ್ಲಿಹುದು. ಅಲ್ಲಿಂದ ಮೇಲೆ ಇದ್ದರೆ ಆತನೇ ಬಲವಂತ. ಇಂತೀ ಈರೇಳು ಲೋಕ ಆತನಿಗಿರ್ದವು. ಇಂತಹ ಮಹಾಲಿಂಗನ ಅಡಗಿಸೆನೆಂಬ ಅತುಳಬಲ್ಲವರು ಕೆಲಬರುಂಟು. ಅದು ಹೇಗೆಂದರೆ— ಭಕ್ತಿಎಂಬ ಭಾವದಲ್ಲಿ ಸತ್ಯಸದ್ಭಾವನರಿದು, ಪ್ರಾಣಿಯ ಕೊಲದೆ, ಮೀಯ ದುಣದೆ, ಪರವಾದವನೊಲ್ಲದೆ, ಪಾಪಕ್ಕೆಣಿಸದೆ, ಪ್ರಸಾದಕ್ಕಲ್ಲದೆ, ಕೋಪಕ್ಕೆಳಸದೆ, ಮರದಲ್ಲಿ ಅಜ್ಞಾನರಂ ಕೊಲದೆ, ಎಂದುಂ ಲಿಂಗಾರ್ಚನೆಯನರಿದು ಓಂ ಎಂಬ ಅಕ್ಷರವನೋದಿ ಅರಿತ ಬಳಿಕ, ಒಂದೇ ರೂಪದ ನ ಎಂಬ ಅಕ್ಷರವನೋದಿ ಅರಿತ ಬಳಿಕ, ನಾಂಟ್ಯನಾಗುತ ಬಪ್ಪ ಮ ಎಂಬ ಅಕ್ಷರವನೋದಿ ಅರಿತ ಬಳಿಕ, ಕಿರುಮಕ್ಕಳಾಗುತ ಬಪ್ಪ ಶಿ ಎಂಬ ಅಕ್ಷರವನೋದಿ ಅರಿತ ಬಳಿಕ, ವದನದಲಿ ಬಂದಿಪ್ಪ ವಾ ಎಂಬ ಅಕ್ಷರವನೋದಿ ಅರಿತ ಬಳಿಕ, ಶಿಷ್ಯನಲಿ ಬಂದಿಪ್ಪ ಯ ಎಂಬ ಅಕ್ಷರವನೋದಿ ಅರಿತ ಬಳಿಕ, ಸಂಗನ ಶರಣರ ಅಂಗೈಯಲ್ಲಿ ಬಂದಿಪ್ಪ ಇಂತೀರೇಳುಲೋಕವು ತಾನಾಗಿ, ಮಹಾಲಿಂಗವು ಶಿವಭಕ್ತನ ಹಸ್ತದಲ್ಲಿ ಶಿಲ್ಕಿದನಾಗಿ, ಅದುಕಾರಣ ಶಿವಭಕ್ತನೇ ಶ್ರೀಗಿರಿ, ಶಿವಭಕ್ತನ ಕಾಯಕವೇ ಕೈಲಾಸ, ಶಿವಭಕ್ತನ ನಡೆಯೆಲ್ಲ ತೀರ್ಥವು, ನುಡಿಯೆಲ್ಲ ಆಗಮ, ವಿಭೂತಿ, ರುದ್ರಾಕ್ಷಿ. ಶಿವಲಿಂಗವನರಿದು ಅವರ ಪಾದತೀರ್ಥಕ್ಕೆ ಬಯಸಿದೆ ಕಾಣಾ ಕೂಡಲಚೆನ್ನಸಂಗಮದೇವಯ್ಯ.

— ಇಂತೀ ಮೇಘಚಕ್ರ ಸಮಾಪ್ತ ಮಂಗಳಮಹಾ ಶ್ರೀ —



CC-0. Jangamwadi Math Collection, Varanasi. An eGangotri Initiative

# ಪ್ರಭುದೇವರ ಕಾಲಚಕ್ರ*

.... .... .... ಮುನ್ನೂರು ಅರುವತ್ತು ಕೂಡಲೊಂದು ಪಾವು ಘಳಿಗೆ. ಹದಿನಾರು ಕೂಡಲೊಂದು ಘಳಿಗೆ. ಘಳಿಗೆ ೬೦ ಕೂಡಲೊಂದು ರಾತ್ರಿ. ರಾತ್ರಿ ಮೂವತ್ತು ಕೂಡಲೊಂದು ಮಾಸ. ಮಾಸ ೧೨ ಕೂಡಲೊಂದು ವರುಷ. ವರುಷ ೬೦ ಕೂಡಲು ಒಂದು ಸಂವತ್ಸರ. ಮರಳಿ ಇಂತೀಪರಿಯಲಿ ಕಾಲ ಇನ್ನು ೧೮ ಯುಗಂಗಳು. ಅವಾವೆಂದರೆ — ಅನಂತ, ಅದ್ಭುತ, ತಾರಜ, ತಂಡಜ, ಭಿನ್ನಜ, ಭಿನ್ನಯುಕ್ತ, ಅಮಂದ, ಅಮಂದಯುಕ್ತ, ಮಣಿರಣ, ಮಹಾನ್ಯರಣ, ಯುವನಾಮ, ವಿಶ್ವಸ, ಅಲಕೃತ, ಕೃತ, ತ್ರೇತಾ, ದ್ವಾಪಾರ, ಕಲಿ ಇಂತೀ ಹದಿನೆಂಟು ಯುಗಂಗಳು ಕಾಲ ಚಕ್ರವಾಗಿ ತಿರುಗುತಿಹವು. ಇದು ದೇವರು ಕಟ್ಟಿದ ಕಟ್ಟಳೆ. ಆ ಯುಗದ ಪ್ರಮಾಣ ಹೇಗೆಂದರೆ:— ಅನಂತವೆಂಬ ಯುಗದಲ್ಲಿ ಸದಾಶಿವನೆಂಬ ದೇವರು. ಆ ಯುಗದ ಪ್ರಮಾಣ ೫ ಅರ್ಬುದಂ ೬೬೨ ಕೋಟಿ ೯೧ ಲಕ್ಷ ೧೪ ಸಾವಿರ ವರುಷ. ಅದ್ಭುತವೆಂಬ ಯುಗದಲ್ಲಿ ಆದಿ ಲಿಂಗನೆಂಬ ದೇವರು. ಆ ಯುಗದ ಪ್ರಮಾಣ ೨ ಅರ್ಬುದ ೮೩೧ ಕೋಟಿ ೯೫ ಲಕ್ಷ ೫೨ ಸಾವಿರ ವರುಷ. ತಾರಜವೆಂಬ ಯುಗದಲ್ಲಿ ತೇಜೋಮಯನೆಂಬ ದೇವರು. ಆ ಯುಗದ ಪ್ರಮಾಣ ೧ ಅರ್ಬುದ ೪೧೫ ಕೋಟಿ ೯೭ ಲಕ್ಷ ೭೬ ಸಾವಿರ ವರುಷ. ತಂಡಜವೆಂಬ ಯುಗ ದಲ್ಲಿ ಊರ್ಧ್ವ ಜಪೇಶ್ವರನೆಂಬ ದೇವರು. ಆ ಯುಗದ ಪ್ರಮಾಣ ೭೦೭ ಕೋಟಿ ೯೮ ಲಕ್ಷ ೮೮ ಸಾವಿರ ವರುಷ. ಭಿನ್ನಜವೆಂಬ ಯುಗದಲ್ಲಿ ಸರ್ವರಹಿತನೆಂಬ ದೇವರು. ಆ ಯುಗದ ಪ್ರಮಾಣ ೩೫೩ ಕೋಟಿ ೮೯ ಲಕ್ಷ ೪೪ ಸಾವಿರ ವರುಷ. ಭಿನ್ನಯುಕ್ತವೆಂಬ ಯುಗದಲ್ಲಿ ಲೋಕೇಶ್ವರನೆಂಬ ದೇವರು. ಆ ಯುಗದ ಪ್ರಮಾಣ ೧೭೬ ಕೋಟಿ ೯೪ ಲಕ್ಷ ೭೨ ಸಾವಿರ ವರುಷ. ಅಮಂದವೆಂಬ ಯುಗದಲ್ಲಿ ಪಶುಧರನೆಂಬ ದೇವರು. ಆ ಯುಗದ ಪ್ರಮಾಣ ೮೮ ಕೋಟಿ ೪೭ ಲಕ್ಷ ೩೬ ಸಾವಿರ ವರುಷ. ಅಮಂದಯುಕ್ತವೆಂಬ ಯುಗದಲ್ಲಿ ಭೂತೇಶ್ವರ ದೇವರು. ಆ ಯುಗದ ಪ್ರಮಾಣ ೪೪ ಕೋಟಿ ೨೩ ಲಕ್ಷ ೬೮ ಸಾವಿರ ವರುಷ. ಮಣಿರಣವೆಂಬ ಯುಗದಲ್ಲಿ ಹರಿಹರನೆಂಬ ದೇವರು. ಆ ಯುಗದ ಪ್ರಮಾಣ ೨೨ ಕೋಟಿ ೧೧ ಲಕ್ಷ ೮೪ ಸಾವಿರ ವರುಷ. ಮಹಾನ್ಯರಣವೆಂಬ ಯುಗದಲ್ಲಿ ಪಂಚವಕ್ತ್ರನೆಂಬ ದೇವರು. ಆ ಯುಗದ ಪ್ರಮಾಣ ೧೧ ಕೋಟಿ ೫ ಲಕ್ಷ ೯೨ ಸಾವಿರ ವರುಷ. ಯುವನಾಮವೆಂಬ ಯುಗದಲ್ಲಿ ಪ್ರಳಯಕಾಲನೆಂಬ ದೇವರು. ಆ ಯುಗದ ಪ್ರಮಾಣ ೫ ಕೋಟಿ ೫೨ ಲಕ್ಷ ೯೬ ಸಾವಿರ ವರುಷ. ವಿಶ್ವಸವೆಂಬ ಯುಗದಲ್ಲಿ ಸಕಲಭರಿತ ದೇವರು. ಆ ಯುಗದ ಪ್ರಮಾಣ ೨ ಕೋಟಿ ೭೬ ಲಕ್ಷ ೪೮ ಸಾವಿರ ವರುಷ. ಅಲಕೃತವೆಂಬ ಯುಗದಲ್ಲಿ ಸರ್ವೇಶ್ವರನೆಂಬ ದೇವರು. ಆ ಯುಗದ ಪ್ರಮಾಣ ೧ ಕೋಟಿ ೩೮ ಲಕ್ಷ ೨೪ ಸಾವಿರ ವರುಷ. ಕೃತಯುಗದಲ್ಲಿ ತ್ರಿಪುರಾಂತಕನೆಂಬ ದೇವರು. ಆ ಯುಗದ ಪ್ರಮಾಣ ೧೭ ಲಕ್ಷ ೨೮ ಸಾವಿರ ವರುಷ. ತ್ರೇತಾಯುಗದಲ್ಲಿ ಲೋಕೇಶ್ವರನೆಂಬ ದೇವರು. ಆ ಯುಗದ ಪ್ರಮಾಣ ೧೨ ಲಕ್ಷ ೯೬ ಸಾವಿರ ವರುಷ. ದ್ವಾಪಾರಯುಗದಲ್ಲಿ ಶ್ರೀ ಮಹಾದೇವ

* ಶ್ರೀಮಾನ್ ಬುದ್ಧಯ್ಯಸ್ವಾಮಿ ಪುರಾಣೀಕ ಇವರಿಂದ ದೊರೆತದ್ದು.



CC-0. Jangamwadi Math Collection, Varanasi. An eGangotri Initiative

ನೆಂಬ ದೇವರು. ಆ ಯುಗದ ಪ್ರಮಾಣ ೮ ಲಕ್ಷ ೬೪ ಸಾವಿರ ವರುಷ. ಕಲಿಯುಗದಲ್ಲಿ ಶ್ರೀಶೈಲದ ಚೆನ್ನಮಲ್ಲಿಕಾರ್ಜುನ ದೇವರು. ಆ ಯುಗದ ಪ್ರಮಾಣ ೪ ಲಕ್ಷ ೩೨ ಸಾವಿರ ವರುಷ.

ಇಂತೀ ಹದಿನೆಂಟು ಯುಗಂಗಳೊಂದಾಗಿ ಮೇಳೈಸಿದರೆ ಒಂದು ನಿರ್ಭುಜಮಂ ೯೫ ಅರ್ಭುಜಮಂ ೩೬೦ ಕೋಟಿ ೫೦ ಲಕ್ಷ ೯೮ ಸಾವಿರ ವರುಷ. ( ? ) ಈಸು ಸಂವತ್ಸರ ಒಪ್ಪುದೊಂದು ಮಹಾಯುಗ. ೭೨ ವರ್ತಿ ತಿರುಗಿದರೆ ಮನುವಿನ ರಾಜ್ಯ. ಅಂತಾ ಮನುವಿನ ರಾಜ್ಯವು ೧೯ ಬಾರಿ ತಿರುಗಿದರೆ ಸುರಪತಿಗೆ ಒಂದು ದಿನವು. ಅಂತಾ ಸುರಪತಿಯು ೭೮ ವೇಳೆ ತಿರುಗಿದರೆ ಬ್ರಹ್ಮಂಗೆ ಒಂದು ದಿನವು. ಅಂತ ಬ್ರಹ್ಮಂಗೆ ೩೦ ದಿವಸವಾಗಲು ಒಂದು ಮಾಸ. ಅಂಥ ಮಾಸ ಹನ್ನೆರಡು ಕೂಡಲು ೧ ವರುಷ. ೬೦ ಕೂಡಲು ಒಂದು ಸಂವತ್ಸರ. ಅಂಥ ಸವಂತ್ಸರ ೧೦೦ ತುಂಬಿದರೆ ಬ್ರಹ್ಮಗೆ ಪರಮಾಯುಷ್ಯ. ಅಂಥ ಬ್ರಹ್ಮರು ೬೦ ಬಾರಿ ತಿರುಗಿದರೆ ಚಿಪ್ಪಜನೆಂಬ ಋಷಿಗೆ ಒಂದು ಚಿಪ್ಪು ಸಡಲಿತು ನೋಡಿರೆ | ಆ ಬ್ರಹ್ಮರು ಸಹಸ್ರ ಮಡಿದಲ್ಲಿ ಚಿಪ್ಪಜಗೆ ಪರಮಾಯುಷ್ಯ. ಅಂಥಾ ಚಿಪ್ಪಜ ನೂರು ಬಾರಿ ತಿರುಗಿದರೆ ರೋಮಜಗೆ ಒಂದು ರೋಮ. ಅಂಥ ರೋಮಜ ಮುನಿ ೩೦ ಬಾರಿ ತಿರುಗಿದರೆ ವಿನಾನಋಷಿಗೆ ಒಂದು ದಿನವು. ಅಂಥ ವಿನಾನ ಮುನಿಜರು ನಾಲ್ವತ್ತು ಕೋಟಿ ಬಾರಿ ತಿರುಗಿದರೆ ಪರಲೋಚನಗೆ ಒಂದು ದಿನವು. ಅಂಥ ಪರಲೋಚನೆಂಬ ಋಷಿಯು ೮೦ ಕೋಟಿ ಬಾರಿ ತಿರುಗಿದರೆ ವಿಷ್ಣುವಿಗೆ ಒಂದು ನಿಮಿಷ. ಅಂಥ ವಿಷ್ಣುವಿನ ಒಂದು ದಿನಮಪ್ಪುದು ಸಮಸ್ತ ಈರೇಳು ಲೋಕಕ್ಕೆ ಭೂತಸಂಹಾರ. ಹೀಗೆ ೧೭ ಲಕ್ಷ ೨೮ ಸಾವಿರ ವರುಷ ತಿರುಗಿದರೆ ಒಂದು ಜಲಪ್ರಳಯ. ಅಂಥ ಜಲಪ್ರಳಯ ನೂರಿಪ್ಪತ್ತು ತುಂಬಿದರೆ ವಿಷ್ಣುವಿಗೆ ಪರಮಾಯುಷ್ಯ. ಇಂತೀ ಮನು-ಮುನಿಗಳ ಪರಮಾಯುಷ್ಯವೆಲ್ಲವು ರುದ್ರಂಗೆ ಒಂದು ನಿಮಿಷ. ಅಂಥ ರುದ್ರನ ಒಂದು ದಿನಮಪ್ಪುದು ಅತಳ, ವಿತಳ, ಸುತಳ, ಮಹಿತಳ, ತಳಾತಳ, ರಸಾತಳ, ಪಾತಾಳಂಗಳೆಂಬ ಕೆಳಗೇಳು ಲೋಕಂಗಳು; ಭುವರ್ಲೋಕ, ಭವರ್ಲೋಕ, ಸುವರ್ಲೋಕ, ಮಹರ್ಲೋಕ, ಜನರ್ಲೋಕ, ತಪರ್ಲೋಕ, ಸತ್ಯಲೋಕ ಇಂತೀ ಮೇಲೇಳು ಲೋಕಂಗಳು ಮುಳುಗಿ ಮಹಾ ಜಲಪ್ರಳಯದೊಳು ರುದ್ರಲೋಕವು ಉಳಿಯಿತಯ್ಯ. ಅಂಥ ರುದ್ರಗೆ ೩೬೦ ದಿನ ವೇಳೆ ಒಪ್ಪುದು ಕೂಡಲೊಂದು ವರ್ಷ. ಅಂಥ ವರ್ಷ ೬೦ ಕೂಡಲೊಂದು ಸಂವತ್ಸರವು. ಅಂಥ ಸಂವತ್ಸರಂಗಳು ಸಹಸ್ರ ಕೋಟಿ ವೇಳೆ ತಿರುಗಿದರೆ ರುದ್ರಂಗೆ ಪರಮಾಯುಷ್ಯ. ಅಂಥಾ ರುದ್ರರೂ ಹೋದರಯ್ಯ. ಅವರಾರೆಂದರೆ ಪಶುಪತಿ, ಮಹಾದೇವ, ಶಂಕರ, ಶಶಿಧರ, ಗೌರೀಪತಿ, ಈಶ್ವರ, ಸದಾಶಿವ, ಮಹಾರುದ್ರ, ನೀಲಕಂಠ, ಯಂತ್ರಜವ, ತಂತ್ರಶಿವ, ಪಂಚವಕ್ತ್ರರು ಎಂಬವರು. ಆ ದಿನದಿ ಸಕ್ಕತಾಪುರಜ ತಾನೊಂದು ಗಣೇಶ್ವರನೆನಿಸಿಕೊಂಡು ಅವರು ತಪಕೆ ಬಿಜಯಂಗೈದರಯ್ಯ. ಇಂತೀ ಲೋಕಾದಿಲೋಕಂಗಳು ಕೂಡಿಕೊಂಡು ಕೆಲವು ದಿನ ಶೂನ್ಯವರ್ತಿಸಿತು. ಕೆಲವು ದಿನ ನಿಃಶೂನ್ಯ ವರ್ತಿಸಿತು. ಕೆಲವು ದಿನ ಕಳಂದರ ವರ್ತಿಸಿತು. ಕೆಲವು ದಿಸ ಭೂತಂಗಳಾವರ್ತಿಸಿತು. ಕಲಿಯುಗದಲ್ಲಿ ಬೆಳಗುವ ಮಹಾಪ್ರಕಾಶದ ಪ್ರಮಾಣ. ಅಂಥ ಕಾಲಂಗಳೂ ಹೋದವಯ್ಯ. ಅಂತಾ ದೇವರುಗಳೂ ಹೋದರಯ್ಯಾ. ಇಂತೀ ತನ್ನ ಲೀಲೆಯಿಂದ ಗುಹೇಶ್ವರನೆಂಬ ಲಿಂಗವು ನಿರಾಳ ನಿರ್ಮಾಯನೆಂಬುದಾರು ಅರಿಯರಾಗಿ ಕಾಲಚಕ್ರ ಸಮಾಪ್ತ.



CC-0. Jangamwadi Math Collection, Varanasi. An eGangotri Initiative

## ಪರಿಶಿಷ್ಟ ೧೦

# ಶ್ರೀ ಗುಬ್ಬಿ ಮಲ್ಲಣಾರ ನೂರೊಂದು ಸ್ಥಲಗಳು

ವಿ. ಸೂಚನೆ: ಇಲ್ಲಿ ಶ್ರೀ. ಗುಬ್ಬಿ ಮಲ್ಲಣರು ( ಕ್ರಿ. ಶ. ಸು. ೧೪೭೫ ) ಸೇರಿಸಿದ ೧೦೧ ಸ್ಥಲಗಳನ್ನು ಕೊಟ್ಟಿದೆ. ಇನ್ನಗಳಲ್ಲಿ ಸಾಮಾನ್ಯವಾಗಿ ದೊರೆಯುವ ೧೦೧ ಸ್ಥಲಗಳಿಗಿಂತ ಅನುಭವ ಪರಿವಿಡಿಯಲ್ಲಿ ಬಹಳೇ ವ್ಯತ್ಯಾಸವೂ ಪ್ರಗತಿಯೂ ಆದುದು ಕಂಡುಬರುತ್ತಿದೆ. ಈ ದೆಸೆಯಿಂದ ಆ ೧೦೧ ಸ್ಥಲಗಳು ಗಮನಾರ್ಹವಾಗಿವೆ. ಆದ್ದರಿಂದ ಅವನ್ನು ಇಲ್ಲಿ ಕೊಡಲಾಗಿದೆ.

'ಗಣಭಾಷ್ಯ ರತ್ನಮಾಲೆ' ಕ್ರಿ. ಶ. ೧೭೩೪ರ ಕೈಬರೆಹದ ಪ್ರತಿಯಿಂದ ಉದ್ಧರಿಸಿದುದು.

—ವೀ. ರು. ಕೊಪ್ಪಳ

### ಸ್ಥಲಗಳು :

#### ಅನುಭವಾದಿ ಸಹಜ ದೀಕ್ಷಾಂತವಾದ ಅಂಗಸ್ಥಲಗಳು ೪೪

೧ ಅನುಭಾವ ಸ್ಥಲ
೨ ಶರಣಸಂಗ ವಿಯೋಗಾವಸ್ಥೆಯ ಸ್ಥಲ
೩ ಶರೀರ ನಿರಸನ ಸ್ಥಲ
೪ ಮನೋ ನಿರಸನ ಸ್ಥಲ
೫ ಇಂದ್ರಿಯ ನಿರಸನ ಸ್ಥಲ
೬ ಸಂಸಾರ ನಿರಸನ ಸ್ಥಲ
೭ ಸಂಸಾರವ್ಯಾಪ್ತಿ ನಿರಸನ ಸ್ಥಲ
೮ ನಿದ್ರಾನಿರಸನ ಸ್ಥಲ
೯ ಆಶಾನಿರಸನ ಸ್ಥಲ
೧೦ ದ್ವಂದ್ವಕರ್ಮ ನಿರಸನ ಸ್ಥಲ
೧೧ ತ್ರಿಬಂಧ ನಿರಸನ ಸ್ಥಲ
೧೨ ಮಾಯಾ ವಿಲಾಸವಿಧಿ ಸ್ಥಲ
೧೩ ಜನನ ಭಯ ಸ್ಥಲ
೧೪ ಜ್ಞಾನ ಪರಾಮರಿಕೆಯ ಸ್ಥಲ
೧೫ ಶಿವಕಾರುಣ್ಯಾಹ್ವಾನ ಸ್ಥಲ
೧೬ ದೃಷ್ಟ ನಷ್ಟ ಸ್ಥಲ
೧೭ ವೈರಾಗ್ಯ ಸ್ಥಲ
೧೮ ಅನರ್ಥಜೀವಿತ ನಿರಸನ ಸ್ಥಲ
೧೯ ಅನ್ಯದೈವ ನಿರಸನ ಸ್ಥಲ
೨೦ ಅನ್ಯದೈವಭಜನ ನಿರಸನ ಸ್ಥಲ
೨೧ ಶಿವಲಿಂಗಾರ್ಚನ ಪ್ರತಿಷ್ಠಾ ಸ್ಥಲ
೨೨ ಒಣ ವಾಗಾದ್ವೈತ ನಿರಸನ ಸ್ಥಲ
೨೩ ಶೂನ್ಯ ಸ್ಥಲ
೨೪ ಸ್ವಯಂಭುಲಿಂಗ ಉಮಾಪತಿ ಸ್ಥಲ
೨೫ ವಿಶ್ವೋತ್ಪತ್ತಿ ಸ್ಥಲ
೨೬ ದೇಹ ದೇಹಿಗಳ ಉತ್ಪತ್ತಿ ಸ್ಥಲ
೨೭ ಅಷ್ಟತನುಮೂರ್ತಿ ನಿರಸನ ಸ್ಥಲ
೨೮ ಸರ್ವಗತ ನಿರಸನ ಸ್ಥಲ
೨೯ ವಿದ್ಯಾವಾದ ನಿರಸನ ಸ್ಥಲ
೩೦ ಕರ್ಮವಾದ ನಿರಸನ ಸ್ಥಲ
೩೧ ಕರ್ಮಯೋಗ ನಿರಸನ ಸ್ಥಲ
೩೨ ಊರ್ಧ್ವಪುಂಡ್ರ ನಿರಸನ ಸ್ಥಲ
೩೩ ಅದೀಕ್ಷಿತ ಲಿಂಗಾರ್ಚನ ನಿರಸನ ಸ್ಥಲ
೩೪ ಶೈವದೀಕ್ಷಾ ನಿರಸನ ಸ್ಥಲ
೩೫ ಪುನರ್ದೀಕ್ಷಾ ಪ್ರತಿಷ್ಠೆಯ ಸ್ಥಲ
೩೬ ಭವಿಸಂಗ ನಿರಸನ ಸ್ಥಲ
೩೭ ಭವಿಪಾಕ ನಿರಸನ ಸ್ಥಲ
೩೮ ಪರದಾರ ನಿರಸನ ಸ್ಥಲ
೩೯ ಕಳವು ನಿರಸನ ಸ್ಥಲ
೪೦ ಹುಸಿ ನಿರಸನ ಸ್ಥಲ
೪೧ ಹಿಂಸಾ ನಿರಸನ ಸ್ಥಲ
೪೨ ತಾಮಸಭಕ್ತಸಂಗ ನಿರಸನ ಸ್ಥಲ
೪೩ ತಾಮಸದೀಕ್ಷಾ ನಿರಸನ ಸ್ಥಲ
೪೪ ಸಹಜ ದೀಕ್ಷಾ ನಿರಸನ ಸ್ಥಲ

#### ದೀಕ್ಷಾವಿಧಿ ಆದಿ ಲಿಂಗಕೂಟಾತುರಾಂತ್ಯಮಾದ ೪೫ ಲಿಂಗಸ್ಥಲಗಳು

೪೫ ದೀಕ್ಷಾವಿಧಿಕ್ರಮ ಸ್ಥಲ
೪೬ ಗುರುಶಿಷ್ಯ ಪ್ರವೇಶ ಸ್ಥಲ
೪೭ ಗುರು ಮಹಾತ್ಮೆ ಸ್ಥಲ
೪೮ ವಿಭೂತಿ ಮಹಾತ್ಮೆ ಸ್ಥಲ



CC-0. Jangamwadi Math Collection, Varanasi. An eGangotri Initiative

೪೯ ರುದ್ರಾಕ್ಷಿ ಮಹಾತ್ಮೆ ಸ್ಥಲ
೫೦ ಪಂಚಾಕ್ಷರಿ ಮಹಾತ್ಮೆ ಸ್ಥಲ
೫೧ ಲಿಂಗಧಾರಣ ಮಹಾತ್ಮೆ ಸ್ಥಲ
೫೨ ಶಿವಲಿಂಗಾರ್ಚನೆ ಮಹಾತ್ಮೆ ಸ್ಥಲ
೫೩ ಲಿಂಗಾರ್ಪಿತ ಸ್ಥಲ
೫೪ ಪಾದೋದಕ ಮಹಾತ್ಮೆ ಸ್ಥಲ
೫೫ ಪ್ರಸಾದ ಮಹಾತ್ಮೆ ಸ್ಥಲ
೫೬ ಸದ್ಭಕ್ತಿ ವರ್ಣಾಧಿಕ್ಯ ಸ್ಥಲ
೫೭ ಪೂರ್ವಾಶ್ರಯ ನಿರಸನ ಸ್ಥಲ
೫೮ ಗುರುಭಕ್ತಿ ಶುಶ್ರುಷಾ ಸ್ಥಲ
೫೯ ಪಾತ್ರಾಪಾತ್ರ ವಿವರಣಾ ಸ್ಥಲ
೬೦ ತಾಮಸ ಭಕ್ತ ನಿರಸನ ಸ್ಥಲ
೬೧ ತಾಮಸ ಮಹೇಶ ನಿರಸನ ಸ್ಥಲ
೬೨ ತಾಮಸ ಪ್ರಸಾದಿ ನಿರಸನ ಸ್ಥಲ
೬೩ ತಾಮಸ ಪ್ರಾಣಲಿಂಗಿ ನಿರಸನ ಸ್ಥಲ
೬೪ ತಾಮಸ ಶರಣ ನಿರಸನ ಸ್ಥಲ
೬೫ ತಾಮಸ ಐಕ್ಯ ನಿರಸನ ಸ್ಥಲ
೬೬ ಸ್ಥಾವರಲಿಂಗಪೂಜಾ ನಿರಸನ ಸ್ಥಲ
೬೭ ಉಪವಾಸ ನಿರಸನ ಸ್ಥಲ
೬೮ ಶಿವಲಿಂಗಾರ್ಚನಾ ವಿಧಿಕ್ರಮ ಸ್ಥಲ
೬೯ ಶಿವಲಿಂಗಾರ್ಚನಾ ಶ್ರದ್ಧಾ ಸ್ಥಲ
೭೦ ಅಭಿನ್ನಲಿಂಗ ಸ್ಥಲ
೭೧ ಜಂಗಮಲಿಂಗ ಶ್ರದ್ಧಾ ಸ್ಥಲ
೭೨ ಜಂಗಮ ಲಿಂಗಾರ್ಪಿತ ಸ್ಥಲ
೭೩ ತೀರ್ಥಪ್ರಸಾದ ಲಿಂಗಾರ್ಪಿತ ಸ್ಥಲ
೭೪ ತಾಮಸ ಶೀಲ ನಿರಸನ ಸ್ಥಲ
೭೫ ತಾಮಸ ಸಹಭೋಜನ ನಿರಸನ ಸ್ಥಲ
೭೬ ವಾಗಾದ್ವೈತ ನಿರಸನ ಸ್ಥಲ
೭೭ ತಾಮಸ ಸ್ವಾನುಭಾವ ನಿರಸನ ಸ್ಥಲ
೭೮ ದಾಸೋಹ ಪ್ರತಿಷ್ಠಾ ಸ್ಥಲ
೭೯ ಕಾಮ್ಯಪ್ರತಿಷ್ಠಾ ಸ್ಥಲ
೮೦ ಕಾಮ್ಯ ನಿರಸನ ಸ್ಥಲ
೮೧ ಸದ್ಭಕ್ತಚಾರಿತ್ರ ಸ್ಥಲ
೮೨ ಷಟ್ಸ್ಥಲ ನಿರ್ಣಯ ಸ್ಥಲ
೮೩ ಶಿವಭಕ್ತ ಪರೀಕ್ಷಾ ಸ್ಥಲ
೮೪ ಅನೈಷ್ಠಿಕಾ ನಿರಸನ ಸ್ಥಲ
೮೫ ಸದ್ಭಕ್ತಿ ನೈಷ್ಠಿಕಾ ಸ್ಥಲ
೮೬ ವೀರದಾಸತ್ವ ನಿಷ್ಠಾ ಸ್ಥಲ
೮೭ ವಿಶ್ವಾಸ ಪ್ರತಿಷ್ಠಾ ಸ್ಥಲ
೮೮ ಶಿವಲಿಂಗ ವಿಕಳಾವಸ್ಥೆಯ ಸ್ಥಲ
೮೯ ಶಿವಲಿಂಗಕೂಟಾತುರ ಸ್ಥಲ

**ಶಿವಲಿಂಗಯೋಗಾನಂದಾದಿ ಸದ್ಭಕ್ತ ಮಹಾತ್ಮೆ ಸ್ಥಲಾಂತ್ಯಮಾದ ೧೨ ನಿರಂಗ ಸ್ಥಲಗಳು**

೯೦ ಶಿವಲಿಂಗಯೋಗಾನಂದ ಸ್ಥಲ
೯೧ ಬಾಹ್ಯಾಭ್ಯಂತರಲಿಂಗಸಂಯೋಗ ಸ್ಥಲ
೯೨ ಭಿನ್ನಭಾಜನ ನಿರಸನ ಸ್ಥಲ
೯೩ ಸಾವಧಾನಾರ್ಪಿತ ಸ್ಥಲ
೯೪ ಭಕ್ತದೇಹಿಕ ಲಿಂಗ ಸ್ಥಲ
೯೫ ಅನಾಗಮ ಸ್ಥಲ
೯೬ ಶರಣಚಾರಿತ್ರ ಸ್ಥಲ
೯೭ ಸ್ತುತಿನಿಂದಾ ನಿರಸನ ಸ್ಥಲ
೯೮ ನಿರಹಂಭಾವ ಸ್ಥಲ
೯೯ ಸದ್ಭಕ್ತ ಶುಶ್ರೂಷಾ ಸ್ಥಲ
೧೦೦ ಸದ್ಭಕ್ತ ನಮಸ್ಕಾರ ಸ್ಥಲ
೧೦೧ ಸದ್ಭಕ್ತ ಮಹಾತ್ಮೆ ಸ್ಥಲ



CC-0. Jangamwadi Math Collection, Varanasi. An eGangotri Initiative



# ಹಂಪೆಯ ಹರೀಶ್ವರನ ಭಕ್ತಿಮಾರ್ಗ

**' Earth has no sorrow that Heaven cannot heal '**

— (ENGLISH HYMN)

೧

ಮೊರೆಯೋ ಮೊರೆಯೋ ಶಿವಘೋ
ಕರೆಗೊರಲನೆ ಕಣ್ಣದಾಳಿ ಕುಸುಮಾಯುಧನಂ
ನೆರೆ ಮುತ್ತಿತ್ತಯ್ಯೊ ಇದ
ನರಿವವರಿಲ್ಲಕ್ಕಟಾ ಕೃಪಾಳುಗಳಿಲ್ಲಾ !—

ಎಂದು ಶಿವಭಕ್ತಿಸಂಪನ್ನೆಯಾದ ಪಾರ್ವತಿ–ಹರೀಶ್ವರನ ಏಕನಿಷ್ಠಾನಿಧಿಯಾದ, ಭಾವಕಿ ಗಿರಿಜಾತೆ ಕಳವಳಪಡುವ ದೃಶ್ಯದ ಕಡೆಗೆ ಕವಿ ನಮ್ಮ ಮನಸ್ಸನ್ನು ಸೆಳೆಯುತ್ತಾನೆ. ಶಿವನ ಹಣೆಗಣ್ಣುರಿ ಭುಗಿಭುಗಿಲೆನೆ ಮನ್ಮಥನನ್ನು ಉರಿಯುತ್ತಿರಲು 'ಅನಾಥೆಯನೆನ್ನಕೊಳ್ಳಿರೇ' ಎಂದು ಹತಾಶಳಾಗಿ ದೇವತೆಯರಲ್ಲಿ ಮೊರೆಯಿಡುತ್ತಾಳೆ. 'ಆರರೇ ಭುಗ್ಭುಗು ಭಾಪುರೇ ಭುಗು ಭುಗು ಪ್ರಜ್ವಾಲೆ ಮಜ್ಝುಯ್ಯ'— ಎನ್ನುವ ಕವಿನುಡಿಯ ಪ್ರಖರ ಕಾಂತಿಯನ್ನು ನೆನಸಿದೊಡನೆಯೇ ಓದುಗರಾದ ನಾವೂ ಕಡು ದುಃಖಿತರಾಗುತ್ತೇವೆ. ರುದ್ರನ 'ಬಿಸುಗಣ್ಣುರಿ ಪೊರಮಟ್ಟುದು ಸುಟ್ಟುದು ರತೀಶನಂ'— ಎಂಬ ಕವಿ ಹೇಳುವಾಗ, ಗಿರಿಜೆಯ ಶಿವಾನುರಾಗದ ಆ ಚಿತ್ರಮಾಲೆಗಳೇನು ? — ಈ ರತಿ ವಿಲಾಪದ, ಈ ಕಾಮದಹನದ ಪ್ರಸಂಗಗಳೇನು? ಎಂದು ನಾವು ಪೇಚಾಡಿಕೊಳ್ಳುವಂತಾಗುತ್ತದೆ.

ಹಂಪೆಯ ಹರೀಶ್ವರನು ತನ್ನ ಮೊದಲಿನ ಕಾವ್ಯವಾದ ಗಿರಿಜಾಕಲ್ಯಾಣದಲ್ಲಿ ಎರಡು ಘನೋದ್ದೇಶಗಳನ್ನು ಸಾಧಿಸಿಕೊಂಡಂತಿದೆ. ಪ್ರೌಢಕನ್ನೆಯಾದ ಪಾರ್ವತಿಯನ್ನು ಶಿವಸಾನ್ನಿಧ್ಯಕ್ಕೆ ಅಣಿ ಮಾಡಿದ್ದು; ಛಲಗಾರಳಾದ ಆ ಬಿಂಕದ ಹೆಣ್ಣನ್ನು ವಿರಹಿಣಿಯಾವಸ್ಥೆಯಲ್ಲಿ ನಿಲ್ಲಿಸಿ, ಮಹಾದೇವನನ್ನು ಕಾಮನ ನೆರವಿನಿಂದ ಪ್ರೇಮಿಯಾಗಿ ಪಡೆಯುವಿಯೋ, ಏನು ತಪೋಭಕ್ತಿಯಿಂದ ನಚ್ಚಿ ಮೆಚ್ಚಿ ಆತನ ಕೈ ಹಿಡಿಯುವಿಯೋ ಎಂದು ಕೇಳಿ, ಅಂಥ ಸತ್ವ ಪರೀಕ್ಷೆಗೆ ಅವಳನ್ನು ನೂಕಿದ್ದು ಕಾವ್ಯದ ಮುಖ್ಯ ಪ್ರಸಂಗ.

ಈ ಭಕ್ತಿಯ ಹೆಚ್ಚಳಕ್ಕಾಧಾರವಾಗಿಯೇ ಶಿವಪಾರಮ್ಯವನ್ನು ಈ ಲೋಕಕ್ಕೆಲ್ಲ ಸಾರುವದೇ ಕವಿಯ ಹೆಗ್ಗುರಿ. ಕವಿಯು ತನ್ನ ಎಲ್ಲ ಕೃತಿಗಳನ್ನು ರಚಿಸಿದ್ದು ಶಿವಭಕ್ತಿ ಸಂದೇಶವನ್ನು

CC-0. Jangamwadi Math Collection, Varanasi. An eGangotri Initiative

ನಾಡಿನ ತುಂಬೆಲ್ಲ ಹರಡಲಿಕ್ಕೆ, ಬೀರಲಿಕ್ಕೆ. ಆದ್ದರಿಂದ ಗಿರಿಜಾಕಲ್ಯಾಣದಲ್ಲಿಯೂ ಪಾರ್ವತಿಯ ಪಾತ್ರ ಸೃಷ್ಟಿಯನ್ನೆ ಮುಖ್ಯವಾಗಿಟ್ಟುಕೊಂಡು ಕವಿ ಹೊರಟಿದ್ದಾನೆ. ತನ್ನ ಬಾಲ್ಯವನ್ನು ಕೂಡ ಶಿವಧ್ಯಾನದಲ್ಲಿಯೇ ಕಳೆದ ಅಚಲ ಪುತ್ರಿಯೀಕೆ; 'ಬರೆದರೊ ಬೈತರೊ........ ಕರುವಿಟ್ಟರೊ ಕಂಡರಿಸಿದರೊ ಕಡೆದರೊ ಎನೆ' ಅವಳು ಪೂಜೆಯಲ್ಲಿ ರಾಜಿಸುವಳು;

> "ಬೇಡೆಂದೊಡೆ ಮಾಣಳ್ ನಲಿ
> ದಾಡುವಳಪ್ಪುವಳಮರ್ಚುವಳ್ ಪುಳಕಿಪ್ಪಳ್
> ಮಾಡುವ ಲಿಂಗಾರ್ಚನೆಯೊಳ್
> ನೋಡಲ್ ನುಡಿಯಲ್ ಭವಾನಿಯೇನೆಂದರಿಯಳ್"

ಇಷ್ಟು ಭಕ್ತಿಯ ಪೂಜೆಯಲ್ಲಿ ಪರವಶಳಾಗುವ ಕಥಾನಾಯಕಿಯನ್ನು ಸೃಷ್ಟಿಸಿದ್ದಾನೆ ಕವಿ. ಇಂಥವಳು ಮುಂದೆಯೂ 'ಬಗೆವೊಡೆ ಶಿವಭಕ್ತಿಗಲ್ಲದಭವಂ ಸಮಂತು ಸಿಲ್ಕುಂ ನಿಲ್ಕುಂ' ಎಂದು ಮನದಲ್ಲಿ ನಿರ್ಧರಿಸಿಕೊಳ್ಳುವುದೂ ಸಹಜವಾದುದೇ. ಒಟ್ಟಿಗೆ ಕವಿಪರಿಚಯ–ಕವಿ ಯಾವ ಗುರಿಯುಳ್ಳವನು ಎಂಬುದು ಈಗ ತಕ್ಕಮಟ್ಟಿಗೆ ಆದಂತಾಯಿತಸ್ಟೆ.

ಇನ್ನು ಕವಿಯ ಕಾಲವಾದ, ಹದಿಮೂರನೆಯ ಶತಮಾನದ ಆರಂಭಕಾಲದ ಸ್ಥಿತಿಯನ್ನೂ ಅದರ ಪೂರ್ವದ ಸ್ಥಿತ್ಯಂತರಗಳನ್ನೂ ಸ್ವಲ್ಪ ಅರಿತುಕೊಳ್ಳುವದು ಅತ್ಯಗತ್ಯವಾಗಿದೆ. ನಾಡಿನ ಅಂದಿನ ಸ್ಥಿತಿ ಯಾವ ಬಗೆಯಲ್ಲಿತ್ತು, ಈ ಶರಣ ಯುಗಕ್ಕೆ ಹಿನ್ನೆಲೆಯಾವುದು? ಇದು ಕನ್ನಡನಾಡಿಗೆ ಶುಭೋದಯಕಾರಿಯೇ ಅಲ್ಲವೇ? ಒಟ್ಟನಮೇಲೆ ಅಂದಿನ ನಾಡಿನಲ್ಲಿ–ನಾಡಿಗರ ಹೃದಯಗಳಲ್ಲಿ ಯಾವ ಪ್ರಕಾರ ನಾಡಿಗತಿ ಹಾರುತ್ತಿತ್ತು? ಇದನ್ನು ತಿಳಕೊಳ್ಳುವದು ಮುಖ್ಯ.

ಹನ್ನೆರಡನೆಯ ಶತಮಾನದಲ್ಲಿ ವೀರಶೈವ ಹೊಸ ಧರ್ಮೋದಯದವಸರದಲ್ಲಿ ಬಸವ ಅಲ್ಲಮಾದಿ ಪ್ರಮಥರಿಂದ ಹೊಸ ವಿಚಾರ ಕ್ರಾಂತಿಯ ತೆರೆಗಳು ಎದ್ದು ಮೇಲಾಡಿದ್ದವು; ಕಲ್ಯಾಣದಲ್ಲ ಶಿವಾನುಭವಮಂಟಪವು ತಲೆಎತ್ತಿ ವಿಶಿಷ್ಟ ಪಂಥದ ಶರಣ ಸಂಘವನ್ನು ನಿರ್ಮಾಣ ಮಾಡಿತ್ತು. ಈ ಸಂಗತಿಯು 'ಬಸವರಾಜದೇವ ರಗಳೆಯಲ್ಲಿ' ಬಸವನ ಬಾಯಿಂದ ಬರುವ—

> "ಶರಣರೊಕ್ಕುದರ ಸವಿ ಕೈಲಾಸದೊಳಗುಂಟೆ?
> ಶರಣ ಸಂಘದ ಸುಖಂ ಕೈಲಾಸದೊಳಗುಂಟೆ?
> ಇಲ್ಲಿಯ ಸುಖಂ ದೇವ ಅಲ್ಲಿಯುಳ್ಳಡೆ ಲೇಸು
> ಅಲ್ಲೆನ್ನೆ ಈಗಳೆ ಕೊಂಡುಹೋಹುದು ಲೇಸು"

ಎಂಬೀ ಮಾತುಗಳಿಂದ ಇನ್ನೂ ಖಚಿತವಾಗುತ್ತದೆ.

> "ಮಿಸುನಿ ತೊಡವೆನಿಸಿ ಬಹುವೆಸರುದಳೆದಂತೆ ಅಭವನಖಿಳರೆನಿಸಿದ
> ಈ ಪ್ರಮಥರು ಶಿವನ ಒಂದೇ ಚೈತನ್ಯದಿಂದ ಮೂರ್ತಿವೆತ್ತವರು ಒಂದೇ
> ಧರ್ಮ ಪ್ರಚಾರಕ್ಕಾಗಿ ಲೋಕದಲ್ಲಿ ಅವತರಿಸಿದವರು"

ಎಂದು ಜನಪದ ವೇದಾಂತಿ ನಿಜಗುಣ ಶಿವಯೋಗಿಯೂ ನುಡಿಯುತ್ತಾನೆ. ಎಂದಮೇಲೆ ಹರೀಶ್ವರನ ಶರಣರ ರಗಳೆಗಳು ಹುಟ್ಟಿದ ಪೂರ್ವಕಾಲವೆಂದರೆ, ಅದೇ ವಚನಯುಗದ ಸುವರ್ಣ ಮಹಿಮೆಯನ್ನೂ, ಲಿಂಗಾಂಗಿ ಸಾಮರಸ್ಯವನ್ನೂ ನುಡಿದು, ಹಾಡಿ ಸ್ವಲ್ಪ ವಿರಾಮ ತಕ್ಕೊಂಡ



CC-0. Jangamwadi Math Collection, Varanasi. An eGangotri Initiative

ಕಾಲವಿರಬೇಕು. ವೀರಶೈವ ಸಾಹಿತ್ಯ, ಸಂಸ್ಕೃತಿ, ಚರಿತ್ರೆಯಲ್ಲಿ ವಚನ ಯುಗವು ಸುವರ್ಣ ಯುಗ ವೆಂದು ಹೇಳುವದಾದರೆ, ಶರಣರಗಳೆಯ ಪ್ರಪಂಚವನ್ನು ಚೆಲುವಾದ ಮುಚ್ಚಂಜೆಗೆ ಹೋಲಿಸಿ ಹೇಳಬಹುದು. ಏಕೆಂದರೆ ಹಗಲಿನ ಕೊನೆಯಲ್ಲಿ ಸಂಧ್ಯಾಕಾಲವು ಎಷ್ಟು ಇನಿದಾದದ್ದೊ, ಅದೆಷ್ಟು ಸುಖಾಹ್ಲಾದಕಾರಕವೊ ಅಷ್ಟೆ ಇನಿದಾದದ್ದು, ಸುಖದಾಯಿಯಾದದ್ದು, ಪುರಾತನ ಶಿವಶರಣರ ಜೀವ ಕಥಾಲೋಕ. ಇಂಥ ರಗಳೆಯ ಸೃಷ್ಟಿಯಲ್ಲಿ ಹರಿಹರದೇವನು ತನ್ನ ಶಕ್ತಿ ಸಾಮರ್ಥ್ಯವನ್ನು ವೆಚ್ಚಮಾಡಿ ನೂರೊಂದೊ, ನೂರಿಪ್ಪತ್ತೊ ರಗಳೆಗಳನ್ನು ಕನ್ನಡಿಗರ ಪಾಲಿಗಿಂದು ಬಿಟ್ಟಿದ್ದಾನೆ. ಈ ರಗಳೆಗಳು ತಮ್ಮದೇ ತಮ್ಮದಾದ ಒಂದು ವೈಶಿಷ್ಟ್ಯ ವೈಭವಗಳಿಂದ ಮೆರೆಯುತ್ತಿವೆ; ಒಕ್ಕಡೆ ಪ್ರಮಥರ ಕರುಳಿನ ವಚನಗಳೆ ಕಣಿಯಂತೆ ಈಗಾಗಲೆ ಎಲ್ಲ ಸಾಹಿತಿಗಳ ಹೃದಯಗಳನ್ನು ಇವು ಗೆದ್ದುಕೊಂಡುಬಿಟ್ಟವೆಯೆಂಬ ಹೆಮ್ಮೆಯ ನೈಜಭಾವವೂ, ಇನ್ನೊಂದು ಕಡೆ ಇವು ಭಕ್ತಿಯ ಚರಿತೆಯಲ್ಲಿ ವಿಶಿಷ್ಟ ಮಹತ್ತ್ವದ ಸ್ಥಾನಪಡೆದು ಬೆಳಗುತ್ತಿರುವ ಘನ ನೋಟವೂ ನಮ್ಮೆಲ್ಲರ ಎದುರಿಗೆ ಮಧುರವಾಗಿ, ಚಿತ್ತಾಕರ್ಷವಾಗಿ ನಿಂತಿದೆ.

ಈತನು ಪ್ರಾಚೀನನಾದ ಸೆಕ್ಕಿಲಾರ್‌ನೆಂಬ ತಮಿಳ ಕವಿಯ ಹೆಸರಾದ 'ಪೆರಿಯ ಪುರಾಣ'ದಿಂದ ತನ್ನ ಅನೇಕ ರಗಳೆಗಳಿಗೆ ಮೂಲ ವಸ್ತುವನ್ನು ಆಧಾರವಾಗಿಟ್ಟುಕೊಂಡಿದ್ದು ಕಂಡುಬರುತ್ತದೆ. ಕೆಲವೆಡೆ ಹೊಸ ರಗಳೆ ಸೇರಿಸಿಯೂ, ಹಳೆಯ ಕಥೆಯಲ್ಲಿಯೂ ಬೇಕಾದ ಮಾರ್ಪಾಡು ಮಾಡಿಕೊಂಡು, ಕವಿಯು ತನ್ನ ಎಲ್ಲ ಕೃತಿಗಳನ್ನು ರಚಿಸಿದ್ದಾನೆ. ಹೆಚ್ಚಾಗಿ ಚೋಳ–ಪಾಂಡ್ಯ ದೇಶದ ಪವಾಡ ಕಥೆಗಳನ್ನೆ ಬಳಸಿಕೊಂಡಿದ್ದಾನೆ. ಬಾಣ, ಉದ್ಭಟ, ಹಲಾಯುಧ, ಓಹಿಲ ಮೊದಲಾದವು ಉತ್ತರಕಡೆಯವರಿಗೆ ಸಂಬಂಧಪಟ್ಟವು.

೨

ಎಲ್ಲ ರಗಳೆಗಳಲ್ಲಿಯೂ ಮಹಾಕವಿವರ್‍ಯ ವಿಲಾಸವೂ, ಭಾವಸಂಪುಷ್ಟಿಯೂ, ಪದಲಾಲಿತ್ಯವೂ, ವರ್ಣನಾ ವೈಖರಿಯೂ ನಮಗೆ ಎದ್ದೆದ್ದು ಕಂಗೊಳಿಸುತ್ತಲಿದೆ. ಹೆಜ್ಜೆ ಹೆಜ್ಜೆಗೂ ಇವನ್ನು ಕೊಟ್ಟರುವವನು, ಹಾಡಿ ಅಮರಾನಂದ ಬೀರಿರುವವನು ಸಾಮಾನ್ಯ ಕವಿಯಾಗಲಾರನು; 'ರಸಿಕ ಚಕ್ರಿ'ಯೇ ಆಗಿರಬೇಕು; ಆತ ಸಿದ್ಧ ಪುರುಷನೇ ಇರಬೇಕು; ಎನ್ನಿಸುತ್ತದೆ. ಇದನ್ನು ಖಂಡಿತ ಮಾಡಿಕೊಳ್ಳಲಿಕ್ಕೆ ಯಾವುದೇ ಒಂದು ರಗಳೆಯ ಕೆಲ ಪುಟಗಳನ್ನು ಮಗುಚಿ ನೋಡಿದರೆ ಸಾಕು. ನಾನೀ ಪ್ರಬಂಧದಲ್ಲಿ ಸಾಧ್ಯವಾದಮಟ್ಟಿಗೂ ಇಂತಹ ಸೀಮಾ ಪುರುಷನ ಅಗಾಧ ಕೈವಾಡವನ್ನೂ, ಆತನ ಸರ್ವಾಂಗಗಳನ್ನೂ ಕೊರೆದಿಟ್ಟುಕೊಳ್ಳಲು ಪ್ರಯತ್ನಿಸಿದ್ದೇನೆ. ಈಗಾಗಲೆ ಹಿರಿಯ ಆಧುನಿಕ ಸಾಹಿತಿಗಳು ರಗಳೆಗಳಿಗೆ ತಕ್ಕದಾದ ಯೋಗ್ಯತೆ ಕೊಟ್ಟು ಬರೆದಿದ್ದಾರೆ; ಮಾತಾಡಿದ್ದಾರೆ. ನಾನಿಲ್ಲಿ ಬರೆಯುವದು ಒಬ್ಬ ಸಾಮಾನ್ಯ ವಿಮರ್ಶಕನ ಸ್ವಂತ ಅಭಿಪ್ರಾಯಗಳನ್ನು. ಇವು ಕೊನೆಯವೂ ಅಲ್ಲ. ಇವಿಷ್ಟೆ ಹರಿಹರದೇವನ ಉದಾತ್ತ ಘನತೆಯನ್ನು ಹೇಳಿ ಮುಗಿಸುವ ಮಾತುಗಳೆಂದೂ ತಿಳಿಯಬೇಕಾಗಿಲ್ಲ. ಈ ವರೆಗೆ ಅಚ್ಚಾಗಿ ಕೈಗೆ ದೊರೆತಿರುವ ಮೂವತ್ತೆರಡು ರಗಳೆಗಳ ಸಿಂಹಾವಲೋಕನವನ್ನು ಮಾಡಲೆಳಸಿದ್ದೇನೆ. ರಗಳೆಗಳ ಬಿಡಿ ರೂಪಗಳನ್ನು ಎತ್ತಿಕೊಂಡು ಕವಿಯ ಮಹಾ ಜೀವನವನ್ನೂ, ಆತನ ಭಕ್ತಿಯ ಒಳದಾರಿಗಳನ್ನೂ ಒಂದು ಮೂರ್ತ ಸ್ವರೂಪಕ್ಕೆ ತರಲು ಹವಣಿಸಿದ್ದೇನೆ.



CC-0. Jangamwadi Math Collection, Varanasi. An eGangotri Initiative

ರಗಳೆಗಳ ಶರೀರಕ್ಕೆ, ನಿಲುಗಡೆಗೆ ಬಹುಮಟ್ಟಿಗೆ ವಚನಗಳ ಅಪಾರ ರಾಶಿ ಆಧಾರ ಸ್ತಂಭವಾಗಿದೆ. ರಗಳೆಯ ಹಿನ್ನೆಲೆಯಲ್ಲಿ ವಚನದ ಹಿರಿ ಸಂಪತ್ತಿಯೇ ಹಿರಿ ಶಕ್ತಿಯೇ ಅವಿತು ಕೊಂಡಿದೆ. ವಚನಕಾರರ ವೀರಶೈವ ಸಿದ್ಧಾಂತವೂ ಅಲ್ಲಲ್ಲಿ ಬಹು ಸೂಕ್ಷ್ಮವಾಗಿ, ಬಹು ಮಾರ್ಮಿಕ ವಾಗಿ ರಗಳೆಯ ನಾಳನಾಳಗಳಲ್ಲಿ ಹುದುಗಿಕೊಂಡಿದೆ. ತತ್ತ್ವಜ್ಞಾನದ ಜಾಡು ಹೀಗೆ ಪ್ರತಿಯೊಂದು ರಗಳೆಯನ್ನು ಸೇರಿಸಿಕೊಂಡರೆ, ಶಿವಭಕ್ತಿಯ ನಿನಾದ, ರಾಗಾವೇಶ ಅದರ ನಿರರ್ಗಳ ಓಟಕ್ಕೆ ಕಾರಣವಾಗಿದೆ. ಆದುದರಿಂದ ರಗಳೆಯ ಪದಗುಂಫನ ತಿರುಳ್ಗನ್ನಡದ ಅತ್ಯುತ್ತಮ ಮಾದರಿ ಯಾಗಿದೆ. ತೀರ ಹಳೆಯ ಮಾರ್ಗಕ್ಕೂ, ಇತ್ತ ಹೊಸ ಮಾರ್ಗಕ್ಕೂ ನಡುವಿನ ಸೀಮಾ ರೇಖೆ ಯಾಗಿ ಮುತ್ತೈದೆಯ ಬೈತಲೆಯಂತೆ ರಂಜಿಸುತ್ತಿದೆ. ಮಾರ್ಗವಿಷ್ಟು ಹೃದಯಂಗಮವಾಗಿದೆ. ವಚನಗಳಲ್ಲಿ ಹುಟ್ಟಿದ ಭಕ್ತಿರಸದ ಚಿಲುಮೆ, ಬರಬರುತ್ತ ರಗಳೆಯಲ್ಲಿ ತೆರೆತೆರೆಯಾಗಿ ಚಿಮ್ಮುತ್ತ, ನಾದಲೋಲತೆಯಿಂದ ಹೃದ್ಯವಾಗಿ, ಸೊಬಗಿನ ಸುಗ್ಗಿಯಾಗಿ, ನುಡಿಯ ಇನಿಗಂಪನ್ನು ನೂರ್ಮಡಿ ಯಾಗಿ ಸೊಗಯಿಸಿ, ಶುದ್ಧಯಿಸಿ ಮೊಳಗಿ ಹರಿಯುತ್ತಿದೆ. ರಗಳೆಯ ಗತಿಯ ರೂಪವೇನು ? ಗಾಡಿಯೇನು ? ಭಾವಲೀಲೆಯ ತಾಂಡವವೇನು ? 'ಹಂಪೆಯ ಮಾದರಸರ ದಯೆಯಿಂ ಪೇಳ್ದ ರಸಿಕ ಚಕ್ರಿ '-ಹರೀಶ್ವರನ ಬಂಧುರ ಕೀರ್ತಿಯೇನು ? ಎಂದುಕೊಂಡು ಮುಗ್ಧರಾಗಬೇಕಾಗುತ್ತದೆ. ಮತ್ತು ಮತ್ತೂ ತೆರೆದಕಣ್ಣುಳ್ಳವರಾಗಿ, ತಿಳಿವುಳ್ಳ ಮಾನಸರಾಗಿ ಇವನ್ನು ಪೂಜಿಸಬೇಕೆಂದು, ಸಾಧ್ಯವಾದಷ್ಟು ಜೀರ್ಣಿಸಿಕೊಳ್ಳಬೇಕೆಂದು ಹಾರೈಸಬಹುದಾಗಿದೆ. ರಗಳೆ ಸಣ್ಣದಿರಲಿ, ದೊಡ್ಡ ದಿರಲಿ, ಪುರಾಣ ಕಥಾನಾಯಕನಿರಲಿ, ಐತಿಹಾಸಿಕ ಬಸವನಿರಲಿ, ಚೆನ್ನಯ್ಯನಿರಲಿ — ಕವಿ ರಾಗಾವೇಶದಿಂದ ಆನಂದತುಂದಿಲನಾಗಿ ಹಾಡುತ್ತಾನೆ; ಅವೆಲ್ಲವುಗಳಲ್ಲಿ — ಅವನ ಶಬ್ದಗಳಲ್ಲಿಯೇ ಹೇಳುವದಾದರೆ :

" ಕಾಂತಿಯುತೆ ನವೀನಗತಿ, ಸುಖಾಸ್ಪದ ಸರಸಗತಿಗಳಿವೆ; ನುಣ್ಗತಿ ಇದೆ; ಜಾಣ್ಗತಿ ಇದೆ; ಸುಗಂಭೀರ ಸಾಂಧ್ರಗತಿಗಳೂ ಉಂಟು; ಮಧುರಗತಿಯೂ, ಮನೋಹರ ಗತಿಗಳೂ " ಉಂಟೇ ಉಂಟು.

ಪ್ರತಿಯೊಂದು ಉತ್ತಮ ಸನ್ನಿವೇಶದಲ್ಲಾಗಲಿ, ಪಾತ್ರರಚನೆಯಲ್ಲಾಗಲಿ, ಕವಿಯ ಕಲಾ ಶೋಭೆ, ಜಾಣ್ಮೆ, ಹಿಡಿತಕ್ಕೆ ಮೀರಿದೆ. ಆ ಪ್ರತಿಭೆಯ ನಾದಶಕ್ತಿ ಎದ್ದೆದ್ದು ಮೈದೋರಿದೆ, ಕವಿಜೀವ ಇವುಗಳಲ್ಲೆಲ್ಲ ಅಂತರ್ಯಾಮಿಯಾಗಿ, ಕಾವ್ಯಾರಾಮದ ಸವಿಕೋಗಿಲೆಯಾಗಿ, ಓದುವವರ, ಕೇಳುವ ವರ ಮನಗಳನ್ನು ಸೆರೆ ಹಿಡಿದು ನಿಲ್ಲಿಸುತ್ತಾನೆ. ತನ್ನನ್ನು ನಮ್ಮಿಂದ ಕೊಂಡಾಡಹಚ್ಚಿ, ಎಲ್ಲೆ ಮೀರಿ ವಿಸ್ಮಯಗೊಳಿಸುತ್ತಾನೆ. ವೀರಶೈವ ಸಾಹಿತ್ಯಸಾಗರದ ರತ್ನಗಳನ್ನು ಕನ್ನಡ ಲೋಕಕ್ಕೆ ಎತ್ತಿ ಕೊಟ್ಟವರಲ್ಲಿ ಮೊದಲಿಗರಾದ ಶ್ರೀ. ಶ್ರೀನಿವಾಸಮೂರ್ತಿಗಳು ಅಂದಂತೆ ನಮ್ಮಾ ಕವಿಯನ್ನು ವೀರಶೈವರ ಆದಿಕವಿ ಎಂದರೂ ಅಷ್ಟೆ; ವೀರಶೈವ ಸಾಹಿತ್ಯದ ಕುಮಾರವ್ಯಾಸನೆಂದರೂ ಅಷ್ಟೆ. ಯಾವ ಹೆಸರಿನಿಂದ ಕರೆದರೂ ಕವಿಯ ಮೇಲ್ಮೆಗೆ, ಆತ ಚಿಮ್ಮಿಸುತ್ತಿರುವ ರಸದ ಬುಗ್ಗೆಗಳ ಎತ್ತ ರಕ್ಕೆ ಎಳ್ಳಷ್ಟೂ ಲೋಪಿಲ್ಲ. ರಗಳೆಯ ಹುಚ್ಚು ಉತ್ಸಾಹಕ್ಕೆ ಶತಕಗಳಲ್ಲಿ ನಿಂತ ಹೆಪ್ಪಾದ ಭಕ್ತಿಯ ಕೆನೆಹಾಲಿಗೆ ಮೆಚ್ಚದವರಾರು ? ಇಷ್ಟು ಸರಸವಾಗಿ, ಚುರುಕಾಗಿ ಬರೆಯಬಲ್ಲ, ಇಷ್ಟು ಮೊನೆ ಯಾಗಿ ಮುನಿದು ಆಡಬಲ್ಲ, ಇಷ್ಟು ನಯವಾಗಿ, ಮಂಜುಳವಾಗಿ ಹಾಡಬಲ್ಲ ಹರೀಶ್ವರ, ಕುಮಾರ ವ್ಯಾಸ, ರತ್ನಾಕರರಂಥ ಅಭಿನವ ಪಂಪರನ್ನು ಹೆಚ್ಚಾಗಿ ನಮ್ಮ ಸಾಹಿತ್ಯದಲ್ಲಿ ಹುಡುಕಹೋಗು



CC-0. Jangamwadi Math Collection, Varanasi. An eGangotri Initiative

ವದೂ ಹುಡುಕಿದರೂ ಅಂಥವರು ಸಿಕ್ಕುವದೂ ದುರ್ಲಭವೇ. ಈ ಮಾತು ಬರಿಯ ಅಗ್ಗಳಿಕೆಯ ಪ್ರಶಸ್ತಿಯಲ್ಲವೆಂದೂ, ನಿಜಕ್ಕೆ ಬಹುದೂರವಾಗಿಲ್ಲವೆಂದೂ ಸಹೃದಯರು ಅರಿತುಕೊಳ್ಳಬೇಕಾಗಿದೆ. ಈತನ ಮೈತ್ರಿಯ ಪ್ರಭಾವವು ರಾಘವಾಂಕ, ಷಡಕ್ಷರಿಗಳ ಮೇಲೆ ಬಿದ್ದುದು ಅಷ್ಟೇನೂ ಅಚ್ಚರಿಯ ಮಾತಲ್ಲ. ಮುದ್ದಣನಿಗಿಂತ ಮೊದಲಿಗೆ ಮುದ್ದಾಗಿ ಹಾಡಿದ ರತ್ನಾಕರನ ಮೇಲೂ, ಶ್ರೀಯವರ ಅಮರ ಕೃತಿಗಳಲ್ಲಿಯಾಗಿ ಭಾವಗೀತಗಳಲ್ಲಿಯೂ, ಹರೀಶ್ವರನ ಪದಸಿದ್ಧಿಯ ಪಡಿ ನೆಳಲೂ, ಇನಿಬೆಳಕೂ ಮೂಡದೆ ಇಲ್ಲವೆಂಬುವನ್ನು ಇಂದಿನ ಸಾಹಿತಿಗಳು ಸಹಜ ಕಾಣಬಹು ದಾಗಿದೆ.

ಈತನ ಪದಗಳ ಬೆಡಗು ಬಿನ್ನಾಣಕ್ಕೆ ಉತ್ಸಾಹ ರಗಳೆಯಲ್ಲಿ ರಚಿತವಾದ 'ಮುರಘರ ಮಹಾತ್ಮೆಯ' ರಗಳೆಯನ್ನು ದೃಷ್ಟಾಂತಕ್ಕೆ ಕೊಡಬಹುದು. ಇದರಲ್ಲಿ ವಸ್ತು ಗಂಭೀರವಿರದಿದ್ದರೂ ಪದ್ಯ ರಚನೆಯು ಬಹು ಅಪೂರ್ವವಾದದ್ದು. 'ಮಳೆಯರಾಜ' ರಗಳೆಯಲ್ಲಿಯೂ ಇದೇ ರೀತಿಯ ಸೊಗಸು ಉಂಟು. ರೂಪಕ ರೀತಿಯಲ್ಲಿದೆ.

> "ಅರಿವುದುಂ ನಮಃ ಶಿವಾಯ ಮರೆವುದುಂ ನಮಃ ಶಿವಾಯ
> ನೆಲದೊಳುಂ ನಮಃ ಶಿವಾಯ ನಭದೊಳುಂ ನಮಃ ಶಿವಾಯ
> ನಿತ್ಯಮುಂ ನಮಃ ಶಿವಾಯ ನಿರ್ಮಳಂ ನಮಃ ಶಿವಾಯ
> ಸಂಜೆಯಂ ಸಮಾಧಿಯಂ ಸ್ವರೂಪುಮುಂ ನಮಃ ಶಿವಾಯ
> ರಂಜಿಸಿರ್ಪ ಮಂಗಳಂ ಮನೋರಥ ನಮಃ ಶಿವಾಯ
> ಉಗ್ರಮುಂ ನಮಃ ಶಿವಾಯ ಶಾಂತಮುಂ ನಮಃ ಶಿವಾಯ
> ಸ್ವರ್ಗಮುಂ ನಮಃ ಶಿವಾಯ ಮೋಕ್ಷಮುಂ ನಮಃ ಶಿವಾಯ"

ಎಂಬ ಪದಗಳಲ್ಲಿಯಾಗಲಿ—

> "ತಿಳಿವುತೀವೆ ಮಾಯೆ ಮುಸುಕೆ ಬೆಳಗು ಒಳಗೆ ತೊಳಗಿ ಮುಸಗೆ
> ಬಯಗೆ ಬೆಳೆಯೆ ತವಕವೇಳೆ ಮನದಲಲ್ಲೆ ಮುಂದುವರಿಯೆ
> ಜಯತು ಜಗುಳೆ ಜಾಡ್ಮೆಯುಗಳೆ ಎಚ್ಚರಿಚ್ಚೆಗಕ್ಕೆ ಸರಿಯೆ."

> "ಮಳೆಯ ದೇಶದೊಳಗೆ ಹಿಂಗದುತ್ಸವಂಗಳುದಯವಾಗೆ
> ಇಳೆಗೆ ತಣ್ಪು ಸೊಂಪು ಹೆಂಪು ಸುಣ್ಪು ಬಿಣ್ಪು ಉದಯವಾಗೆ"

> "ಶಂಕರನಂ ಕಣ್ತೀವಿನೋಡಿ ಮನಂ ತೀವಿ ನೆನೆದು ಭಾವಂ ತೀವಿ ಬರಿಸಿ ಮೈತೀವಿ
> ಪುಳುಕಮನಾಂತು ನಾಲಿಗೆ ತೀವಿ ಮಳೆಯರಾಜಂ ಬಣ್ಣಿಸುತ್ತಿರೆಯಿರೆ"

ಎಂಬಲ್ಲಿಯಾಗಲಿ ಕವಿಯ ಅಗಾಧ ಪ್ರತಿಭಾ ರಶ್ಮಿಗಳು ತಮ್ಮ 'ಕೊಡೆಯ ನೆಳಲ ತಣ್ಪು ಸೊಂಪು'ಗಳನ್ನು ಸುತ್ತುಮುತ್ತಲು ಹರಹಿಕೊಂಡಿವೆ; ಭಾವದ ಬೆಳೆಯಲ್ಲಿ ರಸದ ಸಮತೆಯುಂಟು.

ಒಟ್ಟಿಗೆ ಕವಿಗೆ ಭಕ್ತಿ ಹೆಚ್ಚೊ, ವಿರಕ್ತಿ ಹೆಚ್ಚೊ ಎಂಬ ಸಮಸ್ಯೆಯನ್ನು ಬಿಡಿಸಿ ಹೇಳಬೇಕೆ? ಭಕ್ತಿಯಿಲ್ಲದೆ ವಿರಕ್ತಿಯಿಲ್ಲ—ನಿಜವೇ. ಭಕ್ತಿಯ ಆಳದಲ್ಲಿ ಮಡುಗಟ್ಟಿ ವಿರಕ್ತಿ ನಿಲ್ಲುವದು. ತೆರೆಯಲ್ಲಿ ಭಕ್ತಿಯ ಪಟವು ಹಾರಾಡುತ್ತ ಗುಡಿಗಟ್ಟಿ ನಿಲ್ಲುವದು. ಹರೀಶ್ವರನಲ್ಲಿ ಕಳಸವಿಟ್ಟು ಒಳಗಿನ ಶಿವಲಿಂಗಮೂರ್ತಿಯನ್ನು ತಾನೇ ಪ್ರತಿಷ್ಠಾಪನೆ ಮಾಡಲು ಮುಂಬರುವನು. ತನ್ನದೇ ಆದ ಚೆಲುವಿನ ನೆಲೆಯನ್ನು ಕಂಡು ರಮಿಸುವನು.



CC-0. Jangamwadi Math Collection, Varanasi. An eGangotri Initiative

ಶರಣನಾಗಲಿ ಶರಣೆಯಾಗಲಿ ಹರೀಶ್ವರನ ಕೈಮೀರಿ ಭಕ್ತಿಯ ಹೆಚ್ಚಳವನ್ನು ಉಗ್ಗಡಿಸುವುದು ಅಸಾಧ್ಯ. ಕಾಯಕದಲ್ಲಿಯಾಗಲಿ ಪವಾಡದಲ್ಲಿಯಾಗಲಿ — ಕವಿ ಪ್ರವಾದಿಯೇ ಎದ್ದೆದ್ದು ಬಂದು, ತನ್ನ ವ್ಯಕ್ತಿತ್ವ ರೂಢಿಸಿ ಭಾವಗೂಡಿಸಿ ಮೇಳೈಸುತ್ತಾನೆ; ಜೋಳೈಸುತ್ತಾನೆ. ಇಂಥ ಉದಾತ್ತ ಕೃತಿಗಳನ್ನು ನೀಡಿದ ಹಂಪೆಯ ಹರೀಶ್ವರನಿಗೆ ಯಾವ ತಾರಕ ಶಕ್ತಿ ಪ್ರೇರಕವಾಯಿತು? ಅವನ ಜೀವನದ ಮಟ್ಟು ನಿಲುವುಗಳೇನು? ಸಾಮಾನ್ಯ ಕರಣಿಕನಾಗಿ ಜೀವಿಸಿದನೇ? ಬರಿಯೆ ಒಬ್ಬ ಜಡ ಸಂಸಾರಿಯಾಗಿ ಬಾಳಿದನೇ? ಪವಾಡ ಪುರುಷನಾಗಿ ತನ್ನ ಪಾಡುಗೈದನೇ? ವಿರಕ್ತನು-ಅಹುದೆ? ಅಲ್ಲವೇ? ಈ ಅಂಶಗಳಿಗೆಲ್ಲಾ ನಾವು ಉತ್ತರ ಕೊಟ್ಟುಕೊಳ್ಳುತ್ತ, ಈ ಮಹಾ ಕವಿಯ ಜೀವಿತದ ಕಟ್ಟಡವನ್ನು ರಚಿಸಿಕೊಳ್ಳಬೇಕಾಗಿದೆ.

'ಕರಣಿಕರೊಳಗ್ರಣಿಯೆನಿಪ ಗಾಡಿಕಾರಂ' ಎನ್ನುವ ಕೆರೆಯ ಪದ್ಮರಸನ ಮಾತನ್ನು ನಾವು ಒಪ್ಪಿಕೊಳ್ಳುವದಾದಪಕ್ಷಕ್ಕೆ, 'ಗಣಕರೀತಂ ಲೆಕ್ಕವರಿಯನೆಂದು' ತೀರ್ಮಾನಿಸಿದ್ದನ್ನೂ ಖಂಡಿತ ಒಪ್ಪಲೇಬೇಕಾಗುವದು. ಈ ಕವಿಯೋಗಿಯ ಚಿತ್ತವೆಲ್ಲಾ ಶರಣಸಂಗದಲ್ಲಿ ನೆಲೆಸಿರುವಾಗ, ಆತನು ಕರಣಿಕ ವೃತ್ತಿಗೆ ಮನಸೋಲುವದೆಂತು?

"ಸತಿಪುತ್ರರ್ ಮಿತ್ರರಾಪ್ತರ್ ತನುಮನಧನವೆಂಬಿಂತಿವಂ ನಿತ್ಯಮೆಂದು
ಜ್ಞಾತರ ವ್ಯಾಸಂಗದಿಂ ಪೆಯ್ ಅರಿಯದೆ ಮರುಳಾರ್ದನೆನ್ನಂ ದುರಾಶಾ।
ಮೃತನಂ ದುರ್ಮೋಹಿಯಂ ದುಸ್ತರತರ ವಿಷಯ ವ್ಯಾಪ್ತನಂ ದುರ್ಧರೈನೋ
ಹತನಂ ದುರ್ಭೋಧನಂ ರಕ್ಷಿಪುದೆಲೆ ಕೃಪೆಯಿಂದಂ ವಿರೂಪಾಕ್ಷಲಿಂಗಾ॥"

ಎಂಬ 'ಪಂಪಾಶತಕ'ದಲ್ಲಿನ ಪದ್ಯದಿಂದ ಕವಿಯು ಒಂದು ಕಾಲದಲ್ಲಿ ಮಡದಿ ಮಕ್ಕಳೆಂಬ ಗುಬ್ಬಿ ಸಂಸಾರಕ್ಕೆ ಅಂಟಿಕೊಂಡಿದ್ದರೂ, ವೈರಾಗ್ಯ ದೀಪ್ತಿಯಿಂದ ಮೇಲೆದ್ದು ಉನ್ನತ ಪದವಿಯನ್ನು ಮುಟ್ಟಿದಂತೆ ಕಾಣುತ್ತದೆ.

'ಬೇಡಿದುದನೀವ ಮಹಾ ನಿಧಿಯನ್ ಮಹೇಶನನ್' ಸತತ ಆರಾಧಿಸಿ ಈ ಸ್ಥಿತಿಗೆ ಮುಟ್ಟಿರಬೇಕಲ್ಲವೇ? ಅವನಾತ್ಮದಲ್ಲಿ ಭಕ್ತಿಯು ತೇರಾಗಿ ನಿಂತು, ಅವನ ಮನಸ್ಸನ್ನು ಎಳೆದೊಯ್ದುದು ತಪೋಸಿದ್ಧಿಯ ನಂತರವೇ ಆಗಿರಬೇಕು.

"ನಿಮಗೆನ್ನಂ ಮಾರುಗೊಟ್ಟೆಂ ಹರಹರ ನಿಮಗೆನ್ನನ್ನೆ ತಾನೊತ್ತೆಗೊಟ್ಟೆಂ
ನಿಮಗೆನ್ನಂ ಸೂರೆಗೊಟ್ಟೆಂ ನಿಮಗೆ ಹರುಷದಿಂದೊಜ್ಜತಂಗೊಟ್ಟೆನಾಹಾ
ನಿಮಗೆನ್ನಂ ಮಚ್ಚುಗೊಟ್ಟೆಂ ಗುರುವೆ ಘನನೇ ಸಂತೋಷದಿಂದೊಪ್ಪುಗೊಟ್ಟೆಂ
ನಿಮಗೆನ್ನಂ ದೇವ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ"

ಹೀಗೆ ತನ್ನ 'ರಕ್ಷಾಶತಕ'ವಲ್ಲಿ ಬಗೆದುಂಬಿ ಭಕ್ತಿಸುಧೆಯನ್ನು ಹರಿಯಿಸಿದ್ದಾನೆ. ಪಂಪಾಪುರದರಸನಿಗೆ ಸರ್ವ ವಿಧದಲ್ಲೂ ಮಾರುಹೋಗಿ ಮಣಿಯುತ್ತಾನೆ.

'ನಿಮ್ಮ ಪಾದಾಬ್ಜವನೆಲೆಲೆ ಬಿಡೆಂ ಸೀಳ್ದೊಡಂ ಪೋಳ್ದಡಂ ಪೊಯ್ದೊಡದಂ
ತಿಂತೆಂದುನುಂದುಂ ಬಿಡೆನಭವ ಬಿಡೆಂ ಸರ್ವಥಾ ಮಾಣೆನಾಂ ಬಿಡೆನೀಶಾ'

ಎಂದು ಭಾವವುಕ್ಕಿ, ಹಾಡುತ್ತ ಶಿವಸಾಮರಸ್ಯ ಪಡೆದುಕೊಳ್ಳುತ್ತಾನೆ.

ಈ ಸ್ಥಿತಿಯಲ್ಲಿ ಅವನಿಗೆ ಮಿಕ್ಕ ಭವಿಮಾನವರು, 'ಕಪ್ಪಡದ ಶರೀರಗಳ್, ತೃಣದ ಹಾಹೆಗಳ್, ಮಣ್ಣಬೊಂಬೆಗಳ್,' ಮಾನವನ ಅಲ್ಪತೆಯನ್ನು ಕಂಡು ಹರಿಹರದೇವ ಮರುಗಲಿಲ್ಲ; ಭವಿಗಳನ್ನು ಮೂದಲಿಸಿ, ಹೀಯಾಳಿಸಿ ದೇವನ ಹಸಾದಕ್ಕಾಗಿ ಹಿಗ್ಗಿ ಹಾರೈಸುವನು.



CC-0. Jangamwadi Math Collection, Varanasi. An eGangotri Initiative

ತನ್ನಿಷ್ಟದೇವತೆಯಾದ ಕಾವ್ಯದೇವನಾದ, ಎಲ್ಲಕ್ಕೂ ಆತನೇ ಆತನಾದ, ಹಂಪೆಯಾಳ್ದನನ್ನು ನೋಡದ ಕಣ್ಣೂ, ಕೇಳದ ಕರ್ಣವೂ, ಭಕ್ತಿಯಿಂ ಪಾಡದ ಬಾಯೂ ಇರುವದೇಕೆ ಮೂಜಗದಲ್ಲಿ? ಎಂದು ಆರ್ಭಟಿಸುತ್ತಾನೆ. ತನ್ನ ಪ್ರಾಣೇಶ್ವರನ ಮುಂದೆ "ಎತ್ತಣ ಹರಿ? ಎತ್ತಣ ಅಬ್ಜವನ್? ಎತ್ತಣ ವಾಸವನ್? ಎತ್ತಣ ಅಗ್ನಿ? ಎತ್ತಣ ಯಮನ್? ಎತ್ತಣ ಭಾಸ್ಕರೇಂದುಗಳ್?" ಎಂದು ಇತರ ದೇವಗಣವನ್ನು ಜರಿದಾಡಲೂ ಹಿಂಜರಿಯದೆ ಭಾವ ಸಮಾಧಿಯಲ್ಲಿ ಕುಳ್ಳಿರುವನು.

'ಕೆಡದಿರ್ ಮಾನವಾ!' ಆತನ ವಿಶ್ವರೂಪವನ್ನು, 'ಮನನೊಸೆದರ್ಚಿಸು; ಸೊಗಳ್, ನೆನೆನೆನೆ ನೋಡು, ಮರೆಗೊಳ್, ನೆರೆನಂಬು, ಮಚ್ಚಿಲೆಮಚ್ಚು, ನಚ್ಚುನಚ್ಚು, ನಿಗೆ ಬಲ್ವಿಡಿ ಬಲ್ವಿಡಿ' ಆತನನ್ನೆ ಎಂದು ಹಲುಬುತ್ತಾನೆ; ಬೇಡುತ್ತಾನೆ. ಮೊರೆಯಿಡುತ್ತಾನೆ, 'ನಲಿನಲಿ ದುರ್ಬಿ ಬೊಬ್ಬಿಡುತೆ, ಕೊರ್ಬುತೆ; ಕೂಗುತೆ, ಪಾಡುತಾಡುತಗ್ಗಲಿಸುತೆ, ಬೀಗಿ ತೂಗುತ್ತೆ, ಒಸೆದರ್ಚಿಸು ಮಾನವ ಹಂಪೆಯಾಳ್ದನಂ' ಎಂದು ಎಚ್ಚರಿಸುತ್ತಾನೆ; ಗುಡುಗುತ್ತಾನೆ.

'ದೇವ ದೇವೋತ್ತಮನ ಶರಣರಂ ಪಾಡಿದ ಶಿವಕವೀಂದ್ರಗದಾರ್ ಪಾಟಿಯಪ್ಪರ್'

ಎನ್ನುವ ಷಡಕ್ಷರಿಯೊಡನೆ ನಾವು ದನಿಗೂಡಿಸಲೇಬೇಕು.

ಅಂತು ನಮ್ಮಾ ಕವಿಗೆ ತಾರಕ ಶಕ್ತಿ ಅವನಂತರಾತ್ಮನಿಂದೆ ಪುಟವಿಕ್ಕಿ ಬಂದಿದೆ; ಆಗಾಗ ರುದ್ರನ ಉರಿಗಣ್ಣೂ ಅವನಲ್ಲಿ ಮೂಡಿ, ಅನ್ಯಮತೀಯರಿಗೆ ಕ್ರೂರ ವಿಡಂಬನೆಗಳ ಕಿಡಿಗಳನ್ನು ಬಿಟ್ಟು ಸುಟ್ಟುಬಿಡಲು ಹವಣಿಸುತ್ತದೆ. ಅನ್ಯಮತೀಯರನ್ನು ನೀಚರೆಂದೂ, ಖೂಳರೆಂದೂ, ಬೆತ್ತಲೆಯ ಭ್ರಷ್ಟರೆಂದೂ ಬೈಗಳ ಸುರುಮಳೆ ಸುರಿಸುವಷ್ಟರಮಟ್ಟಿಗೂ ಅಲ್ಲಲ್ಲಿ ಕವಿ ಹೋಗುತ್ತಾನೆ. ಅವರೆಲ್ಲ ಈತನಿಗೆ 'ಛಾಂದಸರು, ವ್ಯರ್ಥೋತ್ಸಾಹಿಗಳು, ಮಟ್ಟೆಯ ಮರುಳ್ಗಳು, ಹೆಬ್ಬೇಳಿಗಳು, ದರ್ಭೆಯ ನಿರ್ಭಾಗ್ಯರು' ದುರದೃಷ್ಟ: 'ಆಗಸದೆತ್ತರ'ಕ್ಕೆ ಏರಿಹೋಗುವ ನಮ್ಮಾ ಕವಿಗೆ ಹೀಗೆ ಕೆಳಮಟ್ಟಕ್ಕೆ ಬಂದು ಆಡುವದು ಭೂಷಣವಲ್ಲ. ಪರಮತೀಯರನ್ನೆಲ್ಲ 'ತರ್ಕದ ತಾಮಸರೆಂದೂ, ಬರಿಯ ಭಂಡರೂ, ನರಕಿಗಳೆಂದೂ ಉರಿದು ಬೀಳುವದನ್ನು ನೋಡಿದರೆ— ಆಗಿನ ಕಾಲದ ಮತಗಳ ಹೆಚ್ಚು ತಿಕ್ಕಾಟವೇ ಕಾರಣೀಭೂತವೆನ್ನಲು ಅಡ್ಡಿ ಇಲ್ಲ. ಈ ವಾಗ್ಯುದ್ಧದಲ್ಲಿಯೇ ಹರೀಶ್ವರ ತನ್ನ ಶಕ್ತಿ ಸರ್ವಸ್ವವನ್ನು ಸೂರೆ ಮಾಡಿಕೊಳ್ಳುವದಿಲ್ಲ. 'ಕೇಳೊ ವೈಷ್ಣವಾ....' ಎಂದು ಬಾಯಿಂದ ಮೂದಲಿಸಿ ಹೋದರೂ ಮರಳಿ ಕ್ಷಣಾರ್ಧದಲ್ಲಿಯೇ ಪರಶಿವನ ಪರಶಕ್ತಿಯಲ್ಲಿ ತನ್ಮಯನಾಗಿ, ಸಮಚಿತ್ತನಾಗಿ, ಭಕ್ತಿಯ ಪುಷ್ಪಕ ವಿಮಾನದಲ್ಲಿ ಕೈಲಾಸಕ್ಕೆ ನೆಟ್ಟಗೆ ಏರಿ ಏರಿಹೋಗಿ, ಭಕ್ತರ ಬಾಗಿಲುಗಳಿಗೆ ಮತ್ತೆ ಇಳಿಯುತ್ತೆ, 'ಅಷ್ಟಗುಣ ನಿಧಿಚನ್ನ ಎನ್ನ ಭಕ್ತಿಯ ಚನ್ನ' ಎಂದು ಧ್ಯಾನಿಸಿ ಇಳಿಯುತ್ತ ಇಪ್ಪ ಹರೀಶ್ವರನನ್ನು ಎಂದಾದರೂ ಮರೆಯಲಿಕ್ಕಾದೀತೆ?

ಅದಿರಲಿ—ನಮ್ಮಾ ಹರಿಹರದೇವ ನಿಶ್ಚಲ, ನಿಷ್ಕಳಂಕ, ನಿರ್ವ್ಯಾಜ, ನೀಲಕಂಠ ಪ್ರೇಮಿ ಎನ್ನಲಿಕ್ಕೆ ಹೆಚ್ಚಿನ ಉದಾಹರಣೆಗಳು ಬೇಕೆನಿಸುವದಿಲ್ಲ. ಇವನ ಕ್ಷಣಮಾತ್ರದ ತೆಗಳಿಕೆ ಅವಹೇಳನಗಳಿಗೆ ಹೆಚ್ಚು ಮಹತ್ತ್ವವನ್ನು ಕೊಡಲಿಕ್ಕಾಗದು. ಮುಖ್ಯವಾಗಿ ಕವಿಯದು ಅಳಿಮನಸಲ್ಲ. ಇದಿಷ್ಟೆ ಸಾಕು ಕುಂದು ತರಬಹುದಾದ ಮೇಲಿನ ಅವತರಣಿಕೆಗಳನ್ನು ಭಸ್ಮೀಕರಿಸಲಿಕ್ಕೆ. ಅವನ ದೊಡ್ಡ ಮನಸ್ಸು ಶರಣರ ಮಧುರ ಧರ್ಮವಂ ಸೂರೆಗೊಂಡು ನಲಿದಾಡಿದೆ; ಅದೇ ತಿಳಿಮನಸ್ಸೆ 'ನಿತ್ಯನೊಳು ನೆಲೆಗೊಂಡ ಮುತ್ತೈದೆ'ಯರನ್ನು ನಿರ್ಮಿಸಿ ವಿಶ್ವದ ರಕ್ಷೆಗೆ— ಶಾಶ್ವತ ರಕ್ಷೆಗೆ,



CC-0. Jangamwadi Math Collection, Varanasi. An eGangotri Initiative

ಪಚ್ಚಪಸಿಯೊಕ್ಕಲನ್ನೂ, 'ಸೊಗಸಿನ ಸೊಕ್ಕು ಸವಿಯ ಸಾಲಿಡೆ' ಮಗಮಗಿಸುವ ಧೂಪದ ಹೊಗೆಯನ್ನು ಎರಚಿ, ತೂರಿ, ಹೊರಹೊಮ್ಮಿ ಚಲ್ಲಾಡಿದೆ; ಹೊರಸೂಸಿದೆ. 'ಮನದೊಳ್ಮಹಾ ವಿರಕ್ತಿಯ್ಯನೊಚ್ಚತಂಗೊಂಡು' ಹರಿಹರದೇವನು, 'ಲೋಕಕ್ಕೆ ಕಣ್ಣಾಗಿ ಕಾಣಿಸುವ ಮಹಿಮನೇ; ಇವನೋ ಲೋಕಕ್ಕೆ ಬೆಳಗಾಗಿ ಬೆಳಗುವಾದಿತ್ಯನೇ–ಈತನೋ! ಏನು–ಆತನೇ ಕಳುಹಿದ ಕವಿಪ್ರವಾದಿಯೋ ಎನ್ನುವಂತೆ ಸಿತ್ಯ ರಂಜಿಸುತ್ತಾನೆ. ಈತನು ಭಾವ ಭಕ್ತಿಯ ಬೆನ್ನೇರಿ ಪೇರಾನಂದದಿಂ ನೆಗೆದಾಡಿ, ಲೋಲಾಡುವಾಗ,

'ಓಹೋ ಓಹೋ ಕಣ್ಣಕ್ಕಿನಿಯನೆ
ಓಹೋ ಓಹೋ ಮನವಿಕ್ಕಿನಿಯನೆ'

ಎಂದು ತಾಳಲಯದಲ್ಲಿ, ಅವನನ್ನು ಕರೆಕರೆದು ಹಾಡಿಕೊಳ್ಳುವಂತಾಗುತ್ತದೆ. ಕವಿ ತನ್ನ ಅದ್ಭುತ ಶಕ್ತಿಯಿಂದ ರಚಿಸಿದ ಪುರಾತನರ ಮತ್ತು ನೂತನ ಪ್ರಮಥರ ರಗಳೆಯ ವಿಶಿಷ್ಟ ಸ್ವರೂಪವನ್ನು ಈಗಾಗಲೆ ಸ್ವಲ್ಪ ಸವಿದಂತಾಯಿತು; ಪ್ರತಿಯೊಂದು ರಗಳೆಗೂ ಒಂದು ಚಿರ ಪಿಂಡವನ್ನೂ, ಶಾಶ್ವತ ಶಾಂತಿಯನ್ನೂ ಹೇಗೆ ಮೈತುಂಬಿಸಿ ಬಣ್ಣ ಬಿಟ್ಟಿದ್ದಾನೆ ಎಂಬುದನ್ನು ತುಸು ತಿಳಿದಂತಾಯಿತು. ಕಥಾಕಾವ್ಯಕ್ಕೆ ಒಳ್ಳೆಯ ಸಮರಸವಾದ ವಾತಾವರಣವನ್ನು ಕವಿ ಕಲ್ಪಿಸಿಕೊಂಡಿದ್ದಾನೆ. ಒಂದು ಕಡೆ ಕವಿಯೇ " ಉರಿ ನಡೆವಂತೆ, ಬಾನು ನಡೆವಂತೆ, ಸಿಡಿಲ್ ನಡೆವಂತೆ, ನಿನ್ನ ನಡೆ' ಎಂದು ಸಾರಿದ್ದಾನೆ. ಮತ್ತು ನಡೆ ಇಲ್ಲದವನ ಪಾಡ ನಾನೊಲ್ವೆನೇ ದೇವಿ, ನುಡಿದು ಪುಸಿವನ ನುಡಿಯ ನಾನೊಲ್ವೆನೇ; ನುಡಿಕಿರಿದು ನಡೆಪಿರಿದು ನೋಡೆನ್ನ ಭಕ್ತರ್ಗೆ" ಎಂದು ಗಿರಿಜೆಯನ್ನು ಸಂಭೋಧಿಸಿ ಘೋಷಿಸುತ್ತಾನೆ ಕವಿಯ ವಿರೂಪಾಕ್ಷನು.

ಹೀಗೆ ಹರಿಹರದೇವನು ಸತ್ಯ ಮಾರ್ಗಿಯಾಗಿ, ಭಕ್ತಿಯ ಪಂಥವನ್ನೆ ತನ್ನ ಕೃತಿಗಳಲ್ಲಿ ಉಜ್ವಲಗೊಳಿಸುತ್ತಿರುವದಾದರೂ, ಕವಿಯು ವೀರಶೈವ ಸಂಸ್ಕೃತಿಯ ವಿಶಿಷ್ಟ ಕುರುಹುಗಳನ್ನು ಅಲ್ಲಗಳೆಯದಂತಿದ್ದಾನೆ; ಅವನ್ನು ಸಾಧ್ಯವಾದಮಟ್ಟಿಗೂ ಕಾಪಾಡಿಕೊಂಡು ಬಂದಿದ್ದಾನೆ. ಶೈವ ಮತೀಯನಾದ 'ಪೆರಿಯ ಪುರಾಣದ' ಕರ್ತೃವಿಗೂ, ಇವನಿಗೂ ಮನೋಧರ್ಮದಲ್ಲಿ ಒಂದೇ ಹೋಲಿಕೆ ಇದೆ. ಹರೀಶ್ವರನು ಹುಟ್ಟು ವೀರಶೈವನಲ್ಲದಿದ್ದರೂ ತದನಂತರ ನಿಷ್ಠುರ ವೀರಶೈವನಾಗಿದ್ದಾನೆ; ಬಹು ಖಂಡಿತವಾದಿಯಾಗಿದ್ದಾನೆ. ಒಂದು ರಗಳೆಯೂ ಕೂಡ ಲಿಂಗಾರ್ಚನೆಯ ವರ್ಣನೆಯನ್ನು ಬಿಟ್ಟು ಸಾಗಿಲ್ಲ. ಆಗ ಕನ್ನಡ, ತಮಿಳು ನಾಡುಗಳಲ್ಲಿಯೂ ತೆಲಗು ದೇಶದಲ್ಲಿಯೂ ಶೈವ-ವೀರಶೈವ ಮತ ಧರ್ಮಗಳ ಬಿರುಗಾಳಿ ಒಂದು ದಿಕ್ಕಿನಿಂದ ಬೀಸಿ ಬಂದರೆ ಅದಕ್ಕೆ ಎದುರಾಗಿ ವೈಷ್ಣವ, ವೀರವೈಷ್ಣವ ಮತಗಳ, ತಾಕಲಾಟದ ಮಾರುತವೂ ಒಂದೇ ಸವನೆ ಬೀಸುತ್ತಿರಬೇಕು. ಅಂತೆಯೇ ನಮ್ಮ ಮಹಾ ಕವಿಯೂ 'ವಿರೂಪಾಕ್ಷ ಸಾಕ್ಷಾತ್ಸುಪುತ್ರ'ನೆಂಬ ಹೆಸರಿನಲ್ಲಿ ಹೆಮ್ಮೆ ಪಟ್ಟುಕೊಳ್ಳಬೇಕಾಯಿತು.

ಹರೀಶ್ವರನಿಂದ ಇತ್ತೀಚೆಗೆ ಬಹುತರ ಎಲ್ಲ ವೀರಶೈವ ಪುರಾಣಗಳು ಹುಟ್ಟಿಕೊಂಡು ಬಂದಿರುವದಾಗಿ ಇತಿಹಾಸಕಾರರು ಹೇಳುತ್ತಾರಷ್ಟೆ. ಅವು ಚಿತ್ರ ವಿಚಿತ್ರ ರೀತಿಗಳಲ್ಲಿ ವಾಸ್ತವಾಂಶಗಳನ್ನು ಬೆರಸಿ ಹೆಣೆದುಕೊಂಡಿದ್ದು ಸರಿಯಷ್ಟೆ. ಆದರೆ ಈ ಕವಿಯ ರಗಳೆಯ ಕಥೆಗಳಲ್ಲಿಯೂ ಅದ್ಭುತ ರಮ್ಯವಾದ ಪವಾಡಗಳನ್ನು ಕೇಳಿ ಓದುವ ಪ್ರಸಂಗ ಬಂತು. ಪ್ರತಿಯೊಬ್ಬ ಶಿವಭಕ್ತನೂ ಪವಾಡಗಳನ್ನು ಮೆರೆದ ಸಂಗತಿಗಳು ಕಾವ್ಯದ ಹಾಸುಹೊಕ್ಕಾಗಿ ನಿಂತಿವೆ. ಅನಿವಾರ್ಯ: ಆಗಿನ



CC-0. Jangamwadi Math Collection, Varanasi. An eGangotri Initiative

ಭಕ್ತಗಣದ ಮನಸ್ಸಿನ ಮೇಲೆ ಬಿಂಬಿಸಿ ಹೇಳಿ ಸುಪರಿಣಾಮವನ್ನು ಸುಲಭವಾಗಿ ಮಾಡಿಕೊಳ್ಳುವದು ಈ ಹಾದಿಯಿಂದ ಬಹು ಅನುಕೂಲವಾಯಿತು. ಅಂತೆಯೇ ಮುಂದಿನ ಪುರಾಣಗಳಲ್ಲಿ ಕಲ್ಪಿತ ಕಥೆಗಳೂ ದಂತ ಕಥೆಗಳೂ ವಿಪುಲವಾಗಿ ಸಮಿಶ್ರವಾಗಿಬಿಟ್ಟವು. ಇದ್ದಮಟ್ಟಿಗೆ ಹರೀಶ್ವರನ ಕಾವ್ಯ ಪ್ರಪಂಚವೇ ನಮಗೆ ಹೆಚ್ಚು ವಿಶ್ವಾಸಾರ್ಹವಾಗಿ ತಕ್ಕಮಟ್ಟಿಗೆ ಇತಿಹಾಸಕ್ಕೆ ಸಮೀಪವಾಗಿ ಉಳಿದಂತಾಗಿದೆ.

ಇದಕ್ಕುದಾಹರಣೆಯಾಗಿ ಆವನ ಬಸವ, ಅಲ್ಲಮ, ಅಕ್ಕಮಹಾದೇವಿ, ರೇವಣಸಿದ್ಧರಂಥ ಮಹಾ ವ್ಯಕ್ತಿಗಳು ಐತಿಹಾಸಿಕ ಪುರುಷರೆಂಬುದು ನಮ್ಮ ಭಾಗ್ಯೋದಯ. 'ಪೆರಿಯ ಪುರಾಣ'ದಲ್ಲಿನ ಅರವತ್ತುಮೂವರು ಪುರಾತನರನ್ನು ಹೊರ್ತುಪಡಿಸಿ, ಆಗಿನ ಈ ಶರಣ ಪ್ರಮಥರನ್ನೂ ಮತ್ತು ಶಂಕರ ದಾಸಿಮಯ್ಯ, ಜೇಡರ ದಾಸಿಮಯ್ಯ, ತೆಲುಗು ಜೊಮ್ಮಯ್ಯ, ಕೆಂಭಾವಿಯ ಭೋಗಣ್ಣ, ಕೋಳೂರ ಕೊಡಗೂಸು, ಹೆರೂರ ಹೆಂಗೂಸು ಮುಂತಾದ ಶಿವಶರಣರ ಜೀವಿತ ಘಟನೆಗಳನ್ನೂ ಎತ್ತಿ ಹಿಗ್ಗಿಸಿ, ಭಕ್ತಿದುಂಬಿ ರಗಳೆಗಳಲ್ಲಿ ಹೆಣೆದುಕೊಂಡನು. ಹರೀಶ್ವರನ ಭಕ್ತಿಯ ಎಳೆಗಳು ಇಷ್ಟು ಸುತ್ತುವರಿದು ನೂರಾರು ಜೀವಿಗಳಲ್ಲಿ ಪಸರಿಸಿಕೊಂಡವು; ಅವರನ್ನು ತಳಕಿಸಿ ಬಿಗಿದು ವಿಜೃಂಭಿಸಿದವು.

ವೀರಶೈವರ ಕಾಯಕಗಳ ಸಂಪ್ರದಾಯಕ್ಕನುಸಾರವಾಗಿ, ಕವಿಯು ಇಳೆಯ್ಯಾಂತ ಗುದ್ದಿಮಾರನೆಂಬ ಒಕ್ಕಲು ಮಗನನ್ನು ಚಿತ್ರಿಸುವದು ಮರೆಯಲಿಲ್ಲ. ಆನೈನಾರೆಂದ ಗೋವಳಿಗೂ ಇಲ್ಲಿ ಸ್ಥಳ ದೊರಕಿದೆ; ತಿರುಕುಂಪೆ ತೊಂಡಾರ್ರನೆಂಬ ಮಡಿವಾಳನು 'ಮನದ ಮಡಿಯನೊಂದುಗೂಡಿ' ಜೀವಿಸಿದ ವಿವರವೂ ಕವಿಯ ಕೈಗೆ ಸಿಕ್ಕಿದೆ. ಕಿರಾತನಾದ ಕಣ್ಣಪ್ಪನಾಯಿತು, ಮಾದರ ಚನ್ನಯ್ಯನಂತೂ ಸರಿಯೆ, ಕುಂಬಾರ ಗುಂಡಯ್ಯನಂತೂ ಬಿಡಲಾಗದ್ದು.

ಯಾವುದರಲ್ಲಿಯೂ ಈ ರಸೈಕ ಜೀವಿ ದೊಳೆಕೊಳ್ವುದು 'ಹರನ ಪರಮಾನಂದದ ರಸದ ಮಳೆಗಳನ್ನೆ":-

> "ಬಿತ್ತಿ ಬೆಳೆವಂ ಶಿವನ ಸದ್ಭಕ್ತಿ ಸಸಿಗಳಂ
> ಕಿತ್ತು ಕಳೆವಂ ಕ್ಷುತ್ಪಿಪಾಸಾದಿ ಕಳೆಗಳಂ"

ಇನ್ನು ನಾವು ಈ ಮಹಾಕವಿ ನಿರ್ಮಿಸಿದ ಮಹಾವಿಭೂತಿಗಳನ್ನು ಒಳಹೊಕ್ಕು ಅವಲೋಕಿಸಲು ತೆರಳೋಣ.

ಬಸವಣ್ಣನೇ ನಮ್ಮ ಕವಿಗೆ ಶರಣಗಣದ ಮಧ್ಯೆ ನಿರಂತರ ಬೆಳಗುವ ಧ್ರುವತಾರೆ. ಈತನೆ "ಈಶನ ಮೀಸಲಪ್ಪ ಭಕ್ತ; ಇವನಿಗೆ ಎಣೆಯಿಲ್ಲ ಪಡಿಯಿಲ್ಲ ಪಾಸಟಿಯಾವಂ?" ನಿಜ.

"ಪಾಷಂಡಿ ಭೂಮಿಯೊಳು ಶಿವಭಕ್ತಿಯೆನಾರಂಭಿಸಿ ಸಾಮರ್ಥ್ಯಮಂ ಬಿತ್ತಿ ಪ್ರತ್ಯಕ್ಷಗಳಂ ಬೆಳೆದು ಗಣ ಪರ್ವಂಗಳಂ ಸಫಲಂ ಮಾಡಲೆಂದು ಬಂಥ ಕಾರಣಿಕ ಬಸವ:' ಇಂಥ ಅಲೌಕಿಕ ಧರ್ಮವೀರನ ದೆಸೆಯಿಂದಲೇ 'ಎಮ್ಮ ಭಕ್ತಿ ಬಣ್ಣವೇರಿತು' ಎಂಬುದು ಕವಿವಾಣಿ.

ತನ್ನ ಅಪ್ರತಿಮ ವಚನಗಳಲ್ಲಿ ಮೂರ್ತಿವೆತ್ತು ಕಾಣುವ ಬಸವನೇ ಈ ಬಸವರಾಜದೇವರ ರಗಳೆಯಲ್ಲಿ ಮೂಡಿದ್ದಾನೆ: ಅರ್ಥ-ವೇ ದೊರೆತಿರುವ, ಅಚ್ಚಾಗಿರುವ ಈ ಕೃತಿಯು ಹರೀಶ್ವರನ ಅತ್ಯುತ್ತಮ ಕಾವ್ಯವಾಗಿದೆ; ಈ ದೊಡ್ಡ ರಗಳೆಯು ಕವಿಯ ಬಂಧುರ ಕೀರ್ತಿಗೆ ಯೋಗ್ಯ



CC-0. Jangamwadi Math Collection, Varanasi. An eGangotri Initiative

ಗಲೂ ಕಳಸವನ್ನಿಟ್ಟು ಶೋಭಿಸುವಂತಿದೆ; ಈ ಭಕ್ತಿಭಂಢಾರಿ ಬಸವಣ್ಣ, ಈ ಶರಣೈಕ ಬಾಂಧವ, ಬಿಜ್ಜಳನ ನೆಚ್ಚಿನ ದಣ್ಣಾಯಕ, ಸಚ್ಚರಿತ್ರ ಸಹಜ ಸುಮ್ಮಾನಿ: ನಮಗೆ ಬಂಟರ ಬಂಟನಾದರೂ ಶರಣರ ಕಿಂಕರರ ಕಿಂಕರನೇ ಸರಿ: ವಿರಕ್ತನಲ್ಲವಾದರೂ ಕಡುವಿರಕ್ತರಿಗೆ ಸಮಸಾದ ಮನಸ್ಸಿನ ಶೀತಳ ಶಾಂತಿಯನ್ನೂ, ಚಿತ್ತದ ನಿರ್ಮಳ ರೂಪನ್ನೂ, ಭಕ್ತಿಯ ಓಜೆಯೋಜೆಯನ್ನೂ ಪಡೆದಿದ್ದಾನೆ. ಸಂಸಾರದಲ್ಲಿದ್ದುಕೊಂಡು ಜೀವನ್ಮುಕ್ತಿಯನ್ನು ಪಡೆಯುವದೇ ಮುಮುಕ್ಷುವಿನ ಹಿರಿಮೆಯೆಂದು ತಮ್ಮ ಅನುಪಮ ಭಾವಗೀತಗಳಲ್ಲಿ ರವೀಂದ್ರನಾಥರು ಹಾಡಿ ಉದ್ಘೋಷಿಸುತ್ತಿಲ್ಲವೇ? ನಮ್ಮ ಬಸವಣ್ಣ — 'ಎನಗಿಂತ ಕಿರಿಯರಿಲ್ಲ; ಶಿವಭಕ್ತರಿಗಿಂತ ಹಿರಿಯರಿಲ್ಲ' ಎಂದು ನಿಮಿಷ ನಿಮಿಷಕ್ಕೂ ಬರೆಯುವ ಬಸವರಾಜನು ನಿರಂತರಾವಳೋಕನಾದ ಕೂಡಲ ಸಂಗಮನ ಕಾರಣಿಕ ಶಿಶು:

> " ಎನ್ನ ಮನದೊಳಗೆ ಕುಣಿದಾಡು ಕೂಡಲ ಸಂಗ
> ಎನ್ನ ಕಣ್ಣೊಳಗೆ ಪರಿದಾಡು ಕೂಡಲ ಸಂಗ "

ಎಂಬ ತದೇಕ ಧ್ಯಾನದಿಂದ 'ಉಣ್ಮುವ ಶಿವಾನಂದರಸದ ಹೊನಲೊಳಗೆ'

> " ಈಸಾಡಿ ಗಂಗಾಧರನ ಚರಣಮಂ ಪಿಡಿದು
> ಲೇಸಾಗಿ ಚಿತ್ತದೊಳು ಸಂಗನಂ ನೆರೆಪಿಡಿದು "

ಮನದೊಳಚ್ಚೊತ್ತಿ,

> " ಲಿಂಗಜಂಗಮವೊ ಮೇಣ್ ಜಂಗಮವೆ ಲಿಂಗವೋ
> ಲಿಂಗಜಂಗಮವೆರಡು ಇಳೆಯೊಳು ವಿಭೇಧವೋ "

ಎಂಬಂತೆ ಸಾತ್ವಿಕ ಪ್ರಭು ಪೂಜಿಸುತ್ತ ಭಕ್ತಿಯೋಗಿಯಾಗಿದ್ದಾನೆ. 'ಶರಣರ ಮುಂದೆ ನೀನಾರ್' ಎಂದು ಶರಣ ಧರ್ಮದ ಅಗ್ಗಳಿಕೆಯನ್ನೂ, ಲೋಕಹಿತಾರ್ಥವನ್ನೂ, ಭವಿಗೆ ವಿಶದೀಕರಿಸುತ್ತಾನೆ. ಈತ 'ಸದ್ಭಕ್ತಿ ಸೂರೆಗಾರಂ' ಅಂದಿನವರಿಗೆ ವಿಶ್ವಾತ್ಮ — ಇಂದಿನವರಿಗೆ ಮಹಾತ್ಮ: ಜಂಗಮ ಗಣವನ್ನು ನಿರ್ಮಿಸಿಯೂ, 'ಕಾಯಕವೇ ಕೈಲಾಸ'ವೆಂಬ ಬೀಜವನ್ನು ಬಿತ್ತಿ ನಾಡಿಗೆಲ್ಲ ಹೊರ ಚಲ್ಲಿಯೂ, ಅಮರ ಬೆಳೆಗಳನ್ನು ನೀಡಿದ ಆರಂಬಗಾರ; ದಿವ್ಯ ಪುರುಷನ ಮಟ್ಟಕ್ಕೇರಿದರೂ ಅಲ್ಲಮ ಗುರುವಿನೊಡನೆ ಷಟ್-ಸ್ಥಳದ ಮಹಿಮೆಯನ್ನು ದಿವ್ಯ ಪುರುಷನು ಅಲ್ಪ ಮಾನವ ಪ್ರಾಣಿಗೆ ಅರುಹಿದರೂ, ಕದಡದ ಬಗೆಯುಳ್ಳ ನಚ್ಚಿನ ಮೆಚ್ಚಿನ ಬಸವಣ್ಣ ನಮಗೆ; ಮಾಯೆಯಂ ಗೆದ್ದು ಹೊಳೆಹೊಳೆವ ಕಾಲಜ್ಞಾನಿಯಾದರೂ, ಬಂಢಾರಿ ಬಸವಣ್ಣನಂಥ ಸರಿ ದೊರೆಯುಂಟೆ? ಅವನ 'ರಕ್ಷೆಯೆ ರಕ್ಷೆ ಲೋಕದೊಳ್' ಅವನ 'ಭಾವದ ಕಾಣ್ಕೆ, ಪುಣ್ಯದ ಲೀಲೆ' ಇನ್ನೆಲ್ಲಿ ಉಂಟು? ಅಂತೆಯೆ ಬಸವನ ಮಾತೆ ಮಾತಾಯ್ತು.

ಇಂಥ 'ನಿಚ್ಚಟದ ಸಮಸುಖದ ಸರ್ವ ಪ್ರಸಾದಿ' ನಾಡನ್ನು ಬೆಳಗಿದ ಕಾಲಕ್ಕೆ ಎಣೆಯುಂಟೆ? ಅಂದಿನ ಸಮದರ್ಶನಕ್ಕೆ ಸರಿಯುಂಟೆ?

> " ಸಾಕು ಮಾಡೈ ತಂದೆ, ಲೋಕದಾಟವನಿನ್ನು
> ತೆರವುಕೊಡು ತಂದೆ: ಬಂದಿಹೆನು ...... ನೊಂದೆ ತೆರವುಗೊಡು "

ಎಂದು ಭಕ್ತಿಯ ಕೆಚ್ಚಿನಿಂದ, ಆಳದಿಂದ ಕರೆಕರೆವ ನುಡಿಗೆ ನಾವಿಂದು ನಮ್ಮ ಹೀನ ಹೃದಯಗಳಲ್ಲಿಯೇ ತೆರವು ಉಂಟೆ? – ಎಂದು ಕೇಳಿಕೊಳ್ಳಬೇಕಾಗುವುದು. ಇಂಥ ಬಸವನ ಚರಿತೆಯನ್ನು ಕನ್ನಡಿಗರಿಗೆ ಕೊಟ್ಟು ತಾನೂ ಕೃತಾರ್ಥಿಯಾಗಿದ್ದಾನೆ ಹಂಪೆಯ ಹರೀಶ್ವರನು. ಬುದ್ಧನ



CC-0. Jangamwadi Math Collection, Varanasi. An eGangotri Initiative

ಮಾರ್ಗದಲ್ಲಿ ನಡೆದ ಬಸವಣ್ಣನು ಪುರುಷೋತ್ತಮನು. ಗೌತಮನಂತೆ ಲೋಕೋತ್ತರನಾದ ಘನವಂತನೂ ಕ್ರಿಸ್ತನಂತೆ ಈತನನ್ನೂ "Immeasurably Great" ಎಂದು ಕರೆಯಬಹುದೇ?

೬

ಹರೀಶ್ವರನ ಎರಡನೆಯ ಮಹಾನುಭವನೆಂದರೆ— ಅಲ್ಲಮ ಪ್ರಭುವೇ: ಅಲ್ಲಮನ ಚರಿತೆಯು ಈ ರಗಳೆಯಲ್ಲಿ ಆ ಮಹಾ ಗುರುವಿನ ಮೂರ್ತಿತ್ವಕ್ಕೆ ತಕ್ಕಂತೆ ಯಾಕೊ ಸಿದ್ಧಿಸಿಲ್ಲವೆಂದು ನಾವು ವ್ಯಥೆ ಪಡಬೇಕಾಗುವುದು. ಮುಂದೆ ಚಾಮರಸನು 'ತನ್ನ ಪ್ರಭುಲಿಂಗ ಲೀಲೆ'ಯಲ್ಲಿ ಸರಿಯಾಗಿ ತನ್ನ ಭಕ್ತಿಯ ಕಾಣಿಕೆಯನ್ನು ಅರ್ಪಿಸಿದ್ದಾನೆ ಎಂಬುವದು ಸರಿಯೆ.

ಅಲ್ಲಮನು ಮಹಾ ಜ್ಞಾನಿ: ಆತನ ಜ್ಞಾನಾಗ್ನಿ ನಾನಾ ಕಿಡಿಗಳ ರೂಪವಾಗಿ ಶರಣ ಪ್ರಪಂಚವನ್ನೆಲ್ಲಾ ವ್ಯಾಪಿಸಿಬಿಟ್ಟಿತು. ಬಸವಣ್ಣನಂಥ ಭಕ್ತನೂ, ಮಹಾದೇವಿಯಂಥ ವಿರಕ್ತೆಯೂ ಅನುಯಾಯಿಗಳಾಗಿ ಮುಂದೆ ಬಂದರು. ಈತನಲ್ಲಿ ಹುದುಗಿದ್ದ ದಿವ್ಯಾಗ್ನಿಯ ಕೆಂಗಿಡಿಗಳು ಹಲವು ತೆರದಿಂದ ಹಲವು ಸಿರಿಗಳನ್ನು ಬೆಳಗಿದವು. ಭಕ್ತರಲ್ಲಿನ ಭವವೃಕ್ಷದ ಮೊಳಿಕೆಯನ್ನು ಒಂದು ಕಡೆ ತಿಂದುಹಾಕಿದ ಉರಿದಗ್ನಿಯಾಯಿತು. ಮಾಯೆಯ ಬೇರುಗಳನ್ನು ಕಿತ್ತಾಡಿ ಕನುರಿಸಿದ ಕಾಲಾಗ್ನಿಯಾಯಿತು ಇನ್ನೊಂದು ಕಡೆ, ಮೂರನೆಯದಾಗಿ— ಅಲ್ಲಮನು ನೊಸಲ ಕಣ್ಣುಳ್ಳವನಾಗಿ ಮೆರೆದನು: 'ಜ್ಯೋತಿಯಿಂ ಜ್ಯೋತಿಯಂ ಪೊತ್ತಿಸಿದ ತೆರನಾಗೆ' ನೆಟ್ಟನೆ ಆ ಪರಂಜ್ಯೋತಿಯ ಕಡೆಗೇ ತನ್ನ ಲಕ್ಷ್ಯವಿಟ್ಟು, ಶಿವಾನುಭವಮಂಟಪ ರಚಿಸಿ— 'ಶೂನ್ಯ ಸಿಂಹಾಸನ'ದ ಗದ್ದುಗೆಯನ್ನೇರಲು ಅಣಿಯಾಗುವನು.

"ಎಂಟೆಸಳ ಕಮುದಾ ನವಬ್ರಹ್ಮಪುರದೊಳಗೆ।
ಎಂಟು ಬೀದಿಯೊಳೆಂಟು ಕರಿಗಳುಂಟು
ಎಂಟು ಕರಿಗಳ ಸುಟ್ಟು ಕಂಟಕಂಗಳ ಗೆಲಿದು
ದಾಂಟಿದೆನು ಸಂಸಾರ ಸಾಗರವನು"

ಎಂದು ಅಲ್ಲಮನೇ ತನ್ನ 'ಮಂತ್ರಗೋಪ್ಯ'ದಲ್ಲಿ ಹಾಡಿಕೊಂಡಂತೆ, ಆತನಿಗೆ ಶೂನ್ಯ ಸಂಪಾದನೆಯು ಕಷ್ಟಸಾಧ್ಯವಾಗಿರದು. ಹೀಗೆ 'ನಭದ ನದಿಗೆ ಧೀಂಕಿಡುವ ವಡಬಾನಲನ'ಂತೆ ಒಪ್ಪುವ ಅಲ್ಲಮನು ಶೂನ್ಯ ಪೀಠವನ್ನು ಹರಿತಾದ ಕತ್ತಿಯ ಅಲುಗುಗಳಿಂದ ರಚಿಸಿದನೆಂಬ ಪುರಾಣದ ಸಂಗತಿ ನಮಗೆ ಹೃದಯದ್ರಾವಕವಾದರೂ, ಸಹಜ ಘಟನೆಯಾಗಿರಬೇಕು. ಈ ತೇಜೋ ಶಕ್ತಿಯ ಕೃತಿಗೆ ಪವಾಡವೆಂದು ಹೆಸರಿಡದಿದ್ದರೂ ನಡೆದೀತು! ಈ ಗುರುಪ್ರವಾದಿಗೈ, ಲೋಕಾನುರಾಗವನ್ನೂ ತಮಂಧತೆಯನ್ನೂ ಏಕಕಾಲಕ್ಕೆ ಜೀರ್ಣಿಸಿಕೊಂಡ ಈ ವಿರಕ್ತಿ ಮುಕ್ತನಿಗೆ— ಯಾವುದು ಅಸಾಧ್ಯವಾದೀತು?

ಮಧ್ಯೆ ಬರುವ ಕಾಮಲತೆಯ ವಿಷಯದಲ್ಲಿ ಕೂಡ ಪ್ರಭುವಿನಲ್ಲಿ 'ಸೋಲದ ಸೊಗಸು ಮನವನೋಲಾಡಿಸುತ್ತಮಿರೆ' ನಾವು ಭಯಪಟ್ಟು ವೈರಾಗ್ಯ ಬೋಧೆಗೆ ಹೊರಡಬೇಕಾಗಿಲ್ಲ.

"ಕಾಮಲತೆಗೊಲ್ದಿರ್ದನೆಂಬುದು ಪುಸಿ ನೋಡ.......
ನೋಡಿದೆತ್ತಣ ಕಾಮಲತೆ ಯೆತ್ತಣಲ್ಲಮಂ"

ಎಂದು ನುಡಿದಿದ್ದಾನೆ. ಅಂತು ಕದಳೀ ವನದಲ್ಲಿ ನಡೆದಾಡುವ ಅಲ್ಲಮ ನಿಜವಾಗಿಯೂ ಜಗಕ್ಕೆಲ್ಲಯ್ಯನಾಗಿ ಒಪ್ಪುತ್ತಿದ್ದಾನೆ.



CC-0. Jangamwadi Math Collection, Varanasi. An eGangotri Initiative

ಇನ್ನು ಮೂರನೆಯ ಮಹಾಕೃತಿಯೆಂದರೆ— ಅಕ್ಕಮಹಾದೇವಿಯ ಕುರಿತು ರಗಳೆ. ಬಸವರಾಜದೇವರ ರಗಳೆಯನ್ನು ಬಿಟ್ಟರೆ ಎಲ್ಲ ರೀತಿಯಿಂದ ಇದೇ ದೊಡ್ಡದು— ಕಾವ್ಯದ ಪಿಂಡು ಪದರುಗಳೊಡನೆ ಒಂದೂ ಹೊಸ ಚೇತನವೂ ಮೆರಗೂ ತಿರುಳೂ ಅವಳ ಇನಿದಾದ ಜೀವನವನ್ನು ತೂಗಿ ತೊನೆದಾಡಿದಂತೆ— ಈ ಕಾವ್ಯ ಕೃತಿಯನ್ನು ಮಿಡಿಯುತ್ತಿದೆ.

'ಬೆಳಗಿಂಗೆ ಕತ್ತಲೆಯ ಕೂಟವುಂಟೆ?' – ಎಂದೂ ಇಲ್ಲ. ಹರಿಧರ್ಮವಂ ಸ್ಫೂರ್ತಿಗೊಂಡ ಸುಧೆಯವಳು; ನಿತ್ಯನೊಳು ನೆಲೆಗೊಂಡ ಮುಕ್ತ್ಯೈಶ್ವರ್ಯವಳು; ಭವಿಯಾಟಕ್ಕೆ ಹೇಸಿ, ದಿಗಿಲು ಭುಗಿಲೆಂದು ಕೋಪಿಸಿ, 'ಆನೇಕೆ ಭವಿಯೇಕೆ ಭಕ್ತರೀ ಮಾತೇಕೆ?' ಎಂದು ಕಣ್ಕೆರೆದು ಎದ್ದಳು. 'ನಿರ್ವೇದದಿಂ ಕೌಶಿಕನೊಳು ಪುದುವಿಲ್ಲದೆ ಪುದುವಾಳ್ದ'ರೂ ಆತನ ವಚನದ ಸೆರೆಯಿಂದ ಬಿಡುಗಡೆ ಪಡೆಯಲು ಅವಳ ಪಿರಿ ಜೀವವು ತವಕಿಸುತ್ತಿತ್ತು; ವಿರಕ್ತಿಯ ಗರಿಮೆಯ ಕಡೆಗೆ ಅವಳ ನೋಟ ಹಾರಿತ್ತು; ಕೌಶಿಕನಿಂದ ಮೂರು ತಪ್ಪುಗಳು ಜರುಗುವ ವರೆಗೆ ಕಾಯುವದೂ ಒಂದು ನಿಮಿತ್ತಮಾತ್ರಕ್ಕೆ— ಒಂದು ಕಾರಣಕ್ಕೆ. ಇವಳು ಕಾರಣ ಕನ್ಯೆಯಲ್ಲವೆ?— 'ಭವಿಸಂಗ ಒಳಸ್ಸಾರ್ದುದು ಭಕ್ತಿ ಬೆಳೆದುದು ನಿಷ್ಠೆ ಉಳಿದುದು ಬರ್ದುಂಕಿದೆ ಬರ್ದುಂಕಿದೆನೆನುತ್ತಾಶಾರಹಿತೆ ಕೇಶಾಂಬರೆಯಾಗಿ'— ಲೋಕದೆದುರು ನಿಂತಳು; ಅಚಲೆಯಾಗಿ ಅಳುಕದೆ ನಿಂತಳು.

'ಎಲೆಲೆ ಕೌಶಿಕ, ಹೋಗು ನೀನೇಕೆ ನಾನೇಕೆ?
ನೆಲನರಿಯೆ ನಿನ್ನೊಡನೆ ಪುದುವಾಳ್ವುದೆನಗೇಕೆ?
ಭ್ರಮೆಯೆತ್ತ ತಿಳಿವೆತ್ತ ಬಿಸಿಲೆತ್ತ ಶಶಿಯೆತ್ತ?

ಎಂದು 'ವಿರತಿಯ ರೂಹುವಿಡಿದ' ಮಹಾದೇವಿಯಕ್ಕನು ಉತ್ತರಿಸುವಳು. ಇಂಥವಳಿಗೆ ಕೌಶಿಕನ ಮಡದಿಯನ್ನೋಣವೆ? ಕೆಲಕಾಲ ಮಾತ್ರ ಸತಿಭಾವದಿಂದ ಇದ್ದಿರಬಹುದು ಎಂದು ನುಣಿಚಿ ದಾಟೋಣವೇ? ಸತಿಯೇ ಅಲ್ಲವೆಂದು ನಿರ್ಧರಿಸಿ ಈ ವಿರಕ್ತೆ ಶಾಂತೆಯನ್ನು ನಮಿಸೋಣವೇ?

'ಸತ್ತವರ ಪೊಸಗೆಯೊ – ಹೆತ್ತ ಸೌರಂಭವೊ?' – ಎರಡೂ ಈಡೇರಲಿಲ್ಲ: ಸಾಯಲೂ ಇಲ್ಲ ಈಕೆ— ಇನ್ನು ಒಸಗೆಯೆಲ್ಲಿಯದು? ಹೆತ್ತುದಕ್ಕೆ ಹೆತ್ತವರಿಗೆ ಯಾವ ಸೌರಂಭವಾಯಿತು? ಮಡದಿಯಾಗಿ ಮಕ್ಕಳ ಪಡೆದು ಪುದುವಾಳಿ ಬಾಳಿದಳೇ? ಇಲ್ಲವೇ ಇಲ್ಲ. ಮರಳಿ ಭಕ್ತಿಯೆಂಬ ಕಠಾರಿಯ ಕೂರಲುಗಗಳ ಮೇಲೆ 'ಡೊಂಬರ ಚನ್ನೆ'ಯಂತೆ ಕುಣಿಕುಣಿದಾಡಿದಳು. ಇವಳಿಗೆ ಮೀರಾಬಾಯಿಯ ಭಕ್ತಿತಾಂಡವ ಸಮವೇ?

'ಬಾರ ಗುರುವೆ ಬಾರ ಪರವೆ ಬಾರ ವರವೆ ಮಲ್ಲಿನಾಥ!
ಬಾರ ಫಳವೆ ಫಳದ ರಸವೆ ರಸದ ಸವಿಯ ಸುಖವೆ ಬಾರ!!
ಮಾರ ಮಥನ ಪುಣ್ಯಕಥನ ಸಹಜ ಮಿಥುನ ರೂಪ ಬಾರ!
ಬಾರ ಸಿದ್ಧ ಭವವಿರುದ್ಧ ಸುಪ್ರಸಿದ್ಧ ಮಲ್ಲಿನಾಥ!'

ಎಂದು 'ಭಕ್ತಿರಸದ ಸದಿಯ ನಡುವೆ ಗೀತವುಣ್ಮೆ ಪೊಣ್ಮೆ ಪಾಡುವ, ಭಕ್ತಿಯೊಳು ವಿರಕ್ತಿ ನೆಲಸಿ ಮುಕ್ತಿ ಮುಂದುದೋರೆ ಪಾಡುವ' ಅಕ್ಕಗಳನ್ನು ಯಾವ ರೀತಿಯಲ್ಲಿ ಆರಾಧಿಸಿದರೆ ಪುಣ್ಯದ ಬೆಳಸು ದೊರಕೀತು?

ಅಕ್ಕನು ಭಕ್ತಿಭಾವದ ನಳನಳಿಸುವ ತೆನೆ: ಶರಣರ ಗೋಷ್ಠಿಯಲ್ಲಿ ಕಂಪಿಸುವ ಸೊಗಯಿಸುವ ಚೆಲುವಾದ ಕೇದಗೆ ಗೊನೆ: ಶರಣೆಯರಿಗೆ ಪಚ್ಚಪಸಿಯಪ್ಪ ಹುಲುಸಾದ ಬೆಳೆ— ಅಕ್ಕನ



CC-0. Jangamwadi Math Collection, Varanasi. An eGangotri Initiative

ನಲ್‌ಬಾಳು ಇಂಥ ಬೆಳೆಯ ತೆನೆಯ ತವರ್ಮನೆ. ಅದರ ಗಂಧವನ್ನು ಮೂಸಬೇಕು-ಸವಿಯಬೇಕು. ಸವಿಯು ಸಾಲಿಟ್ಟಾಗ, ಕುಡಿವಿಟ್ಟಾಗ ನೇಲುಗಂಪನ್ನು ಹೀರಿಕೊಳ್ಳಬೇಕು — ತೂರಿಕೊಳ್ಳಬಾರದು; ಹೊರಸೂಸಬಾರದು.

೭

ವಸ್ತುವಿನ ಚಮತ್ಕೃತಿ, ವಾಗ್ಧೋರಣೆ, ಕಲಾಶುದ್ಧಿ ಮೊದಲಾದ ಎಲ್ಲ ಕಾವ್ಯ ಗುಣಗಳಿಂದ ಒಪ್ಪಿ, ಸಾಹಿತ್ಯ ಕ್ಷೇತ್ರದಲ್ಲಿಯೂ ಶರಣರ ಕೈಪಿಡಿಯಲ್ಲಿಯೂ ಉತ್ತಮ ಸ್ಥಳ ಪಡೆಯಬಲ್ಲ ಚಿಕ್ಕ ರಗಳೆಗಳೆಂದರೆ— ಇವು: ತಿರುನೀಲಕಂಠರ ರಗಳೆ; ಕಾರಿಕಾಲಮ್ಮೆ, ತಿರುನಾಳ್ನೊವರ ಮಹಾತ್ಮ್ಯ; ಕುಂಬಾರ ಗುಂಡಯ್ಯ; ಅರಿವಾಳ್ತಾಂಡರ ಮತ್ತು ತಿರುಕುರುಂತಿ ತೊಂಡರ ಮಾಹಾತ್ಮ್ಯಗಳೂ ಮೊದಲಿನ ಸಾಲಿಗೇ ಸೇರಲು ಅಡ್ಡಿ ಇಲ್ಲ.

ಅಚ್ಚಾದ ಮಿಕ್ಕ ಸಣ್ಣ ರಗಳೆಗಳು ಒಂದೊಂದು ಪ್ರಚಾರದ ಹೇತುವನ್ನು ಮುಂದಿಟ್ಟುಕೊಂಡೋ ಬರಿ ಅನ್ಯ ಮತಗಳ ಶ್ರೇಷ್ಠತೆಯನ್ನು ಖಂಡಿಸುವದಕ್ಕಾಗಿಯೋ ರಚಿತವಾಗಿವೆ. ಮೇಲೆ ನಿರೂಪಿಸಿದ ಭಾವವು ಮಾತ್ರ ಹಾಗಲ್ಲ: ಶಿವಭಕ್ತನಿಗೆ ಅಪಕೀರ್ತಿಯನ್ನು ಇವು ಎಂದೂ ತರಲಾವು. 'ಪೆರಿಯ ಪುರಾಣ'ದ ಕವಿ ಶ್ರೇಷ್ಠನ ಉತ್ತಮೋತ್ತರದ ಸಂಸ್ಕೃತಿಯ ಪ್ರಭಾವ ಕಾವ್ಯದ ಉದ್ದಕ್ಕೂ ಕಣ್ತುಂಬಿ ಬರುವದೆಂದೂ, ಅದೇ ಮಟ್ಟಿನ ಸಂಸ್ಕೃತಿಯ ಸುಸ್ವರೂಪ ಹರೀಶ್ವರನಲ್ಲಿ ಇಲ್ಲವೆ ಇಲ್ಲವೆಂದೂ ಶ್ರೀನಿವಾಸಮೂರ್ತಿಗಳು ಅಭಿಪ್ರಾಯಪಡುತ್ತಾರೆ. ಕವಿಯ ಬಸವ, ಅಕ್ಕಗಳ ರಗಳೆಯ ವಿಷಯಕ್ಕಾಗಲಿ, ಮೇಲೆ ನಿವೇದಿಸಿದ ಸಣ್ಣ ರಗಳೆಗಳ ಬಗ್ಗೆಯಾಗಲಿ ಈ ಅಭಿಮತವು ಎಂದೂ ಸರಿಹೋಗಲಾರದು. ಒಬ್ಬನೇ ಕವಿ ಕೆಲವು ಕೃತಿಗಳನ್ನು ಸುಸಂಸ್ಕೃತನಾಗಿ ಬರೆದನೆಂದೂ, ಕೆಲವನ್ನು ಬರೆಯುವಾಗ ಸಂಸ್ಕೃತಿವಿಹೀನನೆಂದೂ ಹೇಳಲಿಕ್ಕಾಗದು. ಆಗಿನ ಮತಪ್ರಚಾರದ ಕೋಲಾಹಲದಲ್ಲಿ ಹರೀಶ್ವರನಂಥ ಸಂಸ್ಕೃತಿ ಸಂಪನ್ನ ಉದ್ದಾಮ ಕವಿಯೂ ಆಗಾಗ ತಪ್ಪು ಹೆಜ್ಜೆಗಳನ್ನಿಕ್ಕಿ, ತನ್ನ ಅಮರ ಕಳೆಯ ಕೃತಿಗಳಿಗೆ ಸ್ವಲ್ಪ ಕುಂದನ್ನು ಉಂಟು ಮಾಡಿದನು. ಇದನ್ನು ಯಾವುದೇ ಲೇಖಕನು ಒಪ್ಪಬೇಕಾದ ಮಾತು.

"The watchman said, the morning cometh, and also the night: if you will enquire, enquire ye: return, come."

—*Isaiah*.

ಎಂಟನೆಯ ಶತಮಾನದ ಹಿಬ್ರೂ ಪ್ರವಾದಿಯೋರ್ವನು ಕಾವಲುಗಾರನನ್ನು 'ರಾತ್ರಿಯ ಸಲುವಾಗಿ ಹೇಗಯ್ಯ' ಎಂದು ಕೇಳಲಾಗಿ, ಮೇಲಿನ ವಿಲಕ್ಷಣ ಉತ್ತರವು ಅವನಿಂದ ಬರುತ್ತದೆ. ಸಾರಾಂಶವೇನಂದರೆ— ಹಗಲಿನೊಡನೆ ಇರುಳೂ ಬಪ್ಪುದು, ಬಪ್ಪುದಯ್ಯಾ! ನೀವ್ ಕೇಳಿದೊಡೆ ಕೇಳಿದೊಡೆ: ಮರಳಿ ಬನ್ನಿ — ಬನ್ನಿರಯ್ಯ! ಕತ್ತಲೆಯನ್ನೋಡಿಸುವ ಬೆಳಕು ಶತಶತಕದಲ್ಲಿ ಸಿದ್ಧರಲ್ಲಿ, ಪ್ರವಾದಿಗಳಲ್ಲಿ ಅವತರಿಸಿ ಬರುತ್ತಿದ್ದರೂ, ಲೋಗರಲ್ಲಿಯ ತಮವೆಂಬ ಇರುಳು ಕ್ಷಣಮಾತ್ರಕ್ಕೆ ಹಾರಿಹೋದೀತೆ? ಜೊತೆಜೊತೆಗೆ ಇರತಕ್ಕದೆ: 'ಶರಣರ ಚಿತ್ತದ ಬಿತ್ತಿನ ತಿರುಳೂ, ಮಹತ್ತ್ವದ ನಿತ್ಯದ ಪುರುಳೂ'— ಮುಕ್ತಿಯ ಫಲಗಳನ್ನು ತಂದೊಡ್ಡಿ, ಈ ಕಾಳ್ಗತ್ತಲೆಯನ್ನು ಕಳೆಯಬೇಕಾಗಿದೆ; ನೀಗಬೇಕಾಗಿದೆ.

೧. ಪೊನ್ನಾಂಬಲವೆಂಬ ಊರಿನಲ್ಲಿನ ಒಬ್ಬ ಶಿವಭಕ್ತ. ಅವನಾಕೆ ಮುತ್ತೈದೆಯೆಂಬ ಮುದ್ದಾದ ಹೆಸರಿನವಳು. ದಿನದಿನವೂ ಶಿವಪೂಜೆಯಲ್ಲಿ ನಿರತರು. ಒಂದು ರಾತ್ರಿ ಬೀದಿಯಲ್ಲಿ



CC-0. Jangamwadi Math Collection, Varanasi. An eGangotri Initiative

ತಿರುನೀಲಕಂಠರು ಹೋಗುತ್ತಿರಲು, ಮೇಲುಪ್ಪರಿಗೆಯ ಸುವಾಸಿನಿಯೊಬ್ಬಳು ತಟ್ಟೆ ತೊಳೆದು ಚೆಲ್ಲಿದ ನೀರು ಮೇಲೆ ಬೀಳುತ್ತದೆ. ಭಕ್ತನನ್ನು ಅವಮಾನಿಸಿದೆನಲ್ಲಾ ಎಂದಾಕೆ ಅವನನ್ನು ಮನೆಯೊಳಗೆ ಕರೆದು, ಗಂಧದ ನೀರಿನ ಸ್ನಾನಮಾಡಿಸಿ, ಹೊಸ ಬಟ್ಟೆ ತೊಡಿಸಿ, ಹೂವೀಳೆ ಕೊಟ್ಟು, ಕ್ಷಮಾಪಣೆ ಕೇಳುವಳು. ಇತ್ತ ತಿರುನೀಲಕಂಠರು ಮನೆ ಸೇರುತ್ತಲೆ, ಮುತ್ತೈದೆಗೆ ಹೊಸ ಸುಗಂಧ ಸೋಂಕುವುದು. ಆಕೆ ಮನಸ್ಸಿನಿಂದ ಗಂಡನ ದಿನದ ಸೇವೆಗೈದು ರಾತ್ರಿ 'ಕೆಲದೊಳುಪ್ಪುವ' ಸತಿ ಮುಳಿಸಿನಿಂದ ಬೆನ್ನು ತಿರುಗಿಸಿ ಮಲಗುವಳು. ಗಂಡನು ಮುಟ್ಟೆ ಮಾತನಾಡಿಸಲು, "ಮುಟ್ಟಿದೊಡೆ ಶಿವನಾಣೆ" ಎಂದು ಕಿಡಿಕಿಡಿಯಾಗಿ ಶಪಿಸುವಳು. ಹೀಗೆ 'ಇಂದುಮುಖಿಯ ಇಟ್ಟಾಣೆ ಶೀವಿತ್ತು.' ಈ ಆಣೆಗೆ ಮೊದಲು ಹದಿನಾರರ ಹರೆಯದಲ್ಲಿದ್ದವರು ಮುಪ್ಪಾಗುತ್ತ ಬಂದರು. 'ಆಣೆ ಪಕ್ವಕ್ಕೆ ಬಂದಂತೆ' ಬಾಳೂ ತೊಂಬತ್ತರ ಮನೆ ಸೇರುತ್ತ ಬಂತು.

ಹೀಗಿರಲು ಶಿವನು ಭಿಕ್ಷುಕ ವೇಷ ತಾಳಿ, ಮನ ಪರೀಕ್ಷಿಸಲು ಬರುವನು. ಇವನ ಬಳಿ ಒಂದು ಪಾತ್ರೆಯಿಟ್ಟು ಮರುದಿವಸ ಅದನ್ನು ಬೇಡಲು ಬಂದಾಗ, ಅದಿಲ್ಲದಾಗಿ, ಗಲಾಟೆಗಾರಂಭವಾಗುವುದು. ಏನು ನುಂಗಿತೋ ದೇವರೇ ಬಲ್ಲ! ಈ ಜಗಳ ಚಾವಡಿಗೆ ಮುಟ್ಟಿತು. ಭಿಕ್ಷುಕರೂಪಿ ಮಾಟಗಾರನು ಪೀಡಿಸಿ ಪೀಡಿಸಿ ಒಂದಾಟ ಹೂಡುವನು — ಗಂಡ ಹೆಂಡಿರಿಬ್ಬರು ಕೈಕೈ ಹಿಡಿದು ನೆರೆದವರ ಮುಂದಿನ ಕೊಂಡದಲ್ಲಿ ಮುಳುಗಿದರೆ ಸಾಕು ಎನ್ನುವನು. 'ಪಿಡಿಯೆನೆನ್ನಾ ಸತಿಯಃಕಯ್ಯನೇನಾದೊಡಂ| ಪಿಡಿಯೆನೀ ಧರೆ ಮೇಲೆ ಕೆಡದಡಂ ಸತ್ತಡಂ' ಎಂದು ಸಭೆಯ ಪಂಚರಿಗೆ ತಿಳಿಸುವನು. ಮತ್ತು ಧರ್ಮಸಂಕಟ ತಪ್ಪಲಿಲ್ಲ. ಅವರಿಬ್ಬರು ಆನಂದದಿಂದ ಕುಣಿದು ಕೊಂಡದಲ್ಲಿ ಧುಮುಕಿದರು. ಇತ್ತ ಏನಾಶ್ಚರ್ಯ! ಮತ್ತೆ ಆ ಮುಪ್ಪಿನ ಮುದುಕರು ಹೊಸ ಹರೆಯದವರಾಗಿ ಮೇಲೆ ಬಂದರು. 'ಜಗಳದ ಗುರುಗಳು' ನಿಜರೂಪ ತಾಳಿದರು. ತಿರುನೀಲಕಂಠರು ಮಮ್ಮಲ ಮರುಗಿದರು. ಇಲ್ಲಿ ಕಾವ್ಯವು ರಮ್ಯ ನಾಟ್ಯಲೀಲೆಯಿಂದ ಮೊರೆಯುತ್ತಿದೆ; ಭಕ್ತಿಯ ದೀಪ ಸೊಗಸಾಗಿ ಬೆಳಗುತ್ತಿದೆ.

೨. 'ಕೈಲಾಸವೇ ತವರ್ಮನೆ'ಯೆಂದು ಭಾವಿಸಿದ, ಕರಿಕಾಲೆಂಬ ಶಿವಪುರದ ಕಾರಿಕಾಲೆಮ್ಮೆಯರು. ಆಕೆಯ ಗಂಡನು ಭವಿ; ಅತ್ತೆ ಮಾವಂದಿರೂ ಭವಿಗಳು. 'ಕಾಕ ಸಂಘಾತದೊಳ್ ಸಿಕ್ಕಿರ್ದ ಕೋಕಿಲೆಯ ಮರಿ'ಯಂತೆ ಇವಳು ಜೀವಿಸುತ್ತಿರಲು, 'ಮನದೊಳಕ್ಕಾಡಿ ನಾಲಿಗೆಗೆ ಬರುತಿರೆ ಭಕ್ತಿ' ಗುಪ್ತವಾಗಿ ಬಲಿಯಿತು. ಈ ಮಾಸಲಾದ ಭಕ್ತಿಯ ತೆರೆಗಳಿಂದ ನೆರೆ ಕಂದುತ್ತಿರಲು, 'ಭಕ್ತಿ ಹುರಿಹಂಚಾಯ್ತು ಇನ್ನೆಂತು ಜೀವಿಪೆಂ' ಎಂದು ತಳಮಳಗೊಳ್ಳುವಳು ಕಾರಿಕಾಲಮ್ಮೆ.

ಸಾಧು ಭಕ್ತನೊಬ್ಬನು ಇವಳ ಪತಿ ಮಾಣಿಕ ಶೆಟ್ಟಿಗೆ ಹಣ್ಣು ಪ್ರಸಾದ ಕೊಟ್ಟದ್ದೂ, ಈ ಶಿವಭಕ್ತೆ ಅದನ್ನೆ ಆತನಿಗೆಡೆ ಮಾಡಿದ್ದೂ, ಇನ್ನೊಂದು ಕೇಳಲಾಗಿ, 'ದೇವನಿರಿಸಿದನಮೃತ ಫಲ'ವಿದೆಂದು ಕೊಟ್ಟಾಗ, ಗಂಡನು ಕೇಳಿ ನಡುಗುವನು. ತನ್ನ ಸತಿ ಇವಳಲ್ಲವೆಂದು ತಿಳಿಯುವನು. ಮುಂದೆ ಈ ಶರಣೆ 'ಸ್ಥೂಲತನುವಂ ಬಿಟ್ಟು ಸೂಕ್ಷ್ಮತನುವಿಂ ನಿಲಲು' ದೃಢನಿಶ್ಚಯ ಮಾಡುವಳು.

'ಕಣ್ಣೆರಡು ಚೆಲ್ವಿಂಗೆ ಕಣ್ಮಾಡಿದಂತೆ' ಇದ್ದ ಈ ಚಲುವೆ 'ಕೆಯ್ಯೆಕಾಲಾಗಿ ತಲೆ



CC-0. Jangamwadi Math Collection, Varanasi. An eGangotri Initiative

ಯೂರಿ ನಡೆದು' ಕೈಲಾಸ ಮುಟ್ಟಲು ನೇಮ ಕೈಕೊಳ್ಳುವಳು. ಇಚ್ಚೆಗೊಳ್ಳದಿರೆ ಎನ್ನ ರೂಪೆಲ್ಲ ಹ್ಯೇಯ 'ವೆಂದು ಬೆರಗಾಗಿ ನೋಡುವ ಜನಕ್ಕೆ ಎಚ್ಚರಿಕೆ ಕೊಡುವಳು.

"ಮಾಯೆಯಂ ಬಿದಿರ್ವಂತೆ ಮೋಹಮಂ ಬಿದಿರ್ವಂತೆ
ಛಾಯೆಯಂ ಬಿದಿರ್ವಂತೆ ಚಂದಮಂ ಬಿದಿರ್ವಂತೆ
ಅವಯವಂಗಳನಲ್ಲಿ ಚಲ್ಲಿದಳು ಛಲದೀದ"

—ಕಾರಿಕಾಲಮ್ಮೆ

"ಕಣ್ಣುಳಿಯೆ ಮೆಯ್ಯೆಲ್ಲವೆಲುವಾಗಿ ನಿಲಲಲ್ಲಿ
ತಲೆಯುಳಿಯೆ ಮೆಯ್ಯೆಲ್ಲವೆಲುವಾಗಿ ನಿಲಲಿಂತೆ
....ನಡೆತಂದಳಪ್ರತಿಮ ವೈರಾಗ್ಯ ಸಂಯುಕ್ತೆ........
—ಕಾಂಚಿಗೆ ಬಡಗಲಿರ್ಪ ತಿರುವಾನ ಕಾಡೊಳಗೆ;"

ತನ್ನ ಕೈಕಾಲಾಗಿ, ತನ್ನ ತಲೆ ಅಡಿಯಾಗಿ ನಡೆದು, 'ಎಲೆ ಶರಣರಡಿಗಳಿರ ಶಿವನಲ್ಲಿಗೊಯ್ಯಿರೇ' ಎಂದು ಬಿನ್ನೈಸೆ 'ತೋರಯ್ಯ ಮೆಯ್ಯೆಲ್ಲ ಕಣ್ಣಾಗಿ ನೋಳ್ಪೆನೆಗೆ' ಎಂದು ಹಲುಬಲು 'ಶಂಕರನಲ್ಲಿ ತೋರಿದಂ' 'ಎಲೆ ಹೆಜ್ಜೆಗಳಿರ ಕೈಲಾಸಕ್ಕೆ ಕಳಿಪಿರೇ' ಎಂದು ನಂಬಿ ತಲೆಯಿಟ್ಟು. ಅಡಿಯಿಡುತ್ತ, ನಂದೀಶ್ವರನ ಬಾಗಿಲಿಗೆ ನಡೆತಂದಳು. ಇದೇನು ಮರುಳೆಂದು ಪಾರ್ವತಿ ನೋಡಿ ನಡುಗುತಿರೆ, 'ಅಲ್ಲಲ್ಲ ಎಲೆ ಗೌರಿ ನಿಮ್ಮತ್ತೆ ನಮ್ಮಮ್ಮೆಯರು — ಕಾರಿಕಾಲಮ್ಮೆಯರು; ಮರುಳೆನಲ್ಕೆ ಆಗದಾ ದೇವಿ' ಎಂದು ಗಿರಿರಾಜನು ಹೇಳುವನು.

ಇದು ಕತೆಯ ತಿರುಳು. ಇದರಲ್ಲಿನ ಚಿತ್ತದ ವಿರಕ್ತಿ ಹೃದಯವನ್ನು ಕೊರೆಯುತ್ತಿದೆ. ಇಲ್ಲಿ ಶಿವನಿಷ್ಠೆಯೇ ತಲೆಯೂರಿದೆ; ಭಕ್ತಿಯ ಘನಕಾಂಡವು ಬರಿಯೆಲುವುಳ್ಳ ಮೈಯ್ಯಲ್ಲಿ ತಲೆಯೊಂದು, ಕಣ್ಣೊಂದು ಮೂರ್ತೀಭವಿಸಿದಂತೆ ಮಾಡಿದೆ. ವಿರಕ್ತಿ ಹಣ್ಣಾಗಿ ಬಾಯ್ಗೆ ಬರುವಂತಿದೆ.

೩. "ಕುಲದೊಳ್ಕಿರಿಯಂ ಮನದೊಳ್ಪಿರಿಯಂ
ನೆಲದೊಳ್ಕಿರಿಯಂ ಪರದೊಳ್ಪಿರಿಯಂ"

ಚೋಳ ದೇಶದಲ್ಲಿ ತಿರುನಾಳ್ವರೆಂಬ ಭಕ್ತನು 'ಬೆಳಗಾಗಲ್ಸಾಸಿರ ಕೆಲಸಂಬರೆ; ಇಂದಿನ ಕೆಲಸವನೀಗಳೆ ಮಾಳ್ಪೆಂ' ಎಂದು ದಿನಗೆಲಸದಲ್ಲಿ ದುಡಿದು, 'ಇರುಳಾಗಲ್ ಮನೆಗೆಯ್ತಂದಂ' 'ಇರುಳಲ್ಲ ಚಿಂತೆಯೊಳಿರುತಂ' 'ಕುಂದದೆ ನಾಳೆಲ್ಲವ ನಾಂ ಮಾಳ್ಪೆಂ' ಎಂದು ಹಲುಬುವನು. 'ಬೆಳಗಾಗಲ್ ಪಾರ್ವಂ ನಡೆತಂದು'............

'ಏಳೇಳ್ ತಿರುನಾಳ್ವೋವನೆ ಬಾರೆನೆ
ಏಳೇಳ್ ಕೆಲಸಂ ಬಂದುದು ಬಾರೆನೆ
ನಿನಗಾದುದು ಬಿಟ್ಟಿಯು ಮೀ ದಿನಕಂ'

ಎಂದು ಎಚ್ಚರಿಸುವನು. ಹನ್ನೆರಡು ವರುಷ ಹೀಗೆ ಸಾಗಿರಲು, ಪೊನ್ನಾಲಕಂ ಹರನಲ್ಲಿಗೆ ಇವನದೇ ಬಿಟ್ಟಿಯಾಯ್ತು. ಹಿರಿಹಿರಿ ಹಿಗ್ಗುವನು.

"ಧರಿಸಿದನೊಂದೆರಡು ಮೂಡೆಗಳಂ........ ಶಂಕರನ ಕ್ರೀಡೆಗಳಂ
ಸಾವಿರ ಮೂಡೆಗಳೆತ್ತಿದುವಾಗಳ್; ಬಿಟ್ಟಿಗಳೊಡ ನಲವಿಂ ನಡೆಗೊಂಡಂ"

ಜಂಗಮನಾದವು ನಭವನ್ನು ಮುಟ್ಟಲು — ಶಿವನಡಿಗಳ ಅಂದವನ್ನು ಕಾಣಲು ತಿರು



CC-0. Jangamwadi Math Collection, Varanasi. An eGangotri Initiative

ನಾಳನು ಹೀಗೆ ಬರುತ್ತಿರಲು, ಕುಣಿಕುಣಿದಾಡುತ್ತಿರಲು, ದೇಹವು ಹೊತ್ತ ಹೊರೆಯಿಂದ ಬಳುಕು ವದು. 'ಕೇರುಹಿನ ಹೊರೆಯವನು' ಬದುಕಿದನು ಎನ್ನುತ್ತ ಬಂದಂ:

'ನೋಡಬಲ್ಲನನವನಿಳಿವುವ ತೆರದಿಂ
ಮೂಡೆಯನಿಳಿವುತೆ ಶರ್ವನ ಬೆಸದಿಂ'

ಇತ್ತ ಗಿರಿಜೇಶನು ಕೊಂಡದೊಳಗೆ ಮುಳುಗಿಸಿ ಕರೆತನ್ನಿ ಎನ್ನಲು, ನಂದೀಶನು ಹಾಗೆ ಮಾಡಲು,

'ಕುಲವಳಿದುದು ಕುಲನಾಮುವದಿರ್ದುದು । ತೊಲಗಿತು ತನು ನಿಜ ಜೀವಮುದಿರ್ದುದು'
'ತಿರುನಾಳಾಗುತೆ ಪರನಾಳಾದಂ । ಪರನಾಳಾಗುತೆ ತಿರುನಾಳಾದಂ'

ಎಂದು ಶಿವನೇ ಮುದ್ದಾಡಿ ಹರಸುವನು. ಇದೊಂದು ಸ್ವೋಗಸಾದ ವಿಚಿತ್ರ.

೪. 'ಒಂದು ಪದಂ ಪಾತಳವನೊತ್ತಲ್ । ಒಂದು ಪದಂ ಬ್ರಹ್ಮಾಂಡವನೆತ್ತಲ್'— ನಿತ್ಯ ರಂಜಿಸುವ ಶಿವಮೂರ್ತಿಯು, ಕುಂಬಾರ ಗುಂಡಯ್ಯನನ್ನು ತನ್ನ ಕಾಯಕದಲ್ಲಿ ಪ್ರೇಕ್ಷಿಸು ತ್ತದೆ. ತನ್ನ ಶಿವಾರ್ಪಿತ ಕಸುಬಿನಲ್ಲಿ ಮಗ್ನನಾದರೂ ಶಿವಪೂಜೆಯನ್ನು ಬಿಡಲಿಲ್ಲ ಗುಂಡಯ್ಯ; ತನ್ನ ಕಾಯಕದಲ್ಲಿಯೇ ವಿಶ್ವರೂಪಿ ನಟರಾಜನ ಲೀಲಾ ಲಾವಣ್ಯವನ್ನು ಕಂಡು ಆನಂದಿಸಿ ಸಾರ್ಥಕನಾಗಬೇಕೆಂದು ಬಯಸಿದನು—ಆ ಬಯಕೆಯನ್ನು ಬಹು ರಮ್ಯವಾಗಿಯೂ ಅತ್ಯುಜ್ವಲ ವಾಗಿಯೂ, ಈಡೇರಿಸಿಕೊಂಡ: ತಾನು ಮಡಕೆ ತಟ್ಟುವ ತಾಳಕ್ಕೆ ಸರಿಯಾಗಿ ಶಿವನು ಕುಣಿ ದಾಡುವಂತೆ ಮಾಡಿದನು: ಇದು ಅವನ ಸಿದ್ಧಿ. ರೀತಿಯೊ ಹೀಗೆ: 'ಮೇಧೆಯೆ ಚಕ್ರದ ಮೊಳೆ' 'ಸೊಗಯಿಪ ನಾಭಿಯೆ ನಾಭಿ,' 'ಕನಸಿನ ಕಾಯಂ ಮೃತ್ತಿಕೆ' 'ನೆನಹಂ ಚಟಿದಾರಂಗಳ್' 'ನಿಷ್ಠೆಯೆ ತಿರುಹುವ ದಂಡ'—'ಮುಟ್ಟಿ ತಿರುಗುವುದು ಜೀವನದಾಗಿರೆ' ........'ಮನದೊಳ್ ಕಣ್ಣೊಳ್ ಪೂಜಾಭಾವಂ' ಹರಿದಾಡುತ್ತಿರೆ, ಶಿವನು ಒಲಿಯದಿರುವನೇ? ಮಡಿಗೆಯ ದನಿಗೆ ಶಿವಲಾಸ್ಯವನ್ನು ಬರಮಾಡಿಕೊಂಡ; 'ನೆನೆದಂದದಿ ಮಡಿಕೆಗಳಾಗುತ್ತಿರೆ' 'ಮನದಂದದಿ ಶಿವನೊಳ ಗಾಡುತ್ತಿರೆ' ನೃತ್ಯದ ನೆಲೆಯನ್ನೂ, ಚೆಲುವನ್ನೂ, ಮೇಲ್ಮೆಯನ್ನೂ ಕಂಡುಕೊಂಡ ಮಡಕೆಗಳಂ ಬಾರಿಸಿ, ತೂಗಾಡಿ, ಸುಖದೊಳ್ ಮುಳುಗಾಡಿದನು; ಲೋಲಾಡಿದನು. ಅತ್ತ ನಟರಾಜನು 'ಮಡಕೆಯ ಶಬ್ದಕ್ಕಾಡುತ್ತಿರ್ದಂ;' ಒಬ್ಬರಿಗೊಬ್ಬರನ್ನು ನೋಡಿ ಪುಳುಕವೇರಿ ನಾಟ್ಯಹೊಮ್ಮಿ ಕುಣಿಯುತ್ತಿರಲು — ಗಿರಿಜೆ ಗಾಬರಿಯಾಗುವಳು: 'ಈಶನ ಪರಿ ಮೀರ್ದಿದೊಡೆ ಕೆಡಲಾಗದೇ ನರಲೋಕವು' ಎನ್ನುತ್ತ ಬೇಡಿ ಸಮತೆಗೆ ತರುವಳು. ಅಂತು ಶೈಲಜೆಯಿಚ್ಛೆ ಪೂರೈಸಿತು. ಹೊಸ ಹೂಮಳೆ ಸೂಸಲು, ಗುಂಡಯ್ಯನನ್ನು ಕಣ್ಣು ಹನಿ ತುಂಬಿ ನೋಡಿ ಬಿಗಿದಪ್ಪಿ, ಗಗನ ತಳಕ್ಕೆ ನೆಗೆಯುವನು ಶಿವನು.

ಈ ರಗಳೆಯನ್ನು ಓದಿ ಕುಣಿದಾಡಿಯೇ ಆನಂದಿಸಬೇಕು.

೮

೧. ಕಾಂಚಿಪುರದ ತಿರುಕುರುಂಪೆ ತೊಂಡರೆಂಬ ಭಕ್ತನು ಕಾಯಕದಿಂದ ಅಗಸನು.

'ಭಾಷನೆಂಬ ಮುಳ್ಳಿನ ಮನದ ಸೀರೆಯಂ ತೆರಳ್ಚಿ ಕಟ್ಟಿ
ಘೋಷನೆಂಬ ಕತ್ತೆ ನಿಲಲು ಬೆನ್ನ ಮೇಲೆ ಮೂಟೆದೊಟ್ಟಿ
ನಡೆದು ಭವನ ಭಕ್ತಿರಸದ ಹೊಳೆಯ ತಡೆಯ ಬಳಿಗೆ ಬಂದು
ಮೃಡನೆ ಶರಣೆನುತ್ತ ದೇಹವೆಂಬ ಕಲ್ಲಬಳಿಗೆ ಬಂದು'



CC-0. Jangamwadi Math Collection, Varanasi. An eGangotri Initiative

ಒಗೆದನೊಗೆದನು; 'ಭಕ್ತಿರಸದೊಳೆಗೆದ'— 'ದೇಹ ಭಾವವಳಿದು ಸುಖದೊಳೆಗೆದ' ತಾಪತ್ರಯಗಳೆಂಬ ಕಿಚ್ಚಿನಿಂದ ಕುದ್ದ ವಸ್ತ್ರಗಳು; ಕಂಥೆ ಕರ್ರನಾದರೂ ಶಿವನ ಚಿತ್ತವಲ್ಲಿ ಬಿಳಿದಾಯ್ತು;

'ತೆಗೆಯಲಿಲ್ಲ ತಿರುಹಲಿಲ್ಲ ಮುರಿಹಲಿಲ್ಲ ಮುಳೆಗಳೊಳಗೆ,
ಬಗೆಯಲಿಲ್ಲ ಹಿಂಡಲಿಲ್ಲ ತೊಳೆಯಲಿಲ್ಲ ಮುಳೆಗಳೊಳಗೆ—'

"ಹಿಂದೆಯೊಗೆದ ಸೀರೆಯೊಟ್ಟಲಿಂದೆ ಘನವ ಕಂಡೆ ದೇವ" ಎಂದು ನಚ್ಚಿ, ಒಗೆಯುತ್ತ ಬರುವನು. 'ಕಂಥೆ ಕಾಳದಂತೆ ನೀಲದಂತೆ' ಕರ್ರನಾದರೂ 'ಬಿಳಿದು ಹಾರೆ ಕರಿದು ತೋರಿದರೂ' ಮಸಿಯ ಬಣ್ಣವೇರಿದರೂ, ಅವನೆದೆ ಜಗ್ಗದು; ಕುಗ್ಗದು. ಬಿಚ್ಚಿನೋಡಿ ಮತ್ತೆ ಒಗೆದು, ನಮಃ ಶಿವಾಯವೆಂದು ಚಿಂತಿಸುವನು. ಈ ಬಟ್ಟೆಯ ಮಹಾತ್ಮೆನೆಂಥವನೊ, ಎಂದು ನೊಂದರೂ ನಿಷ್ಠೆ ನೆತ್ತಿಗೇರಿ, ತನ್ನ ತನುವನ್ನೆ ಒಗೆದುಕೊಳ್ಳುವನು. ಇಷ್ಟಾದಮೇಲೆ ಶಿವನು ಕಣ್ಣೆತ್ತಿ ನೋಡಿ ಹರಸುವನು.

ಎಷ್ಟು ಒಗೆದರೂ ಸೀರೆಯ ರಾಶಿ ಸವೆಯದ್ದನ್ನು ನೆನೆದರೆ, ಎಷ್ಟು ಒದ್ದಾಡಿದರೂ ಬಟ್ಟೆ ಬೆಳ್ಳಗಾಗದೆ ಹೋದದ್ದು ವಿಚಾರಿಸಿದರೆ, ಎಂಥ ಭವಿಯ ಮನಸ್ಸಿನಲ್ಲಿಯೂ ಉಲ್ಲಾಸ ಉಳಿಯದು. ಈ ನಿಶ್ಚಲ ಅಗಸನು ಧನ್ಯನು — ವಂದ್ಯನು.

೨. ತಿಣ್ಣ ಮಂಗಳವೆಂಬೂರಲ್ಲಿ ಅರಿವಾಳ್ತಾಂಡರರೆಂಬ ಶರಣನು ಕೂಲಿಯ ಕಾಯಕದಿಂದ ಪಾಡುಗೈಯುತ್ತಿದ್ದನು. 'ಕೂಲಿಯಿಂದಾದ ಓಗರದ ನೆಲ್ಲಕ್ಕಿಯಂ| ಮೇಲೆನಿಸಿ ಬೆಳೆವ ಮಾವದು ಕೊಯ್ದುದೇರೆಯಂ| ತಂದು ನಲವಿಂದ ಶಿವನಾರೋಗಣೆಗೆ ಕೊಟ್ಟು' ಸಂತಸಪಡುತ್ತಿದ್ದನು. ಈ ಒಕ್ಕಲ ಮಗನ ಭಕ್ತಿಗೂ ಕಂಟಕವು ಬಂದಡರಿತು. ಒಮ್ಮೆಲೆ ಬಿರುಗಾಳಿಯೆದ್ದು, ಕಾಳನ್ನು ತೂರಿ ಬೀಸಿ ಚೆಲ್ಲಾಡಿತ್ತು; ಕಣ್ಮುಚ್ಚುವ ಧೂಳಿ ಧೂಸರ. ಈತ ಉಪವಾಸಿ ಬೇರೆ. ಆದರೂ ಡೆಂಡಣಿಸಿ ಬರುವಾಗ ಕಾತರನಾಗುವನು—ಎರೆಯ ಬೀಟಿಗೆಡಹಿ ಬೀಳುವನು. ಕೈಲಿದ್ದ ಅಕ್ಕಿಯನ್ನು ಚೆಲ್ಲಿಕೊಂಡು ಮರುಗುವನು — ಶಿವ ದ್ರೋಹಕ್ಕಾಗಿ:

'ಆಯ್ಯೊ ಶಿವನ ಬಾಯ ತುತ್ತ ಎಂತೊಕ್ಕೆ ನೀ
ಎಂದು ಮಿಂತಾಗದಿಂದೇಕಿಂತುಂಟಾದುದೋ'

ಎಂದು ಗೋಳಾಡುತ್ತಿರಲು ಮಹಾದೇವನು ಪ್ರಸನ್ನನಾಗಿ 'ಸಾಕಿನ್ನು ಬಿಡು' ಎನ್ನುತ್ತ ತಲೆದಡಹಿ ಕೈವಿಡಿದು ಕೊಂಡಾಡುವನು. ಇಷ್ಟಕ್ಕೆ ನಮ್ಮ ಭಕ್ತನ ಮನಸ್ಸು ತಣಿಯದು;

'ಆರಯ್ಯ ನಾಂ ತಂದ ಕೀರೆಯುಂ ಎಲೆ ದೇವ
ನೀವುಂಡೊಡಷ್ಟೆಯಾದೊಡೆ ಬಂದಪೇಂ ದೇವ'

ಎನ್ನುವನು. ಶಿವನನ್ನು ಉಣ್ಣಿಸಿದ ಬಳಿಕವೇ ಅವನ ಬೆನ್ನು ಹತ್ತಿ ಕೈಲಾಸಪುರಕೆ ಹೋಗಲು ಒಪ್ಪುವನು. ಇವನ 'ಓಗರದ ಕುಡುಗೋಲು' ಅಂದಿನಿಂದ ಅಲ್ಲಿ ಅಲಂಕರಿಸಲ್ಪಟ್ಟಿತು. ಇಂಥ ಒಕ್ಕಲುಮಗನ ನಿಷ್ಠೆಗೆ ಯಾವುದು ಸಮ? ಆದರೆ ಅವನ 'ಸಂಸರದ ಬೇರ್ಗೆ' ಕುಡುಗೋಲು ಬಿದ್ದಂತಾಯಿತಲ್ಲವೇ?

"—ನಡೆ ಮಗನೆ.......... ತಡೆಯದೇರ್ಕೆ.......!!"

೩. ಓಹಿಲಯ್ಯನು ಶರೀರಧಾರಿಯಾಗೆ ಕೈಲಾಸಕ್ಕೆ ಹೋದರೆ, ಹಲಾಯುಧನು 'ಒಂಭತ್ತು ಪುರವರ್ಗ ಸಹಿತ ಬಂದು, ಅಂಬರದ ಬಟ್ಟೆಯೊಳ್' ನಂಬಿ ಬಂದವನಾದನು.



CC-0. Jangamwadi Math Collection, Varanasi. An eGangotri Initiative

ಓಹಿಲನ ಸಂಗತಿಯು ಉದ್ಭಟ ರಾಜನೂ, ಅವನ 'ಭಾವದ ಬಳಿಕೆಯ ಬೆಳೆಸೆನಿರ್ಪ ವಲ್ಲಭೆಯೂ' ನೆತ್ತವಾಡುವಾಗ ವಿನೋದಕ್ಕಾಸ್ಪದವಾಗಿ ಚರ್ಚೆಗೆ ಬರುವುದು. ತನ್ನ ಕಾಂತೆಗೆ ರಾಜನು, ಇದಾವ ಹೆಚ್ಚಿನ ಕೆಲಸ — ನಾನು ಪುರಸಹಿತ ಹೋಗುವೆನು ಎಂದು ಪಣ ತೊಡುವನು. ಅದರಂತೆಯೆ — 'ಕೊಂಡೊಯ್ವಂ ಕೊಂಡೊಯ್ವಂ' ಈ ಭಕ್ತಾಗ್ರಣಿ. ಈ ವಸ್ತುವೇ ಸೋಮರಾಜನ ಉದ್ಭಟ ಕಾವ್ಯದಲ್ಲಿ ನಿರೂಪಿತವಾಗಿದೆ.

ಓಹಿಲನ ಭಕ್ತಿಕಥೆ ಇನ್ನೊಂದು ರಗಳೆಯಲ್ಲಿ ಬೇರೆ ರೀತಿಯಲ್ಲಿ ಚಿತ್ತಾಕರ್ಷಕವಾಗಿದೆ. ಗುಜ್ಜರ ದೇಶದ ಓಹಿಲನಿಗೆ ಸೋಮನಾಥ ಗುಡಿಯ ಕದವನ್ನು ತೆಗೆಯಲು ಅಲ್ಲಿಯ ಪೂಜಾರಿಗಳು ನಿರಾಕರಿಸುವರು. ಅದೇ ದಿನ ಶಿವನು ಕನಸಿನಲ್ಲಿ ಹೋಗಿ ಎಚ್ಚರಿಸಲು ಓಹಿಲನಿಗೆ ಪ್ರವೇಶವಾಯಿತು. — "ಓಹಿಲ ದೇವನೊಳಪೊಕ್ಕು ಜೀವಂ ಬಂದಂತೆ ಪರಿತಂದು ಸೋಮನಾಥನಂ ತೆಗೆದಪ್ಪಿ ಬಿಗಿದಪ್ಪಿಯಮರ್ದಪ್ಪಿ ಸೋಂಕಿನೊಳಪ್ಪಿ ಮೆಯ್ಯೊಳಪ್ಪಿ ಕಣ್ಣೊಳಪ್ಪಿ ಮನದೊಳಪ್ಪಿ ಚಿತ್ತದೊಳಪ್ಪಿ ತಣಿವಿಡಿದು, ಸುಖಂಬಡೆದು ಕಂಡುಕಂಡು, ಶಿವ ಮರುಳ್ಗೊಂಡು, ಆಲಿಂಗನಮಂ ಸಡಿಲ್ಚಿ, ಪುಳಕವೆಳ್ದು ಹೊಮ್ಮಿ ಹೊರಳ್ದು, ಜುಮ್ಮನೆ ಬೆಮರ್ತು ಕೊರ್ಬಿ, ಕೊನರ್ತು ಉಬ್ಬಿಯುರುಳ್ದಬ್ಬರಿಸುತಿರ್ಪಾ" ಓಹಿಲಯನು ದಿವ್ಯ ಪೂಜೆಯ ದಿವ್ಯ ಶರಣ. ಆದರೂ ಈತನಿಗೆ ವಿಚಿತ್ರ ವರವಾಯ್ತು: "ಹನ್ನೆರಡು ಬರಿಸಂ ಹಿಗ್ಗಿ ಪೊರೆಯೇರಿ ಗುಗ್ಗುಳಮಂ ತಂದೆಮಗಿಕ್ಕೆ ಸಗ್ಗವವರು ಬೆರಗಾಗೆ, ಶರೀರಂ ಬೆರಸು ಕೊಂಡಯ್ದಪೆವೆನೆ' ಹೊಂಗಿ ಹೊರೆಯೇರಿ ನೋಡಿ ನಲವೇರಿ ಹಿಗ್ಗಿ ಹರುಷಂದಳೆದೋಹಿಲಯ್ಯಂ" ಈ ಸಾಹಸ ನಿಧಿಗೆ ಬಂತು ಪರೀಕ್ಷಾ ಕಾಲವು. ದಿನದಿನವೂ ಧೂಪದಾರತಿ: "ಪಾತ್ರೆಯಂ ತಂದು ಮುಂದಿರಿಸಿ ಸಿಡಿಲ ಕಿಡಿಯಂತಿರ್ಪ ಕೆಂಡಗಳಂ ಕುಪ್ಪಳಿಸಿ, ಗುಗ್ಗಳಮಂ ಮೇಲೆ ತಂದು ಸುರಿಯೆ, ಗಳಗಳ ನರಳ್ದು ಚಿಮಿಚಿಮಿಸಿ ಕಾಯ್ವ ಧೂಪರ ಸವಿಯ ಹೊಗೆಯನುಗುಳೆ ಬೀಸುವಾಗಳುಂ ಅಮೃತರಸದ ತುಂತುರು ತೆರಳ್ದಂತೆ ಧೂಪವೆತ್ತಿ ಕಂಪುತೆರೆ ಮಸಗಿ ತೀಡುತ್ತೆ ಪರಿಮಳದ ಮುಂಜು ಕವಿವಂತೆ ಸವಿಯ ತುಷಾರವನೊತ್ತುವಂತೆ ಧೂಪದ ಸವಿಯು ಸರ್ವಾಂಗಮಂ ಪುಗೆ, ಲೇಸಿಂಗೆ ಲೇಸನರಸಿ ತಂದಿಕ್ಕುವ ಧೂಪದ ಸೊಗಸಿನ ಸೊಕ್ಕು ಸವಿಯ ಸಾಠಿಡೆ" — ಓಹಿಲನಿಗೆ ಧೂಪದೋಹಿಲನೆಂಬ ಹೆಸರು ಜಗದಗಲ ಹಬ್ಬಿತು. ಇದೇ ಪ್ರಕಾರ ಹನ್ನೆರಡು ವರುಷ ಈ ಭಕ್ತನು ಎಲ್ಲೆಲ್ಲಿಯ ಗುಗ್ಗಳವನ್ನು ತಂದರ್ಪಿಸುತ್ತ ಬಂದನು. 'ದುಮ್ಮಳಂ ಒರ್ಮೆ ಕವಿದು ದುಮ್ಮಾನಂ ಕಾಹೇರಿ ಆಪತ್ತೆಡೆಗೊಂಡು ಮೆಯ್ಗಂದಿ ಮನಂ ತಾರಿ ಬುದ್ಧಿಕಾವುಳಂ ಮಸಗಿ, ಚಿತ್ತಂ ಕೊರೆದು ಜೀವಂ ಬೆಂದು' ಹೋದರೂ ಶಿವಧೋ ಎನ್ನುತ್ತ 'ಕಣ್ಣೊಳು ಹರಣಂ ಕಯ್ಯೊಳು ಕಾಯವಾಗಿರ್ದನು.'

> "ಬಾಳ್ಗಿನ್ನ ಸೋಮಯ್ಯ ತಂದೆ ಎನುತೆತ್ತಿದಂ
> ಧೂಪಮಂ ಪೊತ್ತು ಜನನದ ಹೊರೆಯನಿಳುಪಿದಂ
> ಧೂಪಮಂ ಹೆಗಲಗೇರಿಸಿ ಸಾವನಿಳುಪಿದಂ"

ದಿನದಿನವೂ ಕಂಬಿಯ ಮೇಲಿಂದ ಹೊತ್ತು ತಂದು ತಂದು ಕಾಯವು ಕುಸಿದು ತಗ್ಗಿತು; ಹೆಗಲೆಲವು ನೆರೆಮುಕ್ಕಾಯಿತು; ಹಜ್ಜೆ ಹುಣ್ಣು ಹುಣ್ಣಾಯಿತು. ಅಂಗಾಲದಲ್ಲಿ ಉರಿಯೆದ್ದು ಬೊಕ್ಕೆ ಹುಟ್ಟಿ ನೆತ್ತರುಗುಳಿತು. ಸರ್ವ ತ್ರಾಣವೂ ಜಗುಳಿತು. ತನು ಜರ್ಝರಿತವಾಯಿತು.



CC-0. Jangamwadi Math Collection, Varanasi. An eGangotri Initiative

"ಮನವೆ ಕೈಕಾಲಾಗಿ ನಡೆವುತಿರ್ದಂ ನೋಡ" — ಏನನ್ನೂ ಲೆಕ್ಕಿಸದೆ ಕಾದುರಿಗೆ ಧೂಪವಿಕ್ಕಿ ಕೆಂಡವಂ ಸುರಿದು ಕುಣಿಕುಣಿದಾಡಿ ಮಣಿದಾಡಿ ತಣಿದನು.

ಇಂಥ ನೋಂಪಿ, ಈ ಅಚಲ ನಿಷ್ಠೆ ಇನ್ನೆಲ್ಲಿ ಸಿಕ್ಕೀತು ?

ಕೊನೆಯಲ್ಲಿ 'ಮೊಳಕೆಯ್ಯುಮಂ ತೆಯ್ದು ಬಾವನ್ನಮಂ ನೆರೆವುತಿರ್ಪ'ಂತೆ ಮಾಡಿ, ಮೆರೆವ ಒಲಘಾಂಡ ಮೂರ್ತಿಯನ್ನೂ ನೆನೆಯಬಹುದು. ಶಿವನ ಬಯಕೆಯಂತೆ 'ಹಸೆಯ ಮೇಗಣ ಮಗಳ ಮುಡಿಯನಿತ್ತ', 'ಎನಗವರೆ ಲಾಭವವರ್ಗಾನೆ ಲಾಭಂ ಕೇಳ್' — ಎಂದು ಸಾರುವ ಮಾನಕಂಜರನು ಅದ್ವಿತೀಯನಾಗಿದ್ದಾನೆ. ರೇವಣಸಿದ್ಧ ಶಂಕರ ದಾಸಿಮಯ್ಯ ಮೊದಲಾದ ಹಿರಿ ಶರಣರಿಗಿಂತ ಈ ಸಾಮಾನ್ಯ ಶರಣರು ಹರೀಶ್ವರನ ಕೈವಾಡದಲ್ಲಿ ಹೆಚ್ಚು ಮಿಗಿಲಾಗಿ, ಹೆಚ್ಚು ಹೃದಯವೇಧಕ ಮೂರ್ತಿಗಳಾಗಿ ಬೆಳಗಿದ್ದಾರೆ. ಕೂಡಲು ಸಂಗನು ಚನ್ನಯ್ಯನ ಮನೆಯಲ್ಲಿ ಉಂಡದ್ದಾಗಲಿ, 'ಕೂತು ಮಾದರಚೆನ್ನನೊಡನುಂಡೆವೆಲೆ ಚೋಳ' ಎನ್ನುವ ಶಿವನ ಪ್ರೇಮದ ಕಾಣಿಕೆಯಾಗಲಿ ಭಕ್ತಿಕಾಂಡದ ಚರಿತ್ರೆಯಲ್ಲಿ ಅಜ್ಯೋತ್ತಿ ನಿಲ್ಲಬೇಕಾದದ್ದೆ. 'ನಾಮರಸದೊಳಿಂತು ಪ್ರೇಮರಸ'ವನ್ನು ಹರಿಯಿಸಿ ಲೋಕಕ್ಕೆಲ್ಲ ಪೂಜ್ಯ ಕವಿಯಾದನು.

ಕವಿಯ ಚಿತ್ತವೂ ನೆನಹೂ ಮನಸ್ಸೂ— ನುಡಿವುದೂ ಕರೆವುದೂ ನಡೆವುದೂ—ನೆಲದ ಮೇಲಿರಲಿ, ಭಾವಿಕರ ಬಗೆಯೊಳಗಿರಲಿ — ಒಂದು ನಿಚ್ಚ ಸತ್ಯದ ನೆಲಗಟ್ಟಿನ ಮೇಲೆ ನಿಂತಿದೆ. ಭಕ್ತಿಯ ರಸ ನುಡಿಯಿರಲಿ—ಬಿರುನುಡಿಯಿರಲಿ—ಶಾಂತಿವೆನ್ನಿ—ಉಗ್ರವೆನ್ನಿ—ರೂಪಕವೆನ್ನಿ—ಉತ್ಪ್ರೇಕ್ಷೆಯೆನ್ನಿ-ಎಲ್ಲವೂ ಮಂಗಳ ಮನೋರಥದ ಹಾಸುಹೊಕ್ಕಾಗಿ ಹರಿದಾಡುತ್ತಿದೆ; ನೆಗೆದಾಡುತ್ತಿದೆ. ಒಟ್ಟಿಗೆ ಮಾಯೆ ಛಾಯೆಗಳನ್ನು ಬೀಸಾಡಿದ್ದಾನೆ; ತಿಳಿವು ವಿರಕ್ತಿಗಳಿಗೆ ಧೂಪದಾರತಿ ಬೆಳಗಿದ್ದಾನೆ. ಪರವಸ್ತುವಿನ ಕಣ್ಣುಬೆಳಕು— ನೇಸರನನ್ನು ಕೂಡಿಕೊಂಡೆ ಎಷ್ಟು ಬಗೆಯ ಕಿರಣಗಳಲ್ಲಿ ಹರಿದಾಡಬಲ್ಲದೆಂಬುದುವನ್ನು ನಮಗೆ ಅರುಹಿದ್ದಾನೆ. ಸಾಕಿಷ್ಟು.

---

SRI JAGADGURU VISHWARADHYA
JNANA SIMHASAN JNANAMANDIR
LIBRARY
Jangamawadi Math, Varanasi
Acc. No. 7896



CC-0. Jangamwadi Math Collection, Varanasi. An eGangotri Initiative

## ಸಾಹಿತ್ಯ ಸಮಿತಿಯಿಂದ ಪ್ರಕಟವಾಗಲಿರುವ ಗ್ರಂಥಗಳು



### ೧. ಬಸವ ಪುರಾಣ

**ಭೀಮಕವಿ ಕೃತ**

ಹಲವು ತಾಳೆಯೋಲೆಯ ಪ್ರತಿಗಳೂ, ಕೋರಿಯ ಕಾಗದದ ಮೇಲಿನ ಕೈ ಬರಹದ ಪ್ರತಿಗಳೂ, ತುಂಗಳೂರಿನ ಕಲ್ಲಚ್ಚಿನ ಪ್ರತಿ ಮತ್ತು ಬಳ್ಳಾರಿಯ ಮುದ್ರಣ ಪ್ರತಿ ಇವುಗಳ ಆಧಾರದಿಂದ ಅಚ್ಚಿನ ಶುದ್ಧ ಪ್ರತಿಯ ಸಿದ್ಧತೆಯು ನಡೆದಿದೆ.



### ೨. ಕವಿಕರ್ಣರಸಾಯನ

**ಸಂಸ್ಕೃತ ಮಹಾಕಾವ್ಯ**

**ಮಹಾಕವಿ ಷಡಕ್ಷರಿದೇವ ಕೃತ**

(ಅಚ್ಚಿನಲ್ಲಿದೆ)



### ೩. ಬಸವಣ್ಣನವರ ವಚನಗಳು

ಈಗಾಗಲೇ ಉಪಲಬ್ಧವಿರುವ ಮತ್ತು ಇನ್ನುಮುಂದೆ ಹೊಸ ದಾಗಿ ದೊರಕಬಹುದಾದ ವಚನಗಳನ್ನು, ಕರ್ನಾಟಕದ ವಿವಿಧ ಭಾಗಗಳ ವಿದ್ವನ್ಮಣಿಗಳಿಂದ ಪರಿಷ್ಕರಿಸಲ್ಪಟ್ಟು ಪ್ರಕಟವಾಗಲಿರುವ ಶುದ್ಧ ವಚನಗಳ ಅಧಿಕೃತ ಸಂಗ್ರಹ.

CC-0. Jangamwadi Math Collection, Varanasi. An eGangotri Initiative

